# ಇತಿಹಾಸ ದರ್ಶನ

## ಸಂಪುಟ ೨೧/೨೦೦೬

೨೦೦೫ರ ಸೆಪ್ಟೆಂಬರ್ ೧೧ ರಿಂದ ೧೩ರ ವರೆಗೆ ಗುಲಬರ್ಗಾ ಜಿಲ್ಲೆ ಸೇಡಂನಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ಹತ್ತೊಂಬತ್ತನೆಯ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ


ಸಂಪಾದಕರು

ಡಾ|| ಎಂ.ಜಿ. ನಾಗರಾಜ್

ಡಾ|| ಪಿ.ವಿ. ಕೃಷ್ಣಮೂರ್ತಿ





ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

# ITIHĀSA DARŚANA

The Volume of the Scholarly papers presented and the General body Proceedings of the Nineteenth Annual Conference of **The Karnataka Ithihasa Academy** (Regd.,)
held at Sedam, Gulbarga District
on 11th, 12th & 13th September 2005

**Volume 21, Septmber - 2006**

Pages : **388 + xLiv**

ಬೆಲೆ : ರೂ. ೩೦೦/-

ಪುಟಗಳು : ೩೮೮ + xLiv





Edited by : **Dr. M. G. Nagaraj**
**Dr. P. V. Krishna murthy**

Published by : Karnataka Itihasa Academy (Regd.)
Gokhale Institute of Public Affairs Premises
Basavanagudi Road, Narasimharaja Colony
Bangalore - 560 019

Price : **Rs. 300/-**


## ಪ್ರಬಂಧಕಾರರ ಗಮನಕ್ಕೆ

೧. ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ **ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ.** ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ.

೨. ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಬರಹಗಳಿಗೆ 'ಇತಿಹಾಸ ದರ್ಶನ' ಮೀಸಲಾಗಿದೆ.

೩. ಲೇಖನಗಳು **ಹಸ್ತಲಿಖಿತ ೧೦** ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವೆಡೆ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ.

೪. ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕಳುಹಿಸುವಲ್ಲಿ, ಚಿತ್ರದ ಹಿಂಬದಿಯಲ್ಲಿ ಚಿತ್ರದ ಶೀರ್ಷಿಕೆ ಮತ್ತು ಲೇಖಕರ ಹೆಸರನ್ನು ಬರೆಯಬೇಕು. ಬರೆಯದೆ ಹೋದರೆ ಚಿತ್ರಗಳ ಪ್ರಕಟಣೆ ಕಷ್ಟವಾಗುತ್ತದೆ.

೫. ಈಗಿನ ೧೯ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ ಪೂರ್ಣ **ವಿಳಾಸ**ದೊಡನೆ ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, **ಸಂಪಾದಕರು, ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

೬. ಪ್ರಬಂಧದ ಲೇಖನದ ನಕಲು ಅಥವಾ ಜೆರಾಕ್ಸ್ ಪ್ರತಿಯ ಬದಲು ಮೂಲಪ್ರತಿಯನ್ನೆ ದಯವಿಟ್ಟು ಕಳುಹಿಸಿ. ಹಾಗೆಯೇ ಲೇಖನಗಳಲ್ಲಿ **ಲೇಖಕರು ತಮ್ಮ ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ.**

೭. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ. ಮಂಡಿತ ಪ್ರಬಂಧಗಳು ಮೊದಲಿಗೆ ಅಕಾದೆಮಿಗೆ ಮೀಸಲು ಕಾಣಿಕೆ ಅಲ್ಲವೆ !


ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



# ಶ್ರೀಮದ್ ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ

ಬಾಳೆಹೊನ್ನೂರು–೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶರ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ಸೆಪ್ಟೆಂಬರ್ ೨೦೦೬ ವಾಸ್ತವ್ಯ : ಬಾಳೇಹೊನ್ನೂರು

## ಶುಭಾಶೀರ್ವಾದ ಸಂದೇಶ

ಇತಿಹಾಸ ಮರೆತರೆ ವರ್ತಮಾನಕ್ಕೆ ಬೆಲೆಯಿಲ್ಲ. ಉಜ್ವಲ ಭವಿಷ್ಯಕ್ಕೆ ಇತಿಹಾಸ ಪೂರಕ. ಆಚಾರದಿಂದ ಆಯುಷ್ಯ ಮತ್ತು ಕೀರ್ತಿ ವೃದ್ಧಿಸುತ್ತವೆ. ಅದರಂತೆ ಇತಿಹಾಸ ಪ್ರಜ್ಞೆಯಿಂದ ಹಿಂದಿನ ನೋವು ನಲಿವುಗಳ ಜ್ಞಾನ ಉಂಟಾಗುತ್ತದೆ. ಬುದ್ಧಿವಂತನಾದ ಮನುಷ್ಯ ಮುಪ್ಪು ಸಾವುಗಳು ಇಲ್ಲದವನಂತೆ ವಿದ್ಯೆಯನ್ನು ಮತ್ತು ಸಂಪತ್ತನ್ನು ಸಂಪಾದಿಸಬೇಕಂತೆ. ಹಾಗೆ ಮಾಡದೇ ಹೋದರೆ ಬದುಕು ಬಲಹೀನವಾಗುತ್ತದೆ. ಇತಿಹಾಸ ಪ್ರವರ್ಧಮಾನ ಸಮಾಜಕ್ಕೆ ಸ್ಫೂರ್ತಿ ಪ್ರೇರಣೆಯನ್ನು ನೀಡುತ್ತದೆ.

ನದಿಯನ್ನು ದಾಟಿದ ಮೇಲೆ ದೋಣಿಯಿಂದೇನು ಪ್ರಯೋಜನ ಅನ್ನುವವರು ಯಾವಾಗಲೂ ಇದ್ದೇ ಇರುತ್ತಾರೆ. ಭೌತಿಕ ಬದುಕಿಗೆ ನೀತಿ ನಿಯಮಗಳ ಬೇಲಿ ಇಲ್ಲದೇ ಹೋದರೆ ಜೀವನ ಬಲಗೊಳ್ಳಲು ಹೇಗೆ ಸಾಧ್ಯ? ಸ್ವಾಭಿಮಾನದ ಪ್ರಜ್ಞೆ ಬೆಳೆಯಬೇಕು. ಸದ್ವಿಚಾರ ಸಂಸ್ಕಾರಗಳು ಎಲ್ಲೆಡೆಯೂ ಬೆಳೆಯಬೇಕು. ನಾವು ಕಾಪಾಡಿದ ಧರ್ಮ ನಮ್ಮನ್ನು ಕಾಪಾಡುತ್ತದೆ. ಧರ್ಮವು ಸತ್ಯದಿಂದ ಬೆಳೆಯುತ್ತದೆ. ಇತಿಹಾಸ ತಲೆಮಾರಿನಿಂದ ತಲೆಮಾರಿಗೆ ನೆನಪಿಸಿಕೊಂಡರೆ ಅರಿವು ಉಂಟಾಗುತ್ತದೆ. ದೀಪದಂತೆ ಮಾನವ ಜೀವನಕ್ಕೆ ಮಾರ್ಗದರ್ಶನ ನೀಡುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿ ಕಳೆದ ವರ್ಷ ಸೇಡಂ ಪಟ್ಟಣದಲ್ಲಿ ೧೯ನೆಯ ವಾರ್ಷಿಕ ಸಮ್ಮೇಳನ ಜರುಗಿಸಿದ್ದು ಎಲ್ಲರಿಗೂ ವೇದ್ಯ. ಈ ಅಪೂರ್ವ ಸಂದರ್ಭದಲ್ಲಿ ೧೦೮ ಪ್ರಬಂಧವನ್ನು ಒಳಗೊಂಡ ಇತಿಹಾಸ ದರ್ಶನ ೨೧ನೆಯ ಸಂಚಿಕೆ ಹೊರಬರಲಿರುವುದು ಸನ್ನಿಧಿಗೆ ಸಂತೋಷ ತಂದಿದೆ. ಇತಿಹಾಸ ಮತ್ತು ಪರಂಪರೆಯ ಮೇಲೆ ಬೆಳಕು ಚೆಲ್ಲುತ್ತಿರುವುದು ಸಾಹಸದ ಕಾರ್ಯ. ಈ ಮಹತ್ಕಾರ್ಯ ನಿರಂತರ ನಡೆಯಲಿ. ಕಾಲಗರ್ಭದಲ್ಲಿ ಹುದುಗಿ ಹೋದ ಅಮೂಲ್ಯ ಮತ್ತು ಆದರ್ಶ ಇತಿಹಾಸ ಜನಮನವನ್ನು ತುಂಬಲಿ.

ಹೊನ್ನಾಳಿಯಲ್ಲಿ ಜರುಗಿದ ೧೮ನೆಯ ಕರ್ನಾಟಕ ಇತಿಹಾಸ ಅಕಾಡೆಮಿ ವಾರ್ಷಿಕ ಸಮ್ಮೇಳನದಲ್ಲಿ ಘೋಷಿಸಿದಂತೆ ಇತಿಹಾಸ ದರ್ಶನ–೨೧ನೆಯ ಸಂಚಿಕೆಗೂ ಬಾಳೆಹೊನ್ನೂರು ಶ್ರೀ ಜಗದ್ಗುರು ರಂಭಾಪುರೀ ವೀರ ಸಿಂಹಾಸನ ಮಹಾಪೀಠದಿಂದ ಇಪ್ಪತ್ತೈದು ಸಾವಿರ (೨೫,೦೦೦/–) ರೂಪಾಯಿಗಳನ್ನು ಅನುಗ್ರಹಿಸಿ ಆಶೀರ್ವದಿಸಲಾಗಿದೆ. ಇದಕ್ಕಾಗಿ ಶ್ರಮಿಸುತ್ತಿರುವ ಕರ್ನಾಟಕ ಇತಿಹಾಸ ಅಕಾದೆಮಿಯ ಎಲ್ಲ ಸದಸ್ಯರಿಗೂ ಶುಭ ಹಾರೈಕೆಗಳು.

ಪರಮದಯಾಳು ಶ್ರೀ ಪಾರ್ವತೀ ಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಇತ್ಯನಂತಶಿವಾಶಿಷಃ

**'ಇತಿಹಾಸದರ್ಶನ' ಪ್ರಕಟಣೆಗೆ ಆಶೀರ್ವದಿತ ಪ್ರಪ್ರಥಮ ನಿರಂತರ ವಾರ್ಷಿಕ ನಿಧಿ ಕೊಡುಗೆ ರೂ. ೨೫,೦೦೦**

★ ಪ್ರತಿ ವಾರ್ಷಿಕನಿಧಿ ಕೊಡುಗೆ ಆರಂಭಿಸಿದ ವರ್ಷ : ೨೦೦೫ ★

ಗುಲ್ಬರ್ಗಾ ಜಿಲ್ಲೆ ಸೇಡಂನಲ್ಲಿ ನಡೆದ
ಹತ್ತೊಂಭತ್ತನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಡಾ॥ ಬಿ.ವ್ಹಿ. ಶಿರೂರ



ಪ್ರೊ|| ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ
ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು
ಶ್ರೀಮತಿ ವಿಶಾಲಕ್ಷಿ ಆಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ.
(ಶಿಲ್ಪ ಕಲಾವಿದೆ : ಶ್ರೀಮತಿ ಕನಕಮೂರ್ತಿ)

# ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಂ



ಕರ್ನಾಟಕ ಇತಿಹಾಸ ಅಕಾಡೆಮಿಯ

## 19ನೆಯ ಇತಿಹಾಸ ಸಮ್ಮೇಳನ, ಸೇಡಂ

ದಿನಾಂಕ : 11, 12, 13 ನೇ ಸೆಪ್ಟೆಂಬರ್ 2005



ಶ್ರೀ ಬಸವರಾಜ ಪಾಟೀಲ ಸೇಡಂ

ಸಮ್ಮೇಳನ ಸ್ವಾಗತ ಸಮಿತಿ ಅಧ್ಯಕ್ಷರು




ಸಮ್ಮೇಳನದಲ್ಲಿ ಶ್ರೀ ಬಸವರಾಜ ಪಾಟೀಲ ಸೇಡಂ ಅವರೊಡನೆ ಡಾ. ಹೆಚ್. ಎಸ್. ಗೋಪಾಲರಾವ್ ಹಾಗೂ ಇತರ ಗಣ್ಯರು




ಸಮ್ಮೇಳನದಲ್ಲಿ ಇತಿಹಾಸ ಅಕಾದೆಮಿಯ ಅಧ್ಯಕ್ಷ ಡಾ. ಸೂರ್ಯನಾಥ ಕಾಮತ್ ಅವರೊಡನೆ ಸಮ್ಮೇಳನಾಧ್ಯಕ್ಷ ಡಾ. ಬಿ.ವ್ಹಿ. ಶಿರೂರ, ಶ್ರೀ ಬಸವರಾಜ ಪಾಟೀಲ ಸೇಡಂ, ಪ್ರೊ. ಎಂ.ಜಿ. ನಾಗರಾಜ್ ಪ್ರೊ. ವಸಂತ ಕುಷ್ಟಗಿ, ಡಾ. ಹೆಚ್.ಎಸ್. ಗೋಪಾಲರಾವ್ ಹಾಗೂ ಇತರ ಗಣ್ಯರು

(ಚಿತ್ರಕೃಪೆ : ಶ್ರೀಮತಿ ಇಂದಿರಾ ಹೆಗಡೆ)



ರೊಟ್ಟಿಗವಾಡದ ಜಿ.ಕೆ. ಹಿರೇಗೌಡರ ಸಂ.ಪ.ಪೂ. ಕಾಲೇಜಿನಲ್ಲಿ
'ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ'ದಲ್ಲಿ ಮುಖ್ಯ ಅತಿಥಿಗಳು ಹಾಗೂ ವಿದ್ಯಾರ್ಥಿಗಳು




ಬಿಜಾಪುರದ ವಿಧ್ಯಾವರ್ಧಕ ಸಂಘದ ಕಲಾ, ವಾಣಿಜ್ಯ ಮತ್ತು ಬಿ.ಸಿ.ಎ. ಮಹಾವಿದ್ಯಾಲಯದಲ್ಲಿ
'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ



ಚಿತ್ರದುರ್ಗದಲ್ಲಿ ಶಾಸಕ ಶ್ರೀ ಜಿ.ಎಸ್. ತಿಪ್ಪಾರೆಡ್ಡಿ ಅವರೊಂದಿಗೆ
'ಐತಿಹಾಸಿಕ ಪರಂಪರೆ ಉಳಿಸಿ' ಭಿತ್ತಿ ಚಿತ್ರದೊಡನೆ ವಿದ್ಯಾರ್ಥಿಗಳು




ಬಳ್ಳಾರಿ ಜಿಲ್ಲೆ ಕುರುಗೋಡುವಿನಲ್ಲಿ ಡಾ. ಹೆಚ್.ಎಸ್. ಗೋಪಾಲರಾವ್ ಅವರಿಂದ
'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದ ಉದ್ಘಾಟನೆ

# ಕ್ಷೇತ್ರಕಾರ್ಯ ದರ್ಶನ



ಮೂಲಸ್ಥಾನೇಶ್ವರ ದೇಗುಲದ ವಾಸ್ತು ರಚನೆಯ ಬಗ್ಗೆ ವಿದ್ಯಾರ್ಥಿಗಳಿಗೆ
ಡಾ. ಅ. ಸುಂದರ ಅವರಿಂದ ವಿವರಣೆ



ಕೆಂಡನಕೊಪ್ಪಲು ನಿವೇಶನದಲ್ಲಿ ಡಾ. ಹೆಚ್.ಎಸ್. ಉಷಾರಾಣಿ ಹಾಗೂ ವಿದ್ಯಾರ್ಥಿಗಳಿಗೆ
ಡಾ. ಅ. ಸುಂದರ ಅವರು ಉತ್ಖನನದ ಬಗ್ಗೆ ಮಾಹಿತಿ ನೀಡುವ ಸಂದರ್ಭದಲ್ಲಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಪ್ರಕಟಣೆ

## ಈ ಘೋಷಣೆಗಳನ್ನು ಜನಪ್ರಿಯಗೊಳಿಸಿ

❀ ಮನುಷ್ಯನಿಗೆ ನೆನಪು ಹೇಗೋ
ದೇಶಕ್ಕೆ ಇತಿಹಾಸ ಹಾಗೆ

❀ ನೆನಪು ನಮಗೆ ದಾರಿ ತೋರ್ವ ಉರಿಯುವಾ ಬತ್ತಿ
ಇತಿಹಾಸವು ನೆನಪಿನಂತೆ ನಾಡಿಗೊಂದು ಬುತ್ತಿ

❀ ಇತಿಹಾಸ ಸಂಶೋಧನೆ
ನಮ್ಮ ತಿಳಿವಿನ ವರ್ಧನೆ

❀ ತಾಳೆ ಹೊತ್ತಗೆಯ ರಕ್ಷಣೆ
ಹಳೆಯ ಪರಂಪರೆಗೆ ಪೋಷಣೆ

❀ ಹಳೆಯ ಕೋಟೆ ಹಳೆ ದೇಗುಲ ಹಳೆ ಕಾಗದ ಕಡತ
ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ

❀ ಪ್ರಾಚೀನ ಶಾಸನಗಳ ನಾಶ
ಇತಿಹಾಸ ಪುರುಷನಿಗೆ ಪಾಶ

❀ ಪ್ರಾಚೀನ ದೇಗುಲ, ಶಿಲ್ಪ, ಮೂರ್ತಿ
ನಮ್ಮ ಪರಂಪರೆಯ ಭವ್ಯ ಮುಡಿ

❀ ಪ್ರಾಚೀನ ಇಗರ್ಜಿ ಮಸೀದಿ ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ

❀ ಕೋಟೆ ಕೊತ್ತಲದ ಕಲ್ಲು ಕಿತ್ತರೆ
ಪ್ರಾಚೀನ ಪರಂಪರೆಯ ಪಂಚಾಂಗ ಕಿತ್ತಂತೆ

❀ ಹಳೆಯ ಕೆರೆಗಳ ದುರ್ಲಕ್ಷ
ತಂದಿತೆಮಗೆ ದುರ್ಭಿಕ್ಷ


ಜಗನ್ಮೋಹನ ಅರಮನೆ


ಕನ್ನಂಬಾಡಿ ಕಟ್ಟೆ ಬಲದಂಡೆ ವರುಣಾ ನಾಲಾ

# ಅಧ್ಯಕ್ಷರ ನುಡಿ

ಕಳೆದ ೨೦ ವರ್ಷಗಳಿಂದ ಕಾರ್ಯನಿರತವಾಗಿರುವ ಕರ್ನಾಟಕ ಇತಿಹಾಸ ಅಕಾದೆಮಿ ಯಾವುದೇ ಖಾಸಗಿ ಸಂಸ್ಥೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಮಾಡಿರದ ಸೇವೆಯನ್ನು ಕರ್ನಾಟಕದ ಇತಿಹಾಸ ಕ್ಷೇತ್ರಕ್ಕೆ ಸಲ್ಲಿಸಿದೆ. ಇದು ನಮ್ಮ ಬೆನ್ನನ್ನೇ ನಾವು ತಟ್ಟಿಕೊಳ್ಳುವ ಕೆಲಸವಲ್ಲ. ನೆರೆಯ ರಾಜ್ಯಗಳಾದ ಕೇರಳ, ಆಂಧ್ರ, ಮಹಾರಾಷ್ಟ್ರ ಮತ್ತು ತಮಿಳುನಾಡಿನಿಂದ ಇಲ್ಲಿಗೆ ಬಂದ ವಿದ್ವಾಂಸರು ಹೇಳಿದ ಮಾತಿದು. ಇಷ್ಟು ನಿಯಮಿತವಾಗಿ ವಾರ್ಷಿಕ ಸಮ್ಮೇಳನ ನಡೆಸುವುದು, ಅಲ್ಲಿ ಓದಿದ ಪ್ರಬಂಧಗಳನ್ನು ಮುಂದಿನ ವಾರ್ಷಿಕ ಸಮ್ಮೇಳನದ ಕಾಲಕ್ಕೆ ತಪ್ಪದೇ ಪ್ರಕಟಿಸುವುದು, ಅಲ್ಲದೆ ರಾಜ್ಯದ ವಿವಿಧ ಕಡೆ ವಿಚಾರ ಸಂಕಿರಣ, ಕಾರ್ಯಾಗಾರ ನಡೆಸುವುದು, 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ನಾಡಿನ ಉದ್ದಗಲಕ್ಕೂ ನಡೆಸುವುದು, ಇವೆಲ್ಲ ಗಮನಾರ್ಹವಾಗಿ ನಡೆಸಿದ ಕಾರ್ಯಗಳು. 'ಪರಂಪರೆ ಉಳಿಸಿ' ಚಟುವಟಿಕೆಯನ್ನು ವಿವಿಧ ಮಾದರಿಗಳಲ್ಲಿ ನಡೆಸಿರುವುದು ಅಕಾದೆಮಿಯ ಅಭೂತಪೂರ್ವ ಕಾರ್ಯ. ಈ ಬಗ್ಗೆ ಅಕಾದೆಮಿ ಪ್ರಕಟಿಸಿದ ಭಿತ್ತಿಪತ್ರಗಳನ್ನು ಕಂಡು 'ಯುನೆಸ್ಕೊ'ವಿನ ಅಧಿಕಾರಿಗಳು ಅಚ್ಚರಿಪಟ್ಟರು. ನಾಲ್ಕೈದು ಭಿತ್ತಿಪತ್ರಗಳನ್ನು ನಮ್ಮಿಂದ ಕೇಳಿ ಪಡೆದು ಪ್ಯಾರಿಸ್ಸಿಗೆ ಒಯ್ದರು. ಶ್ರೀಮತಿ ರಾಣಿ ಸತೀಶ್ ಅವರು ಸಂಸ್ಕೃತಿ ಇಲಾಖೆಯ ಮಂತ್ರಿಯಾಗಿದ್ದಾಗ ಅಕಾದೆಮಿಯಿಂದ ಪ್ರಭಾವಿತರಾಗಿ ಹೈಸ್ಕೂಲುಗಳ ಎನ್.ಎಸ್.ಎಸ್. ನವರು ಹಳೆಯ ಸ್ಮಾರಕಗಳ ಶುದ್ಧೀಕರಣಕ್ಕೆ ವಿದ್ಯಾರ್ಥಿಗಳನ್ನು ತೊಡಗಿಸಿ ಸ್ಮಾರಕಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮಮತೆ, ಅಭಿಮಾನ ಮಂಡಿಸಲು ಕ್ರಮ ಕೈಗೊಂಡರು. ಇದರದೇ ಪ್ರತಿಧ್ವನಿ ಯು.ಜಿ.ಸಿ.ಯಲ್ಲೂ ಮೂಡಿ ಪ್ರತೀ ವಿಶ್ವವಿದ್ಯಾಲಯದ ಎನ್.ಎಸ್.ಎಸ್. ನವರು ವರ್ಷಕ್ಕೆ ಒಂದು ಗಣ್ಯ ಸ್ಮಾರಕವನ್ನು ಶುಚಿಗೊಳಿಸುವ ಕಾರ್ಯ ಕೈಕೊಳ್ಳಲು ಆದೇಶ ನೀಡಿದರು. ಇದರಂತೆ ಮಂಗಳೂರು ವಿಶ್ವವಿದ್ಯಾಲಯದ ಸುಮಾರು ೧೫೦ ವಿದ್ಯಾರ್ಥಿಗಳು, ಮಡಿಕೇರಿಯ ಕೋಟೆಯನ್ನು ಸ್ವಚ್ಛಗೊಳಿಸಲು ಕೇಂದ್ರ ಪುರಾತತ್ತ್ವ ಇಲಾಖೆಯ ನೆರವಿನಿಂದ ಕೈಗೊಂಡ ಐದು ದಿನಗಳ ಶಿಬಿರ, ಒಂದು ಉದಾಹರಣೆ (೨೦೦೪) ಆಗಿದೆ. ರಾಜ್ಯದ ಇತರ ವಿಶ್ವವಿದ್ಯಾಲಯಗಳೂ ಇಂಥ ಕ್ರಮ ಕೈಗೊಂಡಿವೆ. ದೂರದ ಇತರ ರಾಜ್ಯಗಳಲ್ಲೂ ಕೂಡ ಇಂಥ ಕ್ರಮ ಜರುಗಬೇಕಾಗಿದೆ.

ಕರ್ನಾಟಕ ಇತಿಹಾಸ ಪ್ರಶಸ್ತಿ ಪರೀಕ್ಷೆಯನ್ನು ೨೦೦೬ರಿಂದ ನಿಲ್ಲಿಸಿದರೂ ೧೮ ವರ್ಷಗಳಲ್ಲಿ ಸುಮಾರು ೭೫,೦೦೦ ವಿದ್ಯಾರ್ಥಿಗಳಲ್ಲಿ ಈ ಬಗ್ಗೆ ವಿಶೇಷ ಕುತೂಹಲ ಮೂಡಿಸಿದ ಸಾಧನೆ ಅಕಾದೆಮಿಯದು. ಪ್ರತೀ ವರ್ಷ ರಾಜ್ಯದಲ್ಲಿ ಸರಾಸರಿ ೨೦೦ 'ಪರಂಪರೆ ಉಳಿಸಿ' ಕಾರ್ಯಕ್ರಮಗಳಾಗುತ್ತಿವೆ. **ಇತಿಹಾಸ ದರ್ಶನ**ದ ೨೧ ಸಂಪುಟಗಳಲ್ಲಿ ೧೫೦೦ ಶೋಧನಾ ಲೇಖನಗಳು ಪ್ರಕಟವಾಗಿವೆ. ಇವು ಕರ್ನಾಟಕದ ಅಖಂಡ ಇತಿಹಾಸ ರಚಿಸುವಲ್ಲಿ ಒದಗಿಸುವ ಚಿಕ್ಕಪುಟ್ಟ ಕೊಂಡಿಗಳಂತೆ, ವಿಶಾಲ ಚಿತ್ತಾರದ ಕಿರುವರ್ಣ ಬಿಂದುಗಳಂತೆ ನೆರವಾಗುತ್ತಿವೆ. ಈವರೆಗೆ ೧೫೦೦ಕ್ಕೂ ಹೆಚ್ಚು ಜನ ಸಮ್ಮೇಳನಗಳಲ್ಲಿ ಪ್ರಬಂಧ ಮಂಡಿಸಿ ಸರ್ಕಾರದ ಇತಿಹಾಸದ ಬಗ್ಗೆ ಚಿಂತನಶೀಲರಾಗಿದ್ದಾರೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಇಂಥ ಮಂಥನ ಇನ್ನಾವ ರಾಜ್ಯದಲ್ಲೂ ನಡೆದಿಲ್ಲ.

ಸುವರ್ಣ ಕರ್ನಾಟಕದ ಸಂದರ್ಭದಲ್ಲಿ ಮಿಥಿಕ್ ಸೊಸೈಟಿಯ ನೆರವಿನಿಂದ 'ಕರ್ನಾಟಕ ಇತಿಹಾಸ ಸಂಶೋಧನೆಯ ಸಮೀಕ್ಷೆ' ವಿಚಾರ ಸಂಕಿರಣವನ್ನು ೨೦೦೬ರ ಜೂನ್ ೩-೪ರಂದು ನಡೆಸಲಾಗಿದೆ. ಅಲ್ಲದೆ 'ಪರಂಪರೆ ಉಳಿಸಿ' ಕಾರ್ಯಕ್ರಮದ ಅಂಗವಾಗಿ ರಾಜ್ಯದ ನಾಲ್ಕು ವಿಭಾಗಗಳಿಂದ (ಡಿವಿಜನ್)ಗಳಲ್ಲಿ ನಾಲ್ಕು ಗಣ್ಯ ಪ್ರಾಚೀನ ಸ್ಮಾರಕಗಳಾದ ಆವಣಿ, ಕಿಕ್ಕೇರಿ, ಹಾನಗಲ್ ಮತ್ತು ಇಟಗಿಗಳಲ್ಲಿ ವಿಶೇಷ

ಕಾರ್ಯಕ್ರಮವನ್ನು ನಿಯೋಜಿಸಿದ್ದು ಮೊದಲ ಎರಡು ಊರುಗಳಲ್ಲಿ ಆಗಸ್ಟ್ ೧೯ ಮತ್ತು ೨೯ಕ್ಕೆ ಕಾರ್ಯಕ್ರಮಗಳನ್ನು ನಡೆಸಲಾಗಿದೆ.

'ಕರ್ನಾಟಕ ಕೈಗನ್ನಡಿ' ಎಂಬ ಕರ್ನಾಟಕದ ಕಿರು ಪರಿಚಯ ನೀಡುವ ಕನ್ನಡ ಪುಸ್ತಕವನ್ನು ಪ್ರಕಟಿಸಲು ಕರ್ನಾಟಕ ಸರಕಾರವು ಇತಿಹಾಸ ಅಕಾದೆಮಿಗೆ ಆದೇಶ ನೀಡಿದೆ. ಈ ಪುಸ್ತಕದ ೨೫,೦೦೦ ಪ್ರತಿಗಳು ಪ್ರಕಟವಾಗಲಿವೆ.

ಟಿ. ನರಸೀಪುರದ ಕಾಲೇಜಿನಲ್ಲಿ ನಮ್ಮ ಸದಸ್ಯೆ ಡಾ. ಹೆಚ್.ಎಸ್. ಉಷಾರಾಣಿ ನಡೆಸಿದ ಪರಂಪರೆ ಉಳಿಸಿ ಮತ್ತು ತತ್ಸಂಬಂಧ ಚಟುವಟಿಕೆಗಳಿಂದ ಆ ಕಾಲೇಜಿಗೆ ಕೆಎನ್ಎಕೆನಲ್ಲಿ ಹೆಚ್ಚಿನ ಅಂಕಗಳು ಬಂದುದು ಗಮನಿಸಬೇಕಾದದ್ದು. ಇತರರಿಗೆ ಇದು ಮಾರ್ಗದರ್ಶನ. ಕೆರೆಗಳ ರಕ್ಷಣೆಗಾಗಿ ನಾವು ನಡೆಸಿದ ಪ್ರಚಾರ ಈಗ ಫಲ ನೀಡುತ್ತಿದೆ. ನಮ್ಮ ಪ್ರಯತ್ನಗಳು ನಾಡಿನ ಒಳಿತಿಗಾಗಿ ಬೇಕಾದ ವಾತಾವರಣ ಸೃಷ್ಟಿಸುತ್ತಿದೆ. ನಾಡಿನ ಬಗ್ಗೆ ಅಭಿಮಾನ ಇದಕ್ಕೆಲ್ಲ ಕಾರಣ. ಈ ಅಭಿಮಾನ ವರ್ಧಿಸಲು, ಹಿಂದಿನ ಘಟನೆಗಳಿಂದ ಪಾಠ ಕಲಿಯಲು ಇತಿಹಾಸದ ಅಧ್ಯಯನದ ವ್ಯಾಪ್ತಿ ಖಂಡಿತ ನೆರವಾಗುತ್ತದೆ.

ಈ ನಮ್ಮ ಪ್ರಯತ್ನಗಳಲ್ಲಿ ನಿಮ್ಮೆಲ್ಲರ ಕ್ರಿಯಾಶೀಲ ಪಾತ್ರ ವರ್ಧಿಸಲಿ. ನಮ್ಮ ಚಟುವಟಿಕೆಗಳಲ್ಲಿ ನೀವು ಸ್ವಯಂಪ್ರೇರಣೆಯಿಂದ ದುಡಿಯುವಂತಾಗಲಿ.

**ಸೂರ್ಯನಾಥ ಕಾಮತ್**

# ಸಂಪಾದಕೀಯ

ಜಗದ ಹಿತಕ್ಕಾಗಿ ಸಮುದ್ರ ಮಥನದಲ್ಲಿ ಉಕ್ಕಿದ ನಂಜನ್ನು ನುಂಗಿ ಕೊರಳಲ್ಲಿ ಧರಿಸಿದವ ನಂಜುಂಡ. ವಿಷದ ನಾಗನ ಹೆಡೆಯನ್ನು ಅಲಂಕಾರ ಸೂಕ್ತಿ ಮಾಡಿಕೊಂಡ; ನೆತ್ತಿಯ ನೆರಳು ಎನಿಸಿದ. ವಿಷ ನುಂಗಿ ಜಗತ್ತಿಗೆ ಸಿಹಿ ಇಟ್ಟ, ವಿಷವನ್ನು ಔಷಧಿಯಾಗಿಸಿದ ಮಹಾ ವೈದ್ಯ ನಂಜುಂಡ; ಭವರೋಗ ವೈದ್ಯ ಸಹ. ಇಂಥವನ ಪ್ರಾಚೀನ ನೆಲೆ ನಂಜನಗೂಡು < ನಂಜಲಗೂಡು < ನಂಜಾಲಗೂಡು < ನಂದ್ಯಾಲಗೂಡು.

ಜನಪದ ಗೀತೆ : 'ಅದು ಬೆಟ್ಟ ಇದು ಬೆಟ್ಟವೋ – ನಂಜುಂಡ ನಂದ್ಯಾಲ ಗಿರಿ ಬೆಟ್ಟವೋ'; 'ತಿಂಗಾ ತಿಂಗಳಿಗೆ ಚೆಂದ ನಂಜನಗೂಡು, ಗಂಧ ತುಂಬಿದೆ ಗುಡಿಗೆಲ್ಲ' ಎಂದು ಉಸುರಿದೆ.

ನಂಜನಗೂಡು ಶಾಸನಗಳಲ್ಲಿ 'ನಂಜೆಲಗೂಡು, ನಂಜಲಗೂಡು'; ಗೊರವರ ಕಾವ್ಯಗಳಲ್ಲಿ 'ನಂಜಾಲಗೂಡು' ಎಂದಿದೆ. ಹೀಗಾಗಿ ದೇವ–ವೃಕ್ಷವಾಚಿಯಾಗಿ ಮೂಲನಾಮ 'ನಂದ್ಯಾಲ'–>'ನಂಜಾಲಗೂಡು' ಹೆಸರಿಗೆ ಕಾರಣವಾಯಿತೇ ಎನಿಸುತ್ತದೆ. ಹೀಗಾಗಿ ನಂದ್ಯಾಲ ಗಿರಿಯಿಂದ ಬಂದ 'ನಂಜುಂಡ', ೪ನೇ ಶತಮಾನದ ವೇಳೆಗೆ ಲಿಂಗವಾಗಿ, ಮರದ್ದೋ, ಇಟ್ಟಿಗೆಯದ್ದೋ ಗುಡಿಯಲ್ಲಿದ್ದು, ೯–೧೦ನೇ ಶತಮಾನದ ವೇಳೆಗೆ ಶಿಲಾ ದೇಗುಲ ಪಡೆದ ಎನ್ನುವುದಿದೆ. ಹೆಗ್ಗಡದೇವನ ಕೋಟೆ ತಾ. ಹಳೆಯೂರು ಗ್ರಾಮದ ಕ್ರಿ.ಶ. ೧೦೮೭ರ ಶಾಸನದಲ್ಲಿ 'ಹಳೆಯೂರಿನ ನಂಜುಣ್ಡೇಸ್ವರಮೊಡೆಯರ್ಗ್ಗೆ '(ದೇವರು) ಭೂದಾನವಾಗಿರುವ ಸಂಗತಿ ಇದೆ. ಅಂದರೆ ಕ್ರಿ.ಶ. ೧೦೮೭ರ ಮುನ್ನವೇ 'ನಂಜುಂಡೇಶ್ವರ' ಎಂಬ ದೇವರ ಹೆಸರು ಜನಪದ ರೂಢಿಗಿದ್ದಿರಬೇಕೆಂದಾಗುತ್ತದೆ. ಜನಪದರಲ್ಲಿ ೫ನೇ ಶತಮಾನದ ನಂದ್ಯಾಲ 'ನಂಜಾಲ' ಆದದ್ದು ೧೦ನೇ ಶತಮಾನಕ್ಕೆ ಮುಂಚೆಯೇ ಎನ್ನಬೇಕು. ಇತಿಹಾಸದ (!) ನಂಜುಂಡ ಈ ಹೊತ್ತಿಗೆ ಪೌರಾಣಿಕ ನಂಜುಂಡನಾದನೆ! ಎನಿಸುತ್ತದೆ. ಇಂಥ ನಂಜುಂಡನನ್ನು ಪೂಜಿಸುವಲ್ಲಿ ಶಿವಾರ್ಚಕ ವರ್ಗದ ತಮ್ಮಡಿಗಳೂ ಇದ್ದರೆಂದು ಶಾಸನ ಒಂದರಿಂದ ಸೂಚನೆ ಇರುವಂತಿದೆ. ಇನ್ನು 'ಮಾರ್ಬ್ಬಲದ ತೀರ್ಥ'ದ (ಚಾಮುಂಡಿ ಬೆಟ್ಟ) ಚಾಮುಂಡಿ ಹಾಗು ನಂಜುಂಡರ ಪ್ರಣಯ'ದ ಕತೆಯು ಜನಪದರು ನೇಯ್ದು ಕಾವ್ಯ; ಹೃದಯದ ಚಿಲುಮೆಯಲ್ಲಿ ಮಾನವ ಭೋಗದ ಯೋಗಭಾವ ತೀರ್ಥೋದ್ಭವವೆನ್ನುವಂತಿದೆ; ದೇವ ಪ್ರಣಯದಲ್ಲಿ ಮಾನವ ವರ್ತನೆಗಳ ಸಹಜ ಗೀತೆಯಾಗಿದೆ. ಇದು ಹರನ ಜನಪದ ಕತೆ ಇತಿಹಾಸೀಕರಣದ ಕತೆ.

ಇನ್ನು ನಂಜನಗೂಡಿನಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳ ಪ್ರಾಚೀನಾಚಾರ್ಯರಾಗಿದ್ದ ಮಧ್ವಾಚಾರ್ಯ ಮಹಾಸಂಸ್ಥಾನಾಧೀಶ ಶ್ರೀ ವಿಬುಧೇಂದ್ರ ತೀರ್ಥರು, ನಂಜನಗೂಡು ರಾಘವೇಂದ್ರ ಸ್ವಾಮಿಗಳ ಮಠದ ತಾಮ್ರ ಶಾಸನದಲ್ಲಿ (ಕ್ರಿ.ಶ. ೧೪೯೦) ಗ್ರಾಮದಾನ ಪಡೆದ ಸಂಗತಿಯೊಡನೆ ಉಕ್ತರಾಗಿದ್ದಾರೆ. ಅವರು ಮೈಸೂರಿನ ಅಳರಸರಿಂದ ಸನ್ಮಾನಿತರಾಗಿ ಶ್ರೀಕಂಠೇಶ್ವರ ಸನ್ನಿಧಾನ ನಂಜನಗೂಡಿನಲ್ಲಿ ಬಹುಕಾಲ ವಾಸ್ತವ್ಯವಿದ್ದರು. ನಂಜನಗೂಡನ್ನು ತಮ್ಮ ಮಹಾಸಂಸ್ಥಾನದ ಮೂಲಸ್ಥಳವನ್ನಾಗಿ ಮಾಡಿಕೊಂಡಿದ್ದರು. ಶ್ರೀರುದ್ರದೇವ ಸೇವೆ ಸಹಿತ, ತತ್ವ ಪ್ರಸಾರ ನಿರತರಿದ್ದರೆಂಬುದು ಹಯವದನದರಾಯರ ಮಾತು. ಇದು ಸುಮಾರು ೬೦೦ ವರ್ಷಗಳ ಹಿಂದಿನ ಕತೆ. ತದನಂತರ ಶ್ರೀ ರಾಘವೇಂದ್ರ ಸ್ವಾಮಿಗಳು ಮೈಸೂರು ದೇಶ ಸಂಚಾರದಲ್ಲಿ ನಂಜನಗೂಡಿಗೆ ಬಂದು ಬಹುಕಾಲ ವಾಸ್ತವ್ಯವಿದ್ದರು. ಶ್ರೀಕಂಠದರ್ಶನ, ಸೇವೆ ಹಾಗು ತತ್ತ್ವ ಧರ್ಮೋಪದೇಶವನ್ನು ಮಾಡುತ್ತಿದ್ದರು. ಆ ಸಮಯಕ್ಕೆ ನಂಜುಂಡೇಶ್ವರನ ದರ್ಶನಕ್ಕೆ ಬಂದ ಮೈಸೂರು ದೊರೆ ದೊಡ್ಡ ದೇವರಾಜ ಒಡೆಯರು ಶ್ರೀ ರಾಘವೇಂದ್ರರ ದರ್ಶನ ಪಡೆದರು. ಅವರ ಜ್ಞಾನ, ವೈರಾಗ್ಯ ಪಾಂಡಿತ್ಯಗಳಿಗೆ ಮಾರುಹೋಗಿ ರಾಜಧಾನಿಗೆ (ಶ್ರೀರಂಗಪಟ್ಟಣ) ಕರೆಸಿಕೊಂಡು ಭಕ್ತಿ ಗೌರವ ಸಲ್ಲಿಸಿ, ಕ್ರಿ.ಶ. ೧೬೩೭ರಲ್ಲಿ ತಾಮ್ರಶಾಸನ ಹಾಕಿ ಭೂದಾನವಿತ್ತರು. ಶ್ರೀ ರಾಘವೇಂದ್ರರಿಗೆ ನಂಜನಗೂಡು ಪ್ರಿಯವಾದ ಕ್ಷೇತ್ರವಾಗಿ ಪ್ರಾಚೀನ ಸಂಬಂಧ ಪಡೆದಂತಾಯಿತು. ಹಾಗೂ ಶ್ರೀ ಮಧ್ವಾಚಾರ್ಯರ ಮಹಾಸಂಸ್ಥಾನವು ನಂಜನಗೂಡು ಶ್ರೀ ರಾಘವೇಂದ್ರಸ್ವಾಮಿಗಳ ಮಠವೆಂದೇ ಪ್ರಸಿದ್ಧಿಗೊಂಡಿದೆ ಎಂಬುದು 'ಶ್ರೀಕಂಠ ಸಿರಿ'ಯಲ್ಲಿ ಉಕ್ತಗೊಂಡಿದೆ. ಶ್ರೀ ಮಠದಲ್ಲಿರುವ ಅನೇಕ ಶಾಸನಗಳಲ್ಲಿ ಶ್ರೀ ವಿಬುದೇಂದ್ರತೀರ್ಥರಾದಿಯಾಗಿ ಶ್ರೀ ಲಕ್ಷ್ಮೀವಲ್ಲಭತೀರ್ಥ ಗುರುಗಳೆಲ್ಲರೂ ಉಕ್ತರಿದ್ದು ರಾಜದಾನಾದಿಗಳನ್ನು ಪಡೆದ ವಿಷಯಗಳಿವೆ. ವಿಶೇಷತಃ ಬಾಣನ ಹರ್ಷಚರಿತೆಯ ಶಿವಸ್ತುತಿ ಶ್ಲೋಕ 'ನಮಸ್ತುಂಗ ಶಿರಶ್ಚುಂಬಿ....' ಈ ಶಾಸನಗಳಲ್ಲಿ ಉಕ್ತವಾಗಿರುವುದು

ನಂಜುಂಡನ ನಂಜನಗೂಡು, ಶ್ರೀ ವಿಬುಧೇಂದ್ರರಲ್ಲದೆ ಶ್ರೀ ರಾಘವೇಂದ್ರರಿಗೂ ಪ್ರಿಯವಾಗಿದ್ದ ಕಾರಣವೂ ಸೇರಿದಂತಿದೆ. ಅಂತಾಗಿ ಹರಿಹರ ಸಮನ್ವಯ ಸಂದರ್ಭದಲ್ಲಿ, ಸಾವಯವ ಸಹವಾಸಿ ಇವೆಲ್ಲ ಆಗಿರುವಂತಿವೆ.

ಈ ಪ್ರಾಚೀನ, ಪಾವಿತ್ರ್ಯ, ಜಾನಪದ ಸಂಸ್ಕೃತಿಯ ಸಿರಿಬೀಡಿನಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ೨೦ನೇ ವಾರ್ಷಿಕ ಸಮ್ಮೇಳನವು ಜ॥ ಶ್ರೀ ಮನ್ಮಧ್ವಾಚಾರ್ಯ ಮೂಲಸಂಸ್ಥಾನ ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಆಶ್ರಯದಲ್ಲಿ ೨೦೦೬ರ ಸೆಪ್ಟೆಂಬರ್ ೯ ರಿಂದ ೧೧ರವರೆಗೆ ವ್ಯವಸ್ಥೆಗೊಂಡಿದೆ.

ಕಳೆದ ವರ್ಷ ಸೇಡಂನಲ್ಲಿ ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳ ಪೈಕಿ ೭೫ ಪ್ರಬಂಧಗಳು ಈ ಬಾರಿ **ಇತಿಹಾಸ ದರ್ಶನ**ದ ೨೧ನೇ ಸಂಪುಟದಲ್ಲಿ ಪ್ರಕಟವಾಗಿವೆ. ಪ್ರಬಂಧಗಳಲ್ಲಿ ಗಟ್ಟಿತನ, ಹೊಸ ಶೋಧಗಳಲ್ಲಿ ತೀವ್ರಾಸಕ್ತಿ, ವಿಷಯಗಳ ಮರುಪರಿಶೀಲನೆ, ಚಿಂತನೆ, ಶಾಸನಾವಿಷ್ಕಾರಗಳು, ಶಿಲ್ಪಶಾಸ್ತ್ರೀಯ ಮೌಲ್ಯ, ಚಿತ್ರಕಲೆಯ ವಿಶಿಷ್ಟ ಆಯಾಮ, ಪ್ರಾಚ್ಯಾವಶೇಷಗಳ ಪ್ರಾಮುಖ್ಯ, ಇತಿಹಾಸ ಪರಂಪರೆಯ ಒಳನೋಟಗಳು, ಕ್ಷೇತ್ರಕಾರ್ಯ ಪರಿಶ್ರಮ ಇವೆಲ್ಲ ಕಾಣಬರುತ್ತವೆ. ಆದರೂ ಅಲ್ಲಲ್ಲಿ ತೆಳುತನದ ಮಿತಿ ಕಾಣಿಸಿಕೊಂಡಿಲ್ಲವೆನ್ನುವಂತಿಲ್ಲ. ಮುಂದೆ ತಿದ್ದಿಕೊಳ್ಳುವ ಭರವಸೆಯೂ ಅಲ್ಲಿ ಸೂಚನೆಗೊಳ್ಳುವುದು ಸಂತೋಷ ಕೊಡುವ ವಿಷಯವಾಗಿದೆ. ಆಕರಗಳ ಸೂಚಿಯನ್ನು ಉಕ್ತ ಮಾಡುವಲ್ಲಿ ಸಂಶೋಧನ ವಲಯದ ಕ್ರಮವನ್ನು ಸೂಕ್ತವಾಗಿ ಅನ್ವಯ ಮಾಡಿಕೊಂಡಿಲ್ಲದಿರುವುದು ಕೆಲವು ಪ್ರಬಂಧಗಳಲ್ಲಿ ಕಂಡುಬರುತ್ತದೆ. ಮುಂದೆ ಅದು ಸರಿಹೋಗುತ್ತದೆ ಎಂಬ ವಿಶ್ವಾಸ ನಮ್ಮದು. ಈ ಬಗ್ಗೆ 'ಇತಿಹಾಸ ದರ್ಶನ' ಪ್ರತಿ ಸಂಪುಟದ ಆರಂಭದ ೨ನೇ ಪುಟದಲ್ಲಿ ಸೂಚಿಸುತ್ತ ಬರಲಾಗಿದೆ. ದಯವಿಟ್ಟು ಇದನ್ನು ಪ್ರಬಂಧಕಾರರು ಗಮನಿಸಬೇಕೆಂದು ವಿನಂತಿ.

'ಇತಿಹಾಸ ದರ್ಶನ'ದ ಮುದ್ರಣಕ್ಕೆ ೨೦೦೫ನೇ ಸಾಲಿನಿಂದ ೨೫ ಸಾವಿರ ರೂ.ಗಳ ನಿಧಿ ನೆರವನ್ನು ಪ್ರಪ್ರಥಮ ಕೊಡುಗೆಯಾಗಿ ನಿರಂತರಕ್ಕೆ ಆಶೀರ್ವದಿಸಿರುವಂತೆ ಈ ಬಾರಿಯೂ ಮುಂಗಡವಾಗಿ ಕೊಡಮಾಡಿರುವ ಶ್ರೀಮದ್ರಂಭಾಪುರಿ ಪೀಠಾಧೀಶರಾದ ಜ॥ ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಿಯವರಲ್ಲಿ ನಮ್ಮ ಭಕ್ತಿಗೌರವಪೂರ್ವಕ ಪ್ರಣಾಮಗಳಿವೆ. ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹ ನಿರ್ದೇಶನಾಲಯವು ಕೊಡಮಾಡಿರುವ ನಿಧಿ ನೆರವಿಗಾಗಿ ಹಾಗೂ ಬೆಂಗಳೂರು ಸರ್ಕಾರಿ ಮ್ಯೂಸಿಯಂನ ಮುಮ್ಮಡಿ ಕೃಷ್ಣರಾಜ ಒಡೆಯರ ಪೂಜಾ ಚಿತ್ರ ಕೃಪೆಗಾಗಿ ನಮ್ಮ ಕೃತಜ್ಞತೆಗಳಿವೆ.

ಈ ಬಾರಿ ಇತಿಹಾಸ ಕ್ಷೇತ್ರದ ಪ್ರಸಿದ್ಧ ವಿದ್ವಾಂಸರೂ, ಸಂಪಾದನೆ ಹಾಗು ಸಂಘಟನಾ ವಲಯದ ನಿಶಿತಮತಿ ಖ್ಯಾತಿಯುಳ್ಳವರೂ, ಕರ್ನಾಟಕ ಇತಿಹಾಸ ಅಕಾದೆಮಿಯ ಆರಂಭ ಕಾಲದಿಂದಲೂ ಅದರ ಬೆಳವಣಿಗೆಗಾಗಿ ಶ್ರಮಿಸುತ್ತಿರುವ ಡಾ. ಸೂರ್ಯನಾಥ ಕಾಮತರು ಅಕಾದೆಮಿಯ ೨೦ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಗೊಂಡಿರುವುದಕ್ಕೆ ಅಭಿನಂದನೆಗಳು.

ಈ ಸಂದರ್ಭದಲ್ಲಿ ಶ್ರೀ ರಾಜಾ ಎಸ್. ರಾಜಗೋಪಾಲಾಚಾರ್ಯ ಅವರ ಅಧ್ಯಕ್ಷತೆಯಲ್ಲಿ ಮಾನ್ಯ ಕೇಂದ್ರ ಯೋಜನಾ ರಾಜ್ಯ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್ ಅವರು ಶಾಸನ ಕ್ಷೇತ್ರದ ವಿದ್ವಾಂಸರಿಗೆ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ನೀಡಿ ಸನ್ಮಾನಿಸುತ್ತಿರುವುದು ಹಾಗೂ **'ಇತಿಹಾಸ ದರ್ಶನ'**ದ ಸಂಪುಟ ೨೧ಅನ್ನು ಮಾನ್ಯ ವಿಜ್ಞಾನ, ತಂತ್ರಜ್ಞಾನ ಉಳಿತಾಯ ಮತ್ತು ಯೋಜನಾ ಆಯೋಗ ಸಚಿವರಾದ ಶ್ರೀ ರಾಮಚಂದ್ರಗೌಡರು ಬಿಡುಗಡೆ ಮಾಡುತ್ತಿರುವುದು, ಖ್ಯಾತ ವಿದ್ವಾಂಸರಾದ ಪ್ರೊ. ಪ್ರಭುಶಂಕರ ಅವರು ಸಮ್ಮೇಳನವನ್ನು ಉದ್ಘಾಟಿಸುತ್ತಿರುವುದು ಸಂತೋಷದ ವಿಷಯವಾಗಿದೆ.

ಸದ್ಯ ನಮ್ಮ ಕಾರ್ಯಗಳಲ್ಲಿ ಸಹಕಾರ ನೀಡುತ್ತಿರುವ ಅಕಾದೆಮಿಯ ಅಧ್ಯಕ್ಷರಾದಿಯಾಗಿ, ಪದಾಧಿಕಾರಿಗಳು, ಕಾರ್ಯಕಾರಿ ಸಮಿತಿ ಹಾಗು ಸರ್ವಸದಸ್ಯರಿಗೂ ನಾವು ಆಭಾರಿಯಾಗಿದ್ದೇವೆ. ಹೊಸದಾಗಿ ಡಿ.ಲಿಟ್., ಹಾಗು ಪಿಎಚ್.ಡಿ., ಪಡೆದು ಅಕಾದೆಮಿಯ ಸನ್ಮಾನಕ್ಕೆ ಪಾತ್ರರಾಗಿರುವ ಅಕಾದೆಮಿಯ ಸದಸ್ಯರಿಗೆ ಅಭಿನಂದನೆಗಳು.

ಈ ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್, ಮ್ಯಾನೇಜರ್ ಕೃಷ್ಣಮೂರ್ತಿ, ಡಿಟಿಪಿ ಸಿಬ್ಬಂದಿ ವರ್ಗದ ಶ್ರೀಮತಿ ಸತ್ಯಕುಮಾರಿ, ಶ್ರೀ ಎಸ್. ಮಂಜುನಾಥ್, ಶ್ರೀ ಪಿ.ಎಸ್. ಸುಬ್ರಮಣಿ, ಶ್ರೀ ಪಿ.ಎ. ಹಕೀಮ್ ಹಾಗೂ ಇತರ ಸಿಬ್ಬಂದಿ ವರ್ಗದವರಿಗೂ ನಮ್ಮ ಅಭಿಮಾನಗಳು.

*ಬೆಂಗಳೂರು ೬-೯-೨೦೦೬*
*ಶ್ರೀ ಶಕ ೧೯೨೯ ಶ್ರೀ ವ್ಯಯಸಂವತ್ಸರ*
*ಭಾದ್ರಪದ ಶು॥ ಚತುರ್ದಶಿ ಧನಿಷ್ಠಾ ನಕ್ಷತ್ರ, ಮಂಗಳವಾರ*

**ಡಾ. ಎಂ.ಜಿ. ನಾಗರಾಜ್**
**ಡಾ. ಪಿ.ವಿ. ಕೃಷ್ಣಮೂರ್ತಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಬೆಂಗಳೂರು

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಂ. ಚಿದಾನಂದಮೂರ್ತಿ |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | ಸಿದ್ಧಗಂಗಾಕ್ಷೇತ್ರ : ಡಾ| ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು | ಡಾ|| ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ | ಗದಗ | ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ | ಡಾ|| ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ | ಡಾ|| ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ಡಾ|| ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು | ಡಾ|| ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ | ಮೈಸೂರು | ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು | ಡಾ|| ಅ. ಸುಂದರ |
| ೮. | ೯-೧೦ ಜುಲೈ ೧೯೯೪ | ಸೊಂಡೂರು | ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು | ಡಾ|| ಎಂ. ಎಂ. ಕಲಬುರ್ಗಿ |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | **ಡಾ|| ಎ.ವಿ. ನರಸಿಂಹಮೂರ್ತಿ** |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ | **ಡಾ|| ಜಿ. ಎಸ್. ದೀಕ್ಷಿತ್** |
| ೧೧. | ೨೫-೨೭ ಅಕ್ಟೋಬರ್ ೧೯೯೭ | ಸಿರಸಿ | ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | **ಪ್ರೊ|| ಕೆ. ಅಭಿಶಂಕರ್** |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | **ಡಾ|| ಎಸ್. ನಾಗರಾಜು** |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | **ಡಾ|| ಶ್ರೀನಿವಾಸ ಹಾವನೂರ** |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | **ಶ್ರೀ ಸಿ. ಟಿ. ಎಂ. ಕೊಟ್ರಯ್ಯ** |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | **ಡಾ|| ಜ್ಯೋತ್ಸ್ನಾ ಕಾಮತ್** |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ | ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | **ಡಾ. ಎ.ಕೆ. ಶಾಸ್ತ್ರಿ** |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ | ಬಾದಾಮಿ | ವಿಶ್ವಚೇತನ ಸಂಸ್ಥೆ ಬಾದಾಮಿ | **ಡಾ. ಎಸ್. ರಾಜಶೇಖರ್** |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪ | ಹೊನ್ನಾಳಿ | ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |  |
| ೧೯. | ೧೧-೧೩ ಸೆಪ್ಟೆಂಬರ್ ೨೦೦೫ | ಸೇಡಂ | ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆ | ಡಾ. ಬಿ.ವ್ಹಿ. ಶಿರೂರ |  |

## ಡಾ॥ ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ ಸನ್ಮಾನಿತರು

| | | | | |
|---|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ ಅಕ್ಟೋಬರ್ ೨೦೦೧ | ಉಡುಪಿ | ಡಾ. ಕೆ.ವಿ. ರಮೇಶ |  |
| ೨ | ೧೬ನೇ ವಾರ್ಷಿಕ ಸಮ್ಮೇಳನ ಸೆಪ್ಟಂಬರ್ ೨೦೨೦ | ಹೊಸದುರ್ಗ | ಡಾ. ಶ್ರೀನಿವಾಸ ರಿತ್ತಿ |  |
| ೩ | ೧೭ನೇ ಸಮ್ಮೇಳನದ ಸೆಪ್ಟಂಬರ್ ೨೦೦೩ | ಬಾದಾಮಿ | ಡಾ. ದೇವರ ಕೊಂಡಾರೆಡ್ಡಿ |  |
| ೪ | ೧೮ನೇ ಸಮ್ಮೇಳನ ಸೆಪ್ಟಂಬರ್ ೨೦೦೪ | ಹೊನ್ನಾಳಿ | ಡಾ. ಬಿ. ರಾಜಶೇಖರಪ್ಪ |  |

# ಡಾ|| ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ ಸನ್ಮಾನಿತರು

| | | | | |
|---|---|---|---|---|
| ೫ | ೧೯ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೫ | ಸೇಡಂ | ***ಡಾ. ಕೆ. ಆರ್. ಗಣೇಶ*** |  |
| ೬ | ೨೦ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೬ | ನಂಜನಗೂಡು | ***ಡಾ. ಎಂ.ಜಿ. ನಾಗರಾಜ್*** |  |

# ಕರ್ನಾಟಕ ಇತಿಹಾಸ ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನ

**ಸೇಡಂ ದಿನಾಂಕ ೧೧, ೧೨, ೧೩ ಸೆಪ್ಟೆಂಬರ್, ೨೦೦೬**

## ಸಮ್ಮೇಳನಾಧ್ಯಕ್ಷರು : ಡಾ. ಬಿ.ವ್ಹಿ. ಶಿರೂರ

### ಅಧ್ಯಕ್ಷರ ಭಾಷಣ

ಸಾಹಿತ್ಯಲೋಕದ ಅಭ್ಯಾಸಿಯಾದ ನನಗೆ ಇತಿಹಾಸ ಲೋಕದ ಇಂಥ ಪ್ರತಿಷ್ಠಿತ ಸ್ಥಾನಗೌರವ ನೀಡಿದ ತಮಗೆ ಕೃತಜ್ಞನಾಗಿದ್ದೇನೆ. ಸಾಹಿತ್ಯಕ್ಕೆ ಇತಿಹಾಸ ಸೋದರಸಂಬಂಧಿಯೆಂಬ ದೃಷ್ಟಿಯಿಂದ, ಈ ಕ್ಷೇತ್ರದಲ್ಲಿಯೂ ಅಲ್ಪಸ್ವಲ್ಪ ಕೆಲಸ ಮಾಡಿರುವ ನನಗೆ, ಈ ಹಿಂದೆ ಡಾ. ಎಂ. ಚಿದಾನಂದ ಮೂರ್ತಿ, ಡಾ. ಜಿ. ಎಸ್. ಗಾಯಿ, ಡಾ. ಶ್ರೀನಿವಾಸ್ ರಿತ್ತಿ, ಡಾ. ಬಿ. ಆರ್. ಗೋಪಾಲ, ಡಾ. ಎಂ.ಎಂ. ಕಲಬುರ್ಗಿ, ಡಾ. ಜಿ.ಎಸ್. ದೀಕ್ಷಿತ ಮೊದಲಾದ ಗಣ್ಯರು ಅಲಂಕರಿಸಿರುವ ಈ ಅಧ್ಯಕ್ಷ ಗದ್ದುಗೆಯ ಗೌರವ ನೀಡಿದುದು ತಮ್ಮೆಲ್ಲರ, ವಿಶೇಷವಾಗಿ ಡಾ. ಸೂರ್ಯನಾಥ ಕಾಮತ್ ಮೊದಲಾದ ಕಾರ್ಯಕಾರಿಸಮಿತಿ ಸದಸ್ಯರ ಔದಾರ್ಯವೆಂದು ಭಾವಿಸಿ ವಿನಮ್ರಭಾವದಿಂದ ಇದನ್ನು ಒಪ್ಪಿಕೊಂಡಿದ್ದೇನೆ. ಈ ಕಾರ್ಯಕ್ರಮವನ್ನು ಒಳ್ಳೆಯ ಸಂಭ್ರಮದಿಂದ ಹಮ್ಮಿಕೊಂಡ ಸ್ಥಳೀಯ ಶ್ರೀ ಕೊಟ್ಟೂರ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿಯ ಅಧ್ಯಕ್ಷರಾದ ಶ್ರೀಬಸವರಾಜ ಪಾಟೀಲ ಅವರಿಗೂ, ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀಸಿದ್ಧಪ್ಪ ತಳ್ಳಳ್ಳಿ ಅವರಿಗೂ ಹೃತ್ಪೂರ್ವಕ ಧನ್ಯವಾದಗಳು.

ಕರ್ನಾಟಕವನ್ನು ಪ್ರಾದೇಶಿಕವಾಗಿ ಗುರುತಿಸುವಾಗ ಸೇಡಂ ಪ್ರದೇಶವನ್ನು ಈವರೆಗೆ "ಹೈದರಾಬಾದ ಕರ್ನಾಟಕ", "ನಿಜಾಂ ಕರ್ನಾಟಕ"ವೆಂದು ಕರೆಯಲಾಗುತ್ತಿದ್ದಿತು. ಈಗೀಗ ಇದನ್ನು "ಕಲ್ಯಾಣ ಕರ್ನಾಟಕ"ವೆಂದು ಕರೆಯುವುದು ಹೆಚ್ಚು ಪ್ರಚಲಿತವಾಗತೊಡಗಿದೆ. ಈ ಕಲ್ಯಾಣ ಕರ್ನಾಟಕ ಪ್ರಾಚೀನ ಕಾಲದಿಂದ ರಾಜಕೀಯವಾಗಿ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ವೈಶಿಷ್ಟ್ಯವನ್ನು ಕಾಯ್ದು ಕೊಂಡು ಬಂದಿದೆ. ಗುಲಬರ್ಗಾಜಿಲ್ಲೆಯ ಚಿತಾಪುರ ತಾಲ್ಲೂಕಿನ ಭೀಮಾನದಿಯ ದಂಡೆಯ ಮೇಲಿರುವ "ಸನ್ನತಿ" ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು ಪ್ರಾಚ್ಯ ಅವಶೇಷಗಳ ಶೋಧದಿಂದಾಗಿ ಅದಕ್ಕೆ ಇನ್ನೂ ವೈಶಿಷ್ಟ್ಯ ಪ್ರಾಪ್ತವಾಗಿದೆ.

ಸನ್ನತಿಯಿಂದ ಕನಗನಹಳ್ಳಿಯವರೆಗೆ ಸುಮಾರು ಎರಡು ಮೈಲುಗಳಷ್ಟು ವ್ಯಾಪ್ತಿಯಲ್ಲಿ ಸ್ತೂಪ, ಆರ್ಯಕಸ್ತಂಭ, ಶಿಲಾಫಲಕ, ವಜ್ರಾಸನ, ಬುದ್ಧಪಾದ ಚಿಹ್ನ, ಬೋಧಿವೃಕ್ಷ, ಯಕ್ಷ ಮೊದಲಾದವು, ಸುಮಾರು ೭೯ ಶಾಸನದ ತುಣುಕುಗಳು ದೊರೆಯುತ್ತಿವೆ. ಸನ್ನತಿಯಲ್ಲಿರುವ ಶ್ರೀ ಚಂದಲಾ ಪರಮೇಶ್ವರಿ ಹಿಂದೆ ಬೌದ್ಧರ ತಾರಾದೇವಿಯ ಮಂದಿರವಾಗಿದ್ದಿರಬಹುದೆಂದು ಹಲವರು ಊಹಿಸಿದ್ದಾರೆ. ಸನ್ನತಿ ಸಮೀಪದ ಬೆಳ್ವಾಡಿಗಿ ಗ್ರಾಮದಲ್ಲಿ ಕಲ್ಲಿನ ಮೇಲೆ ಕೆತ್ತಿರುವ ಒಂದು ಜಾತಕ ಕಥೆಯ ಚಿತ್ರವು 'ಕಲಶ' ಎಂಬಾತನ 'ಛಾಯಾಪಡಿಮೆ' ಎಂದರೆ ಛಾಯಾಪ್ರತಿಮೆಯಾಗಿದೆ. ಅದರ ಒಂದು ಸಾಲಿನ ಬರಹದ ಕೆಳಗೆ, ಒಂದು ಎತ್ತು ನಿಂತ, ಇನ್ನೊಂದು ಎತ್ತು ಮಲಗಿದ ಚಕ್ಕಡಿಯ ಚಿತ್ರವಿದ್ದು, ಇದು ಬಹುಶಃ ಬಳಗ ಹಾಕಿದ ಸಂಸಾರವನ್ನು ಸಂಕೇತಿಸುತ್ತಿರಬೇಕು. ಹೀಗೆಯೇ ಉತ್ಖನನ ಮುಂದುವರಿದರೆ ಈ ಪ್ರದೇಶದ ಕೆಳಗೆ ವ್ಯವಸ್ಥಿತ ಬೌದ್ಧಸಂಸ್ಕೃತಿಯನ್ನು ಕಾಣಬಹುದಾಗಿದೆ.

ಕರ್ನಾಟಕವನ್ನಾಳಿದ ಪ್ರಮುಖ ಅರಸು ಮನೆತನಗಳು ಈ ಭಾಗಕ್ಕೆ ಸಂಬಂಧಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಭರತಖಂಡದ ಬಹುದೊಡ್ಡ ದೊರೆಗಳೆಂದು ಖ್ಯಾತರಾಗಿದ್ದ ರಾಷ್ಟ್ರಕೂಟರು ಈ ಭಾಗದ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಈ ವಂಶದ ಪ್ರಸಿದ್ಧ ಅರಸು ನೃಪತುಂಗನ ಕಾಲದಲ್ಲಿ ಶ್ರೀವಿಜಯನೆಂಬ ಆಸ್ಥಾನಪಂಡಿತನು ಕನ್ನಡದ ಮೊಟ್ಟಮೊದಲ ಕೃತಿಯಾದ "ಕವಿರಾಜಮಾರ್ಗ"ವನ್ನು ರಚಿಸಿದನಲ್ಲದೆ ಕನ್ನಡನಾಡಿನ-ನುಡಿಯ ವೈಭವವನ್ನೂ, ಕನ್ನಡಿಗರ ಹಿರಿಮೆಯನ್ನೂ ಮನದುಂಬಿ ಬಣ್ಣಿಸಿದ್ದಾನೆ. ತರುವಾಯ ಬಂದ ಕಲ್ಯಾಣ ಚಾಲುಕ್ಯರು ಪೊಟ್ಟಲಕೆರೆ, ಯಾತಗಿರಿ, ಕಲ್ಯಾಣಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಸುಮಾರು ೨೦೦ ವರ್ಷಗಳ ಕಾಲ ಕರ್ನಾಟಕವನ್ನು ವೈಭವದಿಂದ ಆಳಿದರು. 'ನಾಸೀದಸ್ತಿ ಭವಿಷತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ' ಅಂದರೆ 'ಜಗತ್ತಿನಲ್ಲಿ ಕಲ್ಯಾಣದಂಥ ಪಟ್ಟಣ ಹಿಂದೆ ಇರಲಿಲ್ಲ, ಇಂದು ಇಲ್ಲ, ಮುಂದೆಯೂ ಇರುವುದಿಲ್ಲ' ಎಂದು ವಿಜ್ಞಾನೇಶ್ವರ ಪಂಡಿತನು ತನ್ನ ಗ್ರಂಥದಲ್ಲಿ ಬರೆದಿದ್ದಾನೆ. ಮುಂದುವರಿದು ತನ್ನ ರಾಜನಾದ 'ಚಾಲುಕ್ಯ ವಿಕ್ರಮಾದಿತ್ಯನಿಗೆ ಸರಿಸಮಾನರಾದ ಅರಸರನ್ನು ಲೋಕವು ನೋಡಿಲ್ಲ, ಕೇಳಿಲ್ಲ' ಎಂದಿದ್ದಾನೆ. ಅದೇ ರೀತಿ ಆಳಂದೆಯ ಒಂದು ಶಾಸನವು 'ಕೃತಯುಗವಾದುದು ಕಲಿಯುಗಂ ಅತಿ ಧಾರ್ಮಿಕವಾಯ್ತು ವಿಕ್ರಮಾದಿತ್ಯ

ನೃಪಂ ಪ್ರತಿಪಾಳಿಪ ರಾಷ್ಟ್ರಂ' ಎಂದಿದೆ. ೧೨ನೆಯ ಶತಮಾನದ ಅಕ್ಕಮಹಾದೇವಿಯೂ "ಕಲ್ಯಾಣವೆಂಬುದನಾರಿಗೆಯೂ ಹೋಗಬಾರದು....' ಎಂದಿದ್ದಾರೆ, ಚೆನ್ನಬಸವಣ್ಣ "ಶ್ರೀಮತ್ ಕಲ್ಯಾಣಪುರದ ಮಹಾತ್ಮ್ಯವೆಂತೆಂದಡೆ..." ಎಂದು ಅದರ ಮಹಿಮೆಯನ್ನು ಶಾಸನರೂಪದಲ್ಲಿ ಬಣ್ಣಿಸಿದ್ದಾನೆ. ಮುಂದೆ ಇದು ಕಲಚೂರ್ಯರ ರಾಜಧಾನಿಯಾಗಿ ಬೆಳೆಯಿತು. ೧೩೪೭ರಲ್ಲಿ ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡು ಬಹಮನಿರಾಜ್ಯ ಸ್ಥಾಪನೆಗೊಂಡಿತು. ಇದರ ಶಾಖೆ ಯಾದ ಬರೀದಶಾಹಿಗಳು ಬೀದರ ಮೂಲಕ ಈ ಪ್ರದೇಶ ವನ್ನು ಆಳಿದರು. ತರುವಾಯದ ದಿನಗಳಲ್ಲಿ ಸುರಪುರ ದೊರೆಗಳು ಈ ಭಾಗದಲ್ಲಿ ಆಳಿಕೆ ನಡೆಸಿದರು. ಇವೆಲ್ಲವು ಗಳಿಂದ ಈ ಭಾಗವನ್ನು ಪ್ರಾಚೀನ ಕರ್ನಾಟಕದ ರಾಜಧಾನಿಗಳ ತವರುಮನೆಯೆಂದು ಕರೆಯಬಹುದು.

ಪ್ರಾಚೀನಕಾಲದಲ್ಲಿ ಈ ಭಾಗದ ಮುದ್ನೂರು, ಹಗರಿಟಗೆ, ನಾಗಾವಿ, ಹುನಗುಂಟಾ, ಗೊಬ್ಬೂರು, ಇಂಗಳಿಗೆ, ಸುಲೇಪೇಠ, ದಿಗ್ಗಾವಿಗೆ, ಸೇಡಂ, ಸಿರಿವಾಳ, ಹರಸೂರು ಮೊದಲಾದ ಅಗ್ರಹಾರಗಳು ಪ್ರಸಿದ್ಧವಾಗಿದ್ದವು. ಅವುಗಳಲ್ಲಿ ಅತೀ ಪ್ರಾಚೀನವಾದುದು ಪ್ರಸಿದ್ಧ ವಿದ್ಯಾಕೇಂದ್ರ ನಾಗಾವಿ. ಅಲ್ಲಿಯ ತ್ರೈಪುರುಷದೇವರ ಶಾಲೆ ಘಟಿಕಾಸ್ಥಾನವಾಗಿತ್ತು. ಈ ಅಗ್ರಹಾರವನ್ನು ಕಾಳಿದಾಸದಂಡಾಧೀಶನಿಂದ ಚತುರ್ವೇದ ಪಾರಂಗತರಾದ ೪೦೦ ಜನ ವಿಪ್ರರಿಗೆ ದಾನವಾಗಿ ಕೊಡಲಾಗಿತ್ತು. ಅಲ್ಲಿ ೨೦೦ ಜನ ವೇದಾಧ್ಯಾಯಿಗಳು, ೫೦ ಶಾಸ್ತ್ರಾಧ್ಯಾಯಿಗಳು, ೩ ಜನ ಉಪಾಧ್ಯಾಯರು, ೩ ಜನ ಭಟ್ಟದರ್ಶನ, ನ್ಯಾಸ, ಪ್ರಭಾಕರ ವ್ಯಾಖ್ಯಾತೃಗಳು, ೩ ಜನ ವೇದವನೋದಿಸುವ ಉಪಾಧ್ಯಾಯರು, ೬ ಜನ ಶಾಲೆಯ ಸರಸ್ವತಿಭಂಡಾರಿಗಳು ಇದ್ದರಂತೆ. ಈ ಜನರ ಅಶನಾಚ್ಛಾದನಕ್ಕೆ, ದೇವಾಲಯದ ಜೀರ್ಣೋದ್ಧಾರ ಖಣ್ಡಸ್ಫುಟಿತ ನವಸುಧಾಕರ್ಮಕ್ಕೆ, ಗಂಧಾಕ್ಷತೆ ಪುಷ್ಪ ಧೂಪ ದೀಪ ನೈವೇದ್ಯಗಳಿಗೆ ೧೦೦೦ ಮತ್ತರು ಭೂಮಿಯನ್ನು ಕಾಳಿದಾಸದಂಡಾಧೀಶ ದಾನವಾಗಿತ್ತನಂತೆ.

ಈ ಸಮ್ಮೇಳನ ನೆರವೇರುತ್ತಿರುವ 'ಸೇಡಂ' ಕೂಡ ಪ್ರಾಚೀನಕಾಲದಿಂದ ಪ್ರಸಿದ್ಧಿ ಪಡೆದ ಸ್ಥಳವಾಗಿದ್ದಿತು. ಅಪಭ್ರಂಶ ಕವಿಯೆಂದು ಪ್ರಸಿದ್ಧನಾದ ಪುಷ್ಪದಂತ ಇದೇ ಊರಿನವನು. ೧೨ನೆಯ ಶತಮಾನದ ಸೇಡಂನ ಒಂದು ಶಾಸನ 'ಶ್ರೀಮದ ನಾದಿಯಗ್ರಹಾರಂ ಸೇಡಂಬದಶೇಷ ಮಹಾಜನಂ ಮುನ್ನೂರ್ವರ್ ಸ್ವಾಮಿಗಳ್ ಸ್ಥಿರಂಜೀಯಾತ್' ಎಂದಿದೆ. ಇನ್ನು ಕಾದುವ ಕಲಿಗಳಿಗೆ ಮಸ್ತಕಶೂಲದಂತಿದ್ದ ಸೇಡಂಬಕೋಟೆಯ ಅಭೇದ್ಯತೆಯನ್ನು ಸೇಡಂ ಒಂದು ಶಾಸನ (ಕ್ರಿ.ಶ. ೧೧೯೪)ವು ಹೀಗೆ ಬಣ್ಣಿಸಿದೆ;

"ಅಂಬರಮಂ ಪಳಂಚಲೆಯುತಿರ್ದಪುದಿಕ್ಕಿದ ಕೋಟೆ ನಾಗಲೋ
ಕಂಬರಮೆಯ್ದೆ ಮುಚ್ಚಿದುದಗಟ್ಟಿಗಟಿತ್ತದಿಶಾದಿ ಶಾನ್ತರಾ
ಳಂಬರಮೆಯ್ದೆ ಪರ್ಬಿದುದು ತೇಜದ ಸಾಜದ ಗುರ್ಜಿನಲ್ಕೆ ಸೇ
ಡಿಂಬದೊಳೆತ್ತಿ ಕಾದುವದಟಂಗಿದು ಮಸ್ತಕಶೂಲಮಲ್ಲವೇ"

ಈ ಕೋಟೆಯ ಅಟ್ಟಳೆ, ಪ್ರಾಕಾರ, ಅಗಳುಗಳನ್ನು ವರ್ಣಿಸುವ ಮತ್ತೊಂದು ಪದ್ಯವೂ ಇಲ್ಲಿ ಅದ್ಭುತ ಮತ್ತು ರಮ್ಯ ಕಲ್ಪನೆಗಳಿಂದ ಮೆರಗು ಪಡೆದಿದೆ. ಕನ್ನಡಿಗರ ಕೋಟೆಕಾಳಗ, ಕೋಟೆಯ ರಚನೆ ಮೊದಲಾದವುಗಳ ಮೇಲೆ ಈ ಶಾಸನ ಹೆಚ್ಚಿನ ಬೆಳಕು ಚೆಲ್ಲುತ್ತಿದೆ.

'ರಾಜಾ, ಕಾಲಸ್ಯ ಕಾರಣಂ' ಎಂಬುದು ಪ್ರಸಿದ್ಧ ಹೇಳಿಕೆ. ಇದಕ್ಕೆ ಅನುಗುಣವಾಗಿ ಈ ಪ್ರದೇಶದಲ್ಲಿ ಮುಖ್ಯವಾಗಿ ಹಿಂದೂ ಮುಸ್ಲೀಂ ದೊರೆಗಳು ಎರಡು ವಿಭಿನ್ನ ಸಂಸ್ಕೃತಿಗಳನ್ನೇ ಹುಟ್ಟುಹಾಕಿದರು. ಇವುಗಳ ಸಮನ್ವಯವನ್ನು ಆಗಾಗ ಕಾಣುತ್ತೇವೆ. ಇಂಥ ರಾಜತ್ವದ ಸುತ್ತ ಬದುಕಿನ ಬಹುಮುಖಗಳು ಇಲ್ಲಿ ವಿಶಿಷ್ಟ ರೀತಿಯಲ್ಲಿ ಬೆಳೆದುಬಂದವು. ಅವೆಲ್ಲವುಗಳ ಸ್ವರೂಪ ತಿಳಿಯಲು ನಾವು ಆಕರ ಸಾಮಗ್ರಿ ಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಸಾಹಿತ್ಯದ ವಿದ್ಯಾರ್ಥಿ ಯಾಗಿರುವ ನಾನು ಈ ಪ್ರದೇಶದ ಅಕ್ಷರರೂಪದ ಸಾಮಗ್ರಿ ಯನ್ನು ಮಾತ್ರ ಕುರಿತು ಇಲ್ಲಿ ಸಮಾಲೋಚಿಸುತ್ತೇನೆ.

ಒಂದು ನಾಡಿನ ಚರಿತ್ರೆಯನ್ನು ತಿಳಿಯಲು ಮುಖ್ಯ ವಾಗಿ ಇರುವ ಅಕ್ಷರ ರೂಪದ ಪ್ರಮುಖ ಆಕರಗಳೆಂದರೆ ಶಾಸನಗಳು. ಶಾಸನಗಳ ಅಧ್ಯಯನದ ದೃಷ್ಟಿಯಿಂದ ಮೈಸೂರು ಕರ್ನಾಟಕದಲ್ಲಿ ಬಿ.ಎಲ್. ರೈಸ್‌ರು ವ್ಯವಸ್ಥಿತ ಯೋಜನೆ ಕೈಕೊಂಡಂತೆ ಕಲ್ಯಾಣಕರ್ನಾಟಕದಲ್ಲಿ ಯಾರೂ ಸಮಗ್ರ ಯೋಜನೆ ಕೈಗೆತ್ತಿಕೊಳ್ಳಲಿಲ್ಲ. ಕರ್ನಲ್ ಮೆಕೆಂಝಿ, ಫ್ಲೀಟ್, ಬಾರ್ನೆಟ್ ಅವರು ಬಿಡಿಬಿಡಿಯಾಗಿ ಬೇರೆ ಬೇರೆ ಪತ್ರಿಕೆಗಳಲ್ಲಿ, ಡಾ. ಪಿ.ಬಿ. ದೇಸಾಯಿ ಅವರು ಹೈದರಾಬಾದ ಆರ್ಕ್ಯಾಲಾಜಿಕಲ್ ಸೀರೀಜ ಸಂಪುಟಗಳಲ್ಲಿ ಮತ್ತು *Jainism in South India and Some Jaina Epigraphs* ಎಂಬ ಮಹಾಪ್ರಬಂಧದಲ್ಲಿ ಹಲವಾರು ಶಾಸನಗಳನ್ನು ಹೊರ ತಂದರು. ಅಲ್ಲದೆ ಎಸ್. ನಾಗರಾಜು ಅವರು ಆಳಂದ ತಾಲ್ಲೂಕಿನ ೧೮ ಶಾಸನಗಳನ್ನೂ, ವ್ಹಿ.ಎಸ್. ಕುಲಕರ್ಣಿ ಅವರು *Historical and Cultural Studies of the region around Basavakalyana* ಎಂಬ ಮಹಾಪ್ರಬಂಧ ದಲ್ಲಿ ೬೮ ಶಾಸನಗಳನ್ನೂ, ಡಾ.ಬಿ.ಆರ್. ಹಿರೇಮಠ ಮತ್ತು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ಮುದ್ನೂರು ಯಡ್ರಾವಿಯ ೩೩ ಶಾಸನಗಳನ್ನೂ, ಕರ್ನಾಟಕ ವಿಶ್ವ ವಿದ್ಯಾ ಲಯ ಕನ್ನಡ ಸಂಶೋಧನ ಸಂಸ್ಥೆ *Karnataka Inscription* ಸಂ. Vರಲ್ಲಿ ೫ ಶಾಸನಗಳನ್ನು, ಡಾ.ವ್ಹಿ. ಶಿವಾನಂದ

ಅವರು 'ಹೈದರಾಬಾದ ಕರ್ನಾಟಕ ಭಾಗದ ಕನ್ನಡ ಶಾಸನಗಳು' ಎಂಬ ಕೃತಿಯಲ್ಲಿ ಮೆಕೆಂಜಿ ಸಂಗ್ರಹಿಸಿದ ೮೯ ಶಾಸನಗಳನ್ನೂ ಪ್ರಕಟಿಸಿದ್ದಾರೆ. ಇತ್ತೀಚೆಗೆ ಐ.ಕೆ. ಶರ್ಮ ಮತ್ತು ಜೆ. ವರಪ್ರಸಾದರಾವ್ ಅವರು *Early Brahmi Inscriptions from Sannati* ಎಂಬ ಪುಸ್ತಕದಲ್ಲಿ ೭೪ ಶಾಸನಗಳನ್ನೂ ಪ್ರಕಟಿಸಿದ್ದಾರೆ. ಅಲ್ಲದೆ ಶ್ರೀಮತಿ ಹನುಮಾಕ್ಷಿ ಗೋಗಿ ಅವರು "ಸುರಪುರ ತಾಲೂಕಿನ ಶಾಸನಗಳು" ಎಂಬ ಕೃತಿಯಲ್ಲಿ ೧೦೦ ಶಾಸನಗಳನ್ನೂ, "ಕಲಬುರ್ಗಿ ಜಿಲ್ಲೆಯ ಶಾಸನಗಳು" ಕೃತಿಯಲ್ಲಿ ೨೨೬ ಶಾಸನಗಳನ್ನೂ ಪ್ರಕಟಿಸಿದ್ದಾರೆ. ಇವುಗಳಲ್ಲಿ ಶ್ರೀಮತಿ ಗೋಗಿಯವರು ವ್ಯಕ್ತಿನೆಲೆಯಲ್ಲಿ ಶಾಸನಕ್ಷೇತ್ರಕ್ಕೆ ನೀಡಿದ ಕಾಣಿಕೆ ಗಣ್ಯವಾಗಿದ್ದು, ಉಲ್ಲೇಖನೀಯವೆನಿಸಿದೆ. ಕೊನೆಯ ಕೃತಿಯಲ್ಲಿಯ ೧೩೬ ಶಾಸನಗಳು ಅವರ ಸ್ವಂತ ಸಂಗ್ರಹದಿಂದ ಆಯ್ದುಕೊಂಡವು.

ಇತ್ತೀಚೆಗೆ ಕೊಪ್ಪಳ, ರಾಯಚೂರು, ಬಳ್ಳಾರಿ ಜಿಲ್ಲೆಯ ಶಾಸನಗಳನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ಹೀಗಿದ್ದೂ ಈ ಭಾಗದ ಬೀದರ್, ಗುಲಬರ್ಗಾ ಜಿಲ್ಲೆಗಳ ಸಮಗ್ರ ಸಂಪುಟ ಇನ್ನೂ ಪ್ರಕಟವಾಗಲಿಲ್ಲ. ಈ ಪ್ರದೇಶದಲ್ಲಿ ಮುಸಲ್ಮಾನರ ಆಳಿಕೆಯಿಂದಾಗಿ ಹುಟ್ಟಿಕೊಂಡಿರುವ ಉರ್ದು, ಪರ್ಶಿಯನ್ ಶಾಸನಗಳ ಪರಿವೀಕ್ಷಣೆಯೂ ಸಮಗ್ರರೂಪದಲ್ಲಿ ಜರುಗಬೇಕಾಗಿದೆ. ಗುಲಬರ್ಗಾ ವಿಶ್ವವಿದ್ಯಾಲಯದಂಥ ಪೂರ್ಣಪ್ರಮಾಣದ ಉನ್ನತ ಶಿಕ್ಷಣಸಂಸ್ಥೆ ಇದ್ದೂ ಈ ಕೆಲಸ ಕೈಗೂಡುದುದು ವಿಷಾದದ ಸಂಗತಿ.

ಎಷ್ಟೋ ದಿನಗಳವರೆಗೆ ಸಾಹಿತ್ಯ ಕಾಲ್ಪನಿಕ ಕಥೆ, ಅದರಿಂದ ಇತಿಹಾಸಕ್ಕೆ ಯಾವ ಪ್ರಯೋಜನವೂ ಇಲ್ಲ ಎಂಬ ನಂಬುಗೆ ಇತ್ತು. ಆದರೆ ಈಗೀಗ ಈ ಅಭಿಪ್ರಾಯ ಬದಲಾಗಿದೆ. ಸಾಹಿತ್ಯದಲ್ಲಿ ಇತಿಹಾಸ ಅಡಗಿರುವುದನ್ನು ವಿದ್ವಾಂಸರು ಗಮನಿಸಿದ್ದಾರೆ. ಹೀಗಾಗಿ ಈ ಪ್ರದೇಶದ ಹಸ್ತಪ್ರತಿಗಳ ಸಂಗ್ರಹದತ್ತ ನಾವು ವಿಶೇಷ ಗಮನಕೊಡಬೇಕಾಗಿದೆ. ಪ್ರಾಚೀನಕಾಲದಲ್ಲಿ ರಾಜಾಶ್ರಯದಲ್ಲಿಯೇ ಸಾಹಿತ್ಯ ಸೃಷ್ಟಿಯಾಗುತ್ತಿದ್ದುದರಿಂದ ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚುರಿ, ಬಹಮನಿ, ಸುರಪುರ ಮನೆತನಗಳ ಆಶ್ರಯದಲ್ಲಿ ಹುಟ್ಟಿದ ಸಾಹಿತ್ಯದ ದೊಡ್ಡ ಭಂಡಾರವೇ ಇಲ್ಲಿ ಅಡಗಿರುವುದು ಸಹಜ. ಕವಿರಾಜಮಾರ್ಗದ

**ವಿಮಲೋದಯ ನಾಗಾರ್ಜುನ। ಸಮೇತ ಜಯಬಂಧು ದುರ್ವಿನೀತಾದಿಗಳೀ**
**ಕ್ರಮದೊಳ್ ನೆಗಳ್ಚಿ ಗದ್ಯಾ। ಶ್ರಮ ಗುರುತಾ ಪ್ರತೀತಿಯಂ ಕೆಯ್ಕೊಂಡರ್**
**॥ ೧-೨೯ ॥**

**ಪರಮಶ್ರೀವಿಜಯ ಕವೀ। ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ**
**ನಿರತಿಶಯವಸ್ತು ವಿಸ್ತರ। ವಿರಚನೆ ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ**
**॥ ೧-೩೨ ॥**

ಎಂಬ ಕಂದಗಳಲ್ಲಿ ಸೂಚಿತರಾದ ಗದ್ಯ-ಪದ್ಯ ಕವಿಗಳ ಸಾಹಿತ್ಯ ಮಳಖೇಡದ ಸುತ್ತ ಸಿಗಬಹುದಾಗಿದೆ.

ಕನ್ನಡದ ಮೊಟ್ಟಮೊದಲ ಪ್ರಾಚೀನಗ್ರಂಥ ವಡ್ಡಾರಾಧನೆ. ಇದರ ಕರ್ತೃ ಗುಲಬರ್ಗಾ-ಬೀದರ್ ಜಿಲ್ಲೆಗಳ ಪ್ರದೇಶದವನೆಂದು ತಿಳಿದುಬರುತ್ತಿದೆ. ಈ ಕೃತಿಯ ಕೊನೆಯಲ್ಲಿಯ ಈ "ಪೇೞ್ದ ಪತ್ತೊಂಬತ್ತು ಕಥೆಗಳ್ ಶಿವಕೋಟ್ಯಾಚಾರ್ಯರ್ ಪೇೞ್ದ ವಡ್ಡಾರಾಧನೆಯ ಕವಚವೆಂಬಧಿಕಾರವು" ಎಂಬುದನ್ನು ಗಮನಿಸಿದರೆ, 'ಶಿವಕೋಟ್ಯಾಚಾರ್ಯನ ಸಂಪೂರ್ಣ ವಡ್ಡಾರಾಧನೆಗೆ ಬರೆದ ಟೀಕೆ (ಕಥೆ)ಯಲ್ಲಿ ಹಿಂದು ಮುಂದಣ ಅಧಿಕಾರಗಳು ಅಳಿದು ಹೋಗಿ ಈಗ ಉಳಿದು ನಿಂತುದು ಕವಚಾಧಿಕಾರ ಮಾತ್ರ (ಕ.ರಾ.ಮಾ.ಪ.ಕ. ಸಾ.ಪು. ೨೩೩) ಎನಿಸುತ್ತದೆ. ಈ ಭಾಗದಲ್ಲಿ ಹುಡುಕಿದರೆ ಕಳೆದುಹೋದ ಆ ಭಾಗ ಸಿಗಬಹುದಾಗಿದೆ.

ಅದೇ ರೀತಿ ಪ್ರಾಚೀನ ಕವಿಗಳ ಸಾಲಿನಲ್ಲಿ ಗಜಾಂಕುಶ ಎಂಬುವನ ಹೆಸರು ಬರುತ್ತಿದ್ದು ರಾಷ್ಟ್ರಕೂಟ ೩ನೆಯ ಕೃಷ್ಣನ ಸೇನಾಪತಿಯಾದ ಅವನ ಸ್ಥಳ ಕುರಿತು ಸಾಲೊಟಗಿ ಶಾಸನದಲ್ಲಿ 'ಮಾಹಿಷ ವಿಷಯದ ಕಾಂಚನಮುದುವೊಳಲು' ಎನ್ನಲಾಗಿದೆ. ರನ್ನನ ಮುದುವೊಳಲು 'ಬೆಳಗಲಿಯ ಯ್ಯೂಱ'ರ ಪಟ್ಟಣವಾದರೆ ಇವನದು ಗುಲಬರ್ಗಾ ಜಿಲ್ಲೆಯ ಸೇಡಂ ಗ್ರಾಮಕ್ಕೆ ೮ ಮೈಲು ಅಂತರದಲ್ಲಿರುವ 'ಕಂಸನಪಳ್ಳಿ ಮುಧೋಳ' ಆಗಿರಬಹುದೆಂದು ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ. (ಕ.ರಾ.ಮಾ.ಪ.ಕ.ಸಾ.ಪು. ೨೫೩ ಅ.ಟಿ. ೪೦೦).

ಪೊನ್ನ ರಾಷ್ಟ್ರಕೂಟ ಚಕ್ರವರ್ತಿಗಳ ಆಸ್ಥಾನದಲ್ಲಿದ್ದು 'ಕವಿಚಕ್ರವರ್ತಿ' ಪದವಿ ಪಡೆದವನು. ಅವನು ಶಾಂತಿ ಪುರಾಣವನಲ್ಲದೆ ಭುವನೈಕರಾಮಾಭ್ಯುದಯ ಎಂಬ ಲೌಕಿಕಕಾವ್ಯವನ್ನು ಬರೆದಿದ್ದಾನೆ. ಇದು ರಾಷ್ಟ್ರಕೂಟ ೩ನೆಯ ಕೃಷ್ಣನನ್ನು ರಾಮನೊಂದಿಗೆ ಸಮೀಕರಿಸಿ ರಚಿಸಿರುವ ಕೃತಿಯಾಗಿರಬಹುದಾಗಿದ್ದು, ಈ ಭಾಗದಲ್ಲಿ ಭೂಗತವಾಗಿರುವ ಅದನ್ನು ಶೋಧಿಸಬೇಕಿದೆ. ಗುಲಬರ್ಗಾಜಿಲ್ಲೆಯ ಐನೂಲಿಯಲ್ಲಿ ದೊರೆತ ಕವಿರಾಜಮಾರ್ಗದ ಒಂದು ಕಾಗದಪ್ರತಿಯಲ್ಲಿ ಅದನ್ನು "ನೃಪತುಂಗಾಭ್ಯುದಯ" ಎಂದು ಹೆಸರಿಸಲಾಗಿದೆ. ಈ ನೃಪತುಂಗಾಭ್ಯುದಯದಂತೆ ಭುವನೈಕರಾಮಾಭ್ಯುದಯವೂ 'ಅಭ್ಯುದಯ' ಮಾಲಿಕೆಯ ಒಂದು ಕೃತಿಯಾಗಿದ್ದು ಬಹುಶಃ ಅದರಂತೆ ಇದೂ ಶಾಸ್ತ್ರಕಾವ್ಯವಾಗಿರಬಹುದಾಗಿದೆ.

ಕಲ್ಯಾಣಚಾಲುಕ್ಯರ ಆಶ್ರಯದಲ್ಲಿ ರನ್ನನು ಗದಾಯುದ್ಧ, ಅಜಿತತೀರ್ಥಂಕರ ಪುರಾಣಗಳನ್ನು ಬರೆದನು. ಅವುಗಳಲ್ಲಿ ನಮಗೆ ಗದಾಯುದ್ಧದ ಕೊನೆಯ ಭಾಗ ಸಿಕ್ಕಿಲ್ಲವಾಗಿ ಹುಡುಕಿದರೆ ಈ ಭಾಗದಲ್ಲಿ ಅದು ಸಿಗಬಹುದಾಗಿದೆ. ಅವನ

ಅಲಭ್ಯಕೃತಿಗಳಲ್ಲಿ ಚಕ್ರೇಶ್ವರಚರಿತೆ ಮತ್ತು ಪರಶುರಾಮ ಚರಿತೆಗಳೂ ದೊರೆತಲ್ಲಿ ಆ ಕಾಲದ ರಾಜಕೀಯಚರಿತ್ರೆಯ ಮೇಲೆ ವಿಶೇಷ ಬೆಳಕು ಬೀಳಬಹುದಾಗಿದೆ. ರನ್ನನು ಅಜಿತ ಪುರಾಣದ ಕೊನೆಯಲ್ಲಿ ಚಕ್ರವರ್ತಿ ಸತ್ಯಾಶ್ರಯ ತನಗೆ ಬತ್ತಗಾವೆಯನ್ನಿತ್ತುದಾಗಿ ಹೇಳಿದ್ದಾನೆ. ಶಾಸನಗಳಲ್ಲಿ ಮತ್ತೆಮತ್ತೆ ಕಾಣಿಸಿಕೊಳ್ಳುವ 'ಬತ್ತಗಾವೆ'ಯೆಂಬುದು ಇನಾಮ ಗ್ರಾಮ ವನ್ನು ಸೂಚಿಸುತ್ತದೆ. ಕಲ್ಯಾಣಚಾಲುಕ್ಯ ಸತ್ಯಾಶ್ರಯನಿಂದ ರನ್ನನು ಪಡೆದ ಈ ಇನಾಮಗ್ರಾಮ ಈ ಭಾಗದಲ್ಲಿಯೇ ಇರಬಹುದಾಗಿದೆ. ಶಾಸನ ಶೋಧದಿಂದ ಇದು ಗೊತ್ತಾದರೆ, ಪಂಪನ ಕುರ್ಕಿಯಾಲ್‌ಶಾಸನದಂಥ ಶೋಧ ಇದಾಗುತ್ತದೆ.

ಈವರೆಗೆ ೧೧ನೆಯ ಶತಮಾನವನ್ನು ಕನ್ನಡಸಾಹಿತ್ಯದ ಬರಡುಯುಗವೆಂದು ಕರೆಯುವ ರೂಢಿಯಿದ್ದಿತು. ಆದರೆ ಅದು "ಹೊಸ ಆವಿಷ್ಕಾರಗಳ ಜನ್ಮಭೂಮಿ" ಯೆಂಬುದು ಚಾಲುಕ್ಯ ಜಯಸಿಂಹನ ಆಸ್ಥಾನದಿಂದ ಹೊರಹೊಮ್ಮಿದ ಸಾಹಿತ್ಯದಿಂದ ಸ್ಪಷ್ಟವಾಗುತ್ತದೆ. 'ಚಾಲುಕ್ಯರ ನೃಪತುಂಗ' ನೆಂದೇ ಕರೆಯಬಹುದಾದ ಜಯಸಿಂಹನ ಆಸ್ಥಾನವನ್ನು 'ವಾಗ್ವಧೂ ಜನ್ಮಭೂಮಿ' ಎಂದು ಒಂದು ಶಾಸನ ಕರೆದಿದೆ. ನೃಪತುಂಗನ ಆಸ್ಥಾನದಲ್ಲಿ ಕವಿರಾಜಮಾರ್ಗ ಹೆಸರಿನ ಅಲಂಕಾರಕೃತಿ ಮಾತ್ರ ಸೃಷ್ಟಿ ಯಾಗಿದ್ದರೆ, ಜಯಸಿಂಹನ ಆಸ್ಥಾನದಲ್ಲಿ ಕಾವ್ಯಾವಲೋಕನ ಮೊದಲಾದ ಎಲ್ಲ ಸಾಹಿತ್ಯಶಾಸ್ತ್ರಕೃತಿಗಳೂ, ಸಾಲದುದಕ್ಕೆ ಲೋಕೋಪಕಾರ, ಜಾತಕತಿಲಕ ಮೊದಲಾದ ಲೌಕಿಕಶಾಸ್ತ್ರಕೃತಿಗಳೂ ಹುಟ್ಟಿಕೊಂಡವು. ಇವನ ಆಸ್ಥಾನದಲ್ಲಿದ್ದ ನಾಗವರ್ಮ, ದುರ್ಗಸಿಂಹ, ನಾಗಚಂದ್ರ, ಚಾವುಂಡರಾಯ, ಚಂದ್ರರಾಜ, ವಜ್ರಭಟ್ಟ ಮೊದಲಾದವರು ತಮ್ಮ ವಿಶಿಷ್ಟ ಕಾಣಿಕೆಗಳಿಂದ ಈ ಯುಗವನ್ನು ಸಮೃದ್ಧಗೊಳಿಸಿದ್ದಾರೆ. ಹೀಗೆ ಕಾವ್ಯದ ಜೊತೆಗೆ ಕಾವ್ಯಶಾಸ್ತ್ರಗಳೂ, ನಿತ್ಯಜೀವನಕ್ಕೆ ಬೇಕಾದ ಲೌಕಿಕಶಾಸ್ತ್ರಗಳೂ ಇಲ್ಲಿ ಸಮೃದ್ಧವಾಗಿ ಬೆಳೆದುದು ಒಂದು ವಿಶೇಷ. ಇವರಲ್ಲಿ ವಜ್ರಭಟ್ಟ, ಈ ಹಿಂದೆ ಗಜಾಂಕುಶನ ದಾಗಿರಬಹುದಾದ ಗುಲಬರ್ಗಾ ಜಿಲ್ಲೆಯ ಕಾಂಚನಮದು ವೊಳಲಿನವನೇ ಎಂಬುದನ್ನು ಗಮನಿಸಬೇಕು. ಅಲ್ಲದೆ ಗುಲಬರ್ಗಾ ನೆರೆಯ ನಿಪ್ಪಾಣಿ ಗ್ರಾಮದಲ್ಲಿ ದುರ್ಗಸಿಂಹನ ಶಾಸನವನ್ನು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ಶೋಧಿಸಿದ್ದು, ಅದರಲ್ಲಿ ಅವನ ಸರಸ್ವತಿಸ್ತೋತ್ರದ ಪಂಚ ತಂತ್ರದ ಪದ್ಯವಿರುವುದು ಎತ್ತಿ ಹೇಳಬೇಕಾದ ಸಂಗತಿ ಯಾಗಿದೆ.

ಕಲಚೂರಿಗಳ ಕಾಲದಲ್ಲಿ ಪ್ರಜಾಸಾಹಿತ್ಯವೆನಿಸಿದ ವಚನಗಳು ಹುಟ್ಟಿದ್ದು ಈ ಪ್ರದೇಶದಲ್ಲಿ, ಅವುಗಳ ವಿಪುಲತೆಯನ್ನು ಕುರಿತು ಸಿದ್ಧರಾಮ:

**"ಅಲ್ಲಯ್ಯಗಳ ವಚನ ಎರಡೆಂಬತ್ತುಕೋಟಿ**
**ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾಸಿರ**
**ಎಮ್ಮಯ್ಯಗಳ ವಚನ ವಚನಕ್ಕೊಂದು.**
**ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ**
**ಗಂಗಾಂಬಿಕೆಯ ವಚನ ಲಕ್ಷದ ಎಂಟು ಸಾಸಿರ**
**ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷದ ತೊಂಬತ್ತಾರು ಸಾಸಿರ**
**ಮಡಿವಾಳಣ್ಣನ ವಚನ ಮೂರುಕೋಟಿ ಮುನ್ನೂರು**
**ಹಡಪದಪ್ಪಯ್ಯಗಳವಚನ ಹನ್ನೆರಡು ಸಾಸಿರ**
**ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ**
**ಇಂತಪ್ಪ ವಚನರಚನೆಯ ಬಿಟ್ಟು**
**ಹುಡಿಮಣ್ಣ ಹೊಯ್ಯದೆ ಮಾಬನೆ,**
**ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ**
**ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನ"– ೪೪೪**

ಇದಕ್ಕೆ ಪೂರಕವಾಗಿ ಸಿದ್ಧರಾಮನೆ ಮತ್ತೊಂದೆಡೆ, 'ಅರವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ ಸೋತಿತೆನ್ನ ಮನ' ಎಂದಿದ್ದರೆ, ಅಲ್ಲಮಪ್ರಭು 'ಎರಡೆಂಬತ್ತು ಕೋಟಿ ವಚನವ ಹಾಡಿ ಹಲವ ಹಲವ ಹಂಬಲಿಸಿತೆನ್ನ ಮನ' ಎಂದಿದ್ದಾನೆ. ಆದರೆ ಈಗ ದೊರೆತಿರುವ ಸಿದ್ಧರಾಮನ ವಚನಗಳು ೧೬೭೯, ಅಲ್ಲಮನ ವಚನಗಳು ೧೬೪೫, ಬಸವಣ್ಣನ ವಚನಗಳು ೧೪೧೪, ನೀಲಮ್ಮನ ವಚನಗಳು ೧೨೬, ಗಂಗಾಂಬಿಕೆಯ ವಚನ ೯, ಮಡಿವಾಳಯ್ಯಗಳ ವಚನ ३३४. ಆದ್ದರಿಂದ ವಚನಸಾಹಿತ್ಯ ಸಿಕ್ಕಿದುದಕ್ಕಿಂತ ಕಳೆದು ಹೋದುದೇ ಅಪಾರವಾದುದು. ಇವರಲ್ಲಿ ಕೆಲವರ ವಚನ ಸಿಕ್ಕರೆ ಹೆಸರು ಸಿಕ್ಕಿಲ್ಲ, ವಚನ– ಅಂಕಿತ ಸಿಕ್ಕರೆ ಕರ್ತೃ ಗೊತ್ತಾಗಿಲ್ಲ. ಈ ಪ್ರದೇಶದಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ ನಡೆದುದಾದರೆ ವಚನಗಳ ದೊಡ್ಡ ಭಂಡಾರವೇ ಬಯಲಿಗೆ ಬರಬಹುದಾಗಿದೆ. ಅಲ್ಲದೆ ಈವರೆಗೆ ಅಜ್ಞಾತವಾಗಿದ್ದ ಕೊಡೇಕಲ್ಲ ಸಂಪ್ರದಾಯದ ಸಾಹಿತ್ಯ ಇತ್ತೀಚೆಗೆ ವಿಪುಲವಾಗಿ ಪ್ರಕಟವಾಗಿದ್ದರೂ ಅಲ್ಲಲ್ಲಿ ಉಳಿದುಕೊಂಡಿರಬಹುದಾದ ಲಿಖಿತ ಮತ್ತು ಮೌಖಿಕ ರಚನೆಗಳನ್ನು ಶೋಧಿಸಬಹುದಾಗಿದೆ. ಈ ಸಂಪ್ರದಾಯದ ಶಾಖೆಯೊಂದು ಪ್ರಸಿದ್ಧ ನಾಗಾವಿಯಲ್ಲಿದ್ದಿತು. ಈ ಕೇಂದ್ರದಿಂದಲೂ ಒಂದಿಷ್ಟು ಕೊಡೇಕಲ್ಲ ಸಂಪ್ರದಾಯದ ಸಾಹಿತ್ಯ ಹುಟ್ಟಿದೆಯೆಂದು ತಿಳಿದುಬರುತ್ತಿದೆ. ಇದೇ ಪ್ರದೇಶದ ಜಲದುರ್ಗದ ಹೊಂಡದಲ್ಲಿ ಬೇಸತ್ತ ಕೊಡೇಕಲ್ಲ ಬಸವಣ್ಣ ತನ್ನ ಸಾಹಿತ್ಯವನ್ನೆಲ್ಲ ಮುಳುಗಿಸಿ ದನೆಂಬ ಪ್ರತೀತಿ ಇದೆ. ಇಲ್ಲಿಯ ತಿಂಥಿಣಿ ಮೋನಪ್ಪಯ್ಯನ ಸಾಹಿತ್ಯ ಒಂದಿಷ್ಟು ಪ್ರಕಟವಾಗಿದ್ದರೂ ಇದರ ಮಿಕ್ಕಭಾಗ ಕತ್ತಲೆಯಲ್ಲಿಯೆ ಉಳಿದಿದೆ. ಇವೆಲ್ಲವುಗಳ ಶೋಧದ ಕಡೆಗೆ ವಿದ್ವಾಂಸರು ಗಮನ ಹರಿಸಬೇಕಿದೆ. ಈ ಪ್ರದೇಶದ ಕೊಡ್ಲಾ

ಗ್ರಾಮದ ಉರಿಲಿಂಗಪೆದ್ದಿ ಮಠವು ಲಿಂಗಾಯುತ-ಅಸ್ಪೃಶ್ಯ ಸಂಸ್ಕೃತಿಯ ಕೇಂದ್ರವಾಗಿದ್ದು ಹಳ್ಳಿಹಳ್ಳಿಗೆ ಕ್ಷೇತ್ರಕಾರ್ಯವನ್ನು ನಡೆಸಿ ಅದರ ಅಧ್ಯಯನಕ್ಕೆ ಸಮಗ್ರ ಸ್ವರೂಪ ಕೊಡುವುದು ಅವಶ್ಯವಿದೆ. ಈ ಪ್ರದೇಶವನ್ನಾಳಿದ ಬಹಮನಿ ಅರಸರ ಕಾಲದಲ್ಲಿ ಉರ್ದು-ಪರ್ಶಿಯನ್ ಸಾಹಿತ್ಯ ವಿಪುಲವಾಗಿ ಬೆಳೆಯಿತು. ೧೩೪೭ರಿಂದ ೧೪೨೪ರ ವರೆಗೆ, ಬೀದರ್‌ಗೆ ವರ್ಗಾವಣೆ ಗೊಳ್ಳುವವರೆಗೂ ಗುಲಬರ್ಗಾವು ಬಹಮನಿ ಸುಲ್ತಾನರ ರಾಜಧಾನಿಯಾಗಿತ್ತು. ಅದುವರೆಗೆ ದೆಹಲಿ, ಲಾಹೋರ್ ಅಥವಾ ಮುಲ್ತಾನಗಳಿಗೆ ಸೀಮಿತವಾಗಿದ್ದ, ಪರ್ಶಿಯನ್ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಇಲ್ಲಿಯೂ ಕಾಣಿಸಿಕೊಳ್ಳತೊಡಗಿದವು. ಬಹಮನಿ ರಾಜ್ಯ ಸ್ಥಾಪಕ ಅಲ್ಲಾವುದೀನ್ ಹಸನ್ ಬಹಮನ್ ಶಹನು ಕವಿಗಳಿಗೆ, ವಿದ್ವಾಂಸರಿಗೆ ಒಳ್ಳೆಯ ಆಶ್ರಯ ಒದಗಿಸಿದನು. ನೌರಜ ಪರ್ಶಿಯನ್ ಉತ್ಸವವನ್ನು ಮತ್ತೆ ಆಚರಣೆಗೆ ತಂದನು. **ಫುತ್‌ಹುಸ್ ಸಲಾತಿನ್** ಕೃತಿಯ ಕರ್ತೃ ಇಸಾಮಿ ಅಲ್ಲದೆ ಐನೂದ್ದೀನ್ ಬಿಜಾಪುರಿ, ಮುಲ್ಲಾ ಮೈನೂದ್ದೀನ್ ಹರವಿ ಮೊದಲಾದ ಮಹಾ ವಿದ್ವಾಂಸರು ಅವನ ಆಸ್ಥಾನದಲ್ಲಿದ್ದರು. ಇವನ ಕಾಲದಲ್ಲಿ ಎಲಿಚಪುರ, ಗುಲಬರ್ಗಾ, ದೌಲತಾಬಾದ ಮತ್ತು ಇತರ ಕೆಲವು ಸ್ಥಳಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಯಿತು.

ಭಾಷೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದ ೨ನೆಯ ಸುಲ್ತಾನ್ ಮಹಮ್ಮದ ಶಹ (೧೩೭೮-೯೭) ಮೀರ್ ಫಜಲುಲ್ಲಾ ಇಂಜುವಿನ ಶಿಷ್ಯನಾಗಿ ಸ್ವತಃ ಕವಿಯಾಗಿದ್ದನು. ಇರಾಕ್ ಮತ್ತು ಇರಾನ್, ದೇಶಗಳಿಂದ ಅನೇಕ ವಿದ್ವಾಂಸರು ಮತ್ತು ಕವಿಗಳು ಇವನ ಆಸ್ಥಾನಕ್ಕೆ ಬಂದರು. ಇವನ ನಂತರ ಬಂದ ಸುಲ್ತಾನ್ ಜಾಜುದ್ದೀನ್ ಫಿರೋಜಶಹ (೧೩೯೭-೧೪೨೨) ಬಹಮನಿ ಅರಸರಲ್ಲಿ ಅತ್ಯಂತ ಶ್ರೇಷ್ಠನಾದವನು. ಅವನೂ ಒಬ್ಬ ಕವಿಯಾಗಿದ್ದು ಅವನ ಎರಡು ಗಜಲ್‌ಗಳನ್ನು ಫೆರಿಸ್ತಾ ಉದ್ಧರಿಸಿದ್ದಾನೆ. ಇವನ ಕಾಲದಲ್ಲಿ ಹಲವು ಜನ ವಿದ್ವಾಂಸರು ಇರಾನ್, ಖುರಾಸ್‌ಗಳಿಂದ ಬರಲು ರಾಜಧಾನಿ ಗುಲಬರ್ಗಾವು ವಿದ್ವತ್ತು ಮತ್ತು ಶಿಕ್ಷಣದ ದೊಡ್ಡ ಕೇಂದ್ರವಾಯಿತು.

ಇವರೆಲ್ಲರ ಕಾಲದಲ್ಲಿ ಸಾಹಿತ್ಯದ ಜೊತೆಗೆ ಇತಿಹಾಸವೂ ಹೊಸಹುಟ್ಟನ್ನು ಪಡೆಯಿತು. ಅಜಾದಿ ಎಂಬ ಕವಿ ಬಹಮನಿ ಇತಿಹಾಸವನ್ನು ಕಾವ್ಯರೂಪದಲ್ಲಿ ಬರೆದನು. ಮುಲ್ಲಾ ದಾವೂದ್ ಬಿದ್ರಿ ಗದ್ಯರೂಪದಲ್ಲಿ ಇತಿಹಾಸ ಬರೆದನು. ಫಿರ್ದೂಸಿಯ ಷಹನಾಮಾವನ್ನು ಮಾದರಿಯಾಗಿಟ್ಟು ಕೊಂಡು ಅಜಾರಿಯು **ಬಹಮನ್‌ನಾಮಾವನ್ನು** ರಚಿಸಿದನು. ಮುಲ್ಲಾ ಮಹಮ್ಮದ ಲಾರಿಯು **ಸಿರಿಜುಲ್-ತವರಿಖ್** ಬರೆದನು. ಮುಲ್ಲಾ ದಾವೂದ್ **ತುಹ್‌ಫತಲ್ ಸಲಾತಿನ್** ರಚಿಸಿದನು. ಮುಲ್ಲಾ ಅಬ್ದುಲ್ ಕರೀಂ ಹಮದಾನಿಯು **ತಾರೀಖೆ ಮಹಮ್ಮದ್ ಶಾಹೀ** ಎರಡನ್ನು ರಚಿಸಿದನು. ಇಸಾಮಿಯ **ಫುತುಹುಸ್-ಸಲಾತಿನ್** ಪದ್ಯ ರೂಪದಲ್ಲಿ ಬರೆದ ಮಧ್ಯಯುಗೀನ ಭಾರತದ ಸಮಗ್ರ ಇತಿಹಾಸವಾಗಿದೆ.

ಬಹುಮನಿ ಆಸ್ಥಾನದಲ್ಲಿ ತುಂಬ ಉನ್ನತವಾದ ಸ್ಥಾನಕ್ಕೆ ಏರಿದವನು ಖ್ವಾಜಾ ಮಹಮ್ಮದ್ ಗವಾನ್. ಇವನು ಸು. ೩೦ ವರ್ಷಗಳ ಕಾಲ ರಾಜ್ಯ ವ್ಯವಹಾರಗಳ ತುತ್ತತುದಿಯಲ್ಲಿದ್ದನು. ಅವನು ಕೈಗೊಂಡ ಅನೇಕ ಸುಧಾರಣೆಗಳಲ್ಲಿ ದಖ್ಖನ್ನಿನಲ್ಲಿ ಇರಾನಿ ಶೈಲಿಯಲ್ಲಿ ಸ್ಥಾಪನೆಗೊಂಡ ಮದರಸಾ ಅಥವಾ ವಿಶ್ವವಿದ್ಯಾಲಯ ಪ್ರಮುಖವಾದುದು. ಅವನು ಸ್ಥಾಪಿಸಿದ ಗ್ರಂಥಾಲಯದ ಗ್ರಂಥಸಂಪತ್ತು ಇದೇ ಪ್ರದೇಶದಲ್ಲಿ ಚೆಲ್ಲಾಪಿಲ್ಲಿಯಾಗಿರಬಹುದು. ಇವನ್ನೆಲ್ಲ ಶೋಧಿಸಿದಲ್ಲಿ ಇತಿಹಾಸ ರಚನೆಗೆ ಪ್ರೋತ್ಸಾಹಿಸಿದ ಮುಸಲ್ಮಾನ ಅರಸರ, ಅನೇಕ ಚರಿತ್ರೆಯ ಕೃತಿಗಳು ದೊರೆತು ಭಾರತೀಯ ಇತಿಹಾಸದ ಮೇಲೆ ಹೊಸಬೆಳಕು ಬೀಳುವ ಸಾಧ್ಯತೆ ಇದೆ.

ಬ್ರಿಟೀಷರ ವಿರುದ್ಧ ಹೋರಾಡಿದ ಕನ್ನಡಿಗರಲ್ಲಿ ಮೈಸೂರು ಭಾಗದ ಟಿಪ್ಪು ಸುಲ್ತಾನ, ಉತ್ತರ ಕರ್ನಾಟಕ ಭಾಗದ ಕಿತ್ತೂರ ಚೆನ್ನಮ್ಮ, ಕಲ್ಯಾಣಕರ್ನಾಟಕ ಭಾಗದ ಸುರಪುರದ ದೊರೆಗಳು ಪ್ರಮುಖರು. ಇವರಲ್ಲಿ ಟಿಪ್ಪುವಿನ ಬಗೆಗೆ ಸಾಕಷ್ಟು ಅಧ್ಯಯನವಾಗಿದೆ. ಕಿತ್ತೂರ ಚೆನ್ನಮ್ಮನ ಅಧ್ಯಯನ ಕೆಲಮಟ್ಟಿಗೆ ಕೈಗೂಡಿದೆ. ಸುರಪುರ ಸಂಸ್ಥಾನ ಕುರಿತು ಎರಡು ಮಹಾಪ್ರಬಂಧ (*ಸುರಪುರ ಸಂಸ್ಥಾನ-ಒಂದು ಅಧ್ಯಯನ*-ರಂಗರಾಜ ವನದುರ್ಗ, *ಸುರಪುರ ತಾಲ್ಲೂಕಿನ ಪ್ರಾಗೈತಿಹಾಸಿಕ ಇತಿಹಾಸ*-ಶಿವಶರಣ ಅರಣಿ)ಗಳು ಬಂದಿದ್ದರೂ ವೆಂಕಟಪ್ಪನಾಯಕನ ವಿಶೇಷ ಅಧ್ಯಯನವಾಗಬೇಕಿದೆ. ಸುರಪುರದರಸರ ಆಸ್ಥಾನದ ಸಾಹಿತ್ಯ ಕೃತಿಗಳು ಈವರೆಗೆ ಬೆಳಕು ಕಾಣದುದು ವಿಷಾದದ ಸಂಗತಿಯಾಗಿದೆ. (*ಸುರಪುರ ಸಂಸ್ಥಾನದ ಇತಿಹಾಸ* : ಸಗರ ಕೃಷ್ಣಾಚಾರ್ಯ, ಕಪಟ್ರಾಳ ಕೃಷ್ಣರಾವ್, ಬೂದಿಹಾಳ ಯಾಶ್ ಮೌಂಡ್., ಡಾ.ಕೆ. ಪದ್ದಯ್ಯ)

ವಿಜಯನಗರದ ಅರಸೊತ್ತಿಗೆಯ ಅಂತ್ಯಕಾಲದಲ್ಲಿ, ಹೈದರಾಬಾದಕರ್ನಾಟಕ, ಅದರಲ್ಲೂ ರಾಯಚೂರಿನ ಲಿಂಗಸುಗೂರುಪ್ರದೇಶ ದಾಸಸಾಹಿತ್ಯದ ನೆಲೆಯಾಗಿರುವುದನ್ನು ಕಾಣುತ್ತೇವೆ. ಹುಡುಕಿದಲ್ಲಿ ಹಲವಾರು ದಾಸರ-ಸಾಹಿತ್ಯ ಹೊರಬರುವ ಸಾಧ್ಯತೆ ಇದೆ.

ಕಲ್ಯಾಣಕರ್ನಾಟಕದಲ್ಲಿ ಉದ್ದಕ್ಕೂ ಸಂಸ್ಕೃತಸಾಹಿತ್ಯ ಬೆಳೆದು ಬಂದಿದೆ. ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಯಾದವ, ಸುರಪುರ ಅರಸರ ಪೋಷಣೆಯೂ ಇದಕ್ಕೆ ಸಾಕಷ್ಟು ದೊರೆತಿದೆ.

ಕಲ್ಯಾಣ ಚಾಲುಕ್ಯರ ೬ನೆಯ ವಿಕ್ರಮಾದಿತ್ಯನು ಬಿಲ್ಹಣ ಎಂಬ ಕವಿಗೆ 'ವಿದ್ಯಾಪತಿ' ಎಂಬ ಬಿರುದಿತ್ತಿದ್ದನು. ಇವನು **ವಿಕ್ರಮಾಂಕ ದೇವಚರಿತ** ಎಂಬ ಜೀವನಚರಿತೆಯಲ್ಲಿ ಅಹವಮಲ್ಲನ ವರೆಗಿನ ಇತಿಹಾಸವನ್ನಿತ್ತಿದ್ದಾನೆ. ವಿಕ್ರಮಾದಿ ತ್ಯನು ಸಾಧಿಸಿದ ಹಲವಾರು ವಿಜಯಗಳನ್ನು ಪ್ರಸ್ತಾಪಿಸಿದ್ದಾನೆ. ವಿಕ್ರಮಾದಿತ್ಯನ ವೈಭವಕ್ಕೆ ಬಹುವಾಗಿ ಪ್ರಭಾವಿತನಾದ ವಿಜ್ಞಾನೇಶ್ವರನು ಯಾಜ್ಞವಲ್ಕ್ಯ ಸ್ಮೃತಿಗೆ '**ಮಿತಾಕ್ಷರ**' ಎಂಬ ಹೆಸರಿನ ವ್ಯಾಖ್ಯಾನ ಬರೆದಿದ್ದಾನೆ. ಆಧುನಿಕ ಭಾರತದ ಪೌರಶಾಸನವನ್ನು ರಚಿಸುವಲ್ಲಿ ಇದು ಬಹುಮುಖ ಪಾತ್ರ ವಹಿಸಿದೆ. ೬ನೆಯ ವಿಕ್ರಮಾದಿತ್ಯನ ಮಗ ಭೂಲೋಕಮಲ್ಲ ೩ನೆಯ ಸೋಮೇಶ್ವರನು ತನ್ನ ಕಾಲದಲ್ಲಿ ಪ್ರಚುರವಾಗಿದ್ದ ವಿಜ್ಞಾನ ಮತ್ತು ಕಲೆ ಕುರಿತು "**ಅಭಿಲಷಿತಚಿಂತಾಮಣಿ**" ಅಥವಾ "**ಮಾನಸೋಲ್ಲಾಸ**" ಎಂಬ ಕೃತಿ ರಚಿಸಿದ್ದಾನೆ. ಇದು ಮೂಲತಃ ಹಿಂದೂ ನೀತಿತತ್ವಗಳನ್ನು ಕುರಿತ ಒಂದು ನಿಬಂಧವಾದರೂ, ಇದರಲ್ಲಿ ವಾಸ್ತುಶಿಲ್ಪ, ಶಿಲ್ಪ, ಮೂರ್ತಿಶಿಲ್ಪ, ಸಂಗೀತ, ಚಿತ್ರಕಲೆ, ಶಕುನ, ಸಾಮಾಜಿಕ ಪದ್ಧತಿ, ಕ್ರೀಡೆ ಮೊದಲಾದ ವಿಷಯಗಳಿವೆ. ಈ ಕೃತಿಯ ೨ನೆಯ ವಿಭಾಗದಲ್ಲಿ ರಾಜನ-ಸಪ್ತಾಂಗಗಳು, ಷಡ್ಗುಣಗಳು, ನಾಲ್ಕು ಉಪಾಯಗಳು ಮೊದಲಾದವುಗಳ ವಿವರವಿದೆ. ಇವುಗಳ ವಿಸ್ತೃತವಾದ ಅಧ್ಯಯನವೂ ಇಂದಿನ ಅವಶ್ಯಕತೆಯಾಗಿದೆ. ಮಳಖೇಡದಲ್ಲಿ ವೃಂದಾವನಸ್ಥಳವಿದೆ. ಅಲ್ಲಿಯ ಜಯ ತೀರ್ಥರು ಮಧ್ವಾಚಾರ್ಯರ ಸರ್ವ ಮೂಲಗ್ರಂಥಗಳಿಗೆ ಟೀಕೆ ಬರೆದು ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿದ್ದಾರೆ. ನೇರವಾಗಿ ಇವರ ಸಾಹಿತ್ಯವನ್ನೇ ಗುರಿಯಾಗಿಟ್ಟುಕೊಂಡು ಅಭ್ಯಸಿಸು ವುದೂ ಇಂದಿನ ಅವಶ್ಯಕತೆಗಳಲ್ಲಿ ಒಂದಾಗಿದೆ.

ಹೀಗೆ ಕವಿಸಾಹಿತ್ಯವನ್ನು ಬಿಟ್ಟರೆ "ದಾಖಲು ಸಾಹಿತ್ಯ"ವೂ ಈ ಭಾಗದಲ್ಲಿ ಮತ್ತೆ ಮತ್ತೆ ಹುಟ್ಟಿಕೊಂಡಿವೆ. ತೀರ ಹಳೆಯ ದಾಖಲೆ ನಾಶವಾಗಿರುವುದು ಸಹಜ. ಬಹಮನಿ ಮತ್ತು ಸುರಪುರ ಸಂಸ್ಥಾನಗಳಿಗೆ ಸಂಬಂಧಿಸಿದಂತೆ ವಿಪುಲ ಸಾಮಗ್ರಿ ಅಲ್ಲಲ್ಲಿ ಉಳಿದುಕೊಂಡಿದೆ. ಇದು ಕಡತ, ನಿರೂಪ, ಬಿನ್ನವತ್ತಳೆ, ದಿನಚರಿ, ಕೈಫಿಯತ್ತು, ಬಖೈರು, ನಾಮೆ, ಸ್ಥಳ ಪುರಾಣ-ಮಹಾತ್ಮೆ ರೂಪಗಳಲ್ಲಿ ಸಿಗುತ್ತಿದ್ದು, ಅಂದಂದಿನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಜೀವನವನ್ನು ತಿಳಿಯಲು ಬಹು ಸಹಾಯಕವಾಗಿದೆ. ಆದ್ದರಿಂದ ಈ ಭಾಗದ ಎಲ್ಲ ದಾಖಲೆಗಳನ್ನು ಸಮಗ್ರವಾಗಿ ಸಂಗ್ರಹಿಸಿ, ಅಭ್ಯಸಿಸುವುದು ಬಹು ಅವಶ್ಯವಿದೆ.

ಜನಪದಸಾಹಿತ್ಯ, ಐತಿಹ್ಯ, ಹೇಳಿಕೆ, ವದಂತಿ ಮೊದಲಾದವು ನಾಡಿನ ಚರಿತ್ರೆ ಕಟ್ಟಲು ಸಾಮಗ್ರಿ ಒದಗಿಸುತ್ತಿವೆ. ಉದಾಹರಣೆಗೆ ಸುರಪುರ ಸಂಸ್ಥಾನದಲ್ಲಿ ಮಂತ್ರಿಗಳಾಗಿದ್ದ ನಿಷ್ಠಿ ಮನೆತನದ ಕಡಲಪ್ಪ ವೀರಪ್ಪ ಅವರು ಮಾಡಿದ ಲೋಕ ಕಲ್ಯಾಣ ಕಾರ್ಯಗಳು, ಕಟ್ಟಿಸಿದ ನ್ಯಾಯದ ಕಟ್ಟೆ, ಮಠ-ಮಾನ್ಯಗಳು, ಹಾಕಿಕೊಂಡ ಕೃಷ್ಣಾಮೇಲ್ದಂಡೆ ಯೋಜನೆ ಮೊದಲಾದವು ಅಲ್ಲಿಯ ಜನರಲ್ಲಿ ಜನ ಜನಿತವಾಗಿದೆ. ಈ ಕಾಲದ ರಾಜಾವೆಂಕಟಪ್ಪ ನಾಯಕನ ದುಂದುಮೆ ಮತ್ತು ಗ್ವಾಲಣ್ಣನ ವೀರಗಾಥೆಯನ್ನು ಪ್ರೊ. ಬಿ.ಆರ್. ಸುರಪುರ ಅವರು ಸಂಗ್ರಹಿಸಿದ್ದಾರೆ. ಹೀಗೆ ಈ ಭಾಗವನ್ನು ಕುರಿತ ಮೌಖಿಕ ಸಾಮಗ್ರಿಯನ್ನು ಸಮಗ್ರವಾಗಿ ಸಂಕಲಿಸಿದ್ದಾದರೆ. ಇತಿಹಾಸದ ನಿಜವಾದ ನೆಲೆ ತಿಳಿದು ಬರಲು ಸಾಧ್ಯ.

ಇಂಥ ಅಕ್ಷರಮಾಧ್ಯಮದ ಸಾಮಗ್ರಿಯನ್ನು ಸಮಗ್ರವಾಗಿ ಶೋಧಿಸುವ ಮೂಲಕ ಕಲ್ಯಾಣಕರ್ನಾಟಕದ ಕಳೆದುಹೋದ ಚರಿತ್ರೆ ಆದಷ್ಟು ತೀವ್ರ ಬೆಳಕು ಕಾಣುವಂತಾಗಲೆಂದು ಹಾರೈಸುತ್ತೇನೆ.



# ಇತಿವೃತ್ತ

ಪೂರ್ಣ ಹೆಸರು : ಡಾ. ಬಿ.ವ್ಹಿ. ಶಿರೂರ.
ಜನ್ಮ ದಿನಾಂಕ : ೦೨-೦೩-೧೯೪೧.
ಜನ್ಮ ಸ್ಥಳ : ಗ್ರಾಮ: ಆಡೂರ ತಾ: ಯಲಬುರ್ಗಿ ಜಿ: ಕೊಪ್ಪಳ.
ತಂದೆ : ಶ್ರೀ ವೀರಭದ್ರಪ್ಪ ಶಿರೂರ, ಮಾಜಿ ಶಾಸಕರು, (೧೯೫೭-೧೯೬೩) ಯಲಬುರ್ಗಿತಾಲೂಕು.
ತಾಯಿ : ಅಂದಾನಮ್ಮ.
ವಿದ್ಯಾಭ್ಯಾಸ :
ಪ್ರಾಥಮಿಕ : ಆಡೂರು ಮತ್ತು ಗದಗ.
ಮಾಧ್ಯಮಿಕ : ಕೊಪ್ಪಳ ಮತ್ತು ಕುಕನೂರ.
ಕಾಲೇಜು : ಬಿ.ಎ., ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ ೧೯೬೩.
ವಿಶ್ವವಿದ್ಯಾಲಯ : ಕನ್ನಡ ಎಂ.ಎ., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ- ೧೯೬೫.
ಪಿಎಚ್.ಡಿ., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೩.
ವೃತ್ತಿ :
* ೧೯೬೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವಚನವಾಙ್ಮಯ ವಿಭಾಗದಲ್ಲಿ ಸಹಾಯಕ ಸಂಶೋಧಕರಾಗಿ ನೇಮಕ.
* ೧೯೬೬ರಲ್ಲಿ ನರೇಗಲ್ಲದ ಶ್ರೀ ಅನ್ನದಾನೀಶ್ವರ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಸೇರ್ಪಡೆ.
* ೧೯೭೪ರಲ್ಲಿ ಪ್ರವಾಚಕರಾಗಿ ಬಡ್ತಿ.
* ೧೯೭೪ರಿಂದ ೧೯೭೬ರವರೆಗೆ ನರೇಗಲ್ಲದ ಶ್ರೀ ಅನ್ನದಾನೀಶ್ವರ ಮಹಾವಿದ್ಯಾಲಯದಲ್ಲಿ ಪ್ರಾಚಾರ್ಯರಾಗಿ ಸೇವೆ.
* ೧೯೮೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನಪೀಠದಲ್ಲಿ ಜೈನಸಾಹಿತ್ಯದ ಪ್ರವಾಚಕರಾಗಿ ಸೇರ್ಪಡೆ.
* ೧೯೯೪ರಲ್ಲಿ ಕನ್ನಡ ಅಧ್ಯಯನಪೀಠದಲ್ಲಿ ಪ್ರಾಧ್ಯಾಪಕರಾಗಿ ನೇಮಕ.

ನಿವೃತ್ತಿ :
* ೩೧-೦೩-೨೦೦೧ರಂದು ಸೇವೆಯಿಂದ ನಿವೃತ್ತಿ (ಒಟ್ಟು ೩೫ ವರ್ಷಗಳ ಕಾಲ ಶಿಕ್ಷಣ ಸೇವೆ)
* ದಿನಾಂಕ: ೦೧-೦೭-೨೦೦೫ರಿಂದ ಯು.ಜಿ.ಸಿ. ಮೇಜರ್ ಪ್ರಾಜೆಕ್ಟದ ಅಂಗವಾಗಿ "ಪ್ರಾಚೀನ ಕರ್ನಾಟಕದ ಶೈವ ಶಾಖೆಗಳು" ಎಂಬ ವಿಷಯ ಕುರಿತು ಅಧ್ಯಯನಕಾರ್ಯ ನಡೆದಿದೆ.

ಸಾಹಿತ್ಯ ಪಥ
ಸಂಶೋಧನೆ :
* **ಶ್ರವಣಬೆಳ್ಗೊಳ: ರಾಜಕೀಯ, ಸಾಹಿತ್ಯಕ, ಸಾಂಸ್ಕೃತಿಕ ಮಹತ್ವ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.
* **ಯಲಬುರ್ಗಿ ಸಿಂದರು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭.
* **ಸಂಶೋಧನ ಸ್ವರೂಪ,** ಅನ್ನಪೂರ್ಣ ಪ್ರಕಾಶನ, ನಂ.೧೩, ಮಂಜುನಾಥ ನಗರ, ಹುಬ್ಬಳ್ಳಿ, ೨೦೦೦.

ಸಂಪಾದನೆ
ವಚನ :
* **ಪಟ್ಸ್ಥಲಜ್ಞಾನ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್ಸ್ಥಲ ಜ್ಞಾನಸಾರಾಮೃತದ ಬೆಡಗಿನವಚನದ ಟೀಕೆ,** ವೀರಶೈವ ಅಧ್ಯಯನಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ, ೧೯೭೭.
* **ಜಕ್ಕಣ್ಣಯ್ಯನ ನಿರಾಳಮಂತ್ರಗೋಪ್ಯ,** ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ-೧೯೮೨.
* ಸಂಪಾದನೆಯ ಸಣ್ಣ ಬರಹದ ಗುರುಬಸವರಾಜದೇವರು ಸೇರಿಸಿದ **ಶರಣಚಾರಿತ್ರದ ವಚನಗಳು,** ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ-೧೯೮೪.

* ಉರಿಲಿಂಗಪೆದ್ದಿಯ **ನೂರೊಂದು ವಚನಗಳು**, ಶ್ರೀಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರಮಠ, ಹುಬ್ಬಳ್ಳಿ, ೧೯೮೪.
* **ಶರಣಮುಖಮಂಡನ**, ವೀರಶೈವ ಅಧ್ಯಯನಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೮೮.
* ಮೂರುಸಾವಿರ ಮುಕ್ತಿಮುನಿ ವಿರಚಿತ **ಸರ್ವಾಚಾರಸಾರಾಮೃತಸುಧೆ**, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೮೯.
* **ಎಲ್ಲ ಪುರಾತನರವಚನಗಳು** (ಪ್ರಕಟಣೆಯ ಹಂತದಲ್ಲಿ)

ಪ್ರಾಚೀನ :
* ಅನಂತಕವಿಯ **ಗೊಮ್ಮಟೇಶ್ವರಚರಿತೆ**, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೮೧.
* ಧೂಪಾದ ರಾಚೇಶನ **ಮೊಲ್ಲೆಬೊಮ್ಮಯ್ಯಗಳ ಕಾವ್ಯ**, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಸಂಸ್ಥಾನಮಠ, ಗದಗ, ೧೯೮೭.
* **ರತ್ನಕರಂಡಕದ ಕಥೆಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨.
* ಪಂ.ವೈ. ನಾಗೇಶಶಾಸ್ತ್ರೀ ವಿರಚಿತ **ನಿಡಸೋಸಿಯ ಶ್ರೀ ಶಿವಲಿಂಗಶಿವಯೋಗೀಶ್ವರ ಪುರಾಣ**, ಶ್ರೀ ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ, ಜಿ: ಬೆಳಗಾವಿ, ೧೯೯೯.
* **ಭಕ್ತಿರಸಸೋನೆ**, ಶ್ರೀ ಬಸವೇಶ್ವರಪೀಠ, ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೩.
* **ಸಿದ್ಧೇಶ್ವರಪುರಾಣ**, (ಪ್ರಕಟಣೆಯ ಹಂತದಲ್ಲಿ)

ಸಂಸ್ಮರಣ–ಅಭಿನಂದನ :
* **ಗೌರವ**, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೮೬.
* **ಶಿವದೀಪ್ತಿ**, (ಸಹಸಂಪಾದಕರು) ಶ್ರೀ ನಿ.ಪ್ರಸ್ವ ಡಾ. ಶಿವಬಸವಮಹಾಸ್ವಾಮಿಗಳು, ರುದ್ರಾಕ್ಷಿಮಠ, ನಾಗನೂರು–ಬೆಳಗಾವಿ ಅವರ ಶತಮಾನೋತ್ಸವ ಸಮಿತಿ, ಶಿವಬಸವನಗರ, ಬೆಳಗಾವಿ, ೧೯೯೦.
* **ಹಾಲಕೆರೆ ಶ್ರೀ ಗುರು ಅನ್ನದಾನೀಶ್ವರಮಹಾಸ್ವಾಮಿಗಳು**, (ಸಹಸಂಪಾದಕರು) ಹಾಲಕೆರೆ ಶ್ರೀಗುರು ಅನ್ನದಾನೀಶ್ವರಮಹಾಸ್ವಾಮಿಗಳ ಶತಮಾನೋತ್ಸವ ಸಮಿತಿ, ನರೇಗಲ್ಲ, ೧೯೮೯.
* **ಸಿದ್ಧರಾಮಸಂಪದ**, ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೧೯೯೫.
* **ಸಿದ್ಧಶ್ರೀ** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೨೦೦೦.
* **ಸುವರ್ಣಪ್ರಸಾದ**, ಶ್ರೀ ಅನ್ನದಾನ ವಿಜಯ ವಿದ್ಯಾ ಪ್ರಸಾರಕ ಸಮಿತಿ, ನರೇಗಲ್ಲು, ೨೦೦೪.
* **ತಾರಣ**, (ಸಹಸಂಪಾಕರು) ವಜ್ರಮಹೋತ್ಸವ ಸಮಿತಿ, ಅರಳೆಲೆ ಕಟ್ಟೀಮನಿ ಹಿರೇಮಠ, ಚಳಗೇರಿ, ೨೦೦೪.

ಪಠ್ಯ :
* **ಪಂಚವಟಿ**, ಪ್ರಭಾ ಪಬ್ಲಿಶರ್ಸ್, ಧಾರವಾಡ, ೧೯೭೮.
* **ನಳಚರಿತ್ರೆ ಸಂಗ್ರಹ**, ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧.
* **ಬಸವಣ್ಣನವರ ವಚನವಾಹಿನಿ**, ಆಕಳವಾಡಿ ಬುಕ್ ಡಿಪೊ, ಧಾರವಾಡ, ೧೯೮೯.

ಇತರ :
* **ಹರಿಹರನ ಗಿರಿಜಾಕಲ್ಯಾಣ** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮.
* **ಹಾಲಕೆರೆಯ ಶ್ರೀ ಅನ್ನದಾನಮಹಾಸ್ವಾಮಿದ್ವಯರು**, ಶೀ ಅನ್ನದಾನ ಪ್ರಕಾಶನ, ನರೇಗಲ್ಲ, ೧೯೭೩.
* **ಭಿಕ್ಷಾಟನಚರಿತೆ**, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು, ೧೯೮೨.
* **ಷಡಕ್ಷರದೇವ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

* **ಆನಂದಕಂದರ ಅಪ್ರಕಟಿತ ಬಾನುಲಿರೂಪಕಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮.
* **ಡಾ. ಶಿ.ಚೆ. ನಂದಿಮಠದ ಲೇಖನಗಳು** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು (ಪ್ರಕಟಣೆಯ ಹಂತದಲ್ಲಿ)
* **ಲಕ್ಕಣ್ಣ ದಂಡೇಶ**, (ಪ್ರಕಟಣೆಯ ಹಂತದಲ್ಲಿ)
* **ಪ್ರೊ. ಕೆ.ಜಿ. ಕುಂದಣಗಾರ**, (ಪ್ರಕಟಣೆಯ ಹಂತದಲ್ಲಿ)

**ಗೌರವ-ಪ್ರಶಸ್ತಿ** :
* **ಶ್ರವಣಬೆಳ್ಗೊಳ : ರಾಜಕೀಯ, ಸಾಹಿತ್ಯಕ, ಸಾಂಸ್ಕೃತಿಕ ಮಹತ್ವ** ಮಹಾಪ್ರಬಂಧಕ್ಕೆ ಶ್ರವಣಬೆಳ್ಗೊಳದ ಬಾಹುಬಲಿ ಪ್ರತಿಷ್ಠಾನದ ಬಹುಮಾನ, ೧೯೮೧.
* **ಸಂಶೋಧನ ವ್ಯಾಸಂಗಕ್ಕೆ** ಮೈಸೂರು ವಿಶ್ವವಿದ್ಯಾಲಯದ ತೀ.ನಂ.ಶ್ರೀ. ಪ್ರತಿಷ್ಠಾನದ ಬಹುಮಾನ, ೧೯೯೨.
* **ರತ್ನಕರಂಡಕದ ಕಥೆಗಳು** ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ದೇವೇಂದ್ರ ಕೀರ್ತಿಭಟ್ಟಾರಕ ಪ್ರಶಸ್ತಿ, ೧೯೯೩.
* **ಭಾರತರತ್ನ ವಿಶ್ವೇಶ್ವರಯ್ಯ** ಪ್ರಶಸ್ತಿ, ಬೆಂಗಳೂರು, ೨೦೦೧.
* ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ೧೫-೧೨-೨೦೦೨ ರಂದು **'ಸಿರಿಸಂಪದ'** ಅಭಿನಂದನಗ್ರಂಥ ಸಮರ್ಪಣೆ ಮತ್ತು ಸನ್ಮಾನ.
* **ಜ.ಚ.ನಿ. ಪ್ರಶಸ್ತಿ**, ೨೦೦೨.
* ಕೊಪ್ಪಳ ಜಿಲ್ಲಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ, ೧೫-೦೨-೨೦೦೪.

**ಲೇಖನ** :
* ವಚನಕಾರರ ಸಮಗ್ರಕ್ರಾಂತಿ.
* ಬಸವಣ್ಣ ಮತ್ತು ಕಾರ್ಲಮಾರ್ಕ್ಸ್.
* ಸ್ವರವಚನಪರಂಪರೆ.
* ಬಿಜ್ಜಳನನ್ನು ಕೊಂದ ಮೊಲ್ಲೆ ಬೊಮ್ಮಯ್ಯ.
* ಹಲಗೆಯಾರ್ಯನ ಶೂನ್ಯಸಂಪಾದನೆ.
* ಶ್ರವಣಬೆಳ್ಗೊಳದ ಸಾಂಸ್ಕೃತಿಕ ಅಧ್ಯಯನ.
* ಶ್ರವಣಬೆಳ್ಗೊಳ ಮತ್ತು ಗಂಗರು.
* ಶ್ರವಣಬೆಳ್ಗೊಳದ ಹಸ್ತಪ್ರತಿಗಳ ಪ್ರಶಸ್ತಿಗಳು.
* *Mahamastakabhisheka.*
* ಚಾವುಂಡರಾಯನ ರಾಜಕೀಯ ಸಾಧನೆ.
* ಸಂಶೋಧನೆ: ವಿವಿಧ ಹಂತಗಳು. ಕರ್ನಾಟಕದಲ್ಲಿ ಸಂಶೋಧನೆ.
* ಪ್ರೊ. ಕೆ.ಜಿ.ಕುಂದಣಗಾರ ಅವರ ಸಂಶೋಧನ ಕಾರ್ಯಗಳು.
* ಪ್ರೊ. ಡಿ.ಎಲ್. ನರಸಿಂಹಾಚಾರ ಅವರ ಸಂಶೋಧನೆ.
* ಕೊಪ್ಪಳ ಜಿಲ್ಲೆಯ ಐತಿಹಾಸಿಕತೆ. ರಾಯಚೂರು ಜಿಲ್ಲೆಯ ಶಾಸನಗಳು.
* ಕರ್ನಾಟಕದ ಶಾಸನಗಳ ಭಾಷೆ. ಆರ್. ನರಸಿಂಹಾಚಾರ್.
* ಜಾನಪದ ಹಾಡು ಮತ್ತು ಲಾವಣಿಗಳಲ್ಲಿ ಮುಂಡರಗಿ ಭೀಮರಾಯ.

ಮೊದಲಾದ ೧೫೦ ಲೇಖನಗಳು ನಾಡಿನ ವಿದ್ವತ್ ಪತ್ರಿಕೆ, ಅಭಿನಂದನಗ್ರಂಥಗಳಲ್ಲಿ ಪ್ರಕಟಗೊಂಡಿವೆ. ೧೦೦ ಲೇಖನಗಳ **'ಸಂಶೋಧನೆಯ ಚತುರ್ಮುಖ'** ಗ್ರಂಥ ಪ್ರಕಟಣೆಯ ಹಂತದಲ್ಲಿದೆ.



ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ವಿಜೇತ ಡಾ. ಕೆ.ಆರ್. ಗಣೇಶ* ಅವರ ಉಪನ್ಯಾಸ

# ಆಂಧ್ರಪ್ರದೇಶದ ಶಾಸನಗಳು ಮತ್ತು ಜೈನ ಬಸದಿಗಳು

ಕ್ರಿ.ಪೂ. ೩ನೆಯ ಶತಮಾನದಿಂದಲೇ, ಆಂಧ್ರದಲ್ಲಿ ಜೈನ ಧರ್ಮ ಇತ್ತು, ಎಂದು ಹೇಳಲು ಸಮಕಾಲೀನ ಆಧಾರಗಳು ಇದುವರೆಗೂ ದೊರೆತಿರಲಿಲ್ಲ. ಗುಂಟೂರು ಜಿಲ್ಲೆ, ಅಮರಾವತಿಗೆ ೯ ಕಿ.ಮೀ. ದೂರದಲ್ಲಿರುವ ವಡ್ಡಮಾನು ಎಂಬ ಗ್ರಾಮದಲ್ಲಿ ನಡೆದ ಉತ್ಖನನಗಳಿಂದ ಹೊಸ ವಿಚಾರಗಳು ಬೆಳಕಿಗೆ ಬಂದಿವೆ. ಅಲ್ಲಿ ಒಂದು ಜೈನ ಸ್ತೂಪ ಹಾಗೂ ಅನೇಕ ಜೈನ ಗುರುಗಳ ಮತ್ತು ಅವರ ಶಿಷ್ಯರ ಹೆಸರಿನ ಶಾಸನಗಳು *(label inscriptions)* ದೊರೆತಿವೆ. ಲಿಪಿ ಶಾಸ್ತ್ರದ ದೃಷ್ಟಿಯಿಂದ ಕ್ರಿ.ಪೂ. ಸುಮಾರು ೨೦೦ ರಿಂದ ಕ್ರಿ.ಶ. ೧೦೦ ರವರೆಗೆ ಆ ಶಾಸನಗಳ ಕಾಲವನ್ನು ನಿರ್ಧರಿಸಬಹುದು. ಅಲ್ಲಿನ ಕೆಲವು ಶಾಸನಗಳು ಜೈನವಿಹಾರ, ಭೋಗ ಸಂಘ, ಸಂಪತಿ ವಿಹಾರಗಳನ್ನು ಹೆಸರಿಸುತ್ತವೆ.[೧]

ಹರಿಷೇಣನ 'ಬೃಹತ್ ಕಥಾ ಕೋಶ' ಹಾಗೂ ನಯಸೇನನ 'ಧರ್ಮಾಮೃತ' ದಲ್ಲಿ ವೆಂಗಿಮಂಡಲದ ಪ್ರತಿಪಾಲಪುರದಿಂದ ಆಳುತ್ತಿದ್ದ ಜೈನರಾಜಕುಮಾರ ಧನದನ ಕಥೆ ಇದೆ. ಡಾ॥ ಪಿ.ಬಿ. ದೇಸಾಯಿ ಅವರು 'ಪ್ರತಿಪಾಲಪುರ'ವನ್ನು ಇಂದಿನ 'ಭಟ್ಟಿಪ್ರೋಲು' ಎಂದು ಗುರುತಿಸಿದ್ದಾರೆ.[೨]

ಕಡಪ ಜಿಲ್ಲೆ ಪೆರೂರಿನ (ಗಂಗ ಪೆರೂರು) ಸಿಂಹಣಂದಿಯ ತರಬೇತಿಯಲ್ಲಿ ಬೆಳದ ಗಂಗ ಮಾಧವನು, ಗುರುವಿನ ಆಜ್ಞೆಯಂತೆ ಒಂದು ಶಾಸನ ಸ್ತಂಭವನ್ನು ಕತ್ತರಿಸಿದನೆಂದು ಕ್ರಿ.ಶ. ೧೨ನೆಯ ಶತಮಾನದ ಕರ್ನಾಟಕದ ಶಾಸನವೊಂದು ಹೇಳುತ್ತದೆ.[೩] ಇನ್ನೊಂದು ಶಾಸನದಲ್ಲಿ ಮಾಧವನ ಬದಲು ಕೊಂಗುಣಿವರ್ಮನ ಹೆಸರಿದೆ.[೪]

ಭರತನ ಸಹೋದರ ಬಾಹುಬಲಿಯು ಆಳುತ್ತಿದ್ದ 'ಪೌದನಪುರ' (ಬಹುಧಾನ್ಯಪುರ) ವನ್ನು ನಿಜ಼ಾಮಾಬಾದ್ ಜಿಲ್ಲೆಯ 'ಬೋದನ' ಎಂದು ಹೇಳುತ್ತಾರೆ. ಅನಂತಪುರ ಜಿಲ್ಲೆಯ ಕೊನಕೊಂಡ್ಲವನ್ನು ಮೂಲಸಂಘದ ಕುಂಡಕುಂದಾಚಾರ್ಯರ ಜನ್ಮಸ್ಥಾನವೆಂದು ಶಾಸನವೊಂದು ತಿಳಿಸುತ್ತದೆ.[೫] ಕ್ರಿ.ಶ. ೧ನೇ ಶತಮಾನದ ಕುಂದುಕುಂದರು ಬಲಾತ್ಕಾರಗಣ ಹಾಗೂ ಸರಸ್ವತಿಗಚ್ಛ ಅಥವಾ ವಕ್ರಗಚ್ಛವನ್ನು ಸ್ಥಾಪಿಸಿದರೆಂದು ಹೇಳುತ್ತಾರೆ.

ಕ್ರಿ.ಶ.ದ ಆರಂಭ ಕಾಲದಲ್ಲಿ ಬೌದ್ಧ ಧರ್ಮದ ಜೊತೆ ಸಂಘರ್ಷಕ್ಕೆ ಇಳಿದುದರಿಂದಲೇ, ಆಂಧ್ರದ ಜೈನ ಧರ್ಮದ ಅನೇಕ ಕೇಂದ್ರಗಳು ಬೌದ್ಧ ಧರ್ಮ ಕೇಂದ್ರಗಳಾದವು ಎಂಬ ಮಾತಿಗೆ ಆಧಾರಗಳು ಸಾಲುವುದಿಲ್ಲ.

ಆಂಧ್ರದಲ್ಲಿ ಜೈನರಿಗೆ ಸಂಬಂಧಿಸಿದ ಶಾಸನಗಳಲ್ಲಿ ಬಹುಪಾಲು ಕನ್ನಡದಲ್ಲಿಯೇ ರಚಿತವಾಗಿವೆ. ಕೆಲವು ಸಂಸ್ಕೃತದಲ್ಲಿವೆ. ಆರು-ಏಳು ಶಾಸನಗಳು ಮಾತ್ರ ತೆಲುಗು ಭಾಷೆಯಲ್ಲಿವೆ. ಒಂದು ತಮಿಳಿನಲ್ಲಿದೆ. [ಈ ಶಾಸನಗಳಿಂದ ತಿಳಿದು ಬರುವ ಜೈನ ದೇವಾಲಯಗಳ ಬಗೆಗೆ ಇಲ್ಲಿ ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ].

ಜೈನ ಸನ್ಯಾಸಿಗಳು ಮಳೆಗಾಲದ ನಾಲ್ಕು ತಿಂಗಳು ಹೊರತು ಉಳಿದ ಕಾಲದಲ್ಲಿ ವಿಹರಿಸುತ್ತಿರಬೇಕೆಂಬ ನಿಯಮ ವಿದ್ದರೂ ಕಾಲಕ್ರಮೇಣ ಆ ನಿಯಮ ಸಡಿಲವಾಗಿ ಮುನಿಗಳು ಬಸದಿಗಳಲ್ಲಿ ವಾಸಿಸಲಾರಂಭಿಸಿದರು ಎಂದು ತೋರುತ್ತದೆ. ಜೈನ ದೇವಾಲಯಗಳಿಗೆ ಬಸದಿ (=ವಸತಿ) ಎಂದು ಹೆಸರು ಬರಲು ಇದೂ ಒಂದು ಕಾರಣ.

ಈ ಬಸದಿಗಳನ್ನು ಆಂಧ್ರದ ಶಾಸನಗಳಲ್ಲಿ ಜಿನಾಲಯ, ಜಿನಗ್ರಹ, ಜಿನಚೈತ್ಯ, ಚೈತ್ಯಾಲಯ, ಜಿನಭವನ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ಬೌದ್ಧ ಧರ್ಮದ ಪ್ರಭಾವ ಕಡಿಮೆಯಾಗಿ. ಕ್ರಿ.ಶ. ೩-೪ನೇ ಶತಮಾನದ ನಂತರ ಜೈನಧರ್ಮ ಆಂಧ್ರದಲ್ಲಿ, ತನ್ನ ನೆಲೆಯನ್ನು ಭದ್ರಪಡಿಸಿಕೊಂಡಿತು. ಆದರೆ ಕಾಳಾಮುಖ-ಪಾಶುಪತ ಶೈವರ ಪ್ರಾಬಲ್ಯದಿಂದ ಜೈನರ ಪ್ರಭಾವ ಕಡಿಮೆಯಾಯಿತು. ಆದ್ದರಿಂದ, ಸಹಜವಾಗಿ ಬಸದಿಗಳ ಮಹತ್ವ ಕುಗ್ಗಿತು, ಜನರ ಅಸಡ್ಡೆ, ನಿಸರ್ಗದ ಪರಿಣಾಮಗಳು, ಅನ್ಯಮತೀಯರ ಆಕ್ರಮಣದಿಂದ ಬಸದಿಗಳು ನಾಶವಾದವು.

ವಿಜಯವಾಡದಲ್ಲಿದ್ದ 'ನಡುಂಬಿ ವಸತಿ'ಯೇ ಆಂಧ್ರದ ಅತ್ಯಂತ ಪ್ರಾಚೀನ ಬಸದಿ. ವೆಂಗಿ ಚಾಲುಕ್ಯ ದೊರೆ ಇಮ್ಮಡಿ ವಿಷ್ಣುವರ್ಧನನು ಹಾಕಿಸಿದ ಮುಸಿನಿಕೊಂಡ ತಾಮ್ರಪಟಗಳಲ್ಲಿ[೬] ಕುಬ್ಜ ವಿಷ್ಣುವರ್ಧನನ ರಾಣಿಯಾದ ಅಯ್ಯಣ ಮಹಾದೇವಿಯು 'ಬಿಡುವಡ'ದಲ್ಲಿದ್ದ (=ವಿಜಯವಾಡ) 'ನಡುಂಬಿ ವಸತಿ' ಜಿನಾಲಯಕ್ಕೆ ತೋಕನಾಟವಾಡಿ ವಿಷಯದ ಮುಸಿನಿಕೊಂಡ ಗ್ರಾಮವನ್ನು ದತ್ತಿಯಾಗಿ ಕೊಟ್ಟ ವಿಷಯವಿದೆ.

* ನಿವೃತ್ತ ಪ್ರಾಚಾರ್ಯ, ಆಚಾರ್ಯ ಪಾಠಶಾಲಾ ಕಲೆ/ವಿಜ್ಞಾನ ಕಾಲೇಜು, ಬೆಂಗಳೂರು - ೫೬೦ ೦೧೯.

ಕೌಜೂರಿ ಗಣ ಸಂಘಾನ್ವಯದ ಕಾಲಭದ್ರಾಚಾರ್ಯರು ಈ ದತ್ತಿಯನ್ನು ಪಡೆಯುತ್ತಾರೆ. ಕ್ರಿ.ಶ.೭೨೫ರ ಸುಮಾರಿನಲ್ಲಿ ಈ ನಡುಂಬಿ ವಸತಿಯ ನಿರ್ಮ್ಮಾಣವಾಗಿದ್ದಿರಬೇಕು. ಈಗ, ವಿಜಯವಾಡದಲ್ಲಿ ಯಾವ ಜೈನ ಸ್ಮಾರಕಗಳೂ ಕಾಣಿಸುವುದಿಲ್ಲ.

ಕಡಪ ಜಿಲ್ಲೆಯ ದಾನವುಲಪಾಡಿನಲ್ಲಿ ಒಂದು ಪಾರ್ಶ್ವನಾಥ ಬಸದಿ ಇತ್ತು. ರಾಷ್ಟ್ರಕೂಟರ ದೊರೆ ನಿತ್ಯವರ್ಷ ಮೂರನೆಯ ಇಂದ್ರನ ಕಾಲದ ಸಂಸ್ಕೃತ ಶಾಸನವೊಂದು, ದಾನವುಲಪಾಡಿನ ಉತ್ಖನನ ಸಮಯದಲ್ಲಿ ದೊರೆತ ಶಿಥಿಲ ಜಿನ ಬಸದಿಯ ಬಳಿ ದೊರೆತಿದೆ.[೭] ಈ ಪಾರ್ಶ್ವನಾಥ ಬಸದಿ ಕ್ರಿ.ಶ. ೯೧೪–೯೨೯ರ ಅವಧಿಯಲ್ಲಿ ರಚಿತವಾದದ್ದಿರಬಹುದು.

ಪಶ್ಚಿಮ ಗೋದಾವರಿ ಜಿಲ್ಲೆಯ ಅತ್ತಿಲಿನಂಡು ಪ್ರದೇಶದ ಕಲುಚಂಬರ್ರು ಗ್ರಾಮದಲ್ಲಿ ದೊರೆತ ಸಂಸ್ಕೃತ ತಾಮ್ರ ಶಾಸನವೊಂದರಲ್ಲಿ **ಸರ್ವಲೋಕಾಶ್ರಯ ಜಿನಭವನದ** ಉಲ್ಲೇಖ ವಿದೆ.[೮] ವಲಹಾರಿ ಗಣ, ಅಡ್ಡಕಲಿ ಗಚ್ಛದ, ಅರ್ಹನಂದಿ ಅಲ್ಲಿಯ ಆಚಾರ್ಯನಾಗಿದ್ದ. ವೆಂಗಿಚಾಲುಕ್ಯರಲ್ಲಿ ಎರಡನೆಯ ಭೀಮ ಮತ್ತು ಮೊದಲನೆಯ ಅಮ್ಮನಿಗೆ **ಸರ್ವಲೋಕಾಶ್ರಯ** ಎಂಬ ಬಿರುದಿತ್ತು. ಶಾಸನದ ಕಾಲದಲ್ಲಿ ದೊರೆಯಾಗಿದ್ದವನು. ಕ್ರಿ.ಶ.೯೪೫ ರಲ್ಲಿ ಪಟ್ಟಕ್ಕೆ ಬಂದ ಇಮ್ಮಡಿ ಅಮ್ಮರಾಜಿ ಆದ್ದರಿಂದ ಈ ಸರ್ವಲೋಕಾಶ್ರಯ ಜಿನಭವನ ಕ್ರಿ.ಶ.೧೦ನೆಯ ಶತಮಾನದ ಆರಂಭದಲ್ಲೇ ರಚಿತವಾಗಿರಬೇಕು.

ನೆಲ್ಲೂರು ಜಿಲ್ಲೆ ಓಂಗೋಲೆ ತಾಲ್ಲೂಕು ಮದನೂರಿನ ರಾಮಲಿಂಗೇಶ್ವರ ದೇವಾಲಯದಲ್ಲಿ ದೊರೆತ ಸಂಸ್ಕೃತ ಶಾಸನ **'ಕಟಕಾಭರಣ ಜಿನಾಲಯ'**ವನ್ನು ಹೆಸರಿಸುತ್ತದೆ.[೯] ವೆಂಗಿ ಚಾಲುಕ್ಯರ ಇಮ್ಮಡಿ ಅಮ್ಮರಾಜನ ಸೇನಾಧಿಪತಿ ಕಟಕರಾಜ ದುರ್ಗರಾಜನು ಈ ಜಿನಾಲಯವನ್ನು ಕಟ್ಟಿಸುತ್ತಾನೆ. ಈ ಜಿನಾಲಯದ ಗುರು ಶ್ರೀ ಮಾಂದರದೇವ, ನಂದಿಗಚ್ಛ, ಯಾಪನೀಯ ಸಂಘ, ಕೋಟಿ ಮಡುಪ ಗಣದ ಜಿನನಂದಿಯ ಶಿಷ್ಯ ದಿವಾಕರ; ದಿವಾಕರನ ಶಿಷ್ಯ ಮಾಂದರದೇವ. ಧರ್ಮಪುರಿ ಎಂಬ ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಈ ಜಿನಾಲಯವನ್ನು ಕಟ್ಟಲಾಯಿತು. ನೆಲ್ಲೂರು ಜಿಲ್ಲೆಯ ಧರ್ಮವರಮು ಗ್ರಾಮವೇ ಆ ಧರ್ಮಪುರಿ ಗ್ರಾಮ ಇರಬೇಕು. ಈಗ ಅಲ್ಲಿ ಬಸದಿ ಇಲ್ಲ.

ಪಂಪನ ತಮ್ಮ ಜಿನವಲ್ಲಭನು ಕಟ್ಟಿಸಿದ, ಕರೀಂನಗರ ಜಿಲ್ಲೆಯ 'ಗಂಗಾಧಾರಂ' ಅಥವಾ ಕುರ್ಕ್ಯಾಲದ ಬಳಿಯ **'ತ್ರಿಭುವನ ತಿಲಕ'** ಎಂಬ ಬಸದಿ ಈಗ ಕಾಣಿಸುವುದಿಲ್ಲ. "ವೃಷಭೇಶ್ವರ ಬಿಂಬಂ ಸನಾಥಂ ಎಂಬ ಅಲಂಪು ಒದವೆ ನಿಜ ದ್ವಿಜಾ ವಸಥ ಪರ್ವತಮಂ ಜಿನ ಚೈತ್ಯಮಾಗೆ" ಜಿನವಲ್ಲಭನು ಮಾಡಿಸುತ್ತಾನೆ.[೧೦] ಜಿನವಲ್ಲಭನ ಶಾಸನವಿರುವ ಸಿದ್ಧಶಿಲೆಯ ಮೇಲೆ ಚಕ್ರೇಶ್ವರಿಯ ಬಿಂಬವಿದೆ. ಆಕೆ, ವೃಷಭನಾಥನ ಯಕ್ಷಿ, ಆದ್ದರಿಂದ, ಶಾಸನದ ಸಮೀಪದಲ್ಲಿಯೇ ಹತ್ತನೆಯ ಶತಮಾನದ, ಈ ಬಸದಿ ಇದ್ದಿರಬೇಕು, ಶಾಸನದಲ್ಲಿ ಬಂದಿರುವ ನಿರೂಪಣೆಯ ಪ್ರಕಾರ ವೃಷಭ ಪರ್ವತ ಬೊಮ್ಮಲಮ್ಮನ ಗುಟ್ಟ ಜೈನರಿಗೆ ಪವಿತ್ರವಾದ ಯಾತ್ರಾಸ್ಥಳವಾಗಿತ್ತು.

ರಾಷ್ಟ್ರಕೂಟರ ವಂಶದ ಶಂಕರಗಂಡರಸನು, ನೇರಿಲ ಮತ್ತು ರೇವುಂಡಿ ಎಂಬಲ್ಲಿ ಬಸದಿಗಳನ್ನು ನಿರ್ಮಾಣ ಮಾಡಿಸಿದ್ದನೆಂದು ಶಾಸನವೊಂದರಲ್ಲಿ ಹೇಳಿದೆ.[೧೧] ಜಯಧೀರ ಎಂಬ ಬಿರುದಿದ್ದ ಶಂಕರಗಂಡರಸನು ಕೊಪ್ಪಳದಲ್ಲಿ ಒಂದು **ಜಯಧೀರ ಜಿನಾಲಯ**ವನ್ನು ಕಟ್ಟಿಸಿದ್ದಾನೆ. ನಲ್ಗೊಂಡ ಜಿಲ್ಲೆಯ ತುಮ್ಮಲಗುಡೆಂ ಬಳಿಯ ಇಂದ್ರಪಾಲಗುಟ್ಟದ ಬಳಿ ಒಂದು ಶಿಥಿಲ ಜೈನ ಬಸದಿ ಇದೆ. ಅಲ್ಲಿರುವ ಸ್ತಂಭಶಾಸನ ವೊಂದು 'ಜಯಧೀರ ಜಿನಾಲಯ'ವನ್ನೂ ಹೆಸರಿಸುತ್ತದೆ.[೧೨] ಇದು ಬಹುಶಃ ಶಂಕರಗಂಡರಸನು ಕಟ್ಟಿಸಿದ ಮತ್ತೊಂದು ಜಿನಾಲಯ ವಿರಬೇಕು.

ಇವು ಆಂಧ್ರದ ಪ್ರಾಚೀನ ಜೈನ ಬಸದಿಗಳು. ಕ್ರಿ.ಶ. ೧೧–೧೨ನೇ ಶತಮಾನದವರೆಗೂ; ಶಾಸನಗಳಲ್ಲಿ ಮಾತ್ರ ಕಾಣಿಸಿಕೊಳ್ಳುವ, [ಅಪರೂಪವಾಗಿ ಒಂದೆರಡು ಉಳಿದುಕೊಂಡಿವೆ] ಬಸದಿಗಳಲ್ಲಿ, ಮುಖ್ಯವಾದ ಕೆಲವನ್ನು ಮಾತ್ರ ಈ ಮುಂದಕ್ಕೆ ಗಮನಿಸಿದೆ.

### ೧. ರಟ್ಟ ಮಾರ್ತಾಂಡ ಜಿನಾಲಯ–ಕೊರಟ್ಲ

ಕರೀಂನಗರ ಜಿಲ್ಲೆಯ ಮೆಟ್ಲಪಲ್ಲಿ ತಾಲ್ಲೂಕು ಕೊರಟ್ಲದಲ್ಲಿರುವ ಹಳೆಯ ಕೋಟೆ ಗೋಡೆಗೆ ಸೇರಿ ಹೋಗಿರುವ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ತ್ರೈಲೋಕ್ಯಮಲ್ಲನು **ರಟ್ಟ ಮಾರ್ತಾಂಡ ಜಿನಾಲಯ**ದ ಆಚಾರ್ಯ ಶ್ರೀ ಪದ್ಮಣಂದಿ ಸಿದ್ಧಾಂತ ದೇವರಿಗೆ ದತ್ತಿಯನ್ನು ಕೊಟ್ಟ ವಿಷಯವಿದೆ.[೧೩] ಅದೇ ಶಾಸನದ ಎರಡನೆಯ ಮುಖದಲ್ಲಿರುವ 'ಲತ್ತಲೂರು ಪುರವರೇಶ್ವರ' ಎಂಬ ಉಲ್ಲೇಖ 'ರಟ್ಟ ಮಾರ್ತಾಂಡ ಜಿನಾಲಯ'ದ ರಚನೆ ೧೦ನೇ ಶತಮಾನದ್ದಿರಬೇಕೆಂದು ಅನುಮಾನಿಸುವಂತೆ ಮಾಡುತ್ತದೆ. ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನ ಸಹೋದರನಾದ ಅಮೋಘವರ್ಷ ಖೊಟ್ಟಿಗನಿಗೆ (ಕ್ರಿ.ಶ.೯೬೭–೯೭೨) **ರಟ್ಟ ಕಂದರ್ಪ, ರಾಜ ಮಾರ್ತಂಡ** ಎಂಬ ಬಿರುದುಗಳಿದ್ದವು. ಇವರಿಬ್ಬರಲ್ಲಿ ಯಾರ ನೆನಪಿನಲ್ಲಿ ಈ ರಟ್ಟ ಮಾರ್ತಾಂಡ ಜಿನಾಲಯದ ರಚನೆಯಾಯಿತೆಂದು ಹೇಳಲು ಸದ್ಯಕ್ಕೆ ಸಾಧ್ಯವಿಲ್ಲ.

### ೨. ಬುದ್ಧಸೇನ ಜಿನಾಲಯ–ವೈದ್ಯರತ್ನಾಕರ ಜಿನಾಲಯ

ವೈದ್ಯರತ್ನಾಕರ ಅಗ್ಗಳಯ್ಯನ ಬಿನ್ನಹದಂತೆ ಅಗ್ಗಳಯ್ಯ ಎಂಬುವವನು ಕೊಲ್ಲಿಪಾಕೆ ೭೦೦೦ ದ ಆಲೇರು ೪೦೦೦ದ ಬಳಿಯ ಮಚ್ಚಿನಪಳ್ಳಿಯಲ್ಲಿ ಮಾಡಿಸಿದ 'ಬುದ್ಧಸೇನ ಜಿನಾಲಯ'ದ ದತಿಯ ವಿಚಾರ ಕ್ರಿ.ಶ.೧೦೩೪ ಶಾಸನವೊಂದರಲ್ಲಿ ಬಂದಿದೆ.[೧೪] ನಲ್ಗೊಂಡ ಜಿಲ್ಲೆಯ ಈ ಸೈದಾಪುರಂ

ಶಾಸನದಲ್ಲಿ 'ವೈದ್ಯರತ್ನಾಕರ ಜಿನಾಲಯ, ಕಟ್ಟೆಯ ಬಸದಿಗಳು- ಎಂಬ ಹೆಸರಿನ ಉಲ್ಲೇಖಗಳಿವೆ [ಮಚ್ಚಿನಪಳ್ಳಿಯ ಸ್ಥಳ ಪರಿಶೀಲನೆಯಾಗಿಲ್ಲ] :

**೩. ಯುದ್ಧಮಲ್ಲ ಜಿನಾಲಯ-ಸನಿಗರಂ**

ಕರೀಂನಗರ ಜಿಲ್ಲೆಯ ಸನಿಗರಂನಲ್ಲಿರುವ ಭೀಮೇಶ್ವರ ದೇವಾಲಯದ ಬಳಿ ಇರುವ ಶಿಲೆಯೊಂದರ ಮೇಲೆ 'ಯುದ್ಧ ಮಲ್ಲಜಿನಾಲಯ'ದ ಉಲ್ಲೇಖವಿದೆ.[೧೫] ಇದನ್ನು ಕ್ರಿ.ಶ.೧೦೫೦ ರಲ್ಲಿ ಜೀರ್ಣೋದ್ಧಾರ ಮಾಡಿದರೆಂದು ಅಲ್ಲಿ ಹೇಳಿದೆ. ಕ್ರಿ.ಶ.೭೫೦ ರಿಂದ ೯೬೬ರ ವರೆಗೆ ವೇಮುಲವಾಡದ ಚಾಲುಕ್ಯರಲ್ಲಿ ಮೂರು ಜನ ಯುದ್ಧಮಲ್ಲರು ಬರುತ್ತಾರೆ. ಆದ್ದರಿಂದ ಈ ಬಸದಿಯ ನಿರ್ಮಾಣ ಯಾವಾಗ ನಡೆಯಿತೆಂದು ಹೇಳಲು ಕಷ್ಟವಾಗುತ್ತದೆ. ಕಲ್ಯಾಣದ ಚಾಲುಕ್ಯರ ಕಾಲಕ್ಕಾಗಲೇ (ಕ್ರಿ.ಶ.೧೧ನೇ ಶತಮಾನ) ಬಸದಿಗಳು ಶಿಥಿಲವಾಗುತ್ತಿದ್ದವು ಎಂಬುದು ಮಾತ್ರ ನಿಜ.

**೪. ವೀರಕಮಲ ಜಿನಾಲಯ-ಬಾಣಾಜಿಪೇಟ್**

ವಾರಂಗಲ್ ಜಿಲ್ಲೆಯ ನರಸಂಪೇಟ್ ತಾಲ್ಲೂಕಿನ ಬಾಣಾಜಿಪೇಟ್ ಶಾಸನದ 'ವೀರ ಕಮಲ ಜಿನಾಲಯ'ಕ್ಕೆ ಕ್ರಿ.ಶ. ೧೦೫೬ರಲ್ಲಿ ಕಾಕತೀಯ ಬೇತರಸನು ದತ್ತಿಯನ್ನು ನೀಡಿದ್ದಾನೆ.[೧೬]

**೫. ಚಟ್ಟ ಜಿನಾಲಯ – ಕೊನಕೊಂಡ್ಲ**

ಗುತ್ತಿ ತಾಲ್ಲೂಕಿನ ಕೊನಕೊಂಡ ಕುಂದಕುಂ ದಾಚಾರ್ಯರಿದ್ದ ಜೈನ ಕೇಂದ್ರವಾಗಿತ್ತು. ನಾಲಿಕಬ್ಬೆ ಎಂಬುವವಳು ತನ್ನ ಗಂಡನ ನೆನಪಿಗಾಗಿ, ಕೊಂಡಕುಂದೆಯ (ಛಾತ್ರ) ಶಿಷ್ಯ ತೀರ್ಥದಲ್ಲಿ 'ಚಟ್ಟ ಜಿನಾಲಯ' ವೆಂಬ ಬಸದಿಯನ್ನು ಪರೋಕ್ಷ ವಿನಯದಿಂದ ಮಾಡಿಸಿದಳು ಎಂದು ಕ್ರಿ.ಶ.೧೦೮೧ರ ಶಾಸನವೊಂದು ತಿಳಿಸುತ್ತದೆ.[೧೭] ಊರಿಗೆ ಅಂಟಿಕೊಂಡಿರುವ ಕೈಲಾಸಪ್ಪ ಎಂಬ ಬಂಡೆಯ ಗುಡ್ಡದ ಮೇಲಿದ್ದ ಈ ಶಾಸನವಾಗಲಿ, ಬಸದಿಯ ಅವಶೇಷಗಳಾಗಲೀ ಈಗ ಕಾಣುವುದಿಲ್ಲ. (ಗುಡ್ಡವನ್ನೇ ಈಗ ಕರಗಿಸಿದ್ದಾರೆ.)

**೬. ಕೀರ್ತಿ ವಿಳಾಸ ಶಾಂತಿ ಜಿನಾಲಯ – ಅಲ್ಲದರ್ಗ್**

ಕಲ್ಯಾಣದ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಮಂಡಳೇಶ್ವರನಾಗಿದ್ದ ಆಹವಮಲ್ಲ ಪೆರ್ಮಾನಡಿಗೆ 'ಶನಿವಾರ ಸಿದ್ಧಿ', 'ಕೀರ್ತಿವಿಳಾಸ' ಎಂಬ ಬಿರುದುಗಳಿದ್ದವು. ಇವನು ಬಹುಶಃ ತಾನು ಮಾಡಿಸಿದ 'ಕೀರ್ತಿ ವಿಳಾಸ ಶಾಂತಿ ಜಿನಾಲಯ'ದ ರಿಷಿಯರ ಸಮುದಾಯದ ಆಹಾರದಾನಕ್ಕೆ ಭೂಮಿಯನ್ನು ದತ್ತಿಯಾಗಿ ಕೊಟ್ಟ ವಿಷಯ ಮೇಡಕ್ ಜಿಲ್ಲೆಯ ಅಂದೋಲೆ ತಾಲ್ಲೂಕಿನ ಅಲ್ಲದರ್ಗ್‌ನ ಶಾಸನ ವೊಂದರಲ್ಲಿದೆ.[೧೮] ದಾನವನ್ನು ಆ ಜಿನಾಲಯದ ಆಚಾರ್ಯ ಕಮಳ ದೇವ ಸಿದ್ಧಾಂತಿ ಎಂಬುವವನು ಪಡೆಯುತ್ತಾನೆ. ಈ ಶಾಸನ, ಅಲ್ಲ ದರ್ಗ್‌ನ ಭೈರವ ಮಂಟಪದಲ್ಲಿರುವ ಕಂಬವೊಂದರ ಮೇಲಿದೆ. ಬಹುಮನಿ ಸುಲ್ತಾನರ ಕಾಲದಲ್ಲಿ (ಕ್ರಿ.ಶ.೧೫ನೇ ಶತಮಾನ) ಅಲ್ಲದರ್ಗ್, ಮುಸಲ್ಮಾನ ಸಂತನೊಬ್ಬನಿಗೆ ದತ್ತಿಯಾಗಿ ಬಂದಿತು; ಅದರ ಮೊದಲ ಹೆಸರು ಶ್ರೀವರ್ಧನ ಕೋಟ.

**೭. ಪಲ್ಲವ ಜಿನಾಲಯ-ಪೂಡೂರು**

ಮೆಹಬೂಬ್‌ನಗರ ಜಿಲ್ಲೆ ಗದ್ವಾಲ್ ತಾಲ್ಲೂಕಿನ ಪೂಡೂರಿನಲ್ಲಿದ್ದ ಚಂದ್ರಪ್ರಭ ಜಿನಾಲಯವನ್ನು ಶಾಸನಗಳಲ್ಲಿ 'ಪಲ್ಲವ ಜಿನಾಲಯ', 'ದ್ರವಿಳ ಸಂಘಾಶ್ರಯಮಪ್ಪ ಪಲ್ಲವ ಜಿನಾಲಯ' ಎಂದು ಕರೆದಿದೆ. ಈ ಜಿನಾಲಯವು 'ಸರ್ವತೋ ಭದ್ರ'ದಿಂದ ಕೂಡಿ ಏಕಶಾಲ, ದ್ವಿಶಾಲ, ತ್ರಿಶಾಲ, ಚತುಶ್ಶಾಲ, ಪಂಚಶಾಲಗಳಿಗಿಂತ ಎತ್ತರವಾಗಿತ್ತು; 'ಪುಂಡೂರೀಗಳ್ ಕೊಪಣಂ' ಎನಿಸಿತ್ತು. 'ರಿಷಿಯರಿನ್ ಅಪೂರ್ವ ಜಿನಭವನದಿಂ' ಎಂದು ಒಂದು ಶಾಸನದಲ್ಲಿ ಹೊಗಳಿದೆ.[೧೯]

ಪೂಡೂರಿನ ಚಾಲುಕ್ಯ ವಂಶದ ನಾಲ್ಕನೆಯ ಪಲ್ಲವ ಭೂಪ ಅಥವಾ ಹಲ್ಲವರಸನು ಈ ಚಂದ್ರಪ್ರಭ ಜಿನಾಲಯ ವನ್ನು ಕಟ್ಟಿಸಿದನು. ಪೂಡೂರು ಕೊಪಣದಂತೆ ಪ್ರಸಿದ್ಧವಾಗಿ ತ್ತೆಂದು ಹೇಳಿರುವುದರಿಂದ, ಅಲ್ಲಿ ಸಾಕಷ್ಟು ಬಸದಿಗಳಿದ್ದಿರ ಬೇಕು. ಪೂಡೂರಿನಲ್ಲಿ ಪಾರ್ಶ್ವನಾಥ ಬಸದಿಯೊಂದು ಇತ್ತೆಂದು ಶಾಸನಗಳು ಹೇಳುತ್ತವೆ. ಈಗಲೂ ಅಲ್ಲಿನ ಮಲ್ಲಿಕಾರ್ಜುನ ಗುಡಿಯ ಬಳಿ ಧ್ಯಾನಮುದ್ರೆಯಲ್ಲಿ ಕುಳಿತಿರುವ ಪಾರ್ಶ್ವನಾಥನ ಮೂರ್ತಿಗಳು (ಏಳು ಹೆಡೆಯ) ಇವೆ. ಶೈವರೊಡನೆ ನಡೆದ ಘರ್ಷಣೆಗಳಲ್ಲಿ ಪೂಡೂರಿನ ಬಸದಿಗಳು ನಾಶವಾಗಿರ ಬೇಕೆಂದು ವಿದ್ವಾಂಸರು ಊಹಿಸುತ್ತಾರೆ.

**೮. ಬಿಟ್ಟಿಕುಳ ತಿಳಕ ಜಿನಾಲಯ – ಬೈರಾನಿಪಲ್ಲಿ**

ವಾರಂಗಲ್ ಜಿಲ್ಲೆ, ಜನಗಾಂವ್ ತಾಲ್ಲೂಕು ಬೈರಾನಿ ಪಲ್ಲಿ ಗ್ರಾಮದ ಹೊರಭಾಗದಲ್ಲಿ ಶಿಥಿಲ ಜೈನ ಬಸದಿಯೊಂ ದಿದೆ. ಕ್ರಿ.ಶ.೧೧೧೦೮ರ ಶಾಸನವೊಂದರಲ್ಲಿ ಆ ಬಸದಿಯನ್ನು 'ಬಿಟ್ಟಿಕುಳ ತಿಳಕ ಜಿನಾಲಯ' ಎಂದು ಕರೆದಿದೆ. [೨೦] ಬೆಕ್ಕಲ್ಲಿನ ಬೀರಮಾರ್ಯ ಎಂಬುವವನು 'ಮಹತ್ ಪ್ರಸಾದಮಂ ಭಕ್ತಿಯಿಂ ಕಳಸಾರೋಹಣ ಮಾಗೆ ಮಾಡಿಸಿ ಜಿನಾಗಾರಮನ್ ಉದ್ದೇಶದೊಳ್ ವಿಳಸತ್ ತೋರಣ ಪೂರ್ವಕಂ ನಿರಿಸಿ. ಮಾನಸ್ತಂಭಮಂ ಕೀರ್ತಿಯಂ ತಳೆದಿಟ್ಟಂ' ಎಂಬ ಹೊಗಳಿಕೆ ಇದೆ. ಬೈರಾನಿಪಲ್ಲಿಯಲ್ಲಿರುವ ಮತ್ತೊಂದು ಶಾಸನದಲ್ಲಿ ಬಿಟ್ಟಿಕುಳ ತಿಲಕನಾದ ಬೆಕ್ಕಲ್ಲ ಪುರವರಾಧೀಶ್ವರ ಮಲ್ಲಿರೆಡ್ಡಿಯು ತಾನು ಪ್ರತಿಷ್ಠೆ ಮಾಡಿದ 'ಮಂದಿತ ದೇವರ' ಪೂಜೆಗೆ ದತ್ತಿಯನ್ನು ಕೊಟ್ಟ ವಿಷಯವಿದೆ.[೨೧] ಬಿಟ್ಟಿಕುಳ ತಿಳಕ ಜಿನಾಲಯದಲ್ಲಿದ್ದ ಈ 'ಮಂದಿತ ದೇವರ'ನ್ನು ಯಾವ ಜಿನಮೂರ್ತಿಯೊಂದಿಗೆ

ಸಮೀಕರಿಸಬೇಕೋ ತಿಳಿಯುವುದಿಲ್ಲ. ಅದೇ ಮಲ್ಲಿರೆಡ್ಡಿಯು ಬೆಕ್ಕಲ್ಲಿನಲ್ಲಿ ಜಿನಾಗಾರವೊಂದನ್ನು ತ್ರಿಕೂಟವಾಗಿ ಮಾಡಿಸಿದನೆಂದೂ, ಅಭಿನವ ಮಲ್ಲಿಕಾರ್ಜುನ ದೇವಾಲಯುವನ್ನು ಮಾಡಿಸಿದನೆಂದೂ ಶೈವ, ವೈಷ್ಣವ, ಜೈನ ಬೌದ್ಧರೆಲ್ಲ ಒಂದೇ ಎಂದೂ ತಿಳಿದಿದ್ದನೆಂದು ಬೆಕ್ಕಲ್ಲಿನಲ್ಲಿರುವ ಕ್ರಿ.ಶ. ೧೧೨೫ರ ಶಾಸನವೊಂದರಲ್ಲಿ ಹೇಳಿದೆ.[೨೨]

**೯. ಕದಲಲಾಯ ಬಸದಿ–ಹನುಮಕೊಂಡ**

ವಾರಂಗಲ್ ಜಿಲ್ಲೆಯ ಹನುಮಕೊಂಡದ ಬೆಟ್ಟದ ಮೇಲಿರುವ ಪದ್ಮಾಕ್ಷಿ ದೇವಾಲಯವೇ 'ಕದಲಲಾಯ ಬಸದಿ'. ಈ ದೇವಾಲಯದ ಗರ್ಭಗುಡಿಯ ಮೇಲಿರುವ ಶಿಲೆಯ ಮೇಲೆ ಪಾರ್ಶ್ವನಾಥ ತೀರ್ಥಂಕರನ ನಿಂತ ಭಂಗಿಯ ಶಿಲ್ಪವಿದೆ. ಅದರ ಎರಡೂ ಕಡೆಯಲ್ಲಿ ಧರಣೇಂದ್ರ ಮತ್ತು ಪದ್ಮಾವತಿಯರ ವಿಗ್ರಹಗಳಿವೆ.

ಈ ಕದಲಲಾಯ ಬಸದಿಯನ್ನು ಕಟ್ಟಿಸಿದವಳು ಕಾಕತೀಯ ದೊರೆ ಪ್ರೋಲನ ಮಂತ್ರಿ ಬೇತನ ಪತ್ನಿ ಮೈಲಮಾಂಬಿಕೆ. ಈ ದೇವಾಲಯದ ಮುಂದಿರುವ ಕಂಬದ ಮೇಲಿನ ಕ್ರಿ.ಶ.೧೧೧೭ರ ಶಾಸನದಲ್ಲಿ ಆಕೆಯನ್ನು 'ಜೈನಧರ್ಮ ಸಮಯೋಚಿತ ಶಾಸನದೇವಿ' ಎಂದು ಬಣ್ಣಿಸಲಾಗಿದೆ.[೨೩]

ದೊಡ್ಡ ಬಂಡೆಗಲ್ಲುಗಳಿಂದಾದ ಒಂದು ನಿಸರ್ಗ ಗುಹೆಯಾಗಿರುವ ಈ ಬಸದಿಯನ್ನು, ಕಾಕತೀಯ ರುದ್ರದೇವನ ಮಂತ್ರಿ ಗಂಗಾಧರ ಎಂಬುವವನು ನವೀಕರಿಸಿದನೆಂದು ಒಂದು ಶಾಸನ ತಿಳಿಸುತ್ತದೆ.[೨೪] ಈಗ ಬ್ರಾಹ್ಮಣರು ಪದ್ಮಾಕ್ಷಿಯನ್ನು 'ದುರ್ಗಿ' ಎಂದು ಕರೆದು ಪೂಜಿಸುತ್ತಿದ್ದಾರೆ.

**೧೦. ಚಂದ್ರಪ್ರಭ ದೇವರ ಬಸದಿ –**

ಅನಂತಪುರ ಜಿಲ್ಲೆ ಧರ್ಮಾವುರಂ ತಾಲ್ಲೂಕಿನ ತೊಗರಕುಂಟೆಯಲ್ಲಿ ಚಂದ್ರಪ್ರಭದೇವರ ಬಸದಿ ಇತ್ತು. ಅಲ್ಲಿ ಪದ್ಮಣಂದಿ ಸಿದ್ಧಾಂತ ದೇವರ ಶಿಷ್ಯರೊಬ್ಬರು ಜೈನ ಗುರುಗಳಾಗಿದ್ದರು. ಈ ಬಸದಿಯ ರಿಷಿಯರ ಆಹಾರದಾನಕ್ಕೆ ದತ್ತಿಯನ್ನು ನೀಡಿದ ವಿಷಯ ಕ್ರಿ.ಶ.೧೧–೧೨ನೇ ಶತಮಾನದ ಲಿಪಿಯಲ್ಲಿರುವ ಶಾಸನವೊಂದರಲ್ಲಿದೆ.[೨೫] ಬಸದಿ ಇದ್ದ ವಿಷಯವನ್ನು ಹೇಳುವ ಈ ಶಾಸನ ತೊಗರಕುಂಟ ಗ್ರಾಮದ ಉತ್ತರದಿಕ್ಕಿನ ಹೊಲವೊಂದರ ಶಿಲೆಯ ಮೇಲಿದೆ.

**೧೧. ಅಕ್ಕಬಸದಿ–ಕೊಲನುಪಾಕ**

ನಲ್ಗೊಂಡ ಜಿಲ್ಲೆಯ ಕೊಲನುಪಾಕ, ಒಂದು ಜೈನ ಕೇಂದ್ರವಾಗಿತ್ತು. ಇಲ್ಲಿನ ಆರು ಶಾಸನಗಳು ಜೈನರಿಗೆ ಸಂಬಂಧಿಸಿವೆ. ಇಲ್ಲಿದ್ದ ಅಂಬರ ತಿಳಕಸ್ಥಾನದಲ್ಲಿರುವ ಅಂಬಿಕಾದೇವಿಯ ದೇವಾಲಯಕ್ಕೆ ಅಕ್ಕ ಬಸದಿ ಎಂದು ಹೆಸರಿತ್ತು. ಜೈನ ಶಾಸನಪತಿ ಎಂದು ಹೊಗಳಿಕೆ ಪಡೆದಿರುವ ಪೆರ್ಗಡೆ ಕೇಶಿರಾಜ ಎಂಬುವವನು ಅಂಬಿಕಾದೇವಿಯ ದೇವಾಲಯದಲ್ಲಿ ಮಾನಸ್ತಂಭವನ್ನು ಮಾಡಿಸಿದ್ದಾನೆ. ಕೌಣೂರ್ಗಣದ, ಮೇಷ ಪಾಷಾಣ ಗಚ್ಛದ ಮೇಘಚಂದ್ರ ಮಲಧಾರಿ ವ್ರತೀಂದ್ರನ ಶಿಷ್ಯ ನಂದಿಸೂರಿ, ಪದ್ಮಪ್ರಭ ಶ್ರೀಮುನಿ–ಮಾಧವಸಿದ್ಧಾಂತ ದೇವ ಮೊದಲಾದವರು ಈ ಬಸದಿಯ ಜೈನ ಗುರು ಪರಂಪರೆಯವರು. 'ಹರಿಹರ ಜಿನ ಬುದ್ಧ ಪದಾಂಬುರುಹ ನಮತ್ ಭ್ರಮರನ್' ಆದ ಸ್ವಾಮಿದೇವ ಎಂಬುವವನು ಇಲ್ಲಿನ ಮಾನಸ್ತಂಭವೊಂದನ್ನು ಮಾಡಿಸಿದನೆಂದು ಕ್ರಿ.ಶ. ೧೧೨೫ರ ಶಾಸನವೊಂದರಲ್ಲಿ ಹೇಳಿದೆ.[೨೬]

**೧೨. ಕೊತ್ತ ಸಿವರದ ಬಸದಿ**

ಮಡಕಸಿರಾ ತಾಲ್ಲೂಕಿನ ಕೊತ್ತಸಿವರಂ ಗ್ರಾಮದ ಪ್ರವೇಶ ಭಾಗದಲ್ಲಿ ಒಂದು ಶಿಥಿಲ ಮಂಟಪವಿದೆ. ಕೌಣೂರ್ಗಣ, ಕೊಂಡಕುಂದಾನ್ವಯದ ಪುಷ್ಪನಂದಿ ಮಲಧಾರಿ ದೇವರ ಶಿಷ್ಯ ದಾವಣಂದಿ ಆಚಾರ್ಯನು ಈ ಬಸದಿಯನ್ನು ಕಟ್ಟಿದನು ಎಂದು, ಅಲ್ಲಿರುವ ಕಂಬಗಳ ಮೇಲಿರುವ ಒಂದು ಶಾಸನದಲ್ಲಿ ಹೇಳಿದೆ.[೨೭] ಅಲ್ಲಿರುವ ಮತ್ತೊಂದು ಶಾಸನದಲ್ಲಿ,[೨೮] ಇರುಂಗೋಳನ ರಾಣಿಯಾದ ಆಳ್ವದೇವಿಯು ಶಿಥಿಲವಾಗುತ್ತಿದ್ದ ಈ ಮಂಟಪವನ್ನು ರಕ್ಷಿಸಿದಳು ಎಂದಿರುವುದನ್ನು, ಆಕೆಯ ಕಾಲವಾದ ಕ್ರಿ.ಶ.ಸುಮಾರು ೧೧೪೦ಕ್ಕೆ ಬಸದಿ ಇದ್ದಿತೆಂದು ಹೇಳಬಹುದು.

**೧೩. ಬದ್ದಿ ಜಿನಾಲಯ–ಉಜ್ಜಿಲಿ**

ಕಲ್ಕೆಳಗುನಾಡು–೩೦೦ರ ರಾಜಧಾನಿ ಉಜ್ಜಿವೊಳಲಿನ (ಉಜ್ಜಿಲಿ, ಮೆಹಬೂಬ್‌ನಗರ ತಾಲ್ಲೂಕ್) ಕೋಟೆಯೊಳಗೆ ಇದ್ದ ಬಸದಿಯೇ 'ಬದ್ದಿ ಜಿನಾಲಯ', ಅಲ್ಲಿ 'ಚೆನ್ನಪಾರ್ಶ್ವ ದೇವರ ಮೂರ್ತಿ ಇದ್ದಿತು. ದ್ರಾವಿಳ ಸಂಘದ ಸೇನಗಣದ ಕೌರೂರ್‌ಗಚ್ಛದ ಶ್ರೀ ವಾದಿರಾಳಾನ್ವಯದ ವಾದಿರಾಜ ದೇವರ ಶಿಷ್ಯರಪ್ಪ ಇಂದ್ರಸೇನ ಪಂಡಿತರು ಆ ಬಸದಿಯ ಆಚಾರ್ಯರಾಗಿದ್ದರು. ಆ ಬಸದಿಯ 'ರಿಶಿಯರ' 'ಅಜ್ಜಯರ' ಆಹಾರದಾನಕ್ಕೆ ದತಿ ಬಂದದ್ದನ್ನು ಕ್ರಿ.ಶ.೧೧೮೭ರ ಒಂದು ಶಾಸನದಲ್ಲಿ ಹೇಳಿದೆ.[೨೯]

**೧೪. ಕಮ್ಮರ ಚೇಡಿನ ಜಿನಾಲಯ**

ಕರ್ನೂಲು ಜಿಲ್ಲೆಯ ಆಲೂರ್ ತಾಲ್ಲೂಕಿನ ಕಮ್ಮರ ಚೇಡಿನಲ್ಲಿ ವರ್ಧಮಾನ ತೀರ್ಥಂಕರನ ಸುಂದರವಾದ ಮೂರ್ತಿ ಇರುವ ಬಸದಿ ಈಗಲೂ ಇದೆ. ಬಸದಿಗೆ ಪೂಜೆ ಸಲ್ಲಿಸುತ್ತಿರುವ ವೀರಶೈವರು ತಮ್ಮನ್ನು 'ಜೈನೇರು' ಎಂದು ಕರೆದುಕೊಳ್ಳುತ್ತಾರೆ. ಕ್ರಿ.ಶ.೧೨ನೇ ಶತಮಾನದ ಲಿಪಿಯಲ್ಲಿರುವ ಶಾಸನವೊಂದು, ಕೊಂಡಕುಂದಾನ್ವಯ ದೇಸಿಯ ಗಣ ಪುಸ್ತಕ ಗಚ್ಛದ ಪದ್ಮಪ್ರಭ ಮಲಧಾರಿ ಸ್ವಾಮಿಗಳ ಶಿಷ್ಯ ರಾಯಸೆಟ್ಟಿಯ

ಪತ್ನಿ ಚಂದವ್ವೆ ಇಲ್ಲಿನ ಮೂರ್ತಿಯನ್ನು ಪುನರ್ ಪ್ರತಿಷ್ಠೆ ಮಾಡಿಸಿದಳೆಂದು ಹೇಳುತ್ತದೆ.[೩೦] ಬಸದಿ, ಊರ ಹೊರಗಡೆ ಇದ್ದು, ಜನರ ಅಸಡ್ಡೆಗೆ ಗುರಿಯಾಗಿದೆ.

**೧೫. ಚೆನ್ನ ಪಾರ್ಶ್ವನಾಥ ದೇವರ ಜಿನಗೃಹ–ಗಂಗಾಪುರ**

ಮೆಹಬೂಬ್‌ನಗರ ಜಿಲ್ಲೆ, ಗಂಗಾಪುರಂನಲ್ಲಿ ತುಂಬೋಳದ ಮಹಾವಡ್ಡ ವ್ಯವಹಾರಿ ಮಣಿಗಾರ ಕಾಳಿ ಸೆಟ್ಟಿಯು ಜಿನಗೃಹವೊಂದನ್ನು ಮಾಡಿಸಿ, ಚೆನ್ನಪಾರ್ಶ್ವನಾಥ ದೇವರ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿ ದತ್ತಿಯನ್ನು ನೀಡಿದನೆಂದು ಕ್ರಿ.ಶ.೧೨ನೇ ಶತಮಾನದ ಲಿಪಿಯಲ್ಲಿರುವ ಶಾಸನವೊಂದು ತಿಳಿಸುತ್ತದೆ.[೩೧] ಗಂಗಾಪುರದ ಬೆನಕಯ್ಯನ ಗುಡಿಯ ಬದಿಯಲ್ಲಿರುವ ಶಿಲಾ ಫಲಕದ ಮೇಲೆ ಈ ಶಾಸನವಿದೆ. ಗಂಗಾಪುರದಲ್ಲಿ ಇನ್ನೂ ಕೆಲವು ಬಸದಿಗಳಿದ್ದವೆಂದು ತೋರುತ್ತದೆ. ಗಂಗಾಪುರದ ಬಸದಿಯೊಂದರಲ್ಲಿ, ಮೂಲಸಂಘ, ಕೌಣೂರ್ಗಣ, ಮೇಷಪಾರಣ ಗಚ್ಛದ ಮೇಘಚಂದ್ರಭಟ್ಟಾರರ ವ್ರತೀಶರು ಆಚಾರ್ಯರಾಗಿದ್ದರು.[೩೨]

**೧೬. ಚಂದ್ರನಾಥ–ಪಾರ್ಶ್ವನಾಥ ಬಸದಿ–ತಾಡಪತ್ರಿ**

ಅನಂತಪುರ ಜಿಲ್ಲೆ ತಾಡಪತ್ರಿಯ ರಾಮೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಶಿಲಾಶಾಸನದಲ್ಲಿ (ಕ್ರಿ.ಶ.೧೨೦೮) ತಾಟಪಾಜಿಪುರದ ಚಂದ್ರನಾಥ ಪಾರ್ಶ್ವನಾಥ ಬಸದಿಗಳ ಸ್ಥಾನದ ಆಚಾರ್ಯ ಪರಂಪರೆಯನ್ನು ಪದ್ಯರೂಪದಲ್ಲಿ ಸುಂದರವಾಗಿ ಬಣ್ಣಿಸಲಾಗಿದೆ.[೩೩] ಈ ಬಸದಿಗಳ ಸ್ಥಾನದ ಆಚಾರ್ಯರಲ್ಲಿ ಮೂಲಸಂಘ, ದೇಸಿಗಣ, ಕೊಂಡಕುಂದಾನ್ವಯ ಪುಸ್ತಕಗಚ್ಛದ 'ಇಂಗಳೇಶ್ವರ ಬಳಿ' ಪ್ರಸಿದ್ಧವಾಗಿತ್ತು. ಅದರಲ್ಲಿ 'ಅಕಳಂಕ ಚರಿತರ್ ಅರುಹತ್ ಸಕಳಾಗಮ ವೇದಿಗಳ್' ಆಗಿದ್ದ ಬಾಹುಬಲಿ ವ್ರತೀಂದ್ರ, ಅವರ ಶಿಷ್ಯರು ಭಾನುಕೀರ್ತಿ ಭಟ್ಟಾರಕ; ಅವರ ಶಿಷ್ಯ ಅಖಿಳಾಗಮಾರ್ಥ ಪರಿಶುದ್ಧ ಮಹಾಮತಿಯಾದ ಮೇಘಚಂದ್ರದೇವ–ಇವರು ಪ್ರಸಿದ್ಧರಾಗಿದ್ದರು. ಈಗ ತಾಡಪತ್ರಿಯಲ್ಲಿ ಜೈನಾವಶೇಷಗಳು ಕಾಣುವುದಿಲ್ಲ.

**೧೭. ಬ್ರಹ್ಮಜಿನಾಲಯ – ಅಮರಾಪುರ**

ಮಡಕಸಿರಾ ತಾಲ್ಲೂಕಿನ ಅಮರಾಪುರದ ಕೆರೆಯ ಮೇಲುಭಾಗದಲ್ಲಿರುವ ಬಸದಿಯನ್ನು ತೈಲಂಗೆರೆಯ ಬಸದಿಯೆಂದೂ, ಬ್ರಹ್ಮಜಿನಾಲಯವೆಂದೂ ಕರೆಯುತ್ತಿದ್ದರು. ಅಲ್ಲಿ ಪ್ರಸನ್ನ ಪಾರ್ಶ್ವದೇವರ ಮೂರ್ತಿ ಇತ್ತೆಂದು ಶಾಸನವೊಂದರಲ್ಲಿ ಹೇಳಿದೆ.[೩೪] ಮೂಲಸಂಘ, ದೇಸಿಯ ಗಣ, ಕೊಂಡ ಕುಂದಾನ್ವಯದ ಪುಸ್ತಕ ಗಚ್ಛಕ್ಕೆ ಸೇರಿದ ಇಂಗಳೇಶ್ವರ ಬಳಿಯ ತ್ರಿಭುವನ ಕೀರ್ತಿರಾವುಳರ ಶಿಷ್ಯ–ಬಾಳೇಂದು ಮಲಧಾರಿ ದೇವರು. ಇವರ ಶಿಷ್ಯ ಮಲ್ಲಿಸೆಟ್ಟಿಯು ಈ ಬಸದಿಯನ್ನು ಮಾಡಿಸಿದ. ಈ ಬಸದಿಯ ವೃತ್ತಿಯನ್ನು ನಡೆಸುತ್ತಿದ್ದ ಪೂಜಾರಿಯ ಹೆಸರು ಚಲ್ಲಪಿಳ್ಳೆ ದೇವ, ಇವನು ತಮಿಳುನಾಡಿನ ಮಧುರೆಯ ಉತ್ತರಕ್ಕಿದ್ದ ಭುವಲೋಕನಾಥ ವಿಷಯದ ಉಪವಿಭಾಗವಾದ ನಲ್ಲೂರಿನವನು, ತಮಿಳುನಾಡಿನ ಜೈನ ಬ್ರಾಹ್ಮಣನೊಬ್ಬನನ್ನು ಪೂಜಾರಿಯಾಗಿ ಕರೆಸಿಕೊಂಡುದಕ್ಕೆ ಕಾರಣ ತಿಳಿಯುವುದಿಲ್ಲ. ಈ ಬಸದಿಗೆ ನೀಡಿದ ಎರಡು ಸಾವಿರ ಅಡಕೆ ಮರಗಳ ಉತ್ಪತ್ತಿಯನ್ನು "ಬಸದಿಯ ಕಲ್ಲು ಕೆಲಸಕ್ಕೆ, ಉಪಾನದಿಂದ ಸ್ತೂಪಿಯವರೆಗೆ, ಮಹಾಮಂಟಪ, ಭದ್ರ, ಲಕ್ಷ್ಮೀಮಂಟಪ, ಗೋಪುರ, ಪರಿಸೂತ್ರ, ವಂದನಮಾಲೆ, ಮಾನಸ್ತಂಭ, ಮಕರ ತೋರಣ, ಸಂಪೂರ್ಣ ವಾಹನಗಳಿಗೇ ಬಳಸಬೇಕು" ಎಂದು ಈಗ ಬಸದಿಯ ಗರ್ಭಗುಡಿಯ ಭಾಗದಲ್ಲಿ ನಿಂತಿರುವ ಶಾಸನ ತಿಳಿಸುತ್ತದೆ.[೩೫] ಶಾಸನದ ತಳ ಭಾಗದಲ್ಲಿ ಉಳಿದುಕೊಂಡಿರುವ ಪಾಣಿಪೀಠದಲ್ಲಿ ಸಿಂಹ ಲಾಂಛನವಿದೆ. ಶಾಸನದಲ್ಲಿ ಹೇಳಿರುವ ವಾಸ್ತುಶಿಲ್ಪ ಪರಿಭಾಷೆಯ ಯಾವ ಭಾಗವೂ ಈಗ ಉಳಿದಿಲ್ಲ. "ನಿಡುಗಲ್ಲು ಚೋಳರ ಕಾಲದಲ್ಲಿ ಪ್ರಜೆಗಳ ಆದರ ಪ್ರಭುವಿನ ರಕ್ಷಣೆಯನ್ನು ಪಡೆದಿದ್ದ ಜೈನಮತ, ಬರಬರುತ್ತಾ ವೀರಶೈವರ ಕೋಪಾಗ್ನಿಗೆ ತುತ್ತಾಯಿತು. ಜಿನಾಲಯ, ಜಿನಮೂರ್ತಿಗಳನ್ನು ಕಳೆದುಕೊಂಡಿತು"[೩೬] ಎಂದು ಡಾ॥ ಘಂಟಾ ಜವಾಹರ್‌ಲಾಲರು ಹೇಳಿದುದರಲ್ಲಿ ಸತ್ಯಾಂಶವಿದೆಯೆಂದು ತೋರುತ್ತದೆ.

**೧೮. ಪೆದ್ದ ತುಂಬುಳದ ಜಿನಾಲಯ**

ಕರ್ನೂಲು ಜಿಲ್ಲೆ, ಆದೋನಿ ತಾಲ್ಲೂಕಿನ ಪೆದ್ದ ತುಂಬುಳದಲ್ಲಿ ಪಾರ್ಶ್ವನಾಥನ ವಿಗ್ರಹವೊಂದಿದೆ. ಆ ವಿಗ್ರಹದ ಪೀಠದ ಮೇಲಿರುವ ಶಾಸನದಲ್ಲಿ 'ಮೂಲಸಂಘ, ದೇಸಿಗಣದ ಪುಸ್ತಕ ಗಚ್ಛ, ಕೊಂಡಕುಂದಾನ್ವಯದ ಚಂದ್ರಕೀರ್ತಿ ಭಟ್ಟಾರಕರ ಶಿಷ್ಯ ಬೆಂಜಿ ಸೆಟ್ಟಿಯ ಪತ್ನಿ ಬೋಜಿಕಬ್ಬೆಯು ಮಹಾಪುರುಷ ಎಂಬುವವನು ಮಾಡಿದ ಗೊಮ್ಮಟ ಪಾರ್ಶ್ವಜಿನ ಮೂರ್ತಿಯನ್ನು ಸ್ಥಾಪಿಸಿದಳೆಂದು ಹೇಳಿದೆ.[೩೭] ಬಸದಿ ಇದ್ದ ಸ್ಥಳ ತಿಳಿಯುವುದಿಲ್ಲ. ಶಾಸನ ಕ್ರಿ.ಶ.೧೨ನೇ ಶತಮಾನದ ಲಿಪಿಯಲ್ಲಿದೆ.

**೧೯. ಅಗಳಿಯ ಬಸದಿ**

ಮಡಕಸಿರಾ ತಾಲ್ಲೂಕು ಅಗಳಿಯಲ್ಲಿ ಆದಿನಾಥ ಸ್ವಾಮಿಯ ಬಸದಿ ಇದೆ. ಕರಿಯ ಕಲ್ಲಿನ ಆದಿನಾಥನಿಗೆ ಇಲ್ಲಿ ನಿತ್ಯವೂ ಪೂಜೆ ನಡೆಯುತ್ತದೆ. ಕ್ರಿ.ಶ.೧೦–೧೧ನೇ ಶತಮಾನಕ್ಕೆ ಸೇರುವ ಈ ಬಸದಿಯ ಮೇಲ್ಛಾವಣಿಯ ಜೀರ್ಣೋದ್ಧಾರವಾಗಿದೆ. ಸಂಬಂಧಿಸಿದ ಶಾಸನಗಳು ಯಾವುವೂ ದೊರೆತಿಲ್ಲ.

**೨೦. ಪೆನುಗೊಂಡೆಯ ಪಾರ್ಶ್ವನಾಥ ದೇವಾಲಯ ಮತ್ತು ಬಸ್ತಿ ಗುಡಿ**

ಪೆನುಗೊಂಡೆಯ ರಾಜ ಬೀದಿಯಲ್ಲಿರುವ ಪಾರ್ಶ್ವನಾಥ ದೇವಾಲಯದ ಪಚ್ಚೆ ಪಾರ್ಶ್ವನಾಥ ಸ್ವಾಮಿಯ ವಿಗ್ರಹ ಅತ್ಯಂತ ಸುಂದರವಾದುದು. ಈ ದೇವಾಲಯದ ಬಗೆಗೆ ಯಾವ ಶಾಸನಗಳೂ ಇಲ್ಲ. ದೇವಾಲಯದ ಆವರಣದಲ್ಲಿರುವ ನಿಸಿದಿ

ಕಲ್ಲೊಂದರಲ್ಲಿ ವಿದ್ವಜ್ಜನ ಚಕ್ರವರ್ತಿ ಧರ್ಮಭೂಷಣ ಭಟ್ಟಾರಕ ನನ್ನು ಆತನ ಶಿಷ್ಯೆಯಾದ ನಾಗಾಯಿಯನ್ನು ಹೇಳಿದೆ. [೩೮]

ಊರೊಳಗೆ, ಕೋಟೆಗೆ ಸಮೀಪವಾಗಿರುವ, ಜನ 'ಬಸ್ತಿಗುಡಿ' ಎಂದು ಕರೆಯುವ ಬಸದಿಯಲ್ಲಿ ಅಜಿತನಾಥ ತೀರ್ಥಂಕರನ ಮೂರ್ತಿ ಇದೆ. ಇಲ್ಲಿರುವ ಶಾಸನಗಳು ಪ್ರಕಟ ವಾಗಿಲ್ಲ. ಇಲ್ಲಿದ್ದ ಶಾಸನಗಳನ್ನು ಈಗ ಚೆನ್ನೈ ಮ್ಯೂಸಿಯಂ ನಲ್ಲಿಟ್ಟಿದ್ದಾರೆ.

**೨೧. ಶುಭಧಾಮ ಜಿನಾಲಯ-ವೇಮುಲವಾಡ**

ವೇಮುಲವಾಡದ ರಾಜೇಶ್ವರ ದೇವಾಲಯದಲ್ಲಿಟ್ಟಿರುವ ಜಿನಮೂರ್ತಿಯೊಂದರ ಪೀಠದ ಮೇಲಿರುವ ಶಾಸನವೊಂದು 'ಶುಭಧಾಮ ಜಿನಾಲಯ'ವನ್ನು ಹೇಳುತ್ತದೆ. [೩೯]

ಸಪಾದಲಕ್ಷದ ದೊರೆ, ಚಾಲುಕ್ಯ ವಂಶದ ದೊರೆ ಬದ್ದೆಗನು ಗೌಡ ಸಂಘದ ಸೋಮದೇವಸೂರಿಗಾಗಿ 'ಶುಭಧಾಮ ಜಿನಾಲಯ'ವನ್ನು ಕಟ್ಟಿಸುತ್ತಾನೆ. ಇಮ್ಮಡಿ ಅರಿಕೇಸರಿಯ ಪರಭಣಿ ತಾಮ್ರಪಟದಲ್ಲಿಯೂ ಈ ಶುಭಧಾಮ ಜಿನಾಲಯದ ಉಲ್ಲೇಖವಿದೆ. ಈ ಶಾಸನದ ಸೋಮದೇವ ಸೂರಿ, ಕ್ರಿ.ಶ.೧೦ನೇ ಶತಮಾನದ ಸಂಸ್ಕೃತ ಗ್ರಂಥ 'ಯಶಸ್ತಿಲಕ ಚಂಪೂ' ಅನ್ನು ರಚಿಸಿದ್ದಾನೆ.

**೨೨. ಕುಂಥುನಾಥ ಚೈತ್ಯಾಲಯ-ಕರ್ನೂಲು**

ಹಂಪೆಯ ವಸ್ತು ಸಂಗ್ರಹಾಲಯದಲ್ಲಿ ಮೂರ್ತಿ ಇಲ್ಲದ ಪೀಠವೊಂದರ ಮೇಲೆ ವಿಜಯನಗರ ಕಾಲದ ಶಾಸನವಿದೆ. ಅದರಲ್ಲಿ ಮೂಲಸಂಘ, ಬಲಾತ್ಕಾರಗಣ, ಸರಸ್ವತಿಗಚ್ಛದ ಧರ್ಮ ಭೂಷಣ ಭಟ್ಟಾರಕಾಚಾರ್ಯರ ಶಿಷ್ಯನಾದ, ಬೈಚಯ ದಂಡನಾಥನ ಮಗನಾದ ಇಮ್ಮಡಿ ಬುಕ್ಕ ಮಂತ್ರಿಯು ಕಂದನವ್ರೋಲಿನಲ್ಲಿ (=ಕರ್ನೂಲು) ಒಂದು ಚೈತ್ಯಾಲಯವನ್ನು ಮಾಡಿಸಿ, ಕುಂಥು ತೀರ್ಥಂಕರನ ವಿಗ್ರಹವನ್ನು ಸ್ಥಾಪಿಸಿದ ನೆಂದು ಹೇಳಿದೆ.[೪೦] ಕುಂಥು ತೀರ್ಥಂಕರನ ವಿಗ್ರಹಗಳೇ ಅಪರೂಪ ಕರ್ನೂಲಿನಲ್ಲಿ ಯಾವುದೇ ಚೈತ್ಯಾಲಯಗಳು ಕಾಣಿಸುವುದಿಲ್ಲ.

**೨೩. ಚಿಪ್ಪಗಿರಿಯ ಬಸದಿ-ಕರ್ನೂಲು ಜಿಲ್ಲೆ**

ಚಿಪ್ಪಗಿರಿಯಲ್ಲಿ ಸುಂದರವಾದ ಕೆತ್ತನೆಗಳುಳ್ಳ ಬಸದಿಯೊಂದಿದೆ. ರಚನೆಯ ಕಾಲ ತಿಳಿದಿಲ್ಲ.

**೨೪. ಕಂಬದೂರಿನ ಬಸದಿ : ಅನಂತಪುರದ ಜಿಲ್ಲೆ**

ಕಲ್ಯಾಣದುರ್ಗ ತಾಲ್ಲೂಕು ಕಂಬದೂರಿನ ಹೊಲದ ಮಧ್ಯೆ ಇರುವ ಶಿಥಿಲ ಜೈನ ಬಸದಿಯ ಬಗೆಗೆ ಹೆಚ್ಚು ತಿಳಿದಿಲ್ಲ. ಕಂಬದೂರಿನ ಜೈನ ಬಸದಿಯೊಂದು ಈಗ ಮಲ್ಲಿಕಾರ್ಜುನ ಗುಡಿಯಾಗಿದೆ.

**೨೫.** ಗುಂಟೂರು ಜಿಲ್ಲೆ, ಸಾತ್ತೇನಪಲ್ಲಿ ತಾಲ್ಲೂಕು ಮುನುಗುಂಡದ ಕ್ರಿ.ಶ.೧೧ನೇ ಶತಮಾನದ **'ಪೃಥ್ವೀತಿಲಕ ಜಿನಾಲಯ'**; ವಿಶಾಖಪಟ್ಟಣ ಜಿಲ್ಲೆ, ವಿಜಯನಗರಂ ತಾಲ್ಲೂಕು ಭೋಗಾಪುರಂನ ಕ್ರಿ.ಶ.೧೧೭೮ರ **'ರಾಜರಾಜಜಿನಾಲಯ'**; ಕೃಷ್ಣ ಜಿಲ್ಲೆ, ಚೆಬ್ರೋಲಿನ **'ಅನಂತ ಜಿನನ ಬಸದಿ'**; ಕರ್ನೂಲು ಜಿಲ್ಲೆ, ಆಲೂರ್ ತಾಲ್ಲೂಕು ಹಳಹರವಿಯಲ್ಲಿ ಚಂಡಿಯಬ್ಬೆ ಕಟ್ಟಿಸಿದ **'ನಂದವಾರದ ಬಸದಿ'** (ಕ್ರಿ.ಶ. ೯೩೩) ಹೈದರಾಬಾದ್ ಬಳಿಯ ಪಟಾನ್‌ಚೆರು (ಪೊಟ್ಟಳಕೆರೆ)ವಿನಲ್ಲಿದ್ದ ಬಸದಿಗಳು- ಇವು ಯಾವುವೂ ಈಗ ಉಳಿದಿಲ್ಲ.

**೨೬.** ನಲ್ಗೊಂಡ ಜಿಲ್ಲೆ, ಕೊಲನುಪಾಕದಲ್ಲಿ ಕ್ರಿ.ಶ. ೧೬ನೇ ಶತಮಾನಕ್ಕೆ ಸೇರಿದ ಶ್ವೇತಾಂಬರ ಸಂಪ್ರದಾಯದ **'ಮಾಣಿಕ್ಯ ಸ್ವಾಮಿ ದೇವಾಲಯ'**ವಿದೆ. ಹಳೆಯ ಬಸದಿಯೊಂದಕ್ಕೆ, ಹೊಸ ರೂಪವನ್ನು ಕೊಟ್ಟಂತೆ ತೋರುತ್ತದೆ. ಕ್ರಿ.ಶ.೧೭೧೧ರಲ್ಲಿ ಈ ಬಸದಿಯ ಪುನರ್ ನಿರ್ಮಾಣವಾಯಿತು. ತಪಾಗಚ್ಛದ ಗುರುಗಳು ಮಾಣಿಕ್ಯ ಸ್ವಾಮಿಯನ್ನು ಪ್ರತಿಷ್ಠೆ ಮಾಡುತ್ತಾರೆ. ಔರಂಗಜೇಬನ ಮಗ ಬಹಾದೂರ್ ಷಾನ ಸುಬೇದಾರ ನಾಗಿದ್ದ 'ನವಾಬ್ ಮಹಮದ್ ಯೂಸುಫ್ ಖಾನ್ ಬಹದ್ದೂರ್' ಇದಕ್ಕೆ ಸಹಾಯ ಮಾಡುತ್ತಾನೆ.[೪೧]

ಕರ್ನಾಟಕದಲ್ಲಿ ಶೈವರ ಪ್ರಭಾವದಿಂದ, 'ಎಕ್ಕೋಟಿ ಜಿನಾಲಯ'ಗಳ ರಚನೆಗಳಾದವು. ಜೈನರಿಗೆ ಅಲ್ಪಸ್ವಲ್ಪ ರಕ್ಷಣೆ ದೊರೆಯಿತು. ಘರ್ಷಣೆಗಳ ನಡುವೆಯೂ ಜೈನರು ಉಳಿದು ಕೊಂಡರು. ಆದರೆ, ಆಂಧ್ರಪ್ರದೇಶದಲ್ಲಿ ಜೈನರು ತಮ್ಮ ಉಳಿವಿ ಗಾಗಿ ಬೌದ್ಧ, ಶೈವ, ವೈಷ್ಣವ, ಮುಸ್ಲಿಮರ ಜೊತೆ ಸಂಘರ್ಷಕ್ಕೆ ಇಳಿಯಬೇಕಾಯಿತೆಂದು ತೋರುತ್ತದೆ. ವಿಜಯನಗರದ ಪತನಾನಂತರ, ಜೈನ ಧರ್ಮ, ಸಂಪೂರ್ಣ ಅನಾಥವಾಯಿತು. ಬಸದಿಗಳನ್ನು ನೋಡಿಕೊಳ್ಳುವವರೇ ಇಲ್ಲವಾಯಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. J.E.S I, XVI, PP. 71-84.
೨. P.B. Desai, *Jainism in South India,* PP 8-12.
೩. E.C.VIII., Sh 4.
೪. E.C.VIII., Shimoga., A.D.1122.
೫. S.I.I. IX, No. 288.
೬ ARSIE, 1916-17 No A 9.
೭. ARASI 1905-06. PP 120-127.
೮. E.I. VIII, P. 177.
೯. E.I. IX, No.6, P.47.
೧೦. **ಭಾರತಿ,** ಮಾರ್ಚ್ ೧೯೮೬, ಪು. ೩೭–೩೮.
೧೧. ARIE, 1961-62, No. B. 93, 1067 A.D.
೧೨. ARIE, 1973-74, No.B.19.
೧೩. IAP. Kr No.17.
೧೪. G. Jawaharalal., *Jainism in Andhra*-Inscription No 40.
೧೫. IAP. Kr. No. 14.
೧೬. APGRE, 1965, No B 260, 1056 A.D.
೧೭. S.I.I. IX No 150, 1081 A.D.
೧೮. MPKCA, Ins. B. 1084 A.D.
೧೯. E.I. XL, PT II 1973, 1087 A.D.
೨೦. I.A.P. Wr No.18. 1108.A.D.
೨೧. ಅದೇ. Wr No. 19.
೨೨. ಅದೇ. Wr No 20. 1125. A.D.
೨೩. Wr No. 22, 1117 A.D.
೨೪. JAHRS XXXVI-1. PP 58-62.
೨೫. SII IX No 221.
೨೬ APGAS III, Ng 43, 1125 A.D.
೨೭. ARSIE, 1917 No C 21.
೨೮. ಅದೇ. No C 20.
೨೯. APGAS III, Mn 60,61,1186. A.D.
೩೦. ARSIE, 1915, No.B.560.
೩೧. ARIE 1961-62, No.B. 39.
೩೨. E.A. IV No. 7.
೩೩. SII IV No 798, 1208 A.D.
೩೪. **ಭಾರತಿ,** 1979, 1278 A.D.
೩೫. ಅದೇ.
೩೬ ಅದೇ.
೩೭. ARIE 1956-57, No B 44.
೩೮. SII VII No. 576.
೩೯. IAP. Kr No. 4.
೪೦. ARSIE 1935-36, No B 337, 1395 A.D. (?)
೪೧. ARIE 1961-62 No. B. 101, 1711 A.D.




## ಡಾ. ಕೆ.ಆರ್. ಗಣೇಶ ಅವರ ಸ್ವವಿವರ

ಹೆಸರು : ಕೈದಾಳ ರಾಮಸ್ವಾಮಿ ಗಣೇಶ

ತಂದೆ : ದಿ॥ ಕೈದಾಳ ರಾಮಸ್ವಾಮಿ

ತಾಯಿ : ಶ್ರೀಮತಿ ಲಲಿತಮ್ಮ

ಹುಟ್ಟಿದ ತಾರೀಖು : ೧೯-೧೨-೧೯೪೬.

ಹುಟ್ಟಿದ ಸ್ಥಳ : ಬೆಂಗಳೂರು

ಪ್ರಾಥಮಿಕ ಶಾಲೆಯ ಅಭ್ಯಾಸ : ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಮಾಗಡಿರಸ್ತೆ, ಬೆಂಗಳೂರು-೨೩.

ಪ್ರೌಢಶಾಲೆಯ ಅಭ್ಯಾಸ : ಆರ್ಯ ವಿದ್ಯಾಶಾಲಾ ಪ್ರೌಢಶಾಲೆ, ಗಾಂಧೀನಗರ, ಬೆಂಗಳೂರು-೫೬೦ ೦೦೯.

ಕಾಲೇಜು ಅಭ್ಯಾಸ :
೧. **ಬಿ.ಎಸ್‌ಸಿ. :** ಶ್ರೀ ರೇಣುಕಾಚಾರ್ಯ ಕಾಲೇಜು, ಆನಂದರಾವ್ ವೃತ್ತ, ಬೆಂಗಳೂರು ೫೬೦ ೦೦೯.
೨. **ಬಿ.ಎಡ್. :** ಎಂ.ಇ.ಎಸ್. ಟೀಚರ್ಸ್ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.
೩. **ಎಂ.ಎ. :** ಸೆಂಟ್ರಲ್ ಕಾಲೇಜು ಬೆಂಗಳೂರು.

ವಿದ್ಯಾಭ್ಯಾಸ ವಿವರಗಳು :
ಅ) ಬೆಂಗಳೂರು ವಿಶ್ವವಿದ್ಯಾಲಯ- ಬೆಂಗಳೂರು
೧. **ಬಿ.ಎಸ್‌ಸಿ.** ಪ್ರಮುಖ ವಿಷಯಗಳು :
-ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರ -೧೯೬೬.
೨. ಬಿ.ಎಡ್., ಪ್ರಮುಖ ವಿಷಯಗಳು :
- ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ-೧೯೬೭.
೩. ಎಂ.ಎ., - ಕನ್ನಡ (ವಿಶೇಷ ವಿಷಯಗಳು : ಶಾಸನಶಾಸ್ತ್ರ ಮತ್ತು ಕರ್ನಾಟಕದ ಸಾಂಸ್ಕೃತಿಕ ಇತಿಹಾಸ -೧೯೭೦.)
ಆ) ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ - ಅನಂತಪುರಂ-ಆಂಧ್ರಪ್ರದೇಶ.
೧. ಪಿಎಚ್.ಡಿ.-ವಿಷಯ : ಆಂಧ್ರಪ್ರದೇಶದ ಕನ್ನಡ ಶಾಸನಗಳು ಒಂದು ಅಧ್ಯಯನ - ೧೯೯೪.
ಮಾರ್ಗದರ್ಶಕರು : **ಡಾ॥ ಆರ್. ಶೇಷಶಾಸ್ತ್ರಿ** ಮುಖ್ಯಸ್ಥರು, ತೆಲುಗು-ತೌಲನಿಕ ಅಧ್ಯಯನ ಕೇಂದ್ರ ಆಂಧ್ರಭಾರತಿ, ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಅನಂತಪುರಂ, ಆಂಧ್ರಪ್ರದೇಶ.
ಇ) ಇಂಗ್ಲಿಷ್ ಬೆರಳಚ್ಚು- (ಜ್ಯೂನಿಯರ್) - ೧೯೬೭.
- ಮೈಸೂರು ಸೆಕೆಂಡರಿ ಎಜುಕೇಷನ್ ಎಕ್ಸಾಮಿನೇಷನ್ ಬೋರ್ಡ್.

ಕೆಲಸ/ಹುದ್ದೆಗಳು :
೧. ಅಧ್ಯಾಪಕ- ವಿಜ್ಞಾನ/ಗಣಿತ ವಿಷಯಗಳು
ದಿ ಓರಿಯಂಟರ್ ಹೈಸ್ಕೂಲ್ ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು. ೧೯೬೭-೧೯೬೮.
೨. ಕನ್ನಡ ಉಪನ್ಯಾಸಕ, ಆಚಾರ್ಯ ಪಾಠಶಾಲಾ ಕಾಲೇಜು ೧-೭-೧೯೭೦. ರಿಂದ ೩೧-೧೨-೨೦೦೪, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯.

೩. **ಪ್ರಿನ್ಸಿಪಾಲ್,** ಆಚಾರ್ಯ ಪಾಠಶಾಲಾ ವಾಣಿಜ್ಯ ಕಾಲೇಜು, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯. ೨೦೦೩.

೪. **ಅತಿಥಿ ಉಪನ್ಯಾಸಕ**- ವಿಷಯಗಳು: ಶಾಸನಶಾಸ್ತ್ರ, ಗ್ರಂಥ ಸಂಪಾದನೆ.

ಎ) ಸ್ನಾತಕೋತ್ತರ ಕೇಂದ್ರ, ಕೋಲಾರ, ಬೆಂಗಳೂರು ವಿಶ್ವವಿದ್ಯಾಲಯ, ೧೯೯೬, ೧೯೯೭.

ಬಿ) ಸ್ನಾತಕೋತ್ತರ ಕೇಂದ್ರ, ಶ್ರೀ ಕುವೆಂಪು ಕಾಲೇಜು, ಕೆಂಗಲ್, ಚನ್ನಪಟ್ಟಣ ೨೦೦೦-೨೦೦೧.

೫. **ಅತಿಥಿ ಉಪನ್ಯಾಸಕ**-ವಿಷಯಗಳು : ಗ್ರಂಥ ಸಂಪಾದನೆ, ಛಂದಸ್ಸು

ಎ) ದೂರ ಶಿಕ್ಷಣ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೮, ೧೯೯೯, ೨೦೦೦, ೨೦೦೨.

೬ **ಶಾಸನ ಶಾಸ್ತ್ರ-ಗೌರವ ಉಪನ್ಯಾಸಕ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮. ೧೯೭೮ ರಿಂದ

೭ ಹಳಗನ್ನಡ ಕಾವ್ಯ ಶಿಬಿರಗಳು- ಸಂಚಾಲಕ, ಉಪನ್ಯಾಸಕ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ನರಸಿಂಹರಾಜ ಕಾಲೋನಿ, ಬೆಂಗಳೂರು-೧೯. ೨೦೦೧, ೨೦೦೨.

೮. ಮೌಲ್ಯಮಾಪನ ಕೇಂದ್ರದ ನಿರ್ದೇಶಕ / ವ್ಯವಸ್ಥಾಪಕ, ಬೆಂಗಳೂರು ವಿಶ್ವವಿದ್ಯಾಲಯ ಅಕ್ಟೋಬರ್ ೨೦೦೨ರ ಪರೀಕ್ಷೆಗಳು ಬೆಂಗಳೂರು.

೯. ಅಧ್ಯಯನ ಮಂಡಳಿ-ಸದಸ್ಯ ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಸ್ನಾತಕ ಅಧ್ಯಯನ ಮಂಡಳಿ, ೨೦೦೦, ೨೦೦೧, ೨೦೦೨.

೧೦. ಅಧ್ಯಯನ ಮಂಡಳಿ-ಸದಸ್ಯ ಶಾಸನಶಾಸ್ತ್ರ ವಿಭಾಗ ಕನ್ನಡ ವಿಶ್ವವಿದ್ಯಾಲಯ-ಹಂಪಿ ೨೦೦೨, ೨೦೦೩.

ಪ್ರಕಟವಾದ ಗ್ರಂಥಗಳು :

೧. **ಶ್ರೀ ರಾಮಕಥೆಯ ಸಹಜ ಚಿತ್ರ** ; ತಂದೆ ದಿ. ಕೈದಾಳ ರಾಮಸ್ವಾಮಿ ಅವರೊಂದಿಗೆ, ೧೯೭೩.

೨. **ಸರ್ವಜ್ಞವಚನ ಸಂಗ್ರಹ,** ಶ್ರೀ ವೆಂಕಟರಾವ್ ಅವರೊಂದಿಗೆ ಸಹ ಸಂಪಾದನೆ -ಪ್ರ.: ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು-೧೯, ೧೯೮೦.

೩. **ಆಂಧ್ರಪ್ರದೇಶದ ಕನ್ನಡ ಶಾಸನಗಳು-ಒಂದು ಅಧ್ಯಯನ.** -ಪ್ರ.: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೧೯೯೬.

೪. ಛಂದಸ್ಸು-ಪ್ರ.: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮, ೧೯೯೮.

೫. **ಆಂಧ್ರಪ್ರದೇಶ ಕನ್ನಡ ಶಾಸನಗಳು**-ಎರಡು ಸಂಪುಟಗಳು (ಡಾ॥ ಆರ್. ಶೇಷಶಾಸ್ತ್ರಿ ಅವರೊಂದಿಗೆ ಸಂಪಾದನೆ) -ಪ್ರ.: ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧.

೬ **ಮುದ್ದಣ್ಣ ಪ್ರಶಸ್ತಿ ಗ್ರಂಥ** ಶ್ರೀ ಟಿ. ಕೇಶವ ಭಟ್ಟರೊಂದಿಗೆ ಸಂಪಾದನೆ -ಪ್ರ.: ಸಾಹಿತ್ಯ ಕುಟೀರ, ಬೆಂಗಳೂರು, ೧೯೭೪.

೭ **ಸಿರಿಭೂವಲಯ**-(ಗ್ರಂಥ\ಹಾಗೂ ಲೇಖನಗಳ ಸಂಗ್ರಹ) ಹಿರಿಯ ವಿದ್ವಾಂಸರೊಂದಿಗೆ ಸಂಪಾದನೆ. ಪ್ರ.: ಪುಸ್ತಕ ಲೋಕ, ಬೆಂಗಳೂರು ೨೦೦೨.

ಪ್ರಬಂಧ ಪ್ರಸ್ತುತಪಡಿಸಿದ
ವಿಶೇಷ ಗೋಷ್ಠಿಗಳು :

೧. ಪ್ರಾಕೃತ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
– 'ಜೈನ ಅಧ್ಯಯನ ಗೋಷ್ಠಿ'
ವಿಷಯ : ಆಂಧ್ರಪ್ರದೇಶದ ಜೈನ ದೇವಾಲಯಗಳು, ೧೯೯೫.

೨. ಆಂಧ್ರ ಭಾರತಿ, ಶ್ರೀ ಕೃಷ್ಣದೇವರಾಯ, ವಿಶ್ವವಿದ್ಯಾಲಯ, ಅನಂತಪುರಂ, ಆಂಧ್ರಪ್ರದೇಶ.
–'ಕನ್ನಡ ತೆಲುಗು ಭಾಷಾ ಗೋಷ್ಠಿ'
ವಿಷಯ : ಕನ್ನಡ – ತೆಲುಗು ದ್ವಿಭಾಷಾ ಶಾಸನಗಳು, ೧೯೯೬.

೩. ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು ಜಿಲ್ಲೆ, ಮಧುಗಿರಿ – 'ಜಿಲ್ಲಾ ಸಾಹಿತ್ಯ ಸಮ್ಮೇಳನ'.
ವಿಷಯ : ಪ್ರಾಚೀನ ಕರ್ನಾಟಕದ ಪ್ರಮುಖ ಮಹಿಳೆಯರು (ವಿಶೇಷವಾಗಿ ತುಮಕೂರು ಜಿಲ್ಲೆಯ ಶಾಸನಗಳು) ೧೯೯೭.

೪. ಕನ್ನಡ ಸ್ನಾತಕೋತ್ತರ ಕೇಂದ್ರದ ಆಶ್ರಯ, ಕೋಲಾರ.
–'ಕೆ.ವಿ. ಆಯ್ಯರ್–ವ್ಯಕ್ತಿ–ಕೃತಿ ಗೋಷ್ಠಿ'
ವಿಷಯ : ಕೆ.ವಿ.ಅಯ್ಯರ್ ಅವರ 'ಕಥೆಗಳು' ೧೯೯೭.

೫. ಜೈನ್ ಕಾಲೇಜು, ಮೂಡುಬಿದರೆ, ದಕ್ಷಿಣ ಕನ್ನಡ ಜಿಲ್ಲೆ –'ತುಳು ನಾಡು–ಗೋಷ್ಠಿ'.
ವಿಷಯ : ತುಳುನಾಡಿನ ಜೈನ ಶಾಸನಗಳಲ್ಲಿ ಸಾಹಿತ್ಯ ಗುಣ ೨೦೦೨.

ಪ್ರಕಟವಾದ ಪ್ರಮುಖ
ಲೇಖನಗಳು :

೧. ಮುದ್ದಣನ 'ಶ್ರೀ ರಾಮ ಪಟ್ಟಾಭಿಷೇಕ'
– ಮುದ್ದಣ ಪ್ರಶಸ್ತಿ ಗ್ರಂಥ ೧೯೭೪.

೨. ಭಾಷಾಂತರಿತ ಕೃತಿಗಳು.
– ಕೌಸ್ತುಭ–ಕನ್ನಡ ಸಾಹಿತ್ಯ ಪರಿಷತ್ತು. ವಜ್ರ ಮಹೋತ್ಸವ ಸಂಸ್ಮರಣ ಸಂಪುಟ ೧೯೭೭.

೩. ಸಿರಿಭೂವಲಯ–ಒಂದು ಅವಲೋಕನ –'ಹರತಿ ಸಿರಿ' ೧೯೮೯.

೪. ಆಂಧ್ರಪ್ರದೇಶದ ಕಾಳಾಮುಖರು. –'ಡಾ॥ ಚಿದಾನಂದಮೂರ್ತಿ ಗೌರವ ಗ್ರಂಥ' ೧೯೯೪.

೫. ಕೆಲವು ಕನ್ನಡ ಶಾಸನಗಳು ಪಾಠಗಳ ಪರಿಶೀಲನೆ.–'ಕನಕ ಸಿರಿ' ೧೯೯೯.

**ವಿಶೇಷ ಆಸಕ್ತಿಗಳು** :

೧. ೧೯೭೦ರ ದಶಕದ ಹಿಂದಿನ ಕನ್ನಡ–ಹಿಂದಿ ಚಲನಚಿತ್ರ ಗೀತೆಗಳು.
೨. ಛಂದಸ್ಸು. ೩. ಗ್ರಂಥ ಸಂಪಾದನೆ. ೪. ಶಾಸನಗಳ ಸಂಪಾದನೆ–ಅಧ್ಯಯನ.
೫. ಇಂಗ್ಲಿಷ್ ಬೆರಳಚ್ಚು. ೬. ಹಳಗನ್ನಡ ಕಾವ್ಯ–ಅಭ್ಯಾಸ ಕಾರ್ಯಕ್ರಮಗಳು.
೭ ವ್ಯಾಕರಣ–ಭಾಷಾ ಬೋಧನೆ.
೮. ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳಲ್ಲಿ ಸಹಕಾರ.
೯. ಕರ್ನಾಟಕ ಸಂಗೀತ. ೧೦. ಪುಸ್ತಕ ಸಂಗ್ರಹ.
೧೧. ಭಾರತದ ಪ್ರಸಿದ್ಧ ಚಲನಚಿತ್ರಗಳ ವಿಸಿಡಿ/ಡಿವಿಡಿಗಳ ಸಂಗ್ರಹ ಯೋಜನೆ.
೧೨. ಪ್ರೌಢ ಶಾಲಾ ಅಧ್ಯಾಪಕರ ಕನ್ನಡ ಅಧ್ಯಯನ/ಬೋಧನಾ ಸಮಸ್ಯೆಗಳು ಬಗೆಗೆ ಭಾಷಣಗಳು.



ಪ್ರೊ. ಲಕ್ಷ್ಮಣ್ ತೆಲಗಾವಿ*

# ಚಿತ್ರದುರ್ಗ ಪರಿಸರದ ಕುಳಿಭರಿತ ಭೀಮನಗುಂಡು : ಪುರಾತಾತ್ವಿಕ ಅಧ್ಯಯನ

ಕರ್ನಾಟಕದಲ್ಲಿ 'ಭೀಮ' ಸಂಬಂಧಿ ಎಡೆಗಳಿಗೆ ಕೊರತೆಯಿಲ್ಲ. ಈವರೆಗೆ ನಲವತ್ತಕ್ಕೂ ಹೆಚ್ಚು ಇಂಥಾ ಎಡೆಗಳನ್ನು ದಾಖಲಿಸಲಾಗಿದೆ.[೧] ಇವೆಲ್ಲವೂ ಭೀಮನ ಹೆಸರಿನಿಂದಲೇ ಗುರುತಿಸಲ್ಪಡುತ್ತವೆ. ಇವುಗಳಲ್ಲಿ ಪುರ-ಹಳ್ಳಿ-ಹಾಳು-ಬೀಡುಗಳೇ ಅಲ್ಲದೆ, ಸಮುದ್ರ(ಸಂದ್ರ), ಸಾಗರ, ಒಡ್ಡು, ಕಟ್ಟೆ, ಕೆರೆ, ಕುಪ್ಪೆ, ಹುಂಡಿ, ಗಡ, ಏರಿ, ಕೇರಿ, ಕೋಣೆ, ಕೊಳ, ಗುಂಡು-ಬಂಡೆ-ಕಲ್ಲು ಇತ್ಯಾದಿಯೂ ಸೇರಿವೆ. ಇವು ಮುಖ್ಯವಾಗಿ ಸ್ಥಳ ಹಾಗೂ ನಿಸರ್ಗವಾಚಿಗಳು. ಕೃತಕ ಜಲಾಶಯಗಳಿಗೂ ಭೀಮನ ಹೆಸರನ್ನು ಆರೋಪಿಸಲಾಗಿದೆ. ಭೀಮೇಶ್ವರ ದೇವಾಲಯಗಳೂ ಅಲ್ಲಲ್ಲಿ ಕಂಡುಬರುತ್ತವೆ. ಮಹಾಭಾರತದ ಪಂಚಪಾಂಡವರ ಪೈಕಿ ಭೀಮಸೇನನೂ ಒಬ್ಬನಾಗಿದ್ದು, ಇವನ ಹೆಸರೇ ಈ ಎಲ್ಲ ಎಡೆಗಳು ಹಾಗೂ ಸ್ಮಾರಕಗಳಿಗೆ ಇಡಲಾಗಿದೆಯೆಂಬುದಕ್ಕೆ ಯಾವ ಅಧಿಕೃತ ಸಮರ್ಥನೆಯೂ ಇರುವಂತಿಲ್ಲ. ಆದರೆ ಮಹಾಭಾರತದ ಸಂಬಂಧ ಹೊಂದಿರುವುವೆಂದು ತಿಳಿಯಲಾದ ಅಥವಾ ಕುಂತಿದೇವಿ ಮತ್ತು ಆಕೆಯ ಐವರು ಮಕ್ಕಳನ್ನು ಸ್ಮರಣೆಗೆ ತರುವ ಎಡೆಗಳು ನಾಡಿನಾದ್ಯಂತ ಇರುವುದನ್ನು ನೋಡಬಹುದು. ಅಂತೆಯೇ, ರಾಮಾಯಣ ಸಂದರ್ಭಕ್ಕೂ ಈ ಉದಾಹರಣೆ ಅನ್ವಯವಾಗುತ್ತದೆಯಷ್ಟೆ. ಸಾಮಾನ್ಯವಾಗಿ, ಬೃಹತ್ತಾದ ಅಥವಾ ವಿಶಾಲವಾದ ಬಂಡೆ, ಗವಿ, ಕೆರೆ, ನದಿಗಳನ್ನು ಮಹಾಬಲಶಾಲಿ ಭೀಮನೊಡನೆ ಸಮೀಕರಿಸಿ ಗುರುತಿಸುವುದು ಜನಪದರ ಜಾಯಮಾನ. ಉದಾಹರಣೆಗೆ, ಮಧ್ಯಪ್ರದೇಶದ ಪಶ್ಚಿಮ ವಿಂಧ್ಯದ ಸಾಲಿನಲ್ಲಿ ಬರುವ, ಅಂದರೆ ಭೂಪಾಲಿನ ದಕ್ಷಿಣಕ್ಕಿರುವ ಭೀಮ್‌ಬೆಟ್ಕಾ ಎನ್ನುವುದು **'ಭೀಮ್ ಬೈಟ್ಕಾ'** ಎಂಬುದರ ಆಡುರೂಪ. ಅಂದರೆ, ಜನರು ಭಾವಿಸುವಂತೆ, ಭೀಮನು ಕುಳಿತಿದ್ದ ಪ್ರದೇಶ ಇದು. ಆದರೆ ಮಹಾಭಾರತದಲ್ಲಾಗಲಿ, ಇತರ ಯಾವುದೇ ಪುರಾಣದಲ್ಲಾಗಲಿ ಭೀಮನು ಈ ಪ್ರದೇಶಕ್ಕೆ ಬಂದಿದ್ದ ಉಲ್ಲೇಖವಿಲ್ಲವೆನ್ನಲಾಗುತ್ತದೆ.[೨] ಕರ್ನಾಟಕದಲ್ಲಿರುವ ಭೀಮಸಂಬಂಧಿ ಎಡೆಗಳಿಗೂ ಇದೇ ತತ್ವವನ್ನು ಅನ್ವಯಿಸ ಬಹುದು.



ಭೀಮನಗುಂಡು ಸಮೂಹ

ಚಿತ್ರದುರ್ಗ ಪರಿಸರದಲ್ಲಿಯೂ ಮಹಾಭಾರತ ಕಾಲದ ಸನ್ನಿವೇಶಗಳನ್ನು ನೆನಪಿಗೆ ತರುವ ಕೆಲವು ಎಡೆಗಳಿವೆ. ಭೀಮ-ಹಿಡಿಂಬೆಯರ ಸಮಾಗಮ ನಡೆದುದು ಚಿತ್ರದುರ್ಗ ಬೆಟ್ಟದಲ್ಲಿಯೇ ಎಂಬ ಐತಿಹ್ಯ ಇಂದಿಗೂ ಚಾಲ್ತಿಯಲ್ಲಿದೆ. ಬೆಟ್ಟದ ಪಶ್ಚಿಮಕ್ಕಿರುವ ಅಂಕಲಿಮಠದಲ್ಲಿ ಪಾಂಡವರು ಪ್ರತಿಷ್ಠಾಪಿಸಿದರೆಂದು ನಂಬಲಾದ ಐದು ಲಿಂಗಗಳುಳ್ಳ ಪಂಚಲಿಂಗೇಶ್ವರ ಗುಹಾಲಯ,[೩] ಪಾಂಡವರ ನೆನಪು ಕೊಡುವ ಗುತ್ತಿ, ಮಟ್ಟಿ, ಗವಿಗಳು; ಇದೇ ತಾಲ್ಲೂಕಿನ ಪಂಥರಹಳ್ಳಿ ಗಂಜಿಗಟ್ಟೆ ಗುಡ್ಡ ಪರಿಸರದಲ್ಲಿರುವ ಧರ್ಮೇಶ್ವರ ದೇವಾಲಯ, ಭೀಮಸಮುದ್ರ ಹೆಸರಿನ ಊರು ಹಾಗೂ ಕೆರೆ; ಚಳ್ಳಕೆರೆ ತಾಲ್ಲೂಕಿನ ಭೀಮಗೊಂಡನಹಳ್ಳಿ, ಭೀಮನಕೆರೆ ಹಾಗೂ ಹಿರಿಯೂರು ತಾಲ್ಲೂಕಿನ ಧರ್ಮಪುರ ಮುಖ್ಯವಾದವು. ಹಿರಿಯೂರಿನಿಂದ ಧರ್ಮಪುರಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೭ ಕಿ.ಮೀ. ಅಂತರದಲ್ಲಿ, ಅಂದರೆ ಬಬ್ಬೂರು ಮತ್ತು ಹೊಸಯಳನಡು ಗ್ರಾಮಗಳ ನಡುವೆ, ಹಾದಿಯ ಬದಿಯಲ್ಲಿರುವ ಬಂಡೆಯೊಂದನ್ನು **ಭೀಮನ ಬಂಡೆ** ಎಂದು

* ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ -೫೮೩೨೭೬



ಪೂರ್ವದಿಕ್ಕಿನ ತಳಗುಂಡಿನ ಒಳಬದಿಯ ಕುಳಿ ಆಕೃತಿಗಳು

ಕರೆಯುವುದು ರೂಢಿಯಲ್ಲಿದೆ. ಈ ಬಂಡೆಯಲ್ಲಿ ಆಳವಾಗಿ ಮೂಡಿರುವ ನೈಸರ್ಗಿಕ ಕುಳಿಯೊಂದಿದ್ದು, ಅದನ್ನು ಈ ಪ್ರದೇಶದಲ್ಲಿ ಕೃಷಿ ಚಟುವಟಿಕೆಯಲ್ಲಿ ತೊಡಗಿದ್ದ ಪಾಂಡವರ ಪೈಕಿ ಭೀಮಸೇನನು ನಿತ್ಯ ಉಳುಮೆಯ ನಂತರ ತನ್ನ ನೇಗಿಲನ್ನು ಇಡುತ್ತಿದ್ದ ಜಾಗವೆಂದು ತೋರಿಸುವುದುಂಟು.

ಚಿತ್ರದುರ್ಗ ಪರಿಸರದ ಕುಳಿಭರಿತ ಭೀಮನಗುಂಡು ಸಹಾ ತನ್ನ ಹಿನ್ನೆಲೆಯಲ್ಲಿ ಭೀಮಸಂಬಂಧಿ ಐತಿಹ್ಯವನ್ನು ಹೊಂದಿದೆ. ಈ ಗುಂಡುಗುಚ್ಛ ಅಥವಾ ಗುಂಡುಗಳ ಸಮೂಹ ಕಂಡುಬರುವುದು ಚಿತ್ರದುರ್ಗದಿಂದ ಪಶ್ಚಿಮಕ್ಕೆ ನಾಲ್ಕು ಕಿಲೊಮೀಟರ್ ಅಂತರದಲ್ಲಿ; ಭೀಮಸಮುದ್ರಕ್ಕೆ ಸಾಗುವ ಬಸ್‌ಮಾರ್ಗದ ಬಲಪಕ್ಕದಲ್ಲಿ; ಈಗ ಚಿತ್ರದುರ್ಗ ನಗರ ವಲಯದಲ್ಲಿ ಚೋಳಗುಡ್ಡ/ಚೋಳಗಟ್ಟದ ಹಿಂಬದಿಯ ಪರಿಸರದಲ್ಲಿ, ಅಂದರೆ ಜಾಲಿಕಟ್ಟೆ ಮತ್ತು ಸಿದ್ದಾಪುರಗಳ ಮಧ್ಯೆ ಈ ಗುಂಡುಗಳ ಸಮೂಹ ನೆಲೆಸಿದೆ. ಇದು ಜಾಲಿಕಟ್ಟೆ ಗ್ರಾಮಕ್ಕೆ ಸೇರಿದ್ದು, ಗ್ರಾಮದ ಉತ್ತರಕ್ಕೆ ಅರ್ಧ ಕಿಲೊಮೀಟರ್ ಅಂತರದಲ್ಲಿದೆ. ಜಾಲಿಕಟ್ಟೆ ಗ್ರಾಮವಿರುವುದು ಸಿದ್ದಾಪುರ ಮಂಡಲ ಪಂಚಾಯಿತಿ ವ್ಯಾಪ್ತಿಯಲ್ಲಿ.

ಭೀಮನಗುಂಡುಗುಚ್ಛವು ಗ್ರಾನೈಟ್ ಶಿಲಾವರ್ಗಕ್ಕೆ (Clusters of granite boulders) ಸೇರಿದ್ದು, ಇದರ ಸುತ್ತಮುತ್ತಲ ಪ್ರದೇಶದಲ್ಲಿ ಅಲ್ಲಲ್ಲಿ ಚದುರಿದಂತೆ ಇಂಥದೇ ಬಂಡೆಗಳ ಸಮೂಹ ಕಂಡುಬರುತ್ತದೆ. ಭೀಮನಗುಂಡನ್ನು ಕುಟ್ಟಿದರೆ 'ಠಣ್' ಎಂದು ಲೋಹದ ಸದ್ದು ಹೊರಡುವುದಾಗಿ ಸ್ಥಳೀಯರು ಭಾವಿಸುತ್ತಾರೆ. ಈ ಗುಚ್ಛವೊಂದು ನಿಸರ್ಗದ ವಿಶಿಷ್ಟ ರಚನೆ. ತಲಾಧಾರವಾಗಿರುವ ಎರಡು ಗುಂಡುಗಳ ಮೇಲೆ ನಿಂತಿರುವ ಅಂಡಾಕಾರದ ಬೃಹತ್ ಗುಂಡೇ ಭೀಮನಗುಂಡು. ಈ ಮುಖ್ಯ ಗುಂಡಿನ ಉದ್ದ (ಉತ್ತರ-ದಕ್ಷಿಣ) ೫ ಮೀಟರ್; ಅಗಲ (ಪೂರ್ವ-ಪಶ್ಚಿಮ) ೩ ಮೀಟರ್ ಹಾಗೂ ಎತ್ತರ ೩ ಮೀಟರ್. ಹಾಗೆಯೇ, ತಲಾಧಾರವಾಗಿರುವ ಅಂಡಾಕಾರದ ಎರಡು ಗುಂಡುಗಳಲ್ಲಿ ಬಲಬದಿಯ ಪೂರ್ವದಿಕ್ಕಿನ ಗುಂಡಿನ ಉದ್ದ (ಉತ್ತರ-ದಕ್ಷಿಣ) ೨.೬೭ ಮೀಟರ್, ಅಗಲ (ಪೂರ್ವ-ಪಶ್ಚಿಮ) ೧.೫ ಮೀಟರ್ ಹಾಗೂ ಎತ್ತರ ೧.೧೫ ಮೀಟರ್; ಹಾಗೂ ಎಡಬದಿಯ ಪಶ್ಚಿಮದಿಕ್ಕಿನ ಗುಂಡಿನ ಉದ್ದ (ಉತ್ತರ-ದಕ್ಷಿಣ) ೨.೩೨ ಮೀಟರ್, ಅಗಲ (ಪೂರ್ವ-ಪಶ್ಚಿಮ) ೧.೫ ಮೀಟರ್ ಹಾಗೂ ಎತ್ತರ ೧.೨೮ ಮೀಟರ್. ಈ ತಲಾಧಾರದ ಗುಂಡುಗಳ ನಡುವೆ ಇರುವ ಸಂದಿನ ಉದ್ದ (ದಕ್ಷಿಣ-ಉತ್ತರ) ೨ ಮೀಟರ್, ಸರಾಸರಿ ಅಗಲ (ಪೂರ್ವ-ಪಶ್ಚಿಮ) ೧ ಮೀಟರ್ ಹಾಗೂ ತಳದ ಬಂಡೆಯಿಂದ ಮೇಲಿನ ಮುಖ್ಯ ಗುಂಡಿನವರೆಗಿನ ಎತ್ತರ ೧ ಮೀಟರ್. ಈ ಗುಂಡುಗಳ ಸಮೂಹ ಅಧ್ಯಯನಯೋಗ್ಯವೆನಿಸಲು ಇವುಗಳ ಮೇಲ್ಮೈಯಲ್ಲಿ ಆಳವಾಗಿ ಉಜ್ಜಿ ಮೂಡಿಸಲಾದ ವಿವಿಧ ಅಳತೆಯ ಬಟ್ಟಲಾಕಾರದ ಕುಳಿಗಳು (Cupules/ Cup marks/Petroglyphs) ಕಾರಣ. ಪ್ರಾಕ್ಚಾರಿತ್ರಿಕ ನಿವೇಶನಗಳಲ್ಲಿ ಇಂಥಾ ಕುಳಿಗಳು ಹಾಗೂ ಕುಳಿವಿನ್ಯಾಸಗಳು (Cupule patterns) ಕಂಡುಬರುವುದು ಸಾಮಾನ್ಯ. ಚಿತ್ರದುರ್ಗ ಬೆಟ್ಟ ಮತ್ತು ತಾಲ್ಲೂಕು ಹಾಗೂ ಜಿಲ್ಲೆಯಲ್ಲಿ ಈವರೆಗೆ ಇಂಥಾ ಕುಳಿಕುರುಹುಗಳುಳ್ಳ ಹಲವಾರು ನಿವೇಶನಗಳನ್ನು ಗುರುತಿಸಲಾಗಿದೆ.[೪] ಈಗ ಇವುಗಳ ಸಾಲಿಗೆ ಈ ಭೀಮನಗುಂಡು (Archaic cupule rock) ಅನ್ನೂ ಸೇರಿಸಬಹುದು.

ಕುಳಿಭರಿತ ಭೀಮನಗುಂಡುಗುಚ್ಛ ಸಾಕಷ್ಟು ಪ್ರಾಚೀನವೆನ್ನಲು ಬೇರೆಡೆಯಲ್ಲಿ ಬೆಳಕಿಗೆ ಬಂದಿರುವ ಇದೇ ಬಗೆಯ ಬಂಡೆಗಳೇ ಆಧಾರ. ಉದಾಹರಣೆಗೆ, ರಾಜಸ್ತಾನದ ಅಜ್ಮೀರ್ ಜಿಲ್ಲೆ ಮೊರಾಝುರಿ ಗ್ರಾಮಪರಿಸರದಲ್ಲಿ ಕುಳಿಭರಿತ ಬಂಡೆಗಳು ಬೆಳಕಿಗೆ ಬಂದಿದ್ದು, ಈ ಕುರಿತು ಪುರಾಕಲಾ



ಪಶ್ಚಿಮದಿಕ್ಕಿನ ತಳಗುಂಡಿನ ಒಳಬದಿಯ ಕುಳಿ ಆಕೃತಿಗಳು



ಪೂರ್ವದಿಕ್ಕಿನ ತಳಗುಂಡಿನ ಹೊರಪಾರ್ಶ್ವದ ಕುಳಿ ಆಕೃತಿಗಳು

ನಿಷ್ಣಾತರಾದ ವಿದ್ವಾಂಸರು ಹಲವು ಬಗೆಯಲ್ಲಿ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.[೫] ಈ ಬಂಡೆಗಳ ಮೇಲಿರುವ ಕುಳಿಗಳ ಸ್ವರೂಪ ಹಾಗೂ ಆಶಯಗಳನ್ನು ವಿಶ್ವಾದ್ಯಂತ ಕಂಡುಬಂದಿರುವ ಇಂಥದೇ ಕುರುಹುಗಳೊಂದಿಗೆ ತುಲನೆಮಾಡಿ ತಮ್ಮ ಅಧ್ಯಯನದ ಫಲಿತಗಳನ್ನು ತಾಂತ್ರಿಕ ವಿವರಗಳ ಜತೆಯಲ್ಲಿ ಪ್ರಕಟಿಸಿದ್ದಾರೆ. ಈ ಬಂಡೆಗಳ ಕಾಲಮಾನವನ್ನು ಮಧ್ಯ ಆದಿಶಿಲಾಯುಗದಷ್ಟು ಹಿಂದಕ್ಕೆ ಹಾಕಿರುವುದು ಗಮನಾರ್ಹ. (ಭೀಮನಗುಂಡುಗುಚ್ಛದ ಎಲ್ಲ ಕುಳಿ ಆಕೃತಿಗಳ ತಾಂತ್ರಿಕ ವಿವರಕ್ಕೆ ಅನುಬಂಧ ನೋಡಿ).

ಇತರೆಡೆಗಳಲ್ಲಿ ಬಹುಹಿಂದೆಯೇ ಬೆಳಕಿಗೆ ಬಂದ ಇಂಥಾ ಕುಳಿ ಆಕೃತಿಗಳ ಹಿನ್ನೆಲೆ-ಅರ್ಥಗಳನ್ನು ವಿವರಿಸಲು ಎಷ್ಟೋ ವಿದ್ವಾಂಸರು ಪ್ರಯತ್ನಿಸಿರುವುದುಂಟು. ಇಲ್ಲಿ ಕೆಲವು ಉದಾಹರಣೆಗಳನ್ನಷ್ಟೆ ಗಮನಿಸಬಹುದು. ಪುರಾತತ್ವಜ್ಞರು ಗುರುತಿಸುವಂತೆ, ಶಿಲೋಪಕರಣ, ಮುಖ್ಯವಾಗಿ ಕಲ್ಲುಕೊಡಲಿ ತಯಾರಿಕೆಯ ನಾಲ್ಕು ಹಂತಗಳಲ್ಲಿ, ನಾಲ್ಕನೇ ಹಾಗೂ ಕೊನೆಯ ಹಂತವೇ ಶಿಲೋಪಕರಣಕ್ಕೆ ಹೊಳಪುಕೊಡುವುದು (Polishing). ಇದನ್ನು ಹುಟ್ಟುಬಂಡೆಯ ಮೇಲೆ ಉಜ್ಜಿ ನಯಗೊಳಿಸುವ (Grinding) ಪ್ರಕ್ರಿಯೆಯೆನ್ನಲಾಗುತ್ತದೆ. ಶಿಲೋಪಕರಣಗಳನ್ನು ಅಥವಾ ಕಲ್ಲುಕೊಡಲಿಗಳ ಮೊನೆಗಳನ್ನು ಮಸೆದು ಹರಿತಗೊಳಿಸುವ ಕಾರಣವಾಗಿಯೂ ಬಂಡೆಗಳ ಮೇಲೆ ತಗ್ಗುಗಳು ಅಥವಾ ಕುಳಿಗಳು ಉಂಟಾದುದನ್ನು ಬಳ್ಳಾರಿ ಜಿಲ್ಲೆ, ಸಂಗನಕಲ್ಲು ಪರಿಸರದಲ್ಲಿ ಗುರುತಿಸಲಾಗಿದೆ. ಸಣ್ಣರಸಮ್ಮನಗುಡ್ಡದಲ್ಲೂ ಇಂಥವೇ ಕುಳಿ ಆಕೃತಿಗಳು ಗೋಚರಿಸಿವೆ. ಇವು ಕಲ್ಲುಕೊಡಲಿಗಳನ್ನು ಉಜ್ಜಿ ಮೂಡಿಸಲಾದ ಕುಳಿಗಳು (Axe-grinding grooves). ಸಾಮಾನ್ಯವಾಗಿ ಇವು ಗುಂಪುಗಳಲ್ಲಿರುತ್ತವೆ. ಭೂವಿಜ್ಞಾನಿ ರಾಬರ್ಟ್ ಬ್ರೂಸ್‌ಫುಟ್ ಅವರು ಬಳ್ಳಾರಿ ನಗರದ 'ಉತ್ತರದಿಕ್ಕಿನಬೆಟ್ಟ'ದಲ್ಲಿ ಕಲ್ಲುಕೊಡಲಿಗಳನ್ನು ಚೆನ್ನಾಗಿ ಉಜ್ಜಿದುದರ ಕಾರಣವಾಗಿ ಮೂಡಿದ ಅಧಿಕ ಹೊಳಪುಳ್ಳ ೮ ಅಂಗುಲ ಉದ್ದ, ೧.೫ ಅಂಗುಲ ಕುಳಿ ಆಕೃತಿಗಳನ್ನು ಗಮನಿಸಿದ್ದರು. ಆಲೂರು ತಾಲ್ಲೂಕಿನ ಹೊಳಲುಗುಂದಿಯಲ್ಲಿ ಇಂಥವೇ ೪೩ ಕುಳಿ ಆಕೃತಿಗಳು ಪತ್ತೆಯಾದುವು. ಕರ್ನೂಲು ಜಿಲ್ಲೆಯ ಕಪ್ಪರಳ್ಳಗುಡ್ಡ ಮತ್ತು ಹೈದರಾಬಾದ್ ಪ್ರಾಂತದ ಪುಲ್ಲಯ್ಯಗುಡ್ಡಗಳಲ್ಲಿಯೂ ಈ ಕುಳಿ ಆಕೃತಿಗಳು ಕಂಡುಬಂದವು. ಇಂಥಾ ಉಜ್ಜಿ ಮೂಡಿಸಲಾದ ಕುಳಿಗಳನ್ನು ಕಲ್ಲುಕೊಡಲಿ ಅಥವಾ ಹರಿತವಾದ ತುದಿಯುಳ್ಳ ಉಪಕರಣಗಳನ್ನು ತಯಾರಿಸುವವರೊಡನೆಯೇ ಸಮೀಕರಿಸಬೇಕಾಗುತ್ತದೆನ್ನಲಾಗುತ್ತದೆ.[೬] ಗಟ್ಟಿವಸ್ತುವನ್ನು ಬಲಪ್ರಯೋಗಿಸಿ ಉಜ್ಜಿ ನಯಗೊಳಿಸುವುದರೊಡನೆ, ಅದಕ್ಕೆ ನಿರ್ದಿಷ್ಟ ಆಕಾರ ಕೊಡುವ (Retouching) ಪ್ರಕ್ರಿಯೆಯ ಪರಿಣಾಮವಾಗಿ ಇಂಥಾ ಕುಳಿಗಳು ಆಕೃತಿ ಪಡೆಯುತ್ತವೆಂದಿರುವುದುಂಟು.[೭]

ಆದಿಶಿಲಾಯುಗದ ತಲೆಮಾರಿನವರು ಕಡಿಮೆ ಶ್ರಮದಿಂದ ಉತ್ತಮ ಉಪಕರಣಗಳನ್ನು ತಯಾರಿಸಲು ಅನುಕೂಲವಾಗಬಹುದಾದ ಬಿಡಿಯಾದ ಕಲ್ಲು ತುಂಡುಗಳನ್ನು ಆಯ್ದು, ಅವುಗಳನ್ನು ಕೆತ್ತಿ ಸೂಕ್ತ ರೂಪ ಕೊಡುತ್ತಿದ್ದರು. ಸ್ಥಳೀಯವಾಗಿ ಲಭ್ಯವಿಲ್ಲದ್ದ, ಬೆಣಚು ಶಿಲೆಗಿಂತಲೂ ಬಿರುಸಾದ ಹಾಗೂ ಕಾಠಿಣ್ಯತೆಯಿಂದ ಕೂಡಿದ ಕಪ್ಪುವರ್ಣದ ಅಗ್ನಿಶಿಲೆಯನ್ನು (Trap-rock) ಬೇರೆಡೆಯಿಂದಲಾದರೂ ಸಾಗಿಸಿ ತಂದು ತಮ್ಮ ಉಪಕರಣಗಳ ತಯಾರಿಕೆಗೆ ಬಳಸಿಕೊಳ್ಳುತ್ತಿದ್ದುದುಂಟು. ತಮ್ಮ ಹಿರಿಯರನ್ನು ಅನುಸರಿಸಿದ ನೂತನ ಶಿಲಾಯುಗದ ತಲೆಮಾರಿನವರು, ಕಪ್ಪು ವರ್ಣದ ಅಗ್ನಿಶಿಲೆಯನ್ನೆ ಬಳಸಿ ಹೊಳಪುಳ್ಳ ಆಕರ್ಷಕ ಶಿಲೋಪಕರಣಗಳನ್ನು ತಯಾರಿಸತೊಡಗಿದರು. ಗಮನಾರ್ಹ ಅಂಶವೆಂದರೆ, ಆದಿಶಿಲಾ ಯುಗದ ಹಿರಿಯರು ತಮ್ಮ ಶಿಲೋಪಕರಣಗಳನ್ನು, ಕಲ್ಲುಸುತ್ತಿಗೆಗಳಿಗಿಂತ ತಮ್ಮ ತೋಳ್ಬಲವನ್ನು ಬಳಸಿಕೊಂಡು ಹುಟ್ಟುಬಂಡೆಯ ಮೇಲೆ ಚೆನ್ನಾಗಿ ಉಜ್ಜಿ ತಯಾರಿಸುತ್ತಿದ್ದರು.[೮] ಕಲ್ಲುಕೊಡಲಿ/ಆಯುಧಗಳನ್ನು ಮಸೆಯುವ ಅಥವಾ ಉಜ್ಜುವ ತಗ್ಗುಗಳಾಗಿ (Axe-grinding/Spear-grinding grooves) ಈ ಕುಳಿ ಆಕೃತಿಗಳು ಕಂಡುಬರುವ ಹಿನ್ನೆಲೆ ಯಲ್ಲಿ, ಇವುಗಳ ಮೂಲ ಉದ್ದೇಶವನ್ನು ಅರಿಯುವ ಪ್ರಯತ್ನವೂ ನಡೆದಿದೆ. ಇವುಗಳೊಡನೆ ಹುಟ್ಟುಬಂಡೆಗಳ ಮೇಲೆ ಚೆನ್ನಾಗಿ ಉಜ್ಜಿ ಮೂಡಿಸಲಾದ ತಗ್ಗುಗಳನ್ನೂ (Abraded grooves) ಸೇರಿಸಬಹುದು.

ಕುಳಿ ಆಕೃತಿಗಳು ಪುರಾಕಲೆಯ ವ್ಯಾಪ್ತಿಗೊಳಪಡುತ್ತವೆಯೇ? ಈ ಕುರಿತು ಪುರಾಕಲಾತಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ. ಅವರ ಪ್ರಕಾರ, ಇಂಥಾ ಕುಳಿಗಳು (Hollows) ಮನುಷ್ಯನ ಅಭಿರುಚಿಗನುಗುಣವಾಗಿ, ಅಂದರೆ ಕಲಾಭಿವ್ಯಕ್ತಿಯ ಪ್ರತೀಕವಾಗಿ ಮೂಡಿದಂಥವಲ್ಲ; ಅವು ಕೇವಲ ತಾಂತ್ರಿಕ ಉದ್ದೇಶದವು. ಅವುಗಳ ಸ್ವರೂಪವೇ ಅವು ಅಸ್ತಿತ್ವಕ್ಕೆ ಬಂದ ಸಂದರ್ಭವನ್ನೂ ಆವಶ್ಯಕತೆಯನ್ನೂ ಮನಗಾಣಿಸಿಕೊಡುತ್ತದೆ. ಆದ್ದರಿಂದ ಈ ಕುಳಿ ಆಕೃತಿಗಳನ್ನು ಕಲಾಪ್ರಕಾರಕ್ಕೆ ಸೇರಿಸುವುದು ಸಾಧ್ಯವಿಲ್ಲ. ಅಲ್ಲದೆ, ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸುವಲ್ಲಿ ಅಥವಾ ಹರಿತ ಮಾಡಿಕೊಳ್ಳುವಲ್ಲಿ ಈ ಕುಳಿ ಆಕೃತಿಗಳು ಯಾವುದೇ ಒಂದು ಜನಾಂಗಕ್ಕೆ ಅಥವಾ ಸಾಂಸ್ಕೃತಿಕ ವಲಯಕ್ಕೆ ಸಂಬಂಧಿಸಿದುವೆಂದು ಭಾವಿಸಲು ಆಧಾರಗಳೇ ಇಲ್ಲ. ಕೆಲವು ಕುಳಿ ಆಕೃತಿಗಳಂತೂ ಬಂಡೆಗಳ ಮೇಲೆ ನಿಲ್ಲುವ ಮಳೆಯ ನೀರು ಸರಾಗವಾಗಿ ಪ್ರವಹಿಸಲೋಸುಗ ಉಜ್ಜಿ ಮೂಡಿಸಲಾದ ಮಾರ್ಗ (ಕಡಂಗು)ಗಳೇ (Abraded grooves) ವಿನಾ ಆಯುಧೋಪಕರಣಗಳನ್ನು ಉಜ್ಜಿ ಹರಿತ ಮಾಡಿಕೊಂಡಂಥಾ ಕುಳಿಗಳೇನಲ್ಲ.[೯] ಆಸ್ಟ್ರೇಲಿಯಾದಲ್ಲಿ ನಡೆದಿರುವ ಪುರಾಕಲಾಧ್ಯಯನವು, ಆ ದೇಶದಲ್ಲಿ ಬಯಲುಬಂಡೆ/ಹುಟ್ಟುಬಂಡೆಗಳ ಮೇಲೆ ಕೊರೆದು/ಉಜ್ಜಿ ಮೂಡಿಸಲಾಗಿರುವ ರೇಖಾಕೃತಿಗಳು (Engravings) ಮೂರು ಹಂತದಲ್ಲಿ ಸೃಷ್ಟಿಗೊಂಡುದನ್ನು ವ್ಯಕ್ತಪಡಿಸುತ್ತದೆ. ಇವುಗಳಲ್ಲಿ ಮೊದಲನೇ ಅಥವಾ ಆರಂಭದ ಹಂತವೇ ಉಜ್ಜಿಮೂಡಿಸಲಾದ ಕುಳಿ (Abraded grooves) ಗಳೆಂಬುದು ಗಮನಾರ್ಹ. ಇವುಗಳ ಕಾಲಮಾನ ಕ್ರಿ.ಪೂ.ಸು. ೩೫೦೦. ಇಲ್ಲಿ ಉಜ್ಜಿ ಮೂಡಿಸಲಾದ ಈ ಕುಳಿ ಆಕೃತಿಗಳು ಪುರಾತನ ಪ್ರಭೇದ (An archaic form)ಗಳಲ್ಲದೆ ಬೇರೆ ಅಲ್ಲವೆಂಬುದನ್ನು ಪುರಾತತ್ವಜ್ಞರೂ ಸಮರ್ಥಿಸುತ್ತಾರೆ.[೧೦]

* * *

ಚಿತ್ರದುರ್ಗ ಪರಿಸರದ ಭೀಮನಗುಂಡುಗುಚ್ಛ ಹೊಂದಿರುವ ಕುರುಹುಗಳ ಕಾಲಮಾನ ಸಹಾ ಮಧ್ಯ ಆದಿಶಿಲಾಯುಗದಷ್ಟು ಹಿಂದಕ್ಕೆ ಹೋಗಬಹುದೇ? ಈ ಕುರಿತು ಪ್ರತ್ಯೇಕ ಸಂಶೋಧನೆ ಅಗತ್ಯ. ಆದರೆ ಈ ಗುಂಡುಗಳ ಹಿನ್ನೆಲೆಯಲ್ಲಿರುವ ಐತಿಹ್ಯವನ್ನು ಗಮನಿಸಿದರೆ, ಕಾಲಮಾನದ ಮಟ್ಟಿಗೆ, ಅತ್ಯಂತ ಪ್ರಾಚೀನವೆನ್ನುವುದರಲ್ಲಿ ಸಂಶಯವಿಲ್ಲ. ಸ್ಥಳೀಯರ ಪ್ರಕಾರ, ಚಿತ್ರದುರ್ಗ ನಗರಕ್ಕೆ ಹೊಂದಿಕೊಂಡಿರುವ ಚೋಳಗುಡ್ಡದಲ್ಲಿ ಹಿಡಿಂಬರಾಕ್ಷಸ ವಾಸಿಸಿದ್ದು, ಅವನ ಕಿರುಕುಳದಿಂದ ಸುತ್ತಮುತ್ತಲ ಜನರು ರೋಸಿ ಹೋಗಿದ್ದರು. ಇದೇ ಸಂದರ್ಭದಲ್ಲಿ ಈ ಪ್ರದೇಶವನ್ನು ಪಾಂಡವರು ಪ್ರವೇಶಿಸಿದರು. ಅವರಲ್ಲಿ ಒಬ್ಬನಾದ ಭೀಮಸೇನನು ಜನರ ಮೊರೆ ಕೇಳಿ, ಹಿಡಿಂಬನೊಡನೆ ಸೆಣಸಿ ಅವನ ಹತ್ಯೆಗೈದ. ಅವನ ಶವವನ್ನು ಹೂತು, ಅವನ ಸಮಾಧಿಯ ಮೇಲೆ ಈಗಿರುವ ಗುಂಡುಗಳನ್ನು ಪೇರಿಸಿದನಂತೆ. ಮೇಲಿರುವ ಬೃಹತ್ತಾದ ಮುಖ್ಯಗುಂಡನ್ನು ಎತ್ತಿ ಇಡುವಾಗ ಅದರ ಬುಡದಲ್ಲಿರುವ ಬಂಡೆಗಳ ಮೇಲೆ ಆಸರೆಗಾಗಿ ಹಲವಾರು ಭಾಗಗಳಲ್ಲಿ ಕಾಲೂರಿದ. ಹೀಗಾಗಿ ಅವನು ಕಾಲೂರಿದ ಜಾಗದಲ್ಲೆಲ್ಲಾ ಬಟ್ಟಲಾಕಾರದ ಕುಳಿಗಳು ಮೂಡಿದವಂತೆ. ಸಾಮಾನ್ಯವಾಗಿ ಇಂಥಾ ಪುರಾತಾತ್ವಿಕ ಕುರುಹುಗಳಿರುವ ಎಡೆಗಳಲ್ಲಿ ಇಂಥವೇ ಪಾರಂಪರಿಕ ಐತಿಹ್ಯಗಳು ಪ್ರಚಾರದಲ್ಲಿರುತ್ತವೆ. ಇವು ಆಯಾ ಎಡೆಗಳ ಪ್ರಾಚೀನತೆಯನ್ನು ಪರೋಕ್ಷವಾಗಿ ಸಮರ್ಥಿಸುವುದಂತೂ ದಿಟ. ಭೀಮನಗುಂಡಿನ ಕುಳಿಗಳ ಸೃಷ್ಟಿ ಪ್ರಕ್ರಿಯೆಯಲ್ಲಿಯೂ ಇಂಥಾ ಕಥೆಯೇ ತಲೆಹಾಕಿದೆ.

ಈ ಹಿನ್ನೆಲೆಯಲ್ಲಿ, ಭೀಮನಗುಂಡು ನಿವೇಶನವನ್ನು ಪುರಾತಾತ್ವಿಕ ನೆಲೆಯಲ್ಲಿ ಗುರುತಿಸುವ ಅಗತ್ಯವಿದೆ. ಈ ಭೀಮನಗುಂಡು ಸಮೂಹವಿರುವ ಪ್ರದೇಶದ ಲಕ್ಷಣಗಳನ್ನು ಗಮನಿಸಿದರೆ, ಸನಿಹದಲ್ಲೆ ಅಂದರೆ ಪೂರ್ವದಿಕ್ಕಿಗೆ ಕಂಡುಬರುವುದು ಎತ್ತರದ ಚೋಳಗುಡ್ಡ/ಚೋಳಗಟ್ಟ ಹಾಗೂ ದಕ್ಷಿಣಕ್ಕೆ ಗಂಜಿಗಟ್ಟೆ–ಪಂಢರಹಳ್ಳಿ ಪರಿಸರ. ಅದಕ್ಕೆ ಹೊಂದಿಕೊಂಡಂತೆ ಪಶ್ಚಿಮದತ್ತ ಸಾಗಿರುವ ಚಿತ್ರದುರ್ಗ ಬೆಟ್ಟಸಾಲು; ಚಂದ್ರವಳ್ಳಿ ಪಟ್ಟಣ ಪರಿಸರದ ಹೂಲಿಯ ಗೊಂದಿ, ಬಸವನಗೊಂದಿ, ಬಾರಲಗೊಂದಿ ಮತ್ತು ನೇರಲಗೊಂದಿಗಳು. ಬೆಟ್ಟದ ಪೂರ್ವದಿಕ್ಕಿನಲ್ಲಿರುವ ನೂತನಶಿಲಾಯುಗ ಸಂಸ್ಕೃತಿಯ ಕುರುಹುಗಳಿರುವ ಬೂದರದಿಬ್ಬ ಮತ್ತು ತಿಮ್ಮಣ್ಣನಾಯಕನಕೆರೆ ಹಾಗೂ ಆದಿಚಾರಿತ್ರಿಕಕಾಲದ ಕುಂಚಿಗನಹಾಳು ಪರಿಸರ ಇತ್ಯಾದಿ. ಈ ಪ್ರದೇಶದ ನಿವೇಶನಗಳಲ್ಲಿ ದೊರೆತಿರುವ ಪ್ರಾಚ್ಯವಸ್ತುಗಳು ಹಾಗೂ ಗೋಚರಿಸಿರುವ ಕುಳಿ ಆಕೃತಿಗಳ ಮಾದರಿಗಳಲ್ಲಿರುವ ಏಕರೂಪತೆ ಹಾಗೂ ಬದಲಾವಣೆಗಳ ಅನುಪೂರ್ವಿ (Sequence) ಯನ್ನು ಅಥವಾ ಪುರಾತಾತ್ವಿಕ ಅನುಕ್ರಮಣಿಕೆಯನ್ನು ಗುರುತಿಸಿಕೊಡಲು ಇದರಿಂದ ಸಾಧ್ಯವಾಗಬಹುದು.

ಗಮನಾರ್ಹ ಅಂಶವೆಂದರೆ, ಈ ಗುಂಡಿನ ಬುಡದಲ್ಲಿ, ಅಂದರೆ ದಕ್ಷಿಣದಿಕ್ಕಿನ ಬುಡದಲ್ಲಿ, ಗುಂಡುಗಳಿಗೆ ಆಧಾರವಾಗಿರುವ ಹುಟ್ಟುಬಂಡೆಯ ಮೇಲೆ ಪೂರ್ವಾಭಿಮುಖವಾಗಿ ಆಳವಾದ ಏಕಪಾದದ ಕುಳಿ ಆಕೃತಿ ಇದ್ದಿತೆಂಬುದು. ಆದರೆ ಈ ಹುಟ್ಟುಬಂಡೆಯ ಮೇಲಿನ ಚಕ್ಕಳವನ್ನು ಈ ಹಿಂದೆಯೇ ಸಾಕಷ್ಟು ಎಬ್ಬಿಸಿರುವುದರಿಂದ, ಏಕಪಾದದ ಕುರುಹು ಸಹಾ ನಾಶ ಹೊಂದಿರುವುದು ಸ್ಪಷ್ಟ. ಆದರೆ ಸ್ಥಳೀಯರು ವಿವರಿಸುವ

ಏಕಪಾದಾಕೃತಿಯೆಂಬುದು ಆಳವಾಗಿ ಉಜ್ಜಿ ಮೂಡಿಸಲಾದ ಇನ್ನೊಂದು ಕುಳಿ ಆಕೃತಿಯೇ ಇದ್ದಿರ ಬಹುದು. ಇದರೊಡನೆ ಇಂಥಾ ಅನೇಕ ಕುಳಿಗಳು ಈ ಹುಟ್ಟುಬಂಡೆಯ ಮೇಲಿದ್ದು, ಅವು ಈಗ ನಾಶ ಗೊಂಡಿವೆ. ಇಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವೆಂದರೆ, ಈ ಭೀಮನಗುಂಡು ಪ್ರಾಚೀನ ಕಾಲದಿಂದಲೂ ಆರಾಧನಾ ಎಡೆಯಾಗಿದ್ದಿರಬಹುದೇ? ಬೇರೆಡೆ ರೂಢಿಯಲ್ಲಿರುವಂತೆ, ಹಿಂದೊಮ್ಮೆ ಈ ಬಂಡೆ ಸಮೂಹವೂ ಆರಾಧನೆಗೊಳಪಟ್ಟಿ ರುವ ಸಾಧ್ಯತೆಯಿದೆ. ಈ ಪರಿಸರದ ಜನರಲ್ಲಿ ಈ ಗುಂಡು ಸಮೂಹದ ಬಗೆಗೆ ಪವಿತ್ರ ಭಾವನೆ ಇರುವ ಕಾರಣ ಕ್ಕಾಗಿಯೂ ಇದು ಉಳಿದುಬಂದಿದೆಯೆಂಬುದನ್ನು ಗಮನಿಸ ಬಹುದು. ಇದನ್ನು ನಾಶಪಡಿಸಲು ಈವರೆಗೆ ಯಾವ ಕಲ್ಲುಕುಟ್ಟಿಗರಿಗೂ ಅವಕಾಶ ನೀಡಿಲ್ಲವೆಂದು ಹೇಳುವ ಸ್ಥಳೀಯರು, ಸ್ವತಃ ಯಾವ ಕಲ್ಲುಕುಟ್ಟಿಗನೂ ಇದನ್ನು ಒಡೆದು ಹಾಕುವ ಧೈರ್ಯ ತೋರಿಲ್ಲವೆನ್ನುತ್ತಾರೆ. ಅನೂಚಾನ ನಂಬಿಕೆ–ಆಚರಣೆಗಳು ನಿರ್ವಹಿಸುವ ಹೊಣೆಯೂ ಸಾಮಾನ್ಯವಾದುದಲ್ಲ. ಈ ಹಿನ್ನೆಲೆಯಲ್ಲಿಯೂ ಭೀಮನ ಬಂಡೆ ಸಮೂಹವು ಯಾವುದೋ ಹಂತದಲ್ಲಿ ಆರಾಧನೆ ಗೊಳಪಟ್ಟಿರುವುದನ್ನು ನಿರಾಕರಿಸಲಾಗದು. ಇದು ಒಂದು ಸಮುದಾಯದ ಸಂಸ್ಕೃತಿಯನ್ನು ಪ್ರತಿನಿಧಿಸುವಂಥಾದ್ದು ಆಗಿರಬಹುದು. ಸುದೀರ್ಘ ಅವಧಿಯವರೆಗೆ ಭೀಮನ ಗುಂಡುಗುಚ್ಛವು ನಿರ್ದಿಷ್ಟ ಸಮುದಾಯವೊಂದರಿಂದ ಆರಾಧನೆಗೊಳ ಪಟ್ಟಿದ್ದಲ್ಲಿ, ಈ ಭೀಮನಗುಂಡು ಪರಿಸರದಲ್ಲಿ ಪ್ರಾಕ್ಚಾರಿತ್ರಿಕ ವಸತಿನೆಲೆಯೊಂದು ಇದ್ದಿರಬಹುದು.

ಮುಖ್ಯವಾಗಿ, ಆದಿಶಿಲಾಯುಗದ ನಿವೇಶನಗಳ ಬಗೆಗೆ ನಡೆದಿರುವ ಅಧ್ಯಯನಗಳಿಂದ ವ್ಯಕ್ತಪಡುವಂತೆ, ಸಾಮಾನ್ಯ ವಾಗಿ ಅಶ್ಯೂಲ್ ಸಂಪ್ರದಾಯದ ತಾಂತ್ರಿಕ ಕ್ರಮವನ್ನು ಅನುಸರಿಸುತ್ತಿದ್ದ ಜನರು ವಾಸಿಸುತ್ತಿದ್ದುದು ನದಿದಡಗಳ ಮೇಲೆ, ಸಮುದ್ರತೀರ ಪ್ರದೇಶಗಳಲ್ಲಿ ಹಾಗೂ ಬೆಟ್ಟಗಳ ತಪ್ಪಲಿನಲ್ಲಿ. ಅವರು ಮುಖ್ಯವಾಗಿ ನೆಲೆಸುತ್ತಿದ್ದುದು ನಿರಂತರ ವಾದ ನೀರಿನ ಸೌಲಭ್ಯ, ಆಹಾರ ಮತ್ತು ತಮಗೆ ಅಗತ್ಯವಿ ರುವ ಉಪಕರಣಗಳನ್ನು ಸಿದ್ಧಪಡಿಸಲು ಅವಶ್ಯವಿರುವ ಶಿಲೆಗಳು ಲಭ್ಯವಿರುವ ಸ್ಥಳಗಳಲ್ಲಿ. ಈ ಅಶ್ಯೂಲ್ ಮಾದರಿಯ ಜನರು ಗುಡ್ಡತಪ್ಪಲು ಹಾಗೂ ಸಮತಟ್ಟು ನಿವೇಶನ ಗಳಲ್ಲಿಯಂತೆಯೇ ಉಪಕರಣ ತಯಾರಿಕಾ ನಿವೇಶನ ಗಳಲ್ಲಿಯೂ ನೆಲೆಸುತ್ತಿದ್ದರು. ಇಂಥಾ ವಸತಿ ನಿವೇಶನಗಳಲ್ಲಿ ಕೆಲಕಾಲ ತಂಗಿದ್ದು, ವಿವಿಧ ಆಕಾರದ ಶಿಲೋಪಕರಣಗಳನ್ನು ಸಿದ್ಧಪಡಿಸುತ್ತಿದ್ದರು. ಆಯಾ ಜನರು ಮೊದಲೇ ಆಯ್ದು ಕೊಂಡ ಶಿಲೆಯ ಬಳಿಯಲ್ಲಿ ಸಾಮಾನ್ಯವಾಗಿ ಇಂಥಾ ಉದ್ಯಮದ ನಿವೇಶನಗಳು ಕಂಡುಬಂದಿರುವುದುಂಟು. ಇಲ್ಲೆಲ್ಲ ಶಿಲಾಯುಗದ ಅವಶೇಷಗಳು ದೊರೆತಿರುವ ಉದಾಹರಣೆಗಳಿವೆ. ವಿವಿಧ ಆಕಾರಗಳ ಉಪಕರಣಗಳು ಸಿದ್ಧಗೊಳ್ಳುತ್ತಿದ್ದ ಹಂತದಲ್ಲಿಯೇ ಅಪೂರ್ಣ ಉಪಕರಣಗಳು, ಅವುಗಳನ್ನು ಸಿದ್ಧಮಾಡಲು ಉಪಯೋಗಿಸುತ್ತಿದ್ದ ಕಲ್ಲುಗಳು, ಪ್ರಾಣಿಗಳ ಮೂಳೆಯ ಚೂರುಗಳು ದೊರೆಯುತ್ತವೆ. ಮಾನವ ವಸತಿಯ ಇತರ ಕುರುಹುಗಳೂ ಗೋಚರಿಸುವುದುಂಟು.[೧೧] ಇದಕ್ಕೊಂದು ಉದಾಹರಣೆಯೆಂದರೆ, ಚಂಬಲ್ ಕಣಿವೆ ಬಾಣಾಪುರ ಸಮೀಪದ ಇಂದ್ರಗರ್‌ಗುಡ್ಡದಲ್ಲಿರುವ ದರಕಿ ಚತ್ತಾನ್ (Daraki Chattan) ಎಂಬ ಆದಿಶಿಲಾಯುಗದ ನಿವೇಶನ. ಇಲ್ಲಿಯ ಗವಿಯೊಂದರಲ್ಲಿ ಬಟ್ಟಲಾಕಾರದ ಮತ್ತು ಸಣ್ಣ ಆಕಾರಗಳ ಕುಳಿ ಆಕೃತಿ ಸಮೂಹವಿದ್ದು, ಈ ಎಡೆಯಲ್ಲಿ ಈ ಕುಳಿ ಆಕೃತಿಗಳನ್ನು ಮೂಡಿಸಲು ಅಶ್ಯೂಲ್ ಮಾದರಿಯ ಜನರು ಬಳಸಿದ ಶಿಲೋಪಕರಣಗಳನ್ನು ಸಂಗ್ರಹಿಸಲಾಗಿದೆ.[೧೨] ಆದರೆ ರಾಜಸ್ಥಾನದ ಮೊರಾಝುರಿಯ ಕುಳಿಭರಿತ ಬಂಡೆಗಳ ಸನಿಹದಲ್ಲಿ ಕುಳಿ ಆಕೃತಿಗಳನ್ನು ಮೂಡಿಸಲು ಸುತ್ತಿಗೆಯಂತೆ ಬಳಸಲಾದ ಕಲ್ಲುತುಂಡು ರಾಶಿಯಿದ್ದರೂ ಅವುಗಳಲ್ಲಿ ಉಪಯೋಗಿಸಲಾದುವು ಕೆಲವು ಮಾತ್ರವೇ ಎಂಬುದು ದೃಢಪಟ್ಟಿದೆ. ಅಲ್ಲದೆ ಯಾವುದೇ ನಿರ್ದಿಷ್ಟ ಶಿಲೋಪಕರಣ ಪತ್ತೆಯಾಗಿಲ್ಲದಿರುವುದು ಗಮನಾರ್ಹ.[೧೩] ಪುರಾತತ್ವಜ್ಞರ ಪ್ರಕಾರ, ಬಟ್ಟಲಾಕಾರದ ಕುಳಿಗಳನ್ನು ಆಳವಾಗಿ ಮೂಡಿಸುವ ಕೆಲವು ವಿಧಾನಗಳೆಂದರೆ, ಕಲ್ಲು ಅಥವಾ ಲೋಹದ ಸುತ್ತಿಗೆಯಿಂದ ಬಡಿಯುವುದು. ಹರಿತ ಶಿಲೋಪಕರಣ ಅಥವಾ ಲೋಹೋಪಕರಣದಿಂದ ಕೆತ್ತುವುದು, ಉಜ್ಜುವುದು, ಕೊರೆಯುವುದು ಇತ್ಯಾದಿ.[೧೪]

ಗಮನಾರ್ಹ ಸಂಗತಿಯೆಂದರೆ, ಭೀಮನಗುಂಡಿನ ಬುಡದಲ್ಲಿರುವ ಪಶ್ಚಿಮದಿಕ್ಕಿನ ತಳಬಂಡೆಯ ಒಳಪಾರ್ಶ್ವದ ಸಂದಿನಲ್ಲಿ ಸುತ್ತಿಗೆಗಳಂತೆ ತೋರುವ ೩ ಕಲ್ಲು ತುಂಡುಗಳು ಇಂದಿನವರೆಗೂ ಉಳಿದುಬಂದಿವೆ. ೧೨ ಸೆಂ.ಮೀ. ಉದ್ದದ ಕಪ್ಪು ಜ್ವಾಲಾಮುಖಿ ಮತ್ತು ಗ್ರಾನೈಟ್ ಶಿಲಾವರ್ಗಗಳಿಗೆ ಸೇರಿದ ಸುತ್ತಿಗೆಗಳಿವು. ಸುಲಭದಲ್ಲಿ ಹೊರತೆಗೆಯಲಾಗದಷ್ಟು ಗಟ್ಟಿಯಾಗಿ, ಆಳವಾಗಿ ಬಂಡೆಸಂದಿನಲ್ಲಿ ಸೇರಿಹೋಗಿವೆ. ಯಾವುದೋ ಹಂತದಲ್ಲಿ ಚೆನ್ನಾಗಿ ಬಳಕೆಗೊಂಡಿರುವ ಎಲ್ಲ ಲಕ್ಷಣಗಳನ್ನೂ ಹೊಂದಿವೆ. ಏನನ್ನೋ ಕುಟ್ಟಲು ಇವುಗಳನ್ನು ಉಪಯೋಗಿಸಿರುವ ಸಾಧ್ಯತೆ ಹೆಚ್ಚು. ಭೀಮನಗುಂಡುಗುಚ್ಛದ ಕುಳಿ ಆಕೃತಿಗಳ ನಿರ್ಮಾಣಕ್ಕೂ ಈ ಕಲ್ಲುಸುತ್ತಿಗೆಗಳಿಗೂ ಇದ್ದಿರುವ ಸಂಬಂಧ ಕುರಿತು ಪರಿಶೀಲಿಸುವ ಅಗತ್ಯವಿದೆ.

ಭೀಮನಗುಂಡು ಸಮೂಹ ಹೊಂದಿರುವ ಕುಳಿ ಆಕೃತಿಗಳಿಗೆ ಈ ಪ್ರದೇಶದಲ್ಲಿ ವಸತಿಮಾಡಿದ್ದ ಅಶ್ಯೂಲ್

ಮಾದರಿಯ ಜನರೇ ಕಾರಣವೆನ್ನುವುದರಲ್ಲಿ ಸಂಶಯವಿಲ್ಲ. ಮುಖ್ಯವಾಗಿ, ಈ ಜನರು ಶಿಲೋಪಕರಣಗಳನ್ನು ಸೃಷ್ಟಿಸುವರಾಗಿದ್ದರೆಂಬುದಂತೂ ದಿಟ. ಬೃಹತ್ತಾದ ಭೀಮನಗುಂಡಿಗೆ ಆಧಾರವಾಗಿರುವ ತಳದಲ್ಲಿಯ ಸಮಾನ ಗಾತ್ರದ ಎರಡು ಗುಂಡುಗಳ ಮೇಲೆ ಉಜ್ಜಿ ಮೂಡಿಸಲಾದ ಕುಳಿ ಆಕೃತಿಗಳ ನಮೂನೆ ಅಥವಾ ಮಾದರಿಗಳೇ ಇದನ್ನು ಸಮರ್ಥಿಸುತ್ತವೆ. ಈ ಮಾದರಿಯ ಜನರು ರೂಪಿಸಿಕೊಂಡ ತಂತ್ರ, ಅವರು ಉತ್ಪಾದಿಸಿದ ಉಪಕರಣಗಳ ಆಕೃತಿ ಮತ್ತು ಲಕ್ಷಣಗಳನ್ನು ಸ್ಥೂಲವಾಗಿಯಾದರೂ ನಿರ್ಧರಿಸಲು ಇದರಿಂದ ಸಾಧ್ಯವಾಗಬಹುದು. ಇಂಥಾ ಮಾದರಿನಾಮ (Typonym) ವನ್ನು ಈಗ ಹೇಗೆ ಬಳಸಿದರೂ ಹಿಂದೊಮ್ಮೆ ಶಿಲೋಪಕರಣಗಳನ್ನು ತಯಾರಿಸುವ ಸಮುದಾಯವೊಂದು ಈ ಪರಿಸರದಲ್ಲಿ ಬೀಡುಬಿಟ್ಟಿದ್ದುದು ದೃಢಪಡುತ್ತದೆ. ಇಂದು ಭೀಮನಗುಂಡು ಗುಚ್ಛವು ಬಯಲಲ್ಲಿ ಪ್ರತ್ಯೇಕವಾಗಿ ನಿಂತಿರು ವಂತೆ ತೋರಿದರೂ ಹಿಂದೊಮ್ಮೆ ಈ ಪರಿಸರವನ್ನು ಆವರಿಸಿದ್ದ ದಟ್ಟ ಅರಣ್ಯ ಹಾಗೂ ಲಭ್ಯವಿದ್ದ ಇತರ ಸೌಲಭ್ಯಗಳನ್ನು ಪರಿಗಣಿಸದಿರುವಂತಿಲ್ಲ. ಮೇಲೆ ಆವರಿಸಿರುವ ದೊಡ್ಡ ಭೀಮನಗುಂಡಿನ ಬುಡದಲ್ಲಿ ಎರಡು ಗುಂಡುಗಳ ಮಧ್ಯೆ ಇರುವ ಸಂದಿನಲ್ಲಿ ಆರಾಮವಾಗಿ ಕುಳಿತು ಬಿಸಿಲು, ಬೀಸುಗಾಳಿ ಮತ್ತು ಮಳೆಗಳಿಂದ ರಕ್ಷಣೆ ಪಡೆದು ತಮ್ಮ ಶಿಲೋಪಕರಣ ತಯಾರಿಕೆಯ ಕಾಯಕವನ್ನು ಈ ಜನರು ನಿರಾತಂಕವಾಗಿ ಮುಂದುವರೆಸಿದ್ದಿರಬೇಕು. ಮುಖ್ಯವಾಗಿ, ಪೂರ್ವದಿಕ್ಕಿನ ಬಂಡೆಯ ಒಳಪಾರ್ಶ್ವದಲ್ಲಿ ಮೂಡಿಸಲಾಗಿರುವ ಕುಳಿ ಆಕೃತಿಗಳ ಆಳ, ವಿಸ್ತಾರ ಹಾಗೂ ವೈವಿಧ್ಯತೆಗಳನ್ನು ಗಮನಿಸಿ ಈ ಮಾತನ್ನು ಹೇಳಬಹುದು. ಶಿಲೋಪಕರಣ ತಯಾರಿಕೆಯ ಕಾಯಕವನ್ನು ಈ ಜನರು ಇಲ್ಲಿ ದೀರ್ಘಕಾಲದವರೆಗೆ ಕೈಗೊಂಡಿದ್ದಿರಬಹುದು.

ಪುರಾತಾತ್ವಿಕ ಅಧ್ಯಯನದ ನೆಲೆಯಲ್ಲಿ ವಿಚಾರ ಮಾಡತಕ್ಕ ಸಂಗತಿಯೆಂದರೆ, ಭೀಮನಗುಂಡು ಪರಿಸರದಲ್ಲಿ ದೊರಕಬಹುದಾದ ಆಗಿನ ಶಿಲೋಪಕರಣ ಮತ್ತಿತರ ವಸತಿ ಕುರುಹುಗಳನ್ನು ಪತ್ತೆಹಚ್ಚುವ ಕೆಲಸ ಬಾಕಿ ಇದೆ. ಈಗ ಈ ಗುಂಡು ಸಮೂಹದ ಸುತ್ತಮುತ್ತಲಲ್ಲಿ ಯಾವ ಪ್ರಾಕ್ಚಾರಿತ್ರಿಕ ಸಾಕ್ಷ್ಯವೂ ದೊರೆಯುವ ಲಕ್ಷಣಗಳಿಲ್ಲ.[೧೫] ಕೋಳಗುಡ್ಡ/ಚೋಳಗಟ್ಟ ಪರಿಸರದಲ್ಲಿ, ಮುಖ್ಯವಾಗಿ ಪಶ್ಚಿಮದಿಕ್ಕಿನ ಪಾರ್ಶ್ವದಲ್ಲಿ, ಕೆಲವು ಬಯಲುಬಂಡೆ ರೇಖಾಕೃತಿಗಳು ಹಾಗೂ ಬಿಳಿವರ್ಣ ಚಿತ್ರಗಳು ಕಂಡುಬಂದಿರುವುದುಂಟು. ಹಾಗೆಯೇ, ಸಮೀಪದ ಕವಾಡಿಗರಹಟ್ಟಿ ಪರಿಸರದಲ್ಲಿ ಕೆಲವು ಬಯಲು ಬಂಡೆ ರೇಖಾಕೃತಿಗಳೊಡನೆ ಚಿಕ್ಕಗಾತ್ರದ ಕುಳಿ ಸಮೂಹವೂ ಬೆಳಕಿಗೆ ಬಂದಿದೆ. ಇವುಗಳ ವಿನಾ ಈ ಪ್ರದೇಶದಲ್ಲಿ ಗಮನಾರ್ಹವೆನಿಸುವ ಯಾವುದೇ ಪ್ರಾಕ್ಚಾರಿತ್ರಿಕ ಸಂಸ್ಕೃತಿಯ ಕುರುಹುಗಳು ಕಂಡುಬರುವುದಿಲ್ಲ. ಆದರೆ ಭೀಮನಗುಂಡು ಸಮೂಹದ ದಕ್ಷಿಣಕ್ಕಿರುವ ಜಾಲಿಕಟ್ಟೆಗೆ ಸನಿಹದ ಸೊಲ್ಲಾಪುರ ಗ್ರಾಮ ಪರಿಸರದಲ್ಲಿರುವ ಹುಟ್ಟುಬಂಡೆಗಳ ಮೇಲೆ, ಕವಾಡಿಗರ ಹಟ್ಟಿಯ ಬಳಿ ಕಂಡುಬಂದಂಥಾ ಮಂಡಲಗಳನ್ನು ಹೋಲುವ ರೇಖಾಕೃತಿಗಳು ಹಾಗೂ ಕುಳಿ ಆಕೃತಿಗಳು ಗೋಚರಿಸಿವೆ.[೧೬] ಆದ್ದರಿಂದ ಅಶ್ಯೂಲ್ ಮಾದರಿಯ ಜನರ ಸಂಸ್ಕೃತಿಯ ಕುರುಹುಗಳು ಇದೇ ಸಾಲಿನಲ್ಲಿ ಮುಂದುವರೆದಿರುವುದು ಸ್ಪಷ್ಟಪಡುತ್ತದೆ.

ಆಕೃತಿ ವಿಶ್ಲೇಷಣೆಯ ಅಧ್ಯಯನದ (Typology) ಪ್ರಕಾರ, ಭೀಮನಗುಂಡುಗುಚ್ಛದಲ್ಲಿ ಆಳವಾಗಿ ಮೂಡಿಸಲಾದ ಕುಳಿ ಆಕೃತಿಗಳು ಅಶ್ಯೂಲ್ ಮಾದರಿಯ ಜನರಿಂದ ಸೃಷ್ಟಿಸಿದುವೆಂಬುದು ದೃಢಪಡುತ್ತದೆ. ಈ ಆಕೃತಿಗಳ ವಿನ್ಯಾಸ ಮತ್ತು ಶೈಲಿಗಳು ಈ ಸಮುದಾಯದ ಸಾಂಸ್ಕೃತಿಕ ಸನ್ನಿವೇಶದ ಪ್ರತಿಬಿಂಬವೆನ್ನಲಡ್ಡಿಯಿಲ್ಲ. ಈ ಗುಂಡುಗಳ ಮೇಲಿರುವ ಕುಳಿ ಆಕೃತಿಗಳ ಸಂಖ್ಯೆ ಸುಮಾರು ೩೨೦. ಇವುಗಳಲ್ಲಿ ಕೆಲವು ಆಳವಾಗಿದ್ದರೆ, ಇನ್ನು ಕೆಲವು ಆಳವಾಗಿರದೆ ಕೇವಲ ನೆರಳಿನಂತೆ (ಛಾಯಾ) ಕಾಣುತ್ತವೆ. ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡಿನ ಒಳಬದಿಯಲ್ಲಿ, ಅಂದರೆ ಪೂರ್ವಾಭಿಮುಖದಲ್ಲಿರುವ ಕುಳಿ ಆಕೃತಿಗಳ ಪೈಕಿ ೧೮.೫ ಸೆಂ.ಮೀ. ಉದ್ದ, ೧೨.೫ ಸೆಂ.ಮೀ. ಅಗಲ ಮತ್ತು ೩.೫ ಸೆಂ.ಮೀ. ಆಳದ ದೀರ್ಘವೃತ್ತಾಕಾರದ (Elliptical) ಕುಳಿಯೇ ಗರಿಷ್ಠ ಅಳತೆಯದು. ಹಾಗೆಯೇ, ಅದೇ ಪಾರ್ಶ್ವದಲ್ಲಿರುವ ೧.೫ ಸೆಂ.ಮೀ. ಉದ್ದ, ೮.೫ ಸೆಂ.ಮೀ. ಅಗಲ ಮತ್ತು ೧ ಸೆಂ.ಮೀ. ಆಳದ ವೃತ್ತಾಕಾರದ(Circular) ಕುಳಿ ಆಕೃತಿಯೇ ಕನಿಷ್ಠ ಅಳತೆಯದು. ಆಳವಲ್ಲದ ಛಾಯಾ ಕುಳಿ ಆಕೃತಿಗಳು ಈ ಗುಂಡುಗಳ ಎಲ್ಲ ಮಗ್ಗುಲುಗಳಲ್ಲೂ ಇವೆ. ಇವು ಸಾಕಷ್ಟು ಸಂಖ್ಯೆಯಲ್ಲಿದ್ದು, ಇವುಗಳಲ್ಲಿ ಕನಿಷ್ಠ ಅಳತೆಯದೆಂದರೆ ಬಲಬದಿಯ ಪೂರ್ವದಿಕ್ಕಿನ ತಳ ಗುಂಡಿನ ಮೇಲ್ಮುಖದಲ್ಲಿರುವ ೨ ಸೆಂ.ಮೀ. ಉದ್ದ ಮತ್ತು ೨ ಸೆಂ.ಮೀ. ಅಗಲದ ದುಂಡಾಕಾರದ (Round) ಕುಳಿ ಆಕೃತಿಯದು.

ಸಾಮಾನ್ಯವಾಗಿ ಈಗಿನ ಜನವಸತಿಗೆ ಸಮೀಪವಿರುವ ಇಂಥಾ ನಿವೇಶನಗಳಲ್ಲಿ, ಕೆಲವು ಕುಳಿಗಳಾದರೂ ಮರುಬಳಕೆಗೊಳಪಟ್ಟು ತಮ್ಮ ಮೂಲಸ್ವರೂಪ ಕಳೆದುಕೊಳ್ಳಬಹುದು. ಮೊರಾರ್ಝರಿ ನಿವೇಶನದಲ್ಲಿ ಬಂಡೆಯ ಮೇಲ್ಮುಖದಲ್ಲಿರುವ ದೊಡ್ಡ ಕುಳಿಯೊಂದನ್ನು ಈಗಿನ ಜನರು ಧಾನ್ಯವನ್ನು ಕುಟ್ಟುವ ಒರಳಾಗಿ ಮಾರ್ಪಡಿಸಿಕೊಂಡಿರುವು ದುಂಟು. ಭೀಮನಗುಂಡಿನ ಪೂರ್ವದ ಬದಿಯಲ್ಲಿರುವ ತಳದ ಗುಂಡಿನ ಮೇಲ್ಮುಖದಲ್ಲಿರುವ ೪-೫ ನುಣುಪಾದ ಕುಳಿಗಳು ತೀರಾ

ದೊಡ್ಡವಾಗಿಲ್ಲದಿದ್ದರೂ ಕೆಲವಾರು ಗಟ್ಟಿವಸ್ತು/ಪದಾರ್ಥಗಳನ್ನು ಕುಟ್ಟಿ ಪುಡಿಮಾಡಲು (ಉದಾ.–ತಾಂಬೂಲ ಸೇವನೆಗಾಗಿ ಅಡಿಕೆಗೋಟುಗಳನ್ನು ಒಡೆಯಲು) ಈಗಲೂ ಬಳಕೆ ಗೊಳ್ಳುತ್ತಿರುವುದನ್ನು ನೋಡಬಹುದು. ಈ ಕುಳಿಗಳ ಪೈಕಿ ಗುಂಡಿನ ಮಧ್ಯಭಾಗದಲ್ಲಿ ತಕ್ಕಮಟ್ಟಿಗೆ ದೊಡ್ಡ ದಾಗಿರುವ ಕುಳಿಯೊಂದು ಹೆಚ್ಚಾಗಿ ಬಳಕೆಗೊಂಡಿರುವುದು ಸ್ಪಷ್ಟ.

ಕರ್ನಾಟಕಾದ್ಯಂತ ಈ ಬಗೆಯ ಕುಳಿಭರಿತ ಗುಂಡುಗಳಿರುವ ನಿವೇಶನಗಳನ್ನು (Cupule rock sites) ಪತ್ತೆಹಚ್ಚಿ ಅಧ್ಯಯನಿಸುವ ಮಟ್ಟಿಗೆ, ಚಿತ್ರದುರ್ಗ ಪರಿಸರದ ಕುಳಿಭರಿತ ಭೀಮನಗುಂಡು ಇತರ ಸಂಶೋಧಕರಿಗೆ ಪ್ರೇರಣೆ ನೀಡಬಲ್ಲದೆಂದು ಭಾವಿಸಲಡ್ಡಿಯಿಲ್ಲ.

**ಕೃತಜ್ಞತೆ:** ಚೋಳಗುಡ್ಡ, ಕವಾಡಿಗರಹಟ್ಟಿ, ಜಾಲಿಕಟ್ಟೆ, ಸೊಲ್ಲಾಪುರಗಳ ಪರಿಸರದಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ನನ್ನೊಡನೆ ಸಹಕರಿಸಿದ ಚಿತ್ರದುರ್ಗ ಸಂಶೋಧನ ತಂಡದ ಲ. ನಾಗರಾಜ ಹೊಯ್ಸಳ, ಭೀ. ಉಮೇಶ್, ಕ.ಮ. ರವಿಶಂಕರ, ಬಿ. ವಿಜಯಕುಮಾರ್; ಹಾಗೂ ೨೦೦೧ ರಿಂದ ೨೦೦೬ರ ವರೆಗೆ ಮೂರು ಹಂತಗಳಲ್ಲಿ ಕೈಗೊಳ್ಳಲಾದ ಪ್ರಸ್ತುತ ಭೀಮನಗುಂಡು ಕುಳಿ ಆಕೃತಿಗಳ ಅಧ್ಯಯನದಲ್ಲಿ ನೆರವಾದ ಇದೇ ತಂಡದ ಎಸ್.ಆರ್. ಗುರುನಾಥ್, ನಾ.ವೆಂಕಟೇಶಭಟ್. ಸಿ.ಎಲ್. ಶಿವಶಕ್ತಿ ಪ್ರಸನ್ನಕುಮಾರ್; ಹಾಗೂ ಜಾಲಿಕಟ್ಟೆಯ ಹೆಚ್. ಪಾಲೇಶ್ (ವಕೀಲರು), ಟಿ. ಗುರುಪಾದಪ್ಪ ಹಾಗೂ ಗ್ರಾಮಸ್ಥರಿಗೆ ಕೃತಜ್ಞನಾಗಿದ್ದೇನೆ.

## ಅನುಬಂಧ

### ಭೀಮನಗುಂಡು ಸಮೂಹದ ಕುಳಿ ಆಕೃತಿಗಳ ತಾಂತ್ರಿಕ ವಿವರ

ಸೂಚನೆ:೧. ಭೀಮನಗುಂಡು ಸಮೂಹದ ವೀಕ್ಷಣೆ: ದಕ್ಷಿಣದಿಂದ ಉತ್ತರಕ್ಕೆ.

೨. ಕುಳಿ ಆಕೃತಿಗಳ ಮಾಪನ: ಸೆಂಟಿಮೀಟರ್‌ನಲ್ಲಿ.

೩. ಆಕಾರಗಳ ಸೂಚಿ: ದುಂಡು (Round), ಅಂಡ (Oval), ವೃತ್ತ (Cicular), ದೀರ್ಘವೃತ್ತ (Elliptical), ನೀಳ (Elongated), ಆಳವಿಲ್ಲದ್ದು/ಛಾಯ (Shallow/Shadow).

I ಬಲಬದಿಯ ಪೂರ್ವದಿಕ್ಕಿನ ತಳಗುಂಡು ೧ (ಅ)

ಪಾರ್ಶ್ವ: ಪೂರ್ವಾಭಿಮುಖ (ಹೊರಬದಿ)

ಕುಳಿ ಆಕೃತಿಗಳ ಸಂಖ್ಯೆ: ೬೨

ಕುಳಿ ಆಕೃತಿಗಳ ತಾಂತ್ರಿಕ ವಿವರ

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೯.೫ | ೮ | ೧ | ನೀಳ |
| ೨ | ೧೨ | ೯ | ೨.೫ | – |
| ೩ | ೩ | ೨.೫ | ಛಾಯಾ | – |
| ೪ | ೫ | ೩.೫ | – | – |
| ೫ | ೫ | ೫ | – | – |
| ೬ | ೫ | ೪.೫ | – | – |
| ೭ | ೧೨ | ೮.೫ | ೨.೫ | – |
| ೮ | ೧೦.೫ | ೯ | ೩ | ದುಂಡು |
| ೯ | ೧೨.೫ | ೧೦.೫ | ೩.೫ | ನೀಳ |
| ೧೦ | ೧೯ | ೧ | ೨೬ | – |
| ೧೧ | ೩ | ೩ | ಛಾಯಾ | – |
| ೧೨ | ೬ | ೫.೫ | – | – |
| ೧೩ | ೭.೫ | ೭.೫ | .೫ | ದುಂಡು |
| ೧೪ | ೭.೫ | ೬.೫ | ಛಾಯಾ | – |
| ೧೫ | ೫ | ೫ | – | – |

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧೬ | ೮ | ೭ | .೫ | – |
| ೧೭ | ೯.೫ | ೮ | ೨ | – |
| ೧೮ | ೧೫.೫ | ೧೧.೫ | ೪.೫ | ಅಂಡ |
| ೧೯ | ೮ | ೭.೫ | .೫ | ದುಂಡು |
| ೨೦ | ೧೨.೫ | ೧೦.೫ | ೪.೫ | – |
| ೨೧ | ೯.೫ | ೯ | ೧.೫ | – |
| ೨೨ | ೪ | ೪ | ಛಾಯಾ | – |
| ೨೩ | ೮.೫ | ೭.೫ | ೧.೫ | – |
| ೨೪ | ೧೫ | ೧೧ | ೬ | ಅಂಡ |
| ೨೫ | ೭ | ೭.೫ | .೫ | ದುಂಡು |
| ೨೬ | ೯.೫ | ೮.೫ | ೨ | – |
| ೨೭ | ೩ | ೩ | ಛಾಯಾ | – |
| ೨೮ | ೭ | ೬ | ೧ | – |
| ೨೯ | ೧೧.೫ | ೧೦ | ೪ | ದೀರ್ಘವೃತ್ತ |
| ೩೦ | ೧೧ | ೯ | ೪ | ಅಂಡ |
| ೩೧ | ೬ | ೫.೫ | ಛಾಯಾ | ದುಂಡು |

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೩೨ | ೧೨ | ೯ | ೪ | ದೀರ್ಘವೃತ್ತ |
| ೩೩ | ೧೦ | ೯ | ೨ | – |
| ೩೪ | ೫.೫ | ೪ | ಛಾಯಾ | – |
| ೩೫ | ೩ | ೩ | – | ವೃತ್ತ |
| ೩೬ | ೬ | ೫.೫ | – | ದುಂಡು |
| ೩೭ | ೬ | ೫ | – | – |
| ೩೮ | ೧೪ | ೧೦ | ೪ | ನೀಳ |
| ೩೯ | ೮.೫ | ೭.೫ | ೧ | ದುಂಡು |
| ೪೦ | ೨ | ೨ | ಛಾಯಾ | ವೃತ್ತ |
| ೪೧ | ೧೩ | ೮.೫ | ೨.೫ | ನೀಳ |
| ೪೨ | ೨ | ೨.೫ | ಛಾಯಾ | ದುಂಡು |
| ೪೩ | ೬ | ೫.೫ | – | – |
| ೪೪ | ೮ | ೬.೫ | .೫ | – |
| ೪೫ | ೧೩ | ೮ | ೧.೫ | ನೀಳ |
| ೪೬ | ೫.೫ | ೫ | .೫ | ದುಂಡು |
| ೪೭ | ೮.೫ | ೮ | ೨ | – |
| ೪೮ | ೧೧.೫ | ೧೦ | ೩ | – |
| ೪೯ | ೧೪.೫ | ೧೦.೫ | ೩.೫ | ನೀಳ |
| ೫೦ | ೫.೫ | ೫ | ಛಾಯಾ | ದುಂಡು |
| ೫೧ | ೫.೫ | ೫.೫. | ೫ | ವೃತ್ತ |
| ೫೨ | ೬.೫ | ೬.೫ | ೨ | – |
| ೫೩ | ೬.೫ | ೬.೫ | ೧.೫ | – |
| ೫೪ | ೬.೫ | ೬.೫ | ೧ | – |
| ೫೫ | ೫ | ೫ | ೨ | – |
| ೫೬ | ೧೬.೫ | ೧೧ | ೪.೫ | ನೀಳ |
| ೫೭ | ೬ | ೬ | .೫ | ದುಂಡು |
| ೫೮ | ೬.೫ | ೬.೫ | ೧ | – |
| ೫೯ | ೭.೫ | ೭ | ೧.೫ | – |
| ೬೦ | ೭.೫ | ೮ | ೨ | – |
| ೬೧ | ೭ | ೭ | ೧ | ವೃತ್ತ |
| ೬೨ | ೫ | ೫ | ಛಾಯಾ | – |

**II ಬಲಬದಿಯ ಪೂರ್ವದಿಕ್ಕಿನ ತಳಗುಂಡು ೧ (ಆ)**

ಪಾರ್ಶ್ವ: ಪೂರ್ವಾಭಿಮುಖ (ಒಳಬದಿ)

ಕುಳಿ ಆಕೃತಿಗಳ ಸಂಖ್ಯೆ: ೬೨

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೧೭ | ೧೧.೫ | ೪.೫ | ನೀಳ |
| ೨ | ೫ | ೫ | ಛಾಯಾ | ವೃತ್ತ |
| ೩ | ೭.೫ | ೬ | .೫ | ದುಂಡು |
| ೪ | ೭ | ೭.೫ | .೫ | – |
| ೫ | ೪ | ೪ | ಛಾಯಾ | ವೃತ್ತ |
| ೬ | ೧೨.೫ | ೧೦.೫ | ೪ | ದುಂಡು |
| ೭ | ೪ | ೪.೫ | ಛಾಯಾ | – |
| ೮ | ೯.೫ | ೯.೫ | ೨ | ವೃತ್ತ |
| ೯ | ೨೦ | ೧೩ | ೫.೫ | ನೀಳ |
| ೧೦ | ೧೫.೫ | ೧೧ | ೩ | ದೀರ್ಘವೃತ್ತ |
| ೧೧ | ೫ | ೫.೫ | ಛಾಯಾ | ದುಂಡು |
| ೧೨ | ೭.೫ | ೭ | .೫ | – |
| ೧೩ | ೫ | ೫ | ಛಾಯಾ | ವೃತ್ತ |
| ೧೪ | ೭ | ೮ | ೧.೫ | ದುಂಡು |
| ೧೫ | ೧೨ | ೧೧ | ೩ | – |
| ೧೬ | ೫ | ೫.೫ | .೫ | – |
| ೧೭ | ೩ | ೪ | ಛಾಯಾ | – |
| ೧೮ | ೩ | ೩ | – | ವೃತ್ತ |
| ೧೯ | ೩ | ೩ | – | – |
| ೨೦ | ೮.೫ | ೮.೫ | ೨ | ದುಂಡು |
| ೨೧ | ೪ | ೪.೫ | .೫ | – |
| ೨೨ | ೮.೫ | ೮ | ೧.೫ | – |
| ೨೩ | ೪ | ೪.೫ | ಛಾಯಾ | – |
| ೨೪ | ೪ | ೪ | – | – |
| ೨೫ | ೩ | ೩ | ಛಾಯಾ | ವೃತ್ತ |
| ೨೬ | ೬.೫ | ೬.೫ | .೫ | – |
| ೨೭ | ೮.೫ | ೭.೫ | ೧.೫ | ದುಂಡು |
| ೨೮ | ೧೦ | ೯.೫ | ೨.೫ | – |

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೨೯ | ೪ | ೪ | ಛಾಯಾ | ವೃತ್ತ |
| ೩೦ | ೪ | ೪.೪ | .೫ | ದುಂಡು |
| ೩೧ | ೭.೫ | ೭.೫ | ೧ | ವೃತ್ತ |
| ೩೨ | ೮.೫ | ೭ | ೧ | ದುಂಡು |
| ೩೩ | ೧೧ | ೧೨ | ೩ | – |
| ೩೪ | ೩ | ೩ | ಛಾಯಾ | ವೃತ್ತ |
| ೩೫ | ೪.೫ | ೫ | – | ದುಂಡು |
| ೩೬ | ೬ | ೬ | .೫ | ವೃತ್ತ |
| ೩೭ | ೧೫.೫ | ೧೦.೫ | ೨ | ಅಂಡ |
| ೩೮ | ೫.೫ | ೫.೫ | .೫ | ವೃತ್ತ |
| ೩೯ | ೫ | ೬ | .೫ | ದುಂಡು |
| ೪೦ | ೭ | ೬.೫ | ೧ | – |
| ೪೧ | ೧೫ | ೯.೫ | ೨.೫ | ದೀರ್ಘವೃತ್ತ |
| ೪೨ | ೧೦ | ೮.೫ | ೧ | – |
| ೪೩ | ೬.೫ | ೭ | .೫ | ದುಂಡು |
| ೪೪ | ೮.೫ | ೮.೫ | ೧.೫ | ವೃತ್ತ |
| ೪೫ | ೫ | ೫.೫ | ಛಾಯಾ | ದುಂಡು |
| ೪೬ | ೪.೫ | ೪.೫ | – | ವೃತ್ತ |
| ೪೭ | ೮.೫ | ೮ | ೧ | ದುಂಡು |
| ೪೮ | ೧೬ | ೧೦.೫ | ೨.೫ | ಅಂಡ |
| ೪೯ | ೪ | ೪.೫ | .೫ | ದುಂಡು |
| ೫೦ | ೧೫.೫ | ೧೧ | ೩.೫ | ದೀರ್ಘವೃತ್ತ |
| ೫೧ | ೧೯ | ೧೧.೫ | ೪ | – |
| ೫೨ | ೫ | ೫ | ಛಾಯಾ | ವೃತ್ತ |
| ೫೩ | ೧೧.೫ | ೧೧.೫ | ೩ | ದುಂಡು |
| ೫೪ | ೧೧ | ೯.೫ | ೨ | – |
| ೫೫ | ೧೩.೫ | ೧೦.೫ | ೩.೫ | – |
| ೫೬ | ೫ | ೫.೫ | ಛಾಯಾ | – |
| ೫೭ | ೭ | ೬ | – | – |
| ೫೮ | ೫ | ೫ | – | ದುಂಡು |
| ೫೯ | ೧೩.೫ | ೧೩.೫ | ೪ | ವೃತ್ತ |
| ೬೦ | ೮ | ೮ | ಛಾಯಾ | – |
| ೬೧ | ೮ | ೭.೫ | – | ದುಂಡು |
| ೬೨ | ೭ | ೮ | ೧.೫ | – |

**III ಬಲಬದಿಯ ಪೂರ್ವದಿಕ್ಕಿನ ತಳಗುಂಡು ೧ (ಇ)**

ಪಾರ್ಶ್ವ: ಮೇಲ್ಮುಖ

ಕುಳಿ ಆಕೃತಿಗಳ ಸಂಖ್ಯೆ: ೫೧

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೯ | ೯ | ೨ | ದುಂಡು |
| ೨ | ೧೧.೫ | ೧೧ | ೪.೫ | – |
| ೩ | ೬ | ೬.೫ | .೫ | – |
| ೪ | ೬ | ೬ | ೧ | – |
| ೫ | ೬.೫ | ೬.೫ | ಛಾಯಾ | – |
| ೬ | ೨ | ೨ | – | – |
| ೭ | ೮.೫ | ೮.೫ | ೧ | ವೃತ್ತ |
| ೮ | ೫.೫ | ೫.೫ | ಛಾಯಾ | – |
| ೯ | ೫ | ೫ | – | – |
| ೧೦ | ೭.೫ | ೭.೫ | ೧ | – |
| ೧೧ | ೧೦.೫ | ೯.೫ | ೧.೫ | – |
| ೧೨ | ೪ | ೫ | ಛಾಯಾ | ದುಂಡು |
| ೧೩ | ೫ | ೫ | – | ವೃತ್ತ |
| ೧೪ | ೮ | ೮.೫ | .೫ | ದುಂಡು |
| ೧೫ | ೭ | ೭.೫ | ೧ | – |
| ೧೬ | ೨ | ೩.೫ | ಛಾಯಾ | – |
| ೧೭ | ೯.೫ | ೭.೫ | ೧.೫ | ದೀರ್ಘವೃತ್ತ |
| ೧೮ | ೫ | ೫ | ಛಾಯಾ | ವೃತ್ತ |
| ೧೯ | ೧೨ | ೧೨ | ೪.೫ | ವೃತ್ತ |
| ೨೦ | ೬ | ೬.೫ | ಛಾಯಾ | ದುಂಡು |
| ೨೧ | ೫.೫ | ೬.೫ | .೫ | – |
| ೨೨ | ೨ | ೨ | ಛಾಯಾ | – |
| ೨೩ | ೨ | ೩ | – | – |
| ೨೪ | ೫.೫ | ೫.೫ | – | ವೃತ್ತ |
| ೨೫ | ೨ | ೨.೫ | – | ದುಂಡು |

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೨೬ | ೪ | ೪.೫ | – | – |
| ೨೭ | ೪ | ೪ | – | ವೃತ್ತ |
| ೨೮ | ೬.೫ | ೬.೫ | .೫ | – |
| ೨೯ | ೫.೫ | ೫.೫ | ಛಾಯಾ | – |
| ೩೦ | ೮ | ೮ | ೧ | – |
| ೩೧ | ೫ | ೫ | ಛಾಯಾ | – |
| ೩೨ | ೯.೫ | ೧೦.೫ | ೨ | ದುಂಡು |
| ೩೩ | ೮.೫ | ೯.೫ | ೧ | – |
| ೩೪ | ೭ | ೭ | ೧ | ವೃತ್ತ |
| ೩೫ | ೯ | ೯ | ೧.೫ | – |
| ೩೬ | ೭ | ೭ | .೫ | – |
| ೩೭ | ೭.೫ | ೮ | ೧ | ದುಂಡು |
| ೩೮ | ೫.೫ | ೭ | ಛಾಯಾ | – |
| ೩೯ | ೬ | ೬.೫ | .೫ | – |
| ೪೦ | ೫ | ೫ | ಛಾಯಾ | ವೃತ್ತ |
| ೪೧ | ೮.೫ | ೮.೫ | ೧.೫ | – |
| ೪೨ | ೫.೫ | ೫.೫ | ಛಾಯಾ | – |
| ೪೩ | ೬ | ೬ | – | – |
| ೪೪ | ೫ | ೫.೫ | – | ದುಂಡು |
| ೪೫ | ೫.೫ | ೬ | – | – |
| ೪೬ | ೬.೫ | ೬.೫ | – | – |
| ೪೭ | ೮ | ೮ | ೧ | ವೃತ್ತ |
| ೪೮ | ೮.೫ | ೮.೫ | ೧ | – |
| ೪೯ | ೧೦.೫ | ೮.೫ | ೧.೫ | ನೀಳ |
| ೫೦ | ೭ | ೭ | .೫ | ವೃತ್ತ |
| ೫೧ | ೪.೫ | ೫ | ಛಾಯಾ | ದುಂಡು |

**IV ಬಲಬದಿಯ ಪೂರ್ವದಿಕ್ಕಿನ ತಳಗುಂಡು ೧ (ಈ)**

ಪಾರ್ಶ್ವ: ದಕ್ಷಿಣಾಭಿಮುಖವಾಗಿರುವ ಗುಂಡಿನ ತುದಿ

ಕುಳಿ ಆಕೃತಿಗಳ ಸಂಖ್ಯೆ: ೩೯

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೪ | ೪ | ಛಾಯಾ | ದುಂಡು |
| ೨ | ೬.೫ | ೬.೫ | – | ವೃತ್ತ |
| ೩ | ೯ | ೯ | ೨ | ದುಂಡು |
| ೪ | ೪ | ೭.೫ | ೧ | ವೃತ್ತ |
| ೫ | ೫ | ೫.೫ | .೫ | ದುಂಡು |
| ೬ | ೯ | ೭.೫ | ೧ | – |
| ೭ | ೫ | ೫ | ಛಾಯಾ | ವೃತ್ತ |
| ೮ | ೧೧.೫ | ೧೦ | ೨ | ದುಂಡು |
| ೯ | ೬ | ೬.೫ | ೧ | – |
| ೧೦ | ೫ | ೫ | ಛಾಯಾ | ವೃತ್ತ |
| ೧೧ | ೧೩ | ೧೧.೫ | ೩ | ದುಂಡು |
| ೧೨ | ೩ | ೩ | ಛಾಯಾ | ವೃತ್ತ |
| ೧೩ | ೬.೫ | ೫.೫ | .೫ | ನೀಳ |
| ೧೪ | ೩.೫ | ೩.೫ | .೫ | ವೃತ್ತ |
| ೧೫ | ೬ | ೬ | ೧ | – |
| ೧೬ | ೫.೫ | ೫.೫ | ೧ | – |
| ೧೭ | ೬ | ೬ | .೫ | – |
| ೧೮ | ೫.೫ | ೫.೫ | ಛಾಯಾ | – |
| ೧೯ | ೪.೫ | ೪.೫ | – | – |
| ೨೦ | ೪.೫ | ೫ | – | ದುಂಡು |
| ೨೧ | ೩ | ೩.೫ | ಛಾಯಾ | – |
| ೨೨ | ೩ | ೩ | – | ವೃತ್ತ |
| ೨೩ | ೭.೫ | ೭.೫ | ೧.೫ | – |
| ೨೪ | ೩ | ೩.೫ | ಛಾಯಾ | ದುಂಡು |
| ೨೫ | ೪.೫ | ೪.೫ | .೫ | ವೃತ್ತ |
| ೨೬ | ೭ | ೭.೫ | ೧.೫ | ದುಂಡು |
| ೨೭ | ೩ | ೪ | ಛಾಯಾ | – |
| ೨೮ | ೩.೫ | ೪ | – | – |
| ೨೯ | ೪.೫ | ೫ | – | – |
| ೩೦ | ೬.೫ | ೮ | ೨ | – |
| ೩೧ | ೭.೫ | ೭.೫ | ೧ | ವೃತ್ತ |
| ೩೨ | ೫ | ೬ | ಛಾಯಾ | ದುಂಡು |
| ೩೩ | ೪ | ೪.೫ | – | – |
| ೩೪ | ೭.೫ | ೭ | ೧.೫ | – |
| ೩೫ | ೯.೫ | ೯ | ೧.೫ | – |
| ೩೬ | ೬ | ೬ | ಛಾಯಾ | ವೃತ್ತ |
| ೩೭ | ೫ | ೫.೫ | – | ದುಂಡು |
| ೩೮ | ೧೦.೫ | ೧೦.೫ | ೨ | ವೃತ್ತ |
| ೩೯ | ೬ | ೬ | ೧ | – |

## V ಬಲಬದಿಯ ಪೂರ್ವದಿಕ್ಕಿನ ತಳಗುಂಡು ೧ (ಉ)

ಪಾರ್ಶ್ವ: ದಕ್ಷಿಣಾಭಿಮುಖವಾಗಿರುವ ಗುಂಡಿನ ತುದಿ

ಕುಳಿ ಆಕೃತಿಗಳ ಸಂಖ್ಯೆ: ೨೧

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೭.೫ | ೭.೫ | ೧.೫ | ವೃತ್ತ |
| ೨ | ೧೦.೫ | ೯.೫ | ೨.೫ | ದುಂಡು |
| ೩ | ೪೧.೫ | ೧೧.೫ | ೨.೫ | ನೀಳ |
| ೪ | ೫.೫ | ೬ | ಛಾಯಾ | ದುಂಡು |
| ೫ | ೩.೫ | ೪ | – | – |
| ೬ | ೬ | ೬.೫ | – | – |
| ೭ | ೧೪.೫ | ೧೧ | ೩ | – |
| ೮ | ೬ | ೫.೫ | ಛಾಯಾ | – |
| ೯ | ೮ | ೮.೫ | ೨ | – |
| ೧೦ | ೧೧.೫ | ೧೦ | ೪ | ಅಂಡ |
| ೧೧ | ೭ | ೮.೫ | ೧.೫ | ದುಂಡು |
| ೧೨ | ೭.೫ | ೯ | ೧.೫ | – |
| ೧೩ | ೪ | ೪ | ಛಾಯಾ | ವೃತ್ತ |
| ೧೪ | ೬ | ೪ | – | ನೀಳ |
| ೧೫ | ೯ | ೯ | ೩ | ದುಂಡು |
| ೧೬ | ೪.೫ | ೪.೫ | – | ವೃತ್ತ |
| ೧೭ | ೭ | ೭ | .೫ | – |
| ೧೮ | ೫ | ೫ | ಛಾಯಾ | ದುಂಡು |
| ೧೯ | ೧೦ | ೯.೫ | ೨ | – |
| ೨೦ | ೪.೫ | ೪.೫ | ಛಾಯಾ | – |
| ೨೧ | ೩ | ೩ | – | – |

## VI ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡು ೨ (ಅ)

ಪಾರ್ಶ್ವ: ದಕ್ಷಿಣಾಭಿಮುಖ (ಹೊರಬದಿ)

ಕುಳಿ ಆಕೃತಿಗಳ ಸಂಖ್ಯೆ: ೩

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೬.೫ | ೮ | ಛಾಯಾ | ದುಂಡು |
| ೨ | ೫.೫ | ೬.೫ | – | – |
| ೩ | ೫.೫ | ೫.೫ | – | ವೃತ್ತ |

## VII ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡು ೨ (ಆ)

ಪಾರ್ಶ್ವ: ದಕ್ಷಿಣಾಭಿಮುಖ (ಒಳಬದಿ)

ಕುಳಿ ಆಕೃತಿಗಳ ಸಂಖ್ಯೆ: ೩೨

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೮ | ೯ | ೨ | ದುಂಡು |
| ೨ | ೪.೫ | ೫ | ಛಾಯಾ | – |
| ೩ | ೯.೫ | ೯.೫ | ೨ | ವೃತ್ತ |
| ೪ | ೩ | ೩ | ಛಾಯಾ | – |
| ೫ | ೪.೫ | ೪.೫ | – | – |
| ೬ | ೫.೫ | ೫.೫ | – | – |
| ೭ | ೧೮.೫ | ೧೨.೫ | ೩.೫ | ದೀರ್ಘವೃತ್ತ |
| ೮ | ೪.೫ | ೪.೫ | ಛಾಯಾ | ವೃತ್ತ |
| ೯ | ೭.೫ | ೭ | .೫ | ದುಂಡು |
| ೧೦ | ೫ | ೪.೫ | ಛಾಯಾ | – |
| ೧೧ | ೫.೫ | ೬ | .೫ | – |
| ೧೨ | ೫.೫ | ೫.೫ | ಛಾಯಾ | ವೃತ್ತ |
| ೧೩ | ೮.೫ | ೬.೫ | .೫ | ದುಂಡು |
| ೧೪ | ೩.೫ | ೩.೫ | ಛಾಯಾ | ವೃತ್ತ |

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧೫ | ೩.೫ | ೩.೫ | – | – |
| ೧೬ | ೧೫ | ೧೧ | ೩ | ದೀರ್ಘವೃತ್ತ |
| ೧೭ | ೯ | ೭.೫ | .೫ | – |
| ೧೮ | ೫.೫ | ೫ | ಛಾಯಾ | ದುಂಡು |
| ೧೯ | ೫ | ೪ | – | – |
| ೨೦ | ೫.೫ | ೪ | – | – |
| ೨೧ | ೮ | ೮ | ೧.೫ | ವೃತ್ತ |
| ೨೨ | ೩ | ೩ | ಛಾಯಾ | – |
| ೨೩ | ೪.೫ | ೫.೫ | – | ದುಂಡು |
| ೨೪ | ೫ | ೪.೫ | – | – |
| ೨೫ | ೫ | ೫ | – | ವೃತ್ತ |
| ೨೬ | ೧.೫ | ೮.೫ | ೧ | – |
| ೨೭ | ೪.೫ | ೫ | ಛಾಯಾ | ದುಂಡು |
| ೨೮ | ೫.೫ | ೫.೫ | – | ವೃತ್ತ |
| ೨೯ | ೮ | ೭ | ಛಾಯಾ | ದುಂಡು |
| ೩೦ | ೫.೫ | ೬ | – | – |
| ೩೧ | ೬.೫ | ೬.೫ | ೧ | ವೃತ್ತ |
| ೩೨ | ೧೦ | ೧೦.೫ | ೧.೫ | ದುಂಡು |

## VIII ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡು ೨ (ಇ)

ಪಾರ್ಶ್ವ: ದಕ್ಷಿಣಾಭಿಮುಖವಾಗಿರುವ ಗುಂಡಿನ ತುದಿ

ಕುಳಿ ಆಕೃತಿಗಳ ಸಂಖ್ಯೆ: ೮

### ಕುಳಿ ಆಕೃತಿಗಳ ತಾಂತ್ರಿಕ ವಿವರ

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೭.೫ | ೭.೫ | ೧ | ವೃತ್ತ |
| ೨ | ೩ | ೩ | ಛಾಯಾ | – |
| ೩ | ೧೦ | ೧೦ | ೨.೫ | ದುಂಡು |
| ೪ | ೪ | ೪.೫ | ಛಾಯಾ | – |
| ೫ | ೬.೫ | ೭ | ೧ | – |
| ೬ | ೪.೫ | ೫ | ಛಾಯಾ | – |
| ೭ | ೪.೫ | ೪.೫ | – | – |
| ೮ | ೪ | ೪.೫ | – | – |

## IX ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡು ೨ (ಈ)

ಪಾರ್ಶ್ವ: ಉತ್ತರಾಭಿಮುಖವಾಗಿರುವ ಗುಂಡಿನ ತುದಿ

ಕುಳಿ ಆಕೃತಿಗಳ ಸಂಖ್ಯೆ: ೧೫

### ಕುಳಿ ಆಕೃತಿಗಳ ತಾಂತ್ರಿಕ ವಿವರ

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೫ | ೫ | ಛಾಯಾ | ವೃತ್ತ |
| ೨ | ೮ | ೭.೫ | ೧ | ದುಂಡು |
| ೩ | ೫.೫ | ೫.೫ | ಛಾಯಾ | – |
| ೪ | ೩.೫ | ೩.೫ | – | ವೃತ್ತ |
| ೫ | ೮ | ೮ | .೫ | – |
| ೬ | ೩.೫ | ೩.೫ | ಛಾಯಾ | – |
| ೭ | ೭.೫ | ೭.೫ | .೫ | – |
| ೮ | ೧೪.೫ | ೧೧.೫ | ೨.೫ | – |
| ೯ | ೮.೫ | ೮ | .೫ | ದುಂಡು |
| ೧೦ | ೬.೫ | ೬.೫ | ಛಾಯಾ | – |
| ೧೧ | ೭ | ೭ | .೫ | ವೃತ್ತ |
| ೧೨ | ೧೩.೫ | ೧೦ | ೩ | ದೀರ್ಘವೃತ್ತ |
| ೧೩ | ೭.೫ | ೭.೫ | ೧.೫ | ವೃತ್ತ |
| ೧೪ | ೪ | ೪.೫ | ಛಾಯಾ | ದುಂಡು |
| ೧೫ | ೫.೫ | ೫.೫ | – | ವೃತ್ತ |

## X ಎಡಬದಿಯ ಪಶ್ಚಿಮದಿಕ್ಕಿನ ತಳಗುಂಡು ೨ (ಉ)

ಪಾರ್ಶ್ವ: ಮೇಲ್ಮುಖ

ಕುಳಿ ಆಕೃತಿಗಳ ಸಂಖ್ಯೆ: ೮

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೫ | ೫.೫ | ಛಾಯಾ | ದುಂಡು |
| ೨ | ೫ | ೫.೫ | – | |
| ೩ | ೪ | ೫.೫ | – | – |
| ೪ | ೫.೫ | ೫.೫ | – | ವೃತ್ತ |
| ೫ | ೪.೫ | ೪.೫ | – | – |
| ೬ | ೫ | ೫ | – | – |
| ೭ | ೬.೫ | ೬.೫ | ೧ | – |
| ೮ | ೧೦.೫ | ೯ | ೨.೫ | ದುಂಡು |

## XI ಅಂಡಾಕಾರದಲ್ಲಿರುವ ಮೇಲಿನ ಮುಖ್ಯ ಗುಂಡು (ಅ)

ಪಾರ್ಶ್ವ: ಪೂರ್ವಾಭಿಮುಖ

ಕುಳಿ ಆಕೃತಿಗಳ ಸಂಖ್ಯೆ: ೧೨

**ಕುಳಿ ಆಕೃತಿಗಳ ತಾಂತ್ರಿಕ ವಿವರ**

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೪.೫ | ೪.೫ | ಛಾಯಾ | ವೃತ್ತ |
| ೨ | ೬ | ೫.೫ | – | ದುಂಡು |
| ೩ | ೭ | ೬.೫ | .೫ | – |
| ೪ | ೪.೫ | ೩ | ಛಾಯಾ | – |
| ೫ | ೬.೫ | ೬.೫ | – | ವೃತ್ತ |
| ೬ | ೮ | ೭.೫ | ೧ | ದುಂಡು |
| ೭ | ೬.೫ | ೬.೫ | .೫ | ವೃತ್ತ |
| ೮ | ೯.೫ | ೯.೫ | ೨ | – |
| ೯ | ೧೦ | ೯ | ೧ | – |
| ೧೦ | ೫.೫ | ೫.೫ | ಛಾಯಾ | – |
| ೧೧ | ೮ | ೮ | .೫ | – |
| ೧೨ | ೩.೫ | ೩.೫ | ಛಾಯಾ | – |

## XII ತಳದಲ್ಲಿರುವ ಹುಟ್ಟುಬಂಡೆಯ ಮೇಲ್ಮುಖ (ಅ)

ಕುಳಿ ಆಕೃತಿಗಳ ಸಂಖ್ಯೆ: ೧

ಕುಳಿ ಆಕೃತಿಗಳ ತಾಂತ್ರಿಕ ವಿವರ

| ಕ್ರಮ ಸಂಖ್ಯೆ | ಉದ್ದ | ಅಗಲ | ಆಳ | ಆಕಾರ |
|---|---|---|---|---|
| ೧ | ೭.೫ | ೭.೫ | ೧ | ವೃತ್ತ |



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ನೋಡಿ: **ಕರ್ನಾಟಕ ಗ್ರಾಮಸೂಚಿ,** ೧೯೮೫, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨. Yashodhar Mathpal, 1984, *Prehistoric Rock Paintings of Bhimbetca,* Central India, Abhinav Publications, New Delhi, p. 28.

೩. **ಎಪಿಗ್ರಾಫಿಯ ಕರ್ನಾಟಿಕಾ,** ಸಂಪುಟ ೧೧, ಚಿತ್ರದುರ್ಗ ೩೨, ಕ್ರಿ.ಶ. ೧೨೮೬.

೪. ಈ ಜಿಲ್ಲೆಯ ಬ್ರಹ್ಮಗಿರಿ, ಜಾನಕಲ್ಲು, ತಾಳ್ಯ, ಸೊಂಡೇಕೆರೆ ಇತ್ಯಾದಿ ಕೆಲವು ಉದಾಹರಣೆಗಳು.

೫. *Purakala* (The Journal of Rock Art Society of India), Vol.9, Nos. 1-2, December 1998, pp. 61-64 & Vol. 10, Nos. 1-2, December 1999, pp. 33-37.

೬ Bendapudi Subbarao, 1948, *Stone Age Cultures of Bellary* (Being a Report of the Excavation at Sanganakallu), Deccan College, Pune, p. 32.

೭. D.K. Bhattacharya, 1979, *Old Stone Age Tools* (A Manual of Laboratoy Techniques of Analysis), K.P. Bagchi & Company, Calctta. p. 51.

೮. P.T. Srinivasa Ayyangar, 1988, *The Stone Age in India,* Asian Educational Services, New Delhi, pp.31-33.

೯. Robert Layton, 1992, *Australian Rock Art-A New Synthesis,* Cambridge University Press, New York, pp.3-4, 184-185.

ಕೊಪ್ಪಳದ ಅಶೋಕನ ಶಾಸನವಿರುವ ಗವಿಮಠಗುಡ್ಡದ ಬಂಡೆಗಳ ಮೇಲ್ಮೈಯಲ್ಲಿ ಬೀಳುವ ಮಳೆನೀರು ಸರಾಗವಾಗಿ ಕೆಳಕ್ಕೆ ಹರಿದು ಹೋಗಲು ಇಂಥಾ ಉಜ್ಜಿ ಮೂಡಿಸಲಾದ ಅಸಂಖ್ಯಾತ ಮಾರ್ಗಗಳನ್ನು ನೋಡಬಹುದು.

೧೦. *Ibid.,* pp.213-219

೧೧. ನೋಡಿ: ಆರ್.ಎಸ್.ಪಪ್ಪು, 'ಪ್ರಾಚೀನತಮ ಮಾನವ ಸಂಸ್ಕೃತಿಗಳು: ವಿಕಸನದ ಹಂತಗಳು', **ಕರ್ನಾಟಕ ಚರಿತ್ರೆ,** ಸಂಪುಟ ೧: ಆದಿ ಹಳೆಶಿಲಾಯುಗದಿಂದ ಕ್ರಿ.ಶ. ೬೪೦ (ಸಂ: ಅ. ಸುಂದರ), ೧೯೯೭, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೦೪–೧೦೫.

೧೨. *Purakala,* Vol. 6, Nos, 1-2, December 1995, p.22 &Vol. 14-15, 2005 (A Special Issue on EIP Project), pp.13-68.

೧೩. *Ibid.,* Vol. 9, Nos. 1-2, December 1998, pp.61-63 & Vol. 10, Nos. 1-2, December 1999, p.34.

೧೪. Kalyan Kumar Chakravarty & Robert G. Bednarik, 1997, *Indian Rock Art and Its Global Context,* Motilal Banarasidass Publishers Private Limited, Delhi & Indira Gandhi Rashtriya Manav Sangrahalaya, Bhopal, p. 7.

೧೫. ಮೊರಾರ್ಝರಿ ಕುಳಿ ನಿವೇಶನ ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ಯಾವುದೇ ವಿಧದ ಪ್ರಾಚೀನ ಉಪಕರಣ ದೊರೆತಿಲ್ಲವೆಂಬುದನ್ನು ಇಲ್ಲಿ ಪ್ರಸ್ತಾಪಿಸಬಹುದು.

೧೬. ಈ ಶೋಧನಗಳ ಬಗೆಗೆ ೧೯೯೭ರಲ್ಲಿ ವರದಿ ಮಾಡಲಾಗಿರುತ್ತದೆ.

ಎಸ್.ಜಿ. ರಾಮದಾಸರೆಡ್ಡಿ*

# ಚಳ್ಳಕೆರೆ ತಾಲ್ಲೂಕು ಪಿ. ಮಹದೇವಪುರದ ಪ್ರಾಕ್ಚಾರಿತ್ರಿಕ ಕುರುಹುಗಳು

ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯಲ್ಲಿ ಚಿತ್ರದುರ್ಗ ಉಪವಿಭಾಗಕ್ಕೆ ಸೇರಿದ ಒಂದು ತಾಲ್ಲೂಕು. ಈ ತಾಲ್ಲೂಕಿನ ಪೂರ್ವದಲ್ಲಿ ಆಂಧ್ರಪ್ರದೇಶ ಮತ್ತು ಪಾವಗಡ ತಾಲ್ಲೂಕು. ದಕ್ಷಿಣದಲ್ಲಿ ಹಿರಿಯೂರು ತಾಲ್ಲೂಕು, ಪಶ್ಚಿಮದಲ್ಲಿ ಜಗಳೂರು ತಾಲ್ಲೂಕು ಮತ್ತು ಚಿತ್ರದುರ್ಗ ತಾಲ್ಲೂಕು, ಉತ್ತರದಲ್ಲಿ ಬಳ್ಳಾರಿ ಜಿಲ್ಲೆ ಮತ್ತು ಮೊಳಕಾಲ್ಮುರು ತಾಲ್ಲೂಕು ಪ್ರದೇಶವು ಸುತ್ತುವರಿದಿವೆ.

ಕ್ರಿ.ಶ. ೧೮೮೨ ರವರೆಗೆ ಈ ತಾಲ್ಲೂಕು **'ದೊಡ್ಡೇರಿ ತಾಲ್ಲೂಕು'** ಎಂದು ಹೆಸರಾಗಿತ್ತು. ನಂತರ ಚಳ್ಳಕೆರೆ ತಾಲ್ಲೂಕು ಆಗಿ ಇಂದು ಚಳ್ಳಕೆರೆ, ಪರಶುರಾಮಪುರ, ಥಳುಕು ನಾಯಕನಹಟ್ಟಿ ಈ ನಾಲ್ಕು ಹೋಬಳಿಗಳಿಂದ ಕೂಡಿನೆ, ೧೯೦ ಹಳ್ಳಿಗಳನ್ನು ಹೊಂದಿದೆ. ತಾಲ್ಲೂಕಿನ ಒಟ್ಟು ವಿಸ್ತೀರ್ಣ ೨೦೫೯ ಚ.ಕಿ.ಮೀ. ಇದ್ದು, ಎತ್ತರವಾದ ಮತ್ತು ಪ್ರಮುಖವಾದ ಯಾವ ಬೆಟ್ಟಗಳ ಸಾಲುಗಳು ಈ ತಾಲ್ಲೂಕಿನಲ್ಲಿಲ್ಲ. ಚದುರಿದಂತೆ ಕೆಲವು ಕಣಶಿಲೆಯ ಬೆಟ್ಟಗಳಿವೆ, ಹಲವು ತೊರೆಗಳು, ಏರು ತಗ್ಗಿನ ಮೈದಾನ ಪ್ರದೇಶ ಇವೆ. ವೇದಾವತಿ ನದಿ ಇಲ್ಲಿನ ಮುಖ್ಯನದಿ.

ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆಯಲ್ಲೇ ಅತ್ಯಂತ ಕಡಿಮೆ ಮಳೆ ಬೀಳುವ ತಾಲ್ಲೂಕು, ಆಗಿ ಈ ಪ್ರದೇಶವು ದಕ್ಷಿಣ ಭಾರತದ **'ಪರ್ಯಾಯ ದ್ವೀಪದ ಮಳೆಯ ನೆರಳಿನ'** ಪ್ರದೇಶವಾಗಿದ್ದು ಥಾರ್ ಮರುಭೂಮಿಯನ್ನು ಬಿಟ್ಟರೆ ಈ ಭಾಗವೇ ಅತಿ ಶುಷ್ಕವಾಗಿರುತ್ತದೆ. ಈ ತಾಲ್ಲೂಕಿನಲ್ಲಿ ಕಲ್ಲು ಮಿಶ್ರಿತ ಕೆಂಪುಭೂಮಿ, ಕಪ್ಪು ಮಣ್ಣಿನ ಪ್ರದೇಶ ಮತ್ತು ಮರಳು ಮಿಶ್ರಿತ ಕೆಂಪು ಮಣ್ಣು ಇದೆ.

ಚಳ್ಳಕೆರೆ ತಾಲ್ಲೂಕಿನಿಂದ ೩೫.ಕಿ.ಮೀ. ದೂರದಲ್ಲಿರುವ ಪರಶುರಾಮಪುರ ಹೋಬಳಿಯಿಂದ ೭ ಕಿ.ಮೀ. ದೂರದಲ್ಲಿರುವ ಗ್ರಾಮವೇ "ಮಹದೇವಪುರ" ಈ ಗ್ರಾಮವು ಪ್ರಾಚೀನ ಗ್ರಾಮವಾಗಿದ್ದು, ವೇದಾವತಿ ನದಿಯ ಬಲದಂಡೆಯ ಮೇಲೆ ಇರುವ ಗ್ರಾಮವಾಗಿದೆ.

'ಮಹದೇವಪುರ' ಗ್ರಾಮವು ಆಂಧ್ರಪ್ರದೇಶದ ಗಡಿ ಭಾಗದಲ್ಲಿದೆ,

ಈ ಗ್ರಾಮವು ದ್ವೀಪವಾಗಿ ಪರಿಣಮಿಸಿದೆ. ಪೂರ್ವಕ್ಕೆ ಊರಿನ ಮೇಲ್ಭಾಗದಲ್ಲಿ ಚಿಕ್ಕ ಕೆರೆಯಿದ್ದು, ದಕ್ಷಿಣಕ್ಕೆ ಇನ್ನೊಂದು 'ದೊಡ್ಡಕೆರೆ' ಎಂದು ಕರೆಯಲ್ಪಟ್ಟಿರುವ ಕೆರೆ ಇದೆ. ಈ ಎರಡು ಕೆರೆಗಳು ಈ ಊರಿನ ನೀರಾವರಿಗೆ ನೀರುಣಿಸುತ್ತವೆ.

ಈ ಎರಡು ಕೆರೆಗಳ ಮಧ್ಯಭಾಗದಲ್ಲಿ ಗ್ರಾಮದ ಇಂದಿನ ಮನೆಗಳು ತೋಟಗಳು, ನೀರಾವರಿ ಜಮೀನಿನಿಂದ ಆವೃತ ವಾಗಿವೆ. ಮಳೆ ಬಂದು ಕೆರೆಗಳು ತುಂಬಿದರೆ ಈ ಗ್ರಾಮ ಸದಾ ಹಚ್ಚಹಸಿರಿನ ಪ್ರದೇಶವಾಗಿರುತ್ತದೆ; ಜೊತೆಗೆ **"ದ್ವೀಪ ವಾಗಿ"** ಕಂಡು ಬರುತ್ತದೆ.

ಈ ಗ್ರಾಮವು **ಶಾಸನಭರಿತ** ಪುರಾತನ ಗ್ರಾಮವಾಗಿದ್ದು, ಈ ಶಾಸನವು ತ್ರಿಭುವನಮಲ್ಲ ಮಲ್ಲಿದೇವ ಚೋಳ (೧೧೮೩–೧೧೯೬) ಮಹಾರಾಜರು ಭಂಡಾರಿ ಕೇತಣ್ಣನಿಗೆ ಕೆರೆಯ ಕೆಳಗಿನ ಗದ್ದೆಯನ್ನು ಉಂಬಳಿಯಾಗಿ ಕೊಟ್ಟ ವಿಚಾರವಿದೆ. ಹಾಗೂ ಈ ಶಾಸನದಲ್ಲಿ **"ಮಂಗಪೊಟಿ"** ಎಂದು ಈ ಗ್ರಾಮಕ್ಕೆ ಹಿಂದೆ ಹೆಸರಿತ್ತೆಂದು, ಅಗ್ರಹಾರ ವಾಗಿತ್ತೆಂದು, ೧೧೯೬ ಆಗಸ್ಟ್ ೫ನೇ ಗುರುವಾರ ರಚಿತವಾದ ಶಾಸನ ತಿಳಿಸುತ್ತದೆ. ಈ ಶಾಸನದ ಆಧಾರದಿಂದ ಗ್ರಾಮದ **"ಚಿಕ್ಕ ಕೆರೆ"** ೧೨ನೇ ಶತಮಾನಕ್ಕಿಂತಲೂ ಹಿಂದೆ ನಿರ್ಮಾಣ ಗೊಂಡಿತ್ತೆಂದು, ಪುರಾತನವಾದ ಕೆರೆ ಎಂದು ಹೇಳಬಹುದು. ಹಾಗೂ ಈ ಕೆರೆಯ ಪೂರ್ವ ಇತಿಹಾಸದ ಬಗ್ಗೆ ಅಧ್ಯಯನ ಮಾಡುತ್ತಿದ್ದೇನೆ.

* ಸಂಶೋಧನಾ ಅಧ್ಯಾಪಕರು, ಪ್ರಾಚೀನ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು–೬.

ಈ ಗ್ರಾಮದ ಇನ್ನೊಂದು ಶಾಸನ ನೊಳಂಬರ ಕಾಲದ ಪ್ರಭುರಾಮಮಂಗಲದ ಪ್ರಾಚೀನ ಶಾಸನ ದೊರೆತಿದೆ. ಈ ಶಾಸನದಿಂದ ನೊಳಂಬರ ವಂಶಾವಳಿ ತಿಳಿದು ಬರುತ್ತದೆ. ಈ ಗ್ರಾಮದ ಪಶ್ಚಿಮಕ್ಕೆ, ದೊಡ್ಡಕೆರೆಯ ಬಲದಂಡೆಯಲ್ಲಿ **'ಬೆಜ್ಜವಾಡಿ'** ಎಂಬ ಗ್ರಾಮವಿತ್ತೆಂದು, ಇದು ಪುರಾತನವಾದ ನಗರವಾಗಿತ್ತೆಂದು, ಇಂದಿಗೂ ಈ ಸ್ಥಳದಲ್ಲಿ ಅವಶೇಷಗಳು ದೊರೆಯುತ್ತವೆ ಎಂದು ಸ್ಥಳೀಯರು ಹೇಳುತ್ತಾರೆ. ಈ ನೆಲೆಯ ಬಗ್ಗೆಯೂ ಕೂಲಂಕಷ ಅಧ್ಯಯನ ಮಾಡುತ್ತಿದ್ದೇನೆ. ಈ ಗ್ರಾಮವು ೧೮೭೧ರ **ಮೈಸೂರು ಜನರಲ್ ಸೆನ್ಸಸ್ ಪ್ರಕಾರ** ಚಿತ್ರದುರ್ಗ ಜಿಲ್ಲೆಯ ಪಾವಗಡ ತಾಲ್ಲೂಕಿನ **ನಿಡಗಲ್ಲು ಹೋಬಳಿಗೆ** ಮಹದೇವಪುರವು ಸೇರಿತ್ತು. ಈ ಗ್ರಾಮವು ಇತಿಹಾಸ ಪ್ರಸಿದ್ಧ ಬ್ರಹ್ಮಗಿರಿ, ಚಂದ್ರವಳ್ಳಿಯಿಂದ ೭೦ ಕಿ.ಮೀ. ದೂರದಲ್ಲಿದೆ. ಗ್ರಾಮದ ಪಶ್ಚಿಮಕ್ಕೆ ಸುಮಾರು ೪ ಕಿ.ಮೀ ದೂರದಲ್ಲಿರುವ ೨೦ ಎಕರೆ ವಿಸ್ತೀರ್ಣದ ಒಂದು ನೆಲೆ, ಸುಮಾರು ೩ ಕಿ.ಮೀ. ದೂರದಲ್ಲಿರುವ ೧೦ ಎಕರೆಯ ಒಂದು ನೆಲೆ, ಊರಿನ ದಕ್ಷಿಣಕ್ಕೆ ೫ ಎಕರೆ ವಿಸ್ತೀರ್ಣದ ಒಂದು ನೆಲೆ, ಒಟ್ಟು ೩ ನೆಲೆಗಳು ಇದ್ದು, ಕ್ರಮವಾಗಿ ಮೊದಲನೆಯ ನೆಲೆಯನ್ನು **ಗುಮ್ಮನ ಗುಂಟೆ** ಅಥವಾ **ಶೆಟ್ಟರ ಕಟ್ಟೆಯ ಹಾಳೂರು** ಎಂದೂ, ಎರಡನೆಯ ನೆಲೆಯು ನಾಯಕರ **ಶಾಂತಮ್ಮನ ಹೊಲದ ಹಾಳೂರು** ಅಥವಾ **ಮಂದಲಪಲ್ಲಿ** ಎಂದೂ, ಮೂರನೇ ನೆಲೆಯನ್ನು **'ಹಾಳೂರು'** ಎಂದು ಕರೆಯುತ್ತಾರೆ.

ಈ ನೆಲೆಗಳಲ್ಲಿ **ಸೂಕ್ಷ್ಮಶಿಲಾಯುಗದ, ನೂತನ ಶಿಲಾಯುಗದ** ಮತ್ತು **ಬೃಹತ್‌ಶಿಲಾಯುಗದ** ಅವಶೇಷಗಳು ಮತ್ತು ಸಮಾಧಿಗಳು ಹಾಗೂ ವೀರಗಲ್ಲುಗಳು, ಪತ್ತೆ ಆಗಿವೆ.

**ಸೂಕ್ಷ್ಮಶಿಲಾಯುಗ:– (Microlithic Culture)**

ಒಂದನೇ ನೆಲೆಯಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಮಾನವನು ತನ್ನ ದೈನಂದಿನ ಜೀವನಕ್ಕೆ ಅಗತ್ಯವಾಗಿ ಬೇಕಾಗುವ ಆಯುಧಗಳನ್ನು ತಯಾರಿಸಲು ಬಳಸುವ ಬೆಣಚುಕಲ್ಲುಗಳು, ಆಯುಧ ತಯಾರಿಸಿಕೊಂಡು ಉಳಿದ ಶಿಲಾಗಟ್ಟಿಗಳು ಇನ್ನಿತರೆ ಆಯುಧಗಳು ಈ ನೆಲೆಯಲ್ಲಿ ಸಿಕ್ಕಿವೆ.

**ನವ ಶಿಲಾಯುಗ:– (Neolithic Culture)**

**ನೆಲೆ–೧:** ಈ ನೆಲೆಯು ಗ್ರಾಮದ ಪಶ್ಚಿಮಕ್ಕೆ ೪ ಕಿ.ಮೀ. ದೂರದಲ್ಲಿ ೨೦ ಎಕರೆ ವಿಸ್ತೀರ್ಣದಲ್ಲಿ ಇದೆ. ಈ ನೆಲೆಯು ಕಲ್ಲುಮಿಶ್ರಿತ ಕೆಂಪುಮಣ್ಣು, ಮರಳು ಮಿಶ್ರಿತ ಕೆಂಪು ಮಣ್ಣಿನಲ್ಲಿದೆ. ಈ ನೆಲೆಯ ಪಕ್ಕದಲ್ಲೇ ದೊಡ್ಡ ಕಟ್ಟೆಯಿದೆ.



ಪಿ. ಮಹದೇವಪುರದ ನೆಲೆಯಲ್ಲಿ ಸಿಕ್ಕ ಅವಶೇಷಗಳು

ಈ ನೆಲೆಯಲ್ಲಿ ಬೂದುಬಣ್ಣದ ಮಡಿಕೆ ಚೂರುಗಳು, ಮಡಿಕೆಯ ಕಂಠದ ಭಾಗಗಳು, ಧಾನ್ಯ ಸಂಗ್ರಹಣೆಯ ಕಣಜಗಳ ಭಾಗಗಳು, ನೀರಿನ ಹೂಜಿಗೆ ಬಳಸುವ ರಂಧ್ರವಿರುವ ಕೊಳವೆಭಾಗ, ಬೀಸುವ ಕಲ್ಲಿನ ಮುರಿದ ಭಾಗ, ಕುಟ್ಟುವ ಕಲ್ಲು, ಕವಣೆಕಲ್ಲು, ಅರೆಯುವ ಕಲ್ಲು, ಅಲಂಕಾರಿಕ ಮಡಿಕೆಯ ಕಂಠದ ಭಾಗಗಳು, ಚದುರ ಬಿಲ್ಲೆಗಳು, ಚಚ್ಚೌಕಾರದ ಬಿಲ್ಲೆ, ಹೆಬ್ಬೆರಳಿನಿಂದ ಒತ್ತಿರುವ ಬೂದು ಬಣ್ಣದ ಮಡಿಕೆ ಚೂರು, ಕಪ್ಪು ಮಿಶ್ರಿತ ಬೂದುಬಣ್ಣದ ಮಡಿಕೆಯ ಚೂರು, ಕೆಂಪು ಬಣ್ಣದ ಮಡಿಕೆಯ ಚೂರುಗಳು, ಆಯುಧ ಮಸೆಯುವ ಕಲ್ಲು ಹಾಗೂ ಸಾಬೂನು ಕಲ್ಲಿನಲ್ಲಿ ತಯಾರಿಸಿರುವ (Steatite Stone) ಪದಕ (Pendont) ಸಿಕ್ಕಿದೆ. ಇದು ೬ ಸೆಂ.ಮೀ. ಉದ್ದ, ೬ ಸೆಂ.ಮೀ. ಅಗಲ, ೨ ಸೆಂ.ಮೀ. ದಪ್ಪವಿದ್ದು, ಹಿಂಭಾಗದಲ್ಲಿ ಒಂದು ಮೊನೆ, ಮುಂಭಾಗದಲ್ಲಿ ೩ ಮೊನೆಗಳು, ಪದಕದ ಒಂದು ತುದಿಯಲ್ಲಿ ರಂಧ್ರವಿದೆ. ಈ ಪದಕವನ್ನು ಅಲಂಕಾರದ ಆಭರಣವಾಗಿ ಕೊರಳಿಗೆ ಹಾಕಿಕೊಳ್ಳಲು ಬಳಸಿರಬಹುದಾಗಿದೆ. ಮತ್ತು ಅಲಂಕಾರಕ್ಕಾಗಿ ಬಳಸಿದ ಗೆರೆ, ಗೆರೆಗಳು ಇರುವ ೨ ಸೆಂ.ಮೀ ಅಗಲವಿರುವ, ಚಿಕ್ಕ ರಂಧ್ರವಿರುವ ಕಪ್ಪೆ ಚಿಪ್ಪು ಸಿಕ್ಕಿದೆ. ಇದನ್ನು ಅಲಂಕಾರ ಕ್ಕಾಗಿ ಪದಕದ ಹಾಗೆ ಕೊರಳಿಗೆ ಹಾಕಿಕೊಂಡಿರ ಬಹುದಾಗಿದೆ. ಈ ತರಹದ್ದು ಅಲಂಕಾರಕ್ಕಾಗಿ ಬಳಸಿದ, ಸಿಕ್ಕಿರುವ ರಂಧ್ರವಿರುವ ಕಪ್ಪೆ ಚಿಪ್ಪು **ಬ್ರಹ್ಮನಾಬಾದ್, ತಕ್ಷಶಿಲಾ** ನೆಲೆಗಳಲ್ಲಿಯೂ ಸಹಾ ದೊರೆತಿವೆ.

ಈ ನೆಲೆಯಲ್ಲಿ ದುಂಡಾದ ರಂಧ್ರವಿರುವ (Ringstone) ಮುರಿದ ಸುಣ್ಣಕಲ್ಲಿನಲ್ಲಿ (Lime stone) ತಯಾರಿಸಿದ ಆಯುಧ ಸಿಕ್ಕಿದೆ. ಈ ಕಲ್ಲು ವ್ಯವಸಾಯಕ್ಕೆ ಬಳಸಿದ ಆಯುಧವಾಗಿದೆ. ಈ ನೆಲೆಯನ್ನು ಇಂದು ವ್ಯವಸಾಯಕ್ಕೆ ಅಳವಡಿಸಲಾಗಿದೆ. ಈ ನೆಲೆಯಲ್ಲಿರುವ ಒಂದು ದೊಡ್ಡ ಹಾಳು ಭಾವಿಯನ್ನು ನೀರಿಗೋಸ್ಕರ ಮಾಡಿಕೊಂಡಿರ

ಬಹುದಾಗಿದೆ. ಹಾಗೂ ಆಯುಧ ತಯಾರಿಸಿಕೊಳ್ಳಲು ಚಕ್ಕೆ ತೆಗೆದ ಅಪೂರ್ಣಗೊಂಡ ಕೊಡಲಿಯ ತುಂಡಾದ ಆಯುಧ ಸಿಕ್ಕಿದೆ. ಹಾಗೂ ನಯ ಮಾಡಿದ ಕಲ್ಲುಗಳು ಹಾಗೂ ಆಯುಧ ತಯಾರಿಸಲು ಚಕ್ಕೆತೆಗೆದು ಉಳಿದ ಕಲ್ಲುಗಳು ನೆಲೆಯಲ್ಲಿ ಕಂಡು ಬರುತ್ತವೆ.

**ನೆಲೆ–೨:** ಈ ನೆಲೆಯು ಊರಿನಿಂದ ೩ ಕಿ.ಮೀ ದೂರದಲ್ಲಿದೆ. ಮಹದೇವಪುರದ ಕೆರೆಗಳಿಂದ ಬಂದ ಹಳ್ಳದ ಎಡದಂಡೆಯ ಮೇಲೆ ನೆಲೆಯಿದೆ. ನೆಲೆಯು ಕೆಂಪು ಮತ್ತು ಮರಳು ಮಿಶ್ರಿತ ಕಲ್ಲು, ಮಣ್ಣಿನಿಂದ ಕೂಡಿದ ಭೂಮಿಯಿದೆ. ಬೂದುಬಣ್ಣದ ಮಡಿಕೆ ಚೂರು, ಬೂದು ಮಿಶ್ರಿತ ಕಪ್ಪು ಮಡಿಕೆ ತುಂಡುಗಳು, ಕೆಂಪು ಮಡಿಕೆ ತುಂಡುಗಳು, ಕವಡೆಕಲ್ಲುಗಳು, ಕುಟ್ಟುವ ಕಲ್ಲುಗಳು, ಅರೆಯುವ ಕಲ್ಲುಗಳು ಧಾನ್ಯ ತುಂಬುವ ಕಣಜಗಳ ಮಡಿಕೆಯ ಭಾಗಗಳು ಸಿಕ್ಕಿವೆ. ಈ ನೆಲೆಯನ್ನು ಕೃಷಿಗೆ ಅಳವಡಿಸಲಾಗಿದೆ.

**ನೆಲೆ–೩:** ಈ ನೆಲೆಯು ಮಹದೇವಪುರ– ಅಮರಾಪುರ ರಸ್ತೆಯ ಪಕ್ಕದಲ್ಲಿದೆ. ಈ ನೆಲೆಯು ಮಹದೇವಪುರದ ದೊಡ್ಡಕೆರೆಗೆ ಹರಿದು ಹೋಗುವ ಹಳ್ಳದ ಬಲದಂಡೆಯ ಮೇಲಿದೆ. ಈ ನೆಲೆಯಲ್ಲಿ ಕೆಂಪು ಮತ್ತು ಕಲ್ಲುಮಿಶ್ರಿತ ಕೆಂಪುಮಣ್ಣಿನ ಭೂಭಾಗದಲ್ಲಿದೆ. ಬೂದುಬಣ್ಣದ ಮಡಿಕೆಯ ತುಂಡುಗಳು ಕಪ್ಪುಮಿಶ್ರಿತ ಬೂದುಬಣ್ಣದ ಮಡಿಕೆ ಚೂರುಗಳು, ಕುಟ್ಟುವ ಕಲ್ಲುಗಳು, ಕವಣೆಕಲ್ಲುಗಳು ಸಿಕ್ಕಿವೆ. ಈ ನೆಲೆಯನ್ನು ಕೃಷಿಗೆ ಅಳವಡಿಸಲಾಗಿದೆ.

*** ಬೃಹತ್ ಶಿಲಾಯುಗ:–** (Megalithic Culture)

**ನೆಲೆ–೧:** ಈ ನೆಲೆಯಲ್ಲಿ ಈ ಸಂಸ್ಕೃತಿಯ ಮಾನವನಿಗೆ ಸಂಬಂಧಿಸಿದ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಮಿಶ್ರಿತ ಮಡಿಕೆ ತುಣುಕುಗಳು, ಮಡಿಕೆಯ ತಳಭಾಗಗಳು, ಕಂಠದ ಭಾಗಗಳು, ಕೆಂಪುಬಣ್ಣದ ೫ ಚದುರ ಬಿಲ್ಲೆಗಳು, ನಯಗೊಳಿಸಿದ ಕಪ್ಪು ಮತ್ತು ಕೆಂಪು ಮಡಿಕೆಯ ತುಂಡುಗಳು, ಮೂಳೆಯ ಭಾಗಗಳು, ಹಲ್ಲಿನ ಭಾಗಗಳು, ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಕವಣೆಕಲ್ಲು, ಕುಟ್ಟುವ ಕಲ್ಲು, ನೀಲಿ ಬಣ್ಣದ ಗಾಜಿನ ಬಳೆ ತುಂಡು, ಹಳದಿ ಬಣ್ಣದ ೨೨ ಮಣಿಗಳು ೧ ಸೆಂ.ಮೀ. ಉದ್ದ, ೧/೨ ಸೆಂ.ಮೀ. ಅಗಲವಿದ್ದ ಚಿಕ್ಕ ರಂಧ್ರವಿದೆ. ಈ ನೆಲೆಯ ಪಕ್ಕದಲ್ಲಿ ಪೂರ್ವ ಪಶ್ಚಿಮವಾಗಿ ದೊಡ್ಡ ಕಟ್ಟೆಯನ್ನು ಕಟ್ಟಿಕೊಂಡು ನೀರು ನಿಲ್ಲಲು ಮಾಡಿದ್ದಾರೆ. ಈ ಕಟ್ಟೆಯ ಪಕ್ಕದಲ್ಲೇ ಡಾಲ್‌ಮನ್ ಮಾದರಿಯ ಹಾಳಾದ ಸಮಾಧಿಗಳು ಇವೆ. ಅಂದರೆ ಈ ಕಟ್ಟೆಯನ್ನು ಈ ಸಂಸ್ಕೃತಿಯ ಜನರು ಹಾಕಿದ್ದಾರೆಯೇ ಇಲ್ಲ, ನಂತರದ ದಿನಗಳಲ್ಲಿ ಹಾಕಿದ್ದಾರೆಯೇ ಎಂಬುದನ್ನು ಕೂಲಂಕಷ ಅಧ್ಯಯನ ಮಾಡಬೇಕಾಗಿದೆ. ಸ್ಥಳೀಯರಿಗೆ ಈ ಬಗ್ಗೆ ಏನೂ ಗೊತ್ತಿಲ್ಲ.

**ಸಮಾಧಿಗಳು:–** ಈ ನೆಲೆಯಲ್ಲಿ ಡಾಲ್‌ಮನ್ ಸಿಸ್ಟ್ ಮಾದರಿಯ ೧೦ ಸಮಾಧಿಗಳು ಇವೆ. ಇದೇ ಮಾದರಿಯ ೧೦ಕ್ಕೂ ಹೆಚ್ಚು ಸಮಾದಿಗಳನ್ನು ಚಂಗಲ್‌ಪೇಟೆ ಜಿಲ್ಲೆಯ ಹತ್ತಿರವಿರುವ ಸನ್ನೂರು (Sannur) ಎಂಬಲ್ಲಿ ಕಂಡು ಬಂದಿವೆ. ಈ ಸರಹದ್ದಿನಲ್ಲಿ ಈ ಮಾದರಿಯ ಸಮಾಧಿ ವಿಶೇಷವಾದುದು ಎಂದು ಡಾ. ಅ. ಸುಂದರ ಅಭಿಪ್ರಾಯ ಪಟ್ಟಿದ್ದಾರೆ. ಮತ್ತು ನೆಲೆಯಿಂದ ೧/೪ ಕಿ.ಮೀ. ದೂರದಲ್ಲಿ **ಮೆನ್‌ಹಿರ್** ಮಾದರಿಯ ಸಮಾಧಿ ಇದ್ದು, ಭೂಮಿಯ ಮೇಲ್ಭಾಗದಲ್ಲಿ ೫ ಅಡಿ ಎತ್ತರವಿದೆ, ಗ್ರಾನೈಟ್ ಕಲ್ಲಿನಲ್ಲಿದೆ. ಈ ಮಾದರಿಯ ಸಮಾಧಿಗಳು ಕೇರಳ, ಬಳ್ಳಾರಿ, ರಾಯಚೂರು, ಗುಲ್ಬರ್ಗ ನೆಲೆಗಳಲ್ಲಿ ಕಂಡು ಬರುತ್ತವೆ. ಮತ್ತು ನಾನು ಬೇರೆ ನೆಲೆಗಳಲ್ಲಿ ಈ ತಾಲ್ಲೂಕಿನಲ್ಲೇ ಪತ್ತೆ ಹಚ್ಚಿದ್ದೇನೆ.

ಈ ನೆಲೆಯಲ್ಲಿ ವಿವಿಧ ನಮೂನೆಯ ಮಣಿಗಳು, ಮಣಿಸರಗಳು, ಕಬ್ಬಿಣದ ಕೊಡಲಿ, ಇನ್ನಿತರೆ ವಿವಿಧ ನಮೂನೆ ಅವಶೇಷಗಳು ಸಿಕ್ಕುತ್ತವೆ ಎಂದು ಹೊಲದ ಒಡೆಯ ನಿಂದಯ್ಯ ತಿಳಿಸುತ್ತಾರೆ. ಈ ಹೊಲದಲ್ಲಿ ನೇಗಿಲು ಹೊಡೆಯುವಾಗ ದೊಡ್ಡ ದೊಡ್ಡ ಗುಂಡುಗಳು ತಾಗುತ್ತವೆ, ಅವನ್ನು ಕಿತ್ತು ಹಾಕುತ್ತೇವೆ. ಆ ಜಾಗದಲ್ಲಿ ದೊಡ್ಡ ದೊಡ್ಡ ಮಡಿಕೆಗಳು, ಬೂದಿ, ಮಣ್ಣಿನ ಮಣಿಗಳು, ಮೂಳೆಗಳು ಸಿಕ್ಕುತ್ತವೆ ಎಂದು ಹೇಳುತ್ತಾರೆ.

*** ನೆಲೆ–೨:**

ಈ ನೆಲೆಯಲ್ಲಿ ಕೆಂಪು, ಕಪ್ಪು, ಕೆಂಪು ಕಪ್ಪು ಮಿಶ್ರಿತ ಮಡಿಕೆ ಚೂರುಗಳು, ಮಡಿಕೆಯ ತಳಭಾಗಗಳು, ಕಂಠದ ಭಾಗಗಳು, ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಕವಣೆಕಲ್ಲು, ಕುಟ್ಟುವಕಲ್ಲು, ಅರೆಯುವ ಕಲ್ಲುಗಳು ಸಿಕ್ಕಿವೆ.

**ಸಮಾಧಿಗಳು:** ಡಾಲ್‌ಮನ್ ಸಿಸ್ಟ್ ಮಾದರಿಯ ೧೦ ಸಮಾಧಿಗಳು ಇವೆ. ಈ ಸಮಾಧಿಗಳನ್ನು ನಿಧಿಗಳ್ಳರು ಕಿತ್ತು ಹಾಳು ಮಾಡಿದ್ದಾರೆ. ಈ ಸಮಾಧಿಗಳ ಹತ್ತಿರ ವೀರಗಲ್ಲುಗಳಿವೆ.

***ನೆಲೆ–೩:** ಈ ನೆಲೆಯಲ್ಲಿ ಕೆಂಪು, ಕಪ್ಪು,ಕೆಂಪು ಮತ್ತು ಕಪ್ಪು ಮಿಶ್ರಿತ ಮಡಿಕೆಯ ತುಣುಕುಗಳು, ಸ್ವಲ್ಪ ಕಬ್ಬಿಣ ಕರಗಿದ ನಂತರ ಉಳಿಯುವ ಕಿಟ್ಟ ದೊರಕಿದೆ.

**ಸಮಾಧಿಗಳು:** ಡಾಲ್‌ಮನ್ ಮಾದರಿಯ ೪ ಸಮಾಧಿಗಳು ಇದ್ದು ಈ ಸಮಾಧಿಗಳನ್ನು ಕಿತ್ತು ಹಾಕಿದ್ದಾರೆ.

***ವೀರಗಲ್ಲುಗಳು:** ಈ ನೆಲೆಯಲ್ಲಿ ೨ **ತುರುಗಳ್ಳರ ವೀರಗಲ್ಲುಗಳು** ಇವೆ. ಒಂದು (೧) ವೀರಗಲ್ಲು, ಮಣ್ಣಿನಲ್ಲಿ ಸಿಕ್ಕಿಕೊಂಡಿದೆ. ಇದು ತುರುಗಳ್ಳರ ವೀರಗಲ್ಲು ಒಂದು ಹಂತದಲ್ಲಿ, ಗ್ರಾನೈಟ್ ಕಲ್ಲಿನಲ್ಲಿದೆ.



ಪಿ. ಮಹದೇವಪುರದ ನೆಲೆ ೩ರಲ್ಲಿ ಕಂಡುಬಂದಿರುವ ತುರುಗಳ್ಳರ ವೀರಗಲ್ಲು

**೨ನೇ ವೀರಗಲ್ಲು:** ಕಪ್ಪು ಗ್ರಾನೈಟ್ ಕಲ್ಲಿನಲ್ಲಿದ್ದು, ಒಂದೇ ಹಂತದಲ್ಲಿದೆ. ಈ ವೀರಗಲ್ಲಿನಲ್ಲಿ ಇಬ್ಬರು ವೀರರ, ತುರುಗಳ ಶಿಲ್ಪವಿದೆ. ವೀರಗಲ್ಲಿನ ಬಲಭಾಗದಲ್ಲಿ ಒಂದು ಹಸು ಕರುವಿಗೆ ಹಾಲು ಕುಡಿಸುತ್ತಿದೆ. ಈ ಹಸುವಿನ ಮೇಲೆ ಒಂದು ತುರು ತಲೆ, ಬಾಲವನ್ನೆತ್ತಿ ಗಾಬರಿಯಿಂದ ನೋಡುತ್ತಿದೆ. ಮುಂದೆ ಒಬ್ಬ ವೀರ ಎಡಗೈಯಲ್ಲಿ ಕೊಡಲಿಯನ್ನು, ಬಲಗೈಯಲ್ಲಿ ದಂಡವನ್ನು ಹಿಡಿದಿದ್ದಾನೆ. ವೀರ ಕಂಠಾಭರಣ, ನೆರಿಗೆ ಯಾಕಾರದ ಉಡುಗೆ (ವೀರಗಚ್ಚೆ) ಅಲಂಕಾರಿಕವಾಗಿ ತುರುಬು ಕಟ್ಟಿ ಕೊಂಡಿದ್ದಾನೆ, ಕೈಕಡಗ, ತೋಳ್ಬಂದಿ ಧರಿಸಿದ್ದಾನೆ.

ಇನ್ನೊಬ್ಬ ವೀರ ಬಲಗೈಯಲ್ಲಿ ಬಿಲ್ಲು, ಎಡಗೈಯಲ್ಲಿ ಬಾಣ ಹಿಡಿದಿದ್ದಾನೆ. ಕೊರಳಿಗೆ ಕಂಠಾಭರಣ, ಕೈಕಡಗ, ತೋಳ್ಬಂದಿ, ಕಾಲ್ಕಡಗ, ಅಲಂಕಾರಿಕ ನೇರಿಗೆಯಾಕಾರದ ಉಡುಪು (ವೀರಗಚ್ಚೆ) ಧರಿಸಿದ್ದಾನೆ. ತುರುಬು ಕಟ್ಟಿಕೊಂಡಿದ್ದಾನೆ. ಮುಂಭಾಗದಲ್ಲಿ ಒಂದು ತುರು ನಿಂತಿದೆ. ಮೇಲೆ ಸೂರ್ಯ, ಚಂದ್ರರ ಮಧ್ಯದಲ್ಲಿ ಲಿಂಗ, ಬಸವ ಶಿಲ್ಪವಿದೆ.

ಈ ವೀರಗಲ್ಲು ತುರುಗಳ್ಳರ ವೀರಗಲ್ಲಾಗಿದ್ದು, ಇಬ್ಬರು ವೀರರು ಬೇರೆ ಬೇರೆ ಆಯುಧ ಹಿಡಿದಿರುವುದರಿಂದ ಇದರಲ್ಲಿ ತುರುಗಳ್ಳರು ಯಾರು ಎಂದು ಹೇಳಲು ಆಗುತ್ತಿಲ್ಲ, ಇಲ್ಲಿ ಇಬ್ಬರು ವೀರರಾಗಿದ್ದು ತುರುಗಳ್ಳರನ್ನು ಹೊಡೆದೂಡಿ ತುರುಗಳನ್ನು ರಕ್ಷಿಸಿ ಇವರು ವೀರ ಸ್ವರ್ಗ ಸೇರಿರಬಹುದು. ಇಲ್ಲಿ ಒಬ್ಬ ತುರುಗಳನ್ನು ಮೇಯಿಸಲು ಬಂದ ದನಕಾಯುವನಾಗಿದ್ದು, ಇನ್ನೊಬ್ಬ ವೀರನಾಗಿರಬಹುದು. ಒಟ್ಟಿನಲ್ಲಿ ಶಾಸನ ಇಲ್ಲದಿರುವುದರಿಂದ ಸ್ಪಷ್ಟವಾಗಿ ಹೇಳುವುದು ಕಷ್ಟಕರ.

**೩ನೆಯ ವೀರಗಲ್ಲು:** ೨ನೇ ನೆಲೆಯಲ್ಲಿದೆ, ಈ ನೆಲೆಯು ಮಹದೇವಪುರದಿಂದ ೩ ಕಿ.ಮೀ. ದೂರದಲ್ಲಿದ್ದು ಕಪ್ಪು ಗ್ರಾನೈಟ್ ಕಲ್ಲಿನಲ್ಲಿದೆ.



ಪಿ. ಮಹದೇವಪುರದ ನೆಲೆ ೨ನೇ ನೆಲೆಯಲ್ಲಿರುವ ಮಹಾಸತಿಕಲ್ಲು ಶಿಲ್ಪ

**ಮಹಾಸತಿಕಲ್ಲು:** ವೀರ ಕೈಯಲ್ಲಿ ಭರ್ಜಿ ಹಿಡಿದು ನೆಲದತ್ತ ತೋರಿಸಿದ್ದಾನೆ. ಕೈಕಡಗ, ತೋಳ್ಬಂದಿ, ಕಂಠಾಭರಣ, ಕಾಲ್ಕಡಗ, ವೀರಗಚ್ಚೆ, ಕಿವಿಆಭರಣ, ತುರುಬನ್ನು ಮೇಲಕ್ಕೆ ಕಟ್ಟಿಕೊಂಡಿದ್ದಾನೆ. ಮುಖ ದುಂಡಾಗಿದೆ. ಈ ಶಿಲ್ಪವು ೪ ಅಡಿ ಉದ್ದ, ೨ ಅಡಿ ಅಗಲ ಇದೆ. ಶಿಲ್ಪ ಸ್ಪಷ್ಟವಾಗಿದೆ.

ಮಹಾಸತಿ ವೀರನ ಪಕ್ಕದಲ್ಲಿ ಎರಡು ಕೈಗಳನ್ನು ಮೇಲಕ್ಕೆತ್ತಿ ಎರಡು ಕೈಗಳಲ್ಲಿ ನಿಂಬೆ ಹಣ್ಣು ಹಿಡಿದು ನಿಂತಿದ್ದಾಳೆ. ಕೊರಳಲ್ಲಿ ಸರ, ಗುಂಡುಗಳ ಮಣಿಸರ, ಕಿವಿಗಳಿಗೆ ದೊಡ್ಡ ಆಭರಣಗಳು, ತುರುಬನ್ನು ಬಲಭಾಗಕ್ಕೆ ಕಟ್ಟಿಕೊಂಡಿದ್ದಾಳೆ. ತುರುಬಿಗೆ ಕೇದಿಗೆ ದಳಗಳನ್ನು ಸಿಕ್ಕಿಸಿ ಕೊಂಡಿದ್ದಾಳೆ. ತೋಳ್ಬಂದಿ, ಕೈಬಳೆಗಳು, ಮೊಳಕಾಲಿನವರೆಗೆ ಅಲಂಕಾರದ ಉಡುಪು, ಕಾಲ್ಕಡಗ ಧರಿಸಿದ್ದಾಳೆ. ಈ ಶಿಲ್ಪ ವೀರ ಮಾಸ್ತಿ ಕಲ್ಲು ಆಗಿದೆ. ವೀರ ಭರ್ಜಿ ಹಿಡಿದಿರುವುದರಿಂದ ಯಾವ ಕಾರಣಕ್ಕಾಗಿ ಮರಣ ಹೊಂದಿದ ಎಂಬುದನ್ನು ಸ್ಪಷ್ಟವಾಗಿ ಹೇಳಲಾಗುತ್ತಿಲ್ಲ.

**೪ನೇ ವೀರಗಲ್ಲು:–** ೨ನೇ ನೆಲೆಯಲ್ಲಿದೆ. ಬಿಳಿ ಗ್ರಾನೈಟ್ ಕಲ್ಲಿನಲ್ಲಿದೆ. ಶಿಲ್ಪವು ೨ಅಡಿ ಉದ್ದ, ೨ಅಡಿ ಅಗಲವಿದೆ. ಶಿಲ್ಪವು ಅಸ್ಪಷ್ಟವಾಗಿದೆ.

**ಮಹಾಸತಿಕಲ್ಲು:–** ವೀರ ಎರಡು ಕೈಗಳಲ್ಲಿ ಖಡ್ಗವನ್ನು ಹಿಡಿದು ಬಲಭುಜದ ಮೇಲೆ ಇಟ್ಟುಕೊಂಡಿದ್ದಾನೆ. ತೋಳ್ಬಂದಿ, ಕಾಲ್ಕಡಗ, ಧರಿಸಿದ್ದು, ತುರುಬನ್ನು ಎಡಭಾಗಕ್ಕೆ ಕಟ್ಟಲಾಗಿದೆ. ಕಂಠಾಭರಣ ಧರಿಸಿದ್ದಾನೆ.

ಮಹಾಸತಿ ಎರಡು ಕೈಗಳನ್ನು ಮೇಲಕ್ಕೆತ್ತಿ ನಿಂಬೆ ಹಣ್ಣು ಹಿಡಿದಿದ್ದಾಳೆ, ತುರುಬನ್ನು ವಿಶಾಲವಾಗಿ ಹಿಂದಕ್ಕೆ ಕಟ್ಟಿಕೊಂಡಿದ್ದಾಳೆ, ತುರುಬಿಗೆ ಕೇದಿಗೆ ಸಿಕ್ಕಿಸಿಕೊಂಡಂತೆ



ಪಿ. ಮಹದೇವಪುರದ ೨ನೆ ನೆಲೆಯಲ್ಲಿರುವ ಮಹಾಸತಿಕಲ್ಲು ಶಿಲ್ಪ

ಕಾಣುತ್ತದೆ. ಕೊರಳಿಗೆ ಗುಂಡುಗಳ ಸರ ಧರಿಸಿದಂತೆ ಇದೆ. ತೋಳ್ಬಂದಿ ಧರಿಸಿದ್ದಾಳೆ; ನೆರಿಗೆಯಾಕಾರದಲ್ಲಿ ಮುಂಗಾಲಿನವರೆಗೂ ಉಡುಪು ಧರಿಸಿದ್ದಾಳೆ. ಎಡ ಮತ್ತು ಬಲಗೈಗಳ ಪಕ್ಕದಲ್ಲಿ ಉಡುಪು ಕೆಳಗಡೆವರೆಗೆ ನೇತಾಡುತ್ತಿದೆ.

**೫ನೇ ವೀರಗಲ್ಲು:** ೨ನೇ ನೆಲೆಯಲ್ಲಿದೆ. ಬಿಳಿ ಗ್ರಾನೈಟ್ ಕಲ್ಲಿನಲ್ಲಿದೆ. ಶಿಲ್ಪವು 2.5 ಅಡಿ ಉದ್ದ, 2.5 ಅಡಿ ಅಗಲ ಇದ್ದು, ಕೆಲವು ಅಂಶಗಳು ಅಸ್ಪಷ್ಟವಾಗಿವೆ.



ಪಿ. ಮಹದೇವಪುರದ ೨ನೆ ನೆಲೆಯಲ್ಲಿರುವ ಮಹಾಸತಿಕಲ್ಲು ಶಿಲ್ಪ

**ಮಹಾಸತಿಕಲ್ಲು:** ವೀರ ಬಲಗೈಯನ್ನು ಮೇಲಕ್ಕೆತ್ತಿ ಖಡ್ಗವನ್ನು ಮೇಲಕ್ಕೆತ್ತಿದ್ದಾನೆ, ಎಡಗೈಯನ್ನು ಕೆಳಗಡೆ ಇಳಿಬಿಟ್ಟಿದ್ದಾನೆ. ಸೊಂಟದಲ್ಲಿ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ವೀರಗಲ್ಲು ಗಿಡ್ಡಾಗಿದೆ. ಮತ್ತು ವೀರ ತೋಳ್ಬಂದಿ, ಕೈಕಡಗ, ಕಂಠಾಭರಣ, ಶಿಲ್ಪದ ಎಡಭಾಗಕ್ಕೆ ತುರುಬು ಕಟ್ಟಿಕೊಂಡಿದ್ದಾನೆ. ಕಿವಿ ಆಭರಣಗಳು ಅಸ್ಪಷ್ಟವಾಗಿವೆ.

ಮಹಾಸತಿ ಶಿಲ್ಪದಲ್ಲಿ ಎಡಭಾಗದಲ್ಲಿ ಆ ಸತಿ ಕೈಮುಗಿದುಕೊಂಡು ನಿಂತಿದ್ದಾಳೆ. ಮುಂಗಾಲಿನವರೆಗೂ ನೆರಿಗೆಯಾಕಾರದ ಉಡುಪು ಧರಿಸಿದ್ದಾಳೆ. ಕೊರಳ ಹತ್ತಿರ ಸರವಿದ್ದು, ಸ್ವಲ್ಪ ಕೆಳಭಾಗದಲ್ಲಿ ಪದಕ ಹಾಕಿದಂತೆ ಇದೆ. ಒಂದೊಂದು ಕೈಯಲ್ಲಿ ಎರಡೆರಡು ತೋಳ್ಬಂದಿಗಳನ್ನು, ಕೈತುಂಬ ಬಳೆಗಳನ್ನು ಧರಿಸಿದ್ದಾಳೆ, ತುರುಬನ್ನು ಎಡಭಾಗಕ್ಕೆ ಕಟ್ಟಿಕೊಂಡಿದ್ದಾಳೆ.

**೬ನೆಯ ವೀರಗಲ್ಲು:** ೨ನೇ ನೆಲೆಯಲ್ಲಿದೆ. ಬಿಳಿ ಗ್ರಾನೈಟ್ ಕಲ್ಲಿನಲ್ಲಿದೆ. ಶಿಲ್ಪವು ೫ ಅಡಿ ಉದ್ದ, ೨ ಅಡಿ ಅಗಲವಿದೆ.



ಪಿ. ಮಹದೇವಪುರದ ೨ನೆ ನೆಲೆಯಲ್ಲಿರುವ ಮಹಾಸತಿಕಲ್ಲು ಶಿಲ್ಪ

**ಮಹಾಸತಿಕಲ್ಲು:** ವೀರ ಬಲಗೈಯನ್ನು ಎದೆಯ ಮೇಲೆ ಇಟ್ಟುಕೊಂಡು, ಕೈಯಲ್ಲಿ ಖಡ್ಗ ಹಿಡಿದು ಭುಜದ ಮೇಲೆ ಇಟ್ಟಿದ್ದಾನೆ. ವೀರಗಚ್ಚೆ ಧರಿಸಿದ್ದಾನೆ. ಕಾಲ್ಕಡಗ, ಕೈಕಡಗ, ತೋಳ್ಬಂದಿ, ಕಿವಿ ಆಭರಣಗಳು, ಧರಿಸಿದ್ದಾನೆ. ತುರುಬನ್ನು ನೆತ್ತಿಯ ಮೇಲೆ ಕಟ್ಟಿದ್ದಾನೆ. ದುಂಡುಮುಖ ಮೀಸೆ ಸ್ಪಷ್ಟವಾಗಿ ಕಾಣುತ್ತದೆ. ಎಡಗೈಯನ್ನು ಮಗನ ತಲೆಯ ಮೇಲೆ ಇಟ್ಟಿದ್ದಾನೆ.

ಮಗ/ಮಗಳು ತಂದೆಯ ಎಡಗಾಲನ್ನು ಬಲಗೈಯಿಂದ ಹಿಡಿದಿದ್ದಾನೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಮಗುವು ಕಿವಿ ಆಭರಣಗಳು, ವೀರಗಚ್ಚೆ, ಸೊಂಟಪಟ್ಟಿ, ಕಂಠಾಭರಣಗಳು ಧರಿಸಿದಂತೆ ಇದೆ.

ಮಹಾಸತಿಯು ಶಿಲ್ಪದ ಎಡಭಾಗದಲ್ಲಿ ನಿಂತಿದ್ದು, ಬಲಗೈಯನ್ನು ಮೇಲಕ್ಕೆ ಮಡಚಿ ಕೈಯಲ್ಲಿ ನಿಂಬೆಹಣ್ಣೋ ಅಥವಾ ಆಯುಧ (ಅಸ್ಪಷ್ಟವಾಗಿದೆ) ಹಿಡಿದಿದ್ದಾಳೆ. ಎಡಗೈಯನ್ನು ಕೆಳಕ್ಕೆ ಇಳಿಬಿಟ್ಟಿದ್ದಾಳೆ. ನೆರಿಗೆಯಾಕಾರದ ಉಡುಪು ಮುಂಗಾಲಿನವರೆಗೂ ಧರಿಸಿದ್ದಾಳೆ. ಕೈತುಂಬ ಬಳೆಗಳು, ತೋಳ್ಬಂದಿ, ಕೊರಳಸರ, ಕಿವಿ ಆಭರಣಗಳು ಎಡಭಾಗಕ್ಕೆ ತುರುಬು ಕಟ್ಟಿಕೊಂಡಿದ್ದಾಳೆ. ಇದ್ದು ಶಿಲ್ಪ ಅಸ್ಪಷ್ಟವಾಗಿದೆ.

**೭ನೇಯ ವೀರಗಲ್ಲು:** ಬಿಳಿ ಗ್ರಾನೈಟ್ ಕಲ್ಲಿನ ಈ ವೀರಗಲ್ಲು ಊರಿನ ಚಿಕ್ಕಕೆರೆಯ ಕೆರೆ ಏರಿಯ ಬಲಕೋಡಿಯ ಪಕ್ಕದಲ್ಲಿ ಇದೆ. ಈ ಶಿಲ್ಪವು ೪ ಅಡಿ ಉದ್ದ, ೨ ಅಡಿ ಅಗಲವಿದೆ. ವೀರ ಬಲಗೈಯಲ್ಲಿ ಬಿಲ್ಲು, ಎಡಗೈಯಲ್ಲಿ ಬಾಣ ಹಿಡಿದು ನಿಂತಿದ್ದಾನೆ. ವೀರನ ಬಲಭಾಗದ ಸೊಂಟದಲ್ಲಿ ಚಿಕ್ಕ ಬಾಕು ಸಿಕ್ಕಿಸಿಕೊಂಡಿದ್ದಾನೆ. ವೀರಗಚ್ಚೆ ಧರಿಸಿದ್ದಾನೆ. ಕಾಲ್ಕಡಗ, ಕೈ ಕಡಗ, ಕಿವಿ ಆಭರಣಗಳು, ಗುಂಗುರು ಕೊದಲು, ಜಡೆಯನ್ನು ಹೆಣೆದು ಬಲಭಾಗದಲ್ಲಿ ಇಳಿಬಿಟ್ಟಿದ್ದಾನೆ. ಈ ವೀರಗಲ್ಲಿಗೆ ಈ ಊರಿನ ಜನರು **'ವೀರಗಾರರಗುಡಿ'** ಎಂದು ಗುಡಿಕಟ್ಟಿ ಪೂಜಿಸುತ್ತಿದ್ದಾರೆ.

**೮ನೇಯ ವೀರಗಲ್ಲು:** ಈ ಶಿಲ್ಪವು ಊರಿನ ವೀರಭದ್ರಸ್ವಾಮಿ ದೇವಾಲಯದ ಪೌಳಿಗೋಡೆಯ ಪಕ್ಕದ ಕಟ್ಟೆಯ ಮೇಲೆ ಇದೆ. ಈ ಶಿಲ್ಪವು ಬಿಳಿ ಕಲ್ಲಿನಲ್ಲಿದೆ. ೩ ಅಡಿ ಉದ್ದ, ೨ ಅಡಿ ಅಗಲವಿದೆ.

**ಮಹಾಸತಿಕಲ್ಲು:** ವೀರ ಶಿಲ್ಪದ ಎಡಭಾಗದಲ್ಲಿ ಕುದುರೆಯ ಮೇಲೆ ಕುಳಿತು ಎಡಗೈಯಲ್ಲಿ ಲಗಾಮು ಹಿಡಿದಿದ್ದಾನೆ. ಬಲಗೈಯಲ್ಲಿ ಖಡ್ಗವನ್ನು ಹಿಡಿದು ಮೇಲಕ್ಕೆತ್ತಿದ್ದಾನೆ. ವೀರ ಕಾಲ್ಕಡಗ, ಕೈಕಡಗ, ವೀರಗಚ್ಚೆ ಧರಿಸಿದ್ದಾನೆ. ಕಿವಿಗಳಿಗೆ ಅಲಂಕಾರದ ಆಭರಣಗಳನ್ನು ಧರಿಸಿದ್ದಾನೆ. ಮುಖ ದುಂಡಾಗಿದ್ದು, ಕೂದಲನ್ನು ತಲೆಯ ಮೇಲೆ ದುಂಡಗೆ ತುರುಬು ಕಟ್ಟಿಕೊಂಡಿದ್ದಾನೆ.

ಮಹಾಸತಿಯು ಬಲಭಾಗದಲ್ಲಿ ನಿಂತಿದ್ದಾಳೆ. ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ಮೇಲಕ್ಕೆತ್ತಿದ್ದಾಳೆ. ವಸ್ತುವೊಂದನ್ನು ಹಿಡಿದಂತೆ ನೆರಿಗೆಯಾಕಾರದ ಉಡುಪು ಮುಂಗಾಲಿನವರೆಗೂ ಧರಿಸಿದ್ದಾಳೆ, ಕುಪ್ಪಸ ಧರಿಸಿದ್ದಾಳೆ. ವಿಶೇಷವಾಗಿ ಸೊಂಟದ ಭಾಗ ಸಣ್ಣದಾಗಿ ಬಳಕುವಂತೆ ಕೆತ್ತಿದ್ದಾನೆ. ಕೈಬಳೆ, ತೋಳ್ಬಂದಿ, ಕೊರಳಸರ, ಕಿವಿಗಳಿಗೆ ಅಲಂಕಾರದ ಆಭರಣಗಳನ್ನು



ವೀರಭದ್ರ ದೇವಾಲಯದ ಹತ್ತಿರವಿರುವ ವೀರಜನ್ನಪ್ಪ ಎಂದು ಕರೆಯುವ ಮಹಾಸತಿಕಲ್ಲು ಶಿಲ್ಪ

ಧರಿಸಿದ್ದಾಳೆ. ತಲೆಯ ತುರುಬನ್ನು ಕೇದಿಗೆಗರಿಯಿಂದ ಅಲಂಕರಿಸಿಕೊಂಡಿದ್ದಾಳೆ. ಇವಳ ಕಾಲಿನ ಪಕ್ಕದಲ್ಲೇ ಇನ್ನೊಬ್ಬ ಸ್ತ್ರೀಯ ಚಿಕ್ಕ ಶಿಲ್ಪವಿದೆ. ಅಸ್ಪಷ್ಟವಾಗಿದೆ. ಮೇಲೆ ಸೂರ್ಯ ಚಂದ್ರರನ್ನು ಕೆತ್ತಲಾಗಿದೆ.

ಈ ಶಿಲ್ಪವನ್ನು ನೋಡಿದಾಗ ಕುದುರೆ, ವೀರ, ಹೆಂಡತಿ/ಹೆಂಡತಿಯರು ಸಮೇತವಾಗಿ ವೀರ ಸ್ವರ್ಗಕ್ಕೆ ಹೋಗಿದ್ದಾರೆ ಎಂದು ಹೇಳಬಹುದು. ಈ ವೀರಮಾಸ್ತಿ ಕಲ್ಲನ್ನು ಸ್ಥಳೀಯರು **ವೀರಜನ್ನಪ್ಪನ** ವೀರಗಲ್ಲು ಎಂದು ಇಂದಿಗೂ ಪೂಜಿಸುತ್ತಾರೆ.

ಈ ಗ್ರಾಮದಲ್ಲಿ ಒಟ್ಟು ೮ ವೀರಗಲ್ಲು ಶಿಲ್ಪಗಳಲ್ಲಿ ೫ ವೀರ ಮಹಾಸತಿಕಲ್ಲುಶಿಲ್ಪಗಳು, ೨ ತುರುಗಳ್ಳರ ವೀರಗಲ್ಲು ಶಿಲ್ಪಗಳು, ೧ ವೀರಗಲ್ಲು ಶಿಲ್ಪ ಇದೆ. ಈ ಒಂದು ನೆಲೆಯಲ್ಲಿಯೇ/ಗ್ರಾಮದಲ್ಲಿಯೇ ೫ ಮಹಾಸತಿಕಲ್ಲುಗಳು ಇರುವುದು ವಿಶೇಷವಾಗಿದೆ. ಈ ಗ್ರಾಮದಲ್ಲಿ ಇರುವ ಈ ಶಿಲ್ಪಗಳು ೧೬, ೧೭ ನೇ ಶತಮಾನದಕ್ಕೆ ಸೇರಿರಬಹುದು. ಶಿಲ್ಪಗಳ ಡಾ. ಅ. ಸುಂದರ ಅವರು, ಡಾ. ಎನ್.ಎಸ್. ರಂಗರಾಜುರವರು ಕಾಲಮಾನವನ್ನು ೧೬, ೧೭ನೇ ಶತಮಾನವಿರಬಹುದು ಎಂದು ಅಭಿಪ್ರಾಯ ಪಡುತ್ತಾರೆ. ಇವರು ಈ ಒಂದೇ ಗ್ರಾಮದಲ್ಲಿ ಇಷ್ಟು ಮಾಸ್ತಿಕಲ್ಲುಗಳು ಇರುವುದರಿಂದ

ಯಾವುದೋ ಒಂದು ಯುದ್ಧ ಈ ಗ್ರಾಮದ ನೆಲೆಯಲ್ಲಿ ನಡೆದಿರಬೇಕೆಂದು ಅಭಿಪ್ರಾಯಪಟ್ಟರು.

ಈ ಗ್ರಾಮವು ಪೂರ್ವ ಪಶ್ಚಿಮವಾಗಿ ಸುಮಾರು ೪೦೦ ಅಡಿ, ಉತ್ತರದಕ್ಷಿಣವಾಗಿ ೫೦೦ ಅಡಿ (೪೦೦x೫೦೦) ವಿಸ್ತೀರ್ಣದ ಪ್ರದೇಶದಲ್ಲಿ ಅಯತಾಕಾರ ವಾಗಿ ನಿರ್ಮಿಸಿದ ಕೋಟೆಯೊಳಗೆ ಗ್ರಾಮವಿದೆ. (ಈಗ ಕೋಟೆ ಶಿಥಿಲಗೊಂಡಿದೆ) ಕೋಟೆಯೊಳಗಿನ ಈಶಾನ್ಯ ಭಾಗದ ದಿನ್ನೆಯ ವಿಶಾಲ ಪ್ರದೇಶದಲ್ಲಿ ಸುವಾರು ೮-೯ನೇ ಶತವಾನದ ವೀರಭದ್ರಸ್ವಾಮಿ ದೇವಾಲಯ ಮತ್ತು ಶಿವ ದೇವಾಲಯವಿದ್ದು ಸುತ್ತ ಪೌಳಿಗೋಡೆಯಿದೆ. ಊರಿನ ಉತ್ತರದಿಂದ ದಕ್ಷಿಣಕ್ಕೆ ಹಾದು ಹೋಗುವ ರಸ್ತೆ ಹಂಜೇರು (ಹೇಮಾವತಿ)ಗೆ ಹೋಗುವ ರಸ್ತೆಯ ಎಡಭಾಗ ಚಿಕ್ಕ ಕೆರೆಯ ಕೆಳಭಾಗದಲ್ಲಿ ಊರಿನತ್ತ ಮುಖ ಮಾಡಿ ೨೦ ಅಡಿ ಎತ್ತರದ ಸ್ತಂಭದ ಮೇಲೆ ಕುಳಿತಿರುವ ಪ್ರಾಚೀನವಾದ ಬಸವಣ್ಣನ ಗುಡಿ ಇದೆ. ಗ್ರಾಮದ ವಾಯುವ್ಯಕ್ಕೆ ಚನ್ನಕೇಶವ ದೇವಾಲಯ (ಈಗ ಶಿಥಿಲವಾಗಿದೆ), ನೈರುತ್ಯ ದಿಕ್ಕಿನಲ್ಲಿ ಶ್ರೀರಂಗನಾಥಸ್ವಾಮಿ ದೇವಾಲಯ, ಊರ ಬಾಗಿಲಲ್ಲಿ ದಕ್ಷಿಣಕ್ಕೆ ಮುಖಮಾಡಿರುವ ಅಂಜನೇಯ ಸ್ವಾಮಿ ದೇವಾಲಯ, ವೀರಭದ್ರ ದೇವಾಲಯದ ಹಿಂಭಾಗದಲ್ಲಿ ದಕ್ಷಿಣಕ್ಕೆ ಮುಖಮಾಡಿರುವ ಬೀರಪ್ಪ ದೇವಾಲಯವಿದೆ. ಊರ ಮುಂದಿನ ಕೆರೆಯ ಬುಡದಲ್ಲಿ ಕೊಲ್ಲಾಪುರದಮ್ಮ ದೇವಾಲಯ, ಕೆರೆ ಏರಿಯ ಮೇಲೆ ಮಾರಮ್ಮನ ದೇವಾಲಯ, ಇನ್ನೂ ಊರಿನ ದಕ್ಷಿಣಕ್ಕೆ ಗಣಪತಿ ದೇವಾಲಯ (೮-೯ ನೇ ಶತಮಾನ) ವಿದೆ.

ಒಟ್ಟಾರೆ ಈ ಎಲ್ಲ ಅಂಶಗಳನ್ನು ನೋಡಿದಾಗ ಈ ಗ್ರಾಮ ಶಿಲಾಯುಗದ ಕಾಲದಿಂದ ಇಂದಿನವರೆಗೂ ಹಂತ ಹಂತವಾಗಿ ಬೆಳೆದ ಪರಂಪರೆಯನ್ನು ಹೊಂದಿ ತನ್ನ ಪ್ರಾಚೀನ ಸಂಸ್ಕೃತಿ ಇತಿಹಾಸವನ್ನು ಸಾರಿ ಹೇಳುವ ಗ್ರಾಮವಾಗಿದೆ ಎಂದು ಹೇಳಬಹುದು.

(ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸಿದ ನನ್ನ ಮಾರ್ಗ ದರ್ಶಕರಾದ ಡಾ. ಎನ್.ಎಸ್. ರಂಗರಾಜುರವರಿಗೂ, ಸರ್ವ ರೀತಿಯ ಸಹಕಾರವನ್ನು ನೀಡುತ್ತಿರುವ ವಿಭಾಗದ ಅಧ್ಯಕ್ಷರು, ಗುರುಗಳಾದ ಪ್ರೊ॥ ಎಂ.ವಿ. ಕೃಷ್ಣಪ್ಪನವರಿಗೂ, ಪೂಜ್ಯಗುರುಗಳಾದ ಡಾ॥ ಎಂ.ಪಿ. ಮಹದೇವಯ್ಯನವರಿಗೂ, ಈ ಎಲ್ಲ ಅವಶೇಷಗಳನ್ನು ಸಂಗ್ರಹಿಸಲು ನೆರವಾದ ತಂದೆಗೆ ಸಮಾನಾರಾದ ಅಣ್ಣ ಜಿ. ರಾಮಚಂದ್ರರೆಡ್ಡಿಯವರಿಗೂ ಸಂಜೀವರೆಡ್ಡಿಯವರಿಗೂ, ನನ್ನ ಶಿಷ್ಯರಾದ ಜಗನ್ನಾಥ್, ಚಿತ್ತಯ್ಯ, ವೀರಭದ್ರಪ್ಪನವರಿಗೂ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ.
೨. ಚಿತ್ರದುರ್ಗ ಜಿಲ್ಲಾದರ್ಶಿನಿ- ಟಿ. ಗಿರಿಜ.
೩. ಕರ್ನಾಟಕದ ಪರಂಪರೆ- ಭಾಗ-೧.
೪. ಎಪಿಗ್ರಾಫಿಯ ಕರ್ನಾಟಕ-VOL -IX eL-
೫ ಪ್ರಬುದ್ಧ ಕರ್ನಾಟಕ- ಸಂ-೩೪, ಸಂಚಿಕೆ-೨, ೧೩೨
೬ ಮೈಸೂರು ಜನರಲ್ ಸೆನ್ಸಸ್- ೧೮೭೧, ಪ್ರಕಟಣೆ- ೧೮೭೫
೭. ಸೆನ್ಸಸ್ ಆಫ್ ಇಂಡಿಯಾ- ೧೮೯೧
೮ ಸೆನ್ಸಸ್ ಆಫ್ ಇಂಡಿಯಾ-೧೯೮೧,
೯. ಕರ್ನಾಟಕದ ವೀರಗಲ್ಲುಗಳು- ಡಾ. ಆರ್. ಶೇಷಶಾಸ್ತ್ರಿ
೧೦. ತಲಕಾಡು ಉತ್ಖನನ ವರದಿ-೧೯೯೨-೯೩
೧೧. ದಿ ಮೆಗಲಿಥಿಕ್ ಕಲ್ಬರ್ ಇನ್ ಸೌತ್ಇಂಡಿಯ, ಬಿ.ಕೆ. ಗುರುರಾಜರಾವ್
೧೨. ದಿ ಆ್ಯಂಟಿಕ್ವಿಟೀಸ್ ಆಫ್ ಸಿಂಧ್-೧೯೨೯
೧೩. ತಕ್ಷಶಿಲಾ- ಆರ್ಕ್ಯಾಲಾಜಿಕಲ್ ಎಕ್ಸವೇಶನ್ಸ್-೧೯೫೧
೧೪. ಟಿ.ನರಸೀಪುರ ಉತ್ಖನನ ವರದಿ
೧೫. ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ ವರದಿಯ ಮಾಹಿತಿ ಆಧಾರಿತ.

ಡಾ. ಎಂ. ಕೊಟ್ರೇಶ್*

# ನೂತನ ಶಿಲಾಯುಗದ ನೆಲೆ-ಗಡಿಗುಡಾಳ

ದಾವಣಗೇರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿರುವ ಗಡಿಗುಡಾಳ ಗ್ರಾಮ ಹರಪನಹಳ್ಳಿಯಿಂದ ಆಗ್ನೇಯ ದಿಕ್ಕಿಗೆ ಸುಮಾರು ೩೫ ಕಿ.ಮೀ. ದೂರದಲ್ಲಿದೆ. ಗಡಿ ಎಂದರೆ ಸೀಮೆ, ಎಲ್ಲೆ, ಮೇರೆ ಅಥವಾ ಬಾಂದುಕಲ್ಲು ಎಂಬರ್ಥಗಳಿವೆ. ಗುಡಾಳ ಅಂದರೆ ಇದಕ್ಕೆ ನಿಘಂಟಿನಲ್ಲಿ ಅರ್ಥಗಳಿಲ್ಲ. ಗುಡಿ + ಪಾಳು = ಗುಡಿಹಾಳು > ಗುಡಾಳ್ ಎಂಬುದು ಸ್ಥಳ ನಿರ್ದೇಶನವನ್ನು ನೀಡುತ್ತದೆ. ಗುಡಾಣ ಅಂದರೆ ಜಲಾಶ್ರಯ ಸೂಚಕವಾಗಿದ್ದರೂ ಗುಡಾಣ – ಗುಡಾಳ್ ಆಗಲು ಸಾಧ್ಯತೆ ಇಲ್ಲ. ಗುಡಾಳ ಎನ್ನುವುದು ಈ ಗ್ರಾಮಕ್ಕೆ ಪ್ರಾಯಶಃ ಪ್ರಾಚೀನ ಹೆಸರು. ಗುಡಾಳ್ ಹಿಂಭಾಗಕ್ಕೆ ಗಡಿ ಸೇರಿದುದು, ಬಹುಶಃ ನಂತರದ ಸೇರ್ಪಡೆ. ಏಕೆಂದರೆ ವಿಜಯನಗರೋತ್ತರದಲ್ಲಿ ಪ್ರವರ್ಧಮಾನಕ್ಕೆ ಬಂದ ಹರಪನಹಳ್ಳಿ ಪಾಳೆಯಗಾರರಿಗೂ ದಕ್ಷಿಣದ ಚಿತ್ರದುರ್ಗದ ಅರಸರಿಗೂ ಈ ಗ್ರಾಮ ಎಲ್ಲೆ ಅಥವಾ ಗಡಿಯಾಗಿರುವುದು ಕಂಡುಬರುತ್ತದೆ. ಆದರೆ ನೂತನ ಶಿಲಾಯುಗದ ಸಂಸ್ಕೃತಿಯಿಂದಲೂ ಜನವಸತಿ ಇದ್ದ ಅವಶೇಷಗಳು ಇಲ್ಲಿ ಕಂಡುಬರುತ್ತವೆ.

ಇಂದಿನ ಗಡಿಗುಡಾಳ ಗ್ರಾಮದ ಪಶ್ಚಿಮಕ್ಕೆ ಅರ್ಧ ಕಿ.ಮಿ. ದೂರದಲ್ಲಿ ಸಿದ್ಧನಗೌಡರಿಗೆ ಸೇರಿದ ಸುಮಾರು ೨೦ ಎಕರೆ ಭೂಮಿ ಇದೆ. ಈ ಜಮೀನಿನ ಪಕ್ಕದಲ್ಲಿಯೇ ದೊಡ್ಡ ಹಳ್ಳವಿದೆ. ಇದನ್ನು ಹಗರಿ ನದಿ ಎಂತಲೂ ಕರೆಯುವ ವಾಡಿಕೆ ಇದೆ. ಈ ಸಿದ್ಧನಗೌಡರ ಹೊಲದಲ್ಲಿ ಕ್ಷೇತ್ರ ಅನ್ವೇಷಣೆಗೆ ತೊಡಗಿದಾಗ ಡಾಲೋರೈಟ್ ಡೈಕ್ ಶಿಲೆಯಿಂದ ಉಜ್ಜಿ ನಯಗೊಳಿಸಿದ ಮೂರು ಕೊಡಲಿಗಳು ದೊರೆತಿವೆ. ಅಲದೆ ಮೂಳೆಗಳು ಈ ಭಾಗದಲ್ಲಿ ಸಾಕಷ್ಟಿವೆ ಎಂಬುದು ಇಲ್ಲಿಯ ಕೃಷಿಕರ ಅನಿಸಿಕೆ. (Stone Axes) ಕೊಡಲಿಗಳು ೮ ರಿಂದ ೧೦ ಸೆಂ.ಮೀ. ಉದ್ದ, ಕೆಲವು ೧೫ ಸೆಂ.ಮೀ. ವರೆಗೂ ಉದ್ದವಾಗಿವೆ. ಬೇಟೆಗಾಗಿ ಬಳಸುತ್ತಿದ್ದ ದಪ್ಪ ದಪ್ಪ ಗೋಲಿಗಳಂತಹ (ಕವಣೆ) ಕಲ್ಲಿನ ಗುಂಡುಗಳು ದೊರೆತಿವೆ. ಹಿರೇಬೆಣಕಲ್, ಕುಡಿತಿನಿಗಳಲ್ಲಿದ್ದಂತೆ ಗ್ರಾಮದ ಪಶ್ಚಿಮಕ್ಕೆ ಸುಮಾರು ೧ ಕಿ.ಮೀ. ದೂರದಲ್ಲಿ ಬೂದಿದಿಬ್ಬದ ಅವಶೇಷಗಳು ಮೃತ್‌ಪಾತ್ರೆಗಳು ದೊರೆತಿವೆ. ಈ ಬೂದಿದಿಬ್ಬದ ಹತ್ತಿರದಲ್ಲಿಯೇ ಇರುವ ಗ್ರಾಮಕ್ಕೆ "ಬುದಾಳ್" ಎಂಬ ಹೆಸರಿರುವುದು ಈ ಬೂದಿದಿಬ್ಬದ ಅವಶೇಷಕ್ಕೆ ಇನ್ನೊಂದು ಆಧಾರ.



ನೂತನ ಶಿಲಾಯುಗದ ಆಯುಧಗಳು ಗಡಿಗುಡಾಳ್ ಗ್ರಾಮ ಹರಪನಹಳ್ಳಿ ತಾಲ್ಲೂಕು

ಕೆಲ ನೂತನ ಶಿಲಾಯುಗದ ಅವಶೇಷಗಳು ಬೆಟ್ಟ ಗುಡ್ಡಗಳ ಬುಡಗಳಲ್ಲಿ ಕಂಡು ಬಂದರೆ ಈ ನೆಲೆ ನೀರಿನಾಸರೆ ಇರುವ ಕಡೆ ಇದೆ. ಕೆಲವು ಸಾವಿರ ವರ್ಷಗಳ ಹಿಂದೆ ಮಾನವ ಕೃಷಿಯಲ್ಲಿ ತೊಡಗಿ, ಒಂದು ಕಡೆ ನೆಲೆಯಾಗಿ ನಿಂತು ಪಶುಸಂಗೋಪನೆ ಮುಂತಾದ ನಿರ್ದಿಷ್ಟ ಕಾರ್ಯಗಳಲ್ಲಿ ಸಕ್ರಿಯವಾಗಿ ಉಜ್ಜಿ ನಯಗೊಳಿಸಿದ ಉಪಕರಣಗಳನ್ನು ರೂಪಿಸಿಕೊಂಡಂತಹ ಸಾಂಸ್ಕೃತಿಕ ಹಂತವನ್ನು ನೂತನ ಶಿಲಾಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ಬೆಂಕಿ ಹಾಗೂ ಚಕ್ರದ ಸಹಾಯದಿಂದ ಮಡಿಕೆ ಮಾಡಲು ಆರಂಭಿಸಿದ್ದು ಇದೆ ಕಾಲ. ಈ ಕಾಲಮಾನವನ್ನು ಮಾನವನ ಜೀವನದಲ್ಲಿ ಆದಂತಹ ಕ್ರಾಂತಿಕಾರಕ ಯುಗವೆಂದು ಕರೆಯಲಾಗುತ್ತದೆ.

* ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.



ನೂತನ ಶಿಲಾಯುಗದ ಕಲ್ಲಿನ ಕೊಡಲಿಗಳು ಹಾಗೂ ಪಾಳೆಯಗಾರರ ಕಾಲದ ಫಿರಂಗಿ ಗುಂಡು, ಗಡಿಗುಡಾಳ್ ಗ್ರಾಮ ಹರಪನಹಳ್ಳಿ ತಾಲ್ಲೂಕು

ಕರ್ನಾಟಕದಲ್ಲಿ ನೂತನ ಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಶೋಧನೆಗಳು ಪ್ರಥಮವಾಗಿ ೧೮೭೨ರಲ್ಲಿ ನಡೆದವು. ಫ್ರೇಸರ್‌ರವರು ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಬೆಟ್ಟದಲ್ಲಿ ನೂತನ ಶಿಲಾಯುಗದ ಶಿಲೋಪಕರಣ ಹಾಗೂ ವಾಸ್ತವ್ಯದ ನೆಲೆಯನ್ನು ಗುರುತಿಸಿದರು. ಇಲ್ಲಿಂದ ಆರಂಭಗೊಂಡ ನೂತನ ಶಿಲಾಯುಗದ ನೆಲೆಗಳ ಹುಟುಕಾಟ ಇಂದಿಗೂ ಅವಿರತವಾಗಿ ನಡೆದಿದೆ.

ನೂತನವಾಗಿ ರಚಿತವಾಗಿರುವ ದಾವಣಗೇರಿ ಜಿಲ್ಲೆಯಲ್ಲಿ ಬರುವ ೫ ತಾಲೂಕುಗಳಲ್ಲಿ ಹರಪನಹಳ್ಳಿ ಒಂದು. ಈ ತಾಲೂಕಿನ ಮಾಡಲಗೇರಿ ಗ್ರಾಮದಲ್ಲಿ ಸೂಕ್ಷ್ಮ, ನೂತನ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯು ಪತ್ತೆಯಾಗಿದೆ. ಇದೇ ತಾಲೂಕಿನ ತೆಲಗಿ ನೀಲಗುಂದಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಶ್ರೀ ಸುಬ್ಬ ರಾವ್ ಹಾಗೂ ಡಾ. ಅ. ಸುಂದರ ಅವರು ಗುರುತಿಸಿದ್ದಾರೆ.

ಆದರೆ ಈ ತನಕ ಗಡಿ ಗುಡಾಳ್‌ನ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಯಾರು ಗುರುತಿಸಿಲ್ಲವೆಂಬುದು ಗಮನಾರ್ಹ. ೨ನೆಯದಾಗಿ ಈ ಗಡಿಗುಡಾಳ ಗ್ರಾಮದ ಸುತ್ತಲಿನ ನೂತನ ಶಿಲಾಯುಗದ ಅವಶೇಷಗಳು, ಬೂದಿದಿಬ್ಬ, ಮೃತ್ ಪಾತ್ರೆಗಳು ದೊರೆತಿರುವದರಿಂದ ಇದನ್ನು ಸಮೃದ್ಧವಾದ ವಾಸ್ತವ್ಯದ ನೆಲೆಯೆಂದು ಗುರುತಿಸಬಹುದಾಗಿದೆ.

೩ನೆಯದಾಗಿ ಗಡಿಗುಡಾಳ ಪ್ರದೇಶದಲ್ಲಿ ನೂತನ ಶಿಲಾಯುಗದ ಕೊಡಲಿಗಳು ಹತ್ತಿರದ ಉಚ್ಚಂಗಿದುರ್ಗದಲ್ಲಿ ಬೃಹತ್ ಶಿಲಾಸಂಸ್ಕೃತಿಯ ಅವಶೇಷಗಳು ದೊರೆತಿದ್ದು, ಇತಿಹಾಸ ಕಾಲದ ಮೌರ್ಯರ, ಶಾತವಾಹನರ, ಕದಂಬರ, ಪಲ್ಲವರ, ಆಡಳಿತದ ವ್ಯಾಪ್ತಿಗೂ ಗಡಿಗುಡಾಳ ಒಳಪಟ್ಟಂತೆ ಆಧಾರಗಳಿಂದ ದೃಢಪಡುತ್ತದೆ. ಕಲ್ಯಾಣ ಚಾಳುಕ್ಯರ ಕಲ್ಲೇಶ್ವರ, ಈಶ್ವರ ದೇವಾಲಯಗಳು ವಿಜಯನಗರ ಕಾಲದ ವೀರಮಾಸ್ತಿ ಹಾಗೂ ವೀರಗಲ್ಲುಗಳು ಇಲ್ಲಿಯ ಸಿದ್ಧನಗೌಡರ ಹೊಲದಲ್ಲಿಯೇ ಕಂಡುಬಂದಿರುವುದು ಗಮನಾರ್ಹ.

೪ನೆಯದಾಗಿ ಸ್ವತಃ ಸಿದ್ದನಗೌಡ ಗಡಿಗುಡಾಳ ಇವರು ಪಾಳೆಯಗಾರರ ಆಡಳಿತಾವಧಿಯಲ್ಲಿ ಗೌಡಕಿಯನ್ನು ಮಾಡಿರುತ್ತಾರೆ ಅಲ್ಲದೆ ಕೆಲಕಾಲ ಆಡಳಿತವನ್ನು ಮಾಡಿದಂತೆ ದಾಖಲೆಗಳನ್ನು ತೋರಿಸುತ್ತಾರೆ. ಇವರ ಮನೆಯೇ ಒಂದು ಪ್ರಾಚೀನ ಕಲಾಕೃತಿ : ಅಲ್ಲಿ ಖಡ್ಗಗಳು, ತಾಳೇಗರಿಗಳು, ಫಿರಂಗಿ ಗುಂಡುಗಳು ಹಾಗೂ ಬಂದೂಕುಗಳಿವೆ. ಇವರ ಬಳಿ ಇರುವ ಫಿರಂಗಿ ಗುಂಡು ಹಿಂದೆ ಶತ್ರು ರಾಜ್ಯದ ಮೇಲೆ ದಂಡೆತ್ತಿ ಹೋದಾಗ ಶತ್ರು ರಾಜ್ಯದ ಕೋಟೆ ಗೋಡೆಯನ್ನು ಒಡೆಯಲು ಅಥವಾ ಕೋಟೆ ದ್ವಾರವನ್ನು ತೆಗೆಯಲು ಬಳಸುತ್ತಿದ್ದರೆಂದು ಮಾಹಿತಿ ನೀಡುತ್ತಾರೆ. ಗಡಿಗುಡಾಳ್ ಸಹ ಕೋಟೆಯನ್ನು ಹೊಂದಿತ್ತು. ಇಂದು ಅದರ ಅವಶೇಷಗಳನ್ನು ಮಾತ್ರ ಕಾಣಲು ಸಾಧ್ಯ. ಕೋಟೆ ಗೋಡೆಯ ಮಧ್ಯದಲ್ಲಿದ್ದ ಕೊತ್ತಳಗಳು ಮಾತ್ರ ಅಲ್ಪಸ್ವಲ್ಪ ಉಳಿದುಕೊಂಡಂತೆ ತಿಳಿದುಬರುವುದು. ಆದರೆ ಗೌಡರ ಮನೆಯಲ್ಲಿರುವ ಧಾನ್ಯದ ಕಣಜಗಳು ಮಾತ್ರ ಅಚ್ಚುಕಟ್ಟಾಗಿವೆ.



*An honest and truth loving merchant will be found on the day of Judgement in the Company of prophets, lovers of truth, martyrs and the righteous.*

*- Prophet Mohammed*

ಡಾ॥ ಎಸ್. ತಿಪ್ಪೇಸ್ವಾಮಿ*

# ಸಂತೇಗುಡ್ಡದ ಗುಹಾ ವರ್ಣಚಿತ್ರಗಳು ಹಾಗೂ ಪ್ರಾಚ್ಯಾವಶೇಷಗಳು

ಸಂತೇಗುಡ್ಡವು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ವಾಯುವ್ಯಭಾಗದಲ್ಲಿದೆ. ಮೊಳಕಾಲ್ಮೂರುವಿನಿಂದ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಈ ಗ್ರಾಮಕ್ಕೆ ರಾಂಪುರ, ಕೆಳಗಳ ಕಣಿವೆ, ಹಾಗೂ ಪರ್ತೆನಹಳ್ಳಿಗಳ ಮೂಲಕ ತಲುಪಬಹುದು. ಸಂತೇಗುಡ್ಡವು ಭೂನಕ್ಷೆಯಲ್ಲಿ ೭೪°.೪೩' ಉತ್ತರ ಅಕ್ಷಾಂಶ ಮತ್ತು ೧೪°–೫೦' ಪೂರ್ವ ರೇಖಾಂಶದ ವರೆಗೆ ವ್ಯಾಪಿಸಿದ್ದು ಸಮುದ್ರ ಮಟ್ಟದಿಂದ ೨೬೫೩ ಅಡಿ ಎತ್ತರದಲ್ಲಿದೆ. ಬೆಟ್ಟಗುಡ್ಡದಿಂದ ಕೂಡಿರುವ ಈ ಪರಿಸರದಲ್ಲಿನ ಈ ಗ್ರಾಮಕ್ಕೆ ಅಂಟಿಕೊಂಡಂತೆ ಇರುವ ಗುಡ್ಡದ ಪಕ್ಕದಲ್ಲಿ ಸಂತೆ ನಡೆಯುತ್ತಾ ಇದ್ದುದರಿಂದ ಈ ಊರಿಗೆ ಸಂತೇಗುಡ್ಡ ವೆಂಬ ಹೆಸರು ಬಂದಿದೆ. ಕ್ರಿ.ಶ. ೧೬೬೫ರ ತಾಮ್ರ ಶಾಸನದಲ್ಲಿ ಈ ಊರನ್ನು 'ಸಂತೇಗೋವಿ' ಎಂದು ಕರೆದಿರುವುದು ಮೇಲಿನ ಅಂಶಕ್ಕೆ ಪುಷ್ಟಿ ದೊರೆಯುತ್ತದೆ. ಇತ್ತೀಚೆಗೆ ನಾನು ಈ ಭಾಗದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಪತ್ತೆಯಾದ ಪ್ರಾಚ್ಯಾವಶೇಷಗಳಲ್ಲಿ ಗವಿ ವರ್ಣ ಚಿತ್ರಗಳು ಮುಖ್ಯವಾಗಿವೆ. ಬಡಿಗಲ್ಲುಗಳು, (ಸು.೩೦) ಕಿಟ್ಟದ ಕಲ್ಲು, ಕಿಟ್ಟದ ಬೂದಿ, ಪುಷ್ಕರಣಿ, ದೇವಾಲಯ ಹಾಗೂ ಕೋಟೆ ಕೊತ್ತಲಗಳು ಸಹ ಕಂಡು ಬಂದವು.

**ಗವಿ ವರ್ಣಚಿತ್ರಗಳು** : ಸಂತೇಗುಡ್ಡದ ಉತ್ತರಕ್ಕೆ ಇರುವ ಊರು ಗುಡ್ಡದ ಮೇಲೆ ಪ್ರತ್ಯೇಕ ಬೃಹತ್ ಬಂಡೆಗಳ ಕೆಳಭಾಗದಲ್ಲಿ ಎರಡು ಗವಿಗಳಿವೆ. ಮಂದಗವಿ ಎಂದು ಕರೆಯಲಾಗುವ ಚಿಕ್ಕಗವಿ ಗುಡ್ಡದ ಪೂರ್ವಭಾಗದಲ್ಲಿದ್ದರೆ, ಮತ್ತೊಂದು ದೊಡ್ಡ ಗವಿ ಗುಡ್ಡದ ಪಶ್ಚಿಮಭಾಗದ ಜೇನುಗೊಂದಿ ಪ್ರದೇಶದಲ್ಲಿದೆ. ಈ ಗವಿಯನ್ನು ಸ್ಥಳೀಯರು ಮ್ಯಾದಾರಪಡೆ ಗವಿಯೆಂದು ಕರೆಯುತ್ತಾರೆ. ಈ ಎರಡು ಗವಿಗಳು ಪ್ರಾಚೀನ ಮಾನವನ ವಾಸಸ್ಥಾನಕ್ಕೆ ಯೋಗ್ಯ ತಾಣಗಳಾಗಿದ್ದವು. ಮ್ಯಾದಾರಪಡೆ ಗುಹೆಯು ಉತ್ತರ–ದಕ್ಷಿಣವಾಗಿ ೩೦ ಮೀ. ಉದ್ದ, ಪೂರ್ವ–ಪಶ್ಚಿಮವಾಗಿ ೧೨ ಮೀ. ಅಗಲ ಹಾಗೂ ೧ ರಿಂದ ೪ ಮೀ. ವರೆಗೆ ಎತ್ತರವಾಗಿದ್ದು, ಸುಮಾರು ೧೦೦ ಜನರು ವಿಶ್ರಮಿಸಿಕೊಳ್ಳ ಬಹುದಾದ ಗವಿಯಾಗಿದೆ. ಈ ಗುಹೆಯ ಬಂಡೆಗಲ್ಲಿನ ಒಳಭಾಗದಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಇತಿಹಾಸ ಕಾಲದವರೆಗೆ ಗುರುತಿಸಬಹುದಾದ ನೂರಾರು ವರ್ಣಚಿತ್ರ ಗಳು ಕಂಡುಬಂದಿವೆ. ಈ ಗುಹೆಯೊಳಗೆ ಅಥವಾ ಕಲ್ಲಾಸರೆಯ ಒಳಬದಿಯಲ್ಲಿ ಕೆಮ್ಮಣ್ಣಿನ ಬಣ್ಣ ಹಾಗೂ ಬಿಳಿಯ ಬಣ್ಣಗಳನ್ನು ಬಳಸಿ ಚಿತ್ರಗಳನ್ನು ಬಿಡಿಸಲಾಗಿದೆ. ಚಿತ್ರದುರ್ಗ ಜಿಲ್ಲೆಯ ಮಟ್ಟಿಗೆ ಇಷ್ಟೊಂದು ಸಂಖ್ಯೆಯ ಹಾಗೂ ವಿವಿಧ ಬಗೆಯ ಸಮೂಹ ವರ್ಣಚಿತ್ರಗಳು ಒಂದೇ ಗುಹೆಯಲ್ಲಿ ಕಂಡು ಬರುತ್ತಿರುವುದು ಇಲ್ಲಿಯೇ ಎಂದು ಹೇಳಬಹುದು.

ಮ್ಯಾದಾರಪಡೆ ಗವಿಯಲ್ಲಿ ವಿವಿಧ ಬಗೆಯ ಪ್ರಾಣಿ ಪಕ್ಷಿಗಳು, ಮನುಷ್ಯನಾಕೃತಿಗಳು, ಯುದ್ಧದಲ್ಲಿ ತೊಡಗಿರುವ ಯೋಧರು, ಒಂಟೆಸವಾರಿ, ಆನೆಗಳ ಮೇಲೆ ನಿಂತು ಹೋರಾಡುತ್ತಿರುವ ಯೋಧರು, ಕುದುರೆ ಸವಾರರು, ಬೇಟೆಗಾರಿಕೆ, ಧಾರ್ಮಿಕ ಆಚರಣೆ ಮುಂತಾದ ಬಗೆಯ ವರ್ಣಚಿತ್ರಗಳಿವೆ. ಅಲ್ಲದೆ ಇನ್ನೂ ನಿರ್ದಿಷ್ಟವಾಗಿ ಗುರುತಿಸ ಲಾಗದಂತಹ ಕೆಲವು ಚಿತ್ರಗಳು ಸಹ ಕಂಡುಬರುತ್ತವೆ. ಮ್ಯಾದಾರಪಡೆಯ ಗುಹೆಯಲ್ಲಿ ಕಂಡು ಬರುವ ಚಿತ್ರಗಳು ೧ ಸೆಂ.ಮೀ. ನಿಂದ ೩೫ ಸೆಂ.ಮೀ.ನಷ್ಟು ಉದ್ದವಾಗಿವೆ.

ಈ ಎಲ್ಲಾ ಚಿತ್ರಗಳಲ್ಲಿನ ರೇಖೆಗಳು ಪರಿಪಕ್ವತೆಯಿಂದ ಕೂಡಿದ್ದು, ಘನತ್ವ ಮತ್ತು ಚಲನಶಕ್ತಿಯನ್ನು ತುಂಬಿ ಕೊಂಡಂತಿವೆ. ನೇರವಾದ ಸಂಯೋಜನೆಯಿಂದ ಆಕೃತಿಗಳ ಭಾವ–ಭಂಗಿಗಳು ಒಂದಕ್ಕೊಂದು ಸುಭಾಷಿಸುವಂತೆ ಜೀವಂತಿಕೆಯನ್ನು ತುಂಬಲಾಗಿದೆ. ಕಲಾಕಾರ ಅತ್ಯಂತ ಪ್ರಜ್ಞಾವಂತನಾಗಿ ಚಿತ್ರಕಲೆಯ ಮೂಲಕ ತನ್ನತನವನ್ನು ಅಭಿವ್ಯಕ್ತಿಗೊಳಿಸಿದ್ದಾನೆ. ಆಕೃತಿಗಳ ಹಿಂಭಾಗ ಮತ್ತು ಮುಂಭಾಗ ಹಾಗೂ ಅಕ್ಕಪಕ್ಕದ ಚಿತ್ರಗಳನ್ನು ತೋರಿಸುವ ಚಮತ್ಕಾರಿಕೆ ವಿಸ್ಮಯಗೊಳಿಸುವಂತಹದು. ಅಲ್ಲದೆ ಆಕೃತಿಗಳನ್ನು ವಿವಿಧ ಅಳತೆಗಳಲ್ಲಿ ರಚಿಸಿ ಸ್ಥಳ ಹಾಗೂ

* ಇತಿಹಾಸ ಉಪನ್ಯಾಸಕರು, ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು, ಚಿತ್ರದುರ್ಗ.







ವಾತಾವರಣದ ಭ್ರಮೆಯನ್ನು ಮೂಡಿಸಿದ್ದಾನೆ. ಈ ಎಲ್ಲಾ ಚಿತ್ರಗಳನ್ನು ಸುಲಭವಾಗಿ ನೋಡುವಂತಹ ಸ್ಥಳದಲ್ಲಿ ಮೂಡಿಸಿಲ್ಲ. ಕೆಲವು ಚಿತ್ರಗಳನ್ನು ನಿಂತು ಹಾಗೂ ಕುಳಿತು ಕೊಂಡು ವೀಕ್ಷಿಸಿದರೆ ಮತ್ತೆ ಕೆಲವನ್ನು ಮುಖ ಮೇಲು ಮಾಡಿಕೊಂಡು ಮಲಗಿಯೇ ನೋಡಬೇಕು, ಅಂತಹ ಸ್ಥಳಗಳಲ್ಲಿ ಚಿತ್ರಗಳನ್ನು ಬಿಡಿಸಲಾಗಿದೆ.

**ವರ್ಣ ಚಿತ್ರಗಳ ವಿವರ :** ಮ್ಯಾದಾರಪಡೆಯ ಗವಿಯಲ್ಲಿ ಬಿಳಿ ಹಾಗೂ ಕೆಂಪು ಬಣ್ಣದ ವರ್ಣ ಚಿತ್ರಗಳು ಹೆಚ್ಚಾಗಿ ಕಂಡು ಬರುತ್ತವೆ. ಅಧ್ಯಯನದ ದೃಷ್ಟಿಯಿಂದ ಬಿಳಿ ವರ್ಣದ





ಚಿತ್ರಗಳನ್ನು ಚಿಕ್ಕ ಮನುಷ್ಯನಾಕೃತಿ, ಮಂಡಲಾಕೃತಿ, ಸಮೂಹ ಚಿತ್ರಗಳು. ಪ್ರಾಣಿ ಪಕ್ಷಿ ಚಿತ್ರಗಳೆಂದು ವರ್ಗೀಕರಿಸಬಹುದು. ಮನುಷ್ಯಾನಾಕೃತಿ ಚಿತ್ರಗಳು ೫ ಸೆಂ.ಮೀ. ನಿಂದ ೨೩ ಸೆಂ.ಮೀ.ನಷ್ಟು ಉದ್ದವಾಗಿವೆ. ಕೆಲವು ಚಿತ್ರಗಳು ನಿಂತ ಭಂಗಿಯಲ್ಲಿದ್ದರೆ ಮತ್ತೆ ಕೆಲವು ಜೋಡಿ ಚಿತ್ರಗಳಾಗಿವೆ. ಈ ಎಲ್ಲಾ ಚಿತ್ರಗಳನ್ನು ಕೇವಲ ಬಾಹ್ಯರೇಖೆಗಳಿಂದ ಮಾತ್ರ ತೋರಿಸಲಾಗಿದೆ. ಮನುಷ್ಯನಾಕೃತಿಯ ಚಿತ್ರಗಳಿಗೆ ಕಣ್ಣು, ಕಿವಿ, ಮೂಗು, ಬಾಯಿ, ಕೈಬೆರಳುಗಳನ್ನ ಬಿಡಿಸಲಾಗಿದೆ. ಇದೇ ರೀತಿ ಬಿಳಿ ವರ್ಣದ ಚಿತ್ರಗಳು ಮಂದಗವಿಯಲ್ಲಿ ಕಂಡು ಬರುತ್ತವೆ. ಆದರೆ ಇಲ್ಲಿ ವರ್ಣಚಿತ್ರಗಳು ಕಂಡು ಬರುವುದಿಲ್ಲ.

**ಯುದ್ಧದ ದೃಶ್ಯಗಳು :** ಮ್ಯಾದಾರಪಡೆಯ ಗುಹೆಯಲ್ಲಿ ವಿಶೇಷವಾಗಿ ಯುದ್ಧ ಮಾಡುವ ದೃಶ್ಯಗಳು ಎದ್ದು ಕಾಣುತ್ತವೆ. ಈ ಚಿತ್ರಗಳನ್ನು ೪೮ ಅಂಗುಲ ಅಗಲ ಹಾಗೂ ೨೪ ಅಂಗುಲ ಉದ್ದದ ಸ್ಥಳದಲ್ಲಿ ಮೂಡಿಸಲಾಗಿದೆ. ಮನುಷ್ಯನಾ ಕೃತಿಗಳ ಬಲಭಾಗದಲ್ಲಿ ಕುದುರೆ ಸವಾರರ ಚಿತ್ರಗಳಿವೆ. ಕುದುರೆಯ ಮೇಲೆ ಕುಳಿತ ವೀರನು ತನ್ನ ಬಿಲ್ಲಿನಿಂದ ಬಾಣಗಳನ್ನು ಹಿಂದೆ ತಿರುಗಿಸಿ ಶತ್ರುಗಳ ಮೇಲೆ ಪ್ರಯೋಗಿ ಸುತ್ತಿರುವ ದೃಶ್ಯ ಅಶ್ವಕಾಳಗವನ್ನ ನೆನಪಿಸುವಂತಿದೆ. ಈ

ಚಿತ್ರದ ಎಡಭಾಗದಲ್ಲಿ ನಾಲ್ಕು ಮಂದಿ ಕುದುರೆ ಸವಾರರು ಮುಖಾ–ಮುಖಿಯಾಗಿ ನಿಂತು ಹೋರಾಡುತ್ತಿದ್ದಾರೆ. ಮತ್ತೊಂದು ಭಾಗದಲ್ಲಿ ಆನೆಗಳೆರಡು ವಿರುದ್ಧ ದಿಕ್ಕಿನಲ್ಲಿ ನಿಂತಿವೆ. ಎಡಬದಿಯ ಕುದುರೆ ಸವಾರ ಯೋಧನೊಬ್ಬನ ಮೇಲೆ ಬಾಣವನ್ನು ಪ್ರಯೋಗಿಸುತ್ತಿದ್ದರೆ, ಮತ್ತೊಬ್ಬ ಯೋಧನು ತನ್ನ ಕೈಗಳಲ್ಲಿ ಖಡ್ಗ ಮತ್ತು ಈಟಿಗಳನ್ನು ಹಿಡಿದು ಬಾಣವನ್ನು ಎದುರಿಸುತ್ತಿರುವ ದೃಶ್ಯ ಮನಮೋಹಕ ವಾಗಿದೆ. ಈ ಚಿತ್ರದ ಬಲಬದಿಯಲ್ಲಿ ಕುದುರೆ ಸವಾರರು ಹಾಗೂ ಗೂಳಿಯ ಕಾದಾಟದ ದೃಶ್ಯಗಳಿವೆ. ಗೂಳಿಗಳು ಮುಖಾ–ಮುಖಿಯಾಗಿ ನಿಂತು ಕಾದಾಡುತ್ತಿವೆ. ಇವುಗಳಲ್ಲಿ ಒಂದು ಗೂಳಿಯನ್ನು ಕೇವಲ ರೇಖೆಯಿಂದ ಮೂಡಿಸಿದ್ದರೆ, ಮತ್ತೊಂದು ಗೂಳಿಗೆ ಮೈತುಂಬಾ ಬಣ್ಣವನ್ನು ತುಂಬುವ ಮೂಲಕ ಚಿತ್ರಿಸಲಾಗಿದೆ. ಗೂಳಿಗಳ ಪಕ್ಕದಲ್ಲಿ ಇಬ್ಬರು ಯೋಧರು ಇದ್ದು ಪ್ರಾಣಿಯೊಂದು (ನರಿ)ಬಾಯಿ ತೆರೆದು ನಾಲಿಗೆಯನ್ನು ಹೊರಚಾಚಿಕೊಂಡು ನಿಂತಿದೆ. ಗೂಳಿಯ ಪಕ್ಕದಲ್ಲೆ ಒಂಟೆ ಸವಾರನೊಬ್ಬನು ಒಂಟೆಯ ಡುಬ್ಬದ ಮೇಲೆ ಕುಳಿತಿದ್ದಾನೆ. ಒಂಟೆಯ ಶಿರಭಾಗವನ್ನು ಜಿರಾಫೆಯಂತೆ ಉದ್ದ ಹಾಗೂ ನೇರವಾಗಿ ತೋರಿಸಲಾಗಿದೆ. ಈ ಭಾಗದಲ್ಲಿ ಗೂಳಿ, ಕುದುರೆ, ಕತ್ತಿ ಗುರಾಣಿ ಹಿಡಿದ ಯೋಧರ ಚಿತ್ರಗಳು ಯಥೇಚ್ಚವಾಗಿವೆ.

**ಬೇಟೆಯ ದೃಶ್ಯಗಳು :** ಮ್ಯಾದಾರಪಡೆಯ ಗವಿ ವರ್ಣ ಚಿತ್ರಗಳಲ್ಲಿ ವಿವಿಧ ರೀತಿಯ ಬೇಟೆ ದೃಶ್ಯಗಳಿವೆ. ಇವುಗಳಲ್ಲಿ ಹುಲಿ ಹಾಗೂ ಹಂದಿ ಬೇಟೆಯ ಚಿತ್ರಗಳು ಮುಖ್ಯವಾಗಿವೆ. ಹುಲಿಯನ್ನು ಹಿಂಬಾಲಿಸಿ ಬೇಟೆಯಾಡುತ್ತಿ ರುವ ಯೋಧನು ಬಿಲ್ಲು ಬಾಣಗಳನ್ನು ಹೊಂದಿದ್ದಾನೆ. ಇವನ ಸಹಾಯಕ್ಕಿರುವ ಬೇಟೆ ನಾಯಿಯು ಹುಲಿಯನ್ನು ಹಿಂಬಾಲಿಸುತ್ತಿರುವ ದೃಶ್ಯ ನೈಜವಾಗಿದೆ. ಈ ಚಿತ್ರದ ಹಿಂಭಾಗದಲ್ಲಿ ೨೪ ಸೆಂ.ಮೀ. ಉದ್ದ ಹಾಗೂ ೨೦ ಸೆಂ.ಮೀ. ಎತ್ತರವಿರುವ ಹುಲಿಯೊಂದು ಜಿಂಕೆಯನ್ನು ಹಿಂಬಾಲಿಸುತ್ತಿದೆ. ಹುಲಿಯು ತನ್ನ ಬಲಗಾಲಿ ನಿಂದ ದಾಪು ಹೆಜ್ಜೆ ಇಡುತ್ತಿರುವು ದನ್ನು ಒತ್ತಾಗಿ ಚಿತ್ರಿಸಲಾಗಿದೆ. ಮತ್ತೊಂದು ನಾಯಿಯು ಹುಲಿಯತ್ತ ದೃಷ್ಟಿಯಿಟ್ಟು ತಿರುಗಿ ನೋಡುತ್ತಿರುವಂತೆ ಬಿಡಿಸಲಾಗಿದೆ. ಹಾಗೆಯೇ ೩ ಸೆಂ.ಮೀ. ಉದ್ದದ ಕಾಡು ಪ್ರಾಣಿ (ಹಂದಿ)ಯನ್ನು ಯೋಧನೊಬ್ಬ ಬಿಲ್ಲಿನಿಂದ ಗುರಿ ಯಿಟ್ಟು ಹೊಡೆಯುತ್ತಿರುವ ಚಿತ್ರವಿದೆ.

**ಅಪರೂಪದ ರಥ ಚಿತ್ರ :** ಮ್ಯಾದಾರಪಡೆಯ ವರ್ಣ ಚಿತ್ರದಲ್ಲಿ ರಥ ಹಾಗೂ ಗೋಪುರದ ಚಿತ್ರಗಳು ಆಕರ್ಷಣೀಯ ವಾಗಿವೆ. ಈ ಎರಡು ಚಿತ್ರಗಳು ಸುಂದರವಾಗಿ ಮೂಡಿ ಬಂದಿವೆ. ೨೧ ಅಂಗುಲ ಎತ್ತರವಿರುವ ಈ ರಥ ಚಿತ್ರವು ಅಡಿಪಾಯ, ಅಧಿಷ್ಠಾನ, ಮಂಟಪ, ಗೋಪುರ (ಪತಾಕೆಗಳಿಂದ ಕೂಡಿದ ಭಾಗ) ಮತ್ತು ಕಳಸದಿಂದ ಕೂಡಿದ ಶಿಖರದ ಭಾಗಗಳನ್ನು ಒಳಗೊಂಡಿದೆ. ರಥದ ಎರಡು ಬದಿಯಲ್ಲಿ ೧೦ ಬಾವುಟಗಳು ಹಾರಾಡುತ್ತಿವೆ. ರಥದ ಗೋಪುರದ ತುದಿಯಲ್ಲಿ ಗಂಟೆಯಾಕಾರದ ಗ್ರೀವ ಹಾಗು ಅದರ ಮೇಲೆ ಕಡಗೋಲು ನೆಲ್ಲಿಯ ಆಕಾರವನ್ನು ಹೋಲುವ ಶಿಖರವಿದ್ದು, ತುದಿಯಲ್ಲಿ ಭವ್ಯವಾದ ಕಳಸವಿದೆ. ಇದು ರಥದ ಅತ್ಯಂತ ಆಕರ್ಷಕ ಭಾಗವಾಗಿ ಮೂಡಿ ಬಂದಿದೆ. ಆದರೆ ರಥಕ್ಕೆ ಗಾಲಿಗಳನ್ನು ಮೂಡಿಸದೇ ಇರುವುದು ವಿಶೇಷ. ರಥದ ಎಡಬದಿಯಲ್ಲಿ ದೇವಾಲಯದ ಗೋಪುರವನ್ನು ಹೋಲುವ ಚಿತ್ರವೊಂದಿದೆ. ಈ ಗೋಪುರವು ಮೂರು ಹಂತಗಳನ್ನು ಹೊಂದಿದ್ದು ಮಧ್ಯ ಭಾಗದಲ್ಲಿ ಚೌಕಾಕಾರದ ಮನೆಗಳನ್ನು ಚಿತ್ರಿಸಲಾಗಿದೆ. ಗೋಪುರಕ್ಕೆ ಬಿಳಿ ಹಾಗೂ ಕೆಂಪು ಬಣ್ಣ ಗಳೆರಡನ್ನು ಬಳಸಲಾಗಿದೆ. ಗೋಪುರದ ಮೇಲ್ಭಾಗದಲ್ಲಿ ಪಕ್ಷಿಯೊಂದು ರೆಕ್ಕೆ ಬಿಚ್ಚಿ ಕುಳಿತುಕೊಂಡಂತಿದೆ. ಇದರ ಬಲ ಭಾಗದಲ್ಲಿ ಗಿಡದ ಮೇಲೆ ಕುಳಿತಿರುವ ಪಕ್ಷಿಗಳ ಚಿತ್ರಣವಿದೆ. ಗೋಪುರದ ಮೇಲ್ಭಾಗದಲ್ಲಿ ಸರ್ಪ, ಗಿಡ, ಸೂರ್ಯ, ಚಂದ್ರ, ಚಕ್ರವ್ಯೂಹ ಮತ್ತು ನಿರ್ದಿಷ್ಟವಾಗಿ ಗುರುತಿಸಲಾಗದ ಬಿಳಿ ಬಣ್ಣದ ಮಂಡಲಾಕೃತಿಯ ಅನೇಕ ಚಿತ್ರಗಳಿವೆ.

**ಕೋಟೆ :** ಸಂತೆ ಗುಡ್ಡದ ಪಕ್ಕದಲ್ಲಿರುವ ಊರುಗುಡ್ಡದ ಮೇಲೆ ಶಿಥಿಲಗೊಂಡಿರುವ ಕೋಟೆ ಇದೆ. ಈ ಕೋಟೆಯು ಚಿತ್ರದುರ್ಗದ ಪಾಳೇಗಾರರ ಗಡಿ ಕೋಟೆಗಳಲ್ಲೊಂದಾಗಿದೆ. ಈ ಕೋಟೆಯನ್ನು ಚಿತ್ರದುರ್ಗದ ಪಾಳೆಯಗಾರರು ಜರಿ ಮಲೆ, ರಾಯದುರ್ಗ ಮುಂತಾದ ಪಾಳೇಗಾರರ ಉಪಟಳ ವನ್ನು ತಡೆಯಲು ನಿರ್ಮಿಸಿದ್ದರೆನ್ನಬಹುದು. ಕೋಟೆಯನ್ನು ಬೂದ್ಲುಗುಂಡು ಮತ್ತು ಊರುಗುಡ್ಡಗಳನ್ನು ಬಳಸಿಕೊಂಡು ಮೂರು ಹಂತಗಳಲ್ಲಿ ನಿರ್ಮಿಸಲಾಗಿದೆ. ಬೂದ್ಲುಗುಂಡು ಮತ್ತು ಊರುಗುಡ್ಡಗಳ ಮಧ್ಯೆ ಇರುವ ಸ್ಥಳ ದುರ್ಗವು ಗ್ರಾಮ ವಿಸ್ತರಣೆಯಿಂದಾಗಿ ನಾಶಗೊಂಡಿದೆ. ಗುಡ್ಡದ ಮೇಲ್ಭಾಗದಲ್ಲಿ ಮೂರು ಸುತ್ತಿನ ಕೋಟೆಯ ಕೆಲವು ಭಾಗಗಳು ಮಾತ್ರ ಉಳಿದುಕೊಂಡಿದೆ. ಬೂದ್ಲುಗುಂಡು ಬೆಟ್ಟದ ಸಾಲು ಪ್ರಾಕೃತಿಕವಾಗಿ ಕೋಟೆಗೆ ರಕ್ಷಣೆ ನೀಡಿದೆ. ಬೂದ್ಲುಗುಂಡಿಗೆ ಹತ್ತಿರವಿರುವ ಮಾನಪ್ಪನ ಬುರುಜಿನ ಕೋಟೆ ಸುತ್ತು ಮುತ್ತ ಊರುಕುಂಟೆ ಬುರುಜಿನಿಂದ ಪ್ರಾರಂಭವಾಗುವ ಕೋಟೆ ಸಾಲುಗಳನ್ನು ಊರುಗುಡ್ಡಕ್ಕೆ ಸಂಪರ್ಕಿಸಲಾಗಿದೆ. ಈ ಮಧ್ಯೆ ವಿಶಾಲವಾದ ಪ್ರದೇಶದಲ್ಲಿ ಊರುಕುಂಟೆ, ಹನುಮಂತ, ನಗರೇಶ್ವರ ಮತ್ತು ಕಾಳಮ್ಮ ದೇವಾಲಯಗಳು, ಕಂಚುಗಾರರ ಬೀದಿ, ಬಡಿಗಲ್ಲುಗಳು ಮುಂತಾದ ಸ್ಮಾರಕಗಳಿವೆ. ಗುಡ್ಡದ ಮೇಲ್ಭಾಗದಲ್ಲಿ ಗರಡಿ ಮನೆ, ಆಂಜನೇಯ ದೇವಾಲಯ, ಗಚ್ಚುದೊಣೆ, ಉಪ್ಪು ದೊಣೆ, ಅಕ್ಕ–ತಂಗಿ, ಹಾಗೂ ಬೂದಿ

ಸಿದ್ದಪ್ಪನ ದೋಣೆಗಳಿವೆ. ಗುಡ್ಡದ ತುದಿಯಲ್ಲಿ ಕಾಳಮ್ಮ ಹಾಗೂ ಚಲಿಕುಂಟೆ ಬುರುಜುಗಳಿವೆ.

**ವಾಣಿಜ್ಯ ಕೇಂದ್ರ :** ಸಂತೆಗುಡ್ಡವು ಹಿಂದೆ ಪಂಚ ಕರಕುಶಲ ಕರ್ಮಿಗಳ ಕೈಗಾರಿಕಾ ನೆಲೆ ಹಾಗೂ ವಾಣಿಜ್ಯ ಕೇಂದ್ರವಾಗಿತ್ತೆನ್ನಬಹುದು. ಇಲ್ಲಿ ವಿಶ್ವಕರ್ಮರು ಅಥವಾ ಪಾಂಚಾಳರು ನೆಲೆಸಿದ್ದರೆಂಬುದಕ್ಕೆ ಸ್ಥಳೀಯ ತಾಮ್ರ ಶಾಸನವೊಂದು ಮಾಹಿತಿ ನೀಡುತ್ತದೆ[೧]. ಬಡಗಿ, ಕಂಚುಗಾರ, ಅಕ್ಕಸಾಲಿ, ಶಿಲಾ ಶಿಲ್ಪಿ, ಕಮ್ಮಾರ ಇವರುಗಳನ್ನು ವಿಶ್ವಕರ್ಮರೆಂದು ಕರೆಯಲಾಗಿದೆ.[೨] ಅಲ್ಲದೆ ಕೋಟೆಯಲ್ಲಿರುವ ಕಂಚುಗಾರರ ಬೀದಿ, ಕಲ್ಲುಗಾಣಗಳು, ಬಡಿಗಲ್ಲುಗಳು, ಇವರ ಕುಲದೇವತೆಯಾದ ಕಾಳಮ್ಮ ದೇವಾಲಯ, ಕಬ್ಬಿಣದ ಕಿಟ್ಟಗಳು ಇವರ ಇರುವಿಕೆಯನ್ನು ಸಮರ್ಥಿಸುತ್ತವೆ. ಇವರು ಪಕ್ಕದ ಗುಡ್ಡಗಳಲ್ಲಿ ಸಿಗುತ್ತಿದ್ದ ಅದಿರನ್ನು ತಂದು ಕರಗಿಸಿ, ಲೋಹವನ್ನು ಬೇರ್ಪಡಿಸಿ ವಿವಿಧ ಕರ-ಕುಶಲ ವಸ್ತುಗಳನ್ನು ತಯಾರಿಸುತ್ತಿದ್ದರು. ಹಾಗೆಯೇ ತಯಾರಿಸಿದ ವಸ್ತುಗಳನ್ನು ಇಲ್ಲಿ ನಡೆಯುತ್ತಿದ್ದ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ಹಾಗಾಗಿ ಸಂತೇಗುಡ್ಡವು ಒಂದು ಕಾಲದಲ್ಲಿ ಪ್ರಮುಖ ವಾಣಿಜ್ಯಕೇಂದ್ರವಾಗಿತ್ತು. ಈ ಹಿನ್ನೆಲೆಯಲ್ಲಿ ಬ್ರಿಟೀಷರು ನಮ್ಮ ದೇಶವನ್ನು ಆಳುತ್ತಿರುವ ಸಂದರ್ಭದಲ್ಲಿ ಇಲ್ಲಿ ಒಂದು ರೆಜಿಮೆಂಟ್‌ನ್ನು ಸ್ಥಾಪಿಸಿದ್ದರೆಂದು ಸ್ಥಳೀಯರು ತಿಳಿಸುತ್ತಾರೆ.

**ದೇವಾಲಯಗಳು :** ಸಂತೇಗುಡ್ಡದಲ್ಲಿ ಹನುಮಂತ, ಕಾಳಮ್ಮ ಹಾಗೂ ನಗರೇಶ್ವರ ದೇವಾಲಯಗಳಿವೆ. ಹನುಮಂತನ ದೇವಾಲಯಕ್ಕೆ ಗ್ರಾಮಸ್ಥರು ರಕ್ಷಣೆ ಕಲ್ಪಿಸಿದ್ದಾರೆ. ನಗರೇಶ್ವರ ಹಾಗೂ ಕಾಳಮ್ಮ ದೇವಾಲಯಗಳು ಶಿಥಿಲಗೊಂಡಿವೆ. ದೇವಾಲಯಗಳು ನೆಲೆಗೊಂಡಿರುವ ಪ್ರದೇಶದಲ್ಲಿಯೇ ಹಿಂದೆ ಸಂತೆ ನಡೆಯುತ್ತಿದ್ದುದಕ್ಕೆ ದೇವಾಲಯದ ಮುಂಭಾಗದಲ್ಲಿರುವ ಕಾಳಮ್ಮನ ಬಜಾರು, ತೇರು ಬಜಾರುಗಳು ಸಾಕ್ಷಿಗಳಾಗಿವೆ. ಈ ಭಾಗದಲ್ಲಿ ಸಾಕಷ್ಟು ಸಂಖ್ಯೆಯ ಬಡಿಗಲ್ಲುಗಳು, ಕಬ್ಬಿಣದ ಕಿಟ್ಟಗಳು ಈಗಲೂ ಕಂಡು ಬರುತ್ತವೆ. ಕಾಳಮ್ಮ ದೇವಾಲಯ ಪಂಚಕರ್ಮಿಗಳ ಕುಲದೇವತಾ ಗುಡಿಯಾಗಿದೆ.[೩] ಇದು ಗರ್ಭಗೃಹ, ಅರ್ಧ ಮಂಟಪ, ಸಭಾ ಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದ ಮೇಲೆ ದ್ವಿತಳ ಶಿಖರವಿದೆ. ಗರ್ಭಗೃಹದ ಬಾಗಿಲ ಮೇಲೆ ಗಜಲಕ್ಷ್ಮಿ, ಬಾಗಿಲ ವಾಡಗಳ ಮೇಲೆ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಐದು ಅಡಿ ಎತ್ತರದಲ್ಲಿರುವ ಈ ಶಿಲ್ಪಗಳನ್ನು ಗಾರೆ ಗಚ್ಚಿನಿಂದ ನಿರ್ಮಿಸಿದ್ದಾರೆ. ಅರ್ಧ ಮಂಟಪದಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ಕಮಾನು ರಚಿಸಲಾಗಿದೆ. ಗೋಡೆಯ ಮೇಲೆ ಕಾರ್ತಿಕೇಯ, ಪರಶುರಾಮ ಮುಂತಾದ ಚಿತ್ರಗಳಿವೆ. ಕಾಳಮ್ಮ ದೇವಾಲಯದ ಪಕ್ಕದಲ್ಲಿಯೆ ನಗರೇಶ್ವರ ದೇವಾಲಯ ಇದೆ. ದೇವಾಲಯವು ಗರ್ಭಗೃಹ, ಅರ್ಧ ಮಂಟಪ, ಸಭಾ ಮಂಟಪಗಳನ್ನೊಳ ಗೊಂಡಿದೆ. ದೇವಾಲಯದಲ್ಲಿ ನಂದಿ, ಪದ್ಮ, ಆಂಜನೇಯ ಮುಂತಾದ ಶಿಲ್ಪಗಳಿವೆ.

ಇಲ್ಲಿಯ ಗವಿ ವರ್ಣ ಚಿತ್ರಗಳು ಸ್ಥಳೀಯ ಹಾಗೂ ಧಾರ್ಮಿಕ ಆಚರಣೆಗಳ ಸಂಬಂಧವನ್ನು ಸೂಚಿಸುತ್ತವೆ. ಉದಾ: ನಗರೇಶ್ವರ ದೇವಾಲಯಕ್ಕಿದ್ದ ಗೋಪುರ ಹಾಗೂ ತೇರು ಬೀದಿಯಲ್ಲಿದ್ದ ರಥಗಳು ಇಂದು ಸಂಪೂರ್ಣವಾಗಿ ಶಿಥಿಲಗೊಂಡಿದ್ದರೂ, ಗುಹೆಯಲ್ಲಿ ಮೂಡಿರುವ ವರ್ಣ ಚಿತ್ರಗಳು ಅವುಗಳ ಇರುವಿಕೆಯನ್ನು ಜೀವಂತವಾಗಿಸುತ್ತವೆ. ಹಾಗೆಯೇ ಗಜ ಕಾಳಗ, ಅಶ್ವ ಕಾಳಗ ಕಾಲ್ದಳಗಳ ಹೋರಾಟಗಳ ಕಲ್ಪನೆ ಇಲ್ಲಿಯ ಚಿತ್ರಗಳಿಂದ ವ್ಯಕ್ತವಾಗುತ್ತವೆ. ಮುಖ್ಯವಾಗಿ ಇಲ್ಲಿಯ ವರ್ಣಚಿತ್ರಗಳು ಹಾಗೂ ಪ್ರಾಚ್ಯಾವಶೇಷಗಳು ಸಂತೇಗುಡ್ಡವು ಪಡೆದಿರುವ ಚಾರಿತ್ರಿಕ ಮಹತ್ವದ ಕುರಿತಂತೆ ಆಸಕ್ತಿ ಮೂಡಿಸುವಲ್ಲಿ ಸಹಕಾರಿಯಾಗಿವೆ. ಈ ದಿಸೆಯಲ್ಲಿ ಸಮಗ್ರ ಅಧ್ಯಯನ ನಡೆಸುವ ಅವಶ್ಯಕತೆ ಇದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೧೧** (ಹಳೆಯ ಆವೃತ್ತಿ)., ೧೯೦೩, ಮೊಳಕಾಲ್ಮೂರು ೨೫.

೨. **ಕರಕುಶಲ ಕಲೆಗಳು**, ಭಾಗ-೨, ಕರಿಗೌಡ ಬೀಚನಹಳ್ಳಿ, (ಸಂ) ೨೦೦೦; ಕನ್ನಡ ವಿ.ವಿ. ಹಂಪಿ, ಪು. ೨೬.

೩. ಡಾ॥ ಕೆ. ಎಸ್. ಕುಮಾರಸ್ವಾಮಿ ೧೯೯೬ : **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಪು. ೧೪೧.



(ಕ್ಷೇತ್ರ ಕಾರ್ಯ ಹಾಗೂ ಲೇಖನವನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ನೆರವಾದ ಹಂಪಿ ಕನ್ನಡ ವಿ.ವಿ.ಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪ್ರವಾಚಕರಾದ ಡಾ॥ ಸಿ. ಮಹದೇವ ಹಾಗೂ ಉಪನ್ಯಾಸಕರಾದ ಡಾ॥ ಎಸ್. ವೈ. ಸೋಮಶೇಖರ್ ಮತ್ತು ಸಂತೇಗುಡ್ಡದ ಗ್ರಾಮಸ್ಥರಿಗೆ ನನ್ನ ಕೃತಜ್ಞತಾ ಪೂರ್ವಕ ವಂದನೆಗಳು.

ಕು. ಜಯಮ್ಮ ಬಿ.*

# ಮುಂಬೈ-ಕರ್ನಾಟಕದ ಕೆಲವು ಪುರಾತತ್ವ ನೆಲೆಗಳು

ಗೋಧೂಳ್ಳಿ, ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಗೋಧೂಳ್ಳಿಯು ಅಳ್ನಾವರದಿಂದ ಗೋವಾಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೭ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಎರಡು ಕಡೆ ಹಾಳಾದ ಜನವಸತಿ ನೆಲೆಗಳಿವೆ. ಒಂದು ನೆಲೆಯ ಗ್ರಾಮದ ಪೂರ್ವಭಾಗದಲ್ಲಿ ಆಂಜನೇಯ ದೇವಾಲಯದ ಹಿಂಭಾಗದಲ್ಲಿದೆ. ಇದು ಸುಮಾರು ಒಂದು ಹೆಕ್ಟೇರ್ ವಿಸ್ತೀರ್ಣದಲ್ಲಿದೆ. ಈ ಜಾಗ ದಿನ್ನೆ ಆಕಾರದಲ್ಲಿದೆ ಈ ನೆಲೆಯ ಬದಿಯಲ್ಲಿಯೇ ಕಲ್ಲುಗಳನ್ನು ವೃತ್ತಾಕಾರವಾಗಿ ಹೂತಿರುವ ಮೂರು ಸ್ಥಳಗಳಿವೆ. ಇಲ್ಲಿ ಸಂಪೂರ್ಣ ಗಿಡ-ಗಂಟಿಗಳು ಬೆಳೆದಿರುವುದರಿಂದ ಇದು ಏನೆಂಬುದು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಇದರ ಬದಿಯಲ್ಲಿಯೇ ಮತ್ತೊಂದು ದಿನ್ನೆ ಇದೆ. ಇಲ್ಲೆಲ್ಲಾ ಇಟ್ಟಿಗೆಗಳು ಗುಂಪಾಗಿ ಬಿದ್ದಿವೆ. ಪ್ರಾಯಶಃ ಈ ಜಾಗ ಯಾವುದಾದರೂ ಪ್ರಾಚೀನ ದೇವಾಲಯದ ಸ್ಥಳವಾಗಿರಬೇಕು. ಏಕೆಂದರೆ ಇಲ್ಲಿ ಗುರುತಿಸಲಾಗದಷ್ಟು ಭಗ್ನಗೊಂಡ ಶಿಲ್ಪಗಳಿವೆ. ಈ ಮೂರು ಕಡೆ ಅನೇಕ ಗಡಿಗೆ-ಮಡಿಕೆ ಇಟ್ಟಿಗೆಗಳು ಸಂಗ್ರಹವಾಗಿವೆ. ಮತ್ತೊಂದು ನೆಲೆಯು ಗ್ರಾಮದ ಕೆರೆಯ ಬಳಿಯ ಹಾಳಾದ ಈಶ್ವರ ದೇವಾಲಯದ ಬಳಿ ಇದೆ. ಇಲ್ಲಿಯೂ ಸಹ ಅನೇಕ ಗಡಿಗೆ-ಮಡಿಕೆ, ಇಟ್ಟಿಗೆ ತುಂಡುಗಳು ದೊರೆತಿವೆ. ಈ ನೆಲೆಯನ್ನು ಈಗ ಹೊಲ ವನ್ನಾಗಿ ಪರಿವರ್ತಿಸಲಾಗಿದೆ.

ಈ ನೆಲೆಗಳಲ್ಲಿ ಕಂಡುಬಂದ ಗಡಿಗೆ-ಮಡಿಕೆಗಳಲ್ಲಿ ಹೆಚ್ಚಿನವು ಕೆಂಪುಬಣ್ಣದ್ದಾಗಿವೆ. ಈ ಗಡಿಗೆಗಳ ಸಂಗ್ರಹದಲ್ಲಿ ಒಂದು ಗಡಿಗೆಯ ತುಂಡು ವಿಶೇಷವೆನಿಸಿದೆ. ಅದು ಕೆಂಪು ಬಣ್ಣದ್ದಾಗಿದೆ. ಇದರ ರಚನೆ ಮತ್ತು ವಿನ್ಯಾಸ ಉಳಿದವು ಗಳಿಗಿಂತ ಭಿನ್ನವಾಗಿದೆ. ಆ ಗಡಿಗೆಯು ಸುಮಾರು ಕ್ರಿ.ಶ. ೨ನೇ ಶತಮಾನದ ಗಡಿಗೆಯನ್ನು ಹೋಲುವುದು ಉಳಿದ



ಗೋಧೂಳ್ಳಿ

ಗಡಿಗೆಗಳ ತುಂಡುಗಳು ಮಧ್ಯಯುಗೀನ ಮತ್ತು ನಂತರ ಕಾಲದ್ದಾಗಿವೆ.

ಇಲ್ಲಿ ಹೆಚ್ಚಾಗಿ ಹಂಚು ಮತ್ತು ಹಂಚಿನ ತುಂಡುಗಳು ಕಾಣಿಸಿವೆ. ಒಟ್ಟು ನಾಲ್ಕೈದು ರೀತಿಯ ಹಂಚುಗಳು ಇಲ್ಲಿವೆ. ಒಂದು ಹಂಚಿನ ತುದಿಯು ಅರ್ಧವೃತ್ತಾಕಾರವಾಗಿದೆ. ಅದರ ಹಿಂದಿನ ಭಾಗ ಮುರಿದಿದೆ. ಒಂದು ಹಂಚಿನ ತುಂಡಿನಲ್ಲಿ

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.


ಗೋಧೂಳ್ಳಿ

ಮುಂದಿನ ಭಾಗ ಸ್ವಲ್ಪ ಚೂಪಾಗಿ ಹಿಂದಿನ ಭಾಗ ಆಯತಾಕಾರವಾಗಿದೆ. ಆದರೆ ಹಿಡಿಕೆಯ ಕುರುಹು ಕಾಣುವುದಿಲ್ಲ. ಹಿಡಿಕೆ ಯಾವ ಭಾಗದಲ್ಲಿ ಇತ್ತು ಎಂದು ತಿಳಿಯಬೇಕಾದರೆ ಅಲ್ಲಿ ಇಂಥ ಒಂದು ಪೂರ್ಣ ಪ್ರಮಾಣದ ಹಂಚನ್ನು ಹುಡುಕಿದಾಗ ಮಾತ್ರ ಸಾಧ್ಯ. ಮತ್ತೊಂದು ಹಂಚಿನ ತುದಿಯಲ್ಲಿ ಎರಡು ಪಾರ್ಶ್ವಗಳು ಅರ್ಧಗೋಲಾಕಾರದಲ್ಲಿವೆ. ಇನ್ನೊಂದು ಹಂಚು ಆಯತಾಕಾರವಾಗಿದ್ದು ಅದರ ಸ್ವರೂಪ ತಿಳಿಯುವುದಿಲ್ಲ. ಈ ಎಲ್ಲ ಹಂಚುಗಳ ಎರಡೂ ಮಗ್ಗುಲುಗಳು ಚಪ್ಪಟೆಯಾಗಿವೆ. ಆದರೆ ಮತ್ತೊಂದು ಹಂಚು ಇಲ್ಲಿ ಗಮನ ಸೆಳೆಯುತ್ತದೆ. ಇದರ ಮುಂಭಾಗ ಅರ್ಧವೃತ್ತಾಕಾರದಲ್ಲಿದೆ. ಅದರ ಮೇಲಿನಭಾಗ ಮತ್ತು ಮಧ್ಯಭಾಗದ ಕೆಲವು ಸುಳಿಗಳನ್ನು ಗಮನಿಸಿದರೆ ಅದರ ಕೆಳಭಾಗ ಸ್ವಲ್ಪ ತಗ್ಗಾಗಿರುವುದು ಕಂಡುಬರುತ್ತದೆ. ಈ ಹಂಚುಗಳೆಲ್ಲ ಎರಡು ಸೆಂ.ಮೀ. ದಪ್ಪ ಇವೆ. ಈ ಹಂಚುಗಳ ಲಕ್ಷಣಗಳು ಬಹುತೇಕ ಕ್ರಿ.ಶ. ೫-೬ನೇ ಶತಮಾನಕ್ಕೆ ಸೇರಿದವೆಂದು ತರ್ಕಿಸಬಹುದು. ಈ ಹಂಚುಗಳ ನಮೂನೆಗಳು ಈಗಾಗಲೆ ದೊರೆತ ಹಲಸಿ, ವಡಗಾಂವ-ಮಾಧವಪುರ ಮತ್ತು ಗುಡ್ನಾಪುರದ ಹಂಚುಗಳನ್ನು ಹೋಲುವುದಿಲ್ಲ. ಆದರೆ ಬಣ್ಣ, ಸ್ವರೂಪ, ರಚನೆ ಆಕಾರ ಆ ಕಾಲದವುಗಳಿಗಿಂತ ಹೆಚ್ಚು ಭಿನ್ನ ಇರುವುದು ಗಮನೀಯ.

ಮೊದಲನೇ ನೆಲೆಯ ಬಳಿ ರಾಷ್ಟ್ರಕೂಟರ ಕಾಲಕ್ಕೆ ಸೇರಿದ ಸುಮಾರು ಆರು ವೀರಗಲ್ಲುಗಳಿವೆ. ಅವುಗಳನ್ನು ಶಿಲ್ಪಗಳಲ್ಲಿ ವಿವರಿಸಲಾಗಿದೆ.

### ತಬಕದ ಹೊನ್ನಳ್ಳಿ

ತಬಕದ ಹೊನ್ನಳ್ಳಿಯು ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಒಂದು ಚಿಕ್ಕ ಗ್ರಾಮವಾಗಿದೆ. ಇದು ಕಲಘಟಗಿಯಿಂದ ತಡಸಕ್ಕೆ ಹೋಗುವ ಮಾರ್ಗದಲ್ಲಿದೆ. ಈ ಗ್ರಾಮದಿಂದ ಬೀರವಳ್ಳಿಗೆ ಹೋಗುವ ರಸ್ತೆಯಲ್ಲಿ ಚಿಕ್ಕ ಬ್ರಹ್ಮಾನಂದಮಠವಿದೆ. ಈ ಮಠದ ಮಹಾಮಂದಿರ ನಿರ್ಮಿಸಲು ಗುಡ್ಡದ ಮೇಲೆ ಬುನಾದಿಯನ್ನು ತೋಡುತ್ತಿರುವಾಗ ಕಬ್ಬಿಣದ ಕಿಟ್ಟಗಳು ದೊರೆತಿದ್ದು ಗ್ರಾಮದ ಜನರು ಅವುಗಳ ಮೇಲಿನ ಉಬ್ಬು-ತಗ್ಗುಗಳನ್ನು ಗಮನಿಸಿ ಅವುಗಳನ್ನು ಮೂರ್ತಿಗಳೆಂದು ಭಾವಿಸಿ ಪತ್ರಿಕಾವರದಿಯನ್ನು ನೀಡಿದ್ದರು. ಅವುಗಳನ್ನು ಪರಾಮರ್ಶಿಸಲು ಸ್ಥಳಕ್ಕೆ ಭೆಟ್ಟಿ ನೀಡಿದಾಗ ಅಲ್ಲಿ ಪ್ರಾಚೀನ ಜನವಸತಿ ನೆಲೆ ಇರುವುದು ಹಾಗೂ ಅವುಗಳು ಮೂರ್ತಿಗಳಲ್ಲ; ಕಬ್ಬಿಣದ ಶಿಲ್ಪದ ತುಂಡುಗಳೆಂದು ಸ್ಪಷ್ಟಪಡಿಸಿಕೊಳ್ಳಲಾಯಿತು.

ಈ ನೆಲೆಯ ಸುಮಾರು ಎರಡು-ಮೂರು ಹೆಕ್ಟೇರ್ ವಿಸ್ತಾರವಾಗಿದೆ. ಇಲ್ಲಿ ಬೂದುಗೆಂಪು ಮಣ್ಣಿದೆ. ಈ ನೆಲೆಯಲ್ಲಿ ಅನೇಕ ಗಡಿಗೆ ಮಡಿಕೆ ಮತ್ತು ಇನ್ನಿತರ ಸಾಂಸ್ಕೃತಿಕ ವಸ್ತುಗಳು ಹರಡಿವೆ. ಇಲ್ಲಿ ಸಂಗ್ರಹಿಸಿದ ಗಡಿಗೆ-ಮಡಿಕೆಗಳು ಕಬ್ಬಿಣದ ಬೃಹತ್ ಶಿಲಾ ಸಂಸ್ಕೃತಿಯ ಕೆಂಪು ಬಣ್ಣದ ಗಡಿಗೆಗಳನ್ನು ಹೋಲುತ್ತವೆ. ಇನ್ನುಳಿದವು ತದನಂತರದ ಕಾಲದ್ದಾಗಿವೆ. ಈಗಾಗಲೇ ಕಬ್ಬಿಣ ಕಿಟ್ಟ ತುಂಡುಗಳು ಕಬ್ಬಿಣ ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ಕಂಡುಬಂದಿರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಅದು ಗುಡ್ಡ ಪ್ರದೇಶವಾಗಿದ್ದು ಅಲ್ಲಿ ಹುಲ್ಲು ಬೆಳೆದಿರುವುದರಿಂದ ಇತರೆ ಸಾಂಸ್ಕೃತಿಕ ವಸ್ತುಗಳನ್ನು ಸಂಗ್ರಹಿಸುವುದು ಜಟಿಲವಾಗಿದೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ಅಲ್ಲಿ ಕೈಗೊಳ್ಳಬೇಕಾಗಿದೆ.

### ಸಿದ್ಧಾಪುರ

ಸಿದ್ದಾಪುರವು ಧಾರವಾಡದಿಂದ ಅಳ್ನಾವರದ ರಸ್ತೆಯಲ್ಲಿ ವಾಯುವ್ಯಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಇಲ್ಲಿಯ ಪಂಚಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿ ಒಂದು ಮತ್ತು ಹಾಳು ಬಸವಣ್ಣ ಗುಡಿ ಬಳಿ ಒಂದು ಒಟ್ಟು ಎರಡು ಹಾಳಾದ ನೆಲೆಗಳಿವೆ. ದೇವಾಲಯದ ಮುಂಭಾಗದಲ್ಲಿರುವ

ಸುಮಾರು ಒಂದೆರಡು ಹೆಕ್ಟೇರ್ ಪ್ರದೇಶದಲ್ಲಿ ಚದುರಿದ ಗಡಿಗೆ–ಮಡಿಕೆಗಳು, ಇಟ್ಟಿಗೆಗಳು ದೊರೆತಿವೆ. ಹಾಳು ಬಸವಣ್ಣನ ಗುಡಿ ಬಳಿ ಸುಮಾರು ಅರ್ಧ ಹೆಕ್ಟೇರ್ ಪ್ರದೇಶದಲ್ಲಿ ಎರಡು ಕಡೆ ಗುಂಪು–ಗುಂಪಾಗಿ ಇಟ್ಟಿಗೆಗಳು ಕಂಡುಬರುತ್ತವೆ.

ಈ ನೆಲೆಯಲ್ಲಿ ಒಂದು ಕೆಂಪು ಗಡಿಗೆ–ಮಡಿಕೆಗಳು ಮತ್ತೊಂದು ಬೂದು ಗಡಿಗೆ ಮತ್ತು ಇನ್ನಿತರ ಲಕ್ಷಣದ್ದಾಗಿವೆ. ಕೆಂಪು ಗಡಿಗೆಗಳು ಸುಮಾರು ಕ್ರಿ.ಶ. ೩–೪ನೇ ಶತಮಾನಕ್ಕೆ ಸೇರಿದ್ದಾಗಿವೆ. ಉಳಿದವು ಮಧ್ಯಯುಗೀನ ಕಾಲಕ್ಕೆ ಸೇರಿವೆ. ಈ ನೆಲೆಯಲ್ಲಿ ದೊರೆತ ಒಂದು ಇಟ್ಟಿಗೆಯ ತುಂಡು ವಿಶೇಷ ಗಮನವನ್ನು ಸೆಳೆಯುತ್ತದೆ. ಗೋಡೆಯಲ್ಲಿ ಹಿಂಚಾಚು ಮುಂಚಾಚುಗಳನ್ನು ಹೊಂದಿದಂತಿರುವ ಈ ಇಟ್ಟಿಗೆಯ ತುದಿಯಲ್ಲಿ ಅಧಿಷ್ಠಾನ ಭಾಗದಂತೆ ಕೆಳಗಿನಿಂದ ಮೇಲಕ್ಕೆ ಐದು ಅಡ್ಡ ತರಗಳನ್ನು ಉದ್ದೇಶಪೂರ್ವಕವಾಗಿ ಕೆತ್ತಿರುವುದು ಕಾಣುತ್ತೇವೆ. ನಡುವಿನ ತರವು ದಪ್ಪವಾಗಿ ಮತ್ತು ಆಯತಾಕಾರವಾಗಿ ಮುಂದೆ ಚಾಚಿದೆ. ಹೀಗಾಗಿ ಈ ಇಟ್ಟಿಗೆಯನ್ನು ಗೋಡೆಯ ಅರೆಗಂಬವಾಗಿ ಬಳಸಿರುವ ಸಾಧ್ಯತೆ ಹೆಚ್ಚು. ಈ ನೆಲೆಯ ಇಟ್ಟಿಗೆಗಳು ಸುಮಾರು ಕ್ರಿ.ಶ. ೬ನೇ ಶತಮಾನಕ್ಕೆ ಸೇರುತ್ತವೆ.

**ಶಿಲ್ಪಗಳು :** ಗೋಧೂಳ್ಳಿಯ ಆಂಜನೇಯ ದೇವಾಲಯದ ಮುಂಭಾಗದಲ್ಲಿ ಆರು ವೀರಗಲ್ಲುಗಳಿವೆ.

**ವೀರಗಲ್ಲು–೧:** ವೀರಗಲ್ಲು ಮೂರು ದೃಶ್ಯಗಳಲ್ಲಿದೆ. ಶಿಲ್ಪದ ಬಲಭಾಗದ ಚಿತ್ರಗಳು ಕೆಳಗಿನಿಂದ ಮೇಲಿನವರೆಗೆ ಭಗ್ನಗೊಂಡಿವೆ. ಉಳಿದಿರುವ ಚಿತ್ರಗಳೆಂದರೆ ಕೆಳಗಿನ ದೃಶ್ಯದಲ್ಲಿ ಎಡಭಾಗದಲ್ಲಿ ಒಂದರ ಮೇಲೆ ಒಂದರಂತಿರುವ ಎರಡು ಕುದುರೆಗಳ ಮೇಲೆ ಇಬ್ಬರು ವೈರಿ ಪಡೆಯವರು ಕುಳಿತಿದ್ದಾರೆ. ಇಲ್ಲಿ ಕುದುರೆಗಳನ್ನು ದೊಡ್ಡದಾಗಿ ವೈರಿಗಳನ್ನು ಚಿಕ್ಕದಾಗಿ ತೋರಿಸಲಾಗಿದೆ. ಇವರಿಗೆ ಅಭಿಮುಖವಾಗಿ ವೀರ ಕೈಯಲ್ಲಿ ಬಿಲ್ಲು–ಬಾಣ ಹಿಡಿದು ನಿಂತಿದ್ದಾನೆ. ವೀರನ ಚಿತ್ರ ಸ್ವಲ್ಪ ಕಂಡುಬರುತ್ತಿದೆ. ಎರಡನೇ ದೃಶ್ಯದಲ್ಲಿ ನಾಲ್ವರು ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿ ದ್ದಾರೆ. ವೀರನ ಬದಿಯಲ್ಲಿರುವ ಇಬ್ಬರು ಅಪ್ಸರೆಯರು ಒಂದು ಕೈಯಲ್ಲಿ ವೀರನನ್ನು ಮತ್ತೊಂದು ಕೈಯಲ್ಲಿ ಕಲಶವನ್ನಿಡಿದು ನಿಂತಿರುವುದು ಗಮನೀಯ. ಕೊನೆಯ ಅಪ್ಸರೆಯರು ಒಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಅಪ್ಸರೆಯರ ಇಕ್ಕೆಲಗಳಲ್ಲಿ ಇಬ್ಬರು ಕಿರು ವ್ಯಕ್ತಿಗಳು ಡಮರು ಬಾರಿಸುತ್ತಿದ್ದಾರೆ. ಅಪ್ಸರೆಯರ ವೇಷಭೂಷಣಗಳು ಗಮನಸೆಳೆಯುತ್ತವೆ. ಕಿವಿಯಲ್ಲಿ ಅಗಲವಾದ ಕುಂಡಲ ಕೊರಳಲ್ಲಿ ಉದ್ದನೆಯ ಮಣಿಸರ, ಕೈಕಡಗ, ಕಾಲ್ಗಡಗ ಮುಂತಾದ ಆಭರಣಗಳನ್ನು ಧರಿಸಿರುವರು. ತಮ್ಮ ತಲೆಯ ಕೇಶವನ್ನು ನೆತ್ತಿಯ ಮೇಲೆ ಸಿಂಬೆಯಂತೆ



ಸಿದ್ದಾಪುರ ಹಾಳಾದ ನೆಲೆ

ವೃತ್ತಾಕಾರವಾಗಿ ಕಟ್ಟಿ ಅಲಂಕರಿಸಿದ್ದಾರೆ. ಮೇಲಿನ ದೃಶ್ಯದ ಮಧ್ಯದಲ್ಲಿ ಶಿವಲಿಂಗವಿದೆ. ಶಿವಲಿಂಗದ ಎಡಬದಿಯಲ್ಲಿ ಕುಳಿತ ನಂದಿ ಇದೆ. ಇದರ ಮೇಲ್ಭಾಗದಲ್ಲಿ ಯತಿ ನಿಂತು ಶಿವಲಿಂಗಕ್ಕೆ ಪೂಜಿಸುತ್ತಿದ್ದಾನೆ. ಬಹುಶಃ ಈತ ಕರ್ಪೂರ ಬೆಳಗುತ್ತಿರ ಬಹುದು. ಯತಿಯ ರುಮಾಲು ಹಿಂದಕ್ಕೆ ಉದ್ದವಾಗಿ ಜೋತು ಬಿದ್ದಿದೆ. ಕಚ್ಚೆ ಉಟ್ಟಿದ್ದಾನೆ. ಶಿವಲಿಂಗದ ಬಲಬದಿಯಲ್ಲಿ ವೀರ ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ವೀರ ತನ್ನ ಕೇಶವನ್ನು ನೆತ್ತಿಯ ಮೇಲೆ ವೃತ್ತಾಕಾರವಾಗಿ ಕಟ್ಟಿ ಸಿಂಗರಿಸಿ ಕೊಂಡಿದ್ದಾನೆ. ಈ ದೃಶ್ಯದ ಮೇಲಿನ ಪಟ್ಟಿಕೆಯಲ್ಲಿ ಎರಡು ಸಾಲಿನ ಶಾಸನವಿದೆ. ವಿಮಾನಕ್ಕೆ ಕಲಶವಿದೆ.

**ವೀರಗಲ್ಲು–೨:** ವೀರಗಲ್ಲಿನಲ್ಲಿ ಮೂರು ದೃಶ್ಯಗಳಿವೆ. ಕೆಳಗಿನ ದೃಶ್ಯ ಬಹುಶಃ ಹೋರಾಟದ ದೃಶ್ಯವಿದ್ದು ಅದು ಪೂರ್ಣ ಮಣ್ಣಿನಲ್ಲಿ ಹೂತು ಹೋಗಿ ಅಥವಾ ಭಗ್ನಗೊಂಡು ವೀರನ ರುಂಡಭಾಗ ಮಾತ್ರ ಕಂಡುಬರುತ್ತಿದೆ. ಎರಡನೆಯ ಭಾಗದಲ್ಲಿ ಮಡಿದ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ವೀರ ತನ್ನ ಕೈಗಳನ್ನು ಅಪ್ಸರೆಯರ ಭುಜದ ಮೇಲೆ ಹಾಕಿದ್ದಾನೆ. ಅಪ್ಸರೆಯರು ತಮ್ಮ ಕೈಗಳನ್ನು ವೀರನ ಸೊಂಟದ ಮೇಲೆ ಹಾಕಿದ್ದಾರೆ. ಎಡಭಾಗದ ಅಪ್ಸರೆಯರ ಬಳಿ ಮತ್ತೊಬ್ಬಳು ಸ್ತ್ರೀ ನಿಂತಿದ್ದು ಬಲಗೈಯಲ್ಲಿ ದಂತದಂತಹ ವಸ್ತುವನ್ನಿಡಿದಿದ್ದಾಳೆ. ಅಪ್ಸರೆಯರು ಕೇಶವನ್ನು ಹಿಂಬದಿಯಲ್ಲಿ ವೃತ್ತಾಕಾರವಾಗಿ ಸಿಂಗರಿಸಿಕೊಂಡಿದ್ದಾರೆ. ಈ ದೃಶ್ಯದ ಮೇಲಿನ ಮೂಲೆಗಳಲ್ಲಿ ಇಬ್ಬರು ಸ್ತ್ರೀಯರು ಏನನ್ನೋ ಹಿಡಿದು ನಿಂತಂತೆ ತೋರಿಸಿರುವುದು ಅಪರೂಪವಾಗಿದೆ. ಬಹುಶಃ ಇವರು ಸ್ತ್ರೀ ವಾದ್ಯಗಾರ್ತಿಯರಿರಬಹುದೇ(?). ಮೇಲಿನ ದೃಶ್ಯದ ಮಧ್ಯದಲ್ಲಿ ಶಿವಲಿಂಗವಿದೆ. ಇಲ್ಲಿ ಶಿವಲಿಂಗವನ್ನು ಇಬ್ಬರು ಯತಿಗಳು ಪೂಜಿಸುತ್ತಿರುವುದು ಮಹತ್ವದ್ದೆನಿಸಿದೆ. ಯತಿಗಳ ಬೆನ್ನ ಹಿಂದೆ ಜೋಳಿಗೆಗಳಿವೆ. ಇವರು

ತಲೆಗೆ ರುಮಾಲನ್ನು ಸುತ್ತಿಕೊಂಡಿದ್ದಾರೆ. ಶಿವಲಿಂಗಕ್ಕೆ ಪುಷ್ಪಾರ್ಚನೆಯನ್ನು ಮಾಡಲಾಗಿದೆ. ಶಿವಲಿಂಗದ ಬಲಬದಿಗೆ ವೀರ ಶಿವಲಿಂಗದ ಕಡೆ ಮುಖಮಾಡಿ ಅರ್ಧಪದ್ಮಾಸದಲ್ಲಿ ಕುಳಿತಿದ್ದಾನೆ. ಈತನ ಬಲಗೈ ಅಭಯಮುದ್ರೆಯಲ್ಲಿ, ಎಡಗೈ ತೊಡೆಯ ಮೇಲಿದೆ. ಶಿಲ್ಪದ ಪಾರ್ಶ್ವಗಳಲ್ಲಿ ಅಪ್ಸರೆಯರಿಬ್ಬರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಂದು ಕೈಯನ್ನು ಸೊಂಟದ ಮೇಲಿಟ್ಟಿದ್ದರೆ ಮತ್ತೊಂದು ಕೈಯಲ್ಲಿ ಚೌರಿಯನ್ನಿಡಿದಿದ್ದಾರೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಎರಡನೆಯ ಪಟ್ಟಿಕೆಯಲ್ಲಿ ಮಹಿಳಾ ವಾದ್ಯಗಾರ್ತಿಯರನ್ನು ಮೇಲಿನ ಪಟ್ಟಿಕೆಯಲ್ಲಿ ಚೌರಿಧಾರಿಯರನ್ನು ತೋರಿಸಿರುವುದು ವಿಶೇಷವೆನಿಸಿದೆ.

**ವೀರಗಲ್ಲು-೩:** ಈ ವೀರಗಲ್ಲಿನಲ್ಲಿ ಮೂರು ದೃಶ್ಯಗಳಿವೆ. ಶಿಲ್ಪದ ಕೆಳಗಿನ ಮತ್ತು ಎರಡನೆಯ ದೃಶ್ಯದ ಬಲಭಾಗದ ಚಿತ್ರಗಳು ಸ್ವಲ್ಪ ಭಗ್ನಗೊಂಡಿವೆ. ಕೆಳಗಿನ ದೃಶ್ಯದಲ್ಲಿ ವೀರ ಮೃತವ್ಯಕ್ತಿಯ ಮೇಲೆ ನಿಂತು ವೈರಿಗಳೊಡನೆ ಕಾದಾಡುತ್ತಿದ್ದಾನೆ. ಈತ ಕೈಯಲ್ಲಿ ಬಿಲ್ಲು-ಬಾಣಗಳನ್ನಿಡಿದು ಪ್ರಯೋಗ ಹಸ್ತದಲ್ಲಿದ್ದಾನೆ. ವೈರಿ ದಳದವರೂ ಸಹ ಬಿಲ್ಲು-ಬಾಣಗಳನ್ನಿಡಿದು ಪ್ರಯೋಗಭಂಗಿಯಲ್ಲಿದ್ದಾರೆ. ವೀರನ ಕಾಲಕೆಳಗಿರುವ ಮೃತ ವ್ಯಕ್ತಿಯನ್ನು ಇಲ್ಲಿ ದೊಡ್ಡದಾಗಿ ಚಿತ್ರಿಸಲಾಗಿದೆ. ಪ್ರಾಯಶಃ ಈತ ವೈರಿಪಡೆಯ ಮುಖ್ಯಸ್ಥನಿರಬಹುದು. ಎರಡನೆಯ ದೃಶ್ಯದ ಕೆಳಭಾಗ ಮತ್ತು ಬಲಬದಿಯ ಮೇಲಿನ ಭಾಗದಲ್ಲಿ ಮೋಡದ ಚಿತ್ರಣವನ್ನು ಮೂರು ಹಂತಗಳಲ್ಲಿ ಸಾಲಾಗಿ ಚಿತ್ರಸಲಾಗಿದೆ. ಈ ಮೋಡಣ ಚಿತ್ರದ ಮೇಲೆ ಮಡಿದ ವೀರನನ್ನು ಇಬ್ಬರು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಬದಿಗಳಲ್ಲಿ ವಾದ್ಯಮೇಳದವರಿದ್ದಾರೆ. ಎಡ ಮೂಲೆಯಲ್ಲಿ ಒಬ್ಬ ವ್ಯಕ್ತಿ ಕೈಯಲ್ಲಿ ಹಾರವನ್ನಿಡಿದು ಮೇಲಿನಿಂದ ಕೆಳಗೆ ಹಾರುತ್ತಿರುವಂತಿದ್ದಾನೆ. ವೀರ ಮತ್ತು ಅಪ್ಸರೆಯರು ತಲೆಗೆ ಮಣಿಗಳಿಂದ ತಯಾರಿಸಿದ ವಸ್ತ್ರವನ್ನು ಕಟ್ಟಿಕೊಂಡಿದ್ದಾರೆ. ನುತ್ತು ವೀರ ಮತ್ತು ಅಪ್ಸರೆಯರು ಕಟಿವಸ್ತ್ರ ಧರಿಸಿರುವುದು ಗಮನ ಸೆಳೆಯುತ್ತದೆ.

ಮೇಲಿನ ದೃಶ್ಯದಲ್ಲಿ ವೀರ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಬಲಗೈ ಅಭಯಮುದ್ರೆಯಲ್ಲಿ ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ. ಬದಿಗಳಲ್ಲಿ ಇಬ್ಬರು ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಂದು ಕೈಯನ್ನು ಸೊಂಟದ ಮೇಲಿಟ್ಟು ಮತ್ತೊಂದು ಕೈಯಲ್ಲಿ ಚೌರಿಯನ್ನಿಡಿದಿದ್ದಾರೆ. ಈ ಅಪ್ಸರೆಯರು ಸಹ ಪೀಠದ ಮೇಲೆ ನಿಂತಿದ್ದಾರೆ. ಈ ಚಿತ್ರಗಳ ಬಲಬದಿಯಲ್ಲಿ ವ್ಯಕ್ತಿಯೊಬ್ಬ ಬಹುಶಃ ವೀರ ಪದ್ಮಾಸನದಲ್ಲಿ ಕುಳಿತಿದ್ದಾನೆ. ಈತನ ಬಲಕ್ಕೆ ಯತಿ ನಿಂತು ಶಂಖ ಊದುತ್ತಿದ್ದಾನೆ. ದೃಶ್ಯದ ಎಡಭಾಗದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಯತಿಯೊಬ್ಬ ನಿಂತು ಪೂಜಿಸುತ್ತಿದ್ದಾನೆ. ಯತಿಯ ಮುಂದೆ ಕಮಂಡಲ ಇದೆ. ಶಿವಲಿಂಗದ ಕೆಳಭಾಗದಲ್ಲಿ ಕುಳಿತ ನಂದಿ ಇದೆ. ಶಿವಲಿಂಗಕ್ಕೆ ಪೇಟ/ಕಿರೀಟವನ್ನು ತೋರಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಮೇಲಿನ ದೃಶ್ಯವನ್ನು ವಿಮಾನದಲ್ಲಿ ತೋರಿಸಲಾಗಿದೆ.

**ವೀರಗಲ್ಲು-೪:** ಈ ವೀರಗಲ್ಲು ಸಹ ಮೂರು ಹಂತಗಳಲ್ಲಿದೆ. ಇಲ್ಲಿರುವ ದೃಶ್ಯಗಳು ಮೂರನೇ ವೀರಗಲ್ಲಿನಲ್ಲಿರುವ ದೃಶ್ಯಗಳಂತೆಯೇ ಇದ್ದು ಶಿಲ್ಪದ ನಿರೂಪಣೆ ಉತ್ತಮವಾಗಿದೆ. ವಿವರಣೆಯನ್ನು ಇಲ್ಲಿ [illegible]ಗಿ ತೋರಿಸಲಾಗಿದೆ.

ಕೆಳಗಿನ ದೃಶ್ಯದಲ್ಲಿ ವೀರ ಮೃತ ವ್ಯಕ್ತಿಯ ಮೇಲೆ ನಿಂತು ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೀರ ಕೈಯಲ್ಲಿ ಬಿಲ್ಲು-ಬಾಣ ಹಿಡಿದು ಪ್ರಯೋಗ ಭಂಗಿಯಲ್ಲಿದ್ದಾನೆ. ವೈರಿ ಪಡೆಯವರೂ ಸಹ ಕೈಯಲ್ಲಿ ಬಿಲ್ಲು-ಬಾಣ ಹಿಡಿದು ಮುನ್ನುಗ್ಗುತ್ತಿದ್ದಾರೆ. ಇಲ್ಲಿಯೂ ಸಹ ಮೃತ ವ್ಯಕ್ತಿಯನ್ನು ದೊಡ್ಡದಾಗಿ ತೋರಿಸಲಾಗಿದೆ. ವೀರನ ಹಿಂಬದಿಯಲ್ಲಿ ಗೋವುಗಳನ್ನು ಸಾಲಾಗಿ ತೋರಿಸಲಾಗಿದೆ. ಈ ಗೋವುಗಳ ಮಧ್ಯ ಒಂದು ಎಮ್ಮೆಯನ್ನು ತೋರಿಸಿರುವುದು ವಿಶೇಷವೆನಿಸಿದೆ. ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ ಎಮ್ಮೆಯನ್ನು ತೋರಿಸುವುದು ಸಾಮಾನ್ಯ. ಎರಡನೇ ದೃಶ್ಯದಲ್ಲಿ ವೀರನನ್ನು ಇಬ್ಬರು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಅಪ್ಸರೆಯರು ಒಂದು ಕೈಯಲ್ಲಿ ಕಲಶವನ್ನಿಡಿದಿದ್ದಾರೆ. ಇವರ ಕೆಳಭಾಗದಲ್ಲಿ ಮೋಡದ ಚಿತ್ರಣವನ್ನು ಹಂತ-ಹಂತವಾಗಿ ತೋರಿಸಲಾಗಿದೆ. ಎಡ ಮತ್ತು ಬಲ ಮೂಲೆಯಲ್ಲಿಯೂ ಮೋಡದ ಚಿತ್ರಣವನ್ನು ಹಂತ-ಹಂತವಾಗಿ ತೋರಿಸಲಾಗಿದೆ. ಎಡ ಮತ್ತು ಬಲ ಮೂಲೆಯಲ್ಲಿಯೂ ಮೋಡದ ಅಲಂಕರಣೆಯಿದೆ. ವೀರ ಅಪ್ಸರೆಯರೊಂದಿಗೆ ಇಲ್ಲಿ ವಾದ್ಯ ಮೇಳದವರೂ ಇದ್ದಾರೆ. ಒಬ್ಬ ವ್ಯಕ್ತಿ ಬಲ ಮೂಲೆಯಲ್ಲಿ ಮೇಲಿನಿಂದ ಕೆಳಗೆ ಹಾರುತ್ತಿರುವಂತಿದ್ದು, ಕೈಯಲ್ಲಿ ಹಾರವನ್ನಿಡಿದಿದ್ದಾನೆ. ವೀರ ಮತ್ತು ಅಪ್ಸರೆಯರು ಕಟೀವಸ್ತ್ರಧಾರಿಯಾಗಿದ್ದಾರೆ. ತಲೆಗೆ ಅಲಂಕೃತ ರುಮಾಲು ಧರಿಸಿದ್ದಾರೆ.

ಮೇಲಿನ ದೃಶ್ಯದಲ್ಲಿ ವೀರ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಬಲಗೈ ಅಭಯ ಹಸ್ತದಲ್ಲಿದ್ದು, ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ. ವೀರ ಕಿರೀಟಧಾರಿ, ಕರ್ಣಕುಂಡಲ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ಈತನ ಬದಿಗಳಲ್ಲಿ ಇಬ್ಬರು ಅಪ್ಸರೆಯರು

ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಂದು ಕೈಯಲ್ಲಿ ಚೌರಿಯನ್ನಿಡಿದಿದ್ದಾರೆ. ಇವರೂ ಸಹ ವೀರ ಕುಳಿತಿರುವ ಪೀಠದ ಮೇಲೆಯೇ ನಿಂತಿದ್ದಾರೆ. ಬಲಭಾಗದಲ್ಲಿ ವ್ಯಕ್ತಿಯೊಬ್ಬ ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ಬಹುಶಃ ಈತನು ಹೋರಾಟದಲ್ಲಿ ಮಡಿದ ವೀರನಿರಬಹುದು. ಆದರೆ ಈತ ಸ್ವರ್ಗಾರೋಹಣ ಹಂತದಲ್ಲಿ ಕಾಣುವುದಿಲ್ಲ. ಬಲಗೈಯಲ್ಲಿ ಏನನ್ನೋ ಹಿಡಿದಿದ್ದಾನೆ. ಎಡಗೈಯನ್ನು ತೊಡೆಯ ಮೇಲಿಟ್ಟಿದ್ದಾನೆ. ಈತನ ಬಲಕ್ಕೆ ಯತಿ ನಿಂತು ಶಂಖ ಊದುತ್ತಿದ್ದಾನೆ. ಶಿಲ್ಪದ ಎಡಭಾಗದಲ್ಲಿ ಶಿವಲಿಂಗ ಅದಕ್ಕೆ ಯತಿಯೊಬ್ಬ ನಿಂತು ಪೂಜಿಸುತ್ತಿದ್ದಾನೆ. ಕೆಳಗೆ ಕಮಂಡಲವಿದೆ. ಶಿವಲಿಂಗದ ಕೆಳಗೆ ಕುಳಿತ ನಂದಿ ಇದೆ. ಮೇಲೆ ಸೂರ್ಯ-ಚಂದ್ರರ ಚಿತ್ರಗಳಿವೆ. ಈ ಮೇಲಿನ ದೃಶ್ಯವನ್ನು ವಿಮಾನದಲ್ಲಿ ತೋರಿಸಲಾಗಿದೆ.

**ವೀರಗಲ್ಲು-೫:** ವೀರಗಲ್ಲು ಮೂರು ಹಂತಗಳಲ್ಲಿದೆ. ಕೆಳಭಾಗದಲ್ಲಿ ವೀರ ಬಲಗೈಯಲ್ಲಿ ಹಿಡಿದ ಬಾಣದಿಂದ ವೈರಿಯ ಹೊಟ್ಟೆಗೆ ತಿವಿದಿದ್ದಾನೆ. ಬಾಣ ವೈರಿಯ ಹೊಟ್ಟೆ ಹೊಕ್ಕು ಬೆನ್ನ ಹಿಂದೆ ಬಂದಿದೆ. ವೀರ ಎಡಗೈಲ್ಲಿ ಬಿಲ್ಲನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ವೀರನೊಂದಿಗೆ ಸಹಚರರಿದ್ದಾರೆ. ವೈರಿ ಪಡೆಯಲ್ಲಿ ಎಲ್ಲರೂ ಕೈಯಲ್ಲಿ ಬಿಲ್ಲು-ಬಾಣಗಳನ್ನಿಡಿದಿದ್ದಾರೆ. ಎರಡನೇ ದೃಶ್ಯದಲ್ಲಿ ಮಡಿದ ವೀರನನ್ನು ಅಪ್ಸರೆಯರಿಬ್ಬರು ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಅಪ್ಸರೆಯರು ಒಂದು ಕೈಯಲ್ಲಿ ವೀರನ ಸೊಂಟವನ್ನು, ತಮ್ಮ ಮತ್ತೊಂದು ಕೈಯಲ್ಲಿ ಏನನ್ನೋ ಹಿಡಿದಿದ್ದಾರೆ (ಚೌರಿ?). ಜೊತೆಯಲ್ಲಿ ವಾದ್ಯಮೇಳದವರಿದ್ದಾರೆ. **ವಾದ್ಯ ಮೇಳದವರು ಇಲ್ಲಿ ಸ್ತ್ರೀಯರಾಗಿರುವುದನ್ನು** ಗಮನಿಸಬೇಕಾಗಿದೆ. ಈ ರೀತಿ ವಾದ್ಯ ಮೇಳದವರು ಅಪರೂಪ.

ಮೇಲಿನ ದೃಶ್ಯದಲ್ಲಿ ವೀರ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಪೀಠ ಸ್ವಲ್ಪ ಎತ್ತರವಾಗಿದೆ. ಬಲಗೈಯನ್ನು ಮೊಣಕಾಲ ಮೇಲೂ, ಎಡಗೈಯನ್ನು ತೊಡೆಯ ಮೇಲೂ ಇಟ್ಟಿದ್ದಾನೆ. ಪೀಠದ ಬದಿಯಲ್ಲಿ ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಂದು ಕೈಯನ್ನು ಸೊಂಟದ ಮೇಲೂ ಮತ್ತೊಂದು ಕೈಯಲ್ಲಿ ಚೌರಿಯನ್ನಿಡಿದಿದ್ದಾರೆ. ಎಡೆ ಮೂಲೆಯಲ್ಲಿ ಶಿವಲಿಂಗ ಅದಕ್ಕೆ ಅಭಿಮುಖವಾಗಿ ಕುಳಿತ ನಂದಿ ಇದೆ. ಶಿವಲಿಂಗದ ಕೆಳಗೆ ವ್ಯಕ್ತಿಯೊಬ್ಬ ವೀರನ ಕಡೆ ಮುಖಮಾಡಿ ಕೈಮುಗಿದು ಕುಳಿತಿದ್ದಾನೆ. ಶಿಲ್ಪದ ಬಲ ಮೂಲೆಯಲ್ಲಿ ಹಾರುತ್ತಿರುವ ವ್ಯಕ್ತಿಯಿದ್ದಾನೆ. ಈ ಮೇಲಿನ ದೃಶ್ಯವನ್ನು ವಿಮಾನದಲ್ಲಿ ತೋರಿಸಲಾಗಿದೆ. ಈ ವೀರಗಲ್ಲಿನಲ್ಲಿ ವ್ಯಕ್ತಿಗಳನ್ನು ನೀಳವಾಗಿ ತೋರಿಸಲಾಗಿದೆ.

**ವೀರಗಲ್ಲು-೬:** ವೀರಗಲ್ಲಿನಲ್ಲಿ ಎರಡು ದೃಶ್ಯಗಳು ಮಾತ್ರ ಕಂಡುಬರುತ್ತವೆ. ಹೋರಾಟದ ದೃಶ್ಯ ಭಗ್ನಗೊಂಡಿದೆ. ಈಗ ಕಾಣುತ್ತಿರುವ ಕೆಳಗಿನ ದೃಶ್ಯದಲ್ಲಿ ಮಡಿದ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಜೊತೆಯಲ್ಲಿ ವಾದ್ಯ ಮೇಳದವರಿದ್ದಾರೆ. ಕೆಳಭಾಗದಲ್ಲಿ ಮೋಡದ ಅಲಂಕರಣೆಯನ್ನು ತೋರಿಸಲಾಗಿದೆ. ಮೇಲಿನ ದೃಶ್ಯದಲ್ಲಿ ಪೀಠದ ಮೇಲೆ ವೀರ ಸುಖಾಸನದಲ್ಲಿ ಕುಳಿತಿದ್ದಾನೆ. ಬದಿಗಳಲ್ಲಿ ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಒಂದು ಕೈಯಲ್ಲಿ ಚೌರಿಯನ್ನಿಡಿದು ಮತ್ತೊಂದು ಕೈಯನ್ನು ಸೊಂಟದ ಮೇಲಿಟ್ಟಿದ್ದಾರೆ. ಎಡಗಡೆ ಮತ್ತೊಬ್ಬ ವ್ಯಕ್ತಿ ಸೊಂಟದ ಮೇಲೆ ಕೈಯಿಟ್ಟು ನಿಂತಿದ್ದಾನೆ. ಶಿಲ್ಪದ ಬಲಭಾಗದಲ್ಲಿ ಶಿವಲಿಂಗ ಕೆಳಗೆ ಕುಳಿತನಂದಿ ನಂದಿಯ ಮೇಲೆ ಒಬ್ಬ ಸ್ತ್ರೀ ಕೈಯಲ್ಲಿ ಹಾರ ಹಿಡಿದು ನಿಂತಿದ್ದಾಳೆ. ಅವಳ ಕೆಳಗೆ ವ್ಯಕ್ತಿಯೊಬ್ಬ ನಿಂತಿದ್ದಾನೆ.

ಮೇಲೆ ವಿವರಿಸಿರುವ ಆರೂ ವೀರಗಲ್ಲುಗಳು ರಾಷ್ಟ್ರಕೂಟರ ಕಾಲಕ್ಕೆ ಸೇರಿದವುಗಳಾಗಿವೆ. ಮೊದಲನೇ ವೀರಗಲ್ಲಿನ ವೀರ ಮತ್ತು ಅಪ್ಸರೆಯರ ವೇಷಭೂಷಣಗಳು ಗಮನಸೆಳೆಯುತ್ತವೆ. ಎರಡನೆಯ ವೀರಗಲ್ಲಿನಲ್ಲಿ ಶಿವಲಿಂಗಕ್ಕೆ ಇಬ್ಬರು ಯತಿಗಳು ಪೂಜಿಸುತ್ತಿರುವುದು ವಿಶೇಷವೆನಿಸುತ್ತದೆ. ಮೂರು ಮತ್ತು ನಾಲ್ಕನೇ ವೀರಗಲ್ಲುಗಳು ಒಂದೇ ರೀತಿಯ ವಿವರಗಳನ್ನು ಹೊಂದಿವೆ. ಇವುಗಳಲ್ಲಿ ಸ್ವರ್ಗಾರೋಹಣದ ದೃಶ್ಯದಲ್ಲಿ ಕೈಯಲ್ಲಿ ಹಾರಹಿಡಿದು ಹಾರುತ್ತಿರುವ ವ್ಯಕ್ತಿಗಳು ವಿಶೇಷವೆನಿಸಿದ್ದಾರೆ ಮತ್ತು ವೀರ ಮತ್ತು ಅಪ್ಸರೆಯರು ಇಲ್ಲಿ ಕಟಿವಸ್ತ್ರಧಾರಿಗಳಾಗಿದ್ದಾರೆ. ದೇವಲೋಕದ ಚಿತ್ರಣದಲ್ಲಿ ವೀರನೊಟ್ಟಿಗೆ ಅಪ್ಸರೆಯನ್ನು ಸಹ ಪೀಠದ ಮೇಲೆ ನಿಂತಂತೆ ತೋರಿಸಿರುವುದು ಅಪರೂಪವಾಗಿದೆ. ಇಲ್ಲಿ ಇಬ್ಬರು ಯತಿಗಳನ್ನು ಬೇರೆ ಬೇರೆ ತೋರಿಸಲಾಗಿದೆ. ಐದನೆಯ ವೀರಗಲ್ಲಿನ ಎರಡನೆಯ ದೃಶ್ಯದಲ್ಲಿ ಸ್ತ್ರೀ ವಾದ್ಯಗಾರ್ತಿಯರನ್ನು ಚಿತ್ರಿಸಿರುವುದು ಗಮನೀಯ. ಏಕೆಂದರೆ ಸ್ತ್ರೀ ವಾದ್ಯಗಾರ್ತಿಯರು ವಿರಳ. ಐದು ಮತ್ತು ಆರನೆಯ ವೀರಗಲ್ಲಿನ ಸ್ವರ್ಗಾರೋಹಣ ದೃಶ್ಯಗಳು ಒಂದಂಕ್ಕೊಂದು ಹೋಲುತ್ತವೆ.

ಈ ವೀರಗಲ್ಲುಗಳ ವಿವರ ಮತ್ತು ಶೈಲಿಯನ್ನು ಗಮನಿಸಿದರೆ ಇವುಗಳ ಕಾಲಮಾನ ಸು. ಕ್ರಿ.ಶ. ೯-೧೦ನೇ ಶತಮಾನ ಎನ್ನಬಹುದು. ಈ ವೀರಗಲ್ಲುಗಳಷ್ಟೇ ಅಲ್ಲದೇ ಸುಮಾರು ಹತ್ತು, ಹನ್ನೊಂದು ಭಗ್ನ ಮಹಾಸತಿಗಲ್ಲುಗಳು ಈ ಗ್ರಾಮದಲ್ಲಿವೆ. ಅವುಗಳನ್ನು ಗ್ರಾಮದ ಮಧ್ಯದಲ್ಲಿ ಒಂದುಕಡೆ ಗುಂಪಾಗಿ ಹಾಕಲಾಗಿದೆ. ಅಲ್ಲದೇ ಗ್ರಾಮದಲ್ಲಿ ಭಗ್ನ ಶಿವಲಿಂಗ, ನಂದಿ ಮತ್ತು ಎರಡು ಗಣೇಶ ಶಿಲ್ಪಗಳಿವೆ.

**ಬೌದ್ಧ ಯಕ್ಷ? :** ಹುಬ್ಬಳ್ಳಿ ತಾಲೂಕಿನ ಕೋಳಿವಾಡ ಗ್ರಾಮದಲ್ಲಿ ಶಿಲಾಫಲಕದ ಮೇಲೆ ಚಿತ್ರಿಸಿದ ಉಬ್ಬುಶಿಲ್ಪ (ಈಗಾಗಲೇ ಅದು ಗಜಲಕ್ಷ್ಮಿ ಶಿಲ್ಪ ಎಂದು ಇತಿಹಾಸ ದರ್ಶನ ಸಂಪುಟ-೨೦ರಲ್ಲಿ ಪ್ರಸ್ತುತ ಲೇಖಕರೇ ಪ್ರಕಟಿಸಿದ್ದಾರೆ) ಬೌದ್ಧ ಯಕ್ಷನೇ? ಎಂಬುದನ್ನು ನೋಡಬೇಕಾಗಿದೆ. ಏಕೆಂದರೆ ಕೋಳಿವಾಡದಲ್ಲಿ ಈಗಾಗಲೇ ಬೌದ್ಧ ದೇವತೆ ತಾರಾಭಗವತಿಯ ಶಿಲ್ಪ ಇದೆ ಸ್ಥಳದಲ್ಲಿ (ಕಲ್ಮೇಶ್ವರ ದೇವಾಲಯದ ಆವರಣ) ದೊರೆತಿದೆ ಮತ್ತು ಗ್ರಾಮದಲ್ಲಿಯ ಮಹಾಮಾಯಿ ದೇವಾಲಯ ಬುದ್ಧನ ತಾಯಿ ಮಾಯಾವತಿಯ ಹೆಸರಿನಲ್ಲಿ ನಿರ್ಮಾಣವಾಗಿರಬಹುದೇ? ಹೆಚ್ಚಿನ ಸಂಶೋಧನೆ ಅಗತ್ಯವಿದೆ.

(ಈ ಸಂಶೋಧನಾ ಲೇಖನ ತಯಾರಿಸಲು ಕಾರಣರಾದ ಮತ್ತು ತಪ್ಪು ಒಪ್ಪುಗಳನ್ನು ತಿದ್ದಿದ ಗುರುಗಳು ಮತ್ತು ಮಾರ್ಗದರ್ಶಕರಾದ ಡಾ. ರು.ಮ. ಷಡಕ್ಷರಯ್ಯ ಅವರಿಗೆ ಕೃತಜ್ಞತೆಗಳು ಹಾಗೆಯೇ ಕ್ಷೇತ್ರ ಕಾರ್ಯ ದಲ್ಲಿ ನನ್ನೊಂದಿಗಿದ್ದು ಸಹಕರಿಸಿದ ಮಿತ್ರರಾದ ವನಜಾಕ್ಷಿ ಎನ್. ಭರಮಗೌಡರ ಮತ್ತು ಶಿವಾನಂದ ಎನ್. ಚಲವಾದಿ ಅವರುಗಳಿಗೆ ನನ್ನ ವಂದನೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಶಿವತಾರಕ್, ಕೆ.ಬಿ., ೨೦೦೧; **ಕರ್ನಾಟಕದ ಪುರಾತತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨. ಶೇಷಶಾಸ್ತ್ರಿ ಆರ್., ೧೯೮೨: **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. ಧಾರವಾಡ ಜಿಲ್ಲೆಯ ಗ್ಯಾಝೆಟಿಯರ್, ೧೯೯೫.

೪. ಜಯಮ್ಮ ಬಿ., ೨೦೦೫; "ಹುಬ್ಬಳ್ಳಿ ಮತ್ತು ಕುಂದಗೋಳ ತಾಲೂಕುಗಳ ಅಪರೂಪದ ಗಜಲಕ್ಷ್ಮಿ ಶಿಲ್ಪಗಳು" **ಇತಿಹಾಸ ದರ್ಶನ,** ಸಂಪುಟ-೨೦, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಪು. ೬೮-೭೦.

೫. ಸುಂದರ ಅ "ವಡಗಾಂವ-ಮಾಧವಪುರ: ಇತರ ಕೆಲವು ಮುಖ್ಯ ಪುರಾತತ್ವ ಅವಶೇಷಗಳು (ಸಂಶೋಧನೆ)", **ಕರ್ನಾಟಕ ಭಾರತಿ,** ಸಂಪುಟ-೧೧, ಸಂಚಿಕೆ-೧, ಕ.ವಿ.ವಿ., ಧಾರವಾಡ, ಪು. ೬೮-೮೮.

೬ "ಪ್ರಾಚೀನ ಕಾಲದ ಯರಕ ಮೂರ್ತಿಗಳು", **ಸಂಯುಕ್ತ ಕರ್ನಾಟಕದ,** ದಿನಪತ್ರಿಕೆ, ದಿನಾಂಕ: ೨೦-೭-೨೦೦೫, ಪು.೧.



ನಸುಬಿರಿದ ಕೆಂಜಾಜಿಗಳ ಕಂಪನುಂಡು ಸಂ
ತಸವುಕ್ಕಿ ಸೊಕ್ಕಿದೆಳೆದುಂಬಿಗಳ ಝೇಂಕಾರ
ವಿಸರದಂತಿಮ್ಮಾಮರಂಗಳ ನಡರ್ದು ನಳನಳಿಪ ಕೆಂದಳಿದ ಸವಿದು
ವಸಂತಕಾಲದೊಳ್ ನಲಿವ ಪೆಣ್ಗೋಗಿಲೆಯೊ
ಳೆಸೆವ ನುಣ್ದನಿಯಂತೆ ರಮಣೀಯಮಾಗಿ ರಂ
ಜಿಸುವುದೀ ಕರ್ನಾಟಕಕ್ಕತುಳ ವಿಸ್ತಾರಕಾಂತಿಯಿಂ ಕಾವ್ಯಸಾರ ॥

**- ಲಕ್ಷ್ಮ ಕವಿಯ "ರುಕ್ಮಾಂಗದ ಚರಿತೆ"**



ಡಾ. ಎನ್. ನಂದೀಶ್ವರ*

# ಯರದಕಟ್ಟೆಯ ಪ್ರಾಚ್ಯಾವಶೇಷಗಳು

ತುಮಕೂರು ಜಿಲ್ಲೆ ಸಿರಾ ತಾಲ್ಲೂಕಿನ ಬುಕ್ಕಾಪಟ್ಟಣ ಹೋಬಳಿಯ ಯರದಕಟ್ಟೆಯು ತಾಲ್ಲೂಕು ಕೇಂದ್ರವಾದ ಸಿರಾದಿಂದ ಪಶ್ಚಿಮಕ್ಕೆ ೨೮ ಕಿ.ಮೀ.ದೂರದಲ್ಲಿ ಇದೆ. ಈ ಗ್ರಾಮವು ಪ್ರಾಚ್ಯಾವಶೇಷಗಳನ್ನು ತನ್ನ ಒಡಲಾಳದಲ್ಲಿ ಹುದುಗಿಸಿಕೊಂಡು ಇತಿಹಾಸದ ದೃಷ್ಟಿಯಿಂದ ಒಂದು ಅಜ್ಞಾತ ಸ್ಥಳವಾಗಿಯೇ ಉಳಿದಿದೆ. ಈ ಸುತ್ತ ಮುತ್ತಲಿನ ಪ್ರದೇಶವು ಭೌಗೋಳಿಕವಾಗಿ ಬೆಟ್ಟಗುಡ್ಡಗಳಿಂದ ಆವೃತವಾದ ಪ್ರದೇಶವಾಗಿದ್ದು ಕುರುಚಲು ಕಾಡಿನಿಂದ ಕೂಡಿದೆ. ಪ್ರಾಗೈತಿಹಾಸಿಕ ಮಾನವನ ವಾಸಕ್ಕೆ ಯೋಗ್ಯ ತಾಣವಾಗಿದ್ದು ಈ ಪ್ರದೇಶದಲ್ಲಿ ಇತಿಹಾಸದ ಆರಂಭಕಾಲದ ಅವಶೇಷಗಳ ಸ್ಥಳಗಳಾದ ಬುಕ್ಕಾಪಟ್ಟಣ ಬೂದಿಗುಡ್ಡಕ್ಕೆ ಹತ್ತಿರದಲ್ಲಿದೆ.

ಯರದಕಟ್ಟೆ ಎಂಬ ಹೆಸರು ಹೇಗೆ ಬಂದಿತು ಎಂಬುದಕ್ಕೆ ತನ್ನದೇ ಆದ ಐತಿಹ್ಯವಿದೆ. ಹಿಂದೆ ಈ ಗ್ರಾಮದ ಹತ್ತಿರ ಯರಕ[ಕಬ್ಬಿಣ]ವನ್ನು ಕುಲುಮೆ ಮೂಲಕ ತಯಾರಿಸುತ್ತಿದ್ದರಂತೆ. ಅಂದರೆ ಈ ಗ್ರಾಮ ಯರಕದ [ಕಬ್ಬಿಣದ] ಕುಲುಮೆಗೆ ಪ್ರಸಿದ್ಧವಾಗಿತ್ತು. ಗ್ರಾಮದ ಹತ್ತಿರ ಒಂದು ಚಿಕ್ಕದಾದ ಪ್ರಸಿದ್ಧ ಕಟ್ಟೆಯಿತ್ತು. ಈ ಎರಡರ ಪ್ರಸಿದ್ಧ ಸೇರಿ ಯರಕದಕಟ್ಟೆ ಎಂದಾಗಿ, ನಂತರದಲ್ಲಿ ಯರದಕಟ್ಟೆ ಎಂದು ರೂಪಾಂತರ ಹೊಂದಿತೆಂಬ ಐತಿಹ್ಯವಿದೆ.

ಯರದಕಟ್ಟೆ ಗ್ರಾಮಕ್ಕೆ ಹುಗ್ಗಿ ಹೊಯ್ದವರು ಕುರುಬ ಜಾತಿಯವರು. ಆದರೆ ಇಂದು ಕುರುಬ ಜಾತಿಯವರು ಇಲ್ಲಿ ವಾಸವಾಗಿಲ್ಲ. ಗ್ರಾಮಕ್ಕೆ ಸಾಂಕ್ರಾಮಿಕ ರೋಗವೋ ಅಥವಾ ಪ್ರಕೃತಿ ವಿಕೋಪದಿಂದಲೋ ಜನರು ಗ್ರಾಮವನ್ನು ಬಿಟ್ಟು ಸಿರಾ ಹಾಗೂ ಮಧುಗಿರಿ ತಾಲ್ಲೂಕಿನ ಹಲವಾರು ಗ್ರಾಮಗಳಿಗೆ ಹೋಗಿ ಅಲ್ಲಿ ನೆಲಸಿದರಂತೆ. ಆದರೂ ಇಂದಿಗೂ ಈ ಗ್ರಾಮ ಮೂಲದ ಕುರುಬ ಜಾತಿಯ ಜನ ತಮ್ಮ ಮನೆದೇವರಿಗೆ [ವೀರಾಂಜನೇಯ] ಆಗಾಗ್ಗೆ ಬಂದು ಪೂಜೆ ಸಲ್ಲಿಸಿಕೊಂಡು ಹೋಗುತ್ತಿರುವರು.

ಗ್ರಾಮದ ರಕ್ಷಣೆಗಾಗಿ ಕೋಟೆ ಬುರುಜು ಹಾಗೂ ಊರಬಾಗಿಲು ಹೊಂದಿತ್ತಂತೆ. ಗ್ರಾಮ ಹಾಳಾದಂತೆ ಕಾಲಾನಂತರದಲ್ಲಿ ಕೋಟೆ ಬುರುಜು ಊರಬಾಗಿಲು ಹಾಳಾ ಆದರೆ ಅವಶೇಷಗಳಿಂದ ಕೂಡಿರುತ್ತದೆ.

ಗ್ರಾಮದಲ್ಲಿ ವೀರಾಂಜನೇಯ ದೇವಾಲಯವಿದೆ. ಇದ ಗ್ರಾಮದೇವತೆಯಾಗಿದೆ. ಈ ದೇವರ ವಿಗ್ರಹವನ್ನು ದಕ್ಷಿ ದಿಕ್ಕಿಗೆ ಮುಖಮಾಡಿ ನಿಲ್ಲಿಸಿರುತ್ತಾರೆ. ಈ ವಿಗ್ರಹವನ್ನು ಶಿಲ್ಪ ವಿನ್ಯಾಸದಿಂದ ನೋಡಿದರೆ; ವಿಜಯನಗರ ಅರಸರ ಅಂ ಕಾಲದ್ದು ಎಂದು ತಿಳಿದು ಬರುತ್ತದೆ. ಮುಖದ ಭಾ ಹಾಗೂ ಕೈಗಳ ವಿನ್ಯಾಸ ಉರ[ಎದೆ] ಸ್ಥಳದಲ್ಲಿರುವ ತಿರ ನಾಮ ಇವುಗಳಿಂದ ಪ್ರಕೃತ ಶಿಲ್ಪದ ಕಾಲವನ್ನು ಹೇ ಬಹುದಾಗಿದೆ. ಈ ವಿಗ್ರಹವು ಸುಮಾರು ೧೭ ಅಡಿ ಎತ್ತ ವಾಗಿದೆ. ಶಿಥಿಲಾವಸ್ಥೆಯಲ್ಲಿದ್ದ ಈ ದೇವಸ್ಥಾನವನ್ನು ಕಿ ಎರಡು ವರ್ಷಗಳ ಹಿಂದೆ ಗರ್ಭಗುಡಿ ನಿರ್ಮಿಸಿರುವರು ನವರಂಗದ ಕೆಲಸವು ಅಪೂರ್ಣವಾಗಿ ಉಳಿದಿದೆ. ಹಿಂ ಈ ದೇವರಿಗೆ ಕಲ್ಲುಗಾಲಿ ರಥೋತ್ಸವ ನಡೆಯುತ್ತಿತ್ತಂ ಕಾಲಾನಂತರದಲ್ಲಿ ರಥವು ಹಾಳಾದಾಗ ಇವುಗಳನ್ನು ಚಿ ನಾಯಕನಹಳ್ಳಿ ತಾಲ್ಲೂಕಿನ ದಸೂಡಿ ಗ್ರಾಮದವರು ತಗೆದು ಕೊಂಡು ಹೋಗಿರುವರಂತೆ.

**ಬೂದಿಕಿಟ್ಟೆ :** ಗ್ರಾಮದ ಪಶ್ಚಿಮದಿಕ್ಕಿಗೆ ಸುಮಾರು ೦. ಕಿ.ಮೀ. ದೂರದಲ್ಲಿ ಕಟ್ಟೆಯ ಮತ್ತೊಂದು ಏರಿಯ ತು ಹತ್ತಿರ ಇರುವ (ಇದು ಮೊದಲು ಸರ್ಕಾರದ ಜಮೀನಾಗಿ ತ್ತಂ ಚಿಕ್ಕೇಗೌಡರ ತಂದೆ ಜಮೀನನ್ನು ಉಳುಮೆ ಮಾಡುತ್ತಿದ್ದ ರಿಂದ ತಂ ಮರಣನಂತರ ಸರ್ಕಾರ ಪಟೇಲ್ ಚಿಕ್ಕೇಗೌಡರ ಹೆಸರಿಗೆ ಪ ಮಾಡಿಕೊಟ್ಟಿತಂತೆ.) ಈ ಜಮೀನಲ್ಲಿ ಸುಮಾರು ಮುಕ್ಕಾ ಎಕರೆ ವಿಶಾಲವಾದ ಜಾಗದಲ್ಲಿ ಇಂದಿಗೂ ಬೂದಿಕಿಟ್ಟ ಇ ಈ ಬೂದಿಕಿಟ್ಟವನ್ನು ನೋಡಿದರೆ ಪಕ್ಕ ಇರುವ ಕಾಡಿನಿಂ ಯಥೇಚ್ಚವಾಗಿ ಇದ್ದಿಲನ್ನು ಪಡೆದು ಇಲ್ಲಿ ಕುಲುಮೆ ನಡೆಸುತ್ತಿ ರೆಂದು, ಕಬ್ಬಿಣ, ಎರಕ ಲೋಹಗಳ [ಶಸ್ತ್ರಾಸ್ತ್ರ] ತಯಾರಿಕೆ ಕೇಂದ್ರವಾಗಿತ್ತೆಂಬುದನ್ನು ಸೂಚಿಸುತ್ತದೆ.

**ಗ್ರಾಮದ ಸುತ್ತಮುತ್ತಲಿನ ವೀರಗಲ್ಲುಗಳು :** ಗ್ರಾಮ ಪಶ್ಚಿಮದಿಕ್ಕಿಗೆ ವೀರಾಂಜನೇಯ ದೇವಸ್ಥಾನದ ಎದುರಿ

* ಪ್ರಾಂಶುಪಾಲರು, ಎಸ್.ಎಂ.ಆರ್.ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ-೫೭೨ ೧೩೭.


ಯರದಕಟ್ಟೆಯ ಹೊಲದಲ್ಲಿ ವೀರಗಾರರ ಪೌಳಿಯಲ್ಲಿನ ವೀರಗಲ್ಲು

ವೀರಗಾರರ ಗುಡಿ ಇದೆ. ಈ ಗರ್ಭಗುಡಿಯ ಬಾಗಿಲು ಪಶ್ಚಿಮಾಭಿಮುಖವಾಗಿದೆ. ಈ ವೀರಗಾರರ ಗುಡಿಯು ಗರ್ಭಗುಡಿ ಹಾಗೂ ನವರಂಗವನ್ನು ಹೊಂದಿದ್ದು ಸುಮಾರು ೮ ಅಡಿಗಳಷ್ಟು ಎತ್ತರವಾಗಿದೆ. ಗರ್ಭಗುಡಿಯ ಮಧ್ಯದಲ್ಲಿ ಪಾಣಿಪೀಠವಿದ್ದು ಇದರ ಹಿಂದೆ ಗೋಡೆಯಲ್ಲಿ ವೀರಗಲ್ಲನ್ನು ನಿಲ್ಲಿಸಿರುತ್ತಾರೆ. ವೀರಗಲ್ಲಿನಲ್ಲಿ ಕುದುರೆ ಮೇಲೆ ಕುಳಿತು ಭರ್ಜಿಹಿಡಿದು ಹೋರಾಡುತ್ತಿರುವ ಪ್ರಮುಖನ ಚಿತ್ರ ಬಿಡಿಸಲಾಗಿದೆ. ಅದರ ಹಿಂದೆ ವೀರನಿಗೆ ನೆರಳಾಗಿ ಬೆಳ್ಗೊಡೆ ಹಿಡಿದು ನಿಂತ ಅಂಗರಕ್ಷಕನಿರುತ್ತಾನೆ. ಮುಂಭಾಗದಲ್ಲಿ ಶರಣಾಗತನಾಗಿ ನಿಂತ ವ್ಯಕ್ತಿಯ ಚಿತ್ರ ಬಿಡಿಸಲಾಗಿದೆ.

ವೀರಗಲ್ಲಿನ ಮುಂಭಾಗದಲ್ಲಿ ಪಾಣಿಪೀಠದ ರೂಪವನ್ನು ನಿರ್ಮಿಸಿ, ಪಾಣಿಪೀಠದ ಕೆಳಪಟ್ಟಿಕೆಯಲ್ಲಿ ಗರುಡನು ವೀರ ಭಂಗಿಯಲ್ಲಿ ನಿಂತಿರುವ ಚಿತ್ರಣವಿದೆ. ಈ ಪಾಣಿಪೀಠ ಪ್ರಾಯಶಃ ವಿಷ್ಣು ವಿಗ್ರಹದ ಪಾಣಿಪೀಠವಾಗಿದ್ದು ಪ್ರಕೃತ (ಈಗ) ಪಾಣಿಪೀಠದ ಗರ್ತದಲ್ಲಿ ಲಿಂಗವನ್ನು ಸ್ಥಾಪಿಸಲಾಗಿದೆ. ಇದರ ಕಾಲ ಸುಮಾರು ೧೪-೧೫ ನೇ ಶತಮಾನ [ಪಾಣಿಪೀಠ ಮತ್ತು ಗರುಡನ ವಿನ್ಯಾಸ ನೋಡಿದರೆ ವಿಜಯನಗರ ಕಾಲ] ಎಂದು ತಿಳಿದು ಬರುತ್ತದೆ.

ಗ್ರಾಮದ ಉತ್ತರ ದಿಕ್ಕಿಗೆ ಸುಮಾರು ೨೦೦ ಮೀಟರ್ ದೂರದಲ್ಲಿ ರಾಮಚಂದ್ರಪ್ಪನ ಹೊಲದಲ್ಲಿ ಒಂದು ವೀರ ಗಾರರ ಗುಡಿ ಇದೆ. ಈ ವೀರಗಾರರ ಗುಡಿಯಲ್ಲಿ ಎರಡು ವೀರಗಲ್ಲುಗಳಿದ್ದು ಒಂದು ವೀರಗಲ್ಲನ್ನು ಪೂರ್ವ ದಿಕ್ಕಿಗೆ ಮುಖಮಾಡಿ ನಿಲ್ಲಿಸಿರುತ್ತಾರೆ. ಈ ವೀರಗಲ್ಲು ೫೪ ಇಂಚು ಅಗಲ, ೧೮ ಇಂಚು ಎತ್ತರ ಹೊಂದಿರುತ್ತದೆ. ಇದು ೧೨ನೇ ಶತಮಾನದ ವೀರಗಲ್ಲಾಗಿರುತ್ತದೆ. ಈ ವೀರಗಲ್ಲಿನಲ್ಲಿ ರಾಜನೊಬ್ಬನ ಬೆಂಗಾವಲಿಗೆ ಅಂಗರಕ್ಷಕರು ಇರುವ ಚಿತ್ರವಿದೆ. ಇವನಿಗೆ ಬಲಭಾಗದ ವೀರನು ಬಲಗೈ ಯಲ್ಲಿ ಕಠಾರಿಯನ್ನು, ಎಡಗೈಯಲ್ಲಿ ಬಿಲ್ಲನ್ನು ಹಿಡಿದಿರುವ ಚಿತ್ರವಿದೆ. ಪಕ್ಕದಲ್ಲಿ ನಿಧಿಯ ಕುಂಭಗಳಿವೆ. ರಾಜ ಪ್ರಮುಖನ ಬಲಭಾಗದಲ್ಲಿ ಅಂಗರಕ್ಷಕನು ಭರ್ಜಿಯನ್ನು ಮೇಲ್ಮುಖವಾಗಿ ಹಿಡಿದು ನಿಂತಿರುತ್ತಾನೆ. ಈ ಇಬ್ಬರು ರಾಜನನ್ನು [ಪ್ರಮುಖನನ್ನು] ರಕ್ಷಿಸುವ ಭಂಗಿಯಲ್ಲಿದ್ದಾರೆ. ಶಿಲ್ಪ ವಿನ್ಯಾಸದ ದೃಷ್ಟಿಯಿಂದ ಇದು ಕಲಚೂರಿಯರ ಅಥವಾ ಕಲ್ಯಾಣ ಚಾಲುಕ್ಯರ ಶಿಲ್ಪದ ಮಾದರಿಯನ್ನು ಹೋಲುವಂತಿವೆ. ಈ ವೀರಗಲ್ಲನ್ನು ಚಾಲುಕ್ಯರು ಸಾಮಾನ್ಯವಾಗಿ ಬಳಸುತ್ತಿದ್ದ ಹಸಿರು ಮಿಶ್ರಿತವಾದ ಕಪ್ಪು ಶಿಲೆಯಲ್ಲಿ ವಿನ್ಯಾಸಗೊಳಿಸಲಾಗಿದೆ.

ಮೇಲಿನ ವೀರಗಾರರ ಗುಡಿಯಲ್ಲಿ ಮತ್ತೊಂದು ವೀರಗಲ್ಲನ್ನು ಉತ್ತರಾಭಿಮುಖವಾಗಿ ನಿಲ್ಲಿಸಿರುತ್ತಾರೆ. ಈ ವೀರಗಲ್ಲಿನಲ್ಲಿ ಕುದುರೆಯ ಮೇಲೆ ಹೋರಾಡುವ ವೀರನ ಚಿತ್ರ ಬಿಡಿಸಲಾಗಿದೆ. ಇದರ ಅಗಲ ೨೪ ಇಂಚು, ಎತ್ತರ ೨೪ ಇಂಚು ಹೊಂದಿದ್ದು ಹಸಿರು ಮಿಶ್ರಿತವಾದ ಕಪ್ಪು ಶಿಲೆಯಲ್ಲಿ ಕೆತ್ತಲಾಗಿದೆ. ಗೆದ್ದ ವೀರನಿಗೆ ಸೋತ ವೀರನು ಶರಣಾಗತನಾದಂತೆ ಚಿತ್ರಿಸಲಾಗಿದೆ. ಇದು ಸಹ ೧೨ನೇ ಶತಮಾನಕ್ಕೆ ಸೇರಿದ ಶಿಲ್ಪವಾಗಿದೆ. ಈ ಶಿಲೆಯು ಚಾಲುಕ್ಯರು ಸಾಮಾನ್ಯವಾಗಿ ಬಳಸುತ್ತಿದ್ದ ಹಸಿರು ಮಿಶ್ರಿತವಾದ ಕಪ್ಪು ಶಿಲೆಯಿಂದ ಕೂಡಿದೆ. ಈ ಎರಡು ವೀರಗಲ್ಲುಗಳಿಗೂ ಇಂದಿಗೂ ಹಬ್ಬ ಹರಿದಿನಗಳಲ್ಲಿ ಬೇರೆ ಬೇರೆ ಗ್ರಾಮಗಳಲ್ಲಿನ ಕುರುಬ ಜಾತಿಯ ಜನ ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಿರುವರು.

ಗ್ರಾಮದ ಪಕ್ಕ ಉತ್ತರದಿಕ್ಕಿನಲ್ಲಿ ವೆಂಕಟ ರಾಮಯ್ಯನ ಹೊಲದ ಬದುವಿನಲ್ಲಿ ಮತ್ತೊಂದು ವೀರಗಲ್ಲು ಕಂಡು ಬರುತ್ತದೆ. ಈ ವೀರಗಲ್ಲು ಅಗಲ ೩೧ ಇಂಚು, ಎತ್ತರ ೩೪ ಇಂಚು ಅಳತೆ ಹೊಂದಿರುತ್ತದೆ. ಈ ವೀರಗಲ್ಲು ಮೂರು ಪಟ್ಟಿಕೆಗಳನ್ನು ಒಳಗೊಂಡಿರುತ್ತದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನ ಹೋರಾಟದ ಚಿತ್ರವಿದ್ದು, ಮಧ್ಯ


ಯರದಕಟ್ಟೆ ವೀರಗಾರರ ಪೌಳಿಯಲ್ಲಿನ ಉತ್ತರ ದಿಕ್ಕಿಗೆ ಮುಖ ಮಾಡಿರುವ ವೀರಗಲ್ಲು



ಯರದಕಟ್ಟೆಯ ಗ್ರಾಮದ ಪಕ್ಕ ಬಣವೆಯಲ್ಲಿನ ಯಂತ್ರದಕಲ್ಲು

ಪಟ್ಟಿಕೆಯಲ್ಲಿ ಆತನು ವೀರ ಮರಣಹೊಂದಿ ಸ್ವರ್ಗಲೋಕಕ್ಕೆ ಪುಷ್ಪಕ ವಿಮಾನದಲ್ಲಿ ಪ್ರಯಾಣ ಮಾಡುತ್ತಿರುವ ದೃಶ್ಯವನ್ನು, ಮೇಲಿನ ಪಟ್ಟಿಕೆಯಲ್ಲಿ ಆತನು ಶಿವಲೋಕವನ್ನು ಸೇರಿ ಶಿವಲೋಕದಲ್ಲಿ ದಂಪತಿ ಸಮೇತ ಪೂಜೆ ಮಾಡುವ ದೃಶ್ಯವಿದೆ. ಶಿಲ್ಪದ ವಿನ್ಯಾಸದ ದೃಷ್ಟಿಯಿಂದ ಇದನ್ನು ೧೨ ನೇ ಶತಮಾನದ ಕಲಾಕೃತಿ ಎಂದು ಹೇಳಬಹುದು. ಆಗಮೋಕ್ತ ಲಿಂಗದ ಪ್ರಮಾಣವು ಈ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ.

**ಯಂತ್ರದ ಕಲ್ಲು :** ಈ ಶಿಲೆಯಲ್ಲಿ ಮೂರು ಪಟ್ಟಿಕೆಗಳನ್ನು ಕೆತ್ತಲಾಗಿದೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಸೂರ್ಯ ಚಂದ್ರರನ್ನು, ಮಧ್ಯಭಾಗದ ಪಟ್ಟಿಕೆಯಲ್ಲಿ ಸ್ವಸ್ತಿಕ ಚಿಹ್ನೆಯನ್ನು ಹೋಲುವ ಬರಹವನ್ನು, ತಳಭಾಗದಪಟ್ಟಿಕೆಯಲ್ಲಿ ಕೆಲವು ಯಂತ್ರಾಕ್ಷರಗಳನ್ನು ಹಾಗೂ ಮೂರು ಯಂತ್ರಗಳನ್ನು ಬರೆಯಲಾಗಿದೆ. ಇವು ತ್ರಿಗುಣಾತ್ಮವಾಗಿದೆ. ಪ್ರಾಯಶಃ ಇಂತಹ ಕಲ್ಲುಗಳಿಗೆ ದನಗಳು ರೋಗಗ್ರಸ್ತವಾದಾಗ ಕಾಲುಜ್ವರ, ಬಾಯಿಜ್ವರ ಇವುಗಳು ಬಂದಾಗ ಈ ಯಂತ್ರದ ಬಳಿ ಅಂತಹ ರೋಗಗ್ರಸ್ತ ಆಕಳುಗಳನ್ನು ತಂದು ಪೂಜಿಸುತ್ತಿದ್ದುದು ಪ್ರಚಲಿತದಲ್ಲಿದೆ. ಅಲ್ಲದೆ ಕೆಲವು ಆಕಳುಗಳ ಕರಾವು [ಹಾಲು] ಕಡಿಮೆಯಾದಾಗ ಇಂತಹ ಕಲ್ಲುಗಳಿಗೆ ಅಂತಹ ಹಸುವಿನ ಹಾಲನ್ನು ಎರೆಯುವುದು ಇಂದಿಗೂ ಜನಪದರಲ್ಲಿ ಪ್ರಚಲಿತವಾಗಿರುವ ಒಂದು ಸಂಪ್ರದಾಯವಾಗಿದೆ.

ಯರದಕಟ್ಟೆಯಲ್ಲಿ ಒಂದು ಅಪ್ರಕಟಿತ ಶಾಸನ ಕಂಡು ಬರುತ್ತದೆ. ಈ ಶಾಸನವು ಗ್ರಾಮದ ಉತ್ತರ ದಿಕ್ಕಿಗೆ ವೆಂಕಟ ರಾಮಯ್ಯನ ಹೊಲದಲ್ಲಿ ಬಿದ್ದಿರುವುದು ಕಂಡು ಬರುತ್ತದೆ. ಈ ಶಾಸನ ಗ್ರಾನೈಟ್ ಶಿಲೆಯಿಂದ ಕೂಡಿದ್ದು ಸುಮಾರು ೫೧ ಇಂಚು ಎತ್ತರ, ೩೮ ಇಂಚು ಉದ್ದವಿರುತ್ತದೆ. ಈ ಶಾಸನದಲ್ಲಿ ೯ ಸಾಲುಗಳಿದ್ದು ಬಹುಪಾಲು ಅಕ್ಷರಗಳು ಸವೆದು ಹೋಗಿವೆ. ಶಾಸನವು ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ. ಶಾಸನದ ಪಾಠ ಹೀಗಿದೆ:

೧ ಶ್ರೀ ಮತ್ತು-----------------------------
೨ --------ನಮತ್ತುಂಗ ಚಂದ್ರ ಚಾಮರ---------
೩ ----- ----ಕಾರ್ತಿಕ-------------------
೪ -------ಕೆಂಚಪ್ಪನಾಯಕರ ಕೊವರ----------ಶಿವನ
೫ ಗಿ ಶಿಟ್ಟೆ---------ವನಾಚಾಯ-------------
೬ -----------ರಾಧಾಮೇಳಕ----------------
೭ -------------ಅಯ್ಯನವರು-------------
೮ --------ಯರದ ಗ್ರಾಮವನ್ನು ದಾರಾಪೂರ್ವಕವಾಗಿ
೯ ಸರ್ವಮಾನ್ಯ-------------------------

ಪ್ರಕೃತ ಶಾಸನವು ವಿಜಯನಗರ ಕಾಲಕ್ಕೆ ಸೇರಿದ ಬರವಣಿಗೆಯನ್ನು [ಅಕ್ಷರವಿನ್ಯಾಸ] ಹೊಂದಿದೆ. ಪ್ರಾಯಶಃ ಕೆಂಚಪ್ಪನಾಯಕನ ಮಗನಾದ [ಹೆಸರು ಅಳಿಸಿದೆ] ನಾಯಕನು ಯರದಕಟ್ಟೆಯ ಗ್ರಾಮವನ್ನು ತಮ್ಮ ರಾಜಮಹಾರಾಜ ಅಯ್ಯನವರಿಗೆ ಸ್ವರ್ಗ ಪ್ರಾಪ್ತಿಯಾಗಲೆಂದು ಯರದಕಟ್ಟೆಯ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟಂತೆ ತಿಳಿಸುತ್ತದೆ. ಹೀಗೆ ಯರದಕಟ್ಟೆ ಗ್ರಾಮಕ್ಕೆ ತನ್ನದೇ ಆದ ಗಮನ ಸೆಳೆಯುವಂತಹ ಮಹತ್ವದ ಇತಿಹಾಸವಿರುವುದನ್ನು ಕಾಣುತ್ತೇವೆ. ಯರದಕಟ್ಟೆಯು ಕರ್ನಾಟಕದ ಸಾಂಸ್ಕೃತಿಕ ವೈಜ್ಞಾನಿಕ ಕ್ಷೇತ್ರದಲ್ಲಿ ಮಹತ್ವವಾದ ಪಾತ್ರವನ್ನು ಬೀರಿ ಇಂದು ಗತಕಾಲದ ವೈಭವವನ್ನು ತನ್ನಲ್ಲಿ ಅಡಗಿಸಿಕೊಂಡು ಮೂಕಸಾಕ್ಷಿಯಾಗಿ ನಿಂತಿದೆ.

[ಕ್ಷೇತ್ರ ಕಾರ್ಯದಲ್ಲಿ ನೆರವನ್ನಿತ್ತ ಪಟೇಲ್ ಚಿಕ್ಕಗೌಡ, ಬಸವರಾಜು ಕೆ.ಪಿ. ರವರಿಗೆ ಹಾಗೂ ಶಾಸನ ಓದಲು ನೆರವಾದ ಎನ್.ಎನ್.ಸ್ವಾಮಿ ಇವರಿಗೆ ಕೃತಜ್ಞತೆಗಳು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಡಾ. ಶೇಷಶಾಸ್ತ್ರಿ., ೧೯೯೨, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೨. **ಎಪಿಗ್ರಾಫಿಯ ಕರ್ನಾಟಕ,** ಸಂಪುಟ ೧೨, ತುಮಕೂರು.

ಡಾ. ಜಗದೀಶ್ ಎಂ.ಎಚ್.*

# ಮುಕ್ತೇನಹಳ್ಳಿಯ ಪ್ರಾಚೀನ ಅವಶೇಷಗಳು ಮತ್ತು ಅಪ್ರಕಟಿತ ಶಾಸನ

ಮುಕ್ತೇನಹಳ್ಳಿ ಗ್ರಾಮವು ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿದೆ. ಗ್ರಾಮದ ಪೂರ್ವ ಮತ್ತು ಉತ್ತರಕ್ಕೆ ಹರಿದ್ರಾ ನದಿ ಇದೆ. ಇಲ್ಲಿನ ವೀರಭದ್ರ ದೇವಾಲಯದ ಹೊರ ಆವರಣದಲ್ಲಿ ಸಣ್ಣ ನೈಸರ್ಗಿಕ ಕಲ್ಲೊಂದಿದೆ. ಇದರ ಮೇಲೆ ನಾಲ್ಕುಗಂಟಿನ ರೇಖಾ ಚಿತ್ರವಿದೆ. ನಾಲ್ಕು ಗಂಟಿನ ರೇಖಾ ಚಿತ್ರ ಪ್ರಾಚೀನ ವಿನ್ಯಾಸಗಳಲ್ಲೊಂದಾಗಿದೆ ಎಂದು ಅ.ಸುಂದರ ಅವರು ಅಭಿಪ್ರಾಯ ಪಡುತ್ತಾರೆ. ಇದೇ ಚಿತ್ರವು ಹರಪ್ಪಾ ಸಂಸ್ಕೃತಿಯ ಮುದ್ರೆಯೊಂದರ ಮೇಲಿದೆ. ಇದು ಕರ್ನಾಟಕದ ಅನೇಕ ಭಾಗಗಳಲ್ಲಿ ಕಂಡು ಬರುತ್ತದೆ. ಇದೇ ಗ್ರಾಮದ ಈಶಾನ್ಯ ದಿಕ್ಕಿನ ನದಿ ಹತ್ತಿರದ ಹೊಲಗಳಲ್ಲಿ ಇತಿಹಾಸ ಆರಂಭಕಾಲದ ದಪ್ಪ ಮತ್ತು ಸಮತಟ್ಟಾದ ತಳವುಳ್ಳ ಮೂರು ಸಂಖ್ಯೆ ಲೋಟಗಳು, ಅಂಚಿನಲ್ಲಿ ರೇಖಾ ವಿನ್ಯಾಸದ ಅಲಂಕರಣ ಹೊಂದಿದ ಮಣ್ಣಿನ ತಟ್ಟೆಯ ಭಾಗಗಳು, ಮಣ್ಣಿನ ಹೂಜಿಯ ಕಂಠದ ಭಾಗ, ಮಡಿಕೆ ಮತ್ತು ಹಂಡೆಯ ಕಂಠ ಭಾಗ ಮತ್ತು ಒಳಭಾಗದಲ್ಲಿ ಮೈಕಾದಿಂದ ಹೊಳಪು ಮಾಡಿದ ಬಟ್ಟಲಿನ ತುಣುಕುಗಳು ದೊರಕಿವೆ. ಇದೇ ಗ್ರಾಮದ ಪೂರ್ವ ಭಾಗದಲ್ಲಿ ನಂದಿಯ ಕಂಬವೊಂದಿದೆ. ಇದು ದಕ್ಷಿಣಾಭಿಮುಖವಾಗಿದ್ದು ಸುಮಾರು ೧.೭೦ ಮೀ ಎತ್ತರವಿದೆ. ಕಂಬವು ೪೦ ಸೆಂ.ಮೀ. ಅಗಲ ಮತ್ತು ೨೩ ಸೆಂ.ಮೀ.ಉದ್ದವಿದೆ. ನಂದಿಯ ಶಿಲ್ಪದ ಕೆಳಗಡೆ ೨೦x೩೦ ಸೆಂ.ಮೀ. ಭಾಗದಲ್ಲಿ ಶಾಸನವನ್ನು ಕೊರೆಯಲಾಗಿದೆ. ೧೪ ಸಾಲಿನ ಅಪ್ರಕಟಿತ ಶಾಸನ ಯಾದವ ಕನ್ನರದೇವನ ಕಾಲದ್ದಾಗಿದೆ.



ಮುಕ್ತೇನಹಳ್ಳಿ ವೀರಭದ್ರ

**ಶಾಸನ ಪಾಠ**

೧ ಶ್ರೀ ಸ್ವಸ್ತಿ ಶ್ರೀ ಶ್ರೀ ಶ್ರೀ....ಶ್ರೀ
೨ ಸ್ವಯಂಭುಲಿಂಗ ಚಕ್ರವರ್ತಿ ಶ್ರೀ
೩ ಮನು ಮಲ್ಲಿಕಾರ್ಜುನ ಮಹಾದೇವರ
೪ [ಪಶ್ಚಿಮ] ಮೂಲಿ ಪುಲುಮಠಕೆ॥
೫ ಸ್ವಸ್ತಿ ಶ್ರೀ ಯಾದವರಾಯ ಕಂ
೬ ನರ ದೇವನು ಕೋರಿ ಮಾಕ
೭ ಯಗೂ ದೇವರಮ್ರಿತಪಡಿಗೆ
೮ ಸೋಡಸವದಾನ ಚಕ್ರವರ್ತಿ ಸಿ
೯ ಜಿನ ಕುಮಾರದೇವರಸು ಮಗ
೧೦ ಶ್ರೀ ಮಲ್ಲಿನಾಥ ದೇವರ ಗೊಸಹ

* ನಂ. ೬೬, ಮೊದಲ ಅಡ್ಡ ರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ ೫೭೭ ೨೦೧.



ಮುಕ್ತೇನಹಳ್ಳಿ ಶಾಸನ ಸಮೀಪ ನೋಟ ಕನ್ನರದೇವನ ಶಾಸನ

೧೧ ಬಂಮರಸರಿಗೆ ಸರ್ವನಮ
೧೨ ಸ್ಯವಾಗಿ ತ್ರಿಭಾಗೆ ಕರ್ತತ್ವ
೧೩ ವಾಗಿ ದಾರಾಪೂರ್ವಕಂ ಮಾ
೧೪ ಡಿ ಕೊಟ್ಟರು ಮಂಗಳ ಮಾ ಶ್ರೀ

ಕನ್ನರ ದೇವನನ್ನು ಕೋರಿ ದೇವರ ಅಮ್ರುತಪಡಿಗೆ ಸೋಡಸವದಾನ ಚಕ್ರವರ್ತಿ ಸಿಜಿನ ಕುಮಾರದೇವರಸು ಬಂಮರಸರಿಗೆ ಸರ್ವನಮಸ್ಯವಾಗಿ ತ್ರಿಭೋಗಕ್ಕೆ ದಾರಾಪೂರ್ವಕವಾಗಿ ದಾನ ನೀಡಿದ ಉಲ್ಲೇಖವಿದೆ. ಇದರಲ್ಲಿ ಕಾಲದ ಉಲ್ಲೇಖವಿಲ್ಲ. ಶಾಸನದ ಮೊದಲ ಸಾಲುಗಳಲ್ಲಿ ಸ್ವಯಂಭು ಲಿಂಗ ಚಕ್ರವರ್ತಿ, ಮಲ್ಲಿಕಾರ್ಜುನದೇವರು ಮತ್ತು ಪುಲಮಠದ ಉಲ್ಲೇಖವಿದೆ. ದಾನ ನೀಡುವ ವ್ಯಕ್ತಿಯನ್ನು ಷೋಡಷ ಅವದಾನಗಳ ಚಕ್ರವರ್ತಿ ಎಂದು ಕರೆಯಲ್ಪಟ್ಟಿರುವುದು ವಿಶೇಷ. ಭಾಸ್ಕರಾಚಾರ್ಯನ ಸಂಬಂಧಿ ಲಕ್ಷ್ಮೀಧರನನ್ನು ತಾರ್ಕಿಕ ಚಕ್ರವರ್ತಿ ಎಂದು ಕರೆಯಲಾಗಿತ್ತು.[೧] ಹಿರೆಕೆರೂರು ತಾಲ್ಲೂಕು ಪರ್ವತ ಸಿದ್ದಗೇರಿಯ ಕ್ರಿ.ಶ. ೧೨೬೫ರ ಶಾಸನದಲ್ಲಿ ಯಾದವ ಮಹದೇವನ ಮಹಾಪ್ರಧಾನ ವಿಠ್ಠಲ ದಣ್ಣಾಯಕರು ಶ್ರೀ ಪರ್ವತಕ್ಕೆ ಭೇಟಿ ನೀಡಿದ ನಂತರ ಮಲ್ಲಿಕಾರ್ಜುನದೇವರ ಸನ್ನಿಧಿಯಲ್ಲಿ ಶ್ರೀ ಪರ್ವತದ ಪುಲುಮಠದ ಪರಿಪೂರ್ಣ ಶಿವಾಚಾರ್ಯರಿಗೆ ನೂರುಂಬಾಡದೊಳಗಣ ಸಿದ್ದಗೇರಿಯ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[೨] ಪ್ರಸ್ತುತ ಶಾಸನವು ಪುಲುಮಠ ಉಲ್ಲೇಖ ಹೊಂದಿದೆ, ಪ್ರಾಯಶಃ ಇದು ಕೂಡಾ ಶ್ರೀಶೈಲ ಮಲ್ಲಿನಾಥದೇವರ ಸನಿಹದಲ್ಲಿರುವ ಪುಲುಮಠಕ್ಕೆ ನೀಡಿದ ದಾನವಾಗಿದೆ.

ಮುಕ್ತೇನಹಳ್ಳಿ ಗ್ರಾಮದ ಮಧ್ಯ ಕೋಟೆ ಇತ್ತು, ಇಂದು ಕೇವಲ ಮಣ್ಣಿನ ದಿಬ್ಬ ಇದೆ. ಗ್ರಾಮದ ವಾಯುವ್ಯದಲ್ಲಿ ಕರಿಯಮ್ಮನ ಗುಡಿಯಿದೆ. ದ್ವಿಭುಜ ಸ್ತ್ರೀ ವಿಗ್ರಹದ ಎಡಗೈಯಲ್ಲಿ ಖಡ್ಗ ಮತ್ತು ಬಲಗೈಯಲ್ಲಿ ಪಾನ ಪಾತ್ರೆ ಇದೆ. ಗ್ರಾಮದ ಪಶ್ಚಿಮ ಭಾಗದಲ್ಲಿ ದುರ್ಗಾ ದೇವಾಲಯವಿದೆ. ಚತುರ್ಭುಜ ವಿಗ್ರಹದ ಎಡಕೈಗಳಲ್ಲಿ ಖಡ್ಗ, ತ್ರಿಶೂಲ ಮತ್ತು ಬಲಕೈಗಳಲ್ಲಿ ಡಮರು, ಪಾನಪಾತ್ರೆ ಇದೆ. ಈಶಾನ್ಯ ಭಾಗದಲ್ಲಿ ಇತ್ತೀಚೆಗೆ ನವೀಕರಣಗೊಂಡ ಈಶ್ವರ ದೇವಾಲಯವಿದೆ. ನವೀಕರಿಸುವಾಗ ಕಿತ್ತ ಹಳೆಯ ಕಲ್ಲುಗಳು ಹರಡಿಕೊಂಡಿವೆ. ಮಾಳಿಗೆಯ ಅಲಂಕಾರಿಕ ಪದ್ಮ, ಕಂಭದ ಭಾಗಗಳು ಮತ್ತು ನಂದಿಯ ಕಲ್ಲುಗಳಿವೆ. ದೇವಾಲಯದ ಅವಶೇಷಗಳಿಂದ ಇದು ಕ್ರಿ.ಶ. ೧೩ನೆಯ ಶತಮಾನದ ಕಟ್ಟಡವೆಂದು ಊಹಿಸಬಹುದು. ಇದೇ ಶಾಸನೋಕ್ತ ಮಲ್ಲಿನಾಥ ದೇವಾಲಯ ಆಗಿರಬೇಕು.

ಇದೇ ಊರಿನಲ್ಲಿ ಮತ್ತೊಂದು ಶಾಸನವಿದ್ದು, ಅದರಲ್ಲಿ ಮಲುಕನಿರಂಣನ ಒಡೆಯರ ಕಾರ್ಯಕರ್ತರಾದ ಗೋಪಾಲ ದಾಸರು ಅಗಸರ ಅದೆಯನಿಗೆ ಹಾಕಿದ ಶಾಸನ ವೆಂದು ಉಲ್ಲೇಖಿಸಲಾಗಿದೆ.[೩] ಸಂವತ್ಸರದ ಆಧಾರದ ಮೇಲೆ ಇದು ಕ್ರಿ.ಶ. ೧೭೪೯ ಕ್ಕೇ ಸೇರಬಹುದಾಗಿದೆ. ಗೋಪಾಲದಾಸರ



ಮುಕ್ತೇನಹಳ್ಳಿ ದುರ್ಗವ್ವ, ಕರಿಯವ್ವ

ವನ್ನು ಕ್ರಿ.ಶ. ೧೭೨೨–೧೭೬೫ ಎಂದು ಗುರ್ತಿಸಲಾ ಗೋಪಾಲದಾಸರು ಮುಕ್ತೆನಹಳ್ಳಿಗೆ ಬಂದಿರುವ ಸಾಧ್ಯತೆ . ಗೋಪಾಲದಾಸರು ಉಡುಪಿಗೆ ಹೋಗುವ ಮಾರ್ಗ ಹೆಳವನಕಟ್ಟೆ ಗಿರಿಯಮ್ಮನನ್ನು ಮಲೆಬೆನ್ನೂರು ಬಳಿಯಿ ರಂಗನಾಥ ದೇವಾಲಯದಲ್ಲಿ ಭೇಟಿಯಾದ ರೆಂದು ತಿಯಿದೆ. ಚನ್ನಗಿರಿ ತಾಲ್ಲೂಕು ಚಿಕ್ಕಗಂಗೂರು ಈಶ್ವರ ವಾಲಯ ಬಳಿಯ ಶಾಸನ (ವಿಜಯನಗರ ಸದಾಶಿವದೇವ ಯನ) ಕ್ರಿ.ಶ. ೧೫೬೨ರಲ್ಲಿ ಹೊರಡಿಸಲಾಗಿದ್ದು ದುಮ್ಮಿ ನಿಗೆ ಸೇರಿದ ಮಲುಕ ಒಡೆಯರ ಉಲ್ಲೇಖವಿದೆ.[೪] ಈ ಡೂ ಶಾಸನಗಳ ಅವಧಿಯಲ್ಲಿ ಮಲುಕ ಹೆಸರಿನ ಯರ ವಂಶದ ಆಳ್ವಿಕೆ ಈ ಭಾಗದಲ್ಲಿತ್ತೆಂದು ತಿಳಿಯುತ್ತದೆ.

ಸಾರಥಿಗೌಡರ ಸಿದ್ದಮಲ್ಲಪ್ಪನವರ ಮಕ್ಕಳ ಮನೆಯಲ್ಲಿನ ತ್ತಿಗೆಯಲ್ಲಿ ಕೆಲವು ಪದ್ಯಗಳು ದೊರಕಿವೆ. ಅವುಗಳನ್ನು ಶೀಲಿಸಿದ ರಾ. ಸತ್ಯಾನಾರಾಯಣ ಅವರು ಪದ್ಯಗಳಲ್ಲಿ ವೈವಿಧ್ಯವಿದ್ದು ವೀರಶೈವ ಪಂಥದ್ದಾಗಿವೆ, ಸಹಜ ಭಾವ ದನವಿದೆ, ಶೈಲಿ ಶಿಥಿಲವಾಗಿದೆ ಮತ್ತು ಪ್ರಚಾರವನ್ನು ದ್ದೇಶವಾಗಿಟ್ಟುಕೊಳ್ಳದೆ ಸ್ವಂತ ಸುಖಕ್ಕಾಗಿ ಹಾಡಿಕೊಂಡವು ರಬಹುದೆಂದು ಅಭಿಪ್ರಾಯ ಪಡುತ್ತಾರೆ. ಮಲೆಬೆನ್ನೂರು ಸಾಲೆಯ ಗಣಪನನ್ನು ಸ್ಮರಿಸಿ ಪದ್ಯಗಳನ್ನು ರಚಿಸಲಾಗಿದೆ ವನಕಟ್ಟೆ ಗಿರಿಯಮ್ಮ ರಚಿಸಿದ **ಮಳೆಯನು ದಯ ಲಿಸೋ ರಂಗ** ಧಾಟಿಯಲ್ಲೇ ಮಳೆಯನ್ನು ಪ್ರಾರ್ಥಿಸುವ ವೊಂದು ಈ ಹೊತ್ತಿಗೆಯಲ್ಲಿ ಹೀಗಿದೆ:

ಯ ಪಾಲಿಸೋ ಮಹದೇವಾ
ಪ್ರಳಯ ಮಾಡಿನ್ನು ಉಳೀಯಾದು ಜೀವಾ
ಯನು ಪಾಲಿಸೋ ಮಹದೇವಾ ॥ಪ॥

ರು ತಿಂಗಳು ಹೋದಿತಲ್ಲಾ
ದಾರಿಯ ನೋಡಿನ್ನು ದನ ಸತ್ತವಲ್ಲಾ
ರೂರು ಹಾಳಾದವೆಲ್ಲಾ
ನೀರಿಲ್ಲ ಕೆರೆಕುಂಟೆಭಾವಿಯೊಳೆಲ್ಲಾ ॥೧॥

ತ್ರ ಮಾಡೂವದೇನೂ ನಿನ್ನ
ಯ ತೆರದಾರೆ ಬರುವಾದು ತಾನೂ
ಸು ಮೂಜಗವಾನು
ಕ್ಷಾವ ಮಾಡಿಂನ್ನು ಧರೆಯನೆಲ್ಲವನೂ ॥೨॥

ಭ ದ್ರೋಣದ ಮಳೆ ಕವಿಸೊ
ತುಂಬಿ ಕೋಡಿ ಹಳ್ಳ ತೊರೆಗಳ ಹರಿಸೊ
ಭಿನಿ ಫಲಗಳ ಬೆಳಸೊ ನಾಯಿ
ನಾದೆಲ್ಲಾ ಅಕ್ಕಿ ಕೂಳು ಎಂದೆನಿಸೊ ॥೩॥

ಯೆಲ್ಲಿ ನೋಡಲು ಜಲಮೊತ್ತಾ ಕಾ
ಡೆಲ್ಲಾ ತಾ ಬೆಳದೀತು ಗದ್ದೇಯ ಭತ್ತಾ
ಮಲ್ಲಿಕಾರ್ಜುನ ದಯವಿತ್ತಾ ಜನ
ಕುಲ್ಲಾಸವದೀತು ಮನೆತುಂಬಿತ್ತಾ ॥೪॥

ಹಿಂದಾಣ ಬರದೊಳಗೆಲ್ಲಾ ನೊಂದು
ಬೆಂದು ಕೆಟ್ಟು ಹಿಂದೆ ಮಳೆ ತಂದಿಲ್ಲಾ
ಬಂದನೆಂದರೆ ನಿಮಿಷವಿಲ್ಲಾ ಗುರು
ತಂದೆ ಪಾಲಿಸೋ ಮಳೆಯ ಪರ್ವತ ಮಲ್ಲಾ ॥೫॥

ರಾಗ ಪುರಂದರ ಪದ ಎನ್ನುವ ಪದ್ಯವೊಂದರ ಕೊನೆಯಲ್ಲಿ ಪುರಂದರ ವಿಠಲ ಅಂಕಿತವಿದೆ. ಇದೊಂದು ಪುರಂದರ ದಾಸರ ಅಪ್ರಕಟಿತ ಪದ್ಯವಾಗಿರಬಹುದು.

ಜಾಣತನವಿದ್ದೇನು ಪುಣ್ಯವಿಲ್ಲದ ಮೇಲೆ
ಕಾಣವಿಹ ಕುರುಡಂಗೆ ಕಂನ್ನಡಿದೇನು ॥ಪ॥

ಶಶಿಯಿಲ್ಲದಿಹನ ಬದಿ ತಾರಕಿಗಳಿದ್ದೇನು
ಕುಸುಮವಿದ್ದೇನು ಪರಿಮಳವಿಲ್ಲದೆ
ಅಸಮ ಸಾಹಸವಿಲ್ಲದ ಅವನೀಶನಿದ್ದೇನು
ಪಿಸುಣನೊಡನೆ ಹಿತವಮಾಡಿ ಫಲವೇನು ॥೧॥

ಗುಣವಿಲ್ಲದಾ ಸತಿಗೆ ರೂಪಿದ್ದು ಫಲವೇನು
ಅಣಿಯರಿತು ನಡಸದಿಹ ಕಾರ್ಯವೇನು
ಕ್ಷಣಕೊಂದುಬಗೆಯಾಗುವನ ಮಾತು ನಂಬುಗೆಯೇನು
ರಿಣದಲೋಲಡುವನ ಧನಿಕತವೇನು ॥೨॥

ಪುರುಷನಿಲ್ಲದ ಸತಿಗೆ ಪ್ರಾಯವಿದ್ದು ಫಲವೇನು
ಅರಸುಯಿಲ್ಲದ ರಾಜ್ಯದೈಶ್ವರ್ಯವೇನು
ಸರಸಿರುಹವಿಲ್ಲದಿಹ ಕೊಣನು ತಾನಿದ್ದೇನು
ಶಿರಿಯಿದ್ದರೇನು ಸುತರಿಲ್ಲದಾತಂರಿಗೆ ॥೩॥

ಕುಲವನುದ್ದರಿಸದಿಹ ಪುತ್ರ ತಾನಿದ್ದೇನು
ಜಲದಿಮುಳಿಗೇನು ಸತ್ಯದಿ ನಡೆಯದೆ
ಫಲವಿಲ್ಲದಾ ಮರನು ಮಿಗಿಲಾಗಿ ಬೆಳೆದೇನು
ಸಲೆನಿಷ್ಠೆಯಿಲ್ಲದಿಹ ಜಪವಮಾಡೇನು ॥೪॥

ಧರ್ಮವಿಲ್ಲದ ಮೇಲೆ ಹಣವಿದ್ದು ಫಲವೇನು
ಅಧರ್ಮತನದಲಿ ನಡವ ಮನುಜನಿದ್ದೇನು
ವರ್ಮಗಳನರಿಯದಿಹ ಅಧಿಕಾರವಿದ್ದೇನು
ನಂಮ್ಮ ಪುರಂದರವಿಠಲಂನ್ನ ನೆನೆಯದವನಿದ್ದೇನು ॥೫॥

'ಶ್ರೀ ಗುರು ಬಸವಲಿಂಗಯ ನಮಃ ಗ್ರಂತಗಳ ಬರಿಯುದಕ್ಕೆ ...ಶರಣೆಂಬೆ ಶರಣೆಂಬೆ ನಿತ್ಯ ನಿತ್ಯ ಶರಣೆನುತಿಹ ಗುರುಲಿಂಗ ಜಂಗಮರ ಶ್ರೀ ಚರಣ....ಗುರು ಶಂಕರನಂ ಊರ್ಧ್ವರೇತ...

'ಅಂಗ್ಯೆಯೆಳು ತಂದೆಂ। ಸಿವಾಲಿಂಗದ ಚಲುವಂ ಪ್ರಸಂನ್ನ ಶಂಕ್ಕರಲಿಂಗ...' ಎಂದೆಲ್ಲ ಇರುವಲ್ಲಿ ಇದು ಸ್ಪಷ್ಟವಾಗಿ ವೀರ ಶೈವನೊಬ್ಬ ಸಮನ್ವಯ ದೃಷ್ಟಿಯಲ್ಲಿ ಬರೆದಿರುವ ಲಿಖಿತ ವಾಗಿದೆ.

ಗ್ರಾಮದ ಹೆಸರು ಮುಗುತೆನಹಳ್ಳಿ (ಕ್ರಿ.ಶ.೧೭೩೯) ಮತ್ತು ಇಂದು ಮುಕ್ತೆನಹಳ್ಳಿ ಆಗಿರುವ ಸಾಧ್ಯತೆ ಇದೆ.

(ಶಾಸನದ ಬಗ್ಗೆ ಮತ್ತು ತಮ್ಮಲ್ಲಿ ಇದ್ದ ಹೊತ್ತಿಗೆಗಳನ್ನು ನೀಡಿದ ಸಾರಥಿಗೌಡರ ಸಿದ್ದಮಲ್ಲಪ್ಪನವರ ಮಕ್ಕಳಿಗೆ ನನ್ನ ಕೃತಜ್ಞತೆಗಳು. ಶಾಸನದ ಮೂಲ ಪಾಠವನ್ನು ನೀಡಿದ ಡಾ॥ ಶ್ರೀನಿವಾಸ ರಿತ್ತಿ ಮತ್ತು ಡಾ॥ ಬಿ. ರಾಜಶೇಖರಪ್ಪ ಅವರಿಗೆ ನನ್ನ ಕೃತಜ್ಞತೆಗಳು. ಪ್ರಾಗೈತಿಹಾಸಿಕ ಅವಶೇಷಗಳು ಮತ್ತು ರೇಖಾಚಿತ್ರದ ಬಗ್ಗೆ ಮಾಹಿತಿ ನೀಡಿದ ಡಾ॥ ಅ. ಸುಂದರ ಮತ್ತು ಡಾ॥ ರಾಜಾರಾಂ ಹೆಗಡೆಯವರಿಗೆ ನನ್ನ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಶ್ರೀನಿವಾಸ ರಿತ್ತಿ, ೧೯೭೩, **ದಿ ಸೇವುಣಾಸ್**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ ೨೮೨.
೨. **ಕೆ.ಐ. ಸಂಪುಟ ೬,** ಶಾಸನ ನಂ ೪೮, ಹಿರೆಕೆರೂರುತಾ॥ ಪರ್ವತಸಿದ್ದಗೇರಿ ಕ್ರಿ.ಶ. ೧೨೬೫.
೩. **ಇ.ಸಿ. ೭,** (ಸಂಪುಟ) ಹೊನ್ನಾಳಿ, ತಾ ಮುಕ್ತೇನಹಳ್ಳಿ ಶಾಸನ ನಂ ೧೦೬.
೪. **ಇ.ಸಿ. ೭,** ಚನ್ನಗಿರಿ ತಾ ಸಂಪುಟ ಚಿಕ್ಕಗಂಗುರು ಶಾಸನ ನಂ ೬೯.

ಪರಭೂಮಿಶ್ವರ ಭೀಕರಂ ಕರನಿಶಾತೋಗ್ರಾಸಿ ಶತ್ರು ಕ್ಷತೀ ।
ಶ್ವರ ವಿಧ್ವಂಸಪರಂ ಪರಾಕ್ರಮಗುಣಾಟೋಪಂ ವಿಷಕ್ಷಾವನೀ ॥

ಶ್ವರ ಪಕ್ಷ ಕ್ಷಯಕಾರಣಂ ರಣಜಯೋದ್ಯೋಗಂ ದ್ವಿಷನ್ಮೇದಿನೀ ।
ಶ್ವರ ಸಂಹಾರ ಹವಿರ್ಭುಜಂ ಭುಜಬಳಂ ಶ್ರೀ ರಾಜಮಾರ್ತಾಂಡನಾ ॥

[ಸಂನ್ಯಾಸನ ವಿಧಿಯಿಂದ ಮುಡಿಪಿದ ರಾಷ್ಟ್ರಕೂಟರಾಜ ಇಂದ್ರನು
ಕುರಿತು ಹೇಳುವ ಶ್ರವಣಬೆಳ್ಗೊಳ ಶಾಸನ (ಕ್ರಿ.ಶ. ೯೮೨)]

ವ. ರಮೇಶ ಕಾರಂತ*

# ದುರ್ಗದ ಘಡದ ಪರಿಸರದ ಪ್ರಾಚ್ಯಾವಶೇಷಗಳು

ಶಾಸನಗಳಲ್ಲಿ ದುರ್ಗದಘಡವೆಂದು ಕರೆಯಲ್ಪಡುವ ದುಗೂರು ಎಂಬ ಪುಟ್ಟಹಳ್ಳಿ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕು ಕೇಂದ್ರದಿಂದ ೧೫ ಕಿ.ಮೀ ದಕ್ಷಿಣಕ್ಕೆ ಹಾಗೂ ಸಾಗರ ತಾಲೂಕು ಕೇಂದ್ರದಿಂದ ಉತ್ತರಕ್ಕೆ ೧೫ ಕಿ.ಮೀ. ಅಂತರದಲ್ಲಿದೆ, ಈ ಪ್ರದೇಶ ಮತ್ತು ಇದರ ಸುತ್ತುಮುತ್ತಲಿನ ಸುಮಾರು ನಾಲ್ಕೈದು ಮೈಲು ವ್ಯಾಪ್ತಿಯೊಳಗೆ ಬರುವಂತಹ ಬರಿಗೆ, ನಿಸ್ರಾಣಿ, ಮಳಲಗದ್ದೆ, ಕುಪ್ಪೆ, ಕೋಳಿಸಾಲು, ಪುರ, ಸಾಗದ್ದೆ ಹಾಗೂ ಹುನವಳ್ಳಿ ಎಂಬ ಊರುಗಳಿವೆ. ಈ ಎಲ್ಲಾ ಪ್ರದೇಶಗಳು ಒಂದು ಕಾಲಕ್ಕೆ 'ಸಾಂತಳಿಗೆ ಸಾವಿರ' ರಾಜರ ಅಧಿಕಾರದ ಸೀಮೆಯೊಳಗೆ ಒಳಪಟ್ಟಿದ್ದವು. 'ಪಟ್ಟಿ ಪೊಂಬುಜ' ಎಂದು ಕರೆಯುವ ಈಗಿನ ಹೊಂಬುಜ (ಹುಂಚ) ವನ್ನು ರಾಜಧಾನಿಯನ್ನಾಗಿಸಿಕೊಂಡು ಇಲ್ಲಿನ ದೊರೆಗಳು ತಮ್ಮನ್ನು 'ಸಾಂತರ'ರೆಂದು ಕರೆದುಕೊಂಡು ತಾವಾಳುವ ಪ್ರದೇಶವನ್ನು "ಸಾಂತಳಿಗೆ ಸಾಸಿರ" ವೆಂದು ಕರೆದರು. "ಉತ್ತರದ ಮಧುರೆಯಿಂದ ಬಂದ ಮಹಾ ಉಗ್ರವಂಶಕ್ಕೆ ಸೇರಿದ ಈ ಕುಲದವರು ಸ್ಥಳೀಯರೊಂದಿಗೆ ಬೆರೆತು 'ಸಾಂತರ' ರೆನಿಸಿ ಅಚ್ಚಕನ್ನಡದ ಒಂದು ಕುಟುಂಬವಾಗಿ ಚಕ್ರವರ್ತಿಗಳ ಪುರಸ್ಕಾರಕ್ಕೆ ಪಾತ್ರರಾದರು. ಪರಿಶ್ರಮದಿಂದ ಸಮರ್ಥವಾಗಿ ಆಳ್ವಿಕೆ ನಡೆಸಿದ ಸಾಂತರರು ಪ್ರಜೆಗಳ ಯೋಗ ಕ್ಷೇಮದ ಹೊಣೆಯನ್ನು ಹೊತ್ತುಕೊಂಡು ಸಂರಕ್ಷಿಸಿದರು. ಜೈನ ಮತಾವಲಂಬಿಗಳಾಗಿದ್ದರೂ ಎಲ್ಲ ಸಮಯಗಳನ್ನು ಸ್ವಧರ್ಮವೆಂದು ತಿಳಿದು ಸರ್ವಧರ್ಮಸಮನ್ವಯ ಧೋರಣೆ ಯಿಂದ ರಾಜ್ಯವಾಳಿದರು. "ಜಿನದತ್ತನಿಂದ ಹಚ್ಚಿದ ಹಣತೆ ಅನಂತರ ಸಾಮಂತ ಮಾಂಡಳಿಕರ ಶ್ರಮತೈಲಧಾರೆಯಿಂದ ಸಾವಿರ ವರ್ಷ ಸಾವಿರದ ಜ್ಯೋತಿಯಾಗಿ ಉರಿಯಿತು". ಎಂದು ಖ್ಯಾತ ವಿದ್ವಾಂಸ ಡಾ॥ ಹಂ.ಪ. ನಾಗರಾಜಯ್ಯ ಹೇಳುತ್ತಾರೆ. ಆದರೆ ಸಾಂತರರ ಆಳ್ವಿಕೆಯಲ್ಲಿ ಸಾಂತಳಿಗೆ ಸಾವಿರದ ಎಲ್ಲಾ ಪ್ರದೇಶಗಳೂ ಎಲ್ಲಾ ಕಾಲದಲ್ಲೂ ಅವರ ಹಿಡಿತದಲ್ಲಿಯೇ ಇದ್ದುವು, ಸಾಂತರರು ಅಧಿಕಾರದ ಔನ್ನತ್ಯದಲ್ಲಿಯೇ ಮೆರೆದರು ಎಂದು ಹೇಳಲಿಕ್ಕೆ ಬರುವುದಿಲ್ಲ. ಕ್ರಿ.ಶ. ಏಳನೇಯ ಶತಮಾನದಿಂದ ಕ್ರಿ.ಶ. ಹದಿನೇಳರ (ಕ್ರಿ.ಶ. ೧೬೭೮– ಕಾರ್ಕಳದ ಅರಸು ೫ನೇ ಪಾಂಡ್ಯನ ಕಾಲದ ತನಕವೂ) ತನಕವೂ ಸಾಂತಳಿಗೆ ಸಾಂತರರ ವಂಶದ ಹೆಸರಿನಲ್ಲಿ ಕರ್ನಾಟಕದ ಮಲೆನಾಡು ಪ್ರದೇಶಗಳಾದ (೧) ಹೊಂಬುಜ. (೨) ಕಳಸ. (೩) ಸೇತುಪುರ. (೪) ಹೊಸಗುಂದ (೫) ಕಾರ್ಕಳ (೬) ಕೆರವಾಸೆ (೭) ಶಿಶಿಲ (೮) ನಗಿರೆ (೯) ಗೆರಸೊಪ್ಪೆ (೧೦) ಹಾಡುವಳ್ಳಿ –ಹೊನ್ನಾವರಗಳಲ್ಲಿನ ಅರಸರು ಅಧಿಕಾರ ನಡೆಸುತ್ತಿದ್ದರು. ಇವರಲ್ಲಿ ಬಹುತೇಕ ಅರಸರು ಹೊಂಬುಜದ ಸಾಂತರರ ಮಾಂಡಳಿಕರಾಗಿ ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರೂ ಕೆಲವೊಬ್ಬ ಮಾಂಡಳಿಕರು ಅರಸೊತ್ತಿಗೆಯ ದೌರ್ಬಲ್ಯವನ್ನು ಬಳಸಿಕೊಂಡು ಸಾಂತರರಿಂದ ಸ್ವತಂತ್ರರಾಗಿ ಆಳಲು ಪ್ರಯತ್ನಿಸಿ ದರು. ಅವರಲ್ಲಿ ಹೊಸಗುಂದದ ಅರಸು ಮನೆತನವೂ ಒಂದು.

ದೇಶಿಯ ಸಂಸ್ಥಾನದ ಇತಿಹಾಸದಲ್ಲಿ ಶಿವಮೊಗ್ಗ ಜಿಲ್ಲೆಯ ಹೊಸಗುಂದದ ಅರಸರ ಚರಿತ್ರೆಯ ರೋಚಕ ಅಧ್ಯಾಯವು ಕಾಲಗರ್ಭದಲ್ಲಿ ಮರೆಯಾಗಿದ್ದು ಕಳೆದ ಶತಮಾನದ ಉತ್ತರಾರ್ಧದಲ್ಲಿ ಶಿವಮೊಗ್ಗ ಜಿಲ್ಲೆಯ ಮಲ್ನಾಡ್ ರಿಸರ್ಚ್ ಅಕಾಡೆಮಿ ಹಾಗೂ ಹೊಸಗುಂದದ ಶ್ರೀ ಉಮಾ ಮಹೇಶ್ವರ ಸೇವಾ ಟ್ರಸ್ಟ್(ರಿ) ಮೂಲಕ ಬೆಳಕಿಗೆ ಬರುವಂತಾ ಯಿತು, ಹಿರಿಯ ಇತಿಹಾಸಜ್ಞರಾದ ಡಾ. ಅಸುಂದರ ಕೆಳದಿ ಗುಂಡಾಜೋಯಿಸ, ಬಿ.ಎಸ್. ರಾಮಭಟ್, ಡಾ.ರಾಜಾರಾಮ ಹೆಗಡೆ, ಡಾ.ಕೆ. ಜಿ.ಭಟ್ ಸೂರಿ, ಮುಂತಾದವರ ಶ್ರಮದ ಅಧ್ಯಯನದ ಫಲವಾಗಿ ಸುಮಾರು ೩೦೦ ವರ್ಷಗಳ ಕಾಲ ಸಾಂತರ ಅರಸರ ರಾಜಧಾನಿಯಾಗಿದ್ದ ಹೊಸಗುಂದದ ಅರಸೊತ್ತಿಗೆಯ ಸೂಕ್ಷ್ಮ ಇತಿಹಾಸ ತಿಳಿಯುವಂತಾಯಿತು.

* ಉಳವಿ, ಸೊರಬ, ೫೭೭ ೪೩೪ ಶಿವಮೊಗ್ಗ ಜಿಲ್ಲೆ.

ಮಲ್ನಾಡ್ ರಿಸರ್ಚ್ ಅಕಾಡೆಮಿಯವರು ಹೊರಡಿಸಿದ "ಹೊಸಗುಂದದ ಇತಿಹಾಸದ ನಿಬಂಧಗಳು" ಎಂಬ ಕಿರುಹೊತ್ತಿಗೆ ಪ್ರಾಯಶಃ ಈ ಅರಸೊತ್ತಿಗೆಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಮೊದಲ ಕೃತಿಯಾಗಿದೆ. ಈ ಕಿರುಹೊತ್ತಿಗೆಯಲ್ಲಿ ಹೊಸಗುಂದ ಅರಸರ ರಾಜ್ಯವು ದಕ್ಷಿಣೋತ್ತರವಾಗಿ ವಾರಾಹಿ ನದಿಯಿಂದ ವರದೆಯವರೆಗೂ ಪೂರ್ವಪಶ್ಚಿಮವಾಗಿ ತುಂಗಭದ್ರಾ ನದಿಯಿಂದ ಶರಾವತಿಯವರೆಗೆ ಎಂದರೆ ಕೆಳಗಿನ ಸಾಂತಳಿಗೆಯಿಂದ ಎಡೂರು ೭೦ರ ತನಕವೂ ಬೆಳಗುತ್ತಿಯಿಂದ ಬಿದರೂರು ನಡುವಣ ಪ್ರದೇಶವೆಂದು ಗುರುತಿಸಲಾಗಿದೆ. ಇದರಲ್ಲಿ ಹೊಸಗುಂದದ ಅರಸರ ಬಗೆಗೆ ದೊರೆತ ಸುಮಾರು ೬೦ ಶಾಸನಗಳನ್ನು ಗುರುತಿಸಿದ್ದಾರೆ. ನನ್ನ ಅಧ್ಯಯನದ ವ್ಯಾಪ್ತಿಯ ದುರ್ಗದ ಘಡ ಹಾಗೂ ಪರಿಸರದ ಪ್ರದೇಶಗಳು ಹೊಸಗುಂದದ ಅರಸರ ಆಳ್ವಿಕೆಗೆ ಒಳಪಟ್ಟಿದ್ದು ಈವರೆಗೆ ಅಲ್ಲಿ ೩೭ (ಮೂವತ್ತೇಳು) ಶಾಸನಗಳು ದೊರಕಿದ್ದು ಅವುಗಳಲ್ಲಿ ಕೇವಲ ಮೂರು ಶಾಸನಗಳನ್ನು ಮಾತ್ರ ಹೊಸಗುಂದದ ಅರಸರಿಗೆ ಸಂಬಂಧಿಸಿದ್ದೆಂದು ಗುರುತಿಸಲಾಗಿತ್ತು. ಅವಾವುವೆಂದರೆ (೧) ಕೋಳಿಸಾಲು ಸಿದ್ಧೇಶ್ವರ ದೇಗುಲದ ಆಗ್ನೇಯಕ್ಕಿರುವ ನಂದಿಕೋಲು ಬಸವಣ್ಣನ ಸ್ತಂಭಶಾಸನ ಶಾ.ಸಂ. ೫೬೧, (೨) ಪುರದ ಒಂದು ಶಾಸನ–ಶಾ.ಸಂ. ೫೨೧, ಹಾಗೂ (೩) ಹುನವಳ್ಳಿಯ ಶಾ.ಸಂ.೫೪೦, ಈಗ ಇನ್ನೂ ೬ ಶಾಸನಗಳು ಹೊಸಗುಂದದ ಅರಸರ, ಅಧಿಕಾರಿಗಳ ಬಗ್ಗೆ ತಿಳಿಸುವುದಲ್ಲದೆ ಹಿಂದೆ ಉಲ್ಲೇಖಿಸಿದ ಶಾಸನಗಳಲ್ಲಿ ಗುರುತಿಸದ ಕೆಲವು ಮುಖ್ಯ ಸಂಗತಿಗಳನ್ನು ನನ್ನ ಅಧ್ಯಯನ ಕಾಲಕ್ಕೆ ಗಮನಿಸಲಾಗಿದೆ.

ದೂಗೂರಿನಲ್ಲಿ ಒಟ್ಟು ೪ ವೀರಗಲ್ಲುಗಳಿದ್ದು ಇವುಗಳಲ್ಲಿ ೨ ವಿಜಯನಗರ ಕಾಲದವುಗಳಾಗಿದ್ದು ಒಂದು ಮಾತ್ರ ಹೊಸಗುಂದದ ಅರಸರಿಗೆ ಸಂಬಂಧಿಸಿದ್ದಾಗಿದೆ. (ಶಾಸನ ಸಂಖ್ಯೆ–೪೮೫) ಇಲ್ಲಿ ಇನ್ನೆರಡು ತುಂಡಾದ ಶಾಸನಗಳು ಭಗ್ನಗೊಂಡ ವೀರಭದ್ರ ಮೂರ್ತಿಯೂ ಸಿದ್ಧೇಶ್ವರ ದೇಗುಲದ ಎದುರಿನಲ್ಲಿವೆ. ಅಲ್ಲದೆ ಕಾಡಿನೊಳಗೆ ಜನವಸತಿ ಇದ್ದಿದ್ದ ಕುರುಹುಗಳು ಗೋಚರಿಸುತ್ತಿದ್ದು ಸಾಕ್ಷಿಯಾಗಿ ಕೆಲವು ಮನೆಗಳ ತಳಪಾಯ, ಸುಟ್ಟಮಣ್ಣಿನ ರಿಂಗುಗಳಿಂದ ನಿರ್ಮಿಸಿದ ಬಾವಿ (ಕುಂದಳಿಕೆ ಬಾವಿ)ಗಳು ಕಂಡುಬರುತ್ತವೆ. ಅಲ್ಲದೆ ಕೋಟೆ ಇದ್ದುದರ ಕುರುಹಾಗಿ 'ಅಗಳು' ಕಾಣಿಸುತ್ತದೆ. ಇಲ್ಲಿನ ಶಾ.ಸಂ. ೪೮೫–ಹೊಸಗುಂದದ ಅರಸರ ಸೇನಾಪತಿ ಯಾಗಿ ಹಡವಳೆ ಮಾಚಯ್ಯನು ಅವರ ಪ್ರಶಸ್ತಿಸಹಿತನಾಗಿ ಕುಂದನಾಡನ್ನು ಆಳುವಾಗ ಬಟ್ಟಲನಾಡ ನಾಯಕರು ನಡೆಸಿದ ಗೋಗ್ರಹಣಕ್ಕೆ ಸಂಬಂಧಿಸಿದ ಕಾಳಗದ ವಿಷಯವನ್ನು ತಿಳಿಸುತ್ತದೆ.

ಇದೇ ಹಡವಳದ ಮಾಚಯ್ಯನಿಗೆ ಸಂಬಂಧಿಸಿದ ಇನ್ನೊಂದು ಶಾಸನವು ನಿಸ್ರಾಣಿ ಗ್ರಾಮದಲ್ಲಿದೆ (ಶಾ.ಸಂ. ೫೦೩) ೧೨ ಸಾಲುಗಳಿರುವ ಈ ಶಾಸನದ ಕಾಲ ಕ್ರಿ.ಶ. ೧೨೯೦. ಇದರಲ್ಲಿ ಹಡವಳದ ಮಾಚಯ್ಯ ಹಾಗೂ ಚಿಟ್ಟಲೂರ ಕಾಳಗೌಡನೂ ಎಡನಾಡು ೭೦ಕ್ಕೆ ಸೇರಿದ ಹಾಲುಘಟ್ಟದಲ್ಲಿ ಗೋಗ್ರಹಣ ನಡೆಸಿದ ವಿಷಯವನ್ನು ತಿಳಿಸುತ್ತದೆ.

ಬರಿಗೆಯ ರಾಮೇಶ್ವರ ದೇವಾಲಯದ ಮುಂದೆ ನೆಟ್ಟಿರುವ ೧೫ ಸಾಲುಗಳ ಶಾಸನವು ಮೊದಲನೇ ಬೀರರಸರಿಗೆ ಸಂಬಂಧಿಸಿದ್ದಾಗಿದೆ. (ಶಾ.ಸಂ. ೪೬೨). ಇದು ಶಾ.ಸ. ೧೧೬೦ರ ಶಾಸನವಾಗಿದ್ದು ಸಾಂತಳಿಗೆಯ ಮಹಾ ಮಂಡಳೇಶ್ವರನಾದ ಬೀರರಸರು ಎಡೆನಾಡು ೭೦ಕ್ಕೆ ಸೇರಿದ ಕುಪ್ಪಗಡ್ಡೆಯ ಮೇಲೆ ಸೇನಾಸಹಿತವಾಗಿ ದಾಳಿ ನಡೆಸಿದಾಗ ಇದೇ ದುರ್ಗದಘಡದ ಬಳಿಯ ಬರಿಗೆಯಲ್ಲಿ ನಡೆದ ಕದನದಲ್ಲಿ ಬರಿಗೆಯ ದೀವರ ಮಹಿಮೆಯನ ತಮ್ಮ ತಾಯಿ ಭಾಗಜಿಬೊಮ್ಮನ ಮಗ ಚೌಡಯ್ಯನು ಲಕುಮಾಪಾಳ್ಯನ ದಂಡನ್ನು ತಡೆದು ಕುದುರೆಯನಿರಿದು ದೊರೆಯ ಕೆಡವಿ ಸುರಲೋಕಪ್ರಾಪ್ತನಾದ ವಿಷಯ ತಿಳಿಸಿದೆ.

ಪುರದಲ್ಲಿ ಹೊಸಗುಂದದ ಅರಸರ ಬಗೆಗೆ ದೊರೆತ ಎರಡು ಶಾಸನಗಳಲ್ಲಿ ಈವರೆಗೆ ಒಂದನ್ನು ಮಾತ್ರ (ಶಾ.ಸಂ. ೫೨೧) ಗುರುತಿಸಲಾಗಿತ್ತು, ಶಾ.ಸ.೫೨೨ ಒಂದು ಅಪೂರ್ಣ ಶಾಸನವಾಗಿದ್ದು, "ಸ್ವಸ್ತಿ ಸಮಸ್ತ ಪ್ರತಿ ಸಹಿತ ಹೊಸಗುಡ್ಡದ ಬೊಮ್ಮರಯಳಿಯ ಬೀರರಸರು ಸುಕತಾವಿನೋದದಿಂದ ಕಲಿಸೆಯಲು ರಾಜ್ಯಂಗೆಯುತ್ಯಮಿರಲು" (ಮುಂದೆ ಬರಹ ಇಲ್ಲ) ಎಂದಿದೆ. ಇದು ಹೊಸಗುಂದದ ಅರಸು ಕಲಿಸೆಯ **ಬಾಳೆಯಮ್ಮ ಹೆಗ್ಗಡೆಯ ಮಗ ಕುಮಾರ ಬೀರರಸರ** ಬಗ್ಗೆ ತಿಳಿಸುತ್ತದೆ.

ಸಾಗದ್ದೆಯ ಶಾ.ಸಂ. ೫೧೯ ಕೂಡ ಹೊಸಗುಂದದ ಅರಸರ ಬಗೆಗಿನ ಒಂದು ಅಪೂರ್ವ ೮ ಸಾಲಿನ ದಾಖಲೆಯಾಗಿದೆ. ಇದರಲ್ಲಿ ಸಾಂತಳಿಗೆಯ ಸೈನಿಕರಿಗೂ ಯಾದವ ಕಂದರ ದೇವನ ಬಾಹತ್ತರ ಬೋವಿಸೆಟ್ಟಿಗೂ ಕುಪ್ಪೆಯಲ್ಲಿ ನಡೆದ ತುರುಕಾಳಗದಲ್ಲಿ ಬೋವಿಸೆಟ್ಟಿ ವೀರಮರಣವನ್ನು ಹೊಂದಿದ್ದನ್ನು ತಿಳಿಸುತ್ತದೆ.

ಇನ್ನೊಂದು ಶಾಸನ ಶಾ.ಸಂ. ೫೬೭ ಬೈರೆಕೊಪ್ಪದ ಕಡ್ಲೆಬಸವಣ್ಣನ ದೇವಾಲಯದ ಮುಂದೆ ನೆಟ್ಟಿರುವ ೧೫ ಸಾಲಿನ ವೀರಗಲ್ಲು ಶಾಸನವು ಜೆಡ್ಡುಳಿಗೆ ನಾಡಿನ ಎಕ್ಕಲರಸರಿಗೂ ಸಾಂತಳಿಗೆಯ ಮಂಡಲೇಶ್ವರ ಬೀರರಸರಿಗೂ ಬೈರಿಕೊಪ್ಪದಲ್ಲಿ ನಡೆದ ಕದನದಲ್ಲಿ ಕುಪ್ಪೆಯ ಕಲ್ಲೆಯನಾಯಕನ ಮಗ ದಾಸೊಯನಾಯಕನು ಕುದುರೆಯನ್ನಿರಿದು



ಬರಿಗೆಯ ರಾಮೇಶ್ವರ ದೇಗುಲದ ಎದುರಿನ ವೀರಗಲ್ಲು
(ಶಾಸನ ಸಂಖ್ಯೆ ೪೬೨)



ಪುರದ ಸೋಮೇಶ್ವರ ದೇಗುಲದ ಎಡಪಾರ್ಶ್ವದಲ್ಲಿನ ವೀರಗಲ್ಲು
(ಶಾಸನ ಸಂಖ್ಯೆ ೫೨೨)

ರಾವುತನನ್ನು ಕೊಂದು ತಾನೂ ವೀರಗತಿಯನ್ನು ಪಡೆದ ವಿಷಯವನ್ನು ತಿಳಿಸುತ್ತದೆ,

ಇದಲ್ಲದೆ ಕೋಳಿಸಾಲ ಸಿದ್ಧೇಶ್ವರ ದೇಗುಲದ ಆಗ್ನೆಯಕ್ಕಿರುವ ನಂದಿಕೋಲು ಬಸವಣ್ಣನ ಸ್ತಂಭಶಾಸನ (ಶಾ.ಸಂ. ೫೬೧) ದಲ್ಲಿ ಸ್ಪಷ್ಟವಾಗಿ "ಬೀರರಸರ ವಿಜಯ ರಾಜ್ಯ ಮುತ್ತರೋತ್ತರಾಭಿವೃದ್ಧಿ ಸಕವರುಷ ೧೧೭೮ನೇಯ ನಳಸಂವತ್ಸರದ ಚೈತ್ರ ಬ.೨೦ ಸೋಮವಾರ ವಿತೀಪರ್ವದಲು ಶ್ರೀಮತು ದಕ್ಷಿಣವಾರಣಾಸಿ ಅಭಿನವ ಶ್ರೀಶೈಲ ಸ್ಥಳವೆನಿಪ್ಪ ಶ್ರೀ ಸೊಂನಲಿಗೆಯ ಪುರದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ಅಂಗಭೋಗ ರಂಗಭೋ:ಗ ಖಂಡ ಸ್ಫುಟಿತ ಜೀರ್ಣೋದ್ಧಾರ ನಿತ್ಯಹಾರ ಅವಾರಿತ್ಸತ್ರಕ್ಕೆ ತಮ್ಮ ಜಿಡ್ಡುವಳಿಗೆಯ ನಾಡೊಳಗಣ ಕೊಳಿಗೆಸಾಲೆಯ..... ಧಾರಾಪೂರ್ವಕ ಮಾಡಿಕೊಟ್ಟ ಧರ್ಮ...." ಎಂದಿದೆ. ಅಂದರೆ ಕ್ರಿ.ಶ. ೧೨೫೬ರ ಹೊತ್ತಿಗಾಗಲೇ ಜಿಡ್ಡುಳಿಗೆಯ ನಾಡು ಹೊಸಗುಂದದ ಅರಸರ ಅಧೀನದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದರಿಂದಾಗಿ "ಹೊಸಗುಂದ ಇತಿಹಾಸ ನಿಬಂಧ" ಗ್ರಂಥದಲ್ಲಿ ಕಾಣಿಸಿದ ಹೊಸಗುಂದದ ಅರಸರ ಸೀಮೆಯ ನಕ್ಷೆಗೆ ಜಿಡ್ಡುಳಿಗೆ-೭೦ನ್ನು ಸೇರಿಸಿ ವಿಸ್ತರಿಸಬಹುದಲ್ಲವೆ?

ದುರ್ಗದಘಡ ಮತ್ತು ಅದರ ಪರಿಸರದ ಶಾಸನಗಳನ್ನು ಗಮನಿಸಿದಾಗ ಹೊಸಗುಂದದ ಅರಸರ ಸೇನೆಯಲ್ಲಿ ದೀವರು, ನಾಯಕರು, ಭಿಲ್ಲರು, ಗೌಡರು ಮುಂತಾದ ವರ್ಗದ ಜನರು ಇದ್ದುದು ಕಂಡು ಬರುತ್ತದೆ. ಅದರಲ್ಲೂ ದೀವರಜನಾಂಗ ಬೆಸ್ತರೆಂದು ಪರಿಗಣಿಸಿದ್ದರೂ ಸಾಗರ ಸೊರಬ ತಾಲೂಕುಗಳಲ್ಲಿನ ದೀವರು ಈಡಿಗರೆಂದೇ ಗುರುತಿಸಿಕೊಳ್ಳುತ್ತಾರೆ. "ಸಾವಿರ ತಲೆ ಹೋದರೂ ದೀವರ ತಲೆ ಹೋಗದು" ಎಂಬ ಈ ಪ್ರದೇಶದಲ್ಲಿ ರೂಢಿಯಲ್ಲಿರುವ ಗಾದೆಯ ಮಾತು, ಇಲ್ಲಿನ ದೀವರ ಜನಾಂಗದ ಶೌರ್ಯ ಪರಾಕ್ರಮದ ಕಥೆಯನ್ನು ಬಿತ್ತರಿಸುತ್ತದೆ. ಎತ್ತರದ ನಿಲುವಿನ ಕಟ್ಟುಮಸ್ತಾದ ದೇಹದ

ದೀವರು ಸಾವಿರ ವರ್ಷಗಳಿಂದಲೂ ಅದೇ ಹೆಸರಿನಿಂದಲೇ ಗುರುತಿಸಿಕೊಂಡಿದ್ದು ಈಗಲೂ ನಾಯಕತ್ವದ ಮುಂಚೂಣಿಯಲ್ಲಿದ್ದು ಸಮಾಜವನ್ನು ಮುನ್ನಡೆಸುತ್ತಿದ್ದಾರೆ.

ನನ್ನ ಪ್ರಬಂಧಕ್ಕೆ ಸಂಬಂಧಿಸಿದಂತೆ ಹಲವು ಬಾರಿ ನಡೆಸಿದ ಕ್ಷೇತ್ರಕಾರ್ಯದ ಸಮಯದಲ್ಲಿ ನಾನು ಗಮನಿಸಿದಂತೆ ಕೆಲವು ಶಾಸನಗಳು ಕಣ್ಮರೆಯಾಗಿರುವುದಲ್ಲದೆ ಇನ್ನು ಕೆಲವು ಮುರಿದು ನೆಲಕಚ್ಚುವ ಸ್ಥಿತಿಯಲ್ಲಿದೆ. ಇನ್ನೂ ಎಷ್ಟೋ ಶಾಸನಗಳು ಕಾಡಿನ ಮಣ್ಣಿನ ದಿಬ್ಬದಡಿ ಸಿಕ್ಕಿರಬಹುದೆಂಬ ಅನುಮಾನವೂ ಇದೆ.

(ಈ ನನ್ನ ಅಧ್ಯಯನಕ್ಕೆ ಪ್ರೇರಿಸಿದ ಮಿತ್ರ ಕೆಳದಿ ವೆಂಕಟೇಶ ಜೋಯಿಸ್ ಹಾಗೂ ಸಲಹೆಸಹಕಾರಗಳನ್ನಿತ್ತ ಶ್ರೀಪಾದ ಬಿಚ್ಚುಗತ್ತಿ ಇವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.)

**ಎ.ಕ. ಸಂ. ೮ರ ಶಾಸನಗಳು : ಶಾಸನ ಸಂ. ೪೮೫**

೨ ಹಾರಂಗಧಾದಿಯ ಪಂದೂರಯ್ದು ತುಜಿವಕೊಂಡು ಬಟ್ಟಲನಾಡ ನಾಯಕರು ನೆರದು

೩ ಯಿಜೆದಲ್ಲಿ ಶ್ರೀಮಡೆನಾಡ ಬೆರತು ಬರಗೆಯ.... ಡದೇವರ ಜಕ್ಕೆಯ ಮಗ ಹಡವಳ ಮಾ.....

**ಶಾಸನ ಸಂ. ೫೦೩**

**ನಿಸರಾಣಿಗ್ರಾಮದ ಮಲ್ಲನಕೆರೆ ಏರಿಕೆಳಗೆ ಇರುವ ಗದ್ದೆಯ ಕರೇಗಲ್ಲು ಭೂತಪ್ಪನ ಜಾಗದಲ್ಲಿರುವ ೧ನೇ ವೀರಗಲ್ಲು.**

೧ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ಕಾವದೇವಂ ಪ್ರಥ್ವಿ ರಾಜ್ಯಂಗೆಯುತ್ತ

೨ ಮಿರೆ ಶ್ರೀಮನು ಮಹಾಪ್ರಧಾನಂ ಬೀರೆಯ್ಯದಂಡನಾಯಕಂ ಎಡೆನಾಡೆಪ್ಪತ್ತಕ್ಕಂ ಅಧಿಕಾರಂ ಗೈಯಿ

೩ ತ್ತಮಿರೆ ೧೨೧೨ ವಿರೋಧಿ ಸಂ।ದ ಚೈತ್ರಮಾಸ ಬಹುಳ ಸಪ್ತಮಿ ಆದಿವಾರದಂದು ಚಿ

೪ ಟ್ಟಲೂರ ಕಾಳಗಉಡನುಂ ಹಡವಳ ಮಾಚೆಯನುಂ ಹಾಲುಗಟ್ಟವನಿಜೆದು ತುಱುವಕೊಂಬಲ್ಲಿ ಬ

೫ ಮ್ಮಗಉಡನುಂ ಮುದಗಾಉಂಡನುಂ ತಾಗಿ ತಳುತಿಜೆದು ಸುರಲೋಕ ಪ್ರಾಪ್ತಿತರಾದರು॥

**ಶಾಸನ ಸಂ. ೪೬೨**

**ಬರಿಗೆ ಗ್ರಾಮದ ರಾಮೇಶ್ವರ ದೇವಾಲಯದ ಮುಂದೆ ನೆಟ್ಟ ವೀರಕಲ್ಲು**

೭ ಶ್ರೀಮನು ಮಹಾಮಂಡಳೇಸ್ವರಂ ಸತ್ಯರತ್ನಾಕರಂ ಶರಣಾಗತ ವಜ್ರಪಂಜ

೮ ರಂ ಯರಸಂಕ ಗರಗಸ ಬಿರುದರಂಕುಸನು ಮಪ್ಪ ಬೀರರಸನು

೯ ರಾಜ್ಯಂಗೆಯ್ಯುತ್ತವಿರ್ದ ಸಕವರ್ಷ ೧೧೬೦ ವಿಕಾರಿಸಂವತ್ಸರದ ಕಾರ್ತಿಕ ಬ

೧೦ ೩ಆದಿ ಕುಪ್ಪಗಡೆಗೆ ಬೀರರಸರು ಠಾಣಾಂತರಂ ಹೋದ್ದಲಿ ಲಬ

೧೧ ಮ ಪಾಳನ ದಾಳಿಯಿಕ್ಕಿದಲ್ಲಿ ಚೂಲೆಯ ನಾಯ್ಕನ ಬಲ್ಯೆಯಕಾಱ ಬರಿಗೆ

೧೨ ಯ ದೀವರ ಬೀರ ಮಹಿಮೆಯನ ತಂಮ್ಮ ತಾಯಿಭಾಗಜಿ ಬೊಮನಮಗ

೧೩ ಚವುಡೆಯನು ತನಗಿದಿರಾದ ಮಾರ್ಬ್ಬಲವಂತಾಗಿ ಕುದುರೆಯನಿಱುದು ದೊ

೧೪ ರೆಯ ಕೆಡಹಿ ಸುರಲೋಕ ಪ್ರಾಪ್ತವಾದನು ॥

**ಶಾಸನ ಸಂ. ೫೨೨**

**ಪುರದ ಸೋಮೇಶ್ವರ ದೇವಾಲಯದ ೨ನೇ ವೀರಗಲ್ಲು**

೧ ನಮಸ್ತುಂಗ ನಿರಸುಗ ಚಂದ್ರ..... ಶಂಭವೇ॥ ಸ್ವಸ್ತಿ ಸಮಸ್ತ ಪ್ರತಿಸಹಿತ ಹೊಸಗು

೨ ಡ್ಡದ ಬೊಮ್ಮರಯಳಿಯ ಬೀರಸರು ಸುಖ ಸಂಕತಾ ವಿನೋದದಿಂ ಕಲಿಸೆಯಲು ರಾಜ್ಯಂಗೆಯುತ್ತಮಿರಲುಂ.
(ಮುಂದೆ ಬರವಣಿಗೆ ಇಲ್ಲ)

**ಶಾಸನಸಂಖ್ಯೆ: ೫೧೯**

**ಸಾಗದ್ದೆ ಗ್ರಾಮದ ನೀಲಕಂಠೇಶ್ವರ ದೇಗುಲದ ಬಳಿಯ ೨ನೇ ವೀರಗಲ್ಲು**

೩ ಸ್ವಸ್ತಿ ಶ್ರೀಮಜ್ಚಾಳುಕ್ಯಭೂಲೋಕ ವರ್ಷದ ೧೩ ನೆಯ ಕಾಳಯುಕ್ತಿ ಸಂವತ್ಸರದ ಆ

೪ ಸ್ವಯುಜ ಸುದ್ಧ ೧೦ ಗುರುವಾರದಂದು ಕುಪ್ಪೆಯ ಜವಪನು ಸಾನ್ತಳಿಗೆ ನಾಡ ತುಱು

೫ ಕೊಂಡುಯಿ ಪೋದರ ಬಾಹಂತರ ಬೂವಿಸೆಟ್ಟಿ ಕಾದಿಬಂದು ಸಲಗೆಯಿಱಿದು ತುಱು

೬ ವಂ ಮಗುರ್ಚಿ ಬೀರಮಂ ನಿಲಿಸಿ ಸುರಲೋಕ ಪ್ರಾಪ್ತನಾದ॥ ಸ್ತಿರಜಿತ್ತಮ...ವನ...

೭ ತಾಗ್ರಣಿ ಬೂವಿಸೆಟ್ಟಿ ತನ್ನಯ್ಯಂಗಂ ಬಲಿದರ್ತ್ಥವೆರಸು ನಿಲಿಸಿದ ಸುರಗಣಿಕೆಯೊಡನೆ

೮ ಯಿರ್ದ ವೀರಕಲ್ಲು॥ ಹೊಲ್ಲೋಜ ಕಣ್ಡರಿಸಿದ॥ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

**ಶಾಸನ ಸಂ. ೫೬೭**

೬ ............... ಸ್ವಸ್ತಿ ......

೭ ಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಬನವಾಸೀ ಪುರವರಾಧೀಶ್ವರ....

೮ ತೀ ಮಧುಕೇಶ್ವರ ದೇವರ ಲಬುದ ವರಪ್ರಸಾದರಪ್ಪ ಕುಮಾರ ಕೀರ್ತಿದೇವ....

೯ ಪ್ರಧಾನಂ ಕುಮಾರ ಮಂಡಳಿತ ಬೊಮ್ಮಯ್ಯನು ಸ್ವಸ್ತಿ ಸ್ರೀ ಸ್ತ್ರೀಮನ್ಮಹಾ ಮ.....

೧೦ ರಂ ಎಕ್ಕಲರಸರುಂ ಸಮಸ್ತ ಮನೇಯರುಂ ಸಮಸ್ತ ಸಾಮಗ್ರಿಯಿಂ.....

೧೧ ದು ಅಂಧಾಶುರದಲ್ಲಿ ಬೀಡಂ ಬಿಟ್ಟು ಮುತ್ತಿ ಕಾದುವಲ್ಲಿ ಬೀರರಸನು ಹಿಮ್ಮಾಡಿ ಮು.....

೧೨ ತ್ತಿರಲು ಕುಪ್ಪೆಯ ಕಲ್ಲೆಯ ನಾಯಕನ ಮಗಂ ದಾಸೋಯ ನಾಯಕಂ ಕುದು....

೧೩ ತಳ್ತಿಱಿದು ಮೇಲಾಳ ತಲೆಯಂ ಕೊಂಡು ಪಲರಂ ಕೊಂದು ಸುರಲೋಕಪ್ರಾಪ್ತನಾದಾ ॥

೧೪–೧೫ ......................................



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಹೊಂಬುಜದ ಶಾಸನಗಳು.**, (ಸಂ) ಹಂ.ಪ ನಾಗರಾಜಯ್ಯ ಮತ್ತು ಎಂ.ಜಿ. ಮಂಜುನಾಥ.

೨. **ಹೊಸಗುಂದದ ಇತಿಹಾಸ** ನಿಬಂಧಗಳು., (ಸಂ). ಜಿ.ವಿ. ಕಲ್ಲಾಪುರ.

೩. **ಎಪಿಗ್ರಾಫಿಯ ಕರ್ನಾಟಿಕ,** volume-VIII.

ಡಾ. ಬಿ. ರಾಜಶೇಖರಪ್ಪ*

# ಚಿತ್ರದುರ್ಗದ ಒಂದು ಅಪ್ರಕಟಿತ ತಾಮ್ರಶಾಸನ

ಈಗ್ಗೆ ಎರಡು ವರ್ಷಗಳ ಹಿಂದೆ, ೨೦೦೨-೦೩ರಲ್ಲಿ, ಭಾರತ ಪುರಾತತ್ತ್ವ ಸರ್ವೇಕ್ಷಣ ಇಲಾಖೆಯವರು ಚಿತ್ರದುರ್ಗದ ಬೆಟ್ಟದ ಮೇಲಿನ ಕೆಲವು ಸ್ಮಾರಕಗಳ ಜೀರ್ಣೋದ್ಧಾರ ಕಾರ್ಯ ಕೈಕೊಂಡಿದ್ದಾಗ, ಸಂಪಿಗೆ ಸಿದ್ಧೇಶ್ವರ ದೇವಸ್ಥಾನದ ಮುಂದಿನ ಪ್ರಾಕಾರ ಮಂಟಪದ ಛಾವಣಿಗೆ ಹೊಸ ಗಾರೆ ಹಾಕಿ ಭದ್ರಪಡಿಸಲು ಹಳೆಯ ಗಾರೆಯನ್ನು ಅಗೆಸಿ ತೆಗೆಸುತ್ತಿದ್ದಾಗ, ಅದರೊಳಗೆ ಮುಚ್ಚಿಹೋಗಿದ್ದ ಶಿಲಾಶಾಸನವೊಂದು ಹೊರಗೆ ಬಂದಿತು. ಅದು ಹಿಂದೆ ಬಿ.ಎಲ್. ರೈಸ್ ಅವರಿಂದ ಪ್ರಕಟವಾಗಿದ್ದ ಒಂದು ಶಾಸನ (ಎ.ಕ. ಹಳೆಯ ಸಂಪುಟ ೧೧, ಚಿತ್ರದುರ್ಗ ೫.). ಅವರು ಅದನ್ನು ಓದಿದ ಕಾಲಕ್ಕೆ ಅದು ಆ ದೇವಸ್ಥಾನಕ್ಕೆ ದಕ್ಷಿಣದಲ್ಲಿ ಬಿದ್ದಿತ್ತು. ದುರ್ಗದ ಹಿರಿಯ ಸಂಶೋಧಕ ಹುಲ್ಲೂರು ಶ್ರೀನಿವಾಸಜೋಯಿಸರು ನೋಡಿದ ಕಾಲಕ್ಕೆ ಅದು ಆ ಗುಡಿಯ ಆಗ್ನೇಯ ಮೂಲೆಯಲ್ಲಿತ್ತು (ಹು. ಶ್ರೀ. ಜೋ.ರ ಐತಿಹಾಸಿಕ ಲೇಖನಗಳು ; ಸಂ. ಲಕ್ಷ್ಮಣ್ ತೆಲಗಾವಿ, ಡಾ.ಎಂ.ವಿ. ಶ್ರೀನಿವಾಸ್, ಚಿತ್ರದುರ್ಗ, ೧೯೭೬,ಪು. ೪೩-೪೪). ಅವರ ತರುವಾಯದಲ್ಲಿ ಯಾವಾಗಲೋ ಒಮ್ಮೆ ಆ ಕಲ್ಲು ಅಲ್ಲಿಂದ ಸ್ಥಳಾಂತರಗೊಂಡು, ಆ ದೇವಸ್ಥಾನದ ಪ್ರಾಕಾರ ಮಂಟಪದ ಛಾವಣಿಯ ದುರಸ್ತಿಯಾದಾಗ(?) ಯಾರಿಂದಲೋ ಏನು ಕಾರಣಕ್ಕೋ, ಅದು ಆ ಛಾವಣಿಯ ಮೇಲುಭಾಗದ ಗಾರೆಯಲ್ಲಿ 'ಮುಚ್ಚಿಹೋಯಿತು.' ಚಿಕ್ಕದಾದರೂ ತುಂಬ ಕಾವ್ಯಮಯವಾಗಿರುವ ಈ ಶಾಸನ ಅದೃಷ್ಟವಶಾತ್ ಮತ್ತೆ ನೋಡಲು ನಮಗೆ ಲಭ್ಯವಾಗಿದೆ. ಈಗ ಅದು ಆ ದೇವಸ್ಥಾನದ ನವರಂಗದಲ್ಲಿ ಸಂರಕ್ಷಿತವಾಗಿದೆ.

ಹೀಗೇ ಹಿಡಿಂಬೇಶ್ವರ ದೇವಸ್ಥಾನದ ಛಾವಣಿಗೂ ಸಹ ಹೊಸಗಾರೆ ಹಾಕಲು ಹಳೆಯ ಗಾರೆಯನ್ನು ತೆಗೆಯುತ್ತಿದ್ದಾಗ ಅಲ್ಲಿ ಪ್ರಸ್ತುತ ಸಂಪ್ರಬಂಧದ ನಾಲ್ಕು ಫಲಕಗಳ ಒಂದು ತಾಮ್ರಶಾಸನ ಕಂಡುಬಂತು. ಇದು ಹಿಂದೆಂದೂ ಪ್ರಕಟಗೊಳ್ಳದಿದ್ದ ಒಂದು ಶಾಸನ. ಇದನ್ನು ಯಾರು ಯಾವಾಗ ಈ ಛಾವಣಿಯಲ್ಲಿ ಸೇರಿಸಿದ್ದರೋ! ಅಂತೂ ಶಾಶ್ವತವಾಗಿ ಕಳೆದುಹೋದಂತಿದ್ದ ಈ ಶಾಸನ ಅದೃಷ್ಟವಶಾತ್ ಮತ್ತೆ ನಮ್ಮೆಲ್ಲರಿಗೆ ನೋಡಲು ಲಭ್ಯವಾಯಿತು. ಪುರಾತತ್ತ್ವ ಇಲಾಖೆಯ ಕಾಯಕಲ್ಪ ಕಾರ್ಯ ನಡೆಯದಿದ್ದರೆ, ಈ ಎರಡೂ ಶಾಸನಗಳೂ ನಮಗೆ ಶಾಶ್ವತವಾಗಿ ಕಳೆದೇ ಹೋಗಿರುತ್ತಿದ್ದವು. ಈ ಇಲಾಖೆಯ ಅಧಿಕಾರಿಗಳು ನೀಡಿದ ಅಮೂಲ್ಯ ಸಹಕಾರದಿಂದ, ಪ್ರಸ್ತುತ ತಾಮ್ರಶಾಸನವನ್ನು ಅಧ್ಯಯನ ಮಾಡಲು ಸದವಕಾಶ ದೊರೆತದ್ದಕ್ಕೆ ಅವರಿಗೆ ಕೃತಜ್ಞತೆಯನ್ನು ಹೇಳುತ್ತಾ, ಅದರ ವಿವರ, ಪಾಠ ಮತ್ತು ವಿಶೇಷ ಅಂಶಗಳನ್ನು ಕುರಿತು ಈ ಸಂಪ್ರಬಂಧದಲ್ಲಿ ಸಾದರಪಡಿಸಲು ಪ್ರಯತ್ನಿಸುತ್ತೇನೆ. ಈ ತಾಮ್ರಶಾಸನ ಈಗ ಭಾಪುತ ಇಲಾಖೆಯ ಬೆಂಗಳೂರು ವೃತ್ತ ಕಛೇರಿಯಲ್ಲಿ ಸಂರಕ್ಷಿತ ವಾಗಿದೆ.

**ಶಾಸನದ ಬಾಹ್ಯ ವಿವರ :** ಹಿಂದೆಯೇ ಹೇಳಿದಂತೆ ನಾಲ್ಕು ಫಲಕಗಳಿರುವ ಈ ತಾಮ್ರಶಾಸನದ ಒಟ್ಟು ತೂಕ ೨.೨೮ಕಿಲೋಗ್ರಾಂ ಇದ್ದು, ಪ್ರತಿ ಫಲಕದ ಉದ್ದ ಸುಮಾರು ೯.೨೫ ಅಂಗುಲ (ಅಥವಾ ೧೩.೫ ಸೆಂಟಿಮೀಟರ್), ಅಗಲ ಸುಮಾರು ೪.೭೫ ಅಂಗುಲ (ಅಥವಾ ೧೨.೫ ಸೆಂಟಿಮೀಟರ್) ಮತ್ತು ದಪ್ಪ ೧/೮ ಅಂಗುಲ (ಅಥವಾ ೦.೩ ಸೆಂಟಿಮೀಟರ್) ಇರುವುದಲ್ಲದೆ, ಅವುಗಳ ಒಂದು ಪಾರ್ಶ್ವದಲ್ಲಿ ಮಾಡಿರುವ ರಂಧ್ರದ ವ್ಯಾಸ ೧/೬ ಅಂಗುಲ (ಅಥವಾ ೧.೫ ಸೆಂಟಿಮೀಟರ್) ಇರುತ್ತದೆ. ಇದರ ಬಳೆಯ ವಿವರ ತಿಳಿಯದು; ಪ್ರಾಯಶಃ ಅದು ಕಳೆದುಹೋಗಿರಬಹುದು. ಈ ಶಾಸನದ ಮೊದಲನೆಯ ಹಾಗೂ ಕಡೆಯ ಫಲಕಗಳ ಒಳಬದಿಯಲ್ಲಿ ಹಾಗೂ ನಡುವೆ ಇರುವ ಎರಡನೆಯ ಮತ್ತು ಮೂರನೆಯ ಫಲಕಗಳ ಎರಡೂ ಬದಿಯಲ್ಲಿ, ಹೀಗೆ ಒಟ್ಟು ಆರು ಬದಿಗಳಲ್ಲಿ, ಒಟ್ಟು ೧೩೪ ಪಂಕ್ತಿಗಳ ಕ್ರಿ.ಶ.೧೪ನೆಯ ಶತಮಾನದ ಕನ್ನಡಲಿಪಿ ಮತ್ತು

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು(ನಿ) ೨ನೇ ಅಡ್ಡರಸ್ತೆ (ಪಶ್ಚಿಮ), ಜೆ.ಸಿ.ಆರ್. ಬಡಾವಣೆ, ಚಿತ್ರದುರ್ಗ-೫೭೭ ೫೦೧.

ಭಾಷೆಯ ಈ ಶಾಸನವನ್ನು ಕೊರೆಯಲಾಗಿದೆ. ಎಲ್ಲ ಫಲಕಗಳಲ್ಲೂ ಮೇಲೆ ಮಧ್ಯದಲ್ಲಿರುವ ರಂಧ್ರದ ಆಚೆಈಚೆ (ಅಥವಾ ಎಡಬಲಕ್ಕೆ) ಹಾಗೂ ಅದರ ಕೆಳಗೆ ಶಾಸನದ ಪಂಕ್ತಿಗಳನ್ನು ಕೊರೆಯುತ್ತ ಹೋಗಲಾಗಿದೆ. ಕಾಗುಣಿತದಲ್ಲಿ ಹೆಚ್ಚು ದೋಷಗಳಿದ್ದರೂ, ಕೆತ್ತನೆಯಲ್ಲಿ ಅಷ್ಟು ಹೆಚ್ಚು ದೋಷಗಳಿಲ್ಲ ಎನ್ನಬಹುದು. ದ–ಧ ಕಾರ, ದ–ಡಕಾರ ಮುಂತಾದ ಕೆಲವು ಅಕ್ಷರಗಳ ಮತ್ತು ಕೆಲವು ಒತ್ತುಗಳ ಪರಸ್ಪರ ವ್ಯತ್ಯಾಸವನ್ನು ಸರಿಯಾಗಿ ಕಾಣಿಸಿಲ್ಲ. ಹಾಗೆಯೇ ಹ್ರಸ್ವ ಇತ್ವ ಮತ್ತು ದೀರ್ಘ ಇತ್ವಗಳ ವ್ಯತ್ಯಾಸವನ್ನೂ ಸಮರ್ಪಕವಾಗಿ ಅನುಸರಿಸಿಲ್ಲ. ಒಂದೆಡೆ ಮಹಾಪ್ರಾಣ ಭಕಾರಕ್ಕೆ ಚಕಾರವನ್ನು ಬಳಸಲಾಗಿದೆ. ಶಾಸನದ ಪಾಠ ಈ ಕೆಳಗಿನಂತಿದೆ:

**ಶಾಸನದ ಪಾಠ**

**೧ನೆಯ ಫಲಕ–ಹಿಂಬದಿ (ಅಥವಾ ಒಳಬದಿ)**

೧

೧ ❖ ಶ್ರೀ ಯಿಡುಂಬನಾಥ [।]
೨ ನಮಸ್ತುಂಗ ಸಿರಸ್ತುಂಗ ಚಂ
೩ ದ್ರ ಚಾಮರ ಚಾರವೇ ತ್ರಯಿ
೪ ಲೋಕ್ಯಂ ನಗರಾರಂಭಂ ಮೂ
೫ ಲಸ್ತಂಭಾಯ ಸಂಭವೇಃ ಆ
೬ ಳವಿಯೊಳೆರ್ದು ಪಾಯಿದ ಪುಲ್ಲಿಯಂ
೭ ಮುನಿ ಹೊಯಿ ಸೆಳೆಯೆಂದ ತತುಕ್ಷ
೮ ಣದಿಂ ಸೆಳೆಯೊಳಡರ್ತ್ತು ಪೊಯಿ ಸೆಳೆಯೆ
೯ ಂನೆಗ ಪಾಲ್ಕ ಚಿತ್ರಮದುದಾ ಸೆಳೆ ಕೊನೆ
೧೦ ಯಲ್ಲಿ ನೇಲ್ವ ಪುಲಿಯೆತ್ತಿದ ಸಿಂದ
೧೧ ಮೆನಲ್ಕೆ ಕೀರ್ತ್ತಿಯಂ ತಳರ್ದ್ದ ಸಳಂಗೆ
೧೨ ಹೊಯಿಸಣ ಯೆಸವೀ ಪ್ರಾಕಟೀಕ್ರಿ
೧೩ ತವಾಯಿತ್ತು ಲೋಕದೊಳೊ ಶ್ರೀ
೧೪ ಮತು ಹೊಯಿಸಣ ಚಕ್ರವರ್ತ್ತಿ
೧೫ ವಿನೆಯಾದಿತ್ಯಾವನೀಸನೆಸಪ್ರೇಮಂ
೧೬ ಶ್ರೀ ಯೆಱೆಯಂಗದೇವನಿವರಿಂದ ಶ್ರೀ ವಿ
೧೭ ಷ್ಣು ಭೂಪಾಳಕಂ ಭೂಮೀಸಂ ನರ
೧೮ ಸಿಪ್ಪ ಚಕ್ರಿಗಬ್ದಲ್ಲಾಳ ಭೂಪಂ
೧೯ ಯಾದ್ಯೋಮಂ ಶ್ರೀ ನರಸಿಪ್ಪ
೨೦ ರಾಯನಿವರಿಂ ಶ್ರೀ ವೀರ ಸೋಮೇಸ್ವರ
೨೧ ಂ॥ ಶ್ರೀ ಸೋಮೇಸ್ವರ ಚಕ್ರಿಗಂ ವರ
೨೨ ಜಯಶ್ರೀ ಬಿಜ್ಜಲಾ ರಾಣಿಗಂ

**೨ನೆಯ ಫಲಕ–ಮುಂಬದಿ**

೨

೨೩ ಭೂಸವುಭಾಗ್ಯ ನಿಧಾನನೂರ್ಜ್ಜಿತ
೨೪ ಬಳಂ ಶ್ರೀ ನಾರಸಿಹೋ ಜಾಯಾ
೨೫ ವಾಸವ ತೇಜನುದ್ಭುವ ಸಾಹಿತ್ಯ ಸರ್ಬ್ಬ
೨೬ ಜ್ಞನೆಂಬಾ ಸಂಪತ್ತಿ ಧರಿತ್ರಿಯೊಳು ಪ
೨೭ ಸರಿಸಲು ವೀರಾವತಾರೋರ್ವ್ವೀ[ಶ]ಂ । ಅ
೨೮ ರಿಕರಿಸಿರವಂ ಸೀಳ್ವ ನರಸಿಂಹ್ವಂಗೆ ರಾ
೨೯ ಣಿ ಪಟ್ಟ ಮಹಾದೇವಿಗೆ ತಾಂ ಭರದಿ
೩೦ ಂ ಜನಿಯಿಸಿದ ವೀರನು ದರಣಿಪ ಬ
೩೧ ಲ್ಲಾಳದೇವ ಹೊಯಿಸಣರಾಯನು।
೩೨ ಘಟೆಯೋಡೆ ಗಂಡ ಭುಜಬಳ[ಭೀ]
೩೩ ಮ ರಾಯ ಕುವಾರ ಧಾರ ಹತ
೩೪ ರಾಯಕುವರ ಸಿಂಘಾರ ಹೊರಕಾ
೩೫ ಯ ಕುವರ ಕಾಳಮೇಘ ರಾಯಕು
೩೬ ವರ ವೀರಘಂಟೆ ರಾಯಕುವರ ವೀರ ಡ
೩೭ ಪುಡೆ ವೀರಡವುಡೆಗೆ ಖಾತಿ ಮಾಡುಹ
೩೮ ರಾಯ ರಾಯರಾವುತರ ಗಂಡ ನಂ
೩೯ ದಿದೇವಾ ಚಾ ಪುತು ॥ ಕರಿಬಲವೊಡ್ಡಿ
೪೦ ದಲ್ಲಿ ತುರಗೋವಳಿ ದಟ್ಟಿಸಿ ನೂಂಕಿದ
೪೧ ಲ್ಲಿ ವೋಸರಿ ವೋ ಸರಿ ಬೆಸವೆಂಬಿವ
೪೨ ಂ ಪಾಯಿದ ಹೊಯಿಸಣ ರಾ
೪೩ ಯನ ವಜ್ರಸಂನಹಂ ತುರಗ
೪೪ ಮನೇಱ ಸಾಹಣಿ ಸಿಖಾಮಣಿ
೪೫ ರಾವುತರಾಯ ಮಾರನಿ ದುರ

**೨ನೆಯ ಫಲಕ–ಹಿಂಬದಿ**

೩

೪೬ ದೊಳು ತೋಱ ವಂ ಮ[ಲೆ]
೪೭ ವನಯಿರಿಗೆ ತಂನಯ ದೋರ
೪೮ ಹಸ್ತವಂ ॥ ತುರಗಮನೇಱ ಬೇಬೆ
೪೯ ಯ ಮಹೀಪತಿ ಖುರಸಿಗೊಂಡು
೫೦ ಯುದ್ಧದೊಳು ಬಿರಿದಿನ ರಾಯರಾ
೫೧ ವುತರ ವೀರರುಮಂ ಪೊಡಿಯಲ್ಕೆ
೫೨ ಆಂತವರ ಸಿರ ನಭದಲ್ಲಿ ಮುಂ
೫೩ ಡ ದರಣೀತಳದಲ್ಲಿವು ಲೋಹಿ

೫೪ ತಾರ್ನ್ನಮಂ ಪರಿವುರವೆಂಬಿವ
೫೫ ಂ ಪೊಡಿದ ಬೇಚಿ ಮಹೀಪತಿ ವ
೫೬ ಯಿರಿ ಭೂಪರಂ ॥ ಸ್ವಸ್ತಿ ಸಮ
೫೭ ಸ್ತ ಭುವನಾಸ್ರಯಂ ಶ್ರೀ ಪ್ರಿ
೫೮ ತ್ವೀ ವಲ್ಲಭಂ ಮಹಾರಾಜಾದಿ
೫೯ ರಾಜಂ ಪರಮೇಸ್ವರಂ ಪರಮ
೬೦ ಭಟಾರಕಂ ಯಾದವ ಕುಲಾಂ
೬೧ ಬರದ್ಯುಮಣಿ ಸರ್ಬ್ಬಜ್ಞ ಚೂ
೬೨ ಡಾಮಣಿ ಮಲೆರಾಜದಿರಾ
೬೩ ಜಂ ಮಲೆಪರೊಳು ಗಂಡ ಗಂಡ
೬೪ ಭೇರುಂಡನಸಹಾಯಸೂರ
೬೫ ಕದನ ಪ್ರಚಂಡ ಯೇಕಾಂಗವೀ
೬೬ ರ ಸನಿವಾರಸಿದ್ಧಿ ಗಿರಿದುರ್ಗ
೬೭ ಮಲ್ಲ ಚಲದಂಕರಾಮ

**೩ನೆಯ ಫಲಕ-ಮುಂಬದಿ**

[೪]

೬೮ ವಯರೀಭ ಕಂಠೀರವ ಚೋಳ
೬೯ ರಾಯ ಸ್ತಾಪನಾಚಾರ್ಯ್ಯ
೭೦ ಪಾಂಡ್ಯರಾಯ ಪ್ರತಿಷ್ಟಾಚಾರ್ಯ್ಯ
೭೧ ಮಗರ ರಾಜ್ಯ ನಿರ್ಮೂಳಕರು
೭೨ ಮಪ್ಪ ಹೊಯಿಸಣ ಭುಜಬ
೭೩ ಳ ಶ್ರೀ ವೀರ ಬಲ್ಲಾಳ ದೇವರ್ಸ್ಸರು ಶ್ರೀ
೭೪ ಮನು ಮಹಾ ಮಂಡಳೇಸ್ವರಂ
೭೫ ತ್ರಿಭುವನಿಮಲ್ಲ ಮಾರೆಯ ಸಹ
೭೬ ಣಿಯರು ಶ್ರೀ ಮನುಮಹಾಪ್ರ
೭೭ ಧಾನಂ ಬೇಚೆಯ ದಂಣ್ನಾಯಕರು
೭೮ ವುಂಣ್ನಾಮಲೆ ಪಟ್ಟಣದ ನೆಲೆವೀಡಿ
೭೯ ನೊಳು ಸುಖಸಂಖಥಾ ವಿನೋದದಿ
೮೦ ಂ ರಾಜ್ಯಂಗೆಯಿವುತ್ತಮಿರಲು ಸಖ
೮೧ ಸಂವಛರದ ೧೨೪೪ನೆಯ ದುಂ
೮೨ ದುಭಿ ಸಂವಛರದ ಕಾರ್ತ್ತಿಕ ಬ
೮೩ ಹುಳ ೧೦ ಗುರುವಾರದಲು
೮೪ ಶ್ರೀಮನು ಮಹಾ ಮಂಡಳೇಸ್ವರ
೮೫ ಂ ತ್ರಿಭುವನಿಮಲ್ಲ ಮಾರೆಯ
೮೬ ಸಾಹಣಿಯರು ಶ್ರೀಮನುಮ
೮೭ ಹಾ ಮಂಡಳೇಸ್ವರಂ ತ್ರಿಭುವ
೮೮ ನಿ ಮಲ್ಲ ಮಾರೆಯ ಸಾಹ
೮೯ ಣಿಯರು ಶ್ರೀಮನು ಮಹಾ

**೩ನೆಯ ಫಲಕ – ಹಿಂಬದಿ**

[೫]

೯೦ ೫ ಪ್ರಧಾ[ನಂ] ಬೇಚೆಯ ದಂ
೯೧ ಣ್ನಾಯಕ್ಕರು ಚಿಂಮ
೯೨ ತೂರಕಲ್ಲ ಯಿಡುಬನಾಥ ದೇವ
೯೩ ರಿಗೆ ಆ ಚಿಂಮತೂರಕಲ್ಲ ವ್ರಿತ್ತಿ
೯೪ ಯ ವೊಳಗಣ ಆಯಿತೋಳಲ್ಲ
೯೫ ನುದಾನವಾಗಿ ಕೊಟ್ಟ ಸಾಸನದ ಕ್ರಮ
೯೬ ವಿಂತೆಂದಡೆ ಆ ಪುರದ ಚತುಸೀಮೆ
೯೭ ಮೂಢಣ ಕಡೆಯಲು ಪೂಳಿಸುಮ
೯೮ ಕಲ್ಲು ಪರಿಯತರ ತೆಂಕಣ ಕಡೆಯ
೯೯ ಲು ಬಂಡೞ ಪಡುವಣ ಕಡೆಯಲು ಗ
೧೦೦ ಡಿಯಾ ಆ ಬಡಗಣ ಕಡೆಯಲು ಭತ್ತ
೧೦೧ ದ ರಾಸಿವೆಳಗಾದ ಚತುಸೀಮೆವೊಳ
೧೦೨ ಗುಳ ಗದ್ದೆ ಬೆದ್ದಲೊಳಗಾಯಿತನೂ
೧೦೩ ಆ ಯಿಡುಂಬನಾಥ ದೇವರ ಅಮ್ರಿತಪ
೧೦೪ ಡಿಗೆ ಯೆಂದೆಂದೂ ಚಂದ್ರಾದಿತ್ಯರು
೧೦೫ ಳಂನಬರ ಆಚಂಧ್ರಾರ್ಕ್ಕ ಸ್ತಾಪ್ಯವಾ[ಗಿ]
೧೦೬ ಧಾರಾಪುರ್ದ್ವಕಂ ಮಾಡಿ ಸರ್ಬ್ಬಮಾ
೧೦೭ ಂನ್ಯವಾಗಿ ಆ ಕ್ಷೇತ್ರದೊಳಗುಳ್ಳ ನಿಧಿ
೧೦೮ ನಿಕ್ಷೇಪ ಜಲ ಪಾಸಾಣ ಸಸಿವ ನಾವೆ ವೆ
೧೦೯ ಳಗಾದ ಸಮಸ್ತ ಬಳಿ ಸಹಿತವಾ[ಗಿ*] ಆಕ
೧೧೦ ಕವಹ ಕ್ಷೇತ್ರವನೂ ಆ ಯಿಡುಂಬ
೧೧೧ ನಾಥ ದೇವರಿಗೆ ಸರ್ಬ್ಬಮಾಂನ್ಯವಾಗಿ
೧೧೨ ಆ ಬೇಚೆಯ ದಂಣಾಯಕರು ಕೊ
೧೧೩ ಟ್ಟರು ಯಿ ದಂರ್ಮ್ಮವನೂ ನಾಡು

**೪ನೆಯ ಫಲಕ-ಮುಂಬದಿ(ಅಥವಾ ಒಳಬದಿ)**

೬

೧೧೪ [ಪ]ಟ್ಟಣ ಪಂಚಮಠವೂ ರಾಜಗುರು
೧೧೫ ಗಳು ಮುಂತಾಗಿ ಯೆಲಾರೂ ಅನು
೧೧೬ ಕೂಲರಾಗಿ ನಡೆಸಿದವರು ತಂಮ್ಮ ವುಭ
೧೧೭ ಯ ಕುಲವನುದ್ಧರಿಸಿದವರು ಯಿ ದರ್ಮ್ಮ[]
೧೧೮ ಕ್ಕೆ ಆರು ಪ್ರತಿಕೂಲವಾಗಿದವರು ತಂ
೧೧೯ ಮ ಯಿಪ್ಪತೊಂದು ತಲೆಯ ಪ್ರಿತ್ರುಗ
೧೨೦ ಳಂ ನರಕದಲ್ಲಿಕ್ಕಿದವರು ಸ್ವದತ್ತಂ ಪರದ
೧೨೧ ತ್ತಂ ವಾಯೋ ಧರ್ಮ್ಮರತೇ ನರ ಸಷ್ಟಿರ್ವ್ವ

೧೨೨ ರು[ಷ*] ಸಹಸ್ರಾಣಿ ಯಿಷ್ಟಾಯಾಂ ಜ
೧೨೩ ಯತೇ ಕ್ರಮಿ॥ ಆ ಯಿಡುಂಬನಾಥ ದೇ
೧೨೪ ವರ ದಿಬ್ಯ ಶ್ರೀಪಾದ ಪದ್ಮಾರಾಧಕರು
೧೨೫ ಮಪ್ಪ ಯಿಡುಬಜಿಯ ರಾಮಜಿಯ ಕೇ
೧೨೬ ತಾರ ಜಿಯ ಸಿದ್ಧ ಜೀಯ ಬೇಲಜೀಯ ಯಿ
೧೨೭ ಂತೀ ಆಯಿವರಿಗೆ ಧಾರಾಪೂರ್ವ್ವಕಂವಾ
೧೨೮ ಗಿ ಕೊಟ್ಟ ಸಾಸಾನ ಯಿಂತಪ್ಪುದಕ್ಕೆ
೧೨೯ ಆ ಬೇಚೆಯ ದಂಗ್ನಾಯಿಕರ ಶ್ರೀ ಹ
೧೩೦ ಸ್ತದೊಪ್ಪ ಶ್ರೀ ನಂದಿನಾಥ ಆ ಸೇನಬೋ
೧೩೧ ವ ಕ್ಷೆಯಿದೇವನ ಚಉಡಪ್ಪನ ಬರಹ ನ್ಯ
೧೩೨ ನಾಕ್ಷರಂಮದಿಕಾಕ್ಷರಂ ವಾ ತಥರ್ಬ್ಬ
೧೩೩ ಪ್ರಮಾಣಮಿತಿ ಯಿ ಸಸನಕ್ಕೆ ಮಂ
೧೩೪ ಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

**ಶಾಸನದ ತಾತ್ಪರ್ಯ** : ಈ ಶಾಸನದ ತಾತ್ಪರ್ಯವನ್ನು ಸಂಕ್ಷಿಪ್ತವಾಗಿ ಹೀಗೆ ಕೊಡಬಹುದು: **'ಶ್ರೀ ಮಿಡುಂಬನಾಥ'** ಎಂದು ಚಿತ್ರದುರ್ಗದ ಪುರಾತನ ಪ್ರಸಿದ್ಧವಾದ ದೈವನಾಮದ ಉಲ್ಲೇಖದೊಂದಿಗೆ ಪ್ರಾರಂಭವಾಗಿ, "ನಮಸ್ತುಂಗ..." ಎಂದು ಪ್ರಾರಂಭಗೊಳ್ಳುವ ಪ್ರಸಿದ್ಧ ಶಿವಸ್ತುತಿ ಶ್ಲೋಕದೊಂದಿಗೆ ಮುಂದುವರಿಯುವ ಈ ಶಾಸನ, ಹೊಯ್ಸಳರ ಕಾಲದ ಅನೇಕ ಶಾಸನಗಳಲ್ಲಿ ಹೇಳುವ ಸಳನ ವಿವರದೊಂದಿಗೆ ಪ್ರಾರಂಭಿಸಿ, ವಿನಯಾದಿತ್ಯ ನಿಂದ ಪ್ರಸ್ತುತ ಶಾಸನದ ಕಾಲದ ಹೊಯ್ಸಳ ಚಕ್ರವರ್ತಿ ೩ನೇ ಬಲ್ಲಾಳನವರೆಗಿನ ಹೊಯ್ಸಳರ ವಂಶವಿವರವನ್ನು ನೀಡುತ್ತದೆ. ಈ ಬಲ್ಲಾಳನ ಬಗ್ಗೆ ಹೇಳುವಾಗ. "ಇವನು ಆನೆಗಳ ಹಿಂಡು ಓಡುವಂತೆ ಮಾಡುವ ಗಂಡ ಮತ್ತು ಭುಜಬಲದಲ್ಲಿ; ಭೀಮ ರಾಜಕುಮಾರರ ಆಧಾರ ಹಸ್ತ (?) ಮತ್ತು ಸಿಂಗಾರ ; ಶತ್ರುರಾಜಕುಮಾರರಿಗೆ ಪ್ರಳಯಕಾಲದ ಮೇಘ ಮತ್ತು ವೀರ ಡವುಡೆ; ವೀರಡವುಡೆಗೆ ಅಡ್ಡಿ ಮಾಡುವ ರಾಯರಾವುತರ ಗಂಡ....ನಂದಿ ದೇವಾ ಭಲೇ" ಎನ್ನುತ್ತದೆ ಈ ಶಾಸನ.

ಈ ದೊರೆಯ ಪರಮಾಪ್ತರಾದ ಮಹಾಮಂಡಲೇಶ್ವರ ಮಾರೆಯ ಸಾಹಣಿ ಮತ್ತು ಮಹಾಪ್ರಧಾನ ಬೇಚೆಯ ದಣ್ಣಾಯಕ ಇವರ ಪ್ರಶಸ್ತಿಯನ್ನು ಹೀಗೆ ಹೇಳುತ್ತದೆ :

'ಆನೆಗಳ ಸೈನ್ಯ ಒಡ್ಡಿ ನಿಂತಾಗ, ಕುದುರೆಗಳಸಾಲು ಅಟ್ಟಿಸಿಕೊಂಡು ಬಂದು ನೂಕಿದಾಗ, ಹೊಯಿಸಣ ದೊರೆಯ ವಜ್ರಸನ್ನಾಹ, ಸಾಹಣಿ ಶಿಖಾಮಣಿ, ರಾವುತರಾಯ ಎಂದು ಖ್ಯಾತನಾದ ಮಾರ, ಮಲೆತು ನಿಲ್ಲುವ ವೈರಿಗೆ ಸರಿಯಾವುದು ಬೆಸ ಯಾವುದು ಎಂಬ ಲೆಕ್ಕವೇ ತಿಳಿಯದಂತೆ ಎದುರಿಗೆ ಹಾಯ್ದು ಬಂದು ತನ್ನ ಭಾರೀ ಕೈಯನ್ನು ತೋರಿಸುತ್ತಾನೆ.'

'ಇನ್ನು ಬೇಚೆಯ ರಾಜ, ಕುದುರೆ ಸಿರಿ, ಕತ್ತಿಯನ್ನು ತೆಗೆದುಕೊಂಡು, ಯುದ್ಧದಲ್ಲಿ ವೈರಿಗಳಾದ ಬಿರಿದಿನ ರಾಯ ರಾವುತರನ್ನು ಹೊಡೆದರೆ, ಎದುರಿಸಿ ನಿಂತವರ ರುಂಡಗಳು ಆಕಾಶದಲ್ಲಿ, ಮುಂಡಗಳು ನೆಲದಲ್ಲಿ ಸೇರಿ ಕೆಂಪು ಬಣ್ಣದ ಸಮುದ್ರವೇ ಸೃಷ್ಟಿಯಾಗುತ್ತಿತ್ತು.'

ಅನೇಕ ಬಿರುದುಗಳನ್ನು ಹೊಂದಿದ ಬಲ್ಲಾಳ ಚಕ್ರವರ್ತಿ, ಮಹಾ ಮಂಡಲೇಶ್ವರ ತ್ರಿಭುವನಮಲ್ಲ ಮಾರೆಯ ಸಾಹಣಿ, ಮಹಾಪ್ರಧಾನ ಬೇಚೆಯ ದಣ್ಣಾಯಕ ಇವರು **ಉಣ್ಣಾಮಲೆ ಪಟ್ಟಣದ ನೆಲೆವೀಡಿನಲ್ಲಿ ಸುಖದಿಂದ ರಾಜ್ಯಭಾರ ಮಾಡುತ್ತಿರುವಾಗ, ಶಕವರ್ಷ ೧೨೪೪ ನೆಯ ದುಂದುಭಿ ಸಂವತ್ಸರದ ಕಾರ್ತಿಕ ಬಹುಳ ದಶಮಿ ಗುರುವಾರದಂದು, ಮಾರೆಯ ಸಾಹಣಿ ಮತ್ತು ಬೇಚೆಯ ದಣ್ಣಾಯಕ ಇವರು ಚಿಮ್ಮತೂರಕಲ್ಲ ಯಿಡುಬನಾಥ ದೇವರಿಗೆ, ಅದೇ ಚಿಮ್ಮತೂರಕಲ್ಲ ವೃತ್ತಿಗೆ ಸೇರಿದ ಆಯಿತೋಳಲ್ಲಿ** ಅನುದಾನವಾಗಿ ಕೊಟ್ಟ ಶಾಸನದ ಕ್ರಮ ಹೀಗಿದೆ ಎಂದು ಶಾಸನ ದಾನದ ಭೂಮಿಯ ಚಕ್ಕುಬಂದಿಯನ್ನು ಕೊಟ್ಟು ಹೀಗೆ ಮುಂದುವರಿಯುತ್ತದೆ: ಈ ನಾಲ್ಕು ಎಲ್ಲೆಕಟ್ಟಿನೊಳಗಾದ ಗದ್ದೆ ಬೆದ್ದಲು ಎಲ್ಲವನ್ನೂ ಬೇಚೆಯ ದಣ್ಣಾಯಕರು ಆ ಯಿಡುಂಬನಾಥ ದೇವರ ಅಮೃತಪಡಿಗೆಂದು, ಧಾರಾಪೂರ್ವಕವಾಗಿ ಸರ್ವಮಾನ್ಯವಾಗಿ ನೀಡಿದರು. ಈ ಧರ್ಮವನ್ನು ನಾಡು ಪಟ್ಟಣ ಪಂಚಮಠ ರಾಜಗುರುಗಳು ಮುಂತಾಗಿ ಎಲ್ಲರೂ ಅನುಕೂಲವಾಗಿ ನಡೆಸಿದವರು ತಮ್ಮ ಉಭಯ ಕುಲವನ್ನು ಉದ್ಧರಿಸಿದವರಾಗುತ್ತಾರೆ. ಈ ಧರ್ಮಕ್ಕೆ ಪ್ರತಿಕೂಲವಾಗಿ ನಡೆದುಕೊಂಡವರು ತಮ್ಮ ಇಪ್ಪತ್ತೊಂದು ತಲೆಯ ಪಿತೃಗಳನ್ನು ನರಕದಲ್ಲಿಕ್ಕಿದವರಾಗುತ್ತಾರೆ.

ಇದಾದ ಮೇಲೆ "ಸ್ವದತ್ತಂ ಪರದತ್ತಂ.....' ಎಂಬ ಶ್ಲೋಕ ಬಂದು, ಈ ದಾನವನ್ನು ಸ್ವೀಕರಿಸಿದವರು ಇತ್ಯಾದಿ ವಿವರಗಳು ಬರುತ್ತವೆ. ಯಿಡುಂಬನಾಥ ದೇವರಿಗೆಂದು ನೀಡಿದ ದಾನವನ್ನು ಆ ದೇವರ ದಿವ್ಯಪಾದಪದ್ಮಾರಾಧಕ ರಾಧಕರಾದ ಯಿಡುಬಜೀಯ, ರಾಮಜೀಯ, ಕೇತಾರ ಜೀಯ, ಸಿದ್ದಜೀಯ, ಬೇಲಜೀಯ– ಈ ಐವರಿಗೆ ಧಾರಾ ಪೂರ್ವಕವಾಗಿ ನೀಡಿದ ಶಾಸನ ಇದು ಎಂದು ಹೇಳುತ್ತ, ಇದಕ್ಕೆ **ಬೇಚೆಯ ದಣ್ಣಾಯಕರು ಶ್ರೀ ನಂದಿನಾಥ** ಎಂದು ಒಪ್ಪ ಹಾಕಿದರು; ಇದರ ಬರಹ ಸೇನಬೋವ ಚವುಡಪ್ಪನದು ಎನ್ನುತ್ತಾ,'ನ್ಯೂನಾಕ್ಷರಂ...' ಮುಂತಾಗಿ ಬರುವ ಸಂಸ್ಕೃತ ಶ್ಲೋಕ ನಂತರ ಶಾಸನ ಮುಕ್ತಾಯವಾಗುತ್ತದೆ.

**ಶಾಸನದ ಕಾಲ** : ಶಾಸನದಲ್ಲಿ ಹೇಳಿರುವ ಭಾರತೀಯ ಕಾಲಮಾನ ಕ್ರಿ.ಶ.೧೩೨೨ರ ನವೆಂಬರ್ ೪ರ ಗುರುವಾರಕ್ಕೇ ಸರಿ ಹೊಂದುತ್ತದೆ. ಇದು ಹೊಯ್ಸಳ ಚಕ್ರವರ್ತಿ ೩ನೇ ವೀರ ಬಲ್ಲಾಳನ ಕಾಲದ್ದೆಂಬುದು ಸ್ಪಷ್ಟವಾಗಿದೆ. ಮೇಲೆ

ತಾತ್ಪರ್ಯದಲ್ಲಿ ತಿಳಿಸಿರುವಂತೆ ಇದರಲ್ಲಿ ಮೊದಲಿಗೆ ಹೊಯ್ಸಳ ರಾಜವಂಶದ ಮೂಲಪುರುಷನಾದ ಸಳನ ವಿಚಾರ, ಪ್ರಸ್ತುತ ದೊರೆಯ ವಂಶಾವಳಿ, ಅವನ ಆಪ್ತರಾಗಿ ಉಣ್ಣಾಮಲೆಯ ನೆಲೆವೀಡಿನಿಂದ ಆಳುತ್ತಿದ್ದ ಮಹಾಮಂಡಳೇಶ್ವರ ಮಾರೆಯ ಸಾಹಣಿ ಮತ್ತು ಮಹಾಪ್ರಧಾನ ಬೇಚೆಯ ದಣ್ಣಾಯಕ ಇವರುಗಳ ವಿವರ, ಇವರು ಚಿಮ್ಮತೂರು ಕಲ್ಲು (ಅಂದಿನ ಚಿತ್ರದುರ್ಗ) ಪಟ್ಟಣದ ಹಿಡಿಂಬೇಶ್ವರ ದೇವರ ಅಮೃತಪಡಿಗಾಗಿ ಅದೇ ಚಿಮ್ಮತೂರುಕಲ್ಲು ಪ್ರಾಂತಕ್ಕೆ ಸೇರಿದ ಆಯಿತೋಳು ಎಂಬ ಗ್ರಾಮಕ್ಕೆ ಸೇರಿದ ಭೂಮಿಯನ್ನು ದಾನವಾಗಿ ನೀಡಿದ್ದರ ವಿವರ, ಬೇಚೆಯ ದಣ್ಣಾಯಕನಿಂದ ಆ ದೇವರ ಪರವಾಗಿ ಆ ದಾನವನ್ನು ಸ್ವೀಕರಿಸಿದ, ಆ ದೇವಾಲಯದ ಆಡಳಿತ ವರ್ಗಕ್ಕೆ ಸೇರಿದ ಯಿಡುಬಜೀಯ, ರಾಮಜೀಯ, ಕೇತಾರ ಜೀಯ, ಸಿದ್ಧಜೀಯ ಮತ್ತು ಬೇಲಜೀಯ ಎಂಬ ಐದು ಜನ ಆಚಾರ್ಯಗಳ ವಿವರ–ಈ ಎಲ್ಲ ಅಂಶಗಳು ಬಂದಿವೆ.

### ಬೇಚೆಯ ದಣ್ಣಾಯಕ

ಹೊಯ್ಸಳ ಚಕ್ರವರ್ತಿ ೩ನೇ ಬಲ್ಲಾಳನ ಜೊತೆಯಲ್ಲೇ ಮಹಾಮಂಡಲೇಶ್ವರ ಮಾರೆಯ ಸಾಹಣಿ ಮತ್ತು ಮಹಾ ಪ್ರಧಾನ ಬೇಚೆಯ ದಣ್ಣಾಯಕ ಇವರು ಉಣ್ಣಾಮಲೆ ಯಿಂದ ಆಳುತ್ತಿದ್ದಂತೆ ಪ್ರಸ್ತುತ ಶಾಸನ ಹೇಳುತ್ತಿದೆಯೆನಿಸಿ ದರೂ, ಅವರಿಬ್ಬರೂ ವಾಸ್ತವವಾಗಿ ಚಕ್ರವರ್ತಿಗೆ ಆಡಳಿತ ಸಹಾಯಕ ರಾಗಿ ಸಲಹೆಗಾರರಾಗಿ ಬಹುಕಾಲ ಅವನ ಜೊತೆ ಯಲ್ಲಿ **ಉಣ್ಣಾಮಲೆಯಲ್ಲಿ**ರುತ್ತಿದ್ದರೆಂದೂ ಮತ್ತು ಅವರಿಬ್ಬರೂ ಚಿಮ್ಮತೂರುಕಲ್ಲನ್ನು ದೊರೆಯ ಪ್ರತಿನಿಧಿಯಾಗಿ ಆಳುತ್ತಿದ್ದ ರೆಂದೂ ತಿಳಿಯುವುದು ಉಚಿತ. ಬೇಚೆಯ ದಣ್ಣಾಯಕನು ಚಿಮ್ಮತೂರಕಲ್ಲನ್ನು ಆಳುತ್ತಿದ್ದನೆಂಬ ಸಂಗತಿ ನಮಗೆ ಈಗಾಗಲೆ ಕ್ರಿ.ಶ. ೧೩೨೮ರ ಒಂದು ಶಾಸನದಿಂದ ವ್ಯಕ್ತ ವಾಗಿದೆ (ಹಳೇ ಎ.ಕ.ಸಂಪುಟ ೧೧, ಚಿತ್ರದುರ್ಗ.೪). ಇವನು ಕ್ರಿ.ಶ. ೧೩೧೮ರ ಸುಮಾರಿನಿಂದಲೇ ಚಿಮ್ಮತೂರ ಕಲ್ಲನ್ನು ಪ್ರಾಂತಪಾಲಕನಾಗಿ ಆಳುತ್ತಿದ್ದಂತೆ ಮತ್ತು ಅವನು ಮಹಾ ಪ್ರಧಾನ ಆಗುವ ಮೊದಲು ಸಾಹಣಿಯಾಗಿದ್ದಂತೆ ಹಿರಿಯೂರು ತಾಲ್ಲೂಕಿನ ಕ್ರಿ.ಶ.ಸು. ೧೩೧೩ರ ಒಂದು ಶಾಸನದಿಂದ ಊಹಿಸಲು ಸಾಧ್ಯವಿದೆ. ಪ್ರಸ್ತುತ ಶಾಸನವಂತೂ ಕ್ರಿ.ಶ. ೧೩೨೨ರಷ್ಟು ಹೊತ್ತಿಗಾಗಲೇ ಅವನು ತ್ರಿಭುವನಮಲ್ಲ ಮಾರೆಯ ಸಾಹಣಿಯೊಂದಿಗೆ ಉಣ್ಣಾಮಲೆಯಲ್ಲಿ ಚಕ್ರವರ್ತಿ ಯೊಂದಿಗೆ ಇರುತ್ತ ಇಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ನೆಂದು ಸ್ಪಷ್ಟವಾಗಿ ಸೂಚಿಸುತ್ತದೆ. ಮೇಲೆ ತಿಳಿಸಿದ ಕ್ರಿ.ಶ. ೧೩೨೮ರ ಶಾಸನ, ಆ ವರ್ಷದವರೆಗೂ ಅವನು ಅಧಿಕಾರ ದಲ್ಲಿದ್ದಂತೆ ಮತ್ತು ಪ್ರಾಯಃ ಆ ವರ್ಷವೇ ಅವನು ಗತಿಸಲಾಗಿ, ಮುಂದೆ ಅವನ ಮಕ್ಕಳಾದ ಬಲ್ಲಪ್ಪ ದಣ್ಣಾಯಕ ಮತ್ತು ಸಿಂಗೆಯ ದಣ್ಣಾಯಕ ಇವರು ಚಿಮ್ಮತ್ತೂರಕಲ್ಲ ಆಡಳಿತವನ್ನು ತಂದೆಯ ಹಾಗೇ ಕೆಲಕಾಲ ಇಲ್ಲಿ ಮತ್ತು ಕೆಲಕಾಲ ಉಣ್ಣಾ ಮಲೆಯಲ್ಲಿ (ಅದೇ ಚಕ್ರವರ್ತಿಯೊಂದಿಗೇ) ಇರುತ್ತ ನೋಡಿ ಕೊಳ್ಳುತ್ತಿದ್ದ ರೆಂಬಂತೆ ಸೂಚಿಸುತ್ತದೆ.

**ಉಣ್ಣಾಮಲೆ :** ಇಲ್ಲಿ ಪ್ರಸ್ತಾಪಗೊಂಡಿರುವ ಉಣ್ಣಾಮಲೆ ತಮಿಳುನಾಡಿನ ಪ್ರಸಿದ್ಧ ಧಾರ್ಮಿಕ ಹಾಗೂ ಚಾರಿತ್ರಿಕ ಸ್ಥಳ ವಾಗಿರುವ **(ಆರ್ಕಾಟ್ ಜಿಲ್ಲೆಯಲ್ಲಿರುವ) ಈಗಿನ ತಿರುವಣ್ಣಾ ಮಲೈ** ಎಂಬುದು ಈಗಾಗಲೆ ತಿಳಿದ ಸಂಗತಿ. ಉತ್ತರದ ದೆಹಲಿಯ ಮುಸಲ್ಮಾನ ಸುಲ್ತಾನರುಗಳ ದೃಷ್ಟಿ ದಕ್ಷಿಣದ ಸಂಪತ್ಸಮೃದ್ಧ ರಾಜ್ಯಗಳ ಮೇಲೆ ಬೀಳುತ್ತ, ಆಗಾಗ ಅವರ ಕಡೆಯವರಿಂದ ಆಕ್ರಮಣಗಳೂ ಆಗುತ್ತ ಬಂದದ್ದರಿಂದ, ಉದಾಹರಣೆಗೆ, ಅಷ್ಟು ಹೊತ್ತಿಗಾಗಲೆ ದಿಲ್ಲಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾಗಿದ್ದ ಮಲಿಕ್ ಕಾಫರ್ ಹೊಯ್ಸಳರ ರಾಜಧಾನಿಯಾಗಿದ್ದ ದೋರಸಮುದ್ರದ ಮೇಲೆ ದಾಳಿ ಮಾಡಿ ಅದನ್ನು ಹಾಳುಮಾಡಿದ್ದರಿಂದ, ೩ನೇ ಬಲ್ಲಾಳ ದೊರೆ ಕೆಲಕಾಲ ಹೊಯ್ಸಳ ಸಾಮ್ರಾಜ್ಯದ ರಾಜಧಾನಿ ಯನ್ನು ದೋರಸಮುದ್ರದಿಂದ, ಆಗ ಹೆಚ್ಚು ಸುರಕ್ಷಿತವೆಂದು ಕಂಡುಬಂದ, ಉಣ್ಣಾಮಲೆಗೆ ಬದಲಾಯಿಸಿದ್ದ ಎಂಬುದು ಈಗಾಗಲೇ ತಿಳಿದ ಸಂಗತಿ. ಪ್ರಸ್ತುತ ಶಾಸನ ರಾಜಧಾನಿ ಬದಲಾಗಿದ್ದ ಅವಧಿಯಲ್ಲಿ ಹಾಕಿಸಲಾದ ಶಾಸನಗಳಲ್ಲೊಂದು ಎಂಬುದು ಸ್ವಯಂಸ್ಪಷ್ಟ.

ಚಿತ್ರದುರ್ಗದ ಸ್ಥಳೀಯ ರಾಜಕೀಯ ಚರಿತ್ರೆಯ ದೃಷ್ಟಿಯಿಂದ, ಈ ಶಾಸನದಿಂದ ತಿಳಿದುಬರುವ ಒಂದು ಹೊಸ ಅಂಶವೆಂದರೆ, ಚಿತ್ರದುರ್ಗವನ್ನು ಪ್ರಾಂತಪಾಲಕರಾಗಿ ಆಳಿದವರಲ್ಲಿ ಮಹಾಮಂಡಳೇಶ್ವರ ತ್ರಿಭುವನಮಲ್ಲ ಮಾರೆಯ ಸಾಹಣಿ ಎಂಬುವನೂ ಒಬ್ಬನಿದ್ದ ಎಂಬುದು. ಇವನು ಹಾಗೂ ಮಹಾಪ್ರಧಾನ ಬೇಚೆಯ ದಣ್ಣಾಯಕ ಇವರಿಬ್ಬರೂ ಮಹಾ ವೀರರೂ ದಕ್ಷರೂ ಸ್ವಾಮಿನಿಷ್ಠರೂ ಇದ್ದು ಚಕ್ರವರ್ತಿಗೆ ಸೇವೆ ಸಲ್ಲಿಸುತ್ತಿದ್ದ ಪ್ರಭಾವೀ ವ್ಯಕ್ತಿಗಳಾಗಿದ್ದರೆಂದೂ, ಇವರು ಆಗಾಗ ಚಿಮ್ಮತೂರಕಲ್ಲಿಗೂ ಉಣ್ಣಾಮಲೆಗೂ ಓಡಾಡಿ ಕೊಂಡಿರುತ್ತಿದ್ದರೆಂದೂ ತಿಳಿಯಬಹುದು.

**ಬೇಚೆಯ ದಣ್ಣಾಯಕ ಹೆಸರಿನ ಪಾಠ :** ಮೇಲೆ ಪ್ರಸ್ತಾಪಿಸಿದ ಕ್ರಿ.ಶ. **೧೩೨೮ರ ಶಾಸನದಲ್ಲಿ ಬಿ.ಎಲ್. ರೈಸ್** ಅವರು ದಣ್ಣಾಯಕನ ಹೆಸರನ್ನು ಒಂದೆಡೆ **'ಬ್ಯೆಚಯ ದಂಣ್ಣಾಯಕ'** ಎಂದೂ, ಇನ್ನೊಂದೆಡೆ **'ಬೇಬ ದಂಣ್ಣಾಯಕ'** ಎಂದೂ, ಅವನ ಹೆಸರಿನಲ್ಲಿ ಅವನ ಮಕ್ಕಳಿಂದ ಪ್ರತಿಷ್ಠೆಯಾದ ಲಿಂಗವನ್ನು ಐದುಕಡೆ **'ಬೇಬನಾಥ ದೇವರು'** ಎಂದೂ, ಹಿರಿಯೂರು ತಾಲ್ಲೂಕಿನ ಎರಡು ಶಾಸನಗಳಲ್ಲಿ **'ಬೆಚೆಯ**

**ದಣ್ಣಾಯ್ಕ'** ಎಂದೂ ಓದಿದ್ದಾರೆ. **ಡಾ. ಎಂ. ಎಚ್. ಕೃಷ್ಣ** ಅವರು ಸಹ ಒಂದು ಶಾಸನದಲ್ಲಿ **'ಬೇಚೆಯ ದಣಾಕರು"** ಎಂದು ಓದಿದ್ದಾರೆ. ಲಿಪಿಕಾರರ ಕೈತಪ್ಪೋ, ಕಂಡರಿಸಿದವರ ಕೆತ್ತನೆಯ ತಪ್ಪೋ, ಅಕ್ಷರ ಸಾದೃಶ್ಯದ ಮೂಲಭೂತ ಮಿತಿಯೋ ಹೀಗೆ ಯಾವುದೋ ಕಾರಣದಿಂದ ಆ ಹೆಸರು ಬೇಬ, ಬೇಬೆಯ, ಬೆಬೆಯ ಎಂದೂ ಬೈಚಯ ಎಂದೂ ಬೇರೆ ಬೇರೆ ರೀತಿ ಓದಿರುವಂತೆ ಕಾಣುತ್ತದೆ. ಪ್ರಸ್ತುತ ತಾಮ್ರ ಶಾಸನದಲ್ಲಿ **'ಬೆ' ಎಂಬ ಆದ್ಯಕ್ಷರಕ್ಕೆ ಐತ್ವದ ಚಿಹ್ನೆಯನ್ನು** ಎಲ್ಲೂ ಹಾಕಿರುವುದಿಲ್ಲ. ಆದ್ದರಿಂದ ಅದಕ್ಕೆ ದೀರ್ಘವನ್ನು ಅಧ್ಯಾರೋಪಿಸಿ "ಬೇ" ಎಂದು ಓದಬಹುದು. ಒಂದು ವೇಳೆ 'ಬೆ' ಗೆ ಐತ್ವದ ಚಿಹ್ನೆ ಹಾಕುವುದನ್ನು ಶಾಸನಕಾರರು ಬಿಟ್ಟಿದ್ದಾರೆ ಎಂದು ಭಾವಿಸಿದರೆ, ಎಲ್ಲಕಡೆಯಲ್ಲೂ ಆ ಹೆಸರಿನ ರೂಪ **ಬೈಚ, ಬೈಚೆಯ, ಎಂದೇ ಇರಬೇಕಾದದ್ದು ವಿಹಿತ ಎನಿಸುತ್ತದೆ.** ಪ್ರಸ್ತುತ ಶಾಸನದಲ್ಲೂ ಎಲ್ಲ ಕಡೆಯಲ್ಲೂ ಆ ಹೆಸರನ್ನು **ಕೆತ್ತಿರುವಂತೆ ಕಂಡರೂ, ಕೆಲವೆಡೆ 'ಚೆ' ಯನ್ನೂ ಹಾಗೇ "ಬೇಚೆಯ, ಎಂದೂ 'ಬೇಚೆಯ'** ಎಂದೂ ಓದ ಬಹುದು. ಆದರೆ ೫೫ನೆಯ ಪಂಕ್ತಿಯಲ್ಲಿ ಹೆಸರಿನ ಎರಡನೆಯ ಅಕ್ಷರವನ್ನು 'ಬಿ' ಎಂದು ಸ್ಪಷ್ಟವಾಗಿ ಕೆತ್ತಿರುವು ದರಿಂದ, ಕೆತ್ತಿರುವಂತೆ ಕಂಡರೂ ಕೆಲವೆಡೆ 'ಚೆ'ಯನ್ನೂ ಹಾಗೆ ಕೆತ್ತಿರುವುದರಿಂದ....ಅಲ್ಲಿರುವುದು 'ಚೆ' ಎಂದು ತಿಳಿಯುವುದೇ ಸೂಕ್ತವೆನಿಸುತ್ತದೆ. ಒಟ್ಟಿನಲ್ಲಿ ಬಕಾರ ಚಕಾರಗಳ ಗುಣಿತಾಕ್ಷರ ಗಳ ಕೆತ್ತನೆಯಲ್ಲಿ ನಿರ್ದಿಷ್ಟ ವ್ಯತ್ಯಾಸಗಳನ್ನು ಕಾಣದೆ ಹೋದರೆ ಅಥವಾ (ಲಿಪಿಕಾರರು ಇಲ್ಲವೆ ಕಂಡರಣೆಕಾರರು) ತೋರಿಸದೆ ಹೋದರೆ ಇಂಥ ಕಡೆಗಳಲ್ಲಿ ಓದಿಕೆ ಅಥವಾ ಪಾಠ ನಿರ್ಣಯ ಸಂದಿಗ್ಧವಾಗುತ್ತದೆ. ಸದ್ಯಕ್ಕೆ ಪ್ರಸ್ತುತ ಪ್ರಬಂಧದಲ್ಲಿ ಈ ಹೆಸರನ್ನು ('ಬೇಚೆಯ ದಣ್ಣಾಯಕ' ಎಂತಲೂ ಓದಬಹುದಾದರೂ ಸದ್ಯಕ್ಕೆ) 'ಬೇಚೆಯ ದಣ್ಣಾಯಕ' ಎಂದೇ ಇಟ್ಟುಕೊಳ್ಳಲಾಗಿದೆ. ಇಷ್ಟಾದರೂ ಈ ಹೆಸರು ಬರುವ ಎಲ್ಲ ಶಾಸನಗಳನ್ನೂ ಖುದ್ದಾಗಿ ಮರುಪರಿಶೀಲಿಸಿ ಈ ಬಗ್ಗೆ ಖಚಿತ ಅಂಶ ಏನೆಂಬುದನ್ನು **ಗೊತ್ತು ಹಚ್ಚುವ ಪ್ರಯತ್ನದ** ಅವಶ್ಯಕತೆ ಇದೆ ಎಂಬ ಮಾತನ್ನು ಹೇಳಲೇಬೇಕು.

**ಜಂಟಿ ಆಡಳಿತ** : ಚಿತ್ರದುರ್ಗ ಪ್ರಾಂತದಲ್ಲಿ, ಕಲ್ಯಾಣ ಚಾಳುಕ್ಯರ ಕಾಲದಿಂದ, ಏಕಕಾಲದಲ್ಲೇ ಇಬ್ಬಿಬ್ಬರು ಪ್ರಾಂತ ಪಾಲಕರು ಜಂಟಿಯಾಗಿ ಪ್ರಾಂತಾಡಳಿತ ನಡೆಸುತ್ತಿದ್ದ ಪದ್ಧತಿ ಪ್ರಾರಂಭವಾದದ್ದು ಕಾಣುತ್ತದೆ. ಅದು ಹೊಯ್ಸಳರ ಕಾಲದಲ್ಲೂ (ಪ್ರಾಯಶಃ ಸಂದರ್ಭದ ಅವಶ್ಯಕತೆಯ ಮೇರೆಗೆ) ಆಗಾಗ ಮುಂದುವರಿದಿತ್ತು ಎಂಬುದಕ್ಕೆ ಪ್ರಸ್ತುತ ಶಾಸನದಲ್ಲಿ ಬರುವ-ಮಂಡಳೇಶ್ವರ ತ್ರಿಭುವನಮಲ್ಲ **ಮಾರೆಯ ಸಾಹಣಿ** ಮತ್ತು ಮಹಾಪ್ರಧಾನ **ಬೇಚೆಯ ದಣ್ಣಾಯಕ** ಇವರ-ಜಂಟಿ-ಪಾಲಕತ್ವವನ್ನು ಗಮನಿಸಬಹುದು. **ಕಲ್ಯಾಣ ಚಾಲುಕ್ಯರ** ಕಾಲ ದಲ್ಲಿ, **ಇರುಗಯ್ಯನಾಯಕ** ಮತ್ತು **೨ನೆಯ ಉದಯಾದಿತ್ಯ ನಾಯಕ** (ಕ್ರಿ.ಶ. ೧೧೮೪) ಇವರ ಜಂಟಿ ಆಡಳಿತ ಇದ್ದಂತೆ, ಹೊಯ್ಸಳರ ಕಾಲದಲ್ಲಿ, ಸೋಮೆಯ ದಣ್ಣಾಯಕ ಮತ್ತು ಹಿರಿಯ ಬಲ್ಲಾಳ ನಾಯಕ (ಕ್ರಿ.ಶ.೧೨೧೫) ಹಾಗೂ ನಾರಸಿಂಗ ನಾಯಕ ಮತ್ತು ಮಲ್ಲಯ್ಯ ನಾಯಕ (ಕ್ರಿ.ಶ. ೧೨೩೬) **ಇವರ ಜಂಟಿ-ಆಡಳಿತ ನಡೆದದ್ದನ್ನು ನೋಡುತ್ತೇವೆ.** ಇವರಾದ ಎಷ್ಟೋ ಕಾಲದ ಮೇಲೆ, ಪ್ರಸ್ತುತ ಶಾಸನದ **ಮಾರೆಯ ಸಾಹಣಿ** ಮತ್ತು **ಬೇಚೆಯ ದಣ್ಣಾಯಕ** ಇವರ ಜಂಟಿ ಆಡಳಿತವನ್ನು ಕಾಣುತ್ತೇವೆ. ಇವರಾದ ಮೇಲೆ ಇದೇ ಬೇಚೆಯ ದಣ್ಣಾಯಕನ ಮಕ್ಕಳಾದ ಬಲ್ಲಪ್ಪ ದಣ್ಣಾಯಕ ಮತ್ತು ಸಿಂಗೆಯ ದಣ್ಣಾಯಕ (ಕ್ರಿ.ಶ. ೧೩೨೮) ಇವರ ಜಂಟಿ-ಆಡಳಿತ ಮುಂದುವರಿದದ್ದು ಕಂಡುಬರುತ್ತದೆ.

**ಮಾರೆಯ ಸಾಹಣಿ** : ಪ್ರಸ್ತುತ ಶಾಸನದ ಮಾರೆಯ ಸಾಹಣಿಯ ಒಂದೆ ಒಂದು ಶಾಸನ ಈ ಹಿಂದೆ ಬಿ.ಎಲ್. ರೈಸ್ ಅವರಿಂದ ಪ್ರಕಟವಾಗಿರುವುದು ತಿಳಿಯುತ್ತದೆ. ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಲಕ್ಕವಳ್ಳಿ ಹೋಬಳಿಯ ಸೋಮಪುರ ಎನ್ನುವ ಗ್ರಾಮದ ಆ ಶಾಸನ ಹಳೇ ಎ.ಕ. ಸಂಪುಟ ೬ ರ ತರೀಕೆರೆ, ಸಂಖ್ಯೆ೪, ಕೇವಲ ೧೬ ಪಂಕ್ತಿಗಳ ಕನ್ನಡದ ಒಂದು ಚಿಕ್ಕಶಾಸನ. ಅದರಲ್ಲಿ ಶಕ ವರ್ಷ ಹೇಳದೆ, **ಕ್ರೋಧನ ಎಂಬ ಸಂವತ್ಸರವನ್ನು** ಮಾತ್ರ ಹೆಸರಿಸಿರುವುದರಿಂದ, ಅದು ಶಕವರ್ಷ ೧೨೪೭ಕ್ಕೆ (ಪ್ರಸ್ತುತ ತಾಮ್ರಶಾಸನ ಹಾಕಿಸಿದ ಮೂರು ವರ್ಷದ ತರುವಾಯದ ವರ್ಷ) ಅಂದರೆ ಕ್ರಿ.ಶ. ೧೩೨೫ನೆಯ ವರ್ಷಕ್ಕೆ ಸೇರಿದ್ದೆಂದು ಸ್ಪಷ್ಟವಾಗುತ್ತದೆ. ಮಹಾಮಂಡಳೇಶ್ವರ ತ್ರಿಭುವನಮಲ್ಲ **ಮಾರೆಯ ಸಹಣಿಯರು ಹಲಸೂರಿನ ಸೋಮನಾಥ ದೇವರ ದರ್ಶನಕ್ಕೆ ಬಂದಿದ್ದಾಗ,** ಅಲ್ಲಿಯ **ಸೋಮಯ್ಯದೇವರ ಪುರದ ಮಠದೆಱ** (=ಮಠದ ತೆಱಗೆ)**ಯ ಗದ್ಯಾಣ ೪೦ ಹೊನ್ನನ್ನು, ಆ ದೇವರ ಅಂಗ-ರಂಗ ಭೋಗ ಪಾತ್ರ-ಪಾವುಳ** ಅಮ್ರಿತಪಡಿಗೆಂದು ಧಾರಾಪೂರ್ವಕವಾಗಿ ಕೊಟ್ಟಂತೆ ಆ ಶಾಸನ ತಿಳಿಸುತ್ತದೆ. ಈಗ ಈ ದೇವಸ್ಥಾನ ಸೋಮಪುರಕ್ಕೆ ಸೇರಿರುವುದಾದರೂ ಪ್ರಾಚೀನ ಕಾಲದಲ್ಲಿ ಇದು ಇಲ್ಲಿಗೆ ಹತ್ತಿರದಲ್ಲೇ ಇರುವ ಹಲಸೂರಿಗೆ ಸೇರಿತ್ತೆಂದು ಕಾಣುತ್ತದೆ.

ಆ ಶಾಸನದ ಶಾಪಾಶಯದ ಅಂತ್ಯದಲ್ಲಿ ಮಾರೆಯ ಸಾಹಣಿ **'ಶ್ರೀ ನಂದಿನಾಥ'** ಎಂದು ಒಪ್ಪ ಹಾಕಿರುವುದು, ಪ್ರಸ್ತುತ ತಾಮ್ರಶಾಸನದ ಅಂತ್ಯದಲ್ಲಿ ಬೇಚೆಯ ದಣ್ಣಾಯಕನು ಕೂಡಾ ಒಪ್ಪ ಹಾಕುವಾಗ **'ಶ್ರೀ ನಂದಿನಾಥ' ಎಂದು ದೈವ ನಾಮೋಲ್ಲೇಖ** ಮಾಡಿರುವುದಕ್ಕೆ ಸಂವಾದಿಯಾಗಿದೆ. ಮಾರೆಯ ಸಾಹಣಿ ಮತ್ತು **ಬೇಚೆಯ ದಣ್ಣಾಯಕ**

ಇವರಿಬ್ಬರಿಗೂ ಇಷ್ಟದೈವದಂತಿರುವ ಈ ನಂದಿನಾಥ ಮೂಲತಃ ಚಿಮ್ಮತ್ತೂರಕಲ್ಲಿನಲ್ಲಿದ್ದ ಒಂದು ದೈವವೇ? ಅಥವಾ ಬೇರೆಯದೇ? ಈ ಬಗೆಗೆ ಹೆಚ್ಚಿನ ಒಂದು ಅಂಶವನ್ನು ಮುಂದೆ ಪ್ರಸ್ತಾಪಿಸಲಾಗುವುದು.

ಮಾರೆಯ ಸಾಹಣಿ ಹಲಸೂರಿಗೆ ಭೇಟಿಕೊಟ್ಟ ಕಾಲಕ್ಕೆ ಅಧಿಕಾರದಲ್ಲಿದ್ದದ್ದು ಎಲ್ಲಿ? ಅಥವಾ ಎಲ್ಲಿಂದ ಅಲ್ಲಿಗೆ ಹೋಗಿದ್ದ? ಇತ್ಯಾದಿ ವಿವರಗಳಾವುವು ಆ ಶಾಸನದಲ್ಲಿಲ್ಲ ಪ್ರಸ್ತುತ ತಾಮ್ರ ಶಾಸನ ಹಾಕಿಸಿದ ಮೂರು ವರ್ಷಗಳಾದ ಮೇಲಿನ ಶಾಸನ ಅದಾದ್ದರಿಂದ, ಅವನು ಆ ದೇವರ ದರ್ಶನಕ್ಕಾಗಿ ಪ್ರಾಯಶಃ **ಚಿಮ್ಮತ್ತೂರ ಕಲ್ಲಿಂದಲೇ ಅಲ್ಲಿಗೆ ಪಯಣಿಸಿರಬೇಕೆಂದು ಊಹಿಸಬಹುದು.**

**ಪ್ರಸ್ತುತ ಶಾಸನದ ದಾನ :** ಮಹಾಪ್ರಧಾನ ಬೇಚೆಯ ದಣ್ಣಾಯಕನು ಮೇಲೆ ತಿಳಿಸಿದ ದಿನಾಂಕದಂದು, ಚಿಮ್ಮತೂರ ಕಲ್ಲಮಿಡುಂಬನಾಥ ದೇವರಿಗೆ, ಅಮೃತಪಡಿಗಾಗಿ, ಅದೇ ಚಿಮ್ಮತೂರಕಲ್ಲು ವೃತ್ತಿಯೊಳಗಿನ **ಆಯಿತೋಳಲ್ಲಿ ಕೆಲವೊಂದು ಭೂಮಿಯನ್ನು** ಸರ್ವಮಾನ್ಯದಾನವಾಗಿ ನೀಡಿದಂತೆ ತಾಮ್ರ ಶಾಸನ ತಿಳಿಸುತ್ತದೆ. ಆ ಭೂಮಿಯ ಚಕ್ಕುಬಂದಿಯನ್ನು ಸಹ ಅಲ್ಲಿ ಹೇಳಿದೆ. ಸದರಿ ಹೆಸರಿನ ಗ್ರಾಮ, ಚಿತ್ರದುರ್ಗದಿಂದ ವಾಯವ್ಯಕ್ಕೆ ಸುಮಾರು ೮ ಕಿಲೋಮೀಟರ್ ದೂರವಿರುವ ಕ್ರಿ.ಶ.೬ನೇ ಶತಮಾನದ ಗುಣಮಧುರ ಎಂಬ ಸ್ಥಳೀಯ ರಾಜನ ಶಾಸನಗಳಿಂದ ಪ್ರಸಿದ್ಧವಾಗಿರುವ ತಮಟುಕಲ್ಲು ಗ್ರಾಮದ ಸಮೀಪವೇ ಇದೆ. ಈ ಗ್ರಾಮ ದಾಟಿ ಸುಮಾರು ೨ ಕಿಲೋಮೀಟರ್ ಮುಂದೆ ಹೋದರೆ ಆಯಿತೋಳು ಗ್ರಾಮ ಸಿಕ್ಕುತ್ತದೆ. ಈ ಗ್ರಾಮದ ಅಚ್ಚುಕಟ್ಟಿಗೆ ಸೇರಿದ್ದಂತೆ ಶಾಸನದಲ್ಲಿ ಚಕ್ಕುಬಂದಿಯೊಂದಿಗೆ ವಿವರಿಸಲ್ಪಟ್ಟಿರುವ ದಾನ ಭೂಮಿಯನ್ನು ಈಗ ನಿರ್ದಿಷ್ಟವಾಗಿ ಪತ್ತೆ ಹಚ್ಚುವುದು ಕಷ್ಟ.

**ದಾನಸ್ವೀಕರ್ತರು ಮತ್ತು 'ಯಿಡುಬನಾಥ' ಎಂಬ ಹೆಸರು**
ಸದರಿ ದಾನ ಭೂಮಿಯನ್ನು ದೇವರ ಸೇವೆಯ ಸಲುವಾಗಿ ಸ್ವೀಕರಿಸಿದವರು ಮೇಲೆ ಆಗಲೇ ಹೇಳಿದಂತೆ ಆ ದೇವರ ಭಕ್ತರೂ ಸೇವಾಕರ್ತರೂ ಆದ **ಯಿಡುಬಜೀಯ, ರಾಮ ಜೀಯ, ಕೇತಾರ ಜೀಯ, ಸಿದ್ದಜೀಯ ಮತ್ತು ಬೇಲಜೀಯ** ಎಂಬ ಐವರು ಆಚಾರ್ಯರು. ಇವರ ಹೆಸರುಗಳ ಮೇಲಿಂದಲೇ ಇವರು ಲಕುಲೀಶ ಪಾಶುಪತ ಅಥವಾ ಕಾಳಾಮುಖ ಸಂಪ್ರದಾಯಕ್ಕೆ ಸೇರಿದವರೆಂದು ವ್ಯಕ್ತವಾಗುತ್ತದೆ. ಮೇಲೆ ಹೇಳಿದ ಐವರಲ್ಲಿ **ಯಿಡುಬಜೀಯ ಎಂಬ** ಹೆಸರಿನವನೊಬ್ಬ ಬೇರುತ್ತಾನಷ್ಟೆ. ಅದೇ ಹೆಸರಿನ ಇನ್ನೊಬ್ಬ ಆಚಾರ್ಯನಿದ್ದ ಎಂಬ ಸಂಗತಿ ಹಿಂದೆ ಬಿ.ಎಲ್.ರೈಸ್ ಪ್ರಕಟಿಸಿದ್ದ ಕ್ರಿ.ಶ. ೧೪೧೧ರ ವಿಜಯನಗರ ಕಾಲದ ಶಾಸನವೊಂದರಿಂದ ತಿಳಿದು ಬಂದಿತ್ತು. ಹಾಗೆಯೇ ಹಿಡಿಂಬೇಶ್ವರ ದೇವಾಲಯ ನಿಂತಿರುವ ಬೃಹತ್ ಬಂಡೆಯ ಪೂರ್ವ ಪಾರ್ಶ್ವದಲ್ಲಿ ಒಂದೆಡೆ ನನಗೆ ದೊರೆತ, ಕ್ರಿ.ಶ. ಸು. ೧೫ನೇ ಶತಮಾನದ ಪೂರ್ವಾರ್ಧ ಕಾಲಕ್ಕೆ ಸೇರಿದ ಒಂದು ಹೊಸ ಶಾಸನ '**ಕರಿಯ ಯಿಡುಬಜೀಯ**' ಎಂಬ ಇದೇ ಹೆಸರಿನ ಇನ್ನೊಬ್ಬ ಆಚಾರ್ಯನನ್ನು ಹೆಸರಿಸುತ್ತದೆ. ಹಾಗೆಯೇ ಚಿತ್ರದುರ್ಗದ ಈ ಶಾನ್ಯಕ್ಕೆ ಮೆದಕೇರಿಪುರಕ್ಕೆ ಸಮೀಪದ ಬೇಚರಕ್ ಗ್ರಾಮವೊಂದರ ನೆಲೆಯಲ್ಲಿ ನನಗೆ ದೊರೆತ ಕ್ರಿ.ಶ.೧೪ನೇ ಶತಮಾನದ (ಕ್ರಿ.ಶ. ೧೩೩೬ರ) ಇನ್ನೊಂದು ಶಾಸನದಲ್ಲಿ ಈ ದೇವರ ನಾಲ್ವರು ಸ್ಥಾನಿಕರಲ್ಲಿ ಇದೇ ಹೆಸರಿನ ಮೂವರಿದ್ದುದು ಗೋಚರಿಸುತ್ತದೆ. ಅವರು ಯಾರೆಂದರೆ ಯಿಡುಬಯ್ಯದೇವರ ಕರಿಯ ಯಿಡುಬಜೀಯ ರಾಮಜೀಯನ ಮಗ ಯಿಡುಬ ಜೀಯ, ನಾಗಜೀಯನ ಮಗ ಯಿಡುಬಜೀಯ ಹೀಗೆ ಮೂವರು. **ಇದರಿಂದ ಈ ದೇವರ ಹೆಸರಿನ ಪ್ರಾಚುರ್ಯ ಜನ ಸಾಮಾನ್ಯರಲ್ಲಿ ಅಥವಾ ಆ ದೇವರಿಗೆ** ಸಂಬಂಧಿಸಿದ **ಆಚಾರ್ಯ ವರ್ಗದಲ್ಲಿ ಹೆಚ್ಚಾಗಿತ್ತೆಂದು** ತಿಳಿಯಬಹುದು.

ಇಲ್ಲಿ ಇನ್ನೊಂದು ಅಂಶವನ್ನೂ ಗಮನಿಸಬೇಕು: ದೇವರ ಹೆಸರನ್ನು ಯಿಡುಬ, ಯಿಡುಬಯ್ಯ ದೇವರು ಎಂದು ಕರೆದಿರುವುದನ್ನೂ, ಸ್ಥಾನಿಕರ ಅಥವಾ ಆಚಾರ್ಯರ ಹೆಸರುಗಳನ್ನು ಯಿಡುಬಜೀಯ ಎಂದು ಹೆಸರಿಸಿರುವುದನ್ನೂ ನೋಡಿದರೆ, ಈ ದೇವರ ಹೆಸರು ಇಡುಬ ಅಥವಾ ಇಡುಬಯ್ಯ ಎಂದೇ ಮೂಲದಲ್ಲಿ ಇದ್ದಿರಬೇಕು; ದೇಶ್ಯ ಮೂಲದ ಆ ಹೆಸರೇ ಹಿಡಿಂಬ, ಹಿಡಿಂಬನಾಥ, ಹಿಡಿಂಬೇಶ್ವರ, ಹಿಡುಂಬನಾಥ ಮುಂತಾಗಿ ಸಂಸ್ಕೃತೀಕರಣದ ರೂಪಗಳನ್ನು ಪಡೆದಿರಬಹುದೇ ಎಂದು ನಾನು ಹಿಂದೊಮ್ಮೆ ಸಂದೇಹ ವ್ಯಕ್ತಪಡಿಸಿದ್ದಕ್ಕೆ ಪ್ರಸ್ತುತ ಶಾಸನ ಕೂಡಾ ಪೂರಕ ಅಂಶಗಳನ್ನು ಒದಗಿಸಿದೆ ಎಂದು ಹೇಳಬೇಕಾಗುತ್ತದೆ.

**'ಪಂಚಮಠ'ದ ಉಲ್ಲೇಖ :** ಪ್ರಸ್ತುತ ದಾನಭೂಮಿಯ ನಿರ್ವಹಣೆಗೆ ಸಂಬಂಧಿಸಿ ದಂತೆ ಹೇಳಿರುವ ಮಾತುಗಳನ್ನು ಕೂಡಾ ಗಮನಿಸಬೇಕಾಗಿದೆ. ಈ ಧರ್ಮವನ್ನು ಯಾರಾರೆಲ್ಲ ಅನುಕೂಲರಾಗಿ ನಡೆಸಿಕೊಂಡು ಹೋಗಬೇಕು ಎನ್ನುವಲ್ಲಿ ದಾನಸ್ವೀಕರ್ತರಂಥ ಆಚಾರ್ಯರು ಅಥವಾ ರಾಜಗುರುಗಳನ್ನು ಹೊರತುಪಡಿಸದೆ ಅವರೂ ಮತ್ತು ಪಂಚಮಠದವರ ಮತ್ತು ಸಾರ್ವಜನಿಕರು ಹೀಗೆ ಎಲ್ಲರನ್ನೂ ಸೇರಿಸಿ ಎಚ್ಚರಿಕೆಯ ಸೂಚನೆ ನೀಡಿರುವುದು ಮೆಚ್ಚುವಂತಹ ಸಂಗತಿ. ಈ ಸೂಚನೆಯ ಮೂಲಕ ಚಿಮ್ಮತೂರಕಲ್ಲಲ್ಲಿ ಆಗ ರಾಜಗುರುಗಳು ಮತ್ತು ಪಂಚಮಠ ಇದ್ದ ಸಂಗತಿಯನ್ನೂ ಸೂಚಿಸಲಾಗಿದೆ ಆ ರಾಜಗುರುಗಳಾರೆಂದು ಇಲ್ಲಿ ಹೆಸರಿಸಿಲ್ಲ. ಹಾಗೆಯೇ ಆ ಮಠ ಕೂಡಾ ಯಾವುದು ಎಂದು ನಿರ್ದಿಷ್ಟವಾಗಿ ತಿಳಿಯುವುದಿಲ್ಲ. ಆದರೂ ಆ ಕಾಲಕ್ಕೆ ಅದೊಂದು ಪ್ರಧಾನ ಮಠವಾಗಿತ್ತೆಂದು ಅದರ ಹೆಸರಿನಿಂದ ಊಹಿಸಬಹುದು. ಕ್ರಿ.ಶ. ೧೪ನೇ ಶತಮಾನದಲ್ಲಿ ಚಂದ್ರವಳ್ಳಿ ಪ್ರದೇಶದಲ್ಲಿ ಈಗ

**'ಅಂಕಲಿಮಠ' 'ಅಂಕಳಸ್ವಾಮಿ ಮಠ' ಮುಂತಾಗಿ ಕರೆಯುವ ಮಠ, ವೀರೇಶ್ವರದೇವರ ಮಠ ಆಗಿತ್ತೆಂಬ** ಸಂಗತಿ ಆ ಪ್ರದೇಶದ ಒಂದು ಬಂಡೆಯ ಮೇಲೆ ದೊರೆತ, ಸಾಕಷ್ಟು ಸವೆದುಹೋದ ಶಾಸನವೊಂದರಲ್ಲಿ ಈಗಾಗಲೇ ತಿಳಿದುಬಂದಿತ್ತು. ಪ್ರಸ್ತುತ ತಾಮ್ರಶಾಸನ ಆ ಶಾಸನಕ್ಕಿಂತ ಸ್ವಲ್ಪ ಹಿಂದಿನದಾಗಿ ತೋರುವುದರಿಂದ ಅಷ್ಟು ಹೊತ್ತಿಗಾಗಲೇ ಚಿತ್ರದುರ್ಗದಲ್ಲಿ ಮಠಗಳಾಗಿದ್ದುವೆಂಬ ಸಂಗತಿಯ ಪ್ರಪ್ರಥಮ ಉಲ್ಲೇಖ ಪ್ರಾಯಶಃ ಈ ಶಾಸನದ್ದೇ ಆಗುತ್ತದೆ ಎನ್ನಬಹುದು. ಹಿಡಿಂಬೇಶ್ವರ ಒಂದು ಶೈವ ದೈವವಾದ್ದರಿಂದ, ಈ ದೇವರ ದಾನಸಂದರ್ಭದಲ್ಲಿ ಈ ಪಂಚಮಠ ಪ್ರಸ್ತಾಪಗೊಂಡಿರುವುದನ್ನು ಗಮನಿಸಿದರೆ, ಅದು ಪ್ರಾಯಶಃ ಈ ದೇವಾಲಯಕ್ಕೇ ಹೊಂದಿಕೊಂಡಿದ್ದ ಅಥವಾ ಸಂಬಂಧ ಹೊಂದಿದ್ದ ಒಂದು ಪ್ರಧಾನ ಶೈವಮಠವಾಗಿರ ಬೇಕು.

**ಚಿತ್ರದುರ್ಗದ ಪ್ರಾಚೀನ ಹೆಸರು 'ಚಿಮ್ಮತೂರಕಲ್ಲು'**

ಈ ಶಾಸನ ಬರಹದಿಂದ ಹೊರಪಡುವ ಇನ್ನೊಂದು ಮುಖ್ಯಾಂಶವನ್ನೂ ಇಲ್ಲಿ ಗಮನಿಸಬೇಕು. ಅದು ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರವನ್ನು ಕುರಿತದ್ದು. "ಚಿತ್ರದುರ್ಗದ ಪ್ರಾಚೀನ ಹೆಸರು ಬರುವಲ್ಲೆಲ್ಲ ರೈಸ್ ಅವರು ಅದು ಬಹುತೇಕ ಕಡೆ ಬೆಮ್ಮತ್ತನೂರು, **ಬೆಮ್ಮತ್ತನಕಲ್ಲು ಎಂದು** 'ಬೆ'ಯಿಂದ ಪ್ರಾರಂಭವಾದಂತೆ ಓದಿದ್ದರು. ಡಾ. ಎಂ.ಎಂ. ಕಲಬುರ್ಗಿ ಅವರು, ಅದು **'ಬೆ' ಇರದೆ 'ಚಿ' ಇರಬೇಕೆಂದೂ** ಆ ಎರಡೂ ಅಕ್ಷರಗಳ **ರೂಪ ಸಾಧ್ಯದಿಂದ** ರೈಸ್ ಅವರು ಹಾಗೆ ತಪ್ಪಾಗಿ ಓದಿರಬಹುದೆಂದೂ– ಈ ಭಾಗದ ಶಾಸನಗಳನ್ನು ಖುದ್ದಾಗಿ ನೋಡಿರದಿದ್ದರೂ, ಶಾಸನಲಿಪಿಯ ತಮ್ಮ ಅನುಭವದ ಬಲದಿಂದ ಒಂದು ಊಹೆಯನ್ನು ವ್ಯಕ್ತಪಡಿಸಿದ್ದರು. ಈ ಮೇಲೆ ತಿಳಿಸಿದಂತೆ ಚಿತ್ರದುರ್ಗದ ಪ್ರಾಚೀನ ಹೆಸರನ್ನು ರೈಸ್ ಅವರು ಕೇವಲ 'ಬೆ' ಯಿಂದ ಪ್ರಾರಂಭವಾಗಿದ್ದಂತೆ ಮಾತ್ರವಲ್ಲ, **'ಬ'ಯಿಂದ, 'ಭ'ಯಿಂದ, 'ಚ'ಯಿಂದ** ಸಹ ಪ್ರಾರಂಭವಾದಂತೆ ಓದಿದ್ದರು. ಡಾ. ಎಂ.ಎಂ.ಕಲಬುರ್ಗಿ ಅವರು ಈ ಬೇರೆ ಬೇರೆ ಓದಿಕೆಗಳಲ್ಲಿ **'ಬೆ'ಯಿಂದ** ಪ್ರಾರಂಭವಾದಂತೆ ಓದಿದ್ದ ಓದಿಕೆಯೊಂದಕ್ಕೆ ಸಂಬಂಧಿಸಿದಂತೆ ಮಾತ್ರ ತಮ್ಮ ಊಹೆಯನ್ನು ವ್ಯಕ್ತಪಡಿಸಿದ್ದರು. ಅವರ ಊಹೆ, ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರದ ಸಮಸ್ಯೆಯನ್ನು ಬಿಡಿಸುವಲ್ಲಿ ಕೀಲಿಕೈಯಾಗಿ ಪರಿಣಮಿಸಿತು. ಅವರ ಪ್ರೇರಣೆಯಿಂದ ಚಿತ್ರದುರ್ಗ ಭಾಗದ ಬೇರೆ ಬೇರೆ ಕಾಲದ ಆ ಸ್ಥಳನಾಮದ ಪ್ರಾರಂಭಾಕ್ಷರಗಳ ಮಾದರಿಗಳನ್ನು ಆರಿಸಿಕೊಂಡು ನಾನು ಒಂದು ದೃಶ್ಯಕೋಷ್ಟಕ ವನ್ನು ತಯಾರಿಸಿ ಅವನ್ನು ಪರಸ್ಪರ ತಾಳೆನೋಡಿದಾಗ, 'ಚಿ' ಅಕ್ಷರಕ್ಕೆ 'ಬೆ'ಯಂತೆ 'ಬ''ಭ'ಗಳಿಗೂ ಕೂಡಾ ಲಿಪಿಸಾದೃಶ್ಯ ಇರುವುದು ಗೋಚರಿಸಿತು. ಹೀಗೆ ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರ ಎಲ್ಲೆಡೆಯಲ್ಲೂ ಇರುವುದು 'ಚಿ'ಯೇ ಹೊರತು ಬೇರೆ ಅಲ್ಲ ಎಂಬುದು ಸ್ಪಷ್ಟವಾಯಿತು.

ಪ್ರಸ್ತುತ ಶಾಸನದಲ್ಲಿ ಚಿತ್ರದುರ್ಗದ ಪ್ರಾಚೀನ ಹೆಸರು (೯೧ ರಿಂದ ೯೩ರವರೆಗಿನ ಮೂರು ಪಂಕ್ತಿಗಳಲ್ಲಿ) ಎರಡು ಸಲ ಬಂದಿರುವಲ್ಲಿಯೂ ಅದರ ಪ್ರಾರಂಭಾಕ್ಷರವನ್ನು (ಇದೇ ಶಾಸನದಲ್ಲಿ ಅನೇಕ ಕಡೆ ಬರುವ) 'ಬೆ' **ಯಿಂದ ವಿಭಿನ್ನವಾಗಿ– ಅಂದರೆ 'ಚ' ಅಕ್ಷರದ ತಲೆಕಟ್ಟಿನ** ಗೆರೆಯನ್ನು ಸ್ಪಷ್ಟವಾಗಿ ಕೊರೆದು ಅದರ ಮೇಲೆ ಇತ್ವದ ಅರೆ ಗುಂಡಗಿನ ರೇಖೆಯನ್ನು ಹಾಕುವುದರ ಮೂಲಕ ಅದು 'ಚಿ' ಯೇ ಹೊರತು ಬೇರೆ ಅಕ್ಷರ ಅಲ್ಲ ಎಂಬುದನ್ನು ಸ್ಪಷ್ಟವಾಗಿ–ಕಂಡರಿಸಿರುವುದು ಗಮನಾರ್ಹವಾಗಿದೆ. ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರದ ವಿಷಯದಲ್ಲಿ ಇನ್ನು ಯಾರಿಗಾದರೂ ಸಂದೇಹವಿದ್ದರೆ ಅದನ್ನು ಸಂಪೂರ್ಣವಾಗಿ ದೂರಮಾಡುವಂತೆ, 'ಚಿ' ಅಕ್ಷರದ ಸ್ಪಷ್ಟ ಕೆತ್ತನೆಯ ಮೂಲಕ ನಿರ್ಣಾಯಕ ಅಂಶವನ್ನು ನೀಡಿರುವುದು ಈ ಶಾಸನದ ಒಂದು ಮಹತ್ತ್ವದ ಅಂಶವೆಂದೇ ಹೇಳಬಹುದು.

ಇಷ್ಟದೈವವಾಗಿ ಉಲ್ಲೇಖವಾಗಿರುವ **'ನಂದಿನಾಥ'** : ಇನ್ನು ಕಡೆಯದಾಗಿ, ಮಂಡಲೇಶ್ವರ ತ್ರಿಭುವನಮಲ್ಲ **ಮಾರೆಯ ಸಾಹಣಿ** ಮತ್ತು ಮಹಾಪ್ರಧಾನ **ಬೇಚೆಯ ದಣ್ಣಾಯಕ** ಇವರು, ಹಿಂದೆಯೇ ತಿಳಿಸಿದಂತೆ, ತಮ್ಮ ಒಪ್ಪಹಾಕುವಾಗ ಉಲ್ಲೇಖಿಸಿರುವ ಇಷ್ಟದೈವ **'ಶ್ರೀ ನಂದಿನಾಥ'** ಎಂಬುದರ ವಿಚಾರ–ಈ ಬಗ್ಗೆ ಇಲ್ಲಿ ಒಂದು ಅಂಶವನ್ನು ಪ್ರಸ್ತಾಪಿಸಬಹುದೆನಿಸುತ್ತದೆ. ಅದೆಂದರೆ ಪ್ರಸ್ತುತ ಶಾಸನದಲ್ಲಿ ಹೊಯ್ಸಳ ಚಕ್ರವರ್ತಿಗಳ ವಂಶಾವಳಿಯನ್ನು ವಿವರಿಸುವಾಗ ಆ ವಂಶದಲ್ಲಿ ೩ನೆಯ ಬಲ್ಲಾಳನು ಬಂದದ್ದನ್ನು ಹೇಳುತ್ತಿದ್ದಂತೆಯೇ ಅವನನ್ನು 'ಘಟೆಯೋಡೆ ಗಂಡ ಭುಜಬಳ ಭೀಮ....ರಾಯರಾವುತರ ಗಂಡ ಮುಂತಾಗಿ ಹೇಳುತ್ತಾ ಕಡೆಯಲ್ಲಿ 'ನಂದಿದೇವಾ ಚಾಪುತು' ಎಂದು ಕೊಂಡಾಡುವಂತೆ ನಿರೂಪಣೆ ಇದೆ. ಇದನ್ನು ಸೂಕ್ಷ್ಮವಾಗಿ ನೋಡಿದರೆ, 'ನಂದಿದೇವ' ಎಂಬುದು ಈ ೩ನೇ ಬಲ್ಲಾಳನಿಗಿದ್ದ ಇನ್ನೊಂದು ಹೆಸರು ಎಂದು ಅದು ಸೂಚಿಸುವಂತಿದೆ. ಹೀಗಾಗಿ ಮಾರೆಯ ಸಾಹಣಿ ಮತ್ತು ಬೇಚೆಯ ದಣ್ಣಾಯಕರಿಬ್ಬರೂ ಒಪ್ಪ ಹಾಕುವಾಗ ತಮ್ಮ ಇಷ್ಟದೈವವಾಗಿ ('ರಾಜಾ ಪ್ರತ್ಯಕ್ಷದೇವತಾ' ಎಂಬ ಮಾತಿನಂತೆ) ಆ ದೊರೆಯನ್ನೇ 'ಶ್ರೀ ನಂದಿನಾಥ' ಎಂಬ ಹೆಸರಿನಿಂದ ಉಲ್ಲೇಖಿಸಿರಬಹುದೆ? ಎಂಬ ಸಂದೇಹವೊಂದು ಇಣುಕುತ್ತದೆ.

ಒಟ್ಟಿನಲ್ಲಿ ಹೊಯ್ಸಳ ಕಾಲದ ಚಿತ್ರದುರ್ಗದ ಚರಿತ್ರೆಯ ಮೇಲೆ ಹೊಸಬೆಳಕು ಬೀರುವಂತಹ ಹಲವು ಅಂಶಗಳನ್ನು ನೀಡುವುದರಿಂದ ಈ ಹೊಸ ತಾಮ್ರಶಾಸನ ಮಹತ್ತ್ವದ್ದಾಗಿದೆ ಎಂದು ಹೇಳಬಹುದು.



ಡಾ. ಕೆ.ಜಿ. ಭಟ್‌ಸೂರಿ*

# ನೂಲ್ವಿ ಮತ್ತು ಮಾವಳ್ಳಿ ಗ್ರಾಮದ ಎರಡು ಅಪ್ರಕಟಿತ ಶಾಸನಗಳು

ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಯೋಜನೆಯಡಿಯಲ್ಲಿ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲೂಕಿನಲ್ಲಿ ಗ್ರಾಮವಾರು ಶಾಸನಗಳನ್ನು ಅನ್ವೇಷಣೆ ಮಾಡುತ್ತಿದ್ದಾಗ ನೂಲ್ವಿಯಲ್ಲಿ ಆಕಸ್ಮಿಕವಾಗಿ ಒಂದು ಅಪ್ರಕಟಿತ ಶಾಸನ ದೊರೆತಿದೆ. ನೂಲ್ವಿ ಗ್ರಾಮ ಹುಬ್ಬಳ್ಳಿಯಿಂದ ಆಗ್ನೇಯಕ್ಕೆ ೧೦ ಕಿ.ಮೀ. ಅಂತರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ ನೂಲ್ವಿ ಗ್ರಾಮ "ನೂಲೆ" ಎಂದು ಉಲ್ಲೇಖಿತವಾಗಿದೆ. ಹಿಂದೆ ಹಲಸಿಗೆ ೧೨ಸಾವಿರಕ್ಕೆ ಸೇರಿದ ಸಬ್ಬ– ೩೦ರಲ್ಲಿ ಈ ನೂಲ್ವಿಗ್ರಾಮ ಅಂತರ್ಗತವಾಗಿತ್ತು. (ಕರ್ನಾಟಕ ಗ್ಯಾಝೆಟಿಯರ್ : ಮುಖ್ಯ ಸಂಪಾದಕರು. ಸೂರ್ಯನಾಥ ಕಾಮತ್ ಪು. ೯೭೦–೭೧) ಹೀಗೆ ನೂಲ್ವಿ ಗ್ರಾಮಕ್ಕೆ ತನ್ನದೇ ಆದ ಐತಿಹಾಸಿಕ ಮಹತ್ವವಿದೆ. ಪ್ರಸ್ತುತ ಈ ಶಾಸನ ಸಿಂಹಪೀಠದ ಮೇಲಿದೆ. ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯಲ್ಲಿರುವ ಈ ಶಾಸನ ತುಸು ತ್ರುಟಿತವಾಗಿದೆ. ಈ ಶಾಸನ ಆರು ಸಾಲುಗಳನ್ನು ಒಳಗೊಂಡಿದ್ದು ಶಾಸನದಲ್ಲಿ ಶಕವರ್ಷ ೯೧೭ ಎಂದಿದ್ದು ಇದು ಕ್ರಿ.ಶ. ೯೯೫ಕ್ಕೆ ಸಮವಾಗುತ್ತದೆ. ಅಂದರೆ ಇದು ಕಲ್ಯಾಣ ಚಾಲುಕ್ಯ ಇಮ್ಮಡಿ ತೈಲಪನ (ಕ್ರಿ.ಶ. ೯೭೩ ರಿಂದ ೯೯೭) ಕಾಲಕ್ಕೆ ಸೇರಿದ್ದಾಗಿದೆ. ಶಾಸನದ ಮೊದಲನೆಯ ಪಟ್ಟಿಕೆ ಕೇತಯ್ಯಭಯ್ಯರ ದೇವರ ಎಂದಿದ್ದು ಶಾಸನ ಸ್ವಲ್ಪ ಅಳಿಸಿದೆ. ಶಾಸನದ ಎರಡನೇ ಪಟ್ಟಿಕೆಯಲ್ಲಿ ಸೋಮನಂದಿ ಚಂದ್ರ ಸಿದ್ದಾಂತಿ ದೇವರ ಶಿಷ್ಯ ಹ್ರಷಂಗಸೆಟ್ಟಿ ಹೆಸರಿದ್ದು ಸಕ ವರ್ಷ ೯೧೭ ಯುವ ಸಂವತ್ಸರ ಎಂದಿದೆ. ಮೂರನೇ ಪಟ್ಟಿಕೆಯಲ್ಲಿ ಈ ಪ್ರತಿಮೆಯನ್ನು ಕುಱಿಕಯ್ಯ ಸ್ಥಾಪಿಸಿ ಧರ್ಮ ಕಾರ್ಯ ಮಾಡಿದನೆಂದಿದೆ.

**ಶಾಸನ ಪಾಠ**

**ಮೊದಲನೆ ಪಟ್ಟಿಕೆ**

೧. ಶ್ರೀಮತ್ ಕಾರೆಯಗೆ....

೨. ದೇವರ ಕೇತಯ್ಯ ಬಙ್ಯರ ದೇವರ

**ಎರಡನೆ ಪಟ್ಟಿಕೆ**

೧. ಸೋಮನಂದಿ ಚಂದ್ರ ಸಿದ್ಧಾಂತಿ ದೇವರ ಗುಡ್ಡ ಹ್ರಷಂಗಸೆಟಿ

೨. ಯು ಸಕವರ್ಷ ೯೧೭ದ ನೆಯ ಯುವ ಸಂವತ್ಸರದ ಪೌಷ್ಯ ಸು (?).....

**ಮೂರನೆಯ ಪಟ್ಟಿಕೆ**

೧. ಅಯ್ಯ ಕಾಳಯ್ಯ ಕುಱಿಕಯ್ಯ

೨. ಪ್ರತಿಮೆಯ ಸ್ಥಾಪ್ಸಿ ಧರ್ಮಂಗಳ

ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕಿನಲ್ಲಿ ಇದೇ ಯೋಜನೆಯಡಿ ಅನ್ವೇಷಣೆ ಮಾಡುತ್ತಿದ್ದಾಗ ದೇವಿಕೊಪ್ಪದಲ್ಲಿ ಇನ್ನೊಂದು ಅಪ್ರಕಟಿತ ಶಾಸನ ಬೆಳಕಿಗೆ ಬಂದಿತು. ಈ ಶಾಸನದ ಹೆಚ್ಚಿನ ಭಾಗ ಹಾಳಾಗಿದೆ. ಈ ಶಾಸನದ ಭಾಷೆ ಮತ್ತು ಲಿಪಿ ಕನ್ನಡ. ಶಾಸನದಲ್ಲಿ ಕಾಲ ಪ್ರಭವ ಸಂವತ್ಸರ ಎಂದಿದ್ದು ಇದು ಕ್ರಿ.ಶ. ೧೦೦೬ಕ್ಕೆ ಸಮವಾಗುತ್ತದೆ. ಅಂದರೆ ಇದು ಕಲ್ಯಾಣ ಚಾಲುಕ್ಯ ಸತ್ಯಾಶ್ರಯನ (ಕ್ರಿ.ಶ. ೯೯೭ ರಿಂದ ೧೦೦೮) ಕಾಲಕ್ಕೆ ಸೇರಿದ್ದಾಗಿದೆ. ಮಾವಳ್ಳಿ ಗ್ರಾಮದಲ್ಲಿ ತುರುಗಾಳಗವಾದುದನ್ನು ಈ ಶಾಸನ ದಾಖಲಿಸುತ್ತದೆ (ಗೂವಲದೇವ?). ಈ ವೇಳೆಗಾಗಲೇ ಈ ಕಾಲಕ್ಕೆ ಸತ್ಯಾಶ್ರಯ ಮಾಂಡಲಿಕ ತರಿಮಯ್ಯನು ಈ ಗ್ರಾಮವನ್ನು ಆಳುತ್ತಿದ್ದನು. ತುರುಗಾಳಗದಲ್ಲಿ ಅಯ್ಯಚನ್ ಮಡಿದಿದ್ದನ್ನು ಈ ಶಾಸನದಲ್ಲಿ ದಾಖಲಿಸಲಾಗಿದೆ. ಈ ವೀರಗಲ್ಲನ್ನು ಮಾಡಿಸಿದವನು ರಂಗಂ ಎಂದಿದೆ.

ಒಟ್ಟಾರೆ ಈ ಎರಡು ಶಾಸನಗಳು ಕಲ್ಯಾಣ ಚಾಲುಕ್ಯರ ಮೇಲೆ ಬೆಳಕನ್ನು ಚೆಲ್ಲಿದ್ದು ಇವೆರಡೂ ಅಪ್ರಕಟಿತ ಶಾಸನಗಳಾದುದ್ದರಿಂದ ಐತಿಹಾಸಿಕವಾಗಿ ಮಹತ್ವದ್ದಾಗಿವೆ.

**ಶಾಸನ ಪಾಠ**

**ಮೊದಲನೆಯ ಪಟ್ಟಿಕೆ**

೧. ಸ್ವಸ್ತಿ ಶ್ರೀ ಪ್ರಿಥಿವಿ ವಲ್ಲಭ ಮ.. .. .. .. .. .. .. .. ..

೨. ಭಟ್ಟಾರಕಂ ಸತ್ಯಾಶ್ರಯ.. .. .. .. .. .. .. .. .. .. ..

೩. ..ರೆ ಶ್ರೀಮತ್ ತರಿಪಯ್ಯ ಮಹ.. .. .. .. .. .. .. ..

**ಎರಡನೆಯ ಪಟ್ಟಿಕೆ**

೪. .. .. .. .. .. .. ರಮನಾಳುತ್ತಿರೆ ಶಕ ನ್ರಪಕಾಲಾತೀತ ಸಂವತ್ಸರ ಸತಂ.

೫. .. .. .. .. .. ..ತನೆಯ ಪರಾಭವ ವರ್ಷಂ ಪ್ರವರ್ತಿಸೆ ಕೊಂಕಣದ ಗೂ

೬ ................ ಸನವರು ಮಾವಳ್ಳಿಯ ತರುವಂ ಕೊಳ್‌ವಾಗಳದ್ದಂ ಬಂದ್ಯಾಚ

೭ ..................ಸತ್ತಂ ಕಲ್ಲಂ ರಂಗಂ ಮಾಡಿಸಿ ನಿರಿಸಿದೋನ್

* ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩ ೨೭೬.



ಕರೆಪ್ಪಗೌಡ ಸಿ. ಪಾಟೀಲ*

# ಉದಪುಡಿ ಗ್ರಾಮದ ಹೊಸ ಶಾಸನ

ಬೆಳಗಾಂವ ಜಿಲ್ಲೆಯ ರಾಮದುರ್ಗ ತಾಲೂಕಿನ ಉದಪುಡಿ ಗ್ರಾಮದಲ್ಲಿ ಗ್ರಾಮಸ್ಥರು ಹನುಮಂತ ದೇವರ ದೇವಾಲಯವನ್ನು ಜೀರ್ಣೋದ್ಧಾರ ಕಾರ್ಯವನ್ನು ಕೈಗೆತ್ತಿಕೊಂಡ ಸಂದರ್ಭದಲ್ಲಿ ಹನುಮಂತ ದೇವರ ಶಿಲ್ಪದ ಹಿಂಭಾಗದಲ್ಲಿ ಈ ಶಾಸನವಿರುವುದು ತಿಳಿದು ಬಂದಿತು (ಚಿತ್ರ ನೋಡಿ). ಅದನ್ನು ಪರಿಶೀಲಿಸಲಾಗಿ ಕ್ರಿ.ಶ. ೧೨ನೇ ಶತಮಾನದ ಕನ್ನಡ ಶಾಸನವೆಂಬುದು ಬೆಳಕಿಗೆ ಬಂದಿತು.


ಆಂಜನೇಯ ವಿಗ್ರಹ

ಈ ಶಾಸನವು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದ್ದು ೧೮೦ ಸೆಂ.ಮೀ. ಎತ್ತರ ಮತ್ತು ೬೦ ಸೆಂ.ಮೀ. ಅಗಲ ವಾಗಿದೆ. ೫೭ ಸಾಲುಗಳಿವೆ. ಶಿಲೆಯ ಮೇಲ್ಭಾಗದಲ್ಲಿ ಉಬ್ಬುಶಿಲ್ಪ ಪಟ್ಟಿಕೆಯಿದೆ. ಅದರ ಮಧ್ಯದಲ್ಲಿ ಶಿವಲಿಂಗವಿದ್ದು, ಬಲಪಾರ್ಶ್ವದಲ್ಲಿ ವೃಷಭ ಮತ್ತು ಒಬ್ಬ ಯತಿಯು ಕೈಯಲ್ಲಿ ಘಂಟೆ, ಧೂಪಾರತಿ ಹಿಡಿದುಕೊಂಡು ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವನು. ಇವನ ಎಡಪಾರ್ಶ್ವದಲ್ಲಿ ಆಕಳು ಮತ್ತು ಕರುವಿನ ಶಿಲ್ಪವಿದೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ. ಈ ಶಾಸನದಲ್ಲಿ ಎರಡು ತೇದಿಗಳಿವೆ. ಮೊದಲನೆಯದು ಶಕವರ್ಷ ೧೧೦೧ ನೆಯ ವಿಳಂಬಿ ಸಂವತ್ಸರ ಜೇಷ್ಠಶುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಣ ಅಂದರೆ ಕ್ರಿ.ಶ. ೧೧೭೯ ಮೇ ೧೩. ಎರಡನೆಯ ತೇದಿ ಶಕವರ್ಷ ೧೧೦೨ನೆಯ ರೌದ್ರಾರ್ಥಿ ಸಂವತ್ಸರ ಜೇಷ್ಠ ಶುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಣ ಅಂದರೆ ಕ್ರಿ.ಶ. ೧೧೮೦ ಮೇ ೧.

## ಶಾಸನದ ಸಂಕ್ಷಿಪ್ತ ವಿವರ

ಶಾಸನದ ಆರಂಭದಲ್ಲಿ ಬೊಮ್ಮಿದೇವರಸನಿಗೆ ಶಿವನು ಶುಭವನ್ನುಂಟುಮಾಡಲಿ ಎಂದು ಹೇಳುವ ಕನ್ನಡ ಪದ್ಯವಿದೆ. ಜಂಬೂದ್ವೀಪದ ಮಂದರಗಿರಿಯ ದಕ್ಷಿಣ ಭರತ ದೇಶದಲ್ಲಿ ಕುಂತಲ ವಿಷಯದಲ್ಲಿದ್ದ ತೊರಗಲ ಪಟ್ಟಣ ಕೇಂದ್ರವಾಗಿದ್ದ ತೊರಗಲನಾಡು ಇತ್ತು. ಈ ತೊರಗಲೆನಾಡನ್ನು ಭೈರವ ವಂಶದ ಅನೇಕ ಅರಸರು ಆಳಿದರು. ನಂತರ ಡಾಮರಮಲ್ಲ, ಜಟ್ಟಮ, ಭೂತಭೂಪಾಳ ಮತ್ತು ಚಟ್ಟ ಆಳಿದರು. ಚಟ್ಟನ ತಮ್ಮಂದಿರು ಮಲ್ಲಿದೇವ ಮತ್ತು ಬೊಮ್ಮಿದೇವ. ಬೊಮ್ಮಿದೇವನು ಕಲಚೂರಿ ಮನೆತನದ ರಾಯಮುರಾರಿ ಸೋವಿದೇವನ ಕಾಲದಲ್ಲಿ (ಕ್ರಿ.ಶ. ೧೧೬೭–೧೧೭೮) ಮಾಂಡಲಿಕ

* ಸಂಶೋಧನ ವಿದ್ಯಾರ್ಥಿ, ಪ್ರಾಚೀನ, ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೦೩

ನಾಗಿದ್ದನು. ಈತನು ಭೈರವ ವಂಶದವನೆಂದು ಹೇಳಲಾಗಿದ್ದು ಈತನ ವಂಶಾವಳಿಯನ್ನು ಶಾಸನ ಈ ರೀತಿ ಉಲ್ಲೇಖಿಸುತ್ತದೆ.




ಇತರೆ ಶಾಸನಗಳಿಂದ ಇನ್ನೂ ಈ ಬೊಮ್ಮಿದೇವ ಬೆಳಕಿಗೆ ಬಂದಿಲ್ಲ. ಈತನು ಮೂರು ಕಂಪಣ ಮತ್ತು ತೊರಗಲೆನಾಡನ್ನು ಆಳುತ್ತಿದ್ದನು. ಈತನ ಪಿರಿಯರಸಿ ಭಾಗಲದೇವಿ.

ಭಾಗಲದೇವಿಯ ತಮ್ಮಂದಿರು ಸೂರೆಯನಾಯಕ ಮತ್ತು ಬಲದೇವ. ಸೂರೆಯನಾಯಕನ ಮಡದಿ ಮಲೆಯವ್ವೆ ಇವರ ಮಗ ಬೊಮ್ಮಿದೇವ. ಬೊಮ್ಮಿದೇವನು ಸುಖದಿಂದ ರಾಜ್ಯವಾಳುತ್ತಿರಲು ಮತ್ತು ತೊರಗಲೆನಾಡಿನ ಧರ್ಮಾದಿಷ್ಟ ಎನಿಸಿದ ಚೋಳಿಗಾವುಂಡನು ಎಂಟು ಹಿಟ್ಟು ಸುಖದಿಂದ ಇರುತ್ತಿರಲು ಮಾಧವರಾಸಿಯ ಮಗ ಅಮೃತರಾಸಿ ಈತನ ಶಿಷ್ಯ ನಾಗರಾಸಿಗೆ ಮಂತ್ರಿ ಮಯ್ದುನ ಸೂರೆಯ ನಾಯಕನಿಗೆ ವಿಚಾರಿಸಿ ಬೀರೇಶ್ವರ ದೇವಾಲಯವನ್ನು ಕೊಟ್ಟನು. 'ಬಾಹತ್ತರ ನಿಯೋಗಾಧಿಪತಿ', 'ಮಲೆಯ ಕೊಂಕಣ ಬೇಂಟೆಕಾರ', 'ಮುದ್ರೆಯಧಿಷ್ಠಾಯಕಂ', 'ಮನೆವೆರ್ಗ್ಗಡೆ' ಮುಂತಾದ ಬಿರುದುಗಳನ್ನು ಹೊಂದಿದ ಸೂರೆಯ ನಾಯಕನು ಕಾಳಾಮುಖಯತಿ ನಾಗರಾಸಿ ಗುರುಗಳ ಪಾದವನ್ನು ತೊಳೆದು ಬೀರೇಶ್ವರದೇವರ ಪೂಜೆಗಳಿಗೆ ಭೂ ನಿವೇಶನ, ನಂದಾದೀವಿಗೆಗಾಗಿ ಗಾಣವನ್ನು ದಾನಬಿಟ್ಟನು. ಮುಮ್ಮರಿದಂಡರು ತಮ್ಮ ಆದಾಯದಲ್ಲಿ ಗೊಬ್ಬಳ ಭತ್ತ, ಇಪ್ಪತ್ತು ಅಡಕೆ, ತಳಕ್ಕೈವತ್ತೆಲೆ, ಸವುಟಿಗೆ ಎಣ್ಣೆ, ದೇವರ ಅಷ್ಟಂದಾರ್ಚ್ಚನೆಯ ಪುರ್ಪಕ್ಕೆ ಸಕುನದ ಹಳ್ಳ (ಉದಪುಡಿ ಗ್ರಾಮದ ಮುಂದಿನ


ಬೀರೇಶ್ವರ ದೇವಾಲಯ (ಈಗಿನ ಈಶ್ವರ ದೇವಾಲಯ)
ಮೂಲತಃ ಬೀರೇಶ್ವರ ದೇವಾಲಯ

ಹಳ್ಳ) ದಿಂದ ಪಡವಲು (ಪಶ್ಚಿಮ) ಲೋಕಾಪುರದ ಹಾದಿ, ಮೂಡಲು (ಪೂರ್ವ) ಒಂದು ತೋಟವನ್ನು ದಾನ ಬಿಟ್ಟರು. ಇದಲ್ಲದೆ ಈ ಸಮಯದಲ್ಲಿ ಕಲ್ಕುಟಿಗರಿಗೆ ಮತ್ತು ಹರಕಾರರಿಗೆ ಭೂಮಿದಾನ ನೀಡಲಾಯಿತು. ಹಾಗೂ ಎರಡನೆಯ ದಾನವನ್ನು ಕೊಂತದ ಬ್ರಹ್ಮಯ್ಯನು ಬೀರೇಶ್ವರ ದೇವರ ಅಂಗಭೋಗ ಮತ್ತು ಚೈತ್ರ ಪವಿತ್ರಕ್ಕೆ ನಾಗರಾಸಿ ಗುರುಗಳ ಶಿಷ್ಯ ಕಲ್ಯಾಣಶಕ್ತಿಗಳ ಪಾದವನ್ನು ತೊಳೆದು ಭೂಮಿಯನ್ನು ದಾನ ನೀಡಿದನು. ಈ ಭೂಮಿಯ ಚಕ್ಕುಬಂದಿಯನ್ನು ಸಹ ಹೇಳಲಾಗಿದೆ. ಅಲ್ಲದೆ ಮಹಾಮಂಡಳೇಶ್ವರನಾದ ಮಲ್ಲಿದೇವರಸರು ದೇವರ ಅಷ್ಟವಿಧಾರ್ಚನೆಗೆ ದೇವಾಲಯದ ಉತ್ತರಕ್ಕೆ ಇರುವ ತೋಟವನ್ನು ದಾನ ನೀಡಿದ ಉಲ್ಲೇಖವಿದೆ. ಶಾಸನದ ಅಂತ್ಯದಲ್ಲಿ ಫಲಶ್ರುತಿಯಿದೆ.

ಈ ಶಾಸನದ ಹೆಚ್ಚಿನ ಭಾಗ ಕನ್ನಡ ಪದ್ಯರೂಪದಲ್ಲಿದೆ. ಉದಪುಡಿಯಲ್ಲಿ ಈಗಿರುವ ಪ್ರಾಚೀನ ದೇವಾಲಯವು ಮೂಲತಃ ಬೀರೇಶ್ವರ ದೇವರಿಗೆ ಮುಡುಪಾಗಿದ್ದು ಕಾಳಾಮುಖ ಶೈವಪಂಥಕ್ಕೆ ಸೇರಿತ್ತೆಂಬ ವಿಚಾರ ಈ ಶಾಸನದಿಂದ ವಿದಿತವಾಗುತ್ತದೆ. ಅಲ್ಲದೆ ತೊರಗಲ್ ಪ್ರದೇಶದ ಕಳಚೂರ್ಯರ ಮಾಂಡಲಿಕರ ಬಗ್ಗೆ ಕೂಡ ವಿಶೇಷ ಮಾಹಿತಿಯನ್ನು ನೀಡುತ್ತದೆ.

**ಶಾಸನದ ಪಾಠ[೧] :**

೧ ....ಓಂ ಶ್ರೀ ಶಂಭು ಭುವನಭವನಾಧೀಶಂ ಭೂತೇಶ ನಮರ ಕಿಂನರ ಖಚರಾಧೀಶ ಸ್ತುತ ನೋಲ್ದಿಗೆ ಧರಾಧೀಶತವೆತ್ತಿಪ್ಪ ಬೊಮ್ಮ ನ್ರಿಪತಿಗೆ ಶುಭವನು॥

೨ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮು(ಮೂ) ಲಸ್ತಂಭಾಯ ಶಂಭವೇ॥ ಕರಿ ಮಕರ ಕಮಠ ಕರ್ಕಟ ಹ

ರಿ ವಿದ್ರುಮ ನಕ್ರ ಚಕ್ರ ಮತ್ಸ್ಯಾವಳಿ ಇಂ ಪರಿವೇಷ್ಟಿ ಸಿರ್ದ್ದಶರನಿಧಿ ಪರಿವ್ರಿತವೆನಲೆಸಲುದಲ್ತೆ ಜಂಬೂದ್ವೀಪ॥ವ॥ ಆ ಜಂಬೂ

ದ್ವೀಪದ ನಟ್ಟು ನಡುವೆ॥ ಸ್ಥಿರತೆಯೊಳತ್ಯುಂ ನತಿಯೊಳು ನಿರುತವಿಳಾದರಪತಿತ್ವದಿಂ ಬಂಮ್ಮ ನ್ರಿಪಂಗೊರೆದೊರೆ ಸಮನೆನೆ ಮಂದ-

ರಗಿರಿ ಒಪ್ಪಂಬೆತ್ತು ಕೂಡೆ ಸೊಗಇಸುತಿಕ್ಕು ॥ವ॥ ಆ ಮಂದರದ ದಕ್ಷಿಣ ಭರತಪ್ರದೇಶದೊಳು॥ ಕುಂತಳ ವಿಸೆಯ-

ದೊಳೆಸಲುದು ಗುಂತಿಗೆ ನೆಲೆಯೆನಿಸುತಿಪ್ಪ ತೊಱಗಲೆ ದೇಶಂ ಸಂತತ ತೊಱಗಲ ಪಟ್ಟಣವಂತದು ಸೊಗಇ ಪುದು ಭೋಗಭೂಮಿಯ ತೆಱದಿಂ॥ ತೊ ಱೆಇಂ ನಂನ್ದ ನವನದಿಂ ಕೆಱೆ ಭಾವಿಇನೆಸೆವ ಕ

ಬ್ಬುದೋಂಟದಿನೆಲೆಯಿಂ ತೊಱಗಲೆ ನಾಡತಿಸೆಬ್ಯಂನೆಲ ನಿರ್ದ್ದುದೆನಿಪ ಕೈಯೊಲದಿಂದ॥ವ॥ ಆ ನಾಡ ಮಂಡಳಿ ಕಂ ಗಂಡ ಭೈರವನ ವಂಶದರಸುಮಕ್ಕಳನೇಕರುಂ ರಾಜ್ಯಂಗೆಯ್ಯುತ್ತ ಬರಲಿಲ್ಲ ॥

◎ನೆಲನಂ ಡಾಮರಮಲ್ಲನಾಳ್ದಬಳಿಕಂ ಶ್ರೀ ಜಟ್ಟಮಂ ಪುಟ್ಟಿತಾಂ ಪಲಕಾಲಂ ಬಿಡದಾಳ್ದ ನಾಳ್ದಬಳಿಕಂ ಶ್ರೀ ಭೂತಭೂಪಾಳಕಂ ಚಲಮುಂ ಗಂಡು ಮನಪ್ಪುಕೇಯ್ದ ರಸು ಗೆ

ಯ್ದಂ ಚಟ್ಟಮೂರ್ವ್ವೀಶ್ವರಂ ಕಲಿತಾಂ ಪುಟ್ಟಿ ಬಳಿಕ ವಾಳ್ದನದಟಂ ದುರ್ಬ್ಬಾರ ಬಾಹುಬಳಂ॥ ಚಟ್ಟಮ ನೃಪಾಳನನುಜಂ ಪುಟ್ಟಿದ ನರಸಾಸ ವೈರಿ ಮದನ ಮಹೇಶಂ ಪುಟ್ಟಿ ಪಲಕಾಲ ವಾಳ್ದಂ ನೆಟ್ಟನೆ ಜಗದೊ

ಬ್ಬಿಗಂಡ ಮಲ್ಲಿ ಮಹೀಶಂ ॥ವ॥ ಅಲ್ಲಿಂ ಬಳಿಕ॥ ಚಂಡ ಪರಾಕ್ರಮಂ ಬೆರೆಸು ರಾಯ ಮೂರಾರಿಯೆನಿಪ್ಪ ಸೋಮನಂ ಕಂಡಡೆ ಮೂಱು ಕಂಪಣ ಮನಗ್ಗದಬೆ

ಬೆಳುವಲಯದಲ್ಲಿ ಕೊಟ್ಟ ತಾ ದಂಡಿನ ಗೋವನೆ [ಂ*]ದು ಪೆಸರಂ ಕುಡೆ ಬೊಮ್ಮನೃಪಾಳ ನೆಯ್ದೆ ಕೈ ಕೊಂಡಿರೆ ಮಲ್ಲಿದೇವನನುಜಂ ಮನುಜಾಕೃತಿವೆತ್ತ ಮಾನ ವಂ ॥ವ॥ ಅಂತಾ ಬೊಮ್ಮಿದೇವ

ರಸರು ತಾ ಉಪಾರ್ಜ್ಜಿಸಿದ ಮೂರು ಕಂಪಣಮುಮಂ ತೊಱಗಲೆ ನಾಡುಮಂ ಪ್ರತಿಪಾಳಿಸಿ ಸುಖದಿಂದ ರಾಜ್ಯಂ ಗೆಯುತ್ತಮಿರೆ ॥ ಉದಿಇಪಸೂರ್ಯ್ಯ

ನಂತಿರುದಿತೊದಿತ ತೇಜದಿನಿಂದುರೇಖೆಯಂ ತೊದ ಲಿದ ಸತುಕಳಾಧರತೆಇಂ ಪುರುಶೋತ್ತಮನಂತೆ ಲಕ್ಷ್ಮಿಇಂ ಮದಗಜದಂತೆ ದಾನಗುಣದಿಂದೆ

೧೪ ಸೆಯುತ್ತಿರೆ ಬೊಮ್ಮಿದೇವನಿನುಧಧಿ ಹಿಮಾಂಶು ಮೇರು ಧರೆ ಭಾನು ಕುಳಾದ್ರಿಗಳೆಯ್ದ ನಿಲುಪಿನಂ ॥ವ॥ ಅಂತಾ ಬೊಮ್ಮಿದೇವರಸರ್ಗ್ಗೆ ॥ಆನೆಗೆ ಕೊಂಬು

೧೫ ಕೇಸರಿಗೆ ದಾಡೆ ಪುರಾರಿಗೆ ಭಾಳನೇತ್ರವಂ ತಾನರಸಿಂಹ ಮೂರ್ತ್ತಿಗತಿ ತೀಬ್ರ ನಖಂ ಸಲೆ ಪುಟ್ಟುವಂದದಿಂ ಶ್ರೀ ನಿಗಳಂಕ ಮಲ್ಲ ಕಲಿಬಂಮ್ಮನ್ರಿ

೧೬ ಪಂಗೊಗೆದಂ ಪ್ರಚಂಡ ತೇಜೋನಿಧಿ ಮಲ್ಲಿದೇವನ ವನೀಶ ಕುವಾರ ಕುಳೈಯ್ಕ ಶೇಖರಂ ॥ಮಲ್ಲ ನಿಗಳಂಕ ಮಲ್ಲನ ವಲ್ಲಭೆಯೆನಿಸಿರ್ದ್ದ ಚಾರುಲ

೧೭ ಕ್ಷ್ಮಿಸುತ ನಿನಗಿಲ್ಲಿ ಸಲೆ ಭೂತನಾಥನಮಲಡಿಕುಡುತಿರ್ಕ್ಕೆ ಕೋಟಿ ಕಳ್ಪರ ಸ್ತಿತಿಯಂ ॥ಮನಮಱಿದುರ್ಬ್ಬ [ರಾ]ರಮಣಿ ಕಾಲ್ಪಿಡಿದುಂವನಧಾ

೧೮ ನ್ಯ ವಿತ್ತಿಳಾವನಿರೆ ವಿಶೇಶದಿಂ ಪದ ಪದಾರ್ತ್ಥವಳಂ ಕ್ರಿಗೊಟ್ಟು ರಾಗದಿಂ ಧನರ ನ್ರಿಪಾಳ ವಾಜಿಗಜಮಂ ಜಯ ಕಾಮಿನಿ ತಂದು ಸಾರ್ಚ್ಚೆ ಕೂರ್ತ್ಥ

೧೯ ನು ದಿನವಿಪ್ಪರಲ್ಲದಡೆ ಮಲ್ಲಮಹಿಪತಿ ನಲ್ಲನಪ್ಪನೆ॥ ◎ ವ॥ ಅನ್ತುಮಲ್ಲದೆಯುಂ ಸುಖ ಸಂಕಥಾ ವಿನೋದದಿಂ ರಾಜ್ಯಂಗೈಯುತ್ತಮಿರೆ॥...

೨೦ ◎ಕೆಂಚರ ಕುಲನಿಸ್ತಾರಕೆ ಸಂಚಿತ ಸೌಭಾಗ್ಯೆ ರೆಚ್ಚಿಯಕ್ಕಂ ಪಡೆದಳು ಕೆಂಚರ ಕೂಬೆಯ ನಾಯಕ ಚಂಚಧು ಗುಣನಿಧಿಯೊಳಿರ್ದ್ದುಪಲಬ

೨೧ ರು ಸುತರನು ॥ವ॥ ಆ ಬೊಮ್ಮಿದೇವನ ಪಿರಿಯರಸಿ॥ಳಿ॥ ಭಾಗಲದೇವಿ ಪುಣ್ಯನಿಧಿ ಶೂರೆಯ ನಾಯಕ ನತ್ಯುದಾರ ಸದುಭೋಗನಿಧಾನನೂರ್ಜ್ಜಿತಯ

೨೨ ಶಂ ಬಲದೇವನತಿಸ್ತಿರಂ [ಮ] ಹಾದ್ಯಾಗಿಯೆನಿಪ್ಪತಿಕಣ ನರಂನೊಡ ಉಟ್ಟಿದರೆಂಬ ಪೆಂಪು ಭೂಭಾಗಮನೆ ಯ್ದತಿ ವಿಸಲೆ ಜಂಗಮ ಲಕ್ಷ್ಮಿ ಯೊಳಿಪ್ಪಳ

೨೩ ತ್ರ್ಥಿ ಇಂ ॥ವ॥ ಆಸೂರ್ಯ್ಯಯ ನಾಯಕಂಗೆ ॥ ರೇವತಿ ಸೀತೆ ರೋಹಿಣಿ ಘಟಂತಕಿ ರುಗ್ಮಿಣಿ ಚೇಳಿನಿ ಮಹಾದೇವಿ ಸಮಾನಸಂನಿಭೆನಿಭಂ ತೋರ್ಣ್ಪಾಸಟಿ ಯೆಂ

೨೪ ಬೆ ವಿಭುವೊಳೆಯ ಪ್ರಸಿದ್ಧ ಯನೆತಾಳ್ದಿದ ಸೂರೆಯ ನಾಯಕಂಗೆ ಸದ್ಭಾವದ ಕಾಂತೆಯಾದ ಮಲೆಯವ್ವೆಯ ನುತ್ತಮಯಂ ಧರಿತ್ರಿಯೊಳು॥ ಸೂರೆ

೨೫ ಯ ನಾಯಕಂಗೆ ಮಲೆಯವ್ವೆಗೆ ಪುಟ್ಟಿದ ಬೊಮ್ಮಿ ದೇವನಿಂ ಧಾರಿಣಿ ಮರುಪಾರಿಧಿ ದಿಶಾಕಲಿನಿಲ್ವನ ವಿರ್ದ್ದು ಕೂಡೆ ವಿಸ್ತಾರಿತ ಕೀರ್ತ್ಥಿಯಂ ಪಡೆದು ಧರ್ಮ್ಮದುರಂ

೨೬ ಧರನಾಗಿ ವೀರಲಕ್ಷ್ಮಿ ರಮಣ ಪ್ರಿಯಂ ಪ್ರಭುವೆನಿಪ್ಪುದು ಭಾನುಶಶಾಂಕರುಳ್ಳಿನಂ॥ ಅದಟರ ಗಂಡನಿಯ ಗದ ಶೂದ್ರಕ ಸೂರೆಯ ನಾಯಕಂಗೆ ಪುಟ್ಟಿದ

೨೭ ನೆನೆವೀರಚಾಮನೊಳು ಕಡುಕೆಂಪುದಿರಾಂತು ಜೀವ ಪಗ್ಗದ ಭಟರಿಲ್ಲರೆಚ್ಚರಿ ಪರಿಲ್ಲಕಡಂಗುವರಿಲ್ಲ ಕಳಿ ಸಿಂಘದ ಮಱೆಸಿಂಹ ವಪ್ಪದಿದು ಕೌತುಕಮೆ

೨೮ [ನೆ] ಸುಧಾರ.... ಶಯನುದಾರನೆಂದು ಕಲಿ ಬೊಂಮ್ಮನ ನುತ್ತಮನೆಂದು ಗೋಮನಂ ಧಾರಿಣ ಧೀರನೆಂದು ಸಲೆ ತಿಕಣನಂ ಸ್ಥಿರನೆಂದು ಕಾಮನಂ ಮೇರು ನಿಬಾ

೨೯ ಖ್ಯನೆಂದು ನೆಱೆಮಲನಾಹವಲಮಲ್ಲನೆಂದು ಗಭಿರನೆನುತ್ತ ಬಣ್ಣಿಪುದು ಹೆಗ್ಗಡೆ ಬಲ್ಲನ ಸೂನು ಕಲ್ಲನ ॥ ಭೀರೇಶ್ವರ ನತಿಮುದದಿಂ ಸೂರೆಯ ನಾಯಕನ ಕುವರ ಬೊಂ

೩೦ ಮ್ಮಂಗೆ ಸದಾ[ವೀರಂಗೆ] ಸಕಳ ಗುಣ ನಿಸ್ತಾರ ಗೊಲ್ದೀಗೆ [ಜ] ಟಿಕಳ್ಪಸ್ತಿತಿಯನು ॥ವ॥ ಅಂತವರು ಸುಕದಿ ನಿರಲಿತ್ತಲು॥ ತೊಱಗಲೆ ನಾಡಿನ ಸಿ

೩೧ ರಿಕಂದೆಱದ ಪುಹೋಪನಿಲ್ಲಿಗನೂರ ಚೆಲ್ವನೆಱೆ ಪೊಗಳ ಲಾಪ್ಪಡೆ. ದೊಂದಱೆಕೆಯ ನಾಲಗೆಯ ಮಾನವಣ್ಣೆಱೆದ ಪರೆ ॥ವ॥ ಶ್ರೀ ಮ

೩೨ ತು ದಮ್ಮಾದಿಷ್ಪಮಪ್ಪಸ್ಥಳಂವಿಭು ಚೊಳಿಗಾವುಂಡನು ಎಂಟು ಹಿಟ್ಟು ಸುಖದಿಂದ ಮಿರಲಿತ್ತಲು ॥ ಮಾಧವ ರಾಸಿ ಬೃ

೩೩ ತಿಪಧಾತ್ರೈ.....ಶೈನ ಬೃ (ಗ) ನ ಅಮೃತರಾಸಿಬೃತಿವಿಬ್ರಾ, ಪನಾ ಮುನಿಶಿಷ್ಯಂ ಸಮಾಜಮ ನಾಗರಾಸಿ ಬೃತಿಗೆ ಸಮನಾದಪರೆ॥ ಕಾಳಾಮು

೩೪ ಖ ಪರಮಲಾಕುಳ.. ಸಿ ಪಡೆದು ಮಂತ್ರಿಮಯ್ದುನ ಸೂರಕಂ ನಾಗರಾಸಿ ಬೃತಿಗಳಿಗಾಲೊಚಿಸಿ ಕೊಟ್ಟನೆಸೆವ ಬೀರೇಶ್ವರ ಮಂ॥ ಸ್ವಸ್ತಿ ಶ್ರೀ ಮನ್ಮಾ

೩೫ ಹೇ... ಧಾನಂ ಸೇನಾಧಿಪತಿ ಬಾಹತ್ತರ ನಿಯೋಗಾಧಿ ಪತಿ ಮಲೆಯ ಕೋಂಕಣ ಬೇಂಟೆಕಾಱಂ ಮುದ್ರೆಯಧಿ ಷ್ಠಾಯಕಂ ಮನೆವೆರ್ಗ್ಗಡೆ ಮಯ್ದುನ ಸೂರ

೩೬ ಯನಾಯಕನು ಸಕವರ್ಷದ ೧೧೦೧ನೆಯ ವಿಳಂಬಿ ಸಂವತ್ಸರದ ಜೇಷ್ಟಶುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಣ ಬ್ಯತೀಪಾತದಂದು

೩೭ ಮುಲಸ್ತನ ದೇವರಂಗಭೋಗ ಚೈತ್ರ ಪವಿತ್ರಾರೋಪಣ ನಇಮಿತ್ತಿಕ ಯಥಾಕ್ರಮ ಪೂಜೆಯಂ ನಡಸುವಂತಾಗಿ ನಾಗರಾಸಿ ಗುರುಗಳ ಕಾಲಂ ತೊಳೆದು ಧಾರಾ

೩೮ ಪೂರ್ವಕಂ ಮಾಡಿಬಿಟ್ಟಮತ್ತರೊಂದು ಅದಱ ಚತುಸ್ಸಿಮೆ ಕೋಣನಕುಪ್ಪೆಯಂ ತೆಂಕಲು ಸೋವೆಯ ಗೇಯಿಂ ಪಡುವಲು ಮೈಲಾರಗೇಯಂ ಬಡಗಲು ನೇಱೆ

೩೯ ಲಗೆಯ ಸೀಮೆಯ.... ಲದ ದಾರಿ ಇಂ ಮೂಡಲು ಅಂತಾ ಕೆಯ್ಯ ನಾಲ್ಕುಂ ದೆಸೆಯಲು ಲಿಂಗಂ ಬರೆದ ಕಲ್ಲು॥ ಆ ದೇವರಾಚಾರ್ಯ್ಯ ಮನೆ ಬಸ

೪೦ ದಿಇಂ ಪಡುವಲು ಹನ್ನಿಯಿಂ ಅಗಲ ಇಪ್ಪತ್ತನಾಲ್ಕು ಕೆಯ್ಯಿ ನೀಳದ ನಿವೇಶಣ । ಆ ದೇವರ ನಂದಾದೀವಿಗೆಗೆ ಗಾಣ ಒಂದು ಸಮಸ್ತ ಮುಂಮ್ಮುರಿ

೪೧ ದಂಡಮುಂ ಬೈಸಣಿಗೆಯಾಗಿ ಕುಳ್ಳಿರ್ದ್ದು ಮುಲಸ್ತನ ದೇವರ್ಗ್ಗೆ ಭಕ್ತಿ ಪೂರ್ಬ್ಬಕದಿಂ ಬಿಟ್ಟಯಾಯ ಹೊಂಗರೆ ವೀಸ ಒಟ್ಟಿಲಿ ಗೊಬ್ಬಳ ಭತ್ತ ಹೊಂ

೪೨ ಗಿಪ್ಪತ್ತ ಅಡಕೆ ಹೇಱೆಂಗೆ ನೂಱು ಹೊತಳಕ್ಕೈಯ್ಯಿವತ್ತೆಲೆ ಗಾಣ ಕಲ್ಲಿಸಲುಟಿಗೆ ಎಣ್ಣೆ॥ ಆ ದೇವರ ಅಷ್ಟಂದಾರ್ಚ್ಚ ನೆಯ ಪುರ್ಪಕ್ಕೆ ಸಕು

೪೩ ನದ ಪಳ್ಳದಿಂ ಪಡುವಲು ಲೋಕಾಪುರದೊಳಾದಿಇಂ ಮೂಡಲು ಬಿಟ್ಟ ತೋಟಂ ॥ ಈ ಶಿವಾಲಯಮಂ ಪಡಿಸಲಿಸುವ ಕಲುಕುಟಿ

೪೪ ರಕೆ ಇ ಕಂಬ ನೂಱು ಲೋಕಾಪುರದ ದಾರಿಯಱ ವಂಟಗೆ ನಡೆವಂತಾಗಿ ಬಿಟ್ಟಕೆಯಿ ಕಂಬ ನೂಱು ದೇವರ್ಗ್ಗೆ ಹಱಕಾಱವನೆ ಬಾಗಿಲ ಮನೆಇಂ ತೆಂಕ

೪೫ ಲು ಹಂನ್ನಿಖೈ ಅಗಲ ಇಪ್ಪತ್ತ ನಾಲ್ಕು ನೀಳ ಮತ್ತಂ ದೇವರಿಶಾನ್ಯದಲು ಹಂನ್ನಿಖೈ ಅಗಲ ಇಪ್ಪತ್ತ ನಾಲ್ಕು ನೀಳದ ಮನೆಯಂ ಬಿಟ್ಟು ಕೃತಾರ್ತ್ಥನಾದ ಸೂರಯ್ಯ

೪೬ ಓಂ ಸ್ವಸ್ತಿ ಶ್ರೀಮನ್ ಮಹಾಮಂಡಳೇಶ್ವರಂ ಜಗದೊಬ್ಬ ಗಂಡ ನಿಗಳಂಕ ಮಲ್ಲದೇವರಸರು ಸಕ ವರ್ಷದ ೧೧೧೨ ನೆಯ ರೌದ್ರಾರ್ತ್ಥಿ ಸಂವತ್ಸರ

೪೭ ಜೇಷ್ಠ ಶುದ್ಧ ಪಂಚಮಿ ಸೋಮವಾರ ಉತ್ತರಾಯಣ ಸಂಕ್ರಮಾಣ ಬ್ಯತೀಪಾತದಂದು ಕೊಂತದ ಬ್ರಹ್ಮಯ್ಯ ದೇವನಂಗಭೋಗ ಚೈತ್ರ ಪವಿತ್ರಾರೋಹಣ ಯ

೪೮ ಥಾ ಕ್ರಮ ಪೂಜೆಯಂ ನಡಸುವಂತಾಗಿ ನಾಗರಾಸಿ ಗುರುಗಳ ಶಿಸ್ಯ ಕಲ್ಯಾಣಿ ಶಕ್ತಿಗಳ ಕಾಲಂ ತೊಳೆದು ಧಾರಾಪೂರ್ಬಕಂ ಮಾಡಿ ಬಿಟ್ಟ ಕೆಇ ಅ

೪೯ ರವತ್ತರು ಅದಱ ಚತುಸ್ಸೀಮೆ ಆ ದೇವರ ಬನದಿಂ ತೆಂಕಲು ಹಳ್ಳದಿಂ ಪಡುವಲು ಆ ಸಗವಳೆಯ ಸೀಮೆಇಂ ಬಡಗಲು ಗೊರವನೂರ ದಾರಿಇಂ ಮೂ

೫೦ ಡಲು ಆ ಕೇಯ್ಯ ನಾಲ್ಕುಂದೆಸೆಯಲು ತ್ರಿಶೂಳಂ ಬರೆದ ಕಲ್ಲು॥ @ ಆ ದೇವರಾಚಾರ್ಯ್ಯ ವನೆಯ(ವ) ಗಲ್ಲಿಂ ವಾಯುಬ್ಯದಲಿ ಹೊಂನ್ನಿರಖೈಗಲ ಇಪ್ಪತ್ತನಾಲ್ಕು ನಿ

೫೧ ಳದ ನಿವೇಶಣ ಆ ದೇವರಷ್ಟವಿಧಾರ್ಚನಗೆ ತೋಂಟ ಆ ದೇವಾಲಯದಿಂ ತೆಂಕಲು ಶೀಮನ್ಮಹಾ ಮಂಡಳೇಶ್ವರಂ ಮಲಿದೇವರಸರು ಇ ಧರ್ಮ್ಮಮಂ

೫೨ ಬಿಟ್ಟು ಕೃತಾರ್ತರಾದರು। ಕೋಣನ ಕುಪ್ಪೆ ಇಂ ಮೂಡಣ ಕೋಣನ ಕೆರೆಗೆ ಬಸುರಿಗೆಯ ಸೀಮೆಇಂ ಲೋಕಾಪುರದ ದಾರಿಇಂ ಪಡುವಲು ಕೆಇ ಕಂಬ

೫೩ ಇನ್ನೂಱು। ಇ ಧರ್ಮ್ಮಮಂ ಪ್ರತಿಪಾಳಿಸಿದವರ್ಗ್ಗೆ ವಾರಣಾಸಿ, ಗುರುಕ್ಷೇತ್ರ, ಗಯೆ, ಅರ್ಗ್ಯತೀರ್ಥದಲ್ಲಿ ವೇದಪಾರಗರಪ್ಪ ಸಹಶ್ರ ಬ್ರಾಹ್ಮಣರಿಗೆ ಸಹ

೫೪ ಶ್ರ ಕಪಿಲೆಯಂ ದಾನ ಮಾಡಿದ ಫಲ। ಇ ಧರ್ಮ ಮನಳಿದವರ್ಗ್ಗೆ ವಾಶಣಾಸಿ ಗುರುಕ್ಷೇತ್ರ ಗಯೆ ಅಗ್ಗ್ಯ ತೀರ್ಥದಲ್ಲಿ ಸಹಶ್ರ ಬ್ರಾಹ್ಮಣರುಮಂ ಸ

೫೫ ಹಶ್ರ ಕಪಿಲೆಯುಮಂ ನಳಿದ ದೋಶಮಕ್ಕು । ಯೇಳಿಸಿ ದೆಡೇಳು ನರಕದೊಳಾಳುತ್ತಂ ಮುಳುಗಿರಿಪ್ಪರಿ ಶಾಸನ ಮಂ ಪಾಳಿಸದಡೆ ಸಕಳೋರ್ಬ್ಬಿಪಾ

೫೬ ಳಕರ ಪೊಂದುಪ ದವಿಗಧಿಪತಿಯಪ್ಪುರು॥ ಶಾಸನ ಮದಾಉದೆಲ್ಲಿಯ ಶಾಸನ ವಾರಿತ್ತರೆಕೆ ಸಲಿಸವೆ ನಾನಿ ಶಾಸನವೆಂಬ ಪಾತಕ ನಾಸಕ

೫೭ ಳಂ ರೌರವಕ್ಕೆ ಗಳಗಳ ನಿಳಿಗುಂ ॥ ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ ಷಷ್ಠಿರ್ವ್ವರುಶ ಸಹಶ್ರಾಣಿ ವಿಷ್ಟಾಯಾಂ ಜಾಯತಿ ಕ್ರಿಮಿ ॥ಶಿವ॥ ©

(ಶಾಸನದ ಪಡಿಯಚ್ಚನ್ನು ಓದಿ, ಈ ಲೇಖನವನ್ನು ಬರೆಯಲು ಸಹಕರಿಸಿದ ನನ್ನ ವಿದ್ಯಾಗುರುಗಳು ಹಾಗೂ ನನ್ನ ಸಂಶೋಧನ ಮಾರ್ಗದರ್ಶಕರೂ ಆದ ಡಾ. ಶ್ರೀನಿವಾಸ ವ್ಹಿ. ಪಾಡಿಗಾರ, ಪ್ರವಾಚಕರು ಮತ್ತು ಅಧ್ಯಕ್ಷರು ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ನನ್ನ ಕೃತಜ್ಞತೆಗಳು;)









ಪರಹಿತಕಾರ್ಯರಬ್ಧಿ ಸಮಧೈರ್ಯರಬಾಧಿತ ಮಂತ್ರ ವೀರ್ಯರು ।
ದ್ಧುರತರ ಸಿಂಹ ಶೌರ್ಯರುಷಧಾ ಚತುರಾರ್ಯರ ವಾರ್ಯಕಾರ್ಯರು ॥
ತ್ಸ್ಫುರಿತ ಯಶೋನದ ತ್ರಬಳತೂರ್ಯರುಪಾರ್ಜಿತ ಪುಣ್ಯವರ್ಯರೀ ।
ಶ್ವರಪದಭಕ್ತಿಧುರ್ಯರೆನಿಪರ್ ಕರಣಂಗಳದೇಂ ಮಹಾತ್ಮರೋ ॥

(ಬಿಜ್ಜಳನಲ್ಲಿಯ ಅಧಿಕಾರಿ ಬಮ್ಮರಸನ ಗುಣ ವರ್ಣನೆ : ಕ್ರಿ.ಶ. ೧೧೬೨ರ ಶಿಕಾರಿಪುರ ಶಾಸನ)







ಆದಪ್ಪ ಪಾಸೋಡಿ*

# ಕೂಗೂರು – ಮುಗಳೂರು ಗ್ರಾಮಗಳ ಪ್ರಾಚ್ಯಾವಶೇಷಗಳು; ಅಪ್ರಕಟಿತ ಶಾಸನಗಳು

ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ಸರ್ಜಾಪುರ ಹೋಬಳಿಯಲ್ಲಿ ಬರುವ ಅವಳಿ ಗ್ರಾಮಗಳು ಕೂಗೂರು ಮತ್ತು ಮುಗಳೂರು. ಕೃ.ರಾ. ಮಾರುಕಟ್ಟೆಯಿಂದ ಸರ್ಜಾಪುರ ಮಾರ್ಗವಾಗಿ ರಾಷ್ಟ್ರೀಯ ಹೆದ್ದಾರಿ ೨೦೭ ಅಥವಾ ಹೆಚ್.ಎ.ಎಲ್. ಮಾರ್ಗದಲ್ಲಿ ವರ್ತೂರು ಕಡೆಯಿಂದಲೂ ಹೋಗಲು ಅನುಕೂಲವಾಗಿದೆ.

*ಕೂಗೂರು ಗುರಪ್ಪನವರ ರಾಮಕೃಷ್ಣನ ತೋಟದಲ್ಲಿರುವ ವೀರಗಲ್ಲು :*

ಪೂರ್ವಾಭಿಮುಖವಾಗಿ ನೆಡಲಾದ ಈ ವೀರಗಲ್ಲು ನೆಲದಿಂದ ಮೇಲೆ ೧೫೦ ಸೆಂ.ಮೀ. ಎತ್ತರ, ೧೩ ಸೆಂ.ಮೀ. ದಪ್ಪ ಹಾಗೂ ೧೧೫ ಸೆಂ.ಮೀ. ಅಗಲವಾಗಿದೆ. ವೀರಗಲ್ಲಿನ ಮೇಲ್ಭಾಗ ಅಗಲವಿದ್ದು, ಅಡಿಯಲ್ಲಿ ಅಗಲ ಕಡಿಮೆಯಾಗುತ್ತ ಹೋಗಿದೆ. ಕಲ್ಲಿನ ಮಧ್ಯಭಾಗದಲ್ಲಿ ವೀರನನ್ನು ಕಂಡರಿಸಿದ್ದು, ವೀರನ ಬಲಗೈಯಲ್ಲಿ ಬಾಣ (ಬಾಕು?) ಮತ್ತು ಎಡಕೈಯಲ್ಲಿ ಬಿಲ್ಲು ಇರುತ್ತದೆ. ಶತ್ರುಪಾಳೆಯದಿಂದ ಬರುತ್ತಿರುವ ಮೂರು ಬಾಣಗಳು ವೀರನ ಸೊಂಟ ಮತ್ತು ತೊಡೆ ಭಾಗದಲ್ಲಿ ಸ್ಪರ್ಶಿಸಿವೆ. ಕರ್ಣಕುಂಡಲ, ತಲೆ ಮೇಲೆ ಮುಡಿಯನ್ನು ತೋರಿಸಿರುವ ಶಿಲ್ಪಿ, ಕಣ್ಣು–ಮೂಗು–ಬಾಯಿಯನ್ನು ಸ್ಪಷ್ಟವಾಗಿ ಮೂಡಿಸಿರುವುದಿಲ್ಲ. ವೀರನ ಶಿಲ್ಪದ ಸುತ್ತಲೂ ಶಾಸನವಿದ್ದು, ಅಕ್ಷರಗಳನ್ನು ಆಳವಾಗಿ ಕೊರೆಯಲಾಗಿದೆ.

**ಶಾಸನದ ಪಾಠ**

೧ ಕ ಣ್ಣಾ ಕ (ಸಿ)ಗೆ ಮಟ್ಟರ ಶ್ರೀ ಪೋಪರ ಮಗಂ ಮರಟ್ಟ ಕೂಗುರ ತುರುಗಾಳೊ ಸತ್ತ

೨ ಬ ದೊ ಇ ವು ಮೆ ಜೀ ..................................ಗನ ಪುಲೀ

ಲಿಪಿಯ ದೃಷ್ಟಿಯಿಂದ ಸುಮಾರು ೯ನೆಯ ಶತಮಾನ ಈ ವೀರಗಲ್ಲು ಶಾಸನದ ಕಾಲಮಾನವಾಗಿದೆ. ಬಹುಪಾಲು ವೀರಗಲ್ಲುಗಳು ದೇವಾಲಯ ಬಳಿ ಇರುತ್ತವೆ. ಗಂಗರು



ವೀರಗಲ್ಲು ಶಾಸನ – ಕೂಗೂರು (ರಾಮಕೃಷ್ಣಪ್ಪನ ತೋಟದಲ್ಲಿ)

ಮತ್ತು ನೊಳಂಬರ ಕಾಲದ ವೀರಗಲ್ಲುಗಳು ಸಾಮಾನ್ಯವಾ ಕೆರೆಯ ಬಳಿ ಇದ್ದು, ಇವು ಕೋಲಾರ, ಬೆಂಗಳೂರು ತುಮಕೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಗಮನಿಸಿದ್ದೇವ ಆದರೆ ಕೂಗೂರಿನ ಈ ವೀರಗಲ್ಲು ಹೊಲದಲ್ಲಿ ಇರುತ್ತದ ತುರುಗಳ ಅಪಹರಣ ಮಾಡಿದವರನ್ನು ಎದುರಿಸಿ, ಶೌ ಮೆರೆದ ಷೋಪರ ಮಗ ಮರಟ್ಟನೆಂಬುವವನು ಕೂಗೂ ತುರುಗಾಳಗದಲ್ಲಿ ಮಡಿದನೆಂಬ ಅಂಶ ಈ ಶಾಸನದಿಂ ತಿಳಿದುಬರುತ್ತದೆ. ಶಾಸನೋಕ್ತ 'ಕೂಗುರ' ಇವತ್ತಿ 'ಕೂಗೂರು' ಎಂದು ಕರೆಯಲ್ಪಡುತ್ತಿದೆ. ಸ್ಥಳನಾಮದಲ್ಲಿ ಹೆ ಬದಲಾವಣೆಯಾಗಿರುವುದಿಲ್ಲ.

* ಶಿಕ್ಷಣ ಸಂಯೋಜಕ, ಕೃಷ್ಣರಾಜಪುರ ವೃತ್ತ, ಕ್ಷೇ.ಶಿ.ರ ಕಛೇರಿ, ಬೆಂಗಳೂರು ದಕ್ಷಿಣ ವಲಯ-೪



ವೀರಗಲ್ಲು ಶಾಸನ – ಕೂಗೂರು (ಕೇಶವರೆಡ್ಡಿಯವರ ಹೊಲ)

**ಇದೇ ಗ್ರಾಮದ ಕೇಶವರೆಡ್ಡಿ ಅವರ ಹೊಲದಲ್ಲಿರುವ ವೀರಗಲ್ಲು ಶಾಸನ :**

ಅಶ್ವಾರೋಹಿ ವೀರನ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕುದುರೆಯ ಹಗ್ಗವಿದೆ. ಕುದುರೆ ಹಿಂದಿನ ಕಾಲುಗಳ ಮೇಲೆ ಹೆಚ್ಚಿನ ಭಾರ ಹಾಕಿ, ಮುಂಗಾಲುಗಳನ್ನು ಮೇಲಕ್ಕೆ ಎತ್ತಿಹಿಡಿದಿದೆ. ಕುದುರೆಯ ಕಾಲ್ಕೆಳಗೆ ಮೂರು ಜನ ಶತ್ರು ಸೈನಿಕರು ನರಳುತ್ತ ನೆಲಕ್ಕುರುಳಿದ್ದನ್ನು ಕಾಣುತ್ತೇವೆ. ವೀರಗಲ್ಲಿನ ಮೇಲ್ಭಾಗದಲ್ಲಿ ಎರಡು ಸಾಲು, ಬಲಕ್ಕೆ ಅಂಚಿನಲ್ಲಿ ಎರಡು-ಮೂರು ಅಕ್ಷರಗಳ ಒಂಭತ್ತು ಸಾಲುಗಳ ಶಾಸನವಿದೆ. ಅಕ್ಷರಗಳು ತೀರ ಸವೆದಿದೆ.

**ಶಾಸನದ ಪಾಠ**

೧ [ಸ್ವಸ್ತಿ] ಶ್ರೀ (ಇ)ನ್ದಪ್ಪಯ್ಯ ನ್ನಾಡಾಳೆ
೨ ಗಯಿತ್ತಿನ [ಪರ] ಸಾಯಗ
೩ [ಇ] ನ್ದ್ರನ್
೪ ಪೆ.
೫ ದಿ (ಳಿ)
೬ . .
೭ ಪುರು
೮ ವನೆಟಿ
೯ ಪಲರ
೧೦ ಕೊನ್ದು
೧೧ ವಿಟ್ಟಿನ್

ಶಾಸನದ ಮೊದಲನೆಯ ಸಾಲಿನ '(ಇ)ನ್ದಪ್ಪಯ ನ್ನಾಡಾಳೆ' ಮತ್ತು ೩ನೆಯ ಸಾಲಿನಲ್ಲಿರುವ '[ಇ]ನ್ದ್ರನ್' ಪದಗಳು ರಾಷ್ಟ್ರಕೂಟರನ್ನು ನೆನಪಿಸುತ್ತವೆ. ೮ನೇ ಶತಮಾನದ ಮಧ್ಯಭಾಗದಿಂದ ೧೦ನೇ ಶತಮಾನದ ಕೊನೆಯ ಪಾದದ ವರೆಗೆ ಕರ್ನಾಟಕ ಮತ್ತು ಮಹಾರಾಷ್ಟ್ರದ ಭಾಗಗಳನ್ನೊಳಗೊಂಡಂತೆ ದಕ್ಷಿಣ ಭಾರತದ ಹೆಚ್ಚಿನ ಭಾಗವನ್ನು ಆಳಿದ ರಾಜಮನೆತನ ರಾಷ್ಟ್ರಕೂಟರದು. ಪ್ರಾರಂಭದಲ್ಲಿ ಬಾದಾಮಿ ಚಾಲುಕ್ಯರ ಆಶ್ರಿತರಾಗಿದ್ದು, ಸ್ವಶ್ರಮದಿಂದ ಸಾಧನೆ ಮಾಡಿ, ಚಳುಕ್ಯರ ಉತ್ತರಾಧಿಕಾರಿಗಳಾಗಿ ೧ನೇ ಕೃಷ್ಣ, ಧ್ರುವ, ೩ನೇ ಗೋವಿಂದ, ಅಮೋಘವರ್ಷ ನೃಪತುಂಗ ಮತ್ತು ೩ನೇ ಕೃಷ್ಣ ಇವರ ಪರಿಶ್ರಮದಿಂದ ಕರ್ನಾಟದಕದ ಪ್ರಭಾವವನ್ನು ದಕ್ಷಿಣ-ಉತ್ತರ ಭಾರತದಲ್ಲಿ ಹಬ್ಬಿಸಿದವರು ರಾಷ್ಟ್ರಕೂಟರು. ಇವರು ಮೊದಮೊದಲು ಪಲ್ಲವರ ಸ್ನೇಹ ಮಾಡಿ, ಒಂದನೆಯ ಕೃಷ್ಣನ ಕಾಲದಲ್ಲಿ ದಕ್ಷಿಣದ ತಮಿಳು ನಾಡಿನಲ್ಲಿಯೂ ತಮ್ಮ ಬಲ ಪ್ರದರ್ಶಿಸಿರುವುದು[೧] ತಿಳಿದಿದ್ದೇವೆ. ಈ ನಿಟ್ಟಿನಲ್ಲಿ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ 'ಇನ್ದಪ್ಪಯ್ಯ' ರಾಷ್ಟ್ರಕೂಟ ಮೂರನೆಯ ಇಂದ್ರ (೯೧೪-೯೨೯) ನಾಗಿರಬಹುದು. ಈ ಮುಮ್ಮಡಿ



ಮಾಸ್ತಿಕಲ್ಲು



ಮುಗಳೂರಿನ ೫೨ ವೀರಗಲ್ಲುಗಳು

ಇಂದ್ರ ತನ್ನ ಪೂರ್ವಜರಂತೆ ಉತ್ತರದ ದಿಗ್ವಿಜಯದೆಡೆಗೆ ಅಂದರೆ ನಾಸಿಕದ ಹತ್ತಿರ ಗೋವರ್ಧನನನ್ನು, ಪರಮಾರ ವಂಶದ ಉಪೇಂದ್ರನನ್ನು ಹಿಂದಕ್ಕಟ್ಟುವುದರೊಟ್ಟಿಗೆ ದಕ್ಷಿಣಕ್ಕೂ ಪ್ರಭಾವ ಬೀರಿದ್ದನೆಂಬ ಸಂಗತಿ ಪ್ರಸ್ತುತ ವೀರಗಲ್ಲು ಶಾಸನ ದೃಢಪಡಿಸುವಂತಿದೆ. ಅದರಂತೆ ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ಅಧೀನದಲ್ಲಿ ಬನವಾಸಿ ೧೨೦೦೦ ಮತ್ತು ಅಳುವಖೇಡ ೬೦೦೦ ಪ್ರದೇಶದಲ್ಲಿ ಗವರ್ನರ್ ಆಗಿದ್ದ ಇಂದಪ್ಪಯ್ಯನೇ[೨] ಶಾಸನೋಕ್ತ ಇನ್ದಪ್ಪಯ್ಯ ನಾಗಿರುವ ಅನುಮಾನವೂ ಇದೆ.

ಶಾಸನದಲ್ಲಿ ಸ್ಪಷ್ಟವಾಗಿ ಕಂಡುಬರುವ ೭ ರಿಂದ ೧೧ನೇ ಸಾಲುಗಳಿಂದ ವ್ಯಕ್ತವಾಗುವ ವಿಷಯ 'ಊರಳಿವುನಲ್ಲಿ ವೀರನು ಹಲವರನ್ನು ಕೊಂದು ತಾನೂ ಬಿದ್ದ' ಎಂದರ್ಥ ವಾಗುತ್ತದೆ. ಲಿಪಿಯ ಆಧಾರಕ್ಕನುಗುಣವಾಗಿ ಸುಮಾರು ೯ನೆಯ ಶತಮಾನದ ಉತ್ತರಾರ್ಧ ಅಥವಾ ೧೦ ನೆಯ ಶತಮಾನದ ಪೂವಾರ್ಧ ಭಾಗ ಎಂದು ಹೇಳಬಹುದಾಗಿದೆ.

### *ಹುಲಿಬೇಟೆ ವೀರಗಲ್ಲು*

ಕೂಗೂರಿನ ಗ್ರಾಮದೇವತೆ ಗುಡಿಯ ಬಲಭಾಗದಲ್ಲಿ ಸಿದ್ಧಪಡಿಸಿದ ಕಲ್ಲಿನ ಮೇಲೆ ಹುಲಿ ಬೇಟೆಯಾಡುತ್ತಿರುವ ವೀರನನ್ನು ತೋರಿಸಲಾಗಿದೆ. ವೀರ ತನ್ನ ಬಲಗೈಯಿಂದ ಹುಲಿಯ ಮುಂದಿನ ಕಾಲುಗಳನ್ನು, ಎಡಗೈಯಿಂದ ಹುಲಿಯ ಮೇಲ್ದುಟಿಯನ್ನು ಎತ್ತಿ ಹಿಡಿದಿರುತ್ತಾನೆ. ಬಹುಶಃ ಹುಲಿಗಳಿಂದ ತೊಂದರೆ ಅನುಭವಿಸುತ್ತಿದ್ದ ಜನರು, ಹುಲಿಯನ್ನು ಕೊಂದ ವ್ಯಕ್ತಿಯ ಬಗ್ಗೆ ಹಾಗೂ ಅವನ ಸಾಹಸದ ಬಗ್ಗೆ ಗೌರವ ಸೂಚಿಸಲು ಇಂಥ ಸ್ಮಾರಕಗಳನ್ನು ನಿಲ್ಲಿಸುತ್ತಿದ್ದಿರಬಹುದೆಂದು ಕಾಣುತ್ತದೆ. ಹುಲಿಯನ್ನು ಬೇಟೆಯಾಡಿ ಬಂದವನಿಗೆ ವಿಶೇಷ ಗೌರವ ಸೂಚಕವಾಗಿ ನಿಲ್ಲಿಸಿರುವ ಇಂಥ ವೀರಗಲ್ಲುಗಳು ಮುಳಬಾಗಿಲು ತಾಲ್ಲೂಕು ಮಂಡಿಕಲ್ಲು[೩] ಹಾಗೂ ಬಾಗಳಿ[೪] ಯಲ್ಲಿ ಇರುವುದನ್ನು ತಿಳಿದಿದ್ದೇವೆ.

### *ವೀರಮಾಸ್ತಿ ಕಲ್ಲು*

ಇದೇ ಗ್ರಾಮದೇವತೆ ಗುಡಿಯ ಎಡಭಾಗದಲ್ಲಿರುವ ವೀರಮಾಸ್ತಿಕಲ್ಲು ಪಶ್ಚಿಮಕ್ಕೆ ಮುಖ ಮಾಡಿದ್ದು, ೧೧೬ ಸೆಂ.ಮೀ. ಎತ್ತರ, ೯೬ ಸೆಂ.ಮೀ. ಅಗಲ ಹಾಗೂ ೭ ಸೆಂ.ಮೀ. ದಪ್ಪವಿರುವ ಕಲ್ಲು ಚಪ್ಪಡಿ ಬಳಸಿ ಮಾಡಲಾಗಿದೆ. ವೀರನನ್ನು ಮತ್ತು ಅವನ ಎಡಭಾಗದಲ್ಲಿ ಸ್ತ್ರೀಯೊಬ್ಬಳನ್ನು ಕಂಡರಿಸಲಾಗಿದೆ. ವೀರ ತನ್ನ ಬಲಗೈಯಲ್ಲಿ ಮಚ್ಚು, ಎಡಗೈ ಯಲ್ಲಿ ಉದ್ದನೆಯ ಭರ್ಜಿಯನ್ನು ಹಿಡಿದಿರುತ್ತಾನೆ. ವೀರನಿಗೆ ಕಾಲ್ಕಡಗ, ಕೈಕಡಗ ಕಂಠಹಾರಗಳಿವೆ. ಸ್ತ್ರೀಯು ಕಿವಿಯಲ್ಲಿ ಆಭರಣ, ಕೈಕಡಗ ಧರಿಸಿರುವಳು. ಸೀರೆಯ ನೆರಿಗೆಗಳು ಕಲ್ಲಿನ ಮೇಲೆ ಸ್ಪಷ್ಟವಾಗಿ ಮೂಡಿವೆ. ಇದೊಂದು ವೀರಮಾಸ್ತಿ ಆಗಿರುವ ಸಾಧ್ಯತೆ ಇದೆ.

### *ಮುಗಳೂರಿನ ೫೨ ವೀರಗಲ್ಲುಗಳು*

ಮುಗಳೂರು ಗ್ರಾಮದ ಹೊರಭಾಗದಲ್ಲಿ ಪೂರ್ವ ದಿಕ್ಕಿಗೆ ಪಿನಾಕಿನಿ ನದಿ ದಂಡೆಯ ಮೇಲೆ ಸುಮಾರು ೫೨ ವೀರರ ವಿಗ್ರಹಗಳಿರುತ್ತವೆ. ಇಂಗ್ಲೀಷ್ ವರ್ಣಮಾಲೆಯ 'U' ಆಕಾರದ ಸಿಮೆಂಟ್ ಕಟ್ಟೆಯಲ್ಲಿ ಇವುಗಳನ್ನು ಪ್ರತಿಷ್ಠಾಪಿಸ ಲಾಗಿದೆ. ಮಧ್ಯಭಾಗದಲ್ಲಿ ಒಂದು ಚಿಕ್ಕದಾದ ಪ್ರಧಾನ ಗುಡಿ ಇರುತ್ತದೆ. ಎಲ್ಲ ವಿಗ್ರಹಗಳಲ್ಲಿ ಸಾಮಾನ್ಯವಾಗಿ ವೀರನು ತನ್ನ ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುತವಂತೆ, ಎಡಗೈಯಲ್ಲಿ ಗುರಾಣಿ ಹಿಡಿದುಕೊಂಡೋ ಅಥವಾ ಅದರ ಮೇಲೆ ತನ್ನ ಕೈಯನ್ನು ಊರಿಕೊಂಡಂತೆಯೂ ತೋರಿಸಲಾಗಿದೆ. ಪ್ರತಿ ಯೊಂದು ವಿಗ್ರಹದಲ್ಲಿ ವೀರನ ಪಕ್ಕದಲ್ಲಿ ಸ್ತ್ರೀಯೂ ಇದ್ದಾಳೆ. ಅವಳ ಕೈಯಲ್ಲಿ ಹೂವು, ಕಮಂಡಲ ಹಾಗೂ ಕೆಲವೊಮ್ಮೆ ಪುರುಷನತ್ತ ಕೈ ಚಾಚಿರುವುದನ್ನು ಕಾಣುತ್ತೇವೆ.

ಎಡದಿಂದ ಬಲಕ್ಕೆ ೧೧ನೆಯ ಶಿಲ್ಪದಲ್ಲಿ, ವೀರ ತನ್ನ ಬಲಗೈಯಲ್ಲಿ ಕಠಾರಿ ಎತ್ತಿ ಹಿಡಿದಿದ್ದು, ಪಕ್ಕದಲ್ಲಿ ಸ್ತ್ರೀ ಇರುವಳು. ಇವರಿಬ್ಬರ ಮುಖ ಮಾತ್ರ ಮನುಷ್ಯರಂತೆ ಕಾಣದೆ, ಭಯಂಕರವಾಗಿ ಮೂಡಿಸಲಾಗಿದೆ. ೧೨ನೆಯ ವಿಗ್ರಹದಲ್ಲಿ ವೀರನ ಹತ್ತಿರದಲ್ಲಿರುವ ಸ್ತ್ರೀ ತನ್ನ ಎಡಗೈಯಲ್ಲಿ ಕಟ್ಟಿದ ಗಂಟು ಹಿಡಿದಿರುವಳು. ವಿಗ್ರಹ ೧೩ರಲ್ಲಿಯೂ ಸಹ ಸ್ತ್ರೀ ತನ್ನ ಗಂಟು ಹಿಡಿದು ವೀರನತ್ತ ಕೈ ಚಾಚಿರುವಳು. ೧೪ನೇ ಶಿಲ್ಪದಲ್ಲಿ ವೀರ ತನ್ನ ಒಂದು ಕೈಯಲ್ಲಿ ಮೇಲೆತ್ತಿದ ಕಠಾರಿ ಮತ್ತು ಕತ್ತಿಯನ್ನು ಕೆಳಮುಖ ಮಾಡಿ ಹಿಡಿದಿದ್ದಾನೆ. ೧೫ನೆಯ ವಿಗ್ರಹ ಸುಂದರವಾಗಿದ್ದು, ವೀರ ಮತ್ತು ಸ್ತ್ರೀಯರಿಬ್ಬರಿಗೂ ಕಂಠಹಾರ, ಕಾಲ್ಕಡಗ ತೋರಿಸಲಾಗಿದೆ. ೧೭ನೆಯ ಶಿಲ್ಪದಲ್ಲಿ ವೀರನು ಬಲಕೈಯಲ್ಲಿ ಕಠಾರಿ, ಎಡಕೈಯಲ್ಲಿ ಹಿಡಿದ ಗುರಾಣಿಯನ್ನು ಭುಜಭಾಗದಲ್ಲಿ ಇರಿಸಿದ್ದಾನೆ. ಸ್ತ್ರೀ ಕೈ ಮುಗಿದು ನಿಂತಿರುವ ಭಂಗಿಯಲ್ಲಿದ್ದಾಳೆ.

ಕೆಲವು ವಿಗ್ರಹಗಳಲ್ಲಿ ವೀರನ ಎಡ-ಬಲಕ್ಕೆ ಇಬ್ಬರು ಸ್ತ್ರೀಯರನ್ನು ತೋರಿಸಲಾಗಿದೆ. ಒಂದರಲ್ಲಿ ವೀರನನ್ನು ಹುಲಿ ಚರ್ಮದಂತೆ ಪಟ್ಟೆ ಪಟ್ಟೆಯಾಗಿ ಕಂಡರಿಸಿದ್ದನ್ನು ಕಾಣುತ್ತೇವೆ. ಎಲ್ಲ ೫೨ ವಿಗ್ರಹಗಳ ಪೈಕಿ, ಮಧ್ಯಭಾಗದಲ್ಲಿರುವ ಪ್ರಧಾನ ದೈವಕ್ಕೆ ಮಾತ್ರ ಕುಂಕುಮ ಹಚ್ಚಿ ಪೂಜೆ ಮಾಡಿರುವುದು ಕಂಡುಬಂತು. ಇಲ್ಲಿರುವ ಶಿಲ್ಪಗಳು ಹೊಸಕೋಟೆ ತಾಲ್ಲೂಕಿನ ದೊಡ್ಡಹುಲ್ಲೂರಿನಲ್ಲಿರುವಂತೆ ಕಲ್ಲು ಚಪ್ಪಡಿಯಿಂದ ನಿಲ್ಲಿಸಿದ ವೀರರ ಗುಡಿಗಳಂತಾಗಲಿ ಅಥವಾ ಬೆಂಗಳೂರು ಪೂರ್ವ ತಾಲ್ಲೂಕಿನ ಮೇಡಹಳ್ಳಿಯಲ್ಲಿರುವಂತೆ ೭-೮ ಅಡಿ ಎತ್ತರದ ವೀರಗಲ್ಲುಗಳಂತಾಗಲಿ ಇರುವುದಿಲ್ಲ. ಒಟ್ಟಾರೆ ಮುಗಳೂರಿನ ಈ ವೀರರ ವಿಗ್ರಹಗಳು ಸುಮಾರು ಒಂದರಿಂದ ಎರಡೂವರೆ ಅಡಿ ಎತ್ತರವಾಗಿವೆ. ನೋಡುಗರಿಗೆ ಚಿಕಣಿ ಶಿಲ್ಪಗಳಂತೆ ಕಾಣುತ್ತವೆ.

ಡಾ॥ ಆರ್. ಶೇಷಶಾಸ್ತ್ರಿಯವರು 'ಕರ್ನಾಟಕದ ವೀರಗಲ್ಲುಗಳು' ಪುಸ್ತಕದಲ್ಲಿ – 'ಈ ವಿಗ್ರಹ ಯಾವ ಊರಿನ ಬಳಿ ಇರುತ್ತದೆಯೋ, ಆ ಊರಿನ ಹೆಸರಿನ ಜೊತೆಗೆ ಅಪ್ಪ ಎಂಬುದು ಸೇರಿ ವೀರನ ಹೆಸರಾಗಿರುತ್ತದೆ. ಉದಾ : ದೊಡ್ಡ ಹುಲ್ಲೂರಿನ ವೀರನ ಗುಡಿಯ ಹೆಸರು ಹುಲ್ಲೂರಪ್ಪನ ಗುಡಿ; ದೇವನಹಳ್ಳಿ ತಾಲ್ಲೂಕಿನ ನಲ್ಲೂರಿನಲ್ಲಿರುವ ವೀರನ ಗುಡಿ ಹೆಸರು ನಲ್ಲೂರಪ್ಪನ ಗುಡಿ ಎಂದು ಉಲ್ಲೇಖಿಸಿರುತ್ತಾರೆ.' ಆದರೆ ಮುಗಳೂರಿನ ವೀರರ ವಿಗ್ರಹಗಳಿಗೆ 'ಬೀರದೇವರು' ಎಂದು ಮಾತ್ರ ಕರೆಯಲಾಗುತ್ತದೆ. ಈ ರೀತಿಯ ಬೀರದೇವರು ಗುಡಿಯನ್ನೊಳಗೊಂಡಂತೆ ವೀರಗಲ್ಲು ಸಮೂಹಗಳು ಬೆಂಗಳೂರು, ಕೋಲಾರ ಮತ್ತು ಅದಕ್ಕೆ ಹೊಂದಿಕೊಂಡು ತಮಿಳುನಾಡಿನ ಕೃಷ್ಣಗಿರಿ, ಧರ್ಮಪುರಿ ಜಿಲ್ಲೆಗಳಲ್ಲಿ ಅನೇಕ ಕಡೆ ಕಂಡುಬರುತ್ತವೆ. ಅಲ್ಲಿಯೂ 'ಬೀರದೇವರು' 'ಬೀರೇದೇವ್ರು' ಎಂದೇ ಸಂಬೋಧಿಸಲಾಗುತ್ತದೆ.

ಮುಗಳೂರಿನ 'ಬೀರೇಶ್ವರ'ನ ಬಗ್ಗೆ ಅಲ್ಲಿಯ ಜನರು– 'ಇಲ್ಲಿ ೭ ವರ್ಷಗಳಿಗೊಮ್ಮೆ ಸುತ್ತಮುತ್ತಲಿನ ಗ್ರಾಮಗಳ ಕುರುಬ ಜನಾಂಗದವರು ಸೇರಿ ಜಾತ್ರೆ ಆಚರಿಸುತ್ತಾರೆ. ಅಗ್ನಿ ಹಾಯುವುದು, ತಲೆ ಮೇಲೆ ತೆಂಗಿನಕಾಯಿ ಒಡೆಯುವ ಪದ್ಧತಿ ಪ್ರಚಲಿತವಿದೆ' ಎಂದು ವಿವರಿಸುತ್ತಾರೆ. ಪ್ರಾಣಿಬಲಿ ಕೊಡುವ ಸಂಪ್ರದಾಯ ಇಲ್ಲಿ ಕಂಡುಬರುವುದಿಲ್ಲ. ವೀರನನ್ನು ಆರಾಧಿಸುವ ಪದ್ಧತಿ ಬೇಡ ಮತ್ತು ಗೊಲ್ಲ ಜನಾಂಗದಲ್ಲಿಯೂ ಕಂಡುಬರುತ್ತದೆ[೫] ಉದಾ : ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಕೋನಸಾಗರದಲ್ಲಿ ಬೇಡ ಜನಾಂಗದ ವೀರ ಎರಮಂಚಯ್ಯ ಹುಲಿ ಕೊಂದು, ತಾನೂ ಸತ್ತಿದ್ದರ ನೆನಪಿಗಾಗಿ ವೀರಗಲ್ಲು ನೆಡಲಾಗಿದೆ. ಆನೇಕಲ್ ತಾಲ್ಲೂಕಿನ ಕೆಲವೆಡೆ ರೆಡ್ಡಿ ಜನಾಂಗದವರು ತಮ್ಮ ಗಂಡು ಮಕ್ಕಳ ಮದುವೆ ಸಂದರ್ಭದಲ್ಲಿ ವೀರಗಾರರಿಗೆ ಎಡೆ ನೀಡುವ ಪದ್ಧತಿಯೂ ಪ್ರಚಲಿತದಲ್ಲಿದೆ.[೬]

**ಬ್ಯಾಟರಾಯಸ್ವಾಮಿ ದೇವಸ್ಥಾನ**

ಪಿನಾಕಿನಿ (ದಕ್ಷಿಣ ಪೆನ್ನಾರ್) ನದಿ ದಂಡೆಯ ಮೇಲೆ ಮುಗಳೂರು ಗ್ರಾಮದ ಪೂರ್ವಕ್ಕೆ ಬ್ಯಾಟರಾಯಸ್ವಾಮಿ ದೇವಸ್ಥಾನವಿದೆ. ಗರ್ಭಗೃಹ, ಅಂತರಾಳ, ಸಭಾಮಂಟಪಗಳು ಸುಸ್ಥಿತಿಯಲ್ಲಿದ್ದು, ಗರ್ಭಗೃಹದ ಮೇಲೆ ಇಟ್ಟಿಗೆಯಿಂದ ಕಟ್ಟಿದ ದ್ರಾವಿಡ ಮಾದರಿ ಶಿಖರವಿದ್ದು, ಶಿಖರದ ಒಳಭಾಗವು ಸ್ತೂಪಿ (ಕಳಶ) ಯವರೆಗೆ ಟೊಳ್ಳಾಗಿದೆ. ಅದನ್ನು ಈಗ ಒಡೆದು ಹಾಕಿ ಕಲ್ಲು-ಸಿಮೆಂಟ್ ಬಳಸಿ ಹೊಸ ಶಿಖರ ಕಟ್ಟುವ ಕೆಲಸಕ್ಕೆ ಸಿದ್ಧತೆ ನಡೆಯುತ್ತಿದೆ.

ಬ್ಯಾಟರಾಯಸ್ವಾಮಿ ದೇವಸ್ಥಾನದ ಭಿತ್ತಿಯಲ್ಲಿ ಯಾವುದೇ ಶಿಲ್ಪಗಳು ಇರುವುದಿಲ್ಲ. ಅಧಿಷ್ಠಾನದಿಂದ ಭಿತ್ತಿ ಭಾಗವನ್ನು ತ್ರಿಪಟ್ಟ ಕುಮುದದಿಂದ ಪ್ರತ್ಯೇಕಿಸಲಾಗಿದೆ. ಸಭಾಮಂಟಪದ ಸುತ್ತಲೂ ಕಲ್ಲುಗೋಡೆಯಿದೆ. ಪೂರ್ವ ಮತ್ತು ದಕ್ಷಿಣ ದಿಕ್ಕಿನಿಂದ ಪ್ರವೇಶ ದ್ವಾರಗಳಿರುತ್ತವೆ. ಸಭಾಮಂಟಪದಲ್ಲಿ ನಾಲ್ಕು ಪೂರ್ಣಕಂಬಗಳು, ನಾಲ್ಕು ಅರ್ಧಕಂಬಗಳಿರುತ್ತವೆ. ಕಂಬಗಳ ಮೇಲೆ ತರಂಗಬೋದಿಗೆಗಳನ್ನು ಇಡಲಾಗಿದೆ. ವಿಜಯನಗರ ಶೈಲಿಯನ್ನು ಹೋಲುವ ಕಲ್ಲುಕಂಬಗಳಿಗೆ ಇತ್ತೀಚೆಗೆ ಬಣ್ಣ ಹಚ್ಚಿರುವುದು ಕಂಡುಬರುತ್ತದೆ.

ತಲವಿನ್ಯಾಸ :



ಗರ್ಭಗೃಹದಲ್ಲಿ ವೆಂಕಟರಮಣ ಸ್ವಾಮಿಯ ಮೂರ್ತಿಯಿದ್ದು, ಸ್ಥಳೀಯವಾಗಿ ಬ್ಯಾಟರಾಯಸ್ವಾಮಿ ಎಂದು ಪ್ರಚಲಿತದಲ್ಲಿದೆ. ಪುಷ್ಯ ಬಹುಳ ಪಂಚಮಿಯಂದು ಬ್ರಹ್ಮರಥೋತ್ಸವ ಜರುಗುತ್ತದೆ.

*ವೀರಭದ್ರಸ್ವಾಮಿ ದೇವಸ್ಥಾನದಲ್ಲಿರುವ ಶಿಲಾಶಾಸನ*

ಮುಗಳೂರಿನ ವೀರಭದ್ರಸ್ವಾಮಿ ದೇವಸ್ಥಾನದ ಮುಂಭಾಗದಲ್ಲಿ (ಪ್ರಕಟಿತ) ಶಿಲಾಶಾಸನವಿದೆ. ಇದನ್ನು ಪಶ್ಚಿಮಾಭಿಮುಖವಾಗಿ ನಿಲ್ಲಿಸಲಾಗಿದೆ. ೫೩ ಸೆಂ.ಮೀ. ಅಗಲ, ೪೦ ಸೆಂ.ಮೀ. ಎತ್ತರ ಹಾಗೂ ೧೬ ಸೆಂ.ಮೀ. ದಪ್ಪವುಳ್ಳ ಕಪ್ಪು ಕಲ್ಲು ಚಪ್ಪಡಿಯನ್ನು ಬಳಸಿದ್ದು, ಶಾಸನವು ಐದು ಸಾಲುಗಳಲ್ಲಿದೆ.

೧ ಹೊಲ 011 ಗದ್ದೆ ಬೂ 1೧

೨ ವಿಕ್ರುತಿ ಸಂವಚ್ಚರದ ಕಾ

೩ ರ್ತಿಕ ಬಗಿಲು ಸಿದ್ದಯ್ಯ ದೆ

೪ ವ ಒಡೆಯರು ವಿರಯ್ಯ ದೆವರಿಗೆ

೫ ನಿಲಿಸಿದ ಕಂಬ ಯಿದಕ್ಕೆ ನಡೆವ ಮಾನ್ಯ



ವೀರಭದ್ರ ದೇವಸ್ಥಾನ ಶಿಲಾಶಾಸನ ಮುಗಳೂರು

ವಿಕೃತಿ ಸಂವತ್ಸರದ ಕಾರ್ತಿಕ ಬಹುಳ ಒಂದರಲು ಸಿದ್ದಯ್ಯ ದೇವ ಒಡೆಯರು ವೀರಯ್ಯ (ವೀರಭದ್ರ) ದೇವರಿಗೆ ಕಂಬವನ್ನು ನಿಲ್ಲಿಸಿದ ಬಗ್ಗೆ ಹಾಗೂ ಇದಕ್ಕೆ ಅನುಪಾಲನೆ ಮಾಡಿದವರು ಮಾನ್ಯರು ಎಂಬ ಸಾರಾಂಶ ತಿಳಿದುಬರುತ್ತದೆ. ಲಿಪಿ ದೃಷ್ಟಿಯಿಂದ ೧೯ನೆಯ ಶತಮಾನದ ಶಿಲಾಶಾಸನವಿದಾಗಿದ್ದು, ವೀರಭದ್ರ ದೇವರ ಗುಡಿ ಇತ್ತೀಚಿನ ಕಟ್ಟಡವಾಗಿರುತ್ತದೆ.

*ವೀರಗಲ್ಲುಗಳು ಮತ್ತು ಸಪ್ತಮಾತೃಕೆಯರ ಶಿಲ್ಪ*

ಮುಗಳೂರು ಗ್ರಾಮದ ಉತ್ತರಕ್ಕೆ ಸುಮಾರು ೧ ಕಿ.ಮೀ. ದೂರವನ್ನು ಗದ್ದೆಯಲ್ಲಿ ಶ್ರಮಿಸಿದರೆ ದೊಣ್ಣೋಬಯ್ಯನವರ ರಾಮಕೃಷ್ಣನ ಹೊಲದಲ್ಲಿ ಎರಡು ವೀರಗಲ್ಲುಗಳು ಇರುತ್ತವೆ.

ಮೊದಲನೆಯ ವೀರಗಲ್ಲಿನಲ್ಲಿ ಅಶ್ವಾರೋಹಿ ವೀರರಿಬ್ಬರು ಬರುತ್ತಿದ್ದಾರೆ. ಎರಡೂ ಕುದುರೆಗಳು ಮುಂದಿನ ಕಾಲುಗಳನ್ನು ಎತ್ತಿ ಹಿಡಿದಿವೆ. ವೀರರು ಒಂದು ಕೈಯಲ್ಲಿ ಕುದುರೆಯ ಹಗ್ಗ, ಇನ್ನೊಂದು ಕೈಯಲ್ಲಿ ಖಡ್ಗ ಹಿಡಿದಿರುವರು. ಅವರ ಎದುರಿನಲ್ಲಿ ಸ್ತ್ರೀಯರಿಬ್ಬರು ವೀರರನ್ನು ಬರಮಾಡಿಕೊಳ್ಳುವ ಶೈಲಿಯಲ್ಲಿ ನಿಂತಿರುತ್ತಾರೆ. ಸ್ತ್ರೀಯರ ಮಧ್ಯದಲ್ಲಿ ವೃಕ್ಷವನ್ನು ಕಂಡರಿಸಲಾಗಿದೆ. ವೀರ ಮತ್ತು ಸ್ತ್ರೀಯರಿಗೆ ಅಲಂಕಾರ ಜಾಸ್ತಿಯಿದ್ದು, ಶಿಲ್ಪ ಶೈಲಿಯ ದೃಷ್ಟಿಯಿಂದ ಇದು ವಿಜಯನಗರೋತ್ತರ ಕಾಲದ್ದು ಎಂದು ಹೇಳಬೇಕಾಗುತ್ತದೆ.

ಅದೇ ಹೊಲದಲ್ಲಿರುವ ಮತ್ತೊಂದು ತ್ರುಟಿತ ವೀರಗಲ್ಲು ಪೂರ್ವಾಭಿಮುಖವಾಗಿದೆ. ಇದರ ಎತ್ತರ ೫೩ ಸೆಂ.ಮೀ. ಅಗಲ ೬೮ ಸೆಂ.ಮೀ. ಆಗಿದೆ. ಇಲ್ಲಿಯೂ ವೀರ ತನ್ನ ಬಲಕೈಯಲ್ಲಿ ಖಡ್ಗ ಎತ್ತಿ ಹಿಡಿದು, ಎಡಗೈಯಿಂದ ಕುದುರೆಯ ಹಗ್ಗ ಹಿಡಿದಿದ್ದಾನೆ. ಎದುರಿಗೆ ಸ್ತ್ರೀ ಸೊಂಟದ ಮೇಲೆ ಕೈ ಇಟ್ಟು ನಿಂತಿರುವುದನ್ನು ತೋರಿಸಲಾಗಿದೆ.

ಪಕ್ಕದ ಶ್ರೀ ವೆಂಕಟಸ್ವಾಮಿಯವರ ಗದ್ದೆಯಲ್ಲಿ ಸಪ್ತಮಾತೃಕೆಯರ ಶಿಲ್ಪವಿದ್ದು, ಅರ್ಧಭಾಗ ಮಣ್ಣಿನಲ್ಲಿ ಹೂತು ಹೋಗಿರುತ್ತದೆ. ಇಲ್ಲಿ ಪ್ರಾಚೀನ ದೇವಾಲಯವಿದ್ದಿರುವ ಸಾಧ್ಯತೆ ಇದೆ. ಗಂಗರ ದೇವಾಲಯಗಳಲ್ಲಿ ಸಪ್ತಮಾತೃಕೆಯರ ಶಿಲ್ಪ ಸರ್ವೇ ಸಾಮಾನ್ಯವಾಗಿತ್ತು.

(ಪ್ರಾಚ್ಯಾವಶೇಷಗಳು ಮತ್ತು ವೀರಗಲ್ಲು ಶಾಸನಗಳ ಮಾಹಿತಿ ನೀಡಿದ ವರ್ತೂರಿನ ಕು॥ ಮೋಹನ್ ಮತ್ತು ಪ್ರಬಂಧ ಮಂಡಿಸಿ, ಲೇಖನ ಸಿದ್ಧಪಡಿಸಲು ಮಾರ್ಗದರ್ಶನ ಮಾಡಿದ ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿಯವರಿಗೆ ಕೃತಜ್ಞ)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕರ್ನಾಟಕ ವಿಷಯ ವಿಶ್ವಕೋಶ** – ರಾಷ್ಟ್ರಕೂಟ ವಂಶ–ಪುಟ ೧೨೬೫.

೨. Nidagundi Ins. Shiggaon Taluk, *ARSIE* 1943-44, BK No 26.
Hottur Ins. Shiggaon Taluk, *ARSIE* 1943-44, BK No. 10.
Soratur Ins. Gadag Taluk, SII XI Part I No 20.

೩. *E.C.X.* Mb. 162, 950.

೪. ಡಾ. ಶೇಷಶಾಸ್ತ್ರಿ ಆರ್.; (೧೯೮೨) **ಕರ್ನಾಟಕದ ವೀರಗಲ್ಲುಗಳು,** ಕ.ಸಾ.ಪ. ಬೆಂಗಳೂರು. ಚಿತ್ರ–೪೯.

೫. – ಅದೇ – ಪುಟ ೪೯, ೫೦.

೬. ಈ ವಿಷಯದ ಕಡೆಗೆ ನನ್ನ ಗಮನ ಸೆಳೆದು, ಮಾಹಿತಿ ನೀಡಿದ ಡಾ॥ ದೇವರಕೊಂಡಾರೆಡ್ಡಿಯವರಿಗೆ ಉಪಕೃತ.

* 'ಇನ್ನಪ್ಪಯ್ಯ ಒಬ್ಬ ಗವರ್ನರ್' ಎಂಬ ವಿಷಯಕ್ಕೆ ಗ್ರಂಥ ಆಧಾರ ಒದಗಿಸಿದವರು ಶಿವಮೊಗ್ಗಾದ ಡಾ. ಜಗದೀಶ್‌ರವರು.


*What we are to-day comes from our thoughts*
*of yesterday and our present thoughts build*
*our life of tomorrow; our life is the creation of our mind*

**- Dharmapada**



*To rise above the ego sense, the path*
*of devotion to the supreme*
*Lord of the Universe is the best way.*

**The Dictionary of quotations**
**Madhura Publications**

ಎನ್.ಆರ್. ಲಲಿತಾಂಬ*

# ಮುರುಂಡಿಯ ಕನ್ನಡ ಶಾಲೆಯ ತಾಮ್ರಶಾಸನ

ಪ್ರಸ್ತುತ ತಾಮ್ರಶಾಸನವು ಹಾಸನಜಿಲ್ಲೆ ಅರಸೀಕೆರೆ ತಾಲ್ಲೂಕು ಮುರುಂಡಿ ಗ್ರಾಮದಲ್ಲಿ ಶ್ರೀಯುತ ಮಾದಪ್ಪನವರ ನಿವೇಶನದಲ್ಲಿ ದೊರಕಿದೆ. ಹೊಯ್ಸಳ ಇಮ್ಮಡಿ ನರಸಿಂಹನ ಆಳ್ವಿಕೆಯ ಕಾಲಕ್ಕೆ ಸೇರಿದ ಪ್ರಸ್ತುತ ತಾಮ್ರಶಾಸನದ ತೇದಿಯು ಕ್ರಿ.ಶ. ೧೨೨೨ ಆಗಸ್ಟ್ ೨೮ ಭಾನುವಾರಕ್ಕೆ ಹೊಂದಿಕೆಯಾಗುತ್ತದೆ. ಇದರಲ್ಲಿ ಒಟ್ಟು ಮೂರು ಫಲಕಗಳಿದ್ದು, ಮುದ್ರಿಕೆಯಿರುವ ತಾಮ್ರದ ಬಳೆಯಿಂದ ಬಂಧಿಸಲ್ಪಟ್ಟಿದೆ. ಈ ಮುದ್ರಿಕೆಯಲ್ಲಿ ಚಂದ್ರ ಸೂರ್ಯರನ್ನು ಮೇಲ್ಭಾಗದಲ್ಲಿ ಬಿಡಿಸಲಾಗಿದೆ. ಕೆಳಗೆ ಹುಲಿಯು ಮುಂದಿನ ಬಲಗಾಲನ್ನು ಎತ್ತಿ ಬಾಯನ್ನು ತೆರೆದು ಹೋರಾಟಕ್ಕೆ ಸಿದ್ಧವಾಗಿರುವಂತೆ ಬಲಭಾಗಕ್ಕೆ ತಿರುಗಿ ನಿಂತಿದೆ. ಅದರ ದೇಹದ ಮೇಲೆ ಉದ್ದವಾದ ಈಟಿಯೊಂದನ್ನು (ಸಲಾಕೆ) ಬಿಡಿಸಲಾಗಿದೆ.

೧೨x೬ ಇಂಚಿನ ಮೂರು ತಾಮ್ರದ ಪಲಕಗಳಲ್ಲಿ ಮೊದಲನೆಯ ಮತ್ತು ಮೂರನೆಯ ಫಲಕದ ಒಳಮಗ್ಗುಲಿನಲ್ಲಿ ಮಾತ್ರ ಬರಹವಿದ್ದು ಎರಡನೆಯ ಫಲಕದ ಎರಡೂ ಭಾಗದಲ್ಲಿ ಬರವಣಿಗೆ ಇದೆ. ಒಂದನೇ ಫಲಕದಲ್ಲಿ ೨೭ ಸಾಲುಗಳು ಎರಡನೆಯ ಫಲಕದ ಮೊದಲ ಭಾಗದಲ್ಲಿ ೨೪ ಸಾಲುಗಳು ಎರಡನೆಯ ಭಾಗದಲ್ಲಿ ೨೬ ಸಾಲುಗಳು ಹಾಗೂ ಕೊನೆಯ ಫಲಕದ ಒಳಭಾಗದಲ್ಲಿ ೨೩ ಸಾಲುಗಳು ಒಟ್ಟು ೧೦೦ ಪಂಕ್ತಿಗಳ ಶಾಸನವಿದಾಗಿದೆ.

೬೭ನೇ ಸಾಲಿನವರೆಗೆ ಸಂಸ್ಕೃತ ಭಾಷೆಯನ್ನು ನಂತರ ಕನ್ನಡ ಭಾಷೆಯನ್ನು ಬಳಸಲಾಗಿದೆ. ಶಾಪಾಶಯ ಸಂಸ್ಕೃತದಲ್ಲಿದೆ. ದೇವನಾಗರೀ ಲಿಪಿಯನ್ನು ಬಳಸಿ ಈ ಶಾಸನವನ್ನು ಬರೆಯಲಾಗಿದೆ. ಕನ್ನಡ ಭಾಷಾ ಭಾಗ ಸಂಪೂರ್ಣ ಗದ್ಯದಲ್ಲಿದೆ. ಶಕಟರೇಫವನ್ನು 'ರ'ಕಾರದ ಮೇಲೆ ಗೆರೆ ಎಳೆದು ಸೂಚಿಸಲಾಗಿದೆ.

'ಶ್ರೀ ಸರಸ್ವತ್ಯೈನಮಃ' ಎಂದು ಪ್ರಾರಂಭವಾಗಿ ನಂತರ "ನಮಸ್ತುಂಗ ಶಿರಶ್ಚುಂಬಿ... "ಪ್ರಸಿದ್ಧವಾದ ಶಿವನ ಪ್ರಾರ್ಥನೆ ಇದೆ. ನಂತರ ಯದುವಂಶದ ಮೂಲವನ್ನು ಪೌರಾಣಿಕ ಹಿನ್ನೆಲೆಯೊಂದಿಗೆ ವರ್ಣಿಸಲಾಗಿದೆ. ೧೩ ನೇ ಸಾಲಿನಿಂದ ೨೧ರ ವರೆಗೆ ಸಳನು ಶಾರ್ದೂಲವನ್ನು ಕೊಂದ ಹೊಯ್ಸಸಳೋದಯದ ಕಥೆಯಿದೆ. ಆ ವಂಶದಲ್ಲಿ ಬಂದ ಅರಸರು ಹೊಯ್ಸಳರಾದರು, ವ್ಯಾಘ್ರಕೇತನವನ್ನು ಹೊಂದಿದರು. ಇಂತಹ ವ್ಯಾಘ್ರಪತಾಕೆಯನ್ನು ನೋಡಿದರೇ ಸಾಕು ರಿಪು ಭೂಪಾಲರು ಪಲಾಯನ ಮಾಡುತ್ತಾರೆ ಎಂದು ಹೇಳಿದೆ.

ಮುಂದೆ ೨೨ನೇ ಸಾಲಿನಿಂದ ೪೭ರವರೆಗೆ ವಿನಯಾದಿತ್ಯನಿಂದ ಇಮ್ಮಡಿ ವೀರಬಲ್ಲಾಳ ಮತ್ತು ಅವನ ಮಗ ವೀರನರಸಿಂಹನವರೆಗೆ ಹೊಯ್ಸಳ ವಂಶಾವಳಿಯನ್ನು ನೀಡಿದೆ. ವಿನಯಾದಿತ್ಯ ಭೂಪತಿ ಅವನ ಮಗ ತೇಜಸ್ವಿಯಾದ ಎರೆಯಂಗ ಮತ್ತು ತ್ರಿಮೂರ್ತಿಗಳಂತಿದ್ದ ಅವನ ಪುತ್ರತ್ರಯರು, ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯರನ್ನು ಹೇಳಿದೆ. ಅವರಲ್ಲಿ ಕೀರ್ತಿವಂತನಾದ ವಿಷ್ಣುವರ್ಧನನು ತನ್ನ ಪರಾಕ್ರಮದಿಂದ ಭೂಮಿಯ ದೇವತೆಗಳಿಂದಲೂ, ಬ್ರಾಹ್ಮಣರಿಂದಲೂ ತುಂಬುವಂತೆ ಮಾಡಿದನು–ಮುಂತಾದ ವಿಶೇಷ ವರ್ಣನೆಯಿದೆ. ನಂತರ ಅವನ ಮಗ ನರಸಿಂಹ ಅವನ ಮಗ ವೀರಬಲ್ಲಾಳನ ವರ್ಣನೆ ವಿಶೇಷವಾಗಿದೆ. ಇವನು ಉರ್ವಿಗೆ ಕಾಮಧೇನುವಿನಂತಿದ್ದು, ಜಗತ್ತಿನ ಚರಾಚರ ಕೋಟಿಗೆ ದಯೆ ತೋರುವವನಾಗಿದ್ದನು. ಧರ್ಮ ಗುಣಗಳಿಗೆ ಆಶ್ರಯವಾಗಿದ್ದನು. ಅರ್ಜುನನಂತೆ ಪರಾಕ್ರಮಿಯೂ, ಕರ್ಣನಂತೆ ದಾನಿಯೂ ಆದ ಈತನು, ಪಟ್ಟಮಹಿಷಿ ಪದ್ಮಲಾದೇವಿಯೊಂದಿಗೆ ಪೃಥ್ವಿಯನ್ನು ಪಾಲಿಸುತ್ತಿದ್ದನು. ಕ್ಷೀರ ಸಾಗರವನ್ನು ಮಂದರಪರ್ವತದಿಂದ ಮಥಿಸಿದಾಗ ಅಪೂರ್ವ ವಸ್ತುಗಳು ಹುಟ್ಟಿದಂತೆ ನರಸಿಂಹನು ಇವರಿಬ್ಬರಿಗೆ ಮಗನಾಗಿ ಜನಿಸಿದನು. ಬಾಲ್ಯದಿಂದಲೂ ಪರಾಕ್ರಮಿಯಾದ ಈತನು ತನ್ನ ದೋರ್ಬಲದಿಂದ ವಿಸ್ತಾರವಾದ ಭೂಮಿಯನ್ನು ಗೆದ್ದನು. ಕೂರ್ಮನೂ, ಆದಿಶೇಷನೂ, ದಿಕ್ಕುಂಜರಗಳು ಭೂಭಾರವನ್ನು ಹೊರಲಾರದೆ ಖೇದಗೊಂಡಿರುವಾಗ ಈತನು ತನ್ನ ಕೀರ್ತಿ ಬೀಜವನ್ನು ತನ್ನ ವಿಜಯಭುಜದಿಂದ ಬಿತ್ತಿ ಎಲ್ಲಕಡೆ ಮುಕ್ತಾಫಲವನ್ನು ಪಡೆದನೆಂದು ವರ್ಣಿಸಲಾಗಿದೆ.

* ಕನ್ನಡ ಉಪನ್ಯಾಸಕಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು ೫೬೦ ೦೪೦.

ಹೊಯ್ಸಳ ಬಿರುದಾವಳಿಗಳನ್ನು ೫೩ನೇ ಸಾಲಿನಿಂದ ಹೇಳಿದೆ. ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ..... ಇತ್ಯಾದಿ ಸಮಸ್ತ ಪ್ರಶಸ್ತಿ ಸಹಿತ ಶ್ರೀ ಹೊಯಿಸಳ ವೀರ ನಾರಸಿಂಹದೇವನು ಪೃಥ್ವಿಯನ್ನು ಪಾಲಿಸುತ್ತಿದ್ದನು. ಎಂದು ಹೇಳಿ "ಅತಃಪರ ಕರ್ಣಾಟ ಭಾಷಾ" ಎಂದು ಮುಂದಿನ ವಿಚಾರಗಳನ್ನು ಕನ್ನಡದಲ್ಲಿ ಹೇಳಲಾಗಿದೆ.

"ವಸಿಷ್ಟಗೋತ್ರದ ಜಕ್ಕಿಲೆಯ ಸಾವಿಯ ಅಣ್ಣಂಗಳು ಬಾಗುಳಿಯ ಕೊಪ್ಪದಲ್ಲಿ ಶ್ರೀ ಹೊಯಿಸಳ ವೀರಬಲ್ಲಾಳ ದೇವನ ಕಯ್ಯಲು ಧಾರೆಯ ಹಡದ ನೀರುಗುಂದನಾಡ ವಿದ್ಯಾರ್ಥಿಗಳ ಮುರುಹಿಂಡಿಯನ್ನು ಶ್ರೀನಾರಸಿಂಹಪುರವಾಗ ಬೇಕೆಂದಾ ಸಾಯಿ ಅಣ್ಣಂಗಳ ಮಗ ಸೋವಣ್ಣಂಗೆ ಆ ವೂರನಗ್ರಹಾರವಾಗಿ ಕಾರುಣ್ಯಂ ಮಾಡವೇಳ್ಕುಂ ದೇವಾ ಯೆಂದು ವೀರನಾರಸಿಂಹದೇವಂಗೆ ಬಿಂನಹಂಗೆಯಿದಡೆ ಕಾರುಣ್ಯಚಿತ್ತನಾಗಿ ಆ ಚಕ್ರವರ್ತಿ ಆ ಸೋಮಣ್ಣಂಗತಿ ಪ್ರೀತಿಯಿಂದಾವೂರನಿಪ್ಪತ್ತೈದು ವೃತ್ತಿಯಾಗಿ ಆ ಊರ ಮೊದಲು ಗದ್ಯಾಣ ನಾಲ್ವತ್ತ ಮೂರಕ್ಕಂ ಸಮಸ್ತಬಳಿ ಸಹಿತಂ ಗದ್ಯಾಣಯೆಂಬತ್ತಾರಂ ತೆರುವಂತಾಗಿ ಮಾಡಿ ಆ ಯೆಂಬ ತ್ತಾರು ಹೊನ್ನಂ ಕಳದುಕೊಂಡು ಯಿಪ್ಪತ್ತು ಮಾನಿಸ ವಿದ್ಯಾರ್ಥಿಮಾಣಿಯರಿಗಿಪ್ಪತ್ತುಂ ವುಣಲಿಕ್ಕಿ **ಕನ್ನಡವ ನೋದಿಸು ವಂತಾಗಿ** ಆ ವೀರನಾರಸಿಂಹ ದೇವರು ಆ ಸೋವಣ್ಣಂಗೆ ಸಕವರ್ಷದ ೧೧೪೪ನೆಯ ಚಿತ್ರಭಾನು ಸಂವತ್ಸರದ ಭಾದ್ರಪದ ಬಹುಳ ಪಂಚಮಿ ಸೋಮವಾರ ವಿತೀಪಾತ ಕನ್ಯಾ ಸಂಕ್ರಾಂತಿ ದಿನದಲ್ಲಿ ಸುವರ್ಣೋದಕ ಪೂರ್ವಕವಾಗಿ ಆ ವಿದ್ಯಾರ್ಥಿ ಖಂಡಿಕ ಆಚನ್ದ್ರಾರ್ಕ್ಕತಾರಂ ಬರಂ ಸಲ್ವನ್ತಾಗಿ ಧಾರಾ ಪೂರ್ವಕಂ ಮಾಡಿ ಕೊಟ್ಟ ತಾಂಮ್ರಸಾಸನ ಮಂಗಳ ಮಹಾ ಶ್ರೀ ಶ್ರೀ"

ಮುಂದೆ ಮುರುಂಡಿಯ ಸೀಮೆಗಳನ್ನು ಹೇಳಿದೆ. ಎಂಟೂ ದಿಕ್ಕುಗಳ ವಿವರವನ್ನು ನೀಡಿದ್ದು, ಅವುಗಳನ್ನು ಈಗಲೂ ಗುರುತಿಸಬಹುದು. ಈ ಮೊದಲು ಮುರುಂಡಿಗೆ ಅರಮನೆ ಶ್ರೀಕರಣದ ಕುಲಮರ್ಯಾದೆ ೪೩ ಇದ್ದು(ಅದು ಸಾಕಾಗದ ಕಾರಣ) ಈಗ ೮೬ ಗದ್ಯಾಣಗಳನ್ನು ತೆರುವಂತೆ ಮಾಡಿ ಆ ಎಂಬತ್ತಾರು ಗದ್ಯಾಣಗಳ ವಿವರಗಳನ್ನು ನೀಡ ಲಾಗಿದೆ. ಕೊನೆಯಲ್ಲಿ ಖಾಣ, ಎಳ್ಳು, ಭತ್ತ ಬಿಟ್ಟಿಯ ಬಂಡಿ, ಕಳುಕು, ನಲ್ಲೆಮ್ಮೆ ಇತ್ಯಾದಿಗಳು 'ಎಂದೆಂದಿಗಂ ಕಾರುಣ್ಯಂ' ಎಂದು ಹೇಳಿ ಫಲಶ್ರುತಿಯ ನಂತರ ಶ್ರೀ ವೀರನಾರಸಿಂಹ ದೇವಸ್ಯ ಎಂಬ ಒಪ್ಪದೊಂದಿಗೆ ಮುಕ್ತಾಯ ವಾಗಿದೆ.

ಈ ಶಾಸನದಲ್ಲಿ ಜಕ್ಕಿಲೆಯ ಸಾವಿಯಣ್ಣ ವೀರಬಲ್ಲಾಳನ ಕೈಯಲ್ಲಿ ಮುರುಂಡಿಯನ್ನು ಧಾರೆಯಾಗಿ ಪಡೆದಿದ್ದಾನೆ. ಈ ಸಾವಿಯಣ್ಣ ಯಾರು? ಮತ್ತು ಇವನಿಗೆ ಮುರುಂಡಿಯನ್ನು ನೀಡಲು ಕಾರಣವೇನು? ಮತ್ತು ಆ ಊರನ್ನು **ವಿದ್ಯಾರ್ಥಿಗಳ ಮುರುಹಿಂಡಿ** ಎಂದು ಕರೆಯಲು ಕಾರಣವೇನು?

ಈ ಶಾಸನದ ಪ್ರಕಾರ ಇಪ್ಪತ್ತು ಮಾನಿಸ ವಿದ್ಯಾರ್ಥಿ ಮಾಣಿಯರಿಗೆ ಉಣಲಿಕ್ಕಿ ಕನ್ನಡವನೋದಿ ಸುವುದಕ್ಕೆ ೮೬ ಹೊನ್ನುಗಳನ್ನು ಕಳೆದುಕೊಳ್ಳುವಂತೆ ಏರ್ಪಾಟುಮಾಡಲಾಗಿದೆ. ಅಂದರೆ ಇಲ್ಲಿ ಒಂದು ಕನ್ನಡ ಶಾಲೆಯಿತ್ತೆಂಬುದು ಸ್ಪಷ್ಟ. ಆ ಕಾರಣದಿಂದಲೇ 'ವಿದ್ಯಾರ್ಥಿಗಳ ಮುರುಹಿಂಡಿ' ಎಂದು ಆ ಊರು ಗುರುತಿಸಲ್ಪಟ್ಟಿದೆಯೆಂದು ಊಹಿಸಬಹುದು ಮತ್ತು ವಸಿಷ್ಟಗೋತ್ರದ ಈ ಜಕ್ಕಿಲೆಯ ಸಾವಿಯಣ್ಣನು ಆ ಶಾಲೆಯ ಮುಖ್ಯಸ್ಥನಾಗಿರಬೇಕು. ಬಾಗುಳಿಯಲ್ಲಿ ವೀರಬಲ್ಲಾಳನ ಕೈಯಲ್ಲಿ ಆ ಊರನ್ನು ಧಾರೆ ಪಡೆದಿದ್ದಾನೆ ಎಂದಾಗ ಆ ಕಾಲಕ್ಕಾಗಲೇ ಈ ಶಾಲೆಯು ಪ್ರಸಿದ್ಧವಾಗಿರಬೇಕು.[೧]

ಈ ಕನ್ನಡ ಶಾಲೆಯ ಇತಿಹಾಸವನ್ನು ಎಷ್ಟು ಹಿಂದಕ್ಕೆ ಒಯ್ಯಬಹುದು? ಯಾವಾಗ ಈ ಶಾಲೆಯು ಪ್ರಾರಂಭವಾಗಿರ ಬಹುದು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಒದಗಿಸುವ ಶಿಲಾ ಶಾಸನವೊಂದು ಮುರುಂಡಿಯಲ್ಲೇ ಇದೆ.[೨]

೧೧೭೪ರಲ್ಲಿ ಹೊಯ್ಸಳ ವೀರಬಲ್ಲಾಳದೇವನ ಪಾದ ಪದ್ಮೋಪಜೀವಿಯಾದ ಎರೆಯಣ್ಣನೆಂಬ ಮಹಾ ಪ್ರಧಾನ ಸರ್ವಾಧಿಕಾರಿ ಮಹಾಪಸಾಯಿತ ಶ್ರೀಕರಣದ ಹೆಗ್ಗಡೆ ಹಲವು ಬವರಗಳನ್ನು ಏಕಾಂಗದಿಂದ ಗೆದ್ದು ಆಳ್ದನನ್ನು ಮೆಚ್ಚಿಸಿ, ಅವನಿಂದ ಮುರಿಹಿಂಡಿಯನ್ನು ಸರ್ವಬಾಧಾ ಪರಿಹಾರವಾಗಿ ಧಾರಾಪೂರ್ವಕವಾಗಿ ಪಡೆದು ೧೧೭೪ ೨ನೇ ಮೇ ಸೂರ್ಯಗ್ರಹಣದಂದು "ಶ್ರೀನಾರಸಿಂಹಪುರ ದೊಳಗೆ ಒಂದು ನಿವೇಶಂ ಮಾಡಿ ಶ್ರೀಮದಗ್ರಹಾರ..ಲೆಯ ಸೋವಿಯಣ್ಣಂಗಳು ಕರ್ಣಾಟಬಾಲಸಿಕ್ಷೆಯನ್ನು ಮಾಡುವಂತಾಗಿ' ಅವರ ಜೀವಿತ ಗದ್ಯಾಣ ಹನ್ನೆರಡೆಂದೂ, ವಿದ್ಯಾರ್ಥಿಮಾಣಿಯರಿಪ್ಪತ್ತಕ್ಕೆ ಅಡುವ ಬಾಣಸುಗಿತ್ತಿಯ ಜೀವಿತ ಗದ್ಯಾಣ ಮೂರು ಮತ್ತು ಗ್ರಾಸಾ ವಾಸಕ್ಕೆ ಎಂದು ಮುರುಂಡಿಯನ್ನು ಸರ್ವನಮಸ್ಯ ಧಾರಾ ಪೂರ್ವಕ ಮಾಡಿ ಕೊಟ್ಟನು. ಇವನು ವಾಜಿವಂಶೋತ್ತಮ ನೆಂದು ಶಾಸನ ಹೇಳಿದೆ. ಅದೇ ಶಾಸನದಲ್ಲಿ ವಾಜಿವಂಶೋ ತ್ತಮನಾದ ಹೆಗ್ಗಡೆ ನಾಕಿರಾಜನು ಮುರುಂಡಿಯಲ್ಲಿ ಕೆರೆ ಮತ್ತು ದೇವಾಲಯ ವನ್ನು ಕಟ್ಟಿಸಿದ ವಿವರವಿದೆ. ಆ ದೇವಾಲಯದ ಪಕ್ಕದಲ್ಲಿ ಈ ಶಿಲಾಶಾಸನವಿದೆ.

ಈ ಶಾಸನದಲ್ಲಿ ಎರೆಯಣ್ಣನು ಪರಮಾರಾಧ್ಯ ನೃಸಿಂಹಪುರದೊಳಗೆ ದೇವರಿಂದ ತೆಂಕಲು ಊರಭಾಗದಲ್ಲಿ ಶಾಲೆಗಾಗಿ ಮುವ್ವತ್ತರ ಅಳತೆಯ ನಿವೇಶನ ಮಾಡಿದನೆಂದು ಹೇಳಿದೆ. ಈ ನರಸಿಂಹಪುರವೇ ಮುರುಂಡಿಯೇ? ಅಥವಾ ಬೇರೆಯೋ? ಎಂಬ ಪ್ರಶ್ನೆ ಏಳುತ್ತದೆ. ಮುರುಂಡಿಯ ಸುತ್ತ

ಮುತ್ತ ನರಸಿಂಹಪುರವೆಂಬುದು ಇಲ್ಲ. ಅವನು ಕಟ್ಟಿಸಿದ ಶಾಲಾನಿವೇಶನವು "ದೇವರಿಂದ ತೆಂಕ ಊರ ಭಾಗದಲ್ಲಿ" ಎಂದಿರುವುದರಿಂದ ಅದೇ ಶಾಸನೋಕ್ತ, ನಾಕಿರಾಜ ಕಟ್ಟಿಸಿದ ದೇವಾಲಯವನ್ನೇ ಇದು ಹೇಳುತ್ತಿದೆ ಎಂದು ಊಹೆ ಮಾಡಬಹುದು. ಈಗ ಈ ತಾಮ್ರಶಾಸನ ದೊರೆತ ಶಾಲಾ ನಿವೇಶನವು ದೇವಾಲಯದ ದಕ್ಷಿಣ ದಿಕ್ಕಿಗೆ ಊರಭಾಗದಲ್ಲಿ ಇರುವುದನ್ನು ನೋಡಬಹುದು. ಹಾಗಾಗಿ ನರಸಿಂಹಪುರವೇ ಮುರುಂಡಿ ಎಂದು ಹೇಳಬಹುದು.

ಈ ತಾಮ್ರಶಾಸನದಲ್ಲಿ ಮುರುಂಡಿಯು ಶ್ರೀ ನಾರ ಸಿಂಹಪುರ ಅಗ್ರಹಾರವಾಗಬೇಕೆಂಬ ಬೇಡಿಕೆಯನ್ನು ಸಾವಿಯಣ್ಣ ಅರಸನ ಮುಂದಿಟ್ಟಿದ್ದಾನೆ (ಪರಮಾರಾಧ್ಯ ನೃಸಿಂಹಪುರವೆಂಬ ಹೆಸರನ್ನು ಪುನರ್ ಸ್ಥಾಪಿಸಿ ಅಗ್ರಹಾರ ಮಾಡುವ ಪ್ರಯತ್ನ ಈಡೇರಿದ್ದರೂ ನರಸಿಂಹಪುರವೆಂಬ ಹೆಸರು ಉಳಿದು ಬಂದಿಲ್ಲ, ಮುರುಂಡಿಯೆಂಬುದೇ ಚಾಲ್ತಿ ಯಲ್ಲಿದೆ).

೧೧೭೪ರ ಶಿಲಾಶಾಸನದಲ್ಲಿ ಎರೆಯಣ್ಣನು ಶಾಲೆಯ ಕನ್ನಡ ಉಪಾಧ್ಯಾಯನಾಗಿ ಸೋವಿಯಣ್ಣನನ್ನು ನೇಮಿಸಿ ದ್ದಾನೆ. ಈತ ಒಂದು ಅಗ್ರಹಾರದವನು. ಆ ಅಗ್ರಹಾರದ ಹೆಸರು ಹೇಳುವ ಕಲ್ಲಿನ ಭಾಗ ಚಕ್ಕೆಯೆದ್ದಿರುವುದರಿಂದ ಅಲ್ಲಿ..ಲೆಯ ಎಂಬ ಅಕ್ಷರಗಳನ್ನು ಮಾತ್ರ ಗುರುತಿಸಲು ಸಾಧ್ಯವಿದ್ದು ಸಂಪಾದಕರು 'ಬೋ'ಲೆಯ ಎಂಬ ಪಾಠವನ್ನು ಊಹೆ ಮಾಡಿದ್ದಾರೆ. ಪ್ರಸ್ತುತ ತಾಮ್ರಶಾಸನದಲ್ಲಿ ಸ್ಪಷ್ಟವಾಗಿ ಅದು 'ಜಕ್ಕಿಲೆಯ ಸಾವಿಅಣ್ಣಂಗಳು' ಎಂದಿರುವುದರಿಂದ ಆ ಅಗ್ರಹಾರ 'ಜಕ್ಕಿಲಾ' ಅಥವಾ 'ಜಕ್ಕಿಲೆ' ಎಂದು ತಿಳಿಯ ಬಹುದು. ಇದು ಎಲ್ಲಿದೆ ಎಂದು ಗುರುತಿಸುವುದು ಸಾಧ್ಯ ವಾಗಿಲ್ಲ. (ಹಾಸನ ಜಿಲ್ಲೆಯಲ್ಲಿ ಅನೇಕ ಜಕ್ಕೂರುಗಳಿವೆ)

ಒಟ್ಟಿನಲ್ಲಿ ೧೧೭೪ರಲ್ಲಿ ೧೨ ಗದ್ಯಾಣಗಳಿಗೆ ಕನ್ನಡ ಬಾಲಶಿಕ್ಷೆಯ ಉಪಾಧ್ಯಾಯನಾಗಿ ನೇಮಕಗೊಂಡ ಈ ಸಾವಿಯಣ್ಣ ೧೧೯೩-೯೪ರ ವೇಳೆಗೇ ಬಲ್ಲಾಳನಿಂದ ಆ ಊರನ್ನು ಧಾರೆಯಾಗಿ ಪಡೆದಿದ್ದಾನೆ. ಅಷ್ಟು ಹೊತ್ತಿಗಾಗಲೇ ಶಾಲೆ ಪ್ರಸಿದ್ಧವಾಗಿದ್ದು ಇಪ್ಪತ್ತು ಮಾಣಿಯರಿಗೆ ಕನ್ನಡ ಬೋಧನೆ ಸತತವಾಗಿ ನಡೆದುಕೊಂಡು ಬರುತ್ತಿತ್ತು.

ಮುಂದೆ ಬಲ್ಲಾಳನ ಮಗ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದ ೧೨೨೨ರ ಹೊತ್ತಿಗೆ ಸುಮಾರು ೪೪ ವರ್ಷ ಗಳ ಸುದೀರ್ಘ ಸೇವೆಸಲ್ಲಿಸಿದ ನಂತರ ವಯೋವೃದ್ಧನಾಗಿರ ಬಹುದಾದ ಸಾವಿಯಣ್ಣ ತನ್ನ ಮಗ ಸೋಮಣ್ಣನಿಗೆ ಆ ಊರನ್ನು ಅಗ್ರಹಾರವಾಗಿ ಕಾರುಣ್ಯ ಮಾಡಬೇಕೆಂದು ಅರಸನಲ್ಲಿ ಬಿನ್ನಹ ಮಾಡಿ ಪಡೆದಿದ್ದಾನೆ ಮತ್ತು ಶಾಲೆಯ ಒಡೆತನವನ್ನೂ ಮಗನಿಗೆ ವಹಿಸಿಕೊಟ್ಟಿರುವ ಸಾಧ್ಯತೆಯನ್ನು ಊಹಿಸಬಹುದು. ಇಬ್ಬರು ಹೊಯ್ಸಳ ಅರಸರ ಪ್ರೀತಿಗೆ ಪಾತ್ರನಾಗಿ ಶಾಲೆಯು ಮುಂದುವರೆಯಲು ಪ್ರೋತ್ಸಾಹವನ್ನು ಪಡೆದ ಈ ಕನ್ನಡೋಪಾಧ್ಯಾಯ ಸುದೀರ್ಘ ಸೇವೆಸಲ್ಲಿಸಿದ ಕನ್ನಡ ಉಪಾಧ್ಯಾಯರಲ್ಲಿ ಮೊದಲಿಗನಾಗುತ್ತಾನೆ. 'ತನ್ನ ಕಾಲದ ಇತರ ಕನ್ನಡ ಉಪಾಧ್ಯಾಯರಿಗಿಂತ ಈತ ಅದೃಷ್ಟ ವಂತ'[೩] ಎಂಬ ಮಾತು ಒಪ್ಪುವಂತದ್ದೇ.

ಮುಂದೆ ಈ ಶಾಲೆ ಎಷ್ಟು ಕಾಲ ಮುಂದುವರಿಯಿತು? ಯಾವ ರೀತಿಯ ಪ್ರೋತ್ಸಾಹ ದೊರೆಯಿತು ಎಂಬುದಕ್ಕೆ ಯಾವ ಶಾಸನಾಧಾರಗಳೂ ಇಲ್ಲ. ದೊರೆತಿರುವ ಈ ಎರಡು ಶಾಸನಗಳಿಂದ ೪೪ ವರ್ಷಗಳ ಇತಿಹಾಸವಿದ್ದು ೧೨೨೨ ರಿಂದ ಹೊಯ್ಸಳರ ಪತನದವರೆಗೆ ಖಂಡಿತವಾಗಿಯೂ ಇದು ಮುಂದುವರೆದಿರಬಹುದು. ವಿಜಯನಗರದ ಅರಸರ ಕಾಲದಲ್ಲಿನ ವಿಚಾರ ತಿಳಿಯುವುದಿಲ್ಲ. ತೇದಿಯಿಲ್ಲದ ಸುಮಾರು ೧೪ನೇ ಶತಮಾನಕ್ಕೆ ಸೇರುವ ಶಾಸನವೊಂದು ಇದೇ ಊರಿನಲ್ಲಿದ್ದು[೪] ಅದರಲ್ಲಿ ಬೊಂಮಯ್ಯನೆನ್ನುವವನು ಮಾಳೆಯಭಟ್ಟರ ತಮ್ಮ ಕೇಶವಭಟ್ಟರಿಗೆ ಗದ್ದೆ ಬೆದ್ದಲು ದಾನ ನೀಡಿದ ವಿವರವಿದೆ. ದಾನದ ಉದ್ದೇಶ ತಿಳಿಸಿಲ್ಲ.

ಒಡೆಯರ ಕಾಲದಲ್ಲಿ ನಂಜನಗೂಡಿನಿಂದ ರಾಜರ ಆಣತಿಯಂತೆ ವಲಸೆ ಬಂದು ಇಲ್ಲಿ ನೆಲೆಸಿದ ಭೀಮನಾಯ ಕರು ಅವರ ವಂಶದ ವೆಂಕಟವರದಪ್ಪ, ಗೋವಿಂದಯ್ಯ, ರಾಮಪ್ಪ ಇತ್ಯಾದಿ ವ್ಯಕ್ತಿಗಳು ಆ ಊರಿನ ಒಡೆಯರಾಗಿ ಆಳಿದ್ದನ್ನು ಮೌಖಿಕ ಪರಂಪರೆಯಲ್ಲಿ ಉಳಿದುಬಂದಿರುವ ಕೆಲವು ಘಟನೆಗಳನ್ನು ಸ್ಥಳೀಯರು ಹೇಳುತ್ತಾರೆ. ಆ ವಂಶ ದವರು ಬ್ರಾಹ್ಮಣರಾಗಿದ್ದು ಶ್ರೇಷ್ಠ ಹೋರಾಟಗಾರ ರಾಗಿದ್ದರು ಎಂಬುದನ್ನು ಹೇಳುತ್ತಾರೆ. ಆ ವಂಶದ ರಾಮಪ್ಪ ನವರು ಕಟ್ಟಿಸಿರುವ ಕಲ್ಯಾಣಿ ಈಗಲೂ ಸುಂದರವಾಗಿದೆ, ಸುಸ್ಥಿತಿ ಯಲ್ಲಿದೆ. ಇವರೆಲ್ಲ ವಿದ್ಯೆಗೆ ಪ್ರೋತ್ಸಾಹ ನೀಡಿದ್ದರೆಂದು ಹೇಳುತ್ತಾರೆ.[೫]

ಈ ತಾಮ್ರಪಟ ದೊರೆತ ನಿವೇಶನವು ಕನ್ನಡ ಶಾಲೆಯ ನಿವೇಶನವಾಗಿದ್ದು ಹಿಂಭಾಗದಲ್ಲಿ ಪ್ರಾಚೀನವಾದ ಸೇದುವ ಬಾವಿಯೊಂದಿದೆ. ತಮಗೆ ನೆನಪಿರುವ ಕಾಲದಿಂದಲೂ ೧೯೭೪-೭೫ರವರೆಗೆ ಅಲ್ಲಿ ಶಾಲೆ ನಡೆಯುತ್ತಿದ್ದುದನ್ನು ಗ್ರಾಮಸ್ಥರು ಹೇಳುತ್ತಾರೆ.

ಒಟ್ಟಿನಲ್ಲಿ ೧೧೭೪ರಿಂದ ೧೯೭೫ರ ವರೆಗೆ ಅದೇ ನಿವೇಶನದಲ್ಲಿ(ಮಧ್ಯೆ ಜೀರ್ಣೋದ್ಧಾರಗೊಂಡಿರಬಹುದು) ಕನ್ನಡ ವಿದ್ಯಾಭ್ಯಾಸ ನಡೆದುಕೊಂಡು ಬಂದಿದೆ. ಸತತ ವಾಗಿ ನಡೆದಿದೆ ಎಂದು ಹೇಳಲು ಸದ್ಯಕ್ಕಂತೂ ಆಧಾರ ಸಾಲದು.

**ಗಮನಕ್ಕೆ:**

೧. ಎರೆಯಣ್ಣ ಕನ್ನಡ ಶಾಲೆ ಕಟ್ಟಿಸಿದ ನರಸಿಂಹಪುರವೇ ಮುರುಂಡಿ.

೨. ಎರೆಯಣ್ಣನು ನೇಮಿಸಿದ ಕನ್ನಡ ಉಪಾಧ್ಯಾಯನ ಮೂಲಸ್ಥಳ ಅಗ್ರಹಾರ ಬೋಲೆಯಲ್ಲ, ಅದು ಅಗ್ರಹಾರ ಜಕ್ಕಿಲೆ.

೩. ಜಕ್ಕಿಲೆಯ ಸಾವಿಯಣ್ಣನು ೪೮ ವರ್ಷಗಳು ಉಪಾಧ್ಯಯನಾಗಿ ಸೇವೆ ಸಲ್ಲಿಸಿದ ನಂತರ ಅವನ ಮಗ ಸೋಮಣ್ಣನು ಆ ಶಾಲೆಗೆ ಹಾಗೂ ಆ ಅಗ್ರಹಾರಕ್ಕೆ ಮುಖ್ಯಸ್ಥನಾಗಿ ನೇಮಕಗೊಂಡನು.

**ಶಾಸನ ಪಾಠ**

**–೧–**

೧ ಶ್ರೀ ಸರಸ್ವತ್ಯೈನಮಃ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ

೨ ಚಾರವೆತ್ರೈಲೋಕ್ಯನಗರಾರಂಭಮೂಲಸ್ತಂಬಾಯ ಶಂಭವೇ । ಅ

೩ ಧ್ಯಃ ಪೊತ್ರೀಶವಃ ಪತ್ಯಾದುದ್ವಾಸಮಯೇಭುವಃ ॥ ಹಸ್ತೋದಕ(ಧ್ವಿ)

೪ ಯಂತೇನ್ತುರ್ಯಸ್ಯ ಸಪ್ತಾಪಿಸಿಂಧವಃ । ಕದಾಚಿದಭ ವತ್ಪದ್ಮಪದ್ಮನಾ

೫ ಭಸ್ಯಜ್ಞಾತಿತಃ ॥ ಆಸಂನ್ವಧ್ಭಿಣಭಿದ್ವಿತ್ರೈರ್ಭುವನಾನಿ ಚತುರ್ದಶಃ

೬ ತನ್ಮಧ್ಯಾದ್ಬುದ ಭೂದೇವಃ ಶೃತೀನಾಮಪ್ರಿಯಃ ಕವಿಃ। ಭಾರತೀಭಾಮಿ

೭ ನೀಜಾನಿಃ ಶ್ರಷ್ಟಾಪಂಕೇಜವಿಷ್ಟರಃ । ತಸ್ಯಾಪ್ಯನ್ತಿರ ಭೂತ್ಪುತ್ರೋ*

೮ ನಾಮಾಚಾನ್ಮಹಾಮುನಿಃ । ತಲ್ಲೋವತ್ಫಲಶಚ್ಛಕ್ರಮೌಕ್ತಿ ಕಂತಾರ

೯ ಕೇಶ್ವರಃ । ವೇ ಭೂರಯಾವಿನೀ ಕಾಂತಶ್ಚಕೋಭಕಥು ಧಪ್ರಪಾ । ಚೇಃದ

೧೦ ಷರಃ । ಪಯೋರಾಷೇರ್ಜ್ಜವಾತ್ತಃ ಕೈರಚಃಶ್ರೀಯಃ । ತಸ್ಯಾನ್ವಯೇ

೧೧ ದ್ವರ ಭೂಯದುವಂಶ ಜನ್ಮಾಭೂಪಃ ಶಲ ದಿಲೀಪ ನಳಃ ಪ್ರಭಾವ

೧೨ ಯದ್ರೋಃ ಕೃಪಾಣ ದಲಿತಾರಿ ಕರೀಂದ್ರ ಕುಂಭ ಮುಕ್ತಾಫಲಾನಿ ನಿ

೧೩ ಪತ್ತನ ತೋರಣಾನಿ ॥ ಸಕದಾಚಿದ್ ಶಶಪುರೆ ದೇವೀಂ ವಾಸಂತಿಕಾ

೪. ಶಾಲೆಯ ಐವತ್ತು ವರ್ಷಗಳ ಇತಿಹಾಸದಲ್ಲಿ ಅದರ ಆದಾಯವನ್ನು ದುಪ್ಪಟ್ಟು ಮಾಡಿದರೂ ವಿದ್ಯಾರ್ಥಿಗಳ ಸಂಖ್ಯೆಯನ್ನು ಮಾತ್ರ ೨೦ಕ್ಕೇ ಮಿತಿಗೊಳಿಸಿದ್ದುದು ಗಮನಾರ್ಹ. ೧:೨೦ ಅನುಪಾತವಿತ್ತು. (ಒಬ್ಬ ಗುರು ಇಪ್ಪತ್ತು ವಿದ್ಯಾರ್ಥಿಗಳಿಗೆ ಚೆನ್ನಾಗಿ ಕಲಿಸಬಲ್ಲನೆಂಬ ಅರಿವು ನಮ್ಮ ಹಿಂದಿನವರಿಗಿತ್ತು!)

೫. ಗ್ರಾಮವು ಅಗ್ರಹಾರವಾಗಿ ಪರಿವರ್ತನೆಗೊಂಡರೂ ಶಾಲೆಯ ಆದಾಯ ಹೆಚ್ಚಿದರೂ ಈ ಶಾಲೆಯಲ್ಲಿ, ಇತರ ಭಾಷೆ, ಇತರ ವಿಷಯಗಳನ್ನು ಕಲಿಸಲು ಪ್ರಾರಂಭಿಸದೆ ಈ ಶಾಲೆಯನ್ನು ಕನ್ನಡ ಭಾಷೆಗೇ ಅದರಲ್ಲೂ ಬಾಲಶಿಕ್ಷೆಗೇ ಮೀಸಲು ಮಾಡಿದ್ದುದು ಮುಖ್ಯ ವಿಚಾರವಾಗಿದೆ.

೧೪ ನೃಪಃ ಸಂಪೂಜಯತಿ ಯಾವಚ್ಚಾತಾವತ್ಕಶ್ಚಿದ್ಭಯಂಕರಃ ॥ ಜ್ಯಂಭಾರಂ

೧೫ ತಾದ್ವಿದ್ವತ ವದನ ಸ್ಪಷ್ಟ ದಂಷ್ಟ್ರಾಕರಾಲಃ ಕೋಪಾಟೋ ಪಾತ್ಪುಕ

೧೬ ನಖರ ಶ್ರೇಣಿ ರೌದ್ರಸ್ತರಕ್ಷಃ । ಕುರ್ವನ್ ಖರ್ವಂಚ ಪುರ ಪಿಭರಾರ್ಣ್ಣ

೧೭ . ನಾತ್ಮಃ ಕೃತಾಂತೋದ್ಗರ್ಜ್ಜಗರ್ಜ್ಜಾತ್ ವಿಕಟಮಟ ವೀಶಂಕಟಾ

೧೮ ಸ್ಯಪಾತ ॥ ತಸ್ಮಾದ್ಭೀತೋವದತಖಿಶ್ಚಿನ್ಮುನಿಃ ಕರ್ಣಾಟ ಭಾಷ

೧೯ ಯಾ ಪೊಯಿಸಳೇತಿ ಜಘಾನಾಸೋತಂ ಶಾರ್ದ್ದೂಲಂ ಶಲಾಕಯಾ ॥

೨೦ ತದ್ವಂಶಜಾತ್ತತೋಭೂಪಾಃ ಪೊಯಿಸಳಾವ್ಯಾಘ್ರಕೇತನಾಃ ಯೇಷಂ

೨೧ ಪತಾಕಾಂ ದೃಷ್ಟ್ವೈಚ ಪಲಾಯಂತೆ ರಿಪುಭುಜಾಃ ॥ ತದನ್ವಯೋದಯ

೨೨ . ರೌವಿನಯಾದಿತ್ಯ ಭೂಪತಿಃ ರರಾಜಾಗ್ರೆ ತೇಜಸ್ವಿನೀ ನೈವ

೨೩ . . ಅನ ॥ ಎರಯಂಗ ಮಹೀಪಾಲಸ್ತತ್ಸುತೋಪಾಲ ಯನ್ಮಹೀನ್ ॥

೨೪ ತದ್ಯಶಃ ಪೂರಕರ್ಪೂರ್ರೈಃ ಕಕುಭಃ ಸುರಭೀಕೃತಾ ॥ ತಸ್ಯ ಪುತ್ರತ್ರ

೨೫ ಯಜಜ್ಞದೇವತ್ರಯಮಿವಾಪರ । ವಲ್ಲಾಲೋ(ಳೋ) ವಿಷ್ಣುನೃಪತಿರುದ

೨೬ ಯಾದಿತ್ಯ ಇತ್ಯಪಿ ॥ ತತ್ರ ವಿಷ್ಣುಮಹೀಪಾಲಃ ಕೀರ್ತಿಮಾನ್

೨೭ ಭುವಭತ್ರ . ಯೇನ ವಿಕ್ರಮ್ಯಪೃಥಿವೀದೇವಬ್ರಾಹ್ಮಣ ಸಾ

-೨-

೨೮ ತ್ಕೃತಾ ॥ ನೋತ್ಖಾತಾಕತರೆ ರಿಪುಕ್ಷಿತಿಭೃತೋನೋರ

೨೯ ಕ್ಷಿತಾಃ ಕೇಪುನಃಸಪ್ರಾಪ್ತಾಃ ಶರಣಂಕ್ವಾವಾಭುವಿಭೃತೋ ನೋ

೩೦ ತೇನರಾಜ್ಞಾಕರಃ ॥ ಕಿಂ ಚೇಷ್ಪಂನಕೃತಂ ಕೃತೋನಕತಮಃ

೩೧ ಪ್ರರ್ತಂಚ ಧರ್ಮೋಥವಾ ಕಿಂಬ್ರೂಮಃ ಪುರವಿಷ್ಣು ವಿಷ್ಣುನೃಪತೆ ಸ

೩೨ ತ್ಪೂಜ್ಯರಾಜ್ಯಕ್ರಮಂ ॥ ನರಸಿಂಹಸ್ಸುತಸ್ತಸ್ಯ ವಿಕ್ರಮಾ

೩೩ ಭರಣೋನೃಪಃ । ಸಮರೆಸಾಗಜಾಯಂತೆಯಸ್ಯವೈರಿನ್ರ

೩೪ ಪಾಲಕಾಃ ॥ ಬಲ್ಲಾಲ(ಳ)ಸ್ತಸ್ಯತನಯ ಪ್ರಥಿತಃ ಪೃಥುವಿಕ್ರ

೩೫ ಮಃ । ಯೋವನಿಂಗಾಮಿವಾಕ್ರಮ್ಯ ಕಾಮಧೇನುಂ ವ್ಯಧತ್ತು

೩೬ ನಃ ॥ ಧೃತ್ವಾಧರ್ವೋಗಂಗುಣಮಥಪರಾನ್ಕೋಟಿ ಮಾರೋಪ್ಯರ್ತೆ

೩೭ ಸ್ಮಿನ್ಸನ್ಧಯೋವ್ವೈಸ್ಸಫಲಮಖಿಲಂ ಮಾರ್ಗಣೌಘಂಚ ನೀ

೩೮ ತ್ವಾ । ಕರ್ಣ್ನಾಭ್ಯರ್ಣ್ನಂದದದಭಿನ್ನತಂ ಲಕ್ಷಮೇಕೈಕಶೋಗ್ರೆ

೩೯ ಶ್ರೀಬಲ್ಲಾಳಕ್ಷಿತಿಪರಿವೃಢಃಸೋರ್ಜುನಖ್ಯಾತಿರಾಸೀ

೪೦ ತ್ ॥ ದಿಗ್ಗಜಸ್ಯೇವದಾನ ಶ್ರೀಸ್ಸುಮೇರೋರಿವಮೇಖಲಾ ॥ ಆ

೪೧ ಸೀತ್ಪದ್ಮಲದೇವೀತಿಮಹಿಷೀ ತಸ್ಯಭೂಭೃತಃ । ಅಲಭತಪ

೪೨ ದ್ಮಲಾದೇವೀ ಬಲ್ಲಾಲ(ಳ)ನೃಪಾಲ ಮಂಧರಾಚಲ ಸಂಗಾತ್ತತ್ತ

೪೩ ನಯಂ ಸಕಲ ಕಲಾಢ್ಯಂ ದುಗ್ಧೋಧಿಲಹರಿಲೀಲಯಾ ನ

೪೪ ರಸಿಂಹ ॥ ಆ ಬಾಲ್ಯಾದಯಮಂಬುರಾಶಿ ರಶನಾಂಭು ಕ್ತೇಭು

೪೫ ವಂ ದೋರ್ವ್ವಲ್ಯೆನುರ್ವಿಶಾನವಜಿತ್ಯ ದಿಕ್ಕರಿವೃಥಾ ನ್ತೋಕಿ

೪೬ ನ್ಸಮಾಕ್ವಾಮತಿ ॥ ಆಃಜ್ಞಂತಂಚಮಯ್ಯೆವತೆ ನಿಜನಿ

೪೭ ಜೈರಂ ಶೈಸ್ತಮೇವಾಶ್ರಿತಾಃಸೋಪಿಹ್ಯಾಶ್ರಿತವತ್ಸಲ ಪ್ರ

೪೮ ಭುರಪಿ ಶ್ರೀನಾರಸಿಂಹೋನೃಪಃ ॥ ಭೂಭಾರ ಸ್ರಾನ್ತ ಕೂರ್ಮ

೪೯ ಪ್ರವರ ಫಣಿಗಣಾಧೀಶ ದಿಕ್ಕುಂಜರಾಣಾಂ ಖೇದತ್ಛೇದೈಕ ದ

೫೦ ಕ್ಷಃ ಪ್ರಬಲ ಭುಜಭರೋ ನಾರಸಿಂಹಸ್ಸಭೂಪಃ । ಯತ್ಕೀರ್ತಿಬೀ

೫೧ ಜಮಾಜೌ ನಿಜವಿಜಯ ಭುಜೋತ್ಖಾತ ಖಡ್ಗ ಪ್ರಭಿನ್ನ ಪ್ರೊ

-೩-

೫೨ . ತ್ಪ್ರತ್ಯರ್ಥಿಭೂಭೃನ್ಮದರದನಿಬಿಡ್ ನ್ಮುಕ್ತಮುಕ್ತಾಫ

೫೩ ಲಾನಿ ॥ ತಸ್ಮಿನ್ ॥ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ

೫೪ ಪ್ರಥ್ವೀವಲ್ಲಭ ಮಹಾರಾಜಾಧಿರಾಜಪರಮೇಶ್ವರ ಪರಮ

೫೫ ಭಟ್ಟಾರಕ ದ್ವಾರಾವತೀಪುರವರಾಧೀಶ್ವರ ಯಾದವ ಕುಲಾಂ

೫೬ ಬರದ್ಯುಮಣಿ ಸರ್ವಜ್ಞ ಚೂಡಾಮಣಿ ಮಲೆರಾಜರಾಜ ಮ

೫೭ ಲಪರೊಳುಗಣ್ಡ ಕದನಪ್ರಚಣ್ಡನೇಕಾಂಗವೀರನಸಹಾಯ

೫೮ ಸೂ(ಶೂ)ರಸ(ಶ)ನಿವಾರಸಿದ್ಧಿ ಗಿರಿದುರ್ಗಮಲ್ಲ ಚಲ ದಂಕರಾಮ ನಿ

೫೯ ಸ್ಸಂಕ ಪ್ರತಾಪೀತ್ಯಾದಿ ಸಮಸ್ತ ಪ್ರಶಸ್ತಿಸಹಿತೆ ಶ್ರೀ ಹೊಯಿಸ

೬೦ ಲ(ಳ) ವೀರನಾರಸಿಂಹದೇವೇಕದಾಚಿದ್ದಿಗ್ವಿಜಯ ಪ್ರಸಂಗೇನ

೬೧ ಕಾವೇರೀ ತೀರನಿವೇಶಿತಕ್ಕಂಧಾವಾರೆ ಸುಖೇನ ಪ್ರಥ್ವೀಂ ಪ್ರ

೬೨ ಶಾಸತಿಸತಿ ॥ ಅತಃ ಪರಂ ಕರ್ಣಾಟ ಭಾಷಾ೧ ಉಪಮನ್ಯು ವ

೬೩ ಶಿಷ್ಠಗೋತ್ರದ ಜಕ್ಕಿಲೆಯ ಸಾವಿ ಅಣ್ಣಂಗಲು(ಳು) ಬಾಗುಲಿ(ಳಿ)ಯ

೬೪ ಕೊಪ್ಪದಲ್ಲಿ ಶ್ರೀ ಹೊಯಿಸಲ(ಳ) ವೀರಬಲ್ಲಾಲ(ಳ) ದೇವನ ಕಯ್ಯ

೬೫ ಲು ಧಾರೆಯಂ ಹಡದ ನೀರಗುಂದನಾಡ ವಿದ್ಯಾರ್ಥಿ ಗಲ(ಳ) ಮುರುಹಿಂ

೬೬ ಡಿಯನು ಶ್ರೀ ವೀರನಾರಸಿಂಹಪುರವಾಗಬೇಕೆಂದಾ ಸಾ

೬೭ ಯಿ ಅಣ್ಣಂಗಲ(ಳ)ಮಗ ಸೋವಣ್ಣಂಗೆ ಆ ವೂರನಗ್ರ ಹಾರವಾಗಿ

೬೮ ಕಾರುಣ್ಯಂ ಮಾಡವೇಲ್ಕುಂ(ಳ್ಕುಂ) ದೇವಾಯೆಂದು ವೀರನಾರಸಿಂಹದೇವಂಗೆ

೬೯ ಬಿಂನಹಂಗೆಯಿದೊಡೆ ಕಾರುಣ್ಯಚಿತ್ತನಾಗಿ ಆ ಚಕ್ರವರ್ತಿ ಆ

೭೦ ಸೋವಣ್ಣಂಗತಿ ಪ್ರೀತಿಯಿಂದಾವೂರನಿಪ್ಪತ್ತೈದು ವೃತ್ತಿ ಯಾಗಿ

೭೧ ಆ ವೂರ ಮೊದಲು ಗದ್ಯಾಣ ನಾಲ್ವತ್ತ ಮೂರಕ್ಕಂ ಸಮಸ್ತ ಬಲಿ(ಳಿ)

೭೨ ಸಹಿತಂ ಗದ್ಯಾಣ ಯೆಂಬತ್ತಾರಂ ತೆರುವಂತಾಗಿ ಮಾಡಿ ಆ ಯೆಂಭ

೭೩ ತ್ತಾರು ಹೊನ್ನಂ ಕಲ(ಳ)ದುಕೊಂಡು ಯಿಪ್ಪತ್ತು ಮಾನಿಸ ವಿದ್ಯಾರ್ಥಿವಾ

೭೪ ಣಿಯರಿಗಿಪ್ಪತ್ತುಂ ವುಣಲಿಕ್ಕಿ ಕನ್ನಡವನೋದಿಸುವಂತಾಗಿ

೭೫ ಆ ವೀರನಾರಸಿಂಹದೇವರು ಆ ಸೋವಣ್ಣಂಗೆ ಸಕ ವರ್ಷದ

೭೬ ೧೧೪೪ ನೆಯ ಚಿತ್ರಭಾನು ಸಂವತ್ಸರದ ಭಾದ್ರಪದ ಬಹುಲ(ಳ) ಪಂಚ

೭೭ ಮಿ ಸೋಮವಾರ ವಿತಿಪಾತ ಕನ್ಯಾಸಂಕ್ರಾಂತಿ ದಿನದಲ್ಲಿ ಸು

–೪–

೭೮ ವರ್ಣೋದಕ ಪೂರ್ವಕವಾಗಿ ಆ ವಿದ್ಯಾರ್ಥಿ ಖಿಚಿಡಿಕ

೭೯ ಆಚಂದ್ರಾರ್ಕತಾರಂಬರಂ ಸಲ್ವನ್ತಾಗಿ ಧಾರಾಪೂರ್ವಕಂ

೮೦ ಮಾಡಿ ಕೊಟ್ಟ ತಾಂಮ್ರಸಾ(ಶಾ)ಸನ ಮಂಗಲ(ಳ) ಮಹಾ ಶ್ರೀ ಶ್ರೀ ಆ ವೂರ

೮೧ ಸೀಮೆ ಮೂಡಲು ಮಾದಿಗೊಂಡನ ಕೆರೆ ಆಗ್ನೇಯದಲು ಚಿಮ್ಮ

೮೨ ಕನಹಲ(ಳ) ತೆಂಕಲು ಮದವನಿಗನಾಲ ನೈಋತ್ಯದಲು ಕೊಂಗನ

೮೩ ಮೊರಡಿ ಪಡುವಲು ಹಬ್ಬಿದ ಬೆಟ್ಟ ವಾಯವ್ಯದಲು ಬೋಚಮಾ

೮೪ ರನ ಕೆರೆ ಬಡಗಲು ಸೆಟ್ಟಿಯ ಕೆರೆ ಈಶಾನ್ಯದಲು ಹಂದಿಯ

೮೫ ಮೊರಡಿ ಇವು ಪೂರ್ವ ಸೀಮೆಗಲು(ಳು) ॥ ಆ ವೂರ ಮೊದಲು ಗದ್ಯಾ

೮೬ ಣ ನಾಲ್ವತ್ತ ಮೂರಕ್ಕಂ ಅರಮನೆಯ ಶ್ರೀಕರಣದ ಕುಲಮರ್ಯಾ

೮೭ ದೆ ಮೊದಲು ಗ ೪೩ ಆವಟ್ಟಂ ಗ೧ ಹಾಗ೩ ಸಂದ ಗದ್ಯಾಣ೨

೮೮ ಹ೧ ಹಾಗ೨ ಹಣವೆರಡರ ಸೇಸೆಗಲ ಹ೬ರೂ ಮಾನ್ಯ ಬಲ್ಲಹಂ

೮೯ ಗದ್ಯಾಣ೪ ಹಣ೬ ಪಾ೧ ಕುಮಾರಂ ಗ೨ ಹಣ೩ ನಿಬಂದ

೯೦ ಗ೨ ಹಣ೧ ಪಾ೨ ಅಂತು ಗದ್ಯಾಣ೫೫ ಹಣ೩ ಶ್ರೀಕಂಣಂ ಗ

೯೧ ೧ ಹಣ೬ ಪಾ೨ ಸುಂಕಗದ್ಯಾ(ಣ)೮ ಹಣ೫ ಪ೨ ಪನ್ನಾಯ ಗ೧

೯೨ ಹಣ೪ ಪಾ೧ ಹಣವೊಂದರ ಶೇಸೆ ಗ೬ ಹಣ೭ ಕಂಡಿಕೆವಣ

೯೩ ಹಣ೨ ವೀರಶೇಸೆ ಗ೭ ಹಣಂ೩ ಪಾಗ೩ ಕಾಣಿಕೆ ಗ೩ ಹೊ

೯೪ ದಕೆ ಗ೨ ವಿಶದ್ಧಿ ಗ೧ ಅಂತು ಗ೮೬ ಹಣ೨ ಆ ಸಂವತ್ಸರ

೯೫ ದ ಭಾದ್ರಪದ ಬಹುಲ(ಳ) ಪಂಚಮಿ ವಡ್ಡವಾರಂ ಮೊದಲಾಗಿ

೯೬ ಖಾಣ ಯೆಲ್ಲು(ಳ್ಳು) ಭತ್ತ ಬಿಟ್ಟಿಯಭಂಡಿ ಅಟುದ ಹದಿಕೆ ಕಲು(ಳು)

೯೭ ಕು ನಲ್ಲೆಮ್ಮೆಯೆಂದ್ದೆಂದ್ದಿಂಗಂ ಕಾರುಣ್ಯ ॥ ಸ್ವದತ್ತಂ ಪರದತ್ತಂ

೯೮ ವಾಯೋಹರೇತಿ ವಸುಂಧರಾ । ಷಷ್ಟೀರ್ವರ್ಷ ಸಹಸ್ರಾಣಿ

೯೯ ವಿಷ್ಠಾಯಾಂ ಜಾಯತೆ ಕ್ರಿಮಿ ॥

೧೦೦ ॥ ಶ್ರೀ ವೀರನಾರಸಿಂಹದೇವಸ್ಯ ॥



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಬಾಗುಳಿಯ ನೆಲೆವೀಡಿನಿಂದ ಬಲ್ಲಾಳನ ಆಳ್ವಿಕೆಯನ್ನು ಹೇಳುವ ಶಾಸನಗಳ ತೇದಿ ೧೧೯೩–೯೪ರಿಂದ ಕಾಣಿಸಿಕೊಳ್ಳುತ್ತದೆ.

೨. **ಎಪಿಗ್ರಾಫಿಯಾ ಕರ್ನಾಟಕ** ೧೦ (ಹೊಸತು), ಮೈ.ವಿ.ವಿದ್ಯಾಲಯ, ಅರಸೀಕೆರೆ ೨೨೭, ಹಾಸನ (ಜಿ)

೩. **ಕರ್ನಾಟಕ ಪರಂಪರೆ**

೪. **ಎ.ಕ. ೧೦ (ಹೊಸತು),** ಅರಸೀಕೆರೆ ೨೨೭, ಹಾಸನ (ಜಿ)

೫. ಈಗಲೂ ಆ ವಂಶದ ಎಂ.ವಿ. ಗೋವಿಂದಯ್ಯನವರು ಆ ಊರಿನ ಶಾಲೆಯಲ್ಲಿ ಓದಿ ಅತಿ ಹೆಚ್ಚು ಅಂಕ ಗಳಿಸುವ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗೆ ಪ್ರತಿ ವರ್ಷವೂ ಬಹುಮಾನ ನೀಡುತ್ತಾರೆ. ಇವರು ನಿಸರ್ಗಧಾಮವೆಂಬ ಹೆಸರಿನ ಗುರುಕುಲ ಪದ್ಧತಿಯ ಶಾಲೆಯೊಂದನ್ನು ತೆರೆದಿದ್ದು ವಿದ್ಯಾರ್ಥಿಗಳಿಲ್ಲದೆ ಅದು ನಿಂತು ಹೋಗಿದೆ.

ಡಾ. ವೈ. ಉಮಾನಾಥ ಶೆಣೈ*

# ದೇಉಸೆಟ್ಟಿತಿಯ ಮೂಡುಬಿದಿರೆ ತಾಮ್ರಶಾಸನ

ಈ ತಾಮ್ರಶಾಸನವು ದಕ್ಷಿಣ ಕನ್ನಡ ಜಿಲ್ಲೆಯ ಮೂಡುಬಿದಿರೆಯ ಶ್ರೀ ದಿಗಂಬರ ಜೈನಮಠದ ಅಧೀನದಲ್ಲಿರುವ ಶ್ರೀಮತಿ ರಮಾಮಣಿ ಜೈನ ಸಂಶೋಧನಾ ಕೇಂದ್ರದಲ್ಲಿ ದೊರಕಿದೆ. ಇದು ಈವರೆಗೆ ವರದಿಯೂ ಆಗಿಲ್ಲ. ಇದರ ಪೂರ್ಣ ಪಾಠ ಪ್ರಕಟವೂ ಆಗಿಲ್ಲ. ಈ ತಾಮ್ರಶಾಸನದ ಕರ್ತೃ(ಪ್ರಾಯಶಃ ಮೂಡುಬಿದಿರೆಯ ಸಮೀಪದಲ್ಲಿದ್ದ) ಕುಞನಾಯಗ ಎಂಬವನ ಒಡಹುಟ್ಟಿದ ತಂಗಿಯಾಗಿದ್ದ ದೇಉ ಸೆಟ್ಟಿತಿ ಎಂಬುವಳು. ಇದನ್ನು ಆ ಪರಿಸರದಲ್ಲಿ ದೊರೆಯಾಗಿ ಆಳುತ್ತಿದ್ದ ಅವನಿಹೆಗ್ಗಡೆ ಎಂಬವನ ಮಾತಿನ ಅನುಸಾರ ಬರೆಯಲಾಗಿತ್ತು. ಈ ದೇಉ ಸೆಟ್ಟಿತಿಯು ತನ್ನ ಭೂಮಿಯನ್ನು ಸಟ್ಟಿ ಸೆಟ್ಟಿ ಬಳಿಯ (ವಂಶದ) ಅಡಪವುಂಮುಸೆಟ್ಟಿಯ ಅಳಿಯ ಬೆಳಿಯಜಾರು ಸೆಟ್ಟಿ ಎಂಬವನಲ್ಲಿ ಆರ್ವಾರ ಮಡಗಿ ೪೦೦ ಸಂಣ ಪ್ರತಾಪ ಗದ್ಯಾಣಗಳ ಸಾಲವನ್ನು ಪಡೆದುಕೊಂಡು, ಇದಕ್ಕೆ ಸಂಬಂಧ ಪಟ್ಟ ಷರತ್ತುಗಳನ್ನು ಈ ಶಾಸನದ ರೂಪದಲ್ಲಿ ಬರೆದುಕೊಟ್ಟಿದ್ದಳು. ಇದರಲ್ಲಿರುವ ಹಲವು ಅಂಶಗಳು ಬಹಳ ಕುತೂಹಲಕಾರಿಗಳಾಗಿರುವುದರಿಂದ ಈ ಶಾಸನವು ಅಧ್ಯಯನೀಯವಾಗಿದೆ.

ಬಹಳ ಪ್ರಾಚೀನ ಕಾಲದಿಂದ ಕರಾವಳಿ ಕರ್ನಾಟಕ ಮತ್ತು ಕೇರಳ ರಾಜ್ಯದ ಉತ್ತರ ಭಾಗದಲ್ಲಿ ಭೂಮಿಯ ಒಡೆತನದ ಹಕ್ಕು ಗಂಡುಮಕ್ಕಳಂತೆ ಹೆಣ್ಣುಮಕ್ಕಳಿಗೂ ವಂಶಪಾರಂಪರ್ಯವಾಗಿ ಬರುತ್ತಿತ್ತು. ಈ ಪದ್ಧತಿಗೆ ಪ್ರಸ್ತುತ ಶಾಸನವು ಒಂದು ಒಳ್ಳೆಯ ಪುರಾವೆ. ದೇಉಸೆಟ್ಟಿತಿಯು ಆರ್ವಾರಕ್ಕೆ (ಒತ್ತೆಗೆ) ಇಟ್ಟಿದ್ದ ಭೂಮಿ ಆಕೆಯದಾಗಿತ್ತು. ಈ ತಾಮ್ರಶಾಸನ ಮೂಡುಬಿದಿರೆಯ ಜೈನ ಮಠದಲ್ಲಿ ಸಿಕ್ಕಿದ್ದರೂ, ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿರುವ ಕುಞ ನಾಯಗ ಮತ್ತು ದೇಉಸೆಟ್ಟಿತಿ, ಜೈನಮತಸ್ಥರಾಗಿರುವ ಸಾಧ್ಯತೆಗಳು ತೀರಾ ಕಡಿಮೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವ ಪರಿವಾರ ಬಂಟರು ಎಂಬ ಜಾತಿಯಲ್ಲಿ ಈ ನಾಯಗ ಮತ್ತು ಸೆಟ್ಟಿತಿ ಎಂಬ ಎರಡೂ ಕುಲನಾಮಗಳು ಅಸ್ತಿತ್ವದಲ್ಲಿವೆ. ಆದುದರಿಂದ ಅವರು ಈ ಸಮಾಜಕ್ಕೆ ಸೇರಿದವರಾಗಿರಬೇಕು.

ಮಧ್ಯಯುಗದಲ್ಲಿ ಭೂಮಿಯನ್ನು ದೇವಾಲಯಗಳಿಗೆ ಆರ್ವಾರ ಬಿಟ್ಟು, ಸಾಲವನ್ನು ತೆಗೆದುಕೊಳ್ಳುವ ಪದ್ದತಿ ತೀರಾ ಸಾಮಾನ್ಯವಾಗಿದ್ದರೂ, ಇಲ್ಲಿ ಭೂಮಿಯನ್ನು ಇನ್ನೊಬ್ಬ ವ್ಯಕ್ತಿಯಲ್ಲಿ ಒತ್ತೆ (ಅಡವು) ಇಟ್ಟು ಸಾಲವನ್ನು ತೆಗೆದುಕೊಳ್ಳಲಾಗಿದೆ. ಸಾಲದ ಮೊತ್ತ ಅಂದಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ೪೦೦ ಸಣ್ಣ ಪ್ರತಾಪ ಗದ್ಯಾಣಗಳು. ಇದಕ್ಕೆ ನಿರ್ದಿಷ್ಟ ಪ್ರಮಾಣದ ಬಡ್ಡಿಯನ್ನು ಕೊಡಬೇಕಾಗಿತ್ತು. ಈ ಸಾಲದ ಮೊತ್ತಕ್ಕೆ ವರ್ಷ ಒಂದಕ್ಕೆ ಬಡ್ಡಿ ೬೦ ಮುಡಿ ಅಕ್ಕಿ. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ, ಈ ಬಡ್ಡಿಯನ್ನು ಕೊಡಲು ತಪ್ಪಿದಲ್ಲಿ ಅದಕ್ಕೆ ೭ ಸಣ್ಣ ಪ್ರತಾಪ ಗದ್ಯಾಣ ಲೆಕ್ಕದ ಹೆಚ್ಚಿನ ಬಡ್ಡಿಯನ್ನು ಕೊಡಬೇಕಾಗಿತ್ತು. ಈ ಒಪ್ಪಂದಕ್ಕೆ ಬೇರೆ ಯಾವುದೇ ತೊಡಕು ತೊಂದರೆಗಳಿರಲಿಲ್ಲ, ಆದರೆ ಸಾಕ್ಷಿಗಳಿದ್ದರು. ಅವರು ಈ ವ್ಯವಸ್ಥೆ ಸರಿಯಾಗಿ ನಡೆದುಕೊಂಡು ಹೋಗುವಂತೆ ನೋಡಿಕೊಳ್ಳಬೇಕಿತ್ತು.

ಒಟ್ಟು ೨೩ ಪಂಕ್ತಿಗಳಲ್ಲಿರುವ ಈ ಶಾಸನವನ್ನು ೨೮ ಸೆಂಟಿಮೀಟರ್ ಅಗಲ ಮತ್ತು ೧೧ ಸೆಂಟಿಮೀಟರ್ ಎತ್ತರವಿರುವ ಆಯತಾಕಾರದ ಸಾಮಾನ್ಯ ತೆಳ್ಳಗೆ ಎನ್ನಬಹುದಾದ ತಾಮ್ರಪಟದ ಮೇಲೆ ಬರೆಯಲಾಗಿದೆ. ಮೊದಲಿನ ೧೨ ಪಂಕ್ತಿಗಳನ್ನು ಮುಂಭಾಗದಲ್ಲಿಯೂ, ಉಳಿದ ೧೧ ಪಂಕ್ತಿಗಳನ್ನು ಹಿಂಭಾಗದಲ್ಲಿಯೂ ಕಾಣಬಹುದು. ಪೂರ್ಣವಾಗಿ ಇದರ ಭಾಷೆ ಕನ್ನಡ ಮತ್ತು ಮಧ್ಯಕಾಲೀನ ಕನ್ನಡ ಲಿಪಿ. ಸಂಸ್ಕೃತದ ಬಳಕೆ ಇಲ್ಲ. ಪ್ರಾರಂಭದಲ್ಲಿ ಯಾವುದೇ ದೇವರ ಉಲ್ಲೇಖವಾಗಲೀ, ಸ್ತುತಿ ಶ್ಲೋಕಗಳಾಗಲಿ ಇಲ್ಲ. ಕೊನೆಯಲ್ಲಿ ಫಲಶ್ರುತಿಯಾಗಲೀ, ಎಚ್ಚರಿಕೆಗಳಾಗಲೀ ಇಲ್ಲ. ಒಟ್ಟಿನಲ್ಲಿ, ಆರ್ವಾರ ಬಿಟ್ಟು ಭೂಮಿಯ ವಿವರ ಮತ್ತು ಗಡಿ ರೇಖೆಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಆರ್ವಾರ ಬಿಟ್ಟ ಗದ್ದೆಗಳ ಪೈಕಿ, ಬೀರಬಲ ಎಂಬ ಗದ್ದೆ, **ಕುರ್ತೆಲು ತಿಮರೆಂಬ** ಗದ್ದೆ, **ಸಾರಕರೆ**

* ಮುಖ್ಯಸ್ಥ, ಇತಿಹಾಸ ವಿಭಾಗ, ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ-೫೭೪ ೨೪೦.



"ದೇಉಸೆಟ್ಟಿತಿಯ ಮೂಡುಬಿದಿರೆಯ ತಾಮ್ರಶಾಸನ" ಮುಂಬದಿ (ಮೂಡುಬಿದಿರೆಯ ಶ್ರೀ ದಿಗಂಬರ ಜೈನ ಮಠದಲ್ಲಿ ದೊರಕಿತ್ತು.)



"ದೇಉಸೆಟ್ಟಿತಿಯ ಮೂಡುಬಿದಿರೆಯ ತಾಮ್ರಶಾಸನ" ಹಿಂಬದಿ (ಮೂಡುಬಿದಿರೆಯ ಶ್ರೀ ದಿಗಂಬರ ಜೈನ ಮಠದಲ್ಲಿ ದೊರಕಿತ್ತು.)

ಗದ್ದೆ ಎಂಬುವು ಗಮನೀಯವಾದ ಗದ್ದೆಗಳ ಹೆಸರುಗಳು. ಇಲ್ಲಿ ಗಮನಿಸಿಕೊಳ್ಳಬೇಕಾದ ಇನ್ನೊಂದು ಮುಖ್ಯ ವಿಷಯವೆಂದರೆ, ಈ ಒಪ್ಪಂದವನ್ನು ಈ ತಾಮ್ರಪಟದ ಮೇಲೆ ಬರೆದವನು ಅನಂತ ಸೇನಬೋವ ಎಂಬವನು, ಮತ್ತು ಆತನ ಈ ಕೆಲಸಕ್ಕೆ ಕೊಟ್ಟ ವೇತನವೆಂದರೆ ೧೬೦ ತೆಂಗಿನ ಕಾಯಿಗಳು ಎಂಬುದನ್ನು ಶಾಸನದ ಕೊನೆಯಲ್ಲಿ ಹೇಳಲಾಗಿದೆ. ಈ ರೀತಿಯ ವೇತನದ ಉಲ್ಲೇಖವಿರುವುದು ಈ ಶಾಸನದ ವೈಶಿಷ್ಟ್ಯ.

ಈ ಶಾಸನ ಬರೆದ ಕಾಲದ ಬಗ್ಗೆ ಸ್ಪಷ್ಟತೆ ಇಲ್ಲ. ಶಕವರ್ಷವನ್ನು ನಮೂದಿಸಿಲ್ಲ. ಆದರೆ ಇದನ್ನು "ವಿಳಂಬಿ ಸಂವತ್ಸರದ ವೃಷಭ ಮಾಸಂ ೯ನೆಯ ಗುರುವಾರದಲು" ಬರೆಯಲಾಯಿತು ಎಂದು ಅಷ್ಟೇ ತಿಳಿಸಲಾಗಿದೆ. ಈ ವಿವರಗಳು ಸರಿಯಾಗಿ ಹೊಂದಿಕೊಳ್ಳುವುದು–ಕ್ರಿ.ಶ. ೧೪೧೮ನೇ ಇಸವಿ ಮೇ ತಿಂಗಳ ೫ನೇ ತಾರೀಕಿಗೆ ಮಾತ್ರ. ವಿಳಂಬಿ ಸಂವತ್ಸರದ ವೃಷಭ ಮಾಸದ ೯ನೇ ದಿನವು ಕ್ರಿ.ಶ. ೧೪೭೮ರಲ್ಲಿ ಮಂಗಳವಾರ, ೧೫೩೮ರಲ್ಲಿ ಸೋಮವಾರ, ೧೫೯೮ರಲ್ಲಿ ಶನಿವಾರ, ೧೬೫೮ರಲ್ಲಿ ಶುಕ್ರವಾರ, ೧೭೧೮ರಲ್ಲಿ ಬುಧವಾರ, ೧೭೭೮ರಲ್ಲಿ ಮಂಗಳವಾರ ಬರುತ್ತದೆ. ಆದುದರಿಂದ ಮಧ್ಯ ಕಾಲೀನ ಕನ್ನಡ ಬರಹದಲ್ಲಿರುವ ಈ ಶಾಸನದ ಕಾಲವನ್ನು ಕ್ರಿ.ಶ. ೧೪೧೮ನೇ ಇಸವಿ ಮೇ ತಿಂಗಳ ೫ನೇ ತಾರೀಕು, ಗುರುವಾರವೆಂದು ನಿರ್ಣಯಿಸಬಹುದು.

### ಶಾಸನದ ಪೂರ್ಣ ಪಾಠ

೧ ವಿಳಂಬಿ ಸಂವತ್ಸರದ ವೃಷಭ ಮಾಸಂ ೯ನೆಯ ಗುರುವಾರದಲು ಶ್ರೀಮತು ಮಂ

೨ ಜೂಸೆಯರಾದ ಅವನಿ ಹೆಗ್ಗಡೆಯರು ದೊರೆಯಾಗಿ ಗೆಯಿದ ಕಾರ್ಯ್ಯ ಮತ್ತ

೩ ಪ್ಪುದುಂ ಅವನಿ ಹೆಗ್ಗಡೆಯರ ವಾಕ್ಯದಲು ಕುಞ ನಾಯಗ ವೊಡಹುಟ್ಟಿದ ದೇ

೪ ಉ ಸೆಟ್ಟಿತಿಯರು ಸಟ್ಟಿ ಸೆಟ್ಟಿ ಬಳಿಯ ಅಡಪ ವುಂಮು ಸೆಟ್ಟಿ ಅಳಿಯ ಬೆಳಿಯ

೫ ಜಾರು ಸೆಟ್ಟಿಗೆ ಬರದು ಕೊಟ್ಟ ಪತ್ರದ ಕ್ರಮವೆಂತೆಂದರೆ ಪೇಜಾರದಲೂ ಮಿ

೬ ತ್ತ ಕೋಟೆಯಲು ನಂಮ ಮೂಲ ಸುದೆಪಾಡಿಯ ಬಯಲು ಕುಳಕೆ ತಿಮರು ಯೆಂ ಮು

೭ ಬ ಗದೆ ಚೀತುವೆ ಬೀಟೆಕಾರು ಮುರ್ಱಲರಲಿಪ ಮೂಡಣ ಅದೇ ತ್ತಿಮರು ಬಿತ್ತುವ ಬಿ

೮ ದೆ ಕಾರು ಮು ೧ ಬೀರಬಲಯೆಂಬ ಗದೆ(ದ್ದೆ) ಬಿತ್ತುವ ಬಿದೆಕಾರು ಮುಳ ಸಾರಕರೆಗದ್ದೆ

೯ ಬಿತ್ತುವ ಬಿದೆಕಾರು ಮು೨ ಹೊಸತಿಮರು ಗದ್ದೆ೨ಗೆ ಬಿತ್ತುವ ಬಿದೆಕಾರು ಮು

೧೦ ೮ ಆದರಿ(ಂ)ದ ತೆಂಕಣ ಹೊಸತ್ತಿಮುರು ಬಿದೆಕಾರು ಮುಳ ಮನೆಯ ಮುಂದ

೧೧ ಣ ಬೆಟ್ಟಿನ ಗದೆ(ದ್ದೆ) ಬಿದೆಕಾರು ಮು೧ ಅಂತೂ ಬೆಳೆ ಯೆರಡಕ್ಕೆ ಬಿತು(ತ್ತು)ವ ಬಿದೆಕಾರು

೧೨ ಮು೧೩ ಆ ಠಾವಿಗೆ ವುಳ(ಳ್ಳ) ಚತುಸೀಮೆ ಸೇವಿಪಾದೆಯಿಂದ ಬಡಗಲೂ

–ಹಿಂಭಾಗ–

೧ ಯಳಾ(ಳ) ತಿಮರಿ(ಂ)ದ ಪಡುವಲೂ ಕುರ್ತ್ತೆಲು ತಿಮರಿಂದ ತೆಂಕಲು ಸುದೆಪ(ಪಾ)ಡಿಯ ಮನೆ ಬಾವಿಕ

೨ ರೆ ಮರ ತೆಂಗು ಹಲಸು ಮಾವಿನಮರ ಅಡಕೆಯ ಮರ ಸಹಿತ ತುಂಬೆ ನೆಕ್ಕಲು ಕಂಟೆಕದಿರು ಜ

೩ ಲ ಪಾಷಾಣ ನಿಧಿ ನಿಕ್ಷೇಪ ಸಹಿತ ಬಿಟ್ಟಾ (ಟ್ಟು) ಆರ್ವಾರವ ಮಡಗಿ ಕಡಂಗೊಂಡ ಮಂಗಲೂರ ಪರಿವ

೪ ರ್ತ್ತನೆಗೆ ಸಎವ ಸಂಣ ಪ್ರತಾಪಗ ೪೦೦ ಅಕ್ಷರದಲೂ ಸಂಣ ಪ್ರತಾಪ ಗದ್ಯಾಣಂ ನಾನ್ನೂ

೫ ರು ಸ(ಂ)ಣ ಪ್ರತಾ (ಪ) ಗದ್ಯಾಣ ಯೀ ಹೊನ್ನಿಗೆ ಬಡ್ಡಿ ಪ್ರತಿ ವರುಷವೊಂದಕ್ಕೆ ನಾಲ್ವತ್ತರ ಲೆಕ್ಕದ ಅ

೬ ಕ್ಕಿ ಮುಡೆ ೬೦ನು ಮೂಲಿಗ ಮಗನಡಸಿ ಬಾಳುವ ಅಡಕ ಬಡ್ಡಿ ವುಳಿದರೆ ಆರ್ವಾರಿಯಿಳಿದು

೭ ಬಾಳುವ ಅಡಕ ಮೂಲಿಗನಿಗೆ ಪ್ರತಿವರುಷ ವೊ(ಂ)ದಕ್ಕೆ ಮುಗು ಸಂಣ ಪ್ರತಾಪ ಗ೭ ನಡ

೮ ಸಿ ಬಾಳುವ ಅಡಕದೊಳಗೆ ಬಂದು ಆವ್ವಾ (೯) ರಡ(ದ) ತೋಟ ತೊಡಕು ಬಂದರೆ ಮೂಲಿಗರು ಪರಿಹ

೯ ರಿಸಿ ಕೊಡುವ ಅಡಕ ಯಿಂತಪ್ಪುದಕೆ ಸಾಕ್ಷಿಗಳು ಸಂ(ರ)ವುಳವುರವನು ಕುಂಜುರ ಮೇಲಂಟ ಧೇ

೧೦ ವರು ತಲಿಮುಗರ ಸಂಕರವುಗಳವುರವನು ಸಾಕ್ಷಿಗಳ ವೊಪ್ಪ ಅನಂತ ಸೇನಬೋವ(ನ) ಬರಹ

೧೧ ತಾಂಬ್ರ ಶಾಸನ ತೆಂಗಿನ ಕಾಯಿ ೧೬೦

(ಈ ಶಾಸನವನ್ನು ಸಮ್ಮೇಳನದಲ್ಲಿ ಪ್ರಸ್ತುತ ಪಡಿಸಲು ೨೮.೮.೨೦೦೫ರ ಪತ್ರದ ಮೂಲಕ ಅನುಮತಿ ಕೊಟ್ಟ ಮೂಡುಬಿದಿರೆ ಜೈನ ಮಠದ ಪಟ್ಟಾಚಾರ್ಯಭಾರತಭೂಷಣ ಸ್ವಸ್ತಿ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ಮಹಾಸ್ವಾಮಿಗಳಿಗೆ ಕೃತಜ್ಞತೆಗಳು.)



ಕು. ವನಜಾಕ್ಷಿ ಎನ್. ಭರಮಗೌಡರ*
ಡಾ. ರು.ಮ. ಷಡಕ್ಷರಯ್ಯ**

# ಮೇವುಂಡಿಯ ವಿಜಯನಗರೋತ್ತರ ಕಾಲದ ಹೊಸ ತಾಮ್ರಪಟ

ಗದಗ ಜಿಲ್ಲೆಯ ಅನೇಕ ಸ್ಥಳಗಳು ಐತಿಹಾಸಿಕವಾಗಿ ಪ್ರಾಮುಖ್ಯತೆಯನ್ನು ಪಡೆದಂತಹವುಗಳಾಗಿವೆ. ಇಲ್ಲಿಯವರೆಗೆ ಅನೇಕ ಪುರಾತತ್ವ ಅವಶೇಷಗಳು ಅಧ್ಯಯನವಾಗಿ ಪ್ರಕಟಣೆಗೊಂಡಿವೆ. ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಮೇವುಂಡಿ ಗ್ರಾಮದಲ್ಲಿ ಇತ್ತೀಚೆಗೆ ಪುರಾತತ್ವ ಸರ್ವೇಕ್ಷಣೆ ಯನ್ನು ಕೈಗೊಂಡಾಗ ಈ ಗ್ರಾಮದ ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಾರರಾದ ಶ್ರೀ ಬಸವರಾಜ ಪಾಟೀಲ ಎಂಬುವವರ ಮನೆಯಲ್ಲಿದ್ದ ತಾಮ್ರಪಟ ಶಾಸನವನ್ನು ಅವರಿಂದ ಪಡೆದುಕೊಂಡು ಅದನ್ನು ಅಧ್ಯಯನ ಮಾಡಿ ಪ್ರಸ್ತುತ ಪ್ರಬಂಧದಲ್ಲಿ ಇದರ ಕುರಿತು ಹೇಳಲಾಗಿದೆ.

ಮೇವುಂಡಿಯ ತಾಮ್ರಪಟ ಶಾಸನ ಮುಖ್ಯವಾಗಿ ಕ್ರಯ ಪತ್ರವನ್ನು ಬರೆಯಿಸಿಕೊಟ್ಟುದುದರ ದಾಖಲೆ ಆಗಿದೆ. ಈ ತಾಮ್ರಪಟ ಶಾಸನ ಮಾಸಿದಂತಿದ್ದು, ಅಲ್ಲಲ್ಲಿ ಅಕ್ಷರಗಳು ಅಳಿಸಿಹೋಗಿವೆ. ಇದರ ಉದ್ದ ೧೭ ಸೆಂ.ಮೀ. ಅಗಲ ೧೦ ಸೆಂ.ಮೀ. ಇದೆ. ಇದರ ಮೇಲು ಎಡಭಾಗ ಮುರಿದು ಹೋಗಿದೆ. ಮಧ್ಯದಲ್ಲಿ ಮೇಲೆ ಮತ್ತು ಕೆಳಗೆ ಸ್ವಲ್ಪ ಭಾಗ ತ್ರುಟಿತಗೊಂಡಿದೆ. ಇದರ ಎಡ ಅಂಚು ಅಲ್ಲಲ್ಲಿ ಬಗ್ಗಿದೆ. ಎರಡೂ ಕಡೆ ಅಕ್ಷರಗಳನ್ನು ಬರೆಯಲಾಗಿದೆ. ಒಟ್ಟು ೧೭ ಸಾಲುಗಳಿವೆ. ಒಂದು ಭಾಗದಲ್ಲಿ ೮ ಸಾಲುಗಳಿದ್ದು ಮತ್ತೊಂದು ಭಾಗದಲ್ಲಿ ಒಂಬತ್ತು ಸಾಲುಗಳಿವೆ. ಇದರಲ್ಲಿ ಬರೆದಂಥ ಅಕ್ಷರಗಳನ್ನು ಗಮನಿಸಿದಾಗ ಇದು ವಿಜಯ ನಗರೋತ್ತರ ಕಾಲಕ್ಕೆ ಸೇರಿದ್ದೆಂದು ಸ್ಪಷ್ಟವಾಗಿ ಹೇಳಬಹುದು. ಕ್ರಯಪತ್ರಕ್ಕೆ ಸಂಬಂಧಿಸಿದ ಈ ಶಾಸನದ ಇನ್ನುಳಿದ ಭಾಗ ಇದ್ದಿರಬಹುದು. ಕ್ರಯಪತ್ರವೇನೆಂದರೆ ದಾಖಲು ಪತ್ರ ಎಂದರ್ಥ. ಹಿಂದೆ ಭೂಮಿಯನ್ನು ದಾನವಾಗಿ ಕೊಡುವಾಗ ಅದಕ್ಕೆ ಸಾಕ್ಷಿಯಾಗಿ ಪತ್ರವನ್ನು ಬರೆಯಿಸಿಕೊಳ್ಳುತ್ತಿದ್ದರು. ಇಂದಿಗೂ ಕೂಡ ಈ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ನೋಡಬಹುದು. ಆದರೆ ಸ್ವಲ್ಪ ವ್ಯತ್ಯಾಸ ಕಂಡು ಬರುತ್ತದೆ. ಆದರೆ ಈ ಶಾಸನದಲ್ಲಿ ಭೂಮಿಗೆ ಸಂಬಂಧಿಸಿದವಾಗಲಿ, ಅಥವಾ ಇನ್ನಾವುದೇ ವಸ್ತುವಿಗಾಗಲಿ ಕ್ರಯಪತ್ರವಾಗಿರದೇ ಗೌಡಿಕೆಯನ್ನು ಬದಲಾವಣೆ ಮಾಡಿದುದರ ಕುರಿತು ಹೇಳುವ ದಾಖಲೆಯಾಗಿದೆ. ಗೌಡಿಕೆಯ ಬದಲಾವಣೆ ಅನೇಕ ಪ್ರಮುಖ ವ್ಯಕ್ತಿಗಳ ಸಾಕ್ಷಿಯಾಗಿ ಆಗಿರುವ ಸಾಧ್ಯತೆಯಿದೆ. ಏಕೆಂದರೆ ಇಲ್ಲಿ ಅನೇಕ ವ್ಯಕ್ತಿನಾಮಗಳನ್ನು ಉಲ್ಲೇಖಿಸಲಾಗಿದೆ.

ನೆಲವಾಡದ ದೇವಣ್ಣ ಕೊದಾಬೋಕಣ್ಣಾನಿಗೆ ಈ ಕ್ರಯಪತ್ರವನ್ನು ಬರೆಯಿಸಿಕೊಟ್ಟುದಾಗಿದೆ ಎಂದೂ ಇದಕ್ಕೆ ಗದ್ಯಾಣ ೮ ಮತ್ತು ಹನ್ನೆರಡು (೧೨) ವರಹಗಳನ್ನು ನೀಡಲಾಯಿತು. ಇದಕ್ಕೆ ಸಾಕ್ಷಿಯಾಗಿ ಹಾವನಗೌಡ, ತಳವಾರದ ಸಣ್ಣಮಲ್ಲಣ್ಣ, ಭೀಮಣ್ಣಗೌಡ, ತಳವಾರದ ಹಲಗಣ್ಣ, ಗವರಣ್ಣ, ಕೆರೆಕಡೆ ಹೊನ್ನಣ್ಣ ಇವನ ಮಾವ ಭೋವಿ ತಿಮ್ಮಣ್ಣ ಇವರ ಸನ್ನಿಧಾನದಲ್ಲಿ ಕೊಳಚಿ ತಿಮ್ಮರ ಸೈಯನ ಮಗ ಎಂದಿದ್ದು ಮುಂದಿನ ಎರಡು ಅಕ್ಷರಗಳು ಅಳಿಸಿವೆ. ಆನಂತರದಲ್ಲಿ ಮುದಿಯಣ್ಣ ಎಂದು ಹೇಳಿ ಶಾಸನ ಕೊನೆಗೊಂಡಿದೆ.

ಶಾಸನದಲ್ಲಿ ಉಲ್ಲೇಖಿತವಾಗಿರುವ ನೆಲವಾಡ ಎನ್ನುವುದು ಒಂದು ಗ್ರಾಮದ ಹೆಸರಾಗಿದ್ದಿರಬಹುದು. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಶಾಸನದ ಒಂದು ಭಾಗದ ಸಾಲುಗಳನ್ನು ಪ್ರಾರಂಭಿಸುವ ಮೊದಲು ಚಿಕ್ಕ ವೃತ್ತಗಳನ್ನು (ಸೊನ್ನೆ) ಉಪಯೋಗಿಸಿದ್ದಾರೆ. ಪ್ರಾಯಶಃ ಇದನ್ನು ಆಗ ಒಂದು ಚಿಹ್ನೆಯಾಗಿ ಉಪಯೋಗಿಸುತ್ತಿರಬಹುದು ಅಥವಾ ಸಾಲುಗಳನ್ನು ಗುರುತಿಸಲು ಉಪಯೋಗಿಸುತ್ತಿದ್ದ ಕ್ರಮವಾಗಿದ್ದಿರಬಹುದು. ಗೌಡಿಕೆಯ ಸಲುವಾಗಿ ನೀಡಿದ ೧೨ ವರಹಗಳನ್ನು ಸಂಖ್ಯೆಯಿಂದಲೂ ಜೊತೆಗೆ ಅಕ್ಷರಗಳಿಂದಲೂ ಬರೆಯಲಾಗಿದೆ.

ಈ ಶಾಸನದಲ್ಲಿ ತೇದಿಯಾಗಲಿ, ಅರಸನ ಹೆಸರಾಗಲಿ ಇಲ್ಲ. ಇದರಲ್ಲಿ ಬರೆದಂತಹ ಅಕ್ಷರಗಳ ಆಧಾರದಿಂದ ಇದೊಂದು ವಿಜಯನಗರೋತ್ತರ ಕಾಲಮಾನದ್ದೆಂದು ಹೇಳಬಹುದು.

* ಸಂಶೋಧನ ವಿದ್ಯಾರ್ಥಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ.
** ನಿರ್ದೇಶಕರು (ಕಾ/ನಿ) ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.



ಮೇವುಂಡಿಯ ಹೊಸ ತಾಮ್ರ ಶಾಸನದ ಮುಂಭಾಗ



ಮೇವುಂಡಿಯ ಹೊಸ ತಾಮ್ರ ಶಾಸನದ ಹಿಂಭಾಗ

ಈ ತಾಮ್ರಪಟ ಶಾಸನದ ಇತರೇ ಭಾಗಗಳು ಇದ್ದಿರ ಬಹುದಾಗಿದೆ. ಆದರೆ ಅವುಗಳು ಉಪಲಬ್ಧವಿಲ್ಲ. ಪ್ರಾಯಶಃ ಇದು ಮೂರನೆಯ ಅಥವಾ ಕೊನೆಯ ಭಾಗವಾಗಿರಬಹುದು. ದೊರೆತಂಥ ಇದೊಂದು ಭಾಗದಲ್ಲಿರುವ ಶಾಸನ ಪಾಠ ಇಂತಿದೆ :

**ಶಾಸನದ ಪಾಠ**

೧ ............................ಸಾ । ಶ್ರೀ.................

೨ ೦ ನೆಲವಾಡದ ದೇಮಂಣನೂ । ಕೊದಾಬೋಕಣನಿ

೩ ೦ಗೆ । ಬರೆಸಿಕೊಟ್ಟ ಕ್ರಯಪತ್ರದ ಕ್ರಮ ವೆಂ...............

೪ ೦ ನಾಲು ನಂಮ್ಮ ಅವಸರನಿಮಿತ್ಯವಾಗಿ

೫ ೦ ಣಯ ಆಪ್ರದ । ಗಲುಡಿಕ್ಕೆ। ನಂಮ್ಮ. (ಇ)

೬ ೦ ದ ಗದ್ಯಾಣ ೮ ಹಾಗಪಾಲು ಗ ೮। ಡಿಕ್ಕೆ ನು

೭ ೦ ಕೊಟ್ಟು । ನಿಂನ ಸಂಗಡ। ಯಿಸುಕಾ

೮ ೦ ಗಟ್ಟ ಗ ೧೨ ಹಂನೆರಡು ವರಹ ।

೯ ಹಂನೆರಡು ವರಹ । ಯಿದಕ್ಕೆ ಸಾಕ್ಷಿಗಳು..

೧೦ ರದ ಹಾವಣಗಲುಡ। ತಳವಾರದ ಸಂಣ್ಣ ।

೧೧ ಮಲಂಣ । ಭಮ್ಮಣಗಲುಡ । ತಳವರ ಸ್ತ.

೧೨ ರಯ ಲೈಯ । ಹಲಗಂಣ । ಕಘಲಕ ದ

೧೩ ಗಲುರಂಣ । ಕೆರೆಕಡೆ ಹೊಂನಂಣನ ಮೊಂವ

೧೪ ಬೊವಿ ತ್ತಿಮಂಣ। ಯಿಂತ್ತಿವರ ಸಂನ್ನ ತ್ತಾ.

೧೫ ದಾತ (ಕ) ಕೊಳಚಿ ತಿಂಮರಸ್ಯೆಯನ ಮಗ । ವೆಂ

೧೬ . . ಪತ್ರವಕೆ ಶ್ರೀಭತಗಳಿ ಮುದಿಯಂಣನ

೧೭ . . . ಶ್ರೀ ಮತು

ಶಾಸನ ತ್ರುಟಿತಗೊಂಡಿದ್ದರಿಂದ ಸಂಪೂರ್ಣ ಮಾಹಿತಿ ತಿಳಿದುಬರುವುದಿಲ್ಲ.

(ತಾಮ್ರಶಾಸನ ನೀಡಿದ ಮೇವುಂಡಿಯ ಶ್ರೀ ಬಸವರಾಜ ಪಾಟೀಲ ಇವರಿಗೆ ನನ್ನ ಕೃತಜ್ಞತೆಗಳು.)



ಡಾ. ರಾಜಶೇಖರ ಇಚ್ಚಂಗಿ*

# ಬೆಳಗಾವಿ ಜಿಲ್ಲೆಯ ಅಪ್ರಕಟಿತ ಕಸಮಳಗಿ ಶಾಸನ

ಕರ್ನಾಟಕದಲ್ಲಿರುವ ಒಟ್ಟು ಜೈನಸಮುದಾಯಗಳ ಪೈಕಿ ೭೫% ರಷ್ಟು ಜೈನಸಮುದಾಯ ಬೆಳಗಾವಿ ಜಿಲ್ಲೆಯಲ್ಲಿದ್ದು, ಬೆಳಗಾವಿ ಜಿಲ್ಲೆಯ ಅಧ್ಯಯನವೆಂದರೆ ಕರ್ನಾಟಕದ ಜೈನ ಸಮುದಾಯದ ಅಧ್ಯಯನವೇ ಆಗಿದೆ. ಇಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಇರುವ ತಾಮ್ರ ಹಾಗೂ ಶಿಲಾ ಶಾಸನಗಳಲ್ಲಿ ಬಹುತೇಕವಾಗಿ ಜೈನಸಮುದಾಯಕ್ಕೆ ಸಂಬಂಧಿಸಿದ ಅಪ್ರಕಟಿತ ಶಿಲಾಶಾಸನಗಳು ಬೆಳಕಿಗೆ ಬರುತ್ತಿವೆ. ಅಂಥವುಗಳಲ್ಲಿ ಕಸಮಳಗಿ [ತಾ॥ ಖಾನಾಪೂರ]ಯ ಶಿಲಾಶಾಸನವೂ ಒಂದಾಗಿದೆ.

ಪ್ರಪ್ರಥಮವಾಗಿ ಕಸಮಳಗಿಯ ಶಾಸನದ ಬಗ್ಗೆ ಬೆಳಕು ಚೆಲ್ಲಿದ ಶ್ರೇಯಸ್ಸು ಡ್ರಾ. ಬಿ.ಆರ್. ಹಂದೂರ ಅವರದು.[೧] ಅವರು : "ಖಾನಾಪೂರ ತಾಲೂಕು ಗೋಶಾನಟ್ಟಿ [ಮಂಗೇನ ಕೊಪ್ಪ] ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಬರುವ ಕಿತ್ತೂರ ಸಮೀಪದ ಕಸಮಳಗಿ ಗ್ರಾಮದಲ್ಲಿ ಗೋವಾ ಕದಂಬರ ಕಾಲದ ಅಂದರೆ ೧೧ನೇ ಶತಮಾನಕ್ಕೆ ಸೇರಿದ ಜೈನಧರ್ಮದ ೨೩ನೇ ತೀರ್ಥಂಕರರಾದ ಭಗವಾನ್ ಪಾರ್ಶ್ವನಾಥನ ಖಡ್ಗಾಸನದ ಸುಂದರ ಮೂರ್ತಿ ಪತ್ತೆಯಾಗಿದೆ. ಮೂರ್ತಿಯು ಪ್ರಭಾವಳಿ ಸಹಿತ ೩ ಅಡಿ, ೧೧ ಅಂಗುಲ ಎತ್ತರವಿದೆ. ೧ ಅಡಿ ೭ ಅಂಗುಲ ಅಗಲವಿದೆ. ಮೂರ್ತಿಯ ಬಲಪಾದದ ಹಿಂಬಡದಿಂದ ಸುರುಳಿಯಾಕಾರದ ಹಾವಿನ ಕೆತ್ತನೆಯಿದ್ದು, ತಲೆಯ ಮೇಲೆ ೭ ಹೆಡೆಗಳನ್ನು ಬಾಚಿಕೊಂಡಿದೆ. ಅದರ ಮೇಲೆ ಒಂದೇ ಪದರಿನಲ್ಲಿ ಕೆತ್ತಿದ ಮುಕ್ಕೊಡೆ ಇರುವುದು ಮೂರ್ತಿಯ ವಿಶೇಷ ಲಕ್ಷಣ ಎಂದು ಹೇಳಿದ್ದಾರೆ.

'ಮೂರ್ತಿಗೆ ಹೊಂದಿಕೊಂಡು ಹಿಂಭಾಗದ ಸುತ್ತಲೂ ಕಲಾತ್ಮಕವಾಗಿ ಕೆತ್ತಿದ ಸ್ತಂಭಾಕಾರದ ಮಂಟಪವಿದೆ; ಮೂರ್ತಿಯ ಎಡಬದಿಯಲ್ಲಿ ಪಾರ್ಶ್ವನಾಥನ ಯಕ್ಷಿಯಾದ ಪದ್ಮಾವತಿಯ ಹಾಗೂ ಬಲಬದಿಯಲ್ಲಿ ಯಕ್ಷನಾದ ಧರಣೇಂದ್ರನ ಲಲಿತಾಸನದ ಸುಂದರ ಮೂರ್ತಿಗಳಿರುವು ದರಿಂದ ಇದನ್ನು ಭಗವಾನ್ ಪಾರ್ಶ್ವನಾಥ ತೀರ್ಥಂಕರರ ಮೂರ್ತಿ" ಎಂದೂ ಗುರುತಿಸಿದ್ದಾರೆ.



ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಕಸಮಳಗಿ ಗ್ರಾಮದಲ್ಲಿ ದೊರೆತ ೧೧ನೇ ಶತಮಾನದ ಪಾರ್ಶ್ವನಾಥ ಮೂರ್ತಿ

ಮೂರ್ತಿಯ ಪಾದಪೀಠದಲ್ಲಿ ಕ್ರಿ.ಶ. ೧೧ನೇ ಶತಮಾನದ ಹಳೆಗನ್ನಡ ಲಿಪಿಯ ನಾಲ್ಕು ಚರಣಗಳ ಶಾಸನವಿದ್ದು, ಅವರು ನೀಡಿದ ಮೂಲ ಪಠ್ಯ ಇಂತಿದೆ. "ಶ್ರೀಮೂಲಸಂಘ ಬಳೆಗಾರ ಘನ[ಗಣ]ದ ಶೆಮ್ಮೆ [ಶಮ್ಯ] ಸಾಗಿಯ ಬಸದಿಯ ತ್ರಿಭುವನ ಚಂದ್ರಪ್ರಭ ಮುನಿಯ ಶಿಷ್ಯ ಮಾಡಿಸಿದ ತೀರ್ಥಂಕರಮೂರ್ತಿ"

* "ಚೈತ್ರ", ವಿವೇಕಾನಂದನಗರ, ಹುಕ್ಕೇರಿ ೫೯೧ ೩೦೯. ಜಿ॥ ಬೆಳಗಾವಿ.

–ಎಂದು ಓದಿದ್ದಾರೆ "ಮೂಲ ಸಂಘದ ಬಳೆಗಾರ ಗಣದ ಶೆಮ್ಮೆ [ಶಮ್ಮ] ಸಾಗಿಯ ಬಸದಿಯನ್ನು ತ್ರಿಭುವನ ಚಂದ್ರಪ್ರಭಮುನಿಯ ಶಿಷ್ಯ ಮಾಡಿಸಿದ ಪ್ರತಿಮೆಯಿದು ಎಂಬ ಅರ್ಥವನ್ನು ಈ ಶಾಸನದ ಬರಹ ನೀಡುತ್ತದೆ ಎಂದಿದ್ದಾರೆ.

ಶ್ರೀಮತಿ ಹನುಮಾಕ್ಷಿಗೋಗಿ ಅವರು ಕಸಮಳಗಿಯ ಶಾಸನವನ್ನು ಕುರಿತು ತಮ್ಮ ಅಪ್ರಕಟಿತ ಲೇಖನದಲ್ಲಿ, ಪತ್ರಿಕಾ ವರದಿಯನ್ನು ನೋಡಿ. ಡಾ. ಬಾಹುಬಲಿ ಹಂದೂರ ಅವರನ್ನು ಸಂಪರ್ಕಿಸಿದಾಗ ಫೋಟೋ ಮತ್ತು ಶಾಸನದ ಪಡಿಯಚ್ಚುಗಳನ್ನು ಕಳುಹಿಸಿಕೊಟ್ಟರು. ಅದರ ಪಠ್ಯವನ್ನು ಸಿದ್ಧಪಡಿಸಿದೆ ಎಂದು ಹೇಳಿದ್ದಾರೆ. ಆದರೆ ಅವರು ತಮ್ಮ ಅಪ್ರಕಟಿತ ಲೇಖನದಲ್ಲಿಯೂ ಹೇಳಿಲ್ಲದಿರುವುದು ಇಂತಿವೆ :

೧) ಕೆಶರ್ಮಣಗೆಯ ಬಸದಿಯನ್ನು ಶಮ್ಮ ಸಾಗಿಯ ಬಸದಿ [ಪ್ರ.ವಾ. ೨೭–೪–೦೫] ಅಥವಾ ಶೆಮ್ಮೆ ಸಾಗಿಯ ಬಸದಿ. [ಸಂ.ಕ. ೨೮–೪–೦೫] ಎಂದು ಹೇಳಿರುವುದು

೨) ತ್ರಿಭುವನ ಚಂದ್ರಪ್ರಭ ಮುನಿಯ ಶಿಷ್ಯ ಯಾರು? ಎಂದು ಉಲ್ಲೇಖಿಸದೆ ಇರುವುದು.

೩) ಶ್ರೀ ಮೂಲಸಂಘದ ಬಳಗಾರ ಗಣವನ್ನು ಬಳೆಗಾರ ಗಣ [ಕುಲ] ಎಂದು ಗುರುತಿಸಿರುವುದು.

ಶ್ರೀಮತಿ ಹನುಮಾಕ್ಷಿಗೋಗಿ ಅವರು ಮುಂದುವರಿದು ಡಾ. ರು.ಮ. ಷಡಕ್ಷರಯ್ಯನವರು [ದಿ ೩–೫–೦೫ ರ ಸಂ.ಕ. ದಿನ ಪತ್ರಿಕೆ] ನೀಡಿದ ಮೂಲ ಪಠ್ಯವು "ಶ್ರೀ ಮೂಲಸಂಘ ಬಳಗಾರ ಗಣದ ಕೇಶರ್ಮಣಗೆಯ ಬಸದಿಯ ತ್ರಿಭುವನ ಚಂದ್ರ ಭಟ್ಟಾರರ ದೇವರ ಗುಡ್ಡಕ್ಕೆ ಹಮಸೆಟ್ಟಿ ಮಾಡಿಸಿದ ಪ್ರತುಮೆ" ಆಗಿದೆ ಎಂದಿದ್ದಾರೆ.

ಶ್ರೀಮತಿ ಹನುಮಾಕ್ಷಿ ಗೋಗಿ ಅವರು ತಮ್ಮ ಅಪ್ರಕಟಿತ ಲೇಖನದಲ್ಲಿ ಆ ಪಠ್ಯದ ಪರಿಷ್ಕೃತ ಪಾಠವನ್ನು ಈ ಕೆಳಗಿನಂತೆ ಕೊಟ್ಟಿದ್ದಾರೆ.

"ಶ್ರೀ ಮೂಲಸಂಘ ಬಳಗಾಱ ಗಣದ ಕೆಶರ್ಮ್ಮಣಗೆಯ ಬಸದಿಯ ತ್ರಿಭುವನ ಚಂದ್ರ ಭಟ್ಟಾರಕದೇವರ ಗುಡಂ[ಡ್ಡಂ] ಕೈಹಮಸೆಟ್ಟಿ ಮಾಡಿಸಿದ ಪ್ರತುಮೆ" ಎಂದು ಓದಿದ್ದಾರೆ. ಅದರಲ್ಲಿ ಅವರು "ಜೈನ ಧರ್ಮದ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಯಾಪನೀಯ ಮೂಲ ಸಂಘ ದಲ್ಲಿರುವ ಒಂದು ಗಣ ಬಳಗಾಱಗಣ. ಈ ಬಳಗಾಱ ಗಣಕ್ಕೆ ಸೇರಿದ ಬಸದಿಗಳಲ್ಲೊಂದು ಕೆಶರ್ಮ್ಮಣಗೆಯ ಬಸದಿ. ಈ ಬಸದಿಯಲ್ಲಿ ಸ್ಥಾನಾಚಾರ್ಯನಾಗಿದ್ದ ಜೈನಯತಿ ತ್ರಿಭುವನ ಚಂದ್ರಭಟ್ಟಾರಕ ದೇವರು. ಅವರ ಶಿಷ್ಯನಾದ ಕೈಹಮಸೆಟ್ಟಿ ಎನ್ನುವವನು ಮಾಡಿಸಿದ್ದ ಈ ಪ್ರತಿಮೆ ಎಂಬ ಅರ್ಥವನ್ನು ಶಾಸನದ ಬರಹ ನೀಡುತ್ತದೆ, ಎಂದಿದ್ದಾರೆ. ಅಲ್ಲದೆ ಅವರು ಸ್ಥಳನಾಮಗಳ ಕುರಿತು ಹೇಳುತ್ತ "ಈ ಬಸದಿಯಿರುವ ಊರಿನ ಹೆಸರು ಕೆಶರ್ಮ್ಮಣಗೆ. ಈ ಮೂಲ ಹೆಸರು ರೂಪಾಂತರಗೊಳ್ಳುತ್ತ ಕೆಶರ್ಮ್ಮಣಗೆ>ಕೆಸರ್ಮ್ಮಣಗೆ> ಕೆಸರ್ಮಣಗೆ>ಕೆಸಮಳಗೆ>ಕಸಮಳಗೆ>ಕಸಮಳಗಿ ಎಂದು ಈಗಿನ ಹೆಸರನ್ನು ಪಡೆದಿದೆ. ಕೆಶರ್ಮ್ಮಣಗೆ ಎಂದರೇ ಶಾಸನ ಸಹಿತ ವಿಗ್ರಹ ದೊರೆತ ಊರು ಕಸಮಳಗಿಯೇ ಆಗಿದೆ ಎಂದಿದ್ದಾರೆ.

ಇದರ ವ್ಯುತ್ಪತ್ತಿಯನ್ನು ಕೆಶರ್ಮ್ಮಣನ+ ಕೆಯ್ ಎಂದು ಬಿಡಿಸಿ ಪೂರ್ವಪದ ವ್ಯಕ್ತಿವಾಚಕವಾಗಿದ್ದು, ಉತ್ತರಪದ ಸ್ಥಳವಾಚಕವಾಗಿದೆ. ಕೆಯ್>ಗೆ ಎನ್ನುವ ಪದ 'ನೆಲೆ' ಎನ್ನುವ ಅರ್ಥವನ್ನು ಪಡೆದುಕೊಳ್ಳುತ್ತದೆ ಎಂದು ಸ್ಥಳನಾಮಗಳ ವಿಜ್ಞಾನಿಗಳ ಉದಾಹರಣೆ ಸಮೇತ ವಿವರಿಸಿರುತ್ತಾರೆ. ಕೆಶರ್ಮ್ಮಣ ಎನ್ನುವ ಹೆಸರಿನ ವ್ಯಕ್ತಿ ವಾಸಿಸುವನೆಲೆ ಈ ಊರು ಎನ್ನುವ ಅರ್ಥದಲ್ಲಿ ಕೆಶರ್ಮಣಗೆ ಎಂಬ ಹೆಸರು ಬಂದಿದೆ ಎಂದಿದ್ದಾರೆ. ಅವರ ವಿಚಾರಕ್ಕೆ ಪೂರಕವೆನ್ನುವಂತೆ ಲಕ್ಷ್ಮೇಶ್ವರದಲ್ಲಿ ದೊರೆಯುವ ಚಾಲುಕ್ಯ ದೊರೆ ಎಱೆಯಮ್ಮನ [ಕ್ರಿ.ಶ. ಸು. ೬೦೦] ಸಂಸ್ಕೃತ ಶಾಸನದಲ್ಲಿ 'ಪುಲಿಗೆಱೆ' ಯೆಂಬ ರೂಪಕಂಡುಬರುತ್ತದೆ. 'ಲಕ್ಷ್ಮಣ' ಅಥವಾ 'ಲಕ್ಷ್ಮರಸ' ನೆಂಬವನು ತನ್ನ ಹೆಸರಿನ ಶಿವಾಲಯವನ್ನು ನಿರ್ಮಿಸಿ ಅದಕ್ಕೆ 'ಲಕ್ಷ್ಮೇಶ್ವರ' ಅಥವಾ 'ಲಕ್ಷ್ಮಣೇಶ್ವರ' ಎಂದು ನಾಮಕರಣ ಮಾಡಿರಬೇಕು. ಪ್ರಾಚೀನ ಪುಲಿಗೆಱೆಯ ಹೆಸರು 'ಲಕ್ಷ್ಮೇಶ್ವರ' ವೆಂದು ಪರಿವರ್ತನೆಗೊಂಡಿರಬೇಕು. ಈ ಹಿನ್ನೆಲೆಯಲ್ಲಿ ಕೆಶರ್ಮ್ಮಣ ಎನ್ನುವ ಹೆಸರಿನ ವ್ಯಕ್ತಿ ನಿರ್ಮಿಸಿದ ಬಸದಿಗೆ ಕೆಶರ್ಮ್ಮಣಗೆಯ ಬಸದಿ' ಎಂದು ಕರೆಯುತ್ತಿರಬೇಕು ಅದೇ ಹೆಸರು ಆ ಊರಿಗೆ ಬಂದಿರಬೇಕು *[ಲಕ್ಷ್ಮೇಶ್ವರದ ಶಾಸನಗಳು– ಶ್ರೀ ಎಂ.ಬಿ. ಬೋಯಿ. ಪು.ಸಂ. ೧೦.೧೧]*

ಇಲ್ಲಿ ಪ್ರತಿಮೆ ಮಾಡಿಸಿದ ವ್ಯಕ್ತಿಯ ಹೆಸರನ್ನು ಡಾ. ರು.ಮ. ಷಡಕ್ಷರಯ್ಯನವರು ಓದಿದಂತೆ 'ಹಮಸೆಟ್ಟಿ' ಎಂದಿರದೆ 'ಕೈಹಮಸೆಟ್ಟಿ' ಎಂದು ಶ್ರೀಮತಿ ಹನುಮಾಕ್ಷಿಗೋಗಿ ಅವರು ಓದಿದ್ದಾರೆ. ಇಲ್ಲಿ ಅವರು ರನ್ನನ ಗದಾಯುದ್ಧದಲ್ಲಿ ಬರುವ ಸಂದರ್ಭವನ್ನು ನೆನಪಿಸುತ್ತ "ರಣರಂಗದಲ್ಲಿ ದ್ರೋಣಾ ಚಾರ್ಯರು ಪಾಂಡವರ ಪಕ್ಷಪಾತಿಯಾಗಿ ಹೋರಾಡಿ ಮಡಿದ ಸಂದರ್ಭದಲ್ಲಿ ಧುರ್ಯೋಧನನು [ದ್ರೋಣ–ಅಶ್ವತ್ಥಾಮರ] ಕುರಿತು 'ಕೈಪೆಸೋರೆ ಕುಡಿಯೇಂ, ಮಿಡಿಯೇಂ' ಎಂದು ವ್ಯಂಗ್ಯವಾಗಿ ಹೇಳುವ ಮಾತನ್ನು ಉದಾಹರಿಸುತ್ತಾರೆ. ಕೈಪೆ+ಅಮ್ಮ+ಸೆಟ್ಟಿ> ಕೈಪಮಸೆಟ್ಟಿ> ಕೈಹಮಸೆಟ್ಟಿ ಎಂದು ರೂಪಾಂತರಗೊಂಡಿರುವುದಾಗಿ ಹೇಳುತಾರೆ. ಡಾ. ಶ್ರೀನಿವಾಸ ಪಾಡಿಗಾರ ಡಾ.ಎ.ಫ್ಹಿ. ನಾಗನೂರ ಮುಂತಾದ ವಿದ್ವಾಂಸರು ಇದನ್ನು 'ಕೈಹೆಮಸೆಟ್ಟಿ' ಎಂದು ಓದಿದ್ದಾರೆ. ಆದರೆ

ಶ್ರೀಮತಿ ಗೋಗಿ ಅವರ ಪರಿಷ್ಕೃತ ಪಾಠದ ಭಾಗವಾದ 'ಗುಡಂ[ಡ್ಡಂ] ಕೈಹಮಸೆಟ್ಟಿ' ಎಂಬುದನ್ನು 'ಗುಡಂ[ಡ್ಡ] ಕೈಪೆಮಸೆಟ್ಟಿ' ಎಂದು ಓದಬಹುದಾಗಿದೆ. ಶ್ರೀ ಮೂಲಸಂಘ ಬಳಗಾರ ಗಣದ ಕೆಸರ್ಮ್ಮಣಗೆಯ ಬಸದಿಯನ್ನು ತ್ರಿಭುವನ ಚಂದ್ರ ಭಟ್ಟಾರಕದೇವರ ಗುಡ್ಡ [ಶಿಷ್ಯ]ನಾದ ಕೈಪೆಮಸೆಟ್ಟಿ ಎಂಬವನು ಮಾಡಿಸಿದ ಪ್ರತಿಮೆಯಿದು ಎಂಬ ಅರ್ಥವನ್ನು ಈ ಶಾಸನ ಕೊಡುತ್ತದೆ. .

ಅಲ್ಲದೆ 'ಕೈಹಮಸೆಟ್ಟಿ' ಶಬ್ದದ ವ್ಯುತ್ಪತ್ತಿಯು ಕೈಪೆ+ ಅಮ್ಮ+ಸೆಟ್ಟಿ>ಕೈಪೆಮಸೆಟ್ಟಿ>ಕೈಹೆಮಸೆಟ್ಟಿ>ಕೈಹಮಸೆಟ್ಟಿ> ಹಮಸೆಟ್ಟಿ ಎಂದು ರೂಪಾಂತರಗೊಂಡಿರಬೇಕು ಎನ್ನ ಬಹುದು. ಒಟ್ಟಿನಲ್ಲಿ ೧೧ನೇ ಶತಮಾನದ ಗೋವಾ ಕದಂಬರ ಕಾಲದಲ್ಲಿ ಕೈಪೆಮಸೆಟ್ಟಿ, ಕೈಹೆಮಸೆಟ್ಟಿ, ಕೈಹಮಸೆಟ್ಟಿ, ಹಮಸೆಟ್ಟಿ ಮುಂತಾದ ಅಪರೂಪದ ವ್ಯಕ್ತಿನಾಮಗಳು ಪ್ರಚಲಿತವಾಗಿದ್ದ ವೆಂದು ಹೇಳಬಹುದು.

ಇನ್ನು ಕವಿ ರನ್ನ ಬಳಗಾಱಗಣ(ಕುಲ)ಕ್ಕೆ ಸೇರಿದವ ನಾಗಿದ್ದನೆಂಬುದು ಸರ್ವವಿದಿತವೆಂದು ಶ್ರೀಮತಿ ಹನುಮಾಕ್ಷಿ ಗೋಗಿ ಅವರು ತಮ್ಮ ಅಪ್ರಕಟಿತ ಲೇಖನದಲ್ಲಿ ಹೇಳಿದ್ದಾರೆ. ಅಜಿತಪುರಾಣದಲ್ಲಿ [೧೨-೪೫] ಆತನು 'ಬಳೆಗಾಱರ ಕುಲದೊಳೆಸೆವ' ಎಂದು ತನ್ನ ಜೀವನೋಪಾಯದ ಬಗ್ಗೆ ಹೇಳದೆ ತಾನು ಬಳಗಾಱ (ಏಳಗಾಱ, ಬಲಕರ, ಬಲಾತ್ಕಾರ) ಗಣಕ್ಕೆ ಸೇರಿದವನೆಂದಿರಲು, ಆತನು ಬಳೆಮಾರುತ್ತಿದ್ದನೆಂಬ ಅರ್ಥವನ್ನು ಆ ಪದ್ಯಕ್ಕೆ ಕೊಡುವುದು ಅಷ್ಟು ಸಮಂಜಸವಾಗ ಲಾರದು ಎಂದೂ, ಆತ ಬಳಗಾಱರ ಗಣದವನಾಗಿದ್ದು, ಜಿನಶಾಸನಮಂ ಬೆಳಗಿದನೆಂದು ಅರ್ಥ ಮಾಡುವುದು ಉಚಿತವೆಂದು *[ಬಾ.ರಾ. ಗೋಪಾಲ್ ಅವರು, ಕವಿ ರನ್ನನು ಬಳೆಗಾರ ಕುಲದವನೇ? (ಪ್ರ.ಕ. ೪೦-೪ ಪುಟ ೮೧-೮೨)]* ಹೇಳಿದ್ದಾರೆ ಆದರೆ ರನ್ನನೇ ತನ್ನನ್ನು 'ವಣಿಕ್ಕುಳಾರ್ಕ'ನೆಂದೂ [ಅ.ಜಿ.ಪು ೧೨೪೪] 'ವೈಶ್ಯ ಧ್ವಜ'ನೆಂದೂ [೧೨-೪೧] ಹೇಳಿಕೊಂಡಿರು ವುದು ಅದು ವೃತ್ತಿ ವಾಚಕವೆ ಹೊರತು ಜೈನಸಂಪ್ರದಾಯದ ಗುಣವಾಚಕವಲ್ಲವೆನ್ನಬಹುದು[೨]

ಈ ಮೇಲ್ಕಾಣಿಸಿದ ಚರ್ಚೆಯಿಂದ ಈ ಕೆಳಗಿನ ಅಂಶಗಳು ಗಮನಕ್ಕೆ ಬರುತ್ತವೆ :

೧) ಕಸಮಳಗಿ ೧೧ನೆಯ ಶತಮಾನದ ವೇಳೆಗೆ ಜೈನಬಸದಿಯುಳ್ಳ ಕ್ಷೇತ್ರವಾಗಿತ್ತು. ೨) ಕಸಮಳಗಿಯ ಪ್ರಾಚೀನ ರೂಪ ಕೆಶರ್ಮ್ಮಣಗೆ. ೩) ಮೂಲಸಂಘ, ಬಳಗಾಱಗಣಗಳ ಉಲ್ಲೇಖವನ್ನು ಶಾಸನ ಒಳಗೊಂಡಿದೆ. ೪) ಕೈಪೆಮಸೆಟ್ಟಿ, ಕೈಹೆಮಸೆಟ್ಟಿ, ಕೈಹಮಸೆಟ್ಟಿ, ಹಮಸೆಟ್ಟಿ ಎನ್ನುವ ಅಪರೂಪದ ವ್ಯಕ್ತಿನಾಮಗಳು ಪ್ರಚಲಿತವಾಗಿದ್ದವು. ೫) ಕರ್ನಾಟಕದಲ್ಲಿ ಬಾಹುಬಲಿ ನಂತರ ಪಾರ್ಶ್ವನಾಥ ತೀರ್ಥಂಕರ ಬಸದಿಗಳು ಹೆಚ್ಚಾಗಿ ಪ್ರತಿಷ್ಠಾಪನೆಗೊಂಡು ಪೂಜಿಸಲ್ಪಟ್ಟಂತೆ, ಇಲ್ಲಿ ಪೂಜಿಸಲ್ಪಡುತ್ತಿತ್ತೆಂದು ತಿಳಿದುಬರುತ್ತದೆ.

ಒಟ್ಟಿನಲ್ಲಿ ಜೈನಧರ್ಮ ಜೈನಮುನಿ ಗುರುಪರಂಪರೆ ಜೈನ ಪ್ರತಿಮಾಶಾಸ್ತ್ರ, ವ್ಯಕ್ತಿನಾಮ ಸ್ಥಳನಾಮಗಳ ಅಧ್ಯಯನ ಮಾಡುವವರಿಗೆ ಮೂಲ ಆಕರಗಳನ್ನು ಈ ಶಾಸನ ಸಹಿತ ವಿಗ್ರಹವು ಒದಗಿಸುತ್ತದೆ.

ಹೀಗೆ ಬೆಳಗಾವಿ ಜಿಲ್ಲೆಯಲ್ಲಿ ಬೆಣವಾಡ ಅಮ್ಮಣಗಿ, ಕಣಗಲಿ, ಬೆಳವಡಿ, ಕುಲವಳ್ಳಿಯಲ್ಲಿ ಅನೇಕ ಅಪ್ರಕಟಿತ ಶಾಸನಗಳಿದ್ದು ಅವೆಲ್ಲವೂ ಒಂದೆಡೆ ಸಂಗ್ರಹವಾಗಿ 'ಬೆಳಗಾವಿ ಜಿಲ್ಲೆಯ ಸಮಗ್ರ ಶಾಸನ ಸೂಚಿ' ಹೊರಬರಬೇಕಾಗಿದೆ.

(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮೂಲ ಆಕರಗಳನ್ನು ಒದಗಿಸಿ ಸಹಾಯ ಸಹಾಕಾರ ನೀಡಿದ ಡಾ. ಬಿ.ಆರ್. ಹಂದೂರ, ಶ್ರೀಮತಿ ಹನುಮಾಕ್ಷಿಗೋಗಿ ಹಾಗೂ ಸೂಕ್ತ ಮಾರ್ಗದರ್ಶನ ನೀಡಿದ ನನ್ನ ವಿದ್ಯಾಗುರುಗಳಾದ ಡಾ. ಎಂ.ಎಂ. ಕಲಬುರ್ಗಿ, ಡಾ. ಬಿ.ವ್ಹಿ. ಶಿರೂರ ಅವರಿಗೆ ಋಣಿಯಾಗಿರುವೆ).



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕಸಮಳಗಿಯ ಶಾಸನವನ್ನು ಕುರಿತು ಪ್ರಜಾವಾಣಿ, ಸಂಯುಕ್ತಕರ್ನಾಟಕ, ವಿಜಯಕರ್ನಾಟಕ ಪತ್ರಿಕೆಗಳಲ್ಲಿ [ಫೋಟೋ ಸಮೇತ] ವರದಿಗಳು ಪ್ರಕಟಗೊಂಡಿವೆ. ಅವುಗಳಲ್ಲಿ 'ಹನ್ನೊಂದನೇ ಶತಮಾನದ ಪಾರ್ಶ್ವನಾಥ ಪತ್ತೆ' [ಪ್ರ.ವಾ ೨೭-೪- ೦೫] ಹಾಗೂ "೧೧ನೇ ಶತಮಾನದ ಪಾರ್ಶ್ವನಾಥ ಮೂರ್ತಿಪತ್ತೆ" [**ಸಂಯುಕ್ತ ಕರ್ನಾಟಕ** ೨೮-೪-೦೫] ಎನ್ನುವ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿವೆ.

೨. **'ರನ್ನ ಇತಿವೃತ್ತ'** ಪುಟ. ೫೮೪-ಎನ್.ಎಸ್. ತಾರಾನಾಥ ಕನ್ನಡ ಅಧ್ಯಯನ ಸಂಸ್ಥೆಯ **"ಕನ್ನಡಸಾಹಿತ್ಯ ಚರಿತ್ರೆ"** [೨ನೇ ಸಂಪುಟ], ಮೈಸೂರು ವಿ.ವಿ. ೧೯೭೬.

೩. **'ತಿರುಳ್ಗನ್ನಡನಾಡು ಪುಲಿಗೆರೆ'** (ಸಂ): ಶ್ರೀಸದಾನಂದ ಕನವಳ್ಳಿ ಶ್ರೀ ಸಿ.ವಿ. ಕೆರಿಮನಿ. ಪಂಪ ಪ್ರಕಾಶನ ಲಕ್ಷ್ಮೇಶ್ವರ, ೧೯೭೨.

ಪ್ರೊ. ಎಂ.ಎಸ್. ನರೇಗಲ್ಲ*

# ಕಳಚೂರಿ ದೊರೆ ಸೋವಿದೇವನ (೧೧೬೮-೧೧೭೭) ಲಕ್ಷ್ಮೇಶ್ವರದ ಅಪ್ರಕಟಿತ ಶಾಸನ

ಕಲಚೂರಿ ವಂಶಕ್ಕೆ ಸಾಮಾನ್ಯವಾಗಿ ಕಲಚೂರಿ ಎಂಬ ಪದವನ್ನು ಉಪಯೋಗಿಸಿದರೂ ಕೂಡಾ ಕಟಚೂರಿ, ಕಲಟ್ಸೂರಿ, ಕಟಟ್‌ಚೂರಿ, ಕಲಿಚೂರಿ ಎಂಬ ಪದಗಳು ಶಾಸನಗಳಲ್ಲಿ ಕಂಡು ಬಂದಿವೆ.

ಕ್ರಿ.ಶ.೧೧೭೪ರ ಬಂದಳಿಕೆ ಶಾಸನದಲ್ಲಿ ಕಲಚೂರಿ ಎಂಬ ಪದದ ಉಗಮದ ವಿವರಣೆ ಇದೆ. ಕ್ರಿ.ಶ. ೧೧೭೦ರ ರಾಯಮುರಾರಿ ಸೋವಿದೇವನ ಕಾಲದ ಹರಿಹರ ಶಿಲಾಶಾಸನದಲ್ಲಿ ಶಿವನಿಂದ ಈ ಸಂತತಿ ಉದ್ಭವಿಸಿತು ಎಂದು ತಿಳಿದುಬಂದಿದೆ. ಕಲಚೂರಿಯವರ ಬಗ್ಗೆ ಮೊದಲ ಉಲ್ಲೇಖಗಳು ಶಕೆಗಳಿಲ್ಲದ ನೆರೂರು ತಾಮ್ರಶಾಸನದಲ್ಲಿಯೂ, ಮಂಗಲೇಶನ ಕ್ರಿ.ಶ. ೬೦೨ರ ಮಹಾಕೂಟ ಶಿಲಾಶಾಸನದಲ್ಲಿಯೂ ಹಾಗೂ ೬೩೪ರ ಇಮ್ಮಡಿ ಪುಲಕೇಶಿಯ ಐಹೊಳೆ ಪ್ರಶಸ್ತಿಯಲ್ಲಿಯೂ ಕಂಡುಬರುತ್ತವೆ. ಕ್ರಿ.ಶ. ೧೧೬೩ರ ಕಲ್ಲಿವಾಡ ಶಾಸನ, ೧೧೬೨ರ ಹರಿಹರ ಶಾಸನ ಮತ್ತು ೧೧೭೦ರ ಬಿಜಾಪೂರ ಜಿಲ್ಲೆಯ ಮುತ್ತಿಗೆ ಶಾಸನಗಳು ಕಲಚೂರಿ ವಂಶದ ರಾಜಕೀಯ ಏಳು-ಬೀಳುಗಳನ್ನು ವಿವರಿಸುತ್ತವೆ.

ಲಕ್ಷ್ಮೇಶ್ವರದ ಸೋಮನಾಥ ದೇವಾಲಯದ ಆವರಣದಲ್ಲಿ ಹಂಪಿ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ॥ ಡಿ.ವಿ. ಪರಮಶಿವಮೂರ್ತಿಯವರ ಮಾರ್ಗದರ್ಶನದಲ್ಲಿ ಕ್ಷೇತ್ರಕಾರ್ಯ ಕೈಕೊಂಡ ಸಮಯದಲ್ಲಿ ಕಳಚೂರಿ ವಂಶದ ದೊರೆ ಸೋವಿದೇವನ ಶಾಸನವು ದೊರೆತಿದೆ. ಈ ಶಾಸನದ ಕಾಲ ಶಾಲಿವಾಹನ ಶಕೆ ೧೯೦೮ ಇದ್ದು, ಅದು ಕ್ರಿ.ಶ. ೧೧೭೬ ಎಂದಾಗುತ್ತದೆ ದುರ್ಮುಖಿ ಸಂವತ್ಸರದ ಶಿವರಾತ್ರಿ ದಿನ ಈ ಶಾಸನವನ್ನು ರಚಿಸಲಾಗಿದೆ. ಈ ಶಾಸನವು ೫ ಅಡಿ ಉದ್ದ, ೨ ಅಡಿ ಅಗಲವಿದೆ ಮತ್ತು ಒಂದು ಇಂಚು ದಪ್ಪ ಅಕ್ಷರವುಳ್ಳ ೪೯ ಸಾಲುಗಳನ್ನು ಹೊಂದಿದೆ.

ಈ ಶಾಸನವು ಸಾಮಾನ್ಯ ಪದ್ಯದಿಂದ ಆರಂಭವಾಗಿದೆ. ಇದರಲ್ಲಿ ಸೋಮೇಶ್ವರನ ಹೊಗಳಿಕೆ, ಬಿರುದುಗಳು ಹಾಗೂ ಆತನ ರಾಣಿ ಧಾರಲದೇವಿಯ ಉಲ್ಲೇಖವಿದೆ. ಕಳಚೂರಿಗಳ ಹಿಂದಿನ ಎಲ್ಲ ಶಾಸನಗಳಲ್ಲಿ ಪಟ್ಟದರಸಿ ಸವಲದೇವಿ ಸಂಗೀತ ಪ್ರೇಮಿಯಾಗಿದ್ದಳು ಎಂದೂ ಈಕೆಯ ತಂಗಿ ಬವಲಾದೇವಿ ಗಾನನೃತ್ಯ ಪಾರಂಗತೆಯಾಗಿದ್ದಳು ಎಂಬ ಉಲ್ಲೇಖಗಳಿವೆ. ಆದರೆ ಧಾರಲದೇವಿ ಎಂಬ ಹೆಸರಿನ ಉಲ್ಲೇಖ ಈ ಶಾಸನದಲ್ಲಿ ಮಾತ್ರ ದೊರಕುತ್ತದೆ. ಅರಸನ ಸಾಮಂತ ದೇಗದಂಡಾದೀಶ ಈತನ ಕೈಕೆಳಗೆ ಪುಲಗೇರಿ ೩೦೦ (ಲಕ್ಷ್ಮೇಶ್ವರ) ಆಳುತ್ತಿದ್ದ ಅಯ್ಯಣ ದಂಡನಾಯಕನ ಉಲ್ಲೇಖವಿದೆ.

ಧರ್ಮಕಥಾ ಪ್ರಸಂಗದ ಸಮಯದಲ್ಲಿ ಸೋಮ ಪಂಡಿತನ ಮಹಿಮೆಯನ್ನು ಶಾಸನದಲ್ಲಿ ವಿವರಿಸಲಾಗಿದೆ. ರಾಷ್ಟ್ರಕೂಟ ಇಂದ್ರಕೇಶಿದೇವರಸರು ಪುಲಗೇರಿ ರಾಜಧಾನಿ ಪಟ್ಟಣದಲ್ಲಿ ನಗರದ ಮಹಾಜನರು, ಪಂಚಮಠದ ಸ್ಥಾನಪತಿಗಳು, ಮಹಾ ಅಗ್ರಹಾರದ ಮಹಾಜನಗಳು, ಎಲ್ಲ ಗ್ರಾಮಗಳ ಜನರು, ಗೌಡರುಗಳು ಮತ್ತು ಅಯ್ಯಣ ದಂಡನಾಯಕರು ಸೇರಿ ಸ್ವಯಂಭೂ ದಕ್ಷಿಣ ಸೋಮನಾಥ ದೇವರಿಗೆ ಪಂಚ ಉತ್ಸವಗಳಲ್ಲಿ ಮಾಡುವ ಅಂಗಭೋಗ, ರಂಗಭೋಗಕ್ಕೆ ಪುಲಗೇರಿನಾಡಿನ ಗ್ರಾಮಗಳಲ್ಲಿ ಒಂದೊಂದು ಗದ್ಯಾಣವನ್ನು ಸಂಗ್ರಹಿಸಿ ದೇವರ ಪೂಜೆಗೆ ದಾನ ನೀಡಿದ ಪೂಜೆಗದ್ಯಾಣದ ವಿವರಣೆ ಇದೆ. ಅಲ್ಲದೇ ಈ ಶಾಸನದಲ್ಲಿ ಸಾಮಂತ ದೇಗದಂಡಾದೀಶನ ವರ್ಣನೆ ಹಾಗೂ ಪಿರಿಯರಸಿಯ ಹೊಗಳಿಕೆ ಉಲ್ಲೇಖಿತವಾಗಿದೆ.

ಕೊನೆಯಲ್ಲಿ ಈ ದಾನ ಶಾಸನವನ್ನು ದೇಶಾಧಿಕಾರಿ ಸಮೇತ ಎಲ್ಲರೂ ಕಾಪಾಡಬೇಕು ಮತ್ತು ಶಾಸನದ ಕೊನೆಯಲ್ಲಿ ಸಾಮಾನ್ಯ ಶಾಪಾಶಯದ ಉಲ್ಲೇಖವಿದೆ.

### ಶಾಸನ ಪಾಠ

೧ ಶ್ರೀ ನಮಸ್ತುಂಗ ಶಿರಶ್ಚುಂಬಿಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭಮೂಳ

೨ ಸ್ತಂಭಾಯ ಶಂಭವೇಽಽ ಶ್ರೀ ಮತು ಕಳಚುರಿಯ ಕುಳೋದ್ಧಾಮಮಂ ನೆಗಳ್ದಂ

೩ ಧರಿತ್ರಿಯೊಳು ಜಯಲಕ್ಷ್ಮೀ ಧಾಮಮಂ ಪಾಳಿತ ವಿಭುವ ಸ್ತೋಮಂ

೪ ಬಿಜ್ಜಲ ಶ್ರೀಪಾಳನಹಿತಕಲಾಳಂಽಽ ತತ್ತನೆಯಂ ಸಕಲ ನ್ರಿಪಾಳಾತ್ತಂ

೫ ಸಿತರತ್ನಸಹಿತ ಮರ್ದ್ದನ ಸೌರ್ಯೋದ್ದಿಪ್ತಂ ನಿರುಪವಿತ ಗುಣೋದಾತ್ತಂ

೬ ಸೋಮೇಶ್ವರಾವನಿಶಂ ವೆಗಪ್ಪಿಂಽಽ ಶ್ರೀ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ

* ಆಯ್ಕೆ ಶ್ರೇಣಿ ಉಪನ್ಯಾಸಕರು, ಕೆ.ಎಸ್.ಎಸ್.ಕಲಾ,ವಾಣಿಜ್ಯ ಹಾಗೂ ವಿಜ್ಞಾನ ಮಹಾವಿದ್ಯಾಲಯ, ಗದಗ.

೭ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜಂ ಕಾಳಾಂಜರ ಪುರವರಾಧೀಶ್ವರಂ ಸು

೮ ವರ್ಣ್ನ ವ್ರಿಶಭಧ್ವಜಂ ಢಮರುಗ ತೂರ್ಯ್ಯ ನಿರ್ಘ್ಘೋ ಶಣಂ ಕಳಚುರಿಯ

೯ ಕುಳಕಮಳ ಮಾರ್ತ್ತಂಡಂ ಕದನ ಪ್ರಚಂಡಂ ಮಾನ ಕನಕಾಚಳಂ ಸುಭಟರಾ

೧೦ ದಿತ್ಯಂ ಕಲಿಗಳಂಕುಳಂ ಗಜಸಾಮಂತ ಶರಣಾಗತ ವಜ್ರಪಂಜರಂ ಪ್ರ •

೧೧ ತಾಪ ಲಂಕೇಶ್ವರಂ ಸನಿವಾರ ಸಿದ್ಧಿಗಿರಿದುರ್ಗಮಲ್ಲಂ ಚಲದಂಕರಾಮಂ

೧೨ ವೈರೀಭಕಂಠೀರವಂ ನಿಸ್ಸಂಕಮಲ್ಲ ನಾಮಾದಿ ಪ್ರಸಸ್ತಿ ಸಹಿತಂ

೧೩ ಶ್ರೀಮತು ರಾಯ ಮುರಾರಿ ಸೋಮೇಶ್ವರದೇವ ವಿಜಯರಾಜ್ಯ ಮುತ್ತ

೧೪ ರೋತ್ತರಾಭಿವೃದ್ಧಿ ಪ್ರವರ್ಧಮಾನವಾಚಂದ್ರಾರ್ಕತಾ ರಂಭರೆಂ ಸಲು

೧೫ ತ್ತಮಿರೆ ss ಆ ರಾಯ ಮುರಾರಿಯ ರಾಜದ್ರಾಜಹಂಸ

೧೬ ಕಮಳಿನಿಯನಲಾದಾರಲದೇವಿ ನೆಗೆಟ್ಟಳು ವಾರಿಧಿಪರಿ ವ್ರಿತಸಮ

೧೭ ಸ್ತ ವಸುಧಾತಳದೊಳುss ನಯದಿಂ ಸೋಮೇಶ್ವರ ಭೂಪ ಯಶೋ

೧೮ ಲಕ್ಷ್ಮಿಗೆ ನೆಗಟ್ಟಿ ರಾಜ್ಯ ಶ್ರೀ ಗಾಜರಯ ವನಿತೆಗೆ ದಾರಲ ದೇವಿಯೆ ತಾಂ ಪಿ

೧೯ ರಿಯರಸಿ ಯನಿಪ ಪೆಂಪಂ ತಳದಳಾss ಸ್ವಸ್ತಿಯನವರತ ಪರಮ

೨೦ ಕಲ್ಯಾಣಾಭ್ಯುದಯ ಫಳ ಸಹಸ್ರ ಭೋಗ ಭಾಗಿನಿ ದ್ವಿತೀಯ ಲಕ್ಷ್ಮೀಸಮಾ

೨೧ ನಮುಂ ಹನೂನದಾನೆಯುಂ ನಿರುಪಮರೂವ ಸೌಂದಯ್ಯ ವಿಭ್ರ

೨೨ ಮಾಭಿರಾಮೆಯುಂ ರಾಯರಾಣಿ ಮುಖ ದರ್ಪ್ಪಣೆ ಯುಂ ಬಹುಕಳಾಕಳಾ

೨೩ ಪನಿಪುಣೆಯುಂ ಭರತಶಾಸ್ತ್ರ ಪ್ರವೀಣೆಯುಂ ಅಭಿನವ ಸರಸ್ವತಿಯುಂ

೨೪ ಶ್ರೀರಾಯ ಮುರಾರಿ ಸೋಮೇಶ್ವರದೇವ ನಯನ ಮನೋವಲ್ಲಭೆಯು

೨೫ ಮುಪ್ಪ ಶ್ರೀಮತ್ಪಿರಿಯರಸಿ ದಾರಲದೇವಿಯರ ರಾಜ್ಯ ಮುತ್ತರೋತ್ತರ

೨೬ ಪ್ರವರ್ದ್ಧಮಾನ ಮಾಗುತ್ತಿರೆss ತತ್ಪಾದ ಪಯೋಜ ಮಧುಕರನುತ್ಪಾಧಿತ

೨೭ ರಿಪುಚಮೂಪನರಿ ಭೇಧನಮಂತ್ರೋತ್ಪಾದನ ಪಟು ನಿಭ್ನತ ಬೃಹತ್ಪುಣ್ಯ ನಿಧಾ

೨೮ ನನು ದೇಗದಂಡಾದೀಶಂss ದಾರಲದೇವಿಯ ವಿಸ್ತ್ರತ ಚಾರುಸ

೨೯ ಭಾಂ ಭೊಜಷಂಡಸೊಳುಸೊಗಯಿಸುತಿಪ್ಪಾ ರಾಜ ಹಂಸನಂ

೩೦ ದದೆ ರಾರಾಜಿಸುತ್ತಿರ್ಪ್ಪನು ದೇಗದಂಡಾದೀಶಂss ಜನಕಂ ತಾಂ ಶಿವರಾಜನಂಬೀ

೩೧ ರೆಗುಣ ಪ್ರಖ್ಯಾತೆ ಬಾಚವ್ವೆ ನಚ್ಚಿನ ದೇಶಂರಿಪುರಾಯ ದರ್ಪ್ಪದಳನಂ

೩೨ ಸೋಮೇಶ್ವರರೋರ್ವ್ವೀಶನೊಳ್ಪಿನದೆಯಂ ಕಮಳಾ ಕ್ಷನೆಂದುಮನೆ ಭಾರದ್ವಾಜಗೋತ್ರ

೩೩ ಕಮಂಡನನುರ್ವ್ವಿಸುತ್ತನಾದನೀಗಳುದಯಾದಿತ್ಯಂ ಜಗನ್ಮಂಡನಂssನ್ತೆನಿಸಿ ಪೆರ್ಮ್ಮೆ

೩೪ ವಡೆದುದಯ್ಯಡಾಂ ದಂಡನಾಯಕಂ ಪುಲಿಗೆಱೆ ಮೂಂನೂಱುಮಂ ಸುಖಸಂಕ

೩೫ ಥಾವಿನೋದದಿಂ ಪ್ರತಿಪಾಳಿಸುತ್ತ ವಿರ್ದ್ದೊಂದು ದೇವಸಂ ಧರ್ಮ್ಮಕಥಾಪ್ರಸಂಗವಾದ

೩೬ ಸಮಯದೊಳು॥ ಶ್ರುತದೇವಿಕಾಂತಂ ಪಂಡಿತ ಜನಸಂಸ್ತುತ್ಯಂ ನಾಶ್ರಿತಾಂಮರಭ್ಯ

೩೭ ಜಂಯತೀಪತಿ ತಿಳಕ ನೆಗಳ್ದಂ ಕ್ಷತಿಯೊಳಗೆ ಮಹೇಂದ್ರ ಸೋಮಪಂಡಿತದೇವರುss

೩೮ ಸ್ವಸ್ತಿಸಕನೃಪ ಕಾಲಾತೀತ ಸಂವತ್ಸರಂ ೧೦೯೮ ನೆಯ ದುರ್ಮ್ಮುಖಿ ಸಂವತ್ಸರದ ಮಾ

೩೯ ಘ ಬಹುಳ ೧೪ ಸೋಮವಾರ ವ್ಯತಿಪಾತ ಶಿವ ರಾತ್ರಿಯ ಮಹಾತಿಥಿಯಂದು ಪು

೪೦ ರಿಕರ ವಿಷಯ ರಾಷ್ಟ್ರಕೂಟಕನಿಂದ್ರ ಕೇಸೀ ದೇವರ ಸರುಂ ರಾಜಧಾನಿ ಪಟ್ಟಣಂ

೪೧ ಪುಲಿಗೆಱೆಯ ನಗರ ಮಹಾಜನ ಪಂಚಮಠ ಸ್ಥಾನಪತಿಗಳುಂ ಮಹಾ

೪೨ ಗ್ರಹಾರಂಗಳ ಮಹಾಜನಂಗಳು ಗ್ರಾಮಾನುಗ್ರಾಮಂಗಳ ಪ್ರಭುಗಾವುಂಡುಗಳು

೪೩ ಮುಖ್ಯವಾಗಿಯುಂ ದಯಣದಂಡನಾಯಕಂ ಶ್ರೀಮನ್ಮೂರ್ತ್ತಿ ಸ್ವಯಂಭು ದಕ್ಷಿ

೪೪ ಣ ಸೋಮೇನಾಥದೇವರ್ಗೆ ಪಂಚಪರ್ವ್ವಂಗಳಲ್ಲಿ ಮಾಡುವ ದೇವರಂಗಭೋಗಕ್ಕಂ ರಂಗಭೋ

೪೫ ಗಕ್ಕಂ ಪುಲಿಗೆಱೆನಾಡ ಗ್ರಾಮಾನುಗ್ರಾಮಂಗಳಲ್ಲಿ ಪೂಜೆ ಗದ್ಯಾಣವೆಂದಾಚಂ

೪೬ ದ್ರಾರ್ಕ್ಕಸ್ಥಾಯಿಯಾಗೆ ಕೊಟ್ಟನುss ಇಂತೀ ಧರ್ಮ ವನಾವನೋರ್ವ್ವಂ ದೇಶಾಧಿಕಾರಿ

೪೭ ಪ್ರತಿಪಾಳಿಸುವರುss ಈಂತೀಧರ್ಮ್ಮಂ ಪ್ರತಿಪಾಳಿಸಿ ದವರ್ಗ್ಗೆ ಶ್ರೀವಾರಾಣ

೪೮ ಸಿಯಲು ಸಹಸ್ರವೇದಪಾರಗರಪ್ಪ ಬ್ರಾಹ್ಮಣರಿಗೆ ಕೊ

೪೯ ಟ್ಟಫಲಮಕ್ಕು ಯಿಂತೀ ಧರ್ಮ್ಮಮನಳಿದಂಗೆ ಮಹಾಪಾತಕಮಕ್ಕು



ಡಾ. ಡಿ.ವಿ. ಪರಮಶಿವಮೂರ್ತಿ*

# ವಾರವಧು ಮಣ್ಡನೆ ಗೌರಲೆಯ ಶಾಸನ

ಲಕ್ಷ್ಮೇಶ್ವರವು ಪುಲಿಗೆರೆಯೆಂಬ ಹೆಸರಿನಲ್ಲಿ ಕ್ರಿ.ಶ. ೯ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿ ಬಹಳ ಪ್ರಸಿದ್ಧವಾಗಿತ್ತು. ಕಲ್ಯಾಣ ಚಾಳುಕ್ಯರ ಅವಧಿಯ ಅನೇಕ ಉತ್ತಮ ದೇವಾಲಯಗಳು ಮತ್ತು ಮೂವತ್ತಕ್ಕೂ ಹೆಚ್ಚಿನ ಶಾಸನಗಳು ಈ ಗ್ರಾಮದಲ್ಲಿ ಇವೆ. ಇಲ್ಲಿನ ಒಂದು ಶಾಸನದಲ್ಲಿ ಈ ರೀತಿ ವರ್ಣನೆಯಿದೆ: "ಒಂದೊಂದೇ ಅಕ್ಷತೆಯನ್ನು ಒಂದೊಂದು ಶಿವಲಿಂಗದ ಮೇಲಿಟ್ಟುಕೊಂಡು ಸಾಗಿದರೂ ಒಂದು ಕೊಳಗದಷ್ಟು ಅಕ್ಷತೆಯೂ ಸಾಲುವುದಿಲ್ಲ" ಎಂಬುದೇ ಆ ಮಾತು. ಇದು ಅತಿಶಯೋಕ್ತಿಯೆನಿಸಿದರೂ ಈ ಮಾತು ಅಲ್ಲಿನ ದೇವಾಲಯಗಳ ಸಂಖ್ಯೆಯನ್ನು ಸೂಚಿಸುತ್ತದೆ.

[ಸೋಮನಾಥ ದೇವಾಲಯದ ಆವರಣದಲ್ಲಿ ಇಪ್ಪತ್ತಕ್ಕೂ ಹೆಚ್ಚಿನ ಶಾಸನಗಳಿದ್ದು ಅವು ಬೇರೆ ಬೇರೆ ಮೂಲಗಳಲ್ಲಿ ಪ್ರಕಟವಾಗಿವೆ.] ಇತ್ತೀಚಿನ ಕ್ಷೇತ್ರಕಾರ್ಯ ಸಮಯದಲ್ಲಿ ಇಲ್ಲಿನ ಸುಪ್ರಸಿದ್ಧ ಸೋಮೇಶ್ವರ ಗುಡಿಯ ಹಿಂದಿರುವ ಪ್ರಾಚೀನ ಬಾವಿಯ ಒಳಭಾಗದ ಕೋಣೆಯ ಗೋಡೆಯಲ್ಲಿ ಅಪ್ರಕಟಿತ ಶಾಸನವೊಂದು ಪತ್ತೆಯಾಯಿತು. ಶಾಸನವು ಒಂದು ಅಡಿ ಎತ್ತರ ಎರಡು ಅಡಿ ಅಗಲವಿದ್ದು ಕಲ್ಯಾಣ ಚಾಳುಕ್ಯ ಶೈಲಿಯ ಸುಂದರವಾದ ಲಿಪಿಯನ್ನು ಮತ್ತು ಸಾಹಿತ್ಯವನ್ನು ಹೊಂದಿದೆ.

ಶಾಸನದ ವಿಷಯದ ಆಧಾರದಿಂದ ಇದರ ಕಾಲವನ್ನು ಕ್ರಿ.ಶ. ೧೧೫೦ ಎಂದು ನಿರ್ಧರಿಸಬಹುದು. ಮಹೇಂದ್ರ ಸೋಮ ಮತ್ತು ಮಾಳೌವ್ವೆಯರಿಗೆ ಜನಿಸಿದ ಗೌರಲೆ (ಗೌರಾದೇವಿ)ಯು ನೀರಿನ ದಾನವೇ ಶ್ರೇಷ್ಠವಾದ ದಾನವೆಂದು ಬಾವಿಯೊಂದನ್ನು ನಿರ್ಮಿಸುತ್ತಾಳೆ. ಇವಳಿಗೆ ಜ್ಞಾನಸೋಮ ಪಂಡಿತನೆಂಬ ಅಣ್ಣನಿದ್ದನೆಂದೂ ಶಾಸನ ತಿಳಿಸುತ್ತಿದೆ. ಈ ಶಾಸನ ಬಹಳ ಮುಖ್ಯವಾಗುವುದು ಗೌರಲೆಯು 'ವಾರವಧು ಮಣ್ಡನೆ'ಯೆಂದು ಉಲ್ಲೇಖ ಗೊಂಡಿರುವುದು. ಈ ಗೌರಲೆಯು ಸರಸ್ವತಿಯಂತೆ ವಿದ್ಯೆಯನ್ನು, ಈಶ್ವರನಂತೆ ನೃತ್ಯವನ್ನೂ ಕಲಿತಿದ್ದಳಂತೆ. ಇವಳ ಮಹಿಮೆಯನ್ನು ಬಣ್ಣಿಸಲು ಯಾರಿಗೂ ಆಗುವುದಿಲ್ಲವಂತೆ. ಇವಳು ಇಟ್ಟಿಗೆ–ಕಲ್ಲು–ಮರಗಳನ್ನು ರಾಶಿ ರಾಶಿ ದಾನಮಾಡಿದರೇನು? ನೀರಿನ ದಾನವೇ ಶ್ರೇಷ್ಠವಾದ ದಾನವೆಂದು ತೀರ್ಮಾನಿಸಿ ಮೆಟ್ಟಲುಗಳು ಹೆಚ್ಚಾಗಿರುವ ಬಾವಿಯೊಂದನ್ನು ಕಟ್ಟಿಸುತ್ತಾಳೆ. ಇದು ಬಾವಿಗಳಿಗೇ ಉತ್ತಮವಾದುದು, ಸಮುದ್ರದಂತಿತ್ತು. ಜಗತ್ತಿನಲ್ಲೇ ಹೆಚ್ಚು ನೀರಿನಿಂದ ಕೂಡಿದ ಬಾವಿ ಇದುವೇ ಆಗಿತ್ತು. ಪ್ರಸಿದ್ಧವಾದ ಅನೇಕ ನೃತ್ಯಗಳಿಗೆ ಗೌರಿಯೇ ಸರಿ. ಇವಳ ಸರಿ ಸಮಾನರು ಯಾರೂ ಇಲ್ಲ. ಕೀರ್ತಿ ಪಡೆದ ಮೈಳಾರದ ಬಾಚನಂತೆ, ಹೆಸರಾಂತ ರೂಪಸಿಯಾದ ಕನ್ನರಮಲ್ಲವೆಯು, ಸೇವನಾಚತುರೆ ಚಟ್ಟವ್ವೆಯರೂ ಕೂಡ ಈ ಗೌರಲೆಗೆ ಸಮಾನರಲ್ಲವೆಂದು ಶಾಸನ ವರ್ಣಿಸುತ್ತದೆ. ಗಿರಿಜೆಯನ್ನು ಪೂಜಿಸುವ, ಆದರಿಸುವ ದಡ್ಡತನವೇಕೆ? ಇಡೀ ನಾಡಿನ ಹೆಣ್ಣುಗಳಿಗೆ ಮಾದರಿಯಾದ ಈ ನಮ್ಮ ವಾರವಧು ಶ್ರೇಷ್ಠೆ ಗೌರಲೆಯ ಪಾದಗಳನ್ನು ಮತ್ತು ಕೈಗಳನ್ನು ನೋಡಿದರೆ ಸಾಕು ಗಿರಿಜೆಯನ್ನು ಪೂಜಿಸುವುದಕ್ಕಿಂತ ಹೆಚ್ಚು ಪುಣ್ಯ ಬರುತ್ತದೆಂದು ಶಾಸನ ಹೇಳಿದೆ. ಅಂದರೆ ದೇವರ ಸೇವೆಗಿಂತಲೂ ಮಿಗಿಲು ಇವಳ ದರ್ಶನವೆಂಬ ಹೊಗಳಿಕೆಯಿದೆ.

ಈ ಗೌರಲೆಯು ನಿರ್ಮಿಸಿದ ಬಾವಿಗಾಗಿ ಕ್ರಿ.ಶ. ೧೧೪೭ರ ಅವಧಿಯ ಶಾಸನದಲ್ಲಿ ಮೇಚ ಚಮೂಪನೆಂಬುವನು ಆರು ಮತ್ತರು ಭೂಮಿಯನ್ನು ದಾನ ನೀಡಿದ ವಿಷಯವಿದೆ. (*EI.XVI.* ಪು.೪೭) ನಿರ್ಮಳ ಗುಣಯುಕ್ತೆ ಗೌರಲೆಯ ಬಾವಿಗೆ ದಾನ ನೀಡಿದಳೆಂದು ಹೇಳಿದೆ. ಅಂದರೆ ಈ ಶಾಸನವೂ ಗೌರಲೆಯ ಗುಣವನ್ನು ಉಲ್ಲೇಖಿಸಿದೆ. ಇವಳ ತಂದೆ ಮಹೇಂದ್ರ ಸೋಮ, ತಾಯಿ ಮಾಳೌವ್ವೆ, ಅಣ್ಣ ಜ್ಞಾನಸೋಮಪಂಡಿತನೆಂದು ಹೆಮ್ಮೆಯಿಂದ ಹೇಳಿಕೊಂಡಿರುವಳು. ಇವಳು ವಾರವಧು ಮಣ್ಡನೆ ಅಂದರೆ ವೇಶ್ಯಾಕುಲಕ್ಕೆ ಶ್ರೇಷ್ಠಳಾದವಳೆಂದೂ ಶಾಸನ ತಿಳಿಸುತ್ತದೆ. ಇವಳ ತಂದೆಯಾದ ಆಚಾರ್ಯ ಮಹೇಂದ್ರಸೋಮ ಪಂಡಿತನು ಬಹಳ ಪ್ರಸಿದ್ಧ ನಾದ ವ್ಯಕ್ತಿಯಾಗಿದ್ದನು. ಇವನು ಕ್ರಿ.ಶ. ೧೧೦೩ ರಿಂದಲೂ ಸೋಮೇಶ್ವರ ಗುಡಿಯ ಸ್ಥಾನದಾಚಾರ್ಯನಾಗಿದ್ದನೆಂದು ಶಾಸನಗಳು ಹೇಳುತ್ತವೆ. ಇವನ ತಂದೆ ದೇವಸೋಮ ಪಂಡಿತ. ಇವನ ಬಗ್ಗೆ ಕ್ರಿ.ಶ. ೧೧೪೭ರ ಒಂದು ಶಾಸನ ವರ್ಣಿಸಿದೆ. ಇವನ ಮಗ ಮಹೇಂದ್ರಸೋಮ ಮತ್ತು ಮಾಳೌವ್ವೆಯರಿಗೆ ಜನಿಸಿದವಳು ಈ ಗೌರಲೆಯು. ಈ ಮಾಳೌವ್ವೆಯನ್ನು ಒಂದು ಶಾಸನವು ಮಾಳಿಯಕ್ಕಳೆಂದು ಕರೆದಿದೆ. (*EC.XVI.* ಪು.೩೭). ಮಹೇಂದ್ರ ಸೋಮನನ್ನು

* ಹಿರಿಯ ಶ್ರೇಣಿ ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ – ೫೮೩ ೨೭೬.

ಸುವ್ರತನಿಳಯ, ಸಕಳ ಮಹಾವ್ರತಿ, ಸಂತಾನ ಕಲ್ಪಭುಜಂ, ಯಮ ನಿಯಮ ನಿಷ್ಠಾಗರಿಷ್ಠನಪ್ಪ ಮುಂತಾಗಿ ಕೆಲವು ಶಾಸನಗಳು ಹೊಗಳಿವೆ. (*EI.XVI.* ಪು.೩೭,೩೨). ಇಷ್ಟೇ ಅಲ್ಲದೆ ಇವನು ಕ್ರಿ.ಶ. ೧೧೭೬ರ ಸೋವಿದೇವನ ಶಾಸನದಲ್ಲೂ ಉಲ್ಲೇಖಗೊಂಡಿರುವನು. (ಅಪ್ರಕಟಿತ ಶಾಸನ). ಗೌರಲೆಗೆ ಜ್ಞಾನಸೋಮಪಂಡಿತ ಅಣ್ಣ, ಇವನೂ ಕೂಡ ತಂದೆ ಮಹೇಂದ್ರ ಸೋಮನಂತೆ ಪ್ರಸಿದ್ಧನಾದ ಆಚಾರ್ಯನಾಗಿದ್ದನು. ಅನೇಕ ಶಾಸನಗಳು ಇವನನ್ನು ಮಹಾ ವ್ರತಿಯೆಂದು ಕರೆದಿವೆ. (*SII xx-107, 122,EI. XVI- 37, 47*).

ಇಲ್ಲಿ ಮುಖ್ಯವಾಗುವುದು ಬಹಳ ಪ್ರಸಿದ್ಧನಾದ ಮಹೇಂದ್ರ ಸೋಮಪಂಡಿತನನ್ನು ತಂದೆಯೆಂದೂ, ಜ್ಞಾನ ಸೋಮಪಂಡಿತನನ್ನು ಅಣ್ಣನೆಂದು ಗೌರಲೆಯು ಕರೆದು ಕೊಂಡಿರುವುದು. ಏಕೆಂದರೆ ಈ ಗೌರಲೆಯು ವೇಶ್ಯಾವಧು. ಇಂತಹವಳು ಗುಡಿಯ ಸ್ಥಾನದಾಚಾರ್ಯರನ್ನು ತಂದೆ ಮತ್ತು ಅಣ್ಣನೆಂದು ಗುರುತಿಸಿಕೊಂಡಿರುವುದು. ವಾರವಧುವಿಗೂ ಮತ್ತು ಪ್ರಸಿದ್ಧ ಗುಡಿಯ ಆಚಾರ್ಯರಿಗೂ ಇರುವ ಸಂಬಂಧ ವೇನು? ಅಥವಾ ಇವರ ಸಂಬಂಧ ಹೇಗಾಯಿತು? ಇವು ಬಹಳ ಮಹತ್ವವಾದ ಪ್ರಶ್ನೆಗಳಾಗುತ್ತವೆ. ಇವಕ್ಕೆ ಶಾಸನಗಳ ಆಧಾರದಿಂದ ಸ್ವಲ್ಪ ಮಟ್ಟಿಗೆ ಚರ್ಚಿಸಬಹುದು.

ಆರನೆಯ ವಿಕ್ರಮಾದಿತ್ಯನ ದಂಡಾಧೀಶನಾದ ಅನಂತ ದಂಡಾಧೀಶ ಕ್ರಿ.ಶ.೧೧೧೨ರಲ್ಲಿ ಸೋಮೇಶ್ವರಗುಡಿ ಮುಂದೆ ಸೂಳೆಗೇರಿಯೊಂದನ್ನು ನಿರ್ಮಿಸಿ ಅದಕ್ಕಾಗಿ ಹಲವು ದಾನಗಳನ್ನು ನೀಡಿದ್ದಾನೆ (*SII-XX-74*). ಈ ಅವಧಿಯಲ್ಲಿ ಬಂದು ಅಲ್ಲಿ ನೆಲೆಸಿರಬಹುದಾದ ಮಾಳವ್ವೆಯು ಅಲ್ಲಿ ಆಚಾರ್ಯನಾಗಿದ್ದ ಮಹೇಂದ್ರ ಸೋಮ ಪಂಡಿತನನ್ನು ಮೋಹಿಸಿ ಮದುವೆಯಾಗಿರಬೇಕೆಂದು ತೋರುತ್ತದೆ. ಇವರಿಬ್ಬರಿಗೂ ಜನಿಸಿದವಳೆ ಗೌರಲೆ. ಇವಳು ತನ್ನ ತಾಯಿಯ ಕುಲಕಸುಬಾದ ವೇಶ್ಯಾವೃತ್ತಿಯನ್ನೇ ಮುಂದುವರಿಸಿರಬೇಕು. ಇವಳ ಅಣ್ಣ ಜ್ಞಾನಸೋಮ ಪಂಡಿತನು ಮಹೇಂದ್ರ ಸೋಮ ಪಂಡಿತನ ನಿಜ ಪತ್ನಿಯ ಮಗನಾಗಿದ್ದು ಅವನು ತನ್ನ ತಂದೆಯ ಕುಲಕಸುಬನ್ನು ಮುಂದುವರಿಸಿರಬೇಕು. ಇದಕ್ಕೆ ಸಾಕ್ಷಿಯಾಗಿ ಕ್ರಿ.ಶ. ೧೧೦೭ ರಿಂದ ಕ್ರಿ.ಶ. ೧೧೫೩ರ ವರೆಗಿನ ಸುಮಾರು ಆರು ಶಾಸನಗಳು ಈ ಜ್ಞಾನಸೋಮಪಂಡಿತನನ್ನು ಅತಿಶಯವಾಗಿ ವರ್ಣಿಸುತ್ತವೆ. ಈ ಕೆಲವು ಕಾರಣಗಳಿಂದ ಮಹೇಂದ್ರಸೋಮ ಪಂಡಿತನ ಉಪಪತ್ನಿಯ ಮಗಳು ಈ ಗೌರಲೆ ಎಂಬ ಮಾತು ಗಟ್ಟಿಗೊಳ್ಳುತ್ತದೆ. ಇದರಿಂದಾಗಿ ಪ್ರಾಚೀನ ಕಾಲದ ದೇವಾಲಯ ವ್ಯವಸ್ಥೆ, ಆಡಳಿತ ಇವುಗಳು ಈಗ ನಾವು ಚರ್ಚಿಸಿರುವುದಕ್ಕಿಂತ ಭಿನ್ನವಾಗಿದ್ದವು ಎನ್ನಿಸುತ್ತದೆ. ದೇವಾಲಯಗಳ ಸ್ಥಾನದಾಚಾರ್ಯರು ಮತ್ತು ದೇವಾಲಯಗಳ ಸೇವೆಗೆ ಮೀಸಲಿದ್ದ ವಾರವಧುಗಳ ಸಂಬಂಧ ಮತ್ತು ಸಾಮಾಜಿಕ ಸ್ಥಾನದ ಬಗ್ಗೆ ಮರುಚಿಂತಿಸುವ ಅಗತ್ಯವಿದೆ. ಗೌರಲೆಯ ವಂಶಾವಳಿ ಹೀಗಿದೆ:

**ಗೌರಲೆಯ ವಂಶಾವಳಿ**

[ಆಕರಗಳು:- *E.I.XVI.* ಪು. ೪೭, ೩೭, *SII XX* ೧೦೭, ೧೨೨]

ಕ್ಷಿತಿಪೂಜ್ಯ ದೇವಸೋಮ ಪಂಡಿತ

|

ಮಹೇಂದ್ರಸೋಮ + ಮಾಳೌವೆ (ಮಾಳಿಯಕ್ಕ)

|

ಜ್ಞಾನಸೋಮ ಪಂಡಿತ — ಗೌರಲೆ

ಇನ್ನು ಗೌರಲೆಯೂ ಮೈಳಾರದ ಬಾಚನಿಗಿಂತ, ಕನ್ನರನ ಮಲ್ಲವ್ವೆಗಿಂತ, ಸೇವನಾ ಚತುರೆ ಚಟ್ಟವ್ವೆಯರಿಗಿಂತ ಮಿಗಿಲಾದ ಕೀರ್ತಿಯನ್ನು ಪಡೆದವಳು ಎಂಬ ಮಾತಿದೆ. ಇಲ್ಲಿ ಉಲ್ಲೇಖಗೊಂಡಿರುವ ಬಾಚ, ಮಲ್ಲವ್ವೆ, ಚಟ್ಟವ್ವೆಯರು ಗೌರಲೆಯ ಸಮಕಾಲೀನರೋ ಅಥವಾ ಪೂರ್ವಿಕರೋ ತಿಳಿದುಬರುವುದಿಲ್ಲ. ಯಾವುದೇ ಕಾವ್ಯದಲ್ಲಿಯಾಗಲೀ ಅಥವಾ ಶಾಸನಗಳಲ್ಲಾಗಲಿ ಇವರ ಪ್ರಸ್ತಾಪವಿಲ್ಲ. ಲಕ್ಷ್ಮೇಶ್ವರದ ಸೋಮೇಶ್ವರಗುಡಿಯ ಪೂರ್ವಭಾಗದಲ್ಲಿ ಈಗಲೂ ಗೌರಿವಂಶಸ್ಥರೆಂದು ಕರೆಸಿಕೊಳ್ಳುವ ಮನೆತನವಿದೆ. ಈ ಮನೆತನಕ್ಕೂ ಶಾಸನಸ್ಥ ಗೌರಲೆಗೂ ಯಾವ ರೀತಿ ಸಂಬಂಧವಿದೆಯೋ ತಿಳಿಯುವುದು ಕಷ್ಟವಾಗಿದೆ.

**ಶಾಸನ ಪಾಠ**

೧ ಶ್ರೀ ಮತ್ಸುರಿಕರ ದಕ್ಷಿಣ ಸೋಮಸುರಧೇನುಜ ಮನುಜ ವಿದ್ಯಾದರ....ಣರ ಚತಕ್ರ...

೨ ಗದಾಮಂ ರಕ್ಷಿಸುಗೆ ಗೌರಿಯಂ ಗೌರವದಿಂ ॥ವೃ॥ ಜನಕಂ ಮಾಹೇಂದ್ರ ಸೋಮವ್ರತಿಪತಿ ಜನನಿ ಖ್ಯಾತೆ ಮಾ

೩ ಳೌವೆ ಯೋಗೀಂದ್ರನುತಂ ಶ್ರೀ ಸೋಮದೇವ ಕ್ರಮಯುಗ ಕಮಳಾರಾಧಕಂ ಜ್ಞಾನ ಸೋಮಂ ತನಗಣ್ಣಂ ತಾಪಸಾದೀಶ್ವರನೆ

೪ ಲೆಸೆದಳ್ ನರ್ತ್ತನ ಪ್ರೌಢಿಯೊಳಾ ವಾಗ್ವನಿತಾ ಸಾದೃಶ್ಯಮೀ ಗೌರಲೆಯ ಮಹಿಮೆಯಂ ಬಣ್ಣಿಸಲ್ಬಲ್ಲನಾವೊಂ ॥ಕಂ॥

೫. ಇಟ್ಟಗೆ ಕಲುಮರನೆಂಬುವ ನೋಡ್ಡಿದಡೇನುದಕ ದಾನ ಮಧಿಕಮೆನಲು ತಾಂ ಕಟ್ಟಿಸಿದಳಾ ಬಾವಿಯ ನಳವಟ್ಟಿರ ಲೀಗೌರಿ

೬. ದೇವಿ ಸೋಮೇಶ್ವರದೊಳಾ ॥ ಕಪ್ಪುರದ ಕರಣ್ಡಗೆಯೆನ ಲೊಪ್ಪಿರೆ ವದ್ರೋಪಳಂಗಳಿಂ ಕಟ್ಟಿಸಿದಳಾ ತಪ್ಪದೆ ಸೋಪಾನದ ಪರಿಜೋ

೭. ಸ್ಯವೆನಲು ಗೌರಿದೇವಿ ಪುಣ್ಯಾದೀಕೆಯೋ॥ ಕೂಪಾರ ವಾರಿಯದು ಲವಣೋಪಚಯಮಗಸ್ತ್ಯ ಪಿತ ಪ

೮. ರಿಶೇಷಮದಿಂದಾ ಪರಿಜನುಳಿದು ಗೌರಿಯ ಕೂಪಂ ಗಂಗೋದಮಾನಮಾದುದು ಜಗದೊಳಾ॥ ಚಾರುವಿಚಿತ್ರ

೯. ನರ್ತ್ತನಕೆ ಗೌರಿಯೊಳಾರೆಣೆ ರೂಢಿವೆತ್ತ ಮೈಳಾರದ ಬಾಚನುಂ ನೆಗರ್ದ್ದ ಚಕ್ರದ ಕಾಮನು ಪೂರ್ವ್ವಸಿ ನಿಜಾಕಾರೆಯೆ

೧೦. ನಿಪ್ಪ ಕನ್ನರನ ಮಲ್ಲವೆಯುಂ ತ್ರಿಪುರಾಂತಕಂಘ್ರಿ ಪಂಕೆರುಹ ಸೇವನಾ ಚತುರೆ ಚಟ್ಟವೆಯುಂ ದೊರೆಯಲ್ಲ ರೀಕೆಯೊ

೧೧. ಳಾ ॥ ಗಿರಿಜೆಯನರ್ಚಿಪಾದರಿಪ ಪೂಜಿಪ ದಂದುಗವೇಕೆ ನಾಡಪೆಣ್ಡೆರಿಗುಪದೇಶಮಂ ಕುಡುವೆನೊನ್ದನೆ ನಂಬುವುದಂಗನಾ

ಲಕ್ಷ್ಮೇಶ್ವರದ ವಾರವಧು ಗೌರಲೆಯ ಶಾಸನ [ಅಪ್ರಕಟಿತ] (ಕ್ರಿಶ. ಸು. ೧೧೪೫)



೧೨. ಮನೋಹರಿಯೆನಿಸಿರ್ದ್ದ ವಾರವಧು ಮಣ್ಣನೆ ಗೌರಿಯ
ಪಾದಪದ್ಮಮಂ ಕರವನುರಾಗ ಸಂಪದದೆ ನೋಡಲೊಡಂ
೧೩. ಸೊಬಗಕ್ಕುಮೊಗಳು ॥

**ಶಾಸನದ ಛಂದಸ್ಸು**

॥ಕಂ॥ ಶ್ರೀಮತ್ಪುರಿಕರ ದಕ್ಷಿಣ
ಸೋಮ ಸುರಧೇನು ಮನುಜ ವಿದ್ಯಾಧರ .........ಣರಚತ
ಕ್ರಮಾ....ಗ
ದಾಮಂ ರಕ್ಷಿಸುಗೆ ಗೌರಿಯಂ ಗೌರವದಿಂ

॥ವೃ॥ ಜನಕಂ ಮಾಹೇಂದ್ರ ಸೋಮ ವ್ರತಿಪತಿ
ಜನನಿಖ್ಯಾತೆ ಮಾಳೌವೆ ಯೋಗೀಂ
ದ್ರನುತಂ ಶ್ರೀ ಸೋಮದೇವ ಕ್ರಮಯುಗ
ಕಮಳಾರಾಧಕಂ ಜ್ಞಾನ ಸೋಮಂ
ತನಗಣ್ಣಂ ತಾಪಸಾದೀಶ್ವರನೆಲೆಸೆದಳ್ ನರ್ತ್ತನ
ಪ್ರೌಢೀಯೊಳಾವಾ
ಗ್ವನಿತಾ ಸಾದೃಶ್ಯಮೀ ಗೌರಲೆಯ ಮಹಿಮೆಯಂ
ಬಣ್ಣಿಸಲ್ಬಲ್ಲನಾವೋಂ
**(ಮಹಾಸ್ರಗ್ಧರೆ)**

॥ಕಂ॥ ಇಟ್ಟಗೆ ಕಲುಮರನೆಂಬುವ
ನೊಟ್ಟಿದಡೇನುದಕದಾನಮಧಿಕಮೆನಲು ತಾಂ
ಕಟ್ಟಿಸಿದಳಾ ಬಾವಿಯನಳ
ವಟ್ಟಿರಲೀ ಗೌರಿದೇವಿ ಸೋಮೇಶ್ವರದೊಳಾ

॥ಕಂ॥ ಕಪ್ಪುರದ ಕರಣ್ಡಗೆಯೆನ
ಲೊಪ್ಪಿರೆ ವದ್ರೋಪಳಂಗಳಿಂ ಕಟ್ಟಿಸಿದಳಾ
ತಪ್ಪದೆ ಸೋಪಾನದ ಪರಿ
ಜೋಸ್ಯವೆನಲು ಗೌರೀದೇವಿ ಪುಣ್ಯದೀಕೆಯೋ

॥ಕಂ॥ ಕೂಪಾರವಾರಿಯದು ಲವ
ಣೋಪಚಯಮಗಸ್ತ್ಯಪಿತ ಪರಿಶೇಷಮದಿಂ
ದಾ ಪರಿಜನುಳಿದು ಗೌರಿಯ
ಕೂಪಂ ಗಂಗೋದಮಾನಮಾದುದು ಜಗದೊಳಾ ॥

ಚಾರುವಿಚಿತ್ರ ನರ್ತ್ತನಕೆ ಗೌರಿಯೊಳಾರೆಣೆ ರೂಢಿವೆತ್ತ ಮೈ
ಳಾರದ ಬಾಚನುಂ ನೆಗರ್ದ್ದ ಚಕ್ರದ ಕಾಮನುವೂರ್ಗ್ವಸಿ ನಿಜಾ
ಕಾರೆಯೆನಿಪ್ಪ ಕನ್ನರನ ಮಲ್ಲವೆಯುಂತ್ರಿಪುರಾಂತಕಂಪ್ರಪಂ
ಕೆರುಹ ಸೇವನಾ ಚತುರೆ ಚಟ್ಟವೆಯುಂ ದೊರೆಯಲ್ಲ ರೀಕೆಯೊಳ್ ।
**(ಉತ್ಪಲಮಾಲೆ)**

॥ವೃ॥ ಗಿರಿಜೆಯನರ್ಚಿಪಾದರಿಪ ಪೂಜಿಪ ದಂದುಗವೇಕೆ ನಾಡಪೆ
ಣ್ಡಿರಿಗುಪದೇಶಮಂ ಕುಡುವೆನೊನ್ದನೆ ನಂಬುವುದಂ
ಗನಾ ಮನೋ
ಹರಿಯೆನಿಸಿರ್ದ್ದ ವಾರವಧು ಮಣ್ಣನೆಗೌರಿಯಪಾದಪದ್ಮಮಂ
ಕರವನುರಾಗ ಸಂಪದದೆ ನೋಡಲೊಡಿಂ ಸೊಬಗಕ್ಕು
ಮಾಗಳು ॥
**(ಚಂಪಕಮಾಲೆ)**

[ಶಾಸನ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಲಕ್ಷ್ಮೇಶ್ವರದ ಮುನಿಸಿಪಲ್ ಕಾಲೇಜಿನ ಕನ್ನಡ ಉಪನ್ಯಾಸಕ ಮತ್ತು ಮಿತ್ರರೂ ಆದ ಶ್ರೀ ಪಾಟೀಲ್ ಅವರಿಗೂ, ಕ್ಷೇತ್ರಕಾರ್ಯದಲ್ಲಿ ಜೊತೆ ಯಿದ್ದ ಮಿತ್ರ ಕೊಟ್ಟರಯ್ಯ ಮತ್ತು ಶ್ರೀ ನರೇಗಲ್ ಅವರಿಗೂ ಕೃತಜ್ಞತೆಗಳು]



ಡಾ. ಕೆ. ರವೀಂದ್ರನಾಥ*

# ಒಂಟಿಗೋಡೆ ಮತ್ತು ಹೊಸಕೆರೆ ಮಠಗಳ ಅಪ್ರಕಟಿತ ತಾಮ್ರ ಶಾಸನಗಳು

ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿನ ಹೊಸಕೆರೆ ಮಠದ ಮತ್ತು ಹೊಸಪೇಟೆ ತಾಲೂಕಿನ ಒಂಟಿಗೋಡೆ ಮಠದ ಸ್ವಾಮಿಗಳಿಗೆ ಹಾಕಿಸಿಕೊಟ್ಟ ಇನಾಮು ವಿವರಗಳನ್ನು ಪ್ರಸ್ತುತ ಎರಡು ಶಾಸನಗಳು ಪ್ರಸ್ತಾಪಿಸುತ್ತವೆ.

**೧. ಒಂಟಿಗೋಡೆ ಮಠದ ಶಾಸನ:** ಶಾಲಿವಾಹನ ಶಕೆ ೧೪೫೦ (ಕ್ರಿ.ಶ. ೧೫೨೮) ಕ್ಕೆ ಸೇರಿದ ಶಾಸನವಿದು. ೧೯ ಸಾಲುಗಳಲ್ಲಿ ಲೇಖಿಸಲ್ಪಟ್ಟ ಈ ಶಾಸನ ೯" ಉದ್ದ X ೨೧/೨" ಅಗಲ ಅಳತೆಯ ತಾಮ್ರಪಟದಲ್ಲಿದೆ; ಉಪನಾಯಕನಹಳ್ಳಿ ಎಂ. ವಿಶ್ವನಾಥಯ್ಯನವರಲ್ಲಿ ಸಂರಕ್ಷಿಸಲಾಗಿದೆ.

ಕಾಶೀ ವಿಶ್ವರಾಧ್ಯ ಸೂತ್ರಾನುಭವಿಗಳಾದ ಶ್ರೀ ಒಂಟಿಗೋಡೆ ಮಠದ ಪಟ್ಟದ ಚನ್ನವೀರಸ್ವಾಮಿಗಳಿಗೆ ಆ ಗ್ರಾಮದಲ್ಲಿ ಬಾಗುಳಿ ಬಸಪ್ಪನಾಯಕನು ಮಠ ಸ್ಥಾಪನೆ ಮಾಡಿ, ೧೦೮ ಲಿಂಗ ಮುದ್ರೆಗಳನ್ನು ಪ್ರತಿಷ್ಠಾಪಿಸುತ್ತಾನೆ. ಆ ಗ್ರಾಮದ ಉತ್ತರ ದಿಕ್ಕಿಗೆ ೧೫ ಮಾರು ಭೂಮಿಯನ್ನು ಇನಾಮು ಹಾಕಿಕೊಟ್ಟದ್ದಲ್ಲದೆ, ಸುತ್ತಲಿನ ಮಗಿಮಾವಿನಹಳ್ಳಿ, ತಿಮಲಾಪುರ, ಉಪನಾಯಕನಹಳ್ಳಿ ಚಿಲಕನಹಟ್ಟಿ ಗ್ರಾಮಗಳನ್ನು ದಾನಮಾಡಿದ ಉಲ್ಲೇಖವಿದೆ.



ಒಂಟಿಗೋಡೆ ಮಠದ ತಾಮ್ರಶಾಸನ ಪ್ರತಿ
(ಉಪನಾಯಕನಹಳ್ಳಿ ಗ್ರಾಮ)

### ಶಾಸನ ಪಾಠ

೧ ಶ್ರೀಮದ್ಗನಲಿಂಗ ಚಕ್ರವರ್ತಿಗಳಾದ ರಾಜಪೂಜಿತರಾದ ರಾಜ
೨ ಮಾನ್ಯ ರಾಜಶ್ರೀ ಕಾಶೀಕಲ್ಯಾಣ ಗ್ರಾಮನುಗ್ರಾಮಗಳಲ್ಲಿ ಮಠ ಮಾ
೩ ನ್ಯ ಪಡೆದ ವಿಶ್ವರಾಧ್ಯಾಯ ಸೂತ್ರಾನುಭವಿಗಳಾದ ಒಂಟಿಗೋ
೪ ಡಿ ಮಠದ ಪಟ್ಟದ ಚನ್ನವೀರಸ್ವಾಮಿಗಳಿಗೆ ಶ್ರೀಮಾನ್ ನೃಪ ಶಾ
೫ ಲಿವಾಹನ ಶಕೆ ೧೪೫೦ ನೆ ಸಂ॥ ವೈ.ಶು.೫ ಯಲ್ಲು ಶ್ರೀಮಾ
೬ ನ್ ನೃಪನಾಯಕ ಶೌರ್‍ಯದ ಭಾಷೆಗೆ ತಪ್ಪುವರಗಂಡ ಮರೆಹೊಕ್ಕ
೭ ವರ ಕಾಯುವ ಮೂರಾಜ್ಯ ಗೆಲ್ಲುವ ಬಾಗವಳಿ ಬಸಪ್ಪನಾಯ್ಕ ಶೌರ್‍ಯದ
೮ ತನ್ನ ರಾಜ್ಯವಾಡಿ ಒಂಟಿಗೋಡಿ ಗ್ರಾಮದಲ್ಲಿ ಪಟ್ಟದ ಚನ್ನವೀರ ಸ್ವಾಮಿಗ
೯ ಳ ಮಠವೆಂದು ಸ್ಥಾಪನೆ ಮಾಡ್ಸಿ ೧೦೮ ಲಿಂಗ ಮುದ್ರೆ ಸ್ಥಾಪನೆ ಮಾ
೧೦ ಡಿ ಊರ ಉತ್ತರಕ್ಕೆ ೧೫ ಮಾರು ಭೂಮಿಯನ್ನು ಇನಾಮು ಹಾ
೧೧ ಕಿ ಕೊಟ್ಟು, ಮಗಿಮಾವಿನಹಳ್ಳಿ, ತಿಮಲಾಪುರ, ಉಪನಾಯ್ಕ
೧೨ ನ ಹಳ್ಳಿ ಚಿಲಕನಹಟ್ಟಿಯೆಂಬೊ ಗ್ರಾಮಗಳನ್ನು ಇನಾಮು ಹಾಕಿ
೧೩ ಕೊಟ್ಟು ಈ ಗ್ರಾಮಗಳೊಳಗೆ ಬಾಬ್ತು ಸಾಬುಗಳಿಗೆ ನಿವೇ ಅಗ್ರ
೧೪ ಗಣ್ಯರೆಂದು ನಿಮ್ಮ ವಂಶಪಾರಂಪರ್‍ಯ ಚಂದ್ರರ್ಕಳಿರುವ ಪ
೧೫ ರ್‍ಯಾಂತ ನೀವೇ ಅನುಭವಿಸಿಕೊಂಡು ಹೋಗಬೇಕೆಂದು ನಡಿಸಿ
೧೬ ಕೊಟ್ಟ ಭೂ ಸ್ವಾಸ್ತಿ ಇನಾಮು ದಾನ ಪಟ್ಟಿ ಸಹಿ॥

**೨. ಹೊಸಕೆರೆ ಮಠದ ಶಾಸನ:** ಶಾಲಿವಾಹನ ಶಕೆ ೧೪೫೩ (ಕ್ರಿ.ಶ. ೧೫೩೧) ಕ್ಕೆ ಸೇರಿದ ಶಾಸನವಿದು. ೨೨ ಸಾಲುಗಳಲ್ಲಿ ಲೇಖಿಸಲ್ಪಟ್ಟ ಶಾಸನ ೧೨" ಉದ್ದ X ೮" ಅಗಲ ಅಳತೆಯ ತಾಮ್ರ ಪಟದಲ್ಲಿದೆ. ನಾಣ್ಯಪುರದ ಶ್ರೀ ಎಚ್.ಎಸ್.ಎಂ. ವಿರೇಶ ತಂದೆ ಚಂದ್ರಶೇಖರಯ್ಯನವರ ಒಡೆತನದಲ್ಲಿ ಇದು ಸಂರಕ್ಷಿಸಲ್ಪಟ್ಟಿದೆ.

* ಹಿರಿಯ ಶ್ರೇಣಿ ಅಧ್ಯಾಪಕ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬.



ಹೊಸಕೆರೆ ಮಠದ ತಾಮ್ರಶಾಸನ ಪ್ರತಿ
(ನಾಣ್ಯಪುರ ಗ್ರಾಮ)

ಪಡುವಿಡಿ ಸೂತ್ರಾನುವರ್ತಿಗಳಾದ ಸವಣೂರು, ಬಂಕಾಪುರ, ದಸಮಾಪುರ ಹೊಸಕೆರೆ ಮಠದ ಪಟ್ಟದ ಬಸಲಿಂಗಸ್ವಾಮಿಗಳಿಗೆ, ಹಗರಿಬೊಮ್ಮನಹಳ್ಳಿ ತಾಲೂಕು ಹೊಸಕೆರೆ ಗ್ರಾಮದಲ್ಲಿ ಬಾಗುಳಿ ಬಸಪ್ಪನಾಯಕ ಪಟ್ಟದ ಬಸಲಿಂಗಸ್ವಾಮಿಗಳ ಮಠವನ್ನು ಸ್ಥಾಪಿಸಿ, ೧೦೮ ಲಿಂಗ ಮುದ್ರೆಗಳನ್ನು ಪ್ರತಿಷ್ಠಾಪಿಸುತ್ತಾನೆ. ಈ ಗ್ರಾಮದಲ್ಲಿ ೨೫ ಮಾರು ಭೂಮಿಯನ್ನು ಇನಾಮು ಹಾಕಿಕೊಟ್ಟಿದ್ದಲ್ಲದೆ, ಸುತ್ತಲಿನ ದಸಮಾಪುರ, ಮೆಟ್ರಿ, ನಾಣ್ಯಪುರ ಗ್ರಾಮಗಳನ್ನು ದಾನ ಮಾಡಿದ ಉಲ್ಲೇಖವಿದೆ.

**ಶಾಸನ ಪಾಠ**

೧ ಶ್ರೀಮದ್ಗನಲಿಂಗಚಕ್ರವರ್ತಿಗಳಾದ ರಾಜಪೂಜಿ
೨ ತರಾದ ರಾಜಮಾನ್ಯ ರಾಜಶ್ರಿ ಶೇಡಗಲ್ ಶ್ರೀಮತ್
೩ ಶ್ರೀ ಕಲ್ಯಾಣ ಗ್ರಾಮಾನುಗ್ರಾಮಗಳಲ್ಲಿ ಮಠಮಾನ್ಯ
೪ ಪಡೆದ ಪಡುವಡಿ ಸೂತ್ರಾನುವರ್ತಿಗಳಾದ ಸವಣೂರು
೫ ಬಂಕಾಪುರ, ದಸಮಾಪುರ, ಹೊಸಕೆರೆ ಮ
೬ ಠದ ಪಟ್ಟದ ಬಸಲಿಂಗಸ್ವಾಮಿಗಳಿಗೆ ಶ್ರೀಮಾನ್‌ನೃಪ ಶಾ
೭ ಲಿವಾಹನ ಶಕೆ ೧೪೫೨ ನೆ ಸಂ॥ ತ.ಶು. ೧೦ ಯಲ್ಲು
೮ ಶ್ರೀಮಾನ್ ನೃಪನಾಯಕ ಶೌರ್‍ಯರು ಭಾಷೆಗೆ ತಪ್ಪು
೯ ವರಗಂಡ ಮರೆಹೊಕ್ಕವರ ಕಾಯುವ ಮೂರಾ
೧೦ ಜ್ಯ ಗೆಲ್ಲುವ ಬಾಗವಳಿ ಬಸಪ್ಪನಾಯ್ಕ ಶೌರ್‍ಯರು ತ
೧೧ ನ್ನ ರಾಜವಾಡಿ ಹೊಸಕೆರೆ ಯೆಂಬೀ ಗ್ರಾಮದಲ್ಲಿ
೧೨ ಪಃ ಬಸಲಿಂಗಸ್ವಾಮಿಗಳ ಮಠವೆಂದು ಸ್ಥಾಪ
೧೩ ನೆ ಮಾಡ್ಸಿ ೧೦೮ ಲಿಂಗಮುದ್ರೆ ಸ್ಥಾಪನೆ ಮಾಡ್ಸಿ
೧೪ ೩೫ ಮಾರು ಭೂಮಿಯನ್ನು, ಆ ಕೆರೆಯನ್ನು ಯಿನಾಮು
೧೫ ಹಾಕಿಕೊಟ್ಟು ದಸಮಾಪುರ, ಮೆಟ್ರಿ, ನಾಣ್ಯ
೧೬ ಪುರ ಯೆಂಬ ಇ ಗ್ರಾಮಗಳನ್ನು ಯಿನಾಮು
೧೭ ಹಾಕಿಕೊಟ್ಟ ಯೀ ನಾಲ್ಕು ಗ್ರಾಮಗಳೊಳಗೆ ಯೆ
೧೮ ತ್ತುವಳಿ ಪಡೆದು ಕಾಸು ಬಾಬ್ತು ಸಾಬುಗಳಿಗೆ
೧೯ ನೀವೆ ಅಗ್ರಗಣ್ಯನೆಂದು ನಿಮ್ಮ ವಂಶ ಪಾರಂಪರ್‍ಯ
೨೦ ಚಂದ್ರಾರ್ಕಳಿರುವ ಪರ್ಯಾಂತ ನೀವೆ ಅನುಭವಿಸಿಕೊಂ
೨೧ ಡು ಹೋಗಬೇಕೆಂದು ನಡ್ಸಿಕೊಟ್ಟ ಭೂ ಸ್ವಾಸ್ತಿ
೨೨ ಯಿನಾಮು ದಾನ ಪಟ್ಟಿ ಸಹಿ.

ಒಂಟಿಗೋಡೆ ಮಠದ ಶಾಸನದಲ್ಲಿ ಮೇಲ್ಭಾಗದ ಮಧ್ಯೆ ಶಿವಲಿಂಗದ ಚಿತ್ರ, ಎಡಭಾಗದಲ್ಲಿ ಅರ್ಧ ಚಂದ್ರಾಕಾರ ಮತ್ತು ಬಲಭಾಗದಲ್ಲಿ ಪೂರ್ಣ ಚಂದ್ರದ ರೇಖಾ ವಿನ್ಯಾಸವಿದ್ದರೆ, ಹೊಸಕೆರೆ ಮಠದ ಶಾಸನದಲ್ಲಿ ಮೇಲ್ಭಾಗದ ನಡುವೆ ಶಿವಲಿಂಗದ ಚಿತ್ರ, ಎಡಭಾಗದಲ್ಲಿ ಮಲಗಿರುವ ನಂದಿ, ಬಲಭಾಗದಲ್ಲಿ ನಿಂತಿರುವ ನಂದಿಯ ರೇಖಾ ವಿನ್ಯಾಸಗಳಿವೆ. ಈ ಎರಡು ಶಾಸನಗಳಿಂದ ಸ್ಥಳೀಯ ರಾಜಕೀಯ-ಧಾರ್ಮಿಕ ಚರಿತ್ರೆಯ ಮುಖಾಂತರ ಸಾಂಸ್ಕೃತಿಕ ನಿರ್ವಚನವನ್ನು ಹೀಗೆ ಮಾಡಬಹುದಾಗಿದೆ.

೧. ಈ ಎರಡು ಶಾಸನಗಳನ್ನು ಹಾಕಿಸಿಕೊಟ್ಟವರು ಬಾಗುಳಿಯ ಬಸಪ್ಪನಾಯಕ. ಈಗ ಹರಪನಹಳ್ಳಿ ಪಾಳೆಗಾರ ರೆಂದು ವಿದ್ವಾಂಸರ ಪರಿಗಣನೆಗೆ ಒಳಗಾದ ಇವರು ಆರಂಭ ದಲ್ಲಿ ಬಾಗಳಿಯಲ್ಲಿ ಆಡಳಿತವನ್ನು ನಡೆಸಿದರು. ಹೀಗಾಗಿ ಇಮ್ಮಡಿ ಬಸಪ್ಪ ಒಡೆಯ *(ಸೋಗೆಯ ಶಾಸನ, ಕ್ರಿ.ಶ. ೧೫೧೬)* ಮತ್ತು ಬಾಗಳಿಯ ಮಾಚಿನಾಯಕರ ಮಕ್ಕಳಾದ ವಾದಿನಾಯಕ *(ಕೊಟ್ಟೂರು ಶಾಸನ, ಕ್ರಿ.ಶ. ೧೫೮೦)*, ದಾದೆನಾಯಕನ ಮೊಮ್ಮಗ ಕುಮಾರ ಮುಮ್ಮಡಿ ಬಸಪ್ಪ ನಾಯಕ *(ಉಚ್ಚಂಗಿ ದುರ್ಗ ಶಾಸನಗಳು, ಕ್ರಿ.ಶ. ೧೭೧೪)* ಬಾಗುಳಿಯ ತಿಮ್ಮಾಜಿ *(ಬನ್ನಿಕಲ್ಲು ಶಾಸನ, ಕ್ರಿ.ಶ.೧೭೧೧)* ಮುಂತಾದವರು ಬಾಗಳಿ ಪಾಳೇಗಾರರ ವಂಶಸ್ಥರಲ್ಲಿ ಕಾಣಿಸುವ ವ್ಯಕ್ತಿಗಳು. ಈ ಪರಂಪರೆಯ ಮೊದಲ ವ್ಯಕ್ತಿಯಾಗಿ ಪ್ರಾಯಶಃ ೧೫ನೇ ಶತಮಾನದ ಪ್ರಸ್ತುತ ಶಾಸನೋಕ್ತ ಬಸಪ್ಪ ನಾಯಕನು ಆಳ್ವಿಕೆ ನಡೆಸಿರಬೇಕು. ಕ್ರಿ.ಶ. ೧೬೬೦ರ

ಶಾಸನದಲ್ಲಿ ಬಸಪ್ಪನಾಯಕನು ತನ್ನನ್ನು ವೆಂಕಟಪತಿ ದೇವರಾಯನ ಮಗನೆಂದು ಕರೆದುಕೊಂಡಿದ್ದಾನೆ. ಈತನೇ ಕ್ರಿ.ಶ. ೧೬೬೧ರಲ್ಲಿ ಮುರಿಗೆಯ ಶಾಂತರಾವುತನ ಮಗ ಗಿರಿಮಲ್ಲಪ್ಪ, ಆತನ ಮಗನಾದ ಬಸವಯ್ಯನಿಗೆ ರಾವುತ ವೃತ್ತಿ ನೀಡಿರುವುದು ಬೇರೆ ಬೇರ ಶಾಸನಗಳಿಂದ ತಿಳಿಯಬಹುದಾಗಿದೆ.

೨. ಬಾಗುಳಿ ಬಸಪ್ಪನ ಕಾಲದಲ್ಲಿ ಈ ಪಾಳೇಗಾರರ ರಾಜ್ಯವ್ಯಾಪ್ತಿ ಹರಪನಹಳ್ಳಿ ಸುತ್ತಮುತ್ತಲ ಪ್ರದೇಶವಲ್ಲದೆ, ವಿಜಯನಗರದ ಆಜುಬಾಜಿನ ವಿಭಾಗಗಳನ್ನೆಲ್ಲ ಒಳಗೊಂಡಿರುವುದು ವೇದ್ಯವಾಗುತ್ತದೆ. ಕಾರಣ, ವಿಜಯನಗರ ಸಾಮ್ರಾಜ್ಯ ಆಸ್ತಿತ್ವದಲ್ಲಿದ್ದಾಗ ಅದರ ಆಡಳಿತದಲ್ಲಿ ಅಧಿಕಾರಿ ಗಳಾಗಿದ್ದವರು. ಸಾಮ್ರಾಜ್ಯದ ಅವನತಿಯ ಕಾಲಮಾನದಲ್ಲಿ ತಮ್ಮ ಸ್ವಸಾಮರ್ಥ್ಯದಿಂದ ಸ್ಥಳೀಯ ಪಾಳೆಪಟ್ಟುಗಳನ್ನು ಸ್ವತಂತ್ರವಾಗಿ ಸ್ಥಾಪಿಸಿಕೊಂಡು ನಾಯಕ ಮನೆತನಗಳೆಂದು ಘೋಷಿಸಿಕೊಂಡಿರಬೇಕು. ಇದರಿಂದ ಬಾಗಳಿಯ ಬಸಪ್ಪ ನಾಯಕನು "ತನ್ನ ರಾಜ್ಯವಾಡಿ"ಯಲ್ಲಿ ಬರುವ ತಿಮ್ಮಲಾ ಪುರದ ಸಮೀಪದ ಒಂಟಿಗೋಡೆ ಮಠಾಧಿಪತಿಗಳಿಗೆ ಮಠ-ಮಾನ್ಯ ಹಾಕಿಸಿ ಕೊಟ್ಟಿದ್ದನ್ನು ಹಾಗೆಯೇ ಮರಿಯಮ್ಮನಹಳ್ಳಿ ಸಮೀಪದ ಉಪನಾಯಕನಹಳ್ಳಿಯನ್ನು ಇನಾಮು ಬಿಟ್ಟದ್ದನ್ನು ಈ ಎರಡೂ ಶಾಸನಗಳು ಸಮರ್ಥಿಸುತ್ತವೆ.

೩. ಹೊಸಕೆರೆ ಮಠದ ಶಾಸನ ಪಟ್ಟದ ಬಸವಲಿಂಗ ಸ್ವಾಮಿಗಳ ಮೂಲವನ್ನು ತಿಳಿಸುತ್ತದೆ. ಶ್ರೀಗಳವರು ಪಡುವಿಡಿ ಸೂತ್ರದವರು. ಅಂದರೆ ರಂಭಾಪುರಿ ಬಾಳೇಹೊನ್ನೂರು ಪೀಠದ ಶಾಖಾನುವರ್ತಿಗಳಾದವರು. ಇವರು ಬಂಕಾಪುರ, ಮತ್ತು ಸವಣೂರು ಭಾಗದಿಂದ ದಸಮಾಪುರಕ್ಕೆ ಬರುತ್ತಾರೆ. ದಸಮಾಪುರದಿಂದ ೧ ಕಿ.ಮೀ. ಅಂತರದ ಹೊಸಕೆರೆ ಗ್ರಾಮದಲ್ಲಿ ಹೊಸದಾಗಿ ಕೆರೆಯನ್ನುನಿರ್ಮಿಸಿ ಅಲ್ಲಿ ಇಂದು ಪ್ರಸಿದ್ಧವಾಗಿರುವ ವೀರಭದ್ರ ದೇವಸ್ಥಾನವನ್ನು ನಿರ್ಮಿಸಿದ್ದಾರೆಂದು ಜನವದಂತಿಯಿದೆ. ಪ್ರಾಯಶಃ ಬಾಗಳಿಯ ಬಸವನಾಯಕರು ಶ್ರೀಗಳವರ ಈ ಕರ್ತೃತ್ವ ಶಕ್ತಿಯನ್ನು ಗಮನಿಸಿ ಅವರಿಗೊಂದು ಮಠ ಕಟ್ಟಿಸಿಕೊಟ್ಟಿರಬೇಕು. ಮಠದ ಶೈಕ್ಷಣಿಕ, ಧಾರ್ಮಿಕ ಆಚರಣೆಗಳಿಗಾಗಿ ಅಲ್ಲಿಯ ಕೆರೆಯನ್ನು ಹಾಗೂ ದಸಮಾಪುರ, ಮೆಟ್ರಿ, ನಾಣ್ಯಪುರ ಗ್ರಾಮಗಳನ್ನು ಇನಾಮು ಹಾಕಿಸಿರಬೇಕು. ಈಗ ಈರಣ್ಣನ ಭವ್ಯವಾದ ದೇವಸ್ಥಾನ ಹೊಸಕೆರೆಯಲ್ಲಿದೆಯೇ ಹೊರತು ಬಸವಲಿಂಗ ಪಟ್ಟದೇವರ ಮಠ ಕಂಡುಬರುವುದಿಲ್ಲ.

೪. ಒಂಟಿ ಗೋಡೆ ಮಠದ ಶಾಸನದಲ್ಲಿಯ ಪಟ್ಟದ ಚನ್ನವೀರಸ್ವಾಮಿಗಳು ಕಾಶೀಪೀಠದ ಶಾಖಾನುವರ್ತಿಗಳು. ಇವರು ಎಲ್ಲಿಂದ ಒಂಟಿಗೋಡೆ ಗ್ರಾಮಕ್ಕೆ ಬಂದರೆಂಬುದು ತಿಳಿದು ಬರುವುದಿಲ್ಲ. ಈಗ ಚಿಲಕನಹಟ್ಟಿ ಸಮೀಪ ಒಂಟಿಗೋಡೆ ಎಂಬ ಲಂಬಾಣಿ ಸಮುದಾಯದ ತಾಂಡ ಮಾತ್ರ ವಿದ್ದು, ಗ್ರಾಮವಾಗಲೀ, ಮಠವಾಗಲೀ ಕಂಡು ಬರುವುದಿಲ್ಲ. ಈ ಗ್ರಾಮ ಸೂಚಕ 'ಒಂಟಿಗೋಡೆ' ಮನೆತನ ಗಳು ಸಂಡೂರು ತಾಲೂಕಿನ ಯಶವಂತನಗರದಲ್ಲಿ ಹಾಗೂ ಬೇರೆ ಹಳ್ಳಿಗಳಲ್ಲಿ ಈಗಲೂ ಇವೆ. ಈ ಮಠಕ್ಕೆ ಉಪನಾಯಕನಹಳ್ಳಿ, ಮಗಿಮಾಹಿನಹಳ್ಳಿ, ತಿಮಲಾಪುರ, ಚಿಲಕನಹಟ್ಟಿ ಗ್ರಾಮಗಳನ್ನು ದತ್ತಿ ಬಿಡಲಾಗಿದೆ. ಮಠದ ಪರಂಪರೆಯಲ್ಲಿ ಬರುವ ಶ್ರೀ ಎಂ. ವಿಶ್ವನಾಥಯ್ಯನವರು ಈಗ ಉಪ ನಾಯಕನ ಹಳ್ಳಿಯಲ್ಲಿ ಕೃಷಿ ಕಾಯಕ ಮಾಡಿಕೊಂಡು ಇದ್ದಾರೆ. ಅವರ ಒಡೆತನದಲ್ಲಿಯೇ ತಾಮ್ರ ಶಾಸನವಿದೆ.

೫. ನಮ್ಮ ಪಠ್ಯಕ್ರಮದಲ್ಲಿ ನಾಡಿನ ದೊಡ್ಡ ದೊಡ್ಡ ಅರಸು ಮನೆತನಗಳ ಇತಿಹಾಸ ಸೇರಿಕೊಂಡಿದೆ. ಆದರೆ ಕರ್ನಾಟಕದ ಸಮಗ್ರ ಇತಿಹಾಸ ಇದರಿಂದ ಪೂರ್ಣಗೊಳ್ಳುವುದಿಲ್ಲ. ಇವುಗಳ ನಿಜವಾದ ಅಸ್ತಿತ್ವಕ್ಕೆ ಅಧಿಕಾರ ವಿಕೇಂದ್ರೀಕರಣದ ನೆಲೆಯಲ್ಲಿ ಕಾರ್ಯಬಾಹುಳ್ಯವನ್ನು ಹಂಚಿಕೊಂಡು ದುಡಿದ ಸ್ಥಳೀಯ ಅರಸು ಮನೆತನಗಳ ಸಾಂಸ್ಕೃತಿಕ ಬದುಕು ದಾಖಲಾರ್ಹವಾದುದು. ಅಂಥ ಅಧ್ಯಯನದ ಕಡೆಗೆ ಇಲ್ಲಿಯ ಶಾಸನಗಳು ಬೆಂಬಲವಾಗಿ ನಿಲ್ಲುತ್ತವೆ. ಇವುಗಳಲ್ಲಿ ಪ್ರಸ್ತಾಪಿಸಲಾದ ೧೦೮ ಲಿಂಗಮುದ್ರೆ ಸ್ಥಾಪನೆ, ಭೂಮಿ ಸಮರ್ಪಣೆ, ಹಾಗೂ ಗ್ರಾಮ ಇನಾಮು ಸ್ವೀಕರಣೆಗಳು ಪ್ರಾಚೀನ ಕರ್ನಾಟಕದ ಸಮಾಜೋಧಾರ್ಮಿಕ ಹಾಗೂ ಆರ್ಥಿಕ ಸಂಗತಿಗಳನ್ನು ಪರಿಚಯಿಸುವುದರ ಜೊತೆಗೆ ಗುರುವರ್ಗ ಪರಂಪರೆಯಲ್ಲಿ ಕಂಡು ಬರುವ ಪಟ್ಟದ್ದೇವರ ಮಠಗಳು ಪ್ರತಿಯೊಂದು ಗ್ರಾಮದಲ್ಲಿ ವೈದಿಕ, ಜ್ಯೋತಿಷ್ಯ, ಪಾಠಶಾಲೆಗಳನ್ನು ನಡೆಸುವ ಸಂಕಲ್ಪದಿಂದ ಸಮಾಜ ಸುಧಾರಣೆಯ ಕೆಲಸದಲ್ಲಿ ತೊಡಗಿಸಿಕೊಂಡಿದ್ದವು.

ಈ ಎಲ್ಲಾ ದೃಷ್ಟಿಯಿಂದ ಇಂಥ ಸ್ಥಳೀಯ ಸಂಗತಿಗಳನ್ನು ತಿಳಿಸುವ ಇನ್ನೂ ಬಹುಸಂಖ್ಯೆಯ ಆಕರಗಳ ನಿಧಿ "ನೆಲದ ಮರೆಯ ನಿಧಾನದಂತೆ" ಇತಿಹಾಸ ತಜ್ಞರ ಕಣ್ತಪ್ಪಿ ಅವಿತುಕೊಂಡಿರುವುದು ಕಂಡು ಬರುತ್ತದೆ.

(ಈ ಲೇಖನ ಸಿದ್ಧಪಡಿಸಲು ತಮ್ಮ ಒಡೆತನದಲ್ಲಿಯ ತಾಮ್ರ ಶಾಸನಗಳನ್ನು ನೀಡಿದ ಉಪನಾಯಕನಹಳ್ಳಿ ಎಂ. ವಿಶ್ವನಾಥಯ್ಯ ಹಾಗೂ ನಾಣ್ಯಪುರದ ಎಚ್.ಎಚ್.ಎಂ. ವೀರೇಶ ಅವರ ಸಹಕಾರಕ್ಕೆ ಕೃತಜ್ಞತೆಗಳು.)



ಡಾ. ಎಚ್.ಎಸ್. ಗೋಪಾಲರಾವ್*

# ಬೆಂಗಳೂರು ಜಿಲ್ಲೆಯ ತಮಿಳು ಶಾಸನಗಳು

ಬೆಂಗಳೂರು ಜಿಲ್ಲೆಯು ಸಾಂಸ್ಕೃತಿಕ ವೈವಿಧ್ಯತೆಗಳ ಪ್ರದೇಶ. ಕ್ರಿ.ಶ. ೨೧ನೆಯ ಶತಮಾನದಲ್ಲಿ ಮಾತ್ರವಲ್ಲದೆ ಕ್ರಿ.ಶ. ೧೧ನೆಯ ಶತಮಾನದಲ್ಲೂ ಬೆಂಗಳೂರು ಜಿಲ್ಲೆ ಈಗಿನಂತೆಯೇ ಬಹುಮುಖೀ ಸಂಸ್ಕೃತಿಯ ಪ್ರದೇಶವಾಗಿತ್ತು. ಬಹುತೇಕ ಎಲ್ಲ ದೇವತೆಯರಿಗೆ ಪೂಜೆ ಸಲ್ಲುತ್ತಿತ್ತು. ಎಲ್ಲ ಧರ್ಮದವರು ಪ್ರೀತಿಯಿಂದ ಸಹಜೀವನ ನಡೆಸುತ್ತಿದ್ದರು. ಎಲ್ಲ ಭಾಷೆಗಳ, ವಿಶೇಷವಾಗಿ ಕನ್ನಡ ಭಾಷೆಯ ಜೊತೆಗೆ ತಮಿಳು ಭಾಷೆಯ ಬಳಕೆ ಕಡಿಮೆ ಎನ್ನುವಂತೇನೂ ಇರಲಿಲ್ಲ. ಬೆಂಗಳೂರಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯಾ ಕರ್ನಾಟಕದ ೯ನೆಯ ಸಂಪುಟದಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಮಾತ್ರ ಗಮನಿಸಿ, ಈ ಲೇಖನವನ್ನು ಸಿದ್ಧಗೊಳಿಸಲಾಗಿದೆ.

೧೯೦೫ನೆಯ ವರ್ಷದಲ್ಲಿದ್ದ ಬೆಂಗಳೂರು ಜಿಲ್ಲೆಯ ಸ್ವರೂಪಕ್ಕೂ ಈಗಿನ ಬೆಂಗಳೂರು ಜಿಲ್ಲೆಯ ಸ್ವರೂಪಕ್ಕೂ ತುಂಬ ವ್ಯತ್ಯಾಸಗಳಿವೆ. ಸ್ವಾತಂತ್ರ್ಯಾನಂತರ ಆಗಿರುವ ಹಲವು ಆಡಳಿತಾತ್ಮಕ ಬದಲಾವಣೆಗಳಿಂದಾಗಿ ಮೊದಲಿನ ಬೆಂಗಳೂರು ಜಿಲ್ಲೆ ಈಗ ಎರಡಾಗಿರುವುದು ಮಾತ್ರವಲ್ಲದೆ, ತಾಲ್ಲೂಕುಗಳೂ ಬದಲಾಗಿವೆ. ಮೊದಲಿಗೆ ನೆಲಮಂಗಲ ತಾಲ್ಲೂಕಿಗೆ ಸೇರಿದ್ದ ಎಷ್ಟೋ ಊರುಗಳು ಈಗ ಬೆಂಗಳೂರು ಉತ್ತರ ತಾಲ್ಲೂಕಿಗೆ ಸೇರಿವೆ. ಈಗ ಆನೇಕಲ್ ತಾಲ್ಲೂಕು ಬೆಂಗಳೂರು ನಗರ ಜಿಲ್ಲೆಯ ಭಾಗವಾಗಿದೆ. ಬೆಂಗಳೂರು ನಗರವು ಈಗ ಮಹಾನಗರವಾಗಿ ಬೆಳೆದಿದೆ. ಈ ಮಹಾನಗರದಲ್ಲಿ ಬೆಂಗಳೂರಿನ ಸುತ್ತಮುತ್ತ ಇದ್ದ ಅದೆಷ್ಟೋ ಹಳ್ಳಿಗಳು ಹೆಸರಿಸಲೂ ಈಗ ಉಳಿದಿಲ್ಲ. ಬೆಳೆಯುತ್ತಲೇ ಇರುವ ನಗರದ ಒಳಗೆ ಇನ್ನೂ ಅದೆಷ್ಟು ಹಳ್ಳಿಗಳು ಸೇರಿಹೋಗುತ್ತವೆ ಎಂದು ಅಂದಾಜು ಮಾಡಲೂ ಈಗ ಸಾಧ್ಯವಿಲ್ಲ. ಇಲ್ಲಿನ ಮಿಶ್ರ ಸಂಸ್ಕೃತಿಯ ಬಗ್ಗೆ ಸ್ಥಳೀಯರು ಆತಂಕಗೊಂಡಿರುವ ವಿಚಾರ ಹೊಸದೂ ಅಲ್ಲ. ಮತ್ತು ಸುಲಭವಾಗಿ ತಳ್ಳಿಹಾಕುವಂತಹುದೂ ಅಲ್ಲ. ವಿಶೇಷವಾಗಿ ಬೃಹತ್ ಮತ್ತು ವಿಶಿಷ್ಟ ಕೈಗಾರಿಕೆಗಳಿಗೆ ಆಶ್ರಯ ನೀಡಿ, ಬೆಳೆದಿರುವ/ಬೆಳೆಯುತ್ತಿರುವ ಮತ್ತು ಬೆಳೆಯುವ ಯಾವುದೇ ನಗರ ಬಹುಮುಖೀ ಸಂಸ್ಕೃತಿಗೆ ಆಶ್ರಯ ನೀಡಬೇಕಾದ್ದು ಅನಿವಾರ್ಯ ಎಂದು ಒಪ್ಪಿಕೊಂಡರೂ, ಬಹುಮುಖೀ ಸಂಸ್ಕೃತಿ, ಅದರಲ್ಲೂ ವಿಶೇಷವಾಗಿ ಭಾಷಿಕ ಸಂಸ್ಕೃತಿ ಸೃಷ್ಟಿಸುವ ಆತಂಕ ಗಳು ಮತ್ತು ಸಮಸ್ಯೆಗಳನ್ನು ಹಗುರವಾಗಿ ಕಾಣುವಂತಿಲ್ಲ.

೧೯೯೧ರ ಅಂಕಿ ಅಂಶಗಳ ಪ್ರಕಾರ ಬೆಂಗಳೂರಿನಲ್ಲಿರುವ ಕನ್ನಡಿಗರ ಸಂಖ್ಯೆ ಶೇ. ೩೮.೪೭ರಷ್ಟು ನಂತರದ ಸ್ಥಾನ ತಮಿಳರದು. ಅವರ ಸಂಖ್ಯೆ ಶೇ. ೨೧.೪೩. ಇದರಿಂದ ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಭಾಷಿಕರ ಸಂಖ್ಯೆ ಶೇ. ೫೦ಕ್ಕಿಂತಲೂ ಕಡಿಮೆ ಎಂಬ ಆತಂಕಕಾರಿ ಅಂಶ ತಿಳಿಯುತ್ತದೆ. ಯಾವುದೇ ಸಂಕೀರ್ಣ (ಕಾಸ್ಮೊಪಾಲಿಟನ್) ನಗರದಲ್ಲಿ ಬಹು ಭಾಷೆ, ಬಹು ಧರ್ಮ, ಬಹು ವೃತ್ತಿ ಇತ್ಯಾದಿಗಳು ಸಹಜ. ಅಂತೆಯೇ ಬೆಂಗಳೂರು ನಗರದಲ್ಲಿ ಹಲವು ಬೃಹತ್ ಕೈಗಾರಿಕೆಗಳು ಮಾತ್ರವಲ್ಲದೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಉದ್ಯಮಗಳು ಹೆಚ್ಚಿರುವುದರಿಂದ ಇಡೀ ರಾಷ್ಟ್ರ ಮಾತ್ರವಲ್ಲದೆ ವಿಶ್ವದ ಎಲ್ಲ ಭಾಗಗಳಿಂದ ಬರುವ ಉದ್ಯೋಗಿಗಳ ಸಹಜ ನೆಲೆ ಬೆಂಗಳೂರೇ ಆಗಿದೆ. ಇಂತಹ ನಗರಗಳಲ್ಲಿ ವಿಶೇಷವಾಗಿ ಸೊರಗುವುದು ಮತ್ತು ದುರ್ಬಲವಾಗುವುದು ಸ್ಥಳೀಯ ಭಾಷೆ. ಅಲ್ಪಸಂಖ್ಯಾತ ಸ್ಥಾನಕ್ಕೆ ಇಳಿಯುವ ಸ್ಥಳೀಯ ಭಾಷೆಯ ಮೇಲೆ ಎಲ್ಲರನ್ನೂ ಸಂಪರ್ಕಿಸುವ ಶಕ್ತಿ ಇರುವ ಯಾವುದೇ ಪ್ರಬಲ ಭಾಷೆ ಸವಾರಿ ಮಾಡುತ್ತದೆ. ಈಗ ಬೆಂಗಳೂರು ಎದುರಿಸುತ್ತಿರುವುದು ಇದೇ ಸಮಸ್ಯೆಯನ್ನು. ಈ ಸಮಸ್ಯೆ ಇಂದು ಸೃಷ್ಟಿಯಾಗಿರುವುದಲ್ಲ. ಸುಮಾರು ಒಂದು ಸಾವಿರ ವರ್ಷಗಳಿಂದಲೂ ಬೆಂಗಳೂರು ನಗರ ಮಾತ್ರವಲ್ಲದೆ, ಬೆಂಗಳೂರಿಗೆ ಹೊಂದಿಕೊಂಡ ಕೆಲವು ಗ್ರಾಮಗಳು, ತಾಲ್ಲೂಕುಗಳು ಮತ್ತು ಜಿಲ್ಲೆಗಳೂ ಸಹ ಈ ಸಮಸ್ಯೆಯ ಶಿಶುಗಳಾಗಿವೆ. ತಮಿಳು ಭಾಷೆಯ ಶಾಸನಗಳು ದೊರೆತಿರುವ ಪ್ರದೇಶಗಳಲ್ಲಿ ಈಗ ಇರುವುದು ಕನ್ನಡ ಜನ. ಆಕಸ್ಮಾತ್ತಾಗಿ ಇರುವ ತಮಿಳು ಭಾಷಿಕರೂ ತಮಿಳು ಭಾಷೆಯನ್ನು ಸಂಪೂರ್ಣವಾಗಿ ಮರೆತು ಕನ್ನಡಿಗರೇ ಆಗಿಬಿಟ್ಟಿದ್ದಾರೆ. ಜನಾಂಗೀಯವಾಗಿ ಕೆಲವು

* 'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩.

ಜನವರ್ಗವನ್ನು ತಮಿಳು ಭಾಷಿಕರು ಎನ್ನಬಹುದಾದರೂ, ಈಗ ಅವರಿಗೆ ಕನ್ನಡದ ವಿನಹ ಬೇರೆ ಯಾವ ಭಾಷೆಯೂ ತಿಳಿಯುವುದಿಲ್ಲ. ಈಗ ಪ್ರಸ್ತಾಪಿಸುತ್ತಿರುವ ಶಾಸನಗಳನ್ನು ಬರೆಸಿದ ಕಾಲಕ್ಕೆ ಆಯಾ ಪ್ರದೇಶಗಳಲ್ಲಿ ಬಹುತೇಕ ವಲಸೆ ಬಂದಿದ್ದ ತಮಿಳು ಭಾಷಿಕರು ನೆಲೆಸಿದ್ದರು ಎಂದು ತಿಳಿಯ ಬಹುದು. ಈಗ ತಮಿಳು ಶಾಸನಗಳು ದೊರೆತಿರುವ ಪ್ರದೇಶ ಗಳಲ್ಲಿ ಅಲ್ಪಸಂಖ್ಯಾತರಂತೆ ತಮಿಳು ಭಾಷಿಕರು ನೆಲೆಸಿದ್ದರೇ ಹೊರತು, ಅದು ಅವರ ಮೂಲನೆಲೆಯಾಗಲೀ ಶಾಶ್ವತ ನೆಲೆಯಾಗಲೀ ಆಗಿರಲಿಲ್ಲ ಎಂಬುದನ್ನು ಮೊದಲೇ ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯಕ. ಶಾಸನಗಳ ಭಾಷೆ ತಮಿಳಾದರೂ, ಲಿಪಿಯಾದರೂ ಕನ್ನಡ ವಾಗಬೇಕಾಗಿತ್ತಲ್ಲವೆ ಎಂಬ ಅನುಮಾನ ಯಾರಿಗಾದರೂ ಬರಬಹುದು. ಆದರೆ, ಇಲ್ಲಿ ನೆಲೆಸಿದ್ದ ತಮಿಳು ಭಾಷಿಕರಿಗೆ ತಮಿಳು ಲಿಪಿಯ ವಿನಹ ಬೇರೆ ಯಾವ ಲಿಪಿಯೂ ತಿಳಿದಿರಲಿಲ್ಲ ಎಂಬ ಕಾರಣದಿಂದ ಶಾಸನಗಳ ಭಾಷೆ ಮತ್ತು ಲಿಪಿಗಳು ತಮಿಳೇ ಆಗಿವೆ ಎಂದು ತಿಳಿಯಬೇಕಾಗುತ್ತದೆ.

ಕರ್ನಾಟಕದ ಗಡಿ ಭಾಗಗಳಲ್ಲಿರುವ ಕನ್ನಡ ಶಾಸನ ಗಳನ್ನು ಗಮನಿಸಿ. ಹೆಚ್ಚಾಗಿ ಕನ್ನಡ ಶಾಸನಗಳು ದೊರೆತಿರುವ ಪ್ರದೇಶಗಳು ಮೊದಲಿಗೆ ಕನ್ನಡ ಭಾಷಿಕ ಪ್ರದೇಶಗಳು ಎಂದು ತಿಳಿಯುತ್ತೇವೆ. ಅದೇ ಮಾನದಂಡವನ್ನು ಬಳಸಿ, ಹೆಚ್ಚಾಗಿ ತಮಿಳು ಶಾಸನಗಳಿರುವ ಪ್ರದೇಶಗಳು ತಮಿಳು ಭಾಷಿಕ ಪ್ರದೇಶಗಳು ಎಂಬ ಸರಳ ತೀರ್ಮಾನಕ್ಕೆ ಬರುವುದು ಅಪಾಯಕಾರಿ. ಈಗ ಎಲ್ಲಿ ತಮಿಳು ಶಾಸನಗಳು ಹೆಚ್ಚಾಗಿ ದೊರೆತಿವೆಯೋ ಅಲ್ಲೆಲ್ಲಾ ಈಗಿನಂತೆಯೇ ಹಿಂದೆಯೂ ಕನ್ನಡ ಭಾಷಿಕರ ಪ್ರಮಾಣ ಹೆಚ್ಚಾಗಿಯೇ ಇತ್ತು. ಸುಮಾರು ೧೦೦ ರಿಂದ ೩೦೦ ವರ್ಷಗಳ ಕಾಲವಾದರೂ ಆಯಾ ಪ್ರದೇಶಗಳಲ್ಲಿ ತಮಿಳು ಭಾಷಿಕರು ತಾತ್ಕಾಲಿಕವಾಗಿ ನೆಲೆಸಿದ್ದರು, ಮತ್ತು ಕ್ರಮೇಣ ಅವರು ಕನ್ನಡ ಭಾಷಿಕರೇ ಆಗಿಬಿಟ್ಟರು ಎಂಬ ಅಭಿಪ್ರಾಯದಲ್ಲಿ ಉತ್ಪ್ರೇಕ್ಷೆ ಯನ್ನು ಹುಡುಕಬೇಕಾಗಿಲ್ಲ.

ತಮಿಳು ಶಾಸನಗಳನ್ನು ಕುರಿತ ನಮ್ಮ ಅಧ್ಯಯನವನ್ನು ಹಿಂದಿನ ಸಂಯುಕ್ತ ಬೆಂಗಳೂರು ಜಿಲ್ಲೆಗೆ ಸೀಮಿತಗೊಳಿಸಿ ಕೊಳ್ಳಲಾಗಿದೆ. ೧೯೦೫ರಲ್ಲಿ ಪ್ರಕಟವಾದ ಅಂದಿನ ಬೆಂಗಳೂರು ಜಿಲ್ಲೆಯ ಶಾಸನ ಸಂಪುಟಗಳಲ್ಲಿ ಪ್ರಕಟ ಗೊಂಡಿರುವ ತಮಿಳು ಶಾಸನಗಳನ್ನು ಮಾತ್ರ ಇಲ್ಲಿ ಗಮನಿಸ ಲಾಗಿದೆ. ನಮ್ಮ ಅಧ್ಯಯನದ ಸಂದರ್ಭದಲ್ಲಿ ದೊರೆತ ಮಾಹಿತಿ ಯನ್ನು ಲಕ್ಷಿಸಿ, ಮಾಡಿಕೊಂಡಿರುವ ಪಟ್ಟಿ ಈ ಕೆಳಕಂಡಂತಿದೆ.

| ಕ್ರ.ಸಂ. | ತಾಲ್ಲೂಕು | ಒಟ್ಟು ಶಾಸನಗಳು | ತಮಿಳು ಶಾಸನಗಳು | ಶೇ. | ಪ್ರಾಚೀನ | ನೂತನ |
|---|---|---|---|---|---|---|
| ೧ | ಬೆಂಗಳೂರು | ೧೪೨ | ೫೦ | ೩೫% | ಕ್ರಿ.ಶ. ೧೦೩೩ | ಕ್ರಿ.ಶ. ೧೮೭೬ |
| ೨ | ನೆಲಮಂಗಲ | ೮೯ | ೧೨ | ೧೩% | ಕ್ರಿ.ಶ. ೧೧೦೦ | ಕ್ರಿ.ಶ. ೧೧೫೨ |
| ೩ | ಮಾಗಡಿ | ೮೨ | ೧ | ೧% | ಕ್ರಿ.ಶ. | ಕ್ರಿ.ಶ. ೧೨೮೦ |
| ೪ | ದೊಡ್ಡಬಳ್ಳಾಪುರ | ೬೮ | ೪ | ೬% | ಕ್ರಿ.ಶ. ೧೧೧೫ | ಕ್ರಿ.ಶ. ೧೩೧೬ |
| ೫ | ದೇವನಹಳ್ಳಿ | ೮೧ | ೧೭ | ೨೧% | ಕ್ರಿ.ಶ. ೧೦೪೬ | ಕ್ರಿ.ಶ. ೧೩೫೮ |
| ೬ | ಹೊಸಕೋಟೆ | ೧೬೩ | ೫೩ | ೩೩% | ಕ್ರಿ.ಶ. ೧೦೪೩ | ಕ್ರಿ.ಶ. ೧೪೧೧ |
| ೭ | ಆನೇಕಲ್ | ೯೪ | ೩೧ | ೩೦% | ಕ್ರಿ.ಶ. ೧೧೩೦ | ಕ್ರಿ.ಶ. ೧೩೮೪ |
| ೮ | ಕಾನಕಾನಹಳ್ಳಿ | ೧೧೦ | ೨೧ | ೨೮% | ಕ್ರಿ.ಶ. ೧೧೧೮ | ಕ್ರಿ.ಶ. ೧೪೪೫ |
| ೯ | ಚನ್ನಪಟ್ಟಣ | ೧೮೬ | ೮೦ | ೪೩% | ಕ್ರಿ.ಶ. ೧೦೦೦ | ಕ್ರಿ.ಶ. ೧೩೩೯ |
| | ಒಟ್ಟು | ೧೦೧೫ | ೨೬೯ | ೨೭% | ಕ್ರಿ.ಶ. ೧೦೦೦ | ಕ್ರಿ.ಶ. ೧೮೭೬ |

ಮೇಲಿನ ಪಟ್ಟಿಕೆಯಿಂದ ಕ್ರಿ.ಶ. ೧೦೦೦ಕ್ಕೆ ಮೊದಲು ಬೆಂಗಳೂರು ಜಿಲ್ಲೆಯಲ್ಲಿ ತಮಿಳು ಶಾಸನಗಳಿರಲಿಲ್ಲ ಎಂದು ಸ್ಪಷ್ಟವಾಗುತ್ತದೆ.[೧] ಕ್ರಿ.ಶ. ೧೩೮೪ರವರೆಗೆ ತಮಿಳು ಶಾಸನಗಳು ನಿರಂತರವಾಗಿ ಮುಂದುವರಿದುಕೊಂಡೇ ಬಂದಿವೆ. ನಂತರದ ಕ್ರಿ.ಶ. ೧೮೭೬ರವರೆಗಿನ ಶಾಸನಗಳು ಸೂಚನಾಫಲಕ ಗಳಂತಿವೆಯಾದರೂ ಅವುಗಳ ಐತಿಹಾಸಿಕ ಮತ್ತು ಸಾಮಾಜಿಕ ಮಹತ್ವವನ್ನೇನೂ ಲಘುವಾಗಿ ಪರಿಗಣಿಸು ವಂತಿಲ್ಲ.

ಕ್ರಿ.ಶ. ಸು. ೧೦೦೦ರ ಶಾಸನವು ಚನ್ನಪಟ್ಟಣ ತಾಲ್ಲೂಕಿನ ಮಳೂರಿನ ಕೈಲಾಸೇಶ್ವರ ದೇವಾಲಯಕ್ಕೆ ಸಂಬಂಧಿಸಿದೆ. ಇದರ ಉದ್ದೇಶವು ರಾಜರಾಜ ಚೋಳನ ಅಧಿಕಾರಿಗಳಲ್ಲೊಬ್ಬ ನಾದ ಶಿವಜ್ಞಾನ ಗಂಡರಾದಿತ್ಯನು ಭೂಮಿಯನ್ನು ಕೊಂಡು,

ಅದನ್ನು ಪೆರಿಯಮಳವೂರಿನ ರಾಜೇಂದ್ರಸಿಂಹೇಶ್ವರ ದೇವಾಲಯದಲ್ಲಿ ತಾನು ಪ್ರತಿಷ್ಠಾಪಿಸಿದ ಗಂಡರಾದಿತ್ತ ವಿಣ್ಣಗರ್ ದೇವರಿಗೆ ತೆರಿಗೆರಹಿತವಾಗಿ ದಾನ ನೀಡಿರುವುದನ್ನು ದಾಖಲಿಸುವುದೇ ಆಗಿದೆ. ಈಗ ಚನ್ನಪಟ್ಟಣಕ್ಕೆ ಹೊಂದಿಕೊಂಡಂತೆಯೇ ಇರುವ ಮಳೂರಿನ ಕೈಲಾಸೇಶ್ವರ ದೇವಾಲಯವು ಕ್ರಿ.ಶ. ೧೧ನೆಯ ಶತಮಾನದ ಕೊನೆಗೆ ಅಥವಾ ಕ್ರಿ.ಶ. ೧೧ನೆಯ ಶತಮಾನದ ಆರಂಭದ ಕಾಲಕ್ಕಾಗಲೇ ಅಸ್ತಿತ್ವದಲ್ಲಿದ್ದ ದೇವಾಲಯ. ಇಲ್ಲಿನ ಬಹುತೇಕ ಎಲ್ಲ ಶಾಸನಗಳು ಗ್ರಂಥ ಲಿಪಿಯಲ್ಲಿ ಮತ್ತು ತಮಿಳು ಭಾಷೆಯಲ್ಲೇ ಇವೆ. ಕಾಲದ ದೃಷ್ಟಿಯಿಂದ ನಂತರದ ಶಾಸನವು ಮಳೂರುಪಟ್ಟಣದ ನಾಲ್ಕು ಶಾಸನಗಳು ಇವುಗಳ ಕಾಲ ಕ್ರಿ.ಶ. ೧೦೦೭. ಮಳೂರುಪಟ್ಟಣದ ನಾರಾಯಣಸ್ವಾಮಿ ದೇವಾಲಯದಲ್ಲೇ ಇರುವ ಈ ನಾಲ್ಕೂ ಶಾಸನಗಳಲ್ಲಿ ರಾಜರಾಜ ದೇವನ ಆಳ್ವಿಕೆಯ ೨೩ನೆಯ ವರ್ಷದ ಉಲ್ಲೇಖ ಇದೆ. ಅವನ ಆಳ್ವಿಕೆ ಮುಗಿದದ್ದು ಕ್ರಿ.ಶ. ೧೦೧೧ರ ಸುಮಾರಿನಲ್ಲಿ. ನಂತರ ರಾಜೇಂದ್ರ ಚೋಳದೇವನ ಆಳ್ವಿಕೆ ಆರಂಭವಾಗುತ್ತದೆ. ಪ್ರಸ್ತಾಪಿಸಿದ ಶಾಸನಗಳಲ್ಲಿ ರಾಜರಾಜ ದೇವನ ಆಳ್ವಿಕೆಯನ್ನು ಪ್ರಸ್ತಾಪಿಸಲಾಗಿದ್ದರೂ, ದಾನವನ್ನು ನೀಡಿದವನು ಅವನಲ್ಲ. ಈ ಶಾಸನಗಳಲ್ಲಿ ರಾಜೇಂದ್ರರಸ ಚತುರ್ವೇದಿ ಮಂಗಲವಾದ ಪೆರಿಯಮಳವೂರಿನ ಸಭೆಯಲ್ಲಿ ಅಶೇಷ ಸದಸ್ಯರು ಸೇರಿ ನೀಡಿದ ವಿವಿಧ ದಾನಗಳ ಪ್ರಸ್ತಾಪವಿದೆ. ರಾಜನ ಹೆಸರನ್ನು ಮತ್ತು ಅವನ ಆಳ್ವಿಕೆಯ ಕಾಲವನ್ನು ಉಲ್ಲೇಖಿಸುವುದು ವಾಡಿಕೆ. ರಾಜನೇ ನೇರವಾಗಿ ದಾನ ನೀಡಿರುವ ಸಂದರ್ಭಗಳು ಕಡಿಮೆ. ಯಾರಾದರೊಬ್ಬ ರಾಜನ ಆಳ್ವಿಕೆಯ ಕಾಲದಲ್ಲಿ, ಸ್ಥಳೀಯ ಅಧಿಕಾರಿ ಅಥವಾ ಮಹಾಜನರು ದಾನಗಳನ್ನು ನೀಡುತ್ತಿದ್ದರು. ಹಾಗೆ ದಾನ ನೀಡುವ ಕೆಲವು ಸಂದರ್ಭಗಳಲ್ಲಿ ರಾಜನ ಆಳ್ವಿಕೆ, ಯುದ್ಧಗಳು, ಗೆಲುವು ಇತ್ಯಾದಿಗಳ ವಿವರವಾದ ಮತ್ತು ಉತ್ಪ್ರೇಕ್ಷೆ ಎನ್ನಬಹುದಾದ ವಿವರಗಳನ್ನು ದಾಖಲಿಸುತ್ತಿದ್ದರು. ನಮ್ಮ ಅಧ್ಯಯನಕ್ಕೆ ಪರಿಶೀಲಿಸುತ್ತಿರುವ ಹೆಚ್ಚಿನ ಶಾಸನಗಳು ಚೋಳರ ಆಳ್ವಿಕೆಯ ಅವಧಿಗೆ ಸೇರಿರುವುದು ಸಹಜ. ಹೊಯ್ಸಳರ ಶಾಸನಗಳೇ ಅಧಿಕವೆಂದು ಮಾನ್ಯ ರೈಸ್‌ರವರೇ ಹೇಳಿದ್ದಾರೆ. ಕರ್ನಾಟಕದ ಕೋಲಾರ, ಬೆಂಗಳೂರು, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿ ಚೋಳರ ಪ್ರಭಾವ ಅಧಿಕವಾಗಿತ್ತು. ಈ ಎಲ್ಲ ಪ್ರದೇಶಗಳೂ ತಮಿಳುನಾಡಿನ ಗಡಿಭಾಗಗಳು. ಗಂಗರು ಮತ್ತು ಹೊಯ್ಸಳರೊಡನೆ ಹೆಚ್ಚು ಸೆಣಸಾಟ ನಡೆಸಿದ ಚೋಳರು ತಮ್ಮ ಆಸುಪಾಸಿನ ಪ್ರದೇಶಗಳ ಮೇಲೆ ತಮ್ಮ ಆಡಳಿತದ ಹಿಡಿತ ಇರಿಸಿಕೊಂಡಿದ್ದರು; ಅದಕ್ಕಿಂತ ಹೆಚ್ಚಾಗಿ ಸಾಂಸ್ಕೃತಿಕ ಪ್ರಭಾವ ದಟ್ಟವಾಗಿಯೇ ಇತ್ತು. ತಮಿಳು ಶಾಸನಗಳು ದೊರೆತಿರುವ ಸ್ಥಳಗಳಲ್ಲಿ ಅಗ್ರಹಾರಗಳಿದ್ದುವು ಮತ್ತು ಅವುಗಳಿಗೆ ಹೊಂದಿಕೊಂಡಂತೆ ದೇವಾಲಯಗಳಿದ್ದವು. ಅಗ್ರಹಾರದಲ್ಲಿ ಮಹಾಜನರದೇ ಪರಮಾಧಿಕಾರ. ಆ ಮಹಾಜನರು ದೇವಾಲಯದ ಸೇವೆಗಾಗಿ ನೇಮಕಗೊಂಡು ವಲಸೆ ಬಂದು ನೆಲೆ ನಿಂತವರು. ಅವರ ಭಾಷೆ ಸಹಜವಾಗಿಯೇ ತಮ್ಮನ್ನು ನೇಮಕ ಮಾಡಿದವರ ಆಡಳಿತ ಭಾಷೆ. ಅದು ತಮಿಳು. ಹೆಚ್ಚಾಗಿ ದೇವಸ್ಥಾನಗಳ ಒಳಗೇ ಬದುಕು ನಡೆಸುವ ಅರ್ಚಕರಿಗೆ ಜನರ ಜೊತೆಗೆ ಸಂಬಂಧ ಬರುವುದು ಪೂಜೆಯ ಸಂದರ್ಭದಲ್ಲಿ ಮಾತ್ರ, ಉಳಿದಂತೆ ಸಾಮಾಜಿಕ ಬದುಕಿನಲ್ಲಿ ಅವರು ಹೊರಗೆ ಕಾಣಿಸಿಕೊಳ್ಳುವುದೇ ಕಡಿಮೆ. ಹೀಗೆ ಹೆಚ್ಚು ಜನ ಸಂಪರ್ಕವಿಲ್ಲದ ಅರ್ಚಕರು ಸ್ಥಳೀಯ ಭಾಷೆಯನ್ನು ಕಲಿಯುವ ಅವಕಾಶಗಳು ಕಡಿಮೆ. ಭಕ್ತರಿಗೂ ದೇವರು ಮತ್ತು ದೇವರಿಗೆ ಸಲ್ಲಿಸುವ ಪೂಜೆ ಮುಖ್ಯವೇ ಹೊರತು, ಅರ್ಚಕನ ಭಾಷೆ ಮುಖ್ಯವಲ್ಲ. ಅರ್ಚನೆಯಂತೂ ಸಂಸ್ಕೃತ ಭಾಷೆಯಲ್ಲಿ ನಡೆಯುವುದರಿಂದ ಕನ್ನಡ ಅಥವಾ ತಮಿಳು ಭಾಷೆ ಸಂಪರ್ಕಕ್ಕೆ ಅವಶ್ಯಕವಲ್ಲ. ಆದ್ದರಿಂದ ಚೋಳರ ಕಾಲಕ್ಕೆ ಚತುರ್ವೇದಿ ಮಂಗಲ ಎನಿಸಿಕೊಂಡ ಅಗ್ರಹಾರಗಳು ಮತ್ತು ಅಲ್ಲಿಗೆ ಹೊಂದಿಕೊಂಡ ದೇವಾಲಯಗಳಲ್ಲಿ ತಮಿಳು ಭಾಷಿಕ ಅರ್ಚಕರು ಹೆಚ್ಚಾಗಿದ್ದುದರಿಂದ ಅಲ್ಲೆಲ್ಲಾ ಸಹಜವಾಗಿಯೇ ತಮಿಳು ಶಾಸನಗಳ ಸಂಖ್ಯೆ ಹೆಚ್ಚು.

ಪ್ರಸ್ತಾಪಿಸಲಾಗುತ್ತಿರುವ ತಮಿಳು ಶಾಸನಗಳಲ್ಲಿ ಹೆಚ್ಚು ಶಾಸನಗಳು ದಾನಗಳ ಉಲ್ಲೇಖಗಳೇ ಆಗಿವೆ. ಈ ದಾನಗಳನ್ನು ನೀಡಿರುವವರು ನೇರವಾಗಿ ಯಾವುದೇ ದೊರೆಯಲ್ಲ; ಬಹುತೇಕ ಎಲ್ಲ ದಾನಿಗಳು ಸ್ಥಳೀಯ ಅಧಿಕಾರಿಗಳಾಗಿರುವುದು ಮತ್ತು ಹೆಚ್ಚು ಶಾಸನಗಳು ಆಗಿನ ಅಗ್ರಹಾರಗಳಿಗೆ ಸಂಬಂಧಿಸಿದಂತಿರುವುದು ಗಮನಿಸಬೇಕಾದ ವಿಚಾರ. ಅಗ್ರಹಾರಗಳ ಮಹಾಜನರು ಹೆಚ್ಚು ದಾನಗಳಿಗೆ ಕಾರಣಕರ್ತರಾಗಿದ್ದಾರೆ. ಆದ್ದರಿಂದ ಶಾಸನಗಳಲ್ಲಿ ಬಳಸಲಾಗಿರುವ ಭಾಷೆ ಮತ್ತು ಲಿಪಿಯು ಅವರಿಗೆ ತಿಳಿಯುವ ಮತ್ತು ಅರ್ಥವಾಗುವ ಸ್ವರೂಪದಲ್ಲಿರುವುದು ಸಹಜ. ದಾನವನ್ನು ಪಡೆದವರೂ ಸಹ ತಮಿಳು ಭಾಷಿಕರು ಎಂದು ಅವರ ಹೆಸರುಗಳೇ ಸೂಚಿಸುತ್ತವೆ. ದಾನ ನೀಡಿದ ಮತ್ತು ಪಡೆದ ಇಬ್ಬರೂ ತಮಿಳು ಭಾಷಿಕರಾಗಿದ್ದಾರೆ. ಆದ್ದರಿಂದ ಆ ಇಬ್ಬರಿಗೆ ಮಾತ್ರ ಅರ್ಥವಾಗುವ ಭಾಷೆ ಮತ್ತು ಲಿಪಿಯಲ್ಲಿ ಶಾಸನಗಳಿವೆ ಎಂಬ ತೀರ್ಮಾನಕ್ಕೆ ಬರುವ ಸಾಧ್ಯತೆಗಳಿವೆಯಾದರೂ, ಆಯಾ ಪ್ರದೇಶಗಳ ಮೂಲ ನಿವಾಸಿಗಳಿಗೆ, ಅಂದರೆ ಕನ್ನಡಿಗರಿಗೆ ಓದಲೂ ಬಾರದ ಅಕ್ಷರಗಳಲ್ಲಿ ಮತ್ತು ಭಾಷೆಯಲ್ಲಿ ಶಾಸನಗಳಿರುವುದು ಸ್ಥಳೀಯ ಆಡಳಿತಗಾರರ ದೋಷ ಎಂದು ಒಪ್ಪಿಕೊಳ್ಳಬೇಕಾದ್ದು ಅನಿವಾರ್ಯ. ಸ್ಥಳೀಯರಿಗೆ

ಪಾರದರ್ಶಕವಾಗಿಲ್ಲದ ದಾನದ ವಿವರಗಳು ಏಕಪಕ್ಷೀಯವಾದ ದಾಖಲೆಗಳಾಗಿ ಉಳಿದಿವೆ.

ಗ್ರಂಥ ಲಿಪಿ ಮತ್ತು ತಮಿಳು ಭಾಷೆಯ ಶಾಸನಗಳು ಎಲ್ಲ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಕಂಡುಬರುವುದಿಲ್ಲ. ಕೆಲವು ಆಯ್ದ ಪ್ರದೇಶಗಳಲ್ಲಿ ಮಾತ್ರ ಹೆಚ್ಚು ಸಂಖ್ಯೆಯ ತಮಿಳು ಶಾಸನಗಳಿವೆ. ಬೆಂಗಳೂರು ತಾಲ್ಲೂಕಿನ ದೊಮ್ಮಲೂರು, ಮಡಿವಾಳ, ಸಾದರಮಂಗಲ, ಬೇಲೂರು ಮತ್ತು ಬೇಗೂರುಗಳಲ್ಲಿ ಹಿಂದಿನ ನೆಲಮಂಗಲ ತಾಲ್ಲೂಕಿನ ಮತ್ತು ಈಗ ಬೆಂಗಳೂರು ಉತ್ತರ ತಾಲ್ಲೂಕಿನ ಐಗಂಡಪುರ, ದೇವನಹಳ್ಳಿ ತಾಲ್ಲೂಕಿನ ಗಂಗವಾರಪಲ್ಲಿ, ಹೊಸಕೋಟೆ ತಾಲ್ಲೂಕಿನ ಮುಗಬಾಳ, ಕಾಡುಗೋಡಿ ಮತ್ತು ಚನ್ನಪಟ್ಟಣ ತಾಲ್ಲೂಕಿನ ಮಳೂರು ಹಾಗೂ ಮಳೂರುಪಟ್ಟಣಗಳಲ್ಲಿ ತಮಿಳು ಶಾಸನಗಳ ಸಂಖ್ಯೆ ಹೆಚ್ಚು.

ದೇವಾಲಯಗಳಿಗೆ ಸಂಬಂಧಿಸಿದ ದಾನ ಶಾಸನಗಳಲ್ಲದೆ, ಕನಕಪುರ ತಾಲ್ಲೂಕಿನ ಲೇವರಹಳ್ಳಿ[೨], ಎಲಚವಾಡಿ[೩], ನಲ್ಲಹಳ್ಳಿ,[೪] ಶಾಸನಗಳು ವಿಶೇಷ ವೀರಗಲ್ಲು ಶಾಸನಗಳೂ ತಮಿಳು ಲಿಪಿ ಮತ್ತು ಭಾಷೆಯಲ್ಲಿವೆ. ಈ ವೀರರ ಹೆಸರುಗಳೂ ತಮಿಳು ಹೆಸರುಗಳಾಗಿವೆ. ಇವರು ಅಗ್ರಹಾರಗಳಲ್ಲಿದ್ದ ಬ್ರಾಹ್ಮಣ ಕುಟುಂಬಗಳಿಗೆ ಸೇರಿದವರಲ್ಲ. ದೇವಾಲಯಗಳಿಗೆ ಸಂಬಂಧಿಸಿದಂತೆ ದಾನ ನೀಡಿದವರು ಮತ್ತು ಪಡೆದವರು ಇಬ್ಬರೂ ಹೆಚ್ಚಿಗೆ ಬ್ರಾಹ್ಮಣ ವರ್ಗಕ್ಕೇ ಸೇರಿದವರು. ಅಕಸ್ಮಾತ್ತಾಗಿ ದಾನ ನೀಡಿದ ಅಧಿಕಾರ ವರ್ಗದವರು ಬ್ರಾಹ್ಮಣೇತರರಾದರೂ ದಾನ ಪಡೆದವರು ಯಾವುದೇ ಅನುಮಾನವಿಲ್ಲದೆ ಬ್ರಾಹ್ಮಣ ವರ್ಗಕ್ಕೇ ಸೇರಿದವರು. ಆದ್ದರಿಂದ ಅಗ್ರಹಾರ ಮತ್ತು ದೇವಾಲಯಗಳಿಗೆ ಸಂಬಂಧಿಸದಂತೆ ಮಾತ್ರ ತಮಿಳು ಭಾಷೆಯಲ್ಲಿ ಶಾಸನಗಳು ದಾಖಲಾಗಿಲ್ಲ. ಸಾಮಾನ್ಯ ವರ್ಗಕ್ಕೆ ಸಂಬಂಧಿಸಿದ ವೀರರನ್ನು ಸಾಹಸ ಮತ್ತು ಸಾವನ್ನು ಕುರಿತ ಶಾಸನಗಳೂ ತಮಿಳು ಭಾಷೆಯಲ್ಲಿವೆ.

ಚೋಳರ ಮಾತ್ರವಲ್ಲದೆ ಹೊಯ್ಸಳರ ಮತ್ತು ಪೂರ್ವಾಧಿರಾಯರ ಹಲವು ಶಾಸನಗಳೂ ತಮಿಳು ಭಾಷೆಯಲ್ಲಿವೆ. ಇವರುಗಳ ಕಾಲದಲ್ಲಿ ದಾನ ಅಥವಾ ಮತ್ತಾವುದೇ ವಿಚಾರಗಳು ತಮಿಳು ಭಾಷೆಯಲ್ಲಿ ದಾಖಲಾಗಲು ಆಯಾ ರಾಜಮನೆತನಗಳ ದೊರೆಗಳನ್ನು ನೇರವಾಗಿ ಹೊಣೆಗಾರರನ್ನಾಗಿಸಲು ಸಾಧ್ಯವಿಲ್ಲ. ಶಾಸನಗಳನ್ನು ಹಾಕಿಸಿರುವವರು ಸ್ಥಳೀಯರಿಗೆ ಅರ್ಥವಾಗುವುದಕ್ಕಿಂತ ದಾನ ನೀಡಿದವರಿಗೆ ಮತ್ತು ಪಡೆದವರಿಗೆ ಅರ್ಥವಾಗಬೇಕು ಎಂಬ ಕಲ್ಪನೆ ಇದ್ದಂತೆ ಕಾಣುತ್ತದೆ.

ತಮಿಳು ಭಾಷೆಯ ಕೆಲವು ಶಾಸನಗಳು ಮುಖ್ಯ ಮತ್ತು ವಿಶೇಷ ಎನಿಸುವ ವಿಷಯಗಳನ್ನು ದಾಖಲಿಸಿವೆ. ಪಾಂಚಾಲರ ನಡುವೆ ಆದ ಒಪ್ಪಂದವನ್ನು ಉಲ್ಲೇಖಿಸಿ ಬಡಗಿಗಳು ಹಾಕಿಸಿದ ದಾನವನ್ನು ದೊಮ್ಮಲೂರಿನ ಒಂದು ಶಾಸನ ದಾಖಲಿಸಿದೆ.[೫] ಗುಂಜೂರಿನ ಒಂದು ಶಾಸನವು ಕಾಲಕ್ಕೆ ಈ ಭಾಗದಲ್ಲಿ ಅಸ್ತಿತ್ವದಲ್ಲಿದ್ದ ಹಲವು ನಾಡುಗಳ ಹೆಸರನ್ನು ದಾಖಲಿಸಿದೆ.[೬] ಆ ಹೆಸರುಗಳೆಂದರೆ, ಹೆಸರು ಕುಂದಾಣಿನಾಡು, ವಿರಿವಿನಾಡು, ಮಾಸಂದಿನಾಡು, ಮುರಸು ನಾಡು, ಚೊಕ್ಕನಾಯನ್‌ಪಟ್ಟು, ಪೆಣ್ಣೈಯಾಂಡಾರ್ ಮಾಡನಾಡು, ಐಂಬುಟಿಗೂರುನಾಡು, ಎಳವೂರುನಾಡು, ಕುವಳಾಳನಾಡು, ಕೈವಾರನಾಡು ಮತ್ತು ಇಳೈಪಾಕ್ಕನಾಡು. ವೊಳಗೆರೆಹಳ್ಳಿಯ ಒಂದು ಶಾಸನವು ಕರಿಕಾಲ ಚೋಳ ಎಂಬ ಬಿರುದು ಹೊಂದಿದ್ದ ರಾಜೇಂದ್ರ ದೇವನ ಕಾಲಕ್ಕೆ ಸೇರಿದ್ದು, ಅದರಲ್ಲಿ ಚೋಳರು ಮತ್ತು ಚಾಲುಕ್ಯರಿಗೆ ಕೊಪ್ಪಂನಲ್ಲಿ ನಡೆದ ಯುದ್ಧ ಆಗ ಸಂಭವಿಸಿದ ಸಾವು ನೋವುಗಳ ವಿವರ ನೀಡುತ್ತದೆ.[೭] ಈ ಹಿಂದೆ ಪ್ರಸ್ತಾಪಿಸಲಾದ ಗುಂಜೂರಿನ ಶಾಸನದ ಪ್ರತಿಕೃತಿಯಂತೆಯೇ ಕಾಣುವ ಒಂದು ಶಾಸನ ಐಗಂಡಪುರದಲ್ಲಿದೆ.[೮] ಚಿಕ್ಕನಲ್ಲೂರಿನ ಒಂದು ಶಾಸನವು ವೈಯಣ್ಣನ್ ಕಟ್ಟಿಸಿದ್ದ ಕೆರೆಯ ಹೂಳನ್ನು ಮಹಾ ಸಾಮಂತಾಧಿಪತಿ ಸೋಮನಾಥ ಎತ್ತಿಸಿದ್ದನ್ನು ದಾಖಲಿಸಿದೆ.[೯] ಅದರಂತೆಯೇ ಪಟ್ಟಂದೂರಿನ ಕೆರೆಯನ್ನು ರಾಜರಾಜ ವೇಲನ್ ನಿರ್ಮಿಸಿದ್ದನ್ನು ಕಾಡಗೋಡಿಯ ಶಾಸನ ದಾಖಲಿಸಿದೆ.[೧೦] ಮಳೂರಿನ ನಾಲ್ಕು ಶಾಸನಗಳು ಅಲ್ಲಿಯ ಕಂಬಗಳನ್ನು ಮಾಡಿಸಿದವರ ಹೆಸರುಗಳನ್ನು ದಾಖಲಿಸಿವೆ.[೧೧] ಬೆಂಗಳೂರಿನಲ್ಲಿ ಸಿಗುವ ಇತ್ತೀಚಿನದು ಎಂದು ನಮೂದಾಗಿರುವ ಶಾಸನ ಹಲಸೂರಿನ ಸುಬ್ರಹ್ಮಣ್ಯ ದೇವಾಲಯದ ಬಳಿಯ ಕಲ್ಯಾಣ ಮಂಟಪದಲ್ಲಿದೆ. ಇದು ಕ್ರಿ.ಶ. ೧೮೭೧ರಲ್ಲಿ ಕಲ್ಯಾಣ ಮಂಟಪ ನಿರ್ಮಾಣ ಆದ ವಿಷಯವನ್ನು ದಾಖಲಿಸಿದೆ.[೧೨]

ಮಾಗಡಿ ತಾಲ್ಲೂಕಿನಲ್ಲಿ ಮಾತ್ರ ಕೇವಲ ಒಂದು ತಮಿಳು ಶಾಸನ ದೊರೆತರೆ, ಚನ್ನಪಟ್ಟಣ ತಾಲ್ಲೂಕಿನಲ್ಲಿ ಅತಿ ಹೆಚ್ಚು ಎಂದರೆ ಒಟ್ಟು ೧೮೬ ಶಾಸನಗಳ ಪೈಕಿ ೮೦ ಶಾಸನಗಳು ತಮಿಳುಭಾಷೆ ಮತ್ತು ಲಿಪಿಯಲ್ಲಿವೆ. ೧೯ನೆಯ ಶತಮಾನದಲ್ಲಿ ದಾಖಲಾಗಿರುವ ಕೊನೆಯ ತಮಿಳು ಶಾಸನವು ಹಲಸೂರಿನ ಸೋಮೇಶ್ವರ ದೇವಾಲಯಕ್ಕೆ ಸಂಬಂಧಿಸಿದ್ದು ಅದು ಸೋಮೇಶ್ವರಸ್ವಾಮಿಯ ಕಾರ್ತೀಕ ಉತ್ಸವಕ್ಕೆ ದಾನವಾಗಿ ನೀಡಲಾದ ಮನೆಯನ್ನು ಉಲ್ಲೇಖಿಸಿದೆ.[೧೩]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಚಿತ್ರದುರ್ಗ ಜಿಲ್ಲೆಯ ತಮಟಕಲ್ಲಿನಲ್ಲಿ ಕರ್ನಾಟಕದಲ್ಲಿ ಅತಿ ಪ್ರಾಚೀನ ಎನ್ನಬಹುದಾದ ವಟ್ಟೆಳುತ್ತು ಶಾಸನ ಇದೆ.
೨. **ಎ.ಕ. IX,** ಕನಕ ೧೧, ಕ್ರಿ.ಶ. ೧೩೧೦.
೩. **ಎ.ಕ. IX,** ಕನಕ ೧೨, ಕ್ರಿ.ಶ. ೧೧೧೮.
೪. **ಎ.ಕ. IX,** ಕನಕ ೩೫, ಕ್ರಿ.ಶ. ೧೧೭೮.
೫. **ಎ.ಕ. IX,** ಬೆಂಗ ೧೨, ಕ್ರಿ.ಶ. ಸು. ೧೩೦೦.
೬ **ಎ.ಕ. IX,** ಬೆಂಗ ೫೧, ಕ್ರಿ.ಶ. ಸು. ೧೩೦೧.
೭. **ಎ.ಕ. IX,** ಬೆಂಗ ೧೦೮, ಕ್ರಿ.ಶ. ಸು. ೧೦೬೦.
೮. **ಎ.ಕ. IX,** ನೆಲ ೩೮, ಕ್ರಿ.ಶ. ೧೩೦೧.
೯. **ಎ.ಕ. IX,** ಹೊಸ ೮೧, ಕ್ರಿ.ಶ. ೧೩೩೦.
೧೦. **ಎ.ಕ. IX,** ಹೊಸ ೧೪೨, ಕ್ರಿ.ಶ. ೧೦೪೩.
೧೧. **ಎ.ಕ. IX,** ಚನ್ನಪ್ಪ ೧೦೧, ೧೦೨, ೧೦೩ ಮತ್ತು ೧೦೭, ಕ್ರಿ.ಶ. ಸು. ೧೧೦೦.
೧೨. **ಎ.ಕ. IX,** ಬೆಂಗ ೧೪, ಕ್ರಿ.ಶ. ೧೮೨೧.
೧೩. **ಎ.ಕ. IX,** ಬೆಂಗ ೧೫, ಕ್ರಿ.ಶ. ೧೮೭೬.

*Man's abiding happiness is not in getting anything but in giving himself upto what is greater than himself, to ideas which are larger than his individual life, the idea of his country of humanity of God.*

***- Rabindranath Tagore***

*The most important thing in life is never to have too much of anything.*

***- Terence***

ಪ್ರೊ. ಕ.ವೆಂ. ರಾಜಗೋಪಾಲ್*

# ಹಲ್ಮಿಡಿ ಶಾಸನ ವಿರಚನೆ-೨

ಹಲ್ಮಿಡಿ ಶಾಸನವು ಹೊಯ್ಸಳರ ಆಳ್ವಿಕೆಯ ಮಧ್ಯಭಾಗದಲ್ಲಿ ಒಂದು ಕೊಂಪೆಯೆನ್ನಬಹುದಾದ ಹಲ್ಮಿಡಿ ಸ್ಥಳದ ವೀರಭದ್ರನಗುಡಿಯ ಬಳಿ ದೊರಕಿದ ಶಾಸನವಾಗಿದೆ. ಇದೇ ಕನ್ನಡದ ಮೊಟ್ಟ ಮೊದಲ ಶಾಸನವೆಂದು ವಿದ್ವಾಂಸರು ಗುರುತಿಸಿ ಇಂದಿಗೂ ಅದರ ಅಧ್ಯಯನದಲ್ಲಿ ತೊಡಗಿಸಿಕೊಂಡಿದ್ದಾರೆ. ಇದರ ಕಾಲವನ್ನು ಸುಮಾರು ಕ್ರಿ.ಶ. ೪೫೦ ಇರಬಹುದೆಂದು ಗುರುತಿಸಲಾಗಿದೆ.

ಈ ಶಾಸನವು ದೊರಕಿದ ಸ್ಥಳ ಮತ್ತು ಲಿಪಿಯ ಸ್ವರೂಪವನ್ನು ಕುರಿತಂತೆ ತಜ್ಞರು ಸು.ಕ್ರಿ.ಶ. ೧೯೩೦ ರಿಂದಲೂ ಕುತೂಹಲಕರವಾದ ಜನ ಜೀವನದ ಹೊಂದಾಣಿಕೆಯನ್ನೂ ಗಮನಿಸಿದ್ದಾರೆ. ಮುಖ್ಯವಾಗಿ ಇದು ವೀರರನ್ನು ಗೌರವಿಸಿದ ಭೂ ದಾನದ ಶಾಸನವಾಗಿದೆ. ಇಲ್ಲಿ ಕಂಡುಬರುವ ಎರಡು ಗ್ರಾಮಗಳು ಪಲ್ಮಿಡಿ ಮತ್ತು ಮೂಳಿವಳ್ಳಿಗಳು ಒಂದು ಕೆರೆಗೆ ಹೊಂದಿಕೊಂಡಂತೆ ಸುಮಾರು ಎರಡು ಮೈಲಿಗಳ ಅಂತರದಲ್ಲಿವೆ-ಇವು ಮಲೆನಾಡಿಗೆ ಸೇರಿದಂತಿರುವ ಕಾರಣ ಭತ್ತ ಮತ್ತು ಅಡಿಕೆ ತೋಟಗಳ ಅಂದರೆ ನೀರಾವರಿಯ ಗದ್ದೆ ಮತ್ತು ಬಾಗಾಯತು ಕೃಷಿಗೆ ಸೇರುತ್ತವೆ. ಜನಜೀವನವು ಈವರೆಗೂ ಹಳ್ಳಿಯದಾಗಿದ್ದು ಜನಸಂಖ್ಯೆ ಹೆಚ್ಚುತ್ತಿದೆ. ಇಂಥದರಲ್ಲಿ ಈ ಶಾಸನವು ಕನ್ನಡದ ಮೊಟ್ಟಮೊದಲ ದಾನ ಶಾಸನವೆಂಬುದು ಕುತೂಹಲಕಾರಿಯಾಗಿದೆ ಮತ್ತು ವಿದ್ವಾಂಸರು ಇದರ ಒಕ್ಕಣಿಯನ್ನು ಓದುವುದರಲ್ಲಿ ಭಿನ್ನಾಭಿಪ್ರಾಯಗಳನ್ನು ವಿದ್ವತ್ ಪೂರ್ಣವಾಗಿ ಮಂಡಿಸಿರುವ ರೀತಿಯದೂ ಆಗಿದೆ. ಇದರ ಅಸ್ಪಷ್ಟತೆಯು ಕೆಲವು ಅಪೂರ್ವ ಕನ್ನಡ(?) ಪದಗಳಿಂದ ಮತ್ತು ಇದರ ಗದ್ಯ ಸ್ವರೂಪಕ್ಕೆ ಸಂಬಂಧಿಸಿದಂತೆ ವಿಚಾರ ಮಾಡುವುದು ಅನಿವಾರ್ಯವಾಗಿದೆ. ಆದುದರಿಂದ ಈ ಬಗ್ಗೆ ದಾನಶಾಸನ-ಸಂಸ್ಕೃತ ಪ್ರಭಾವದ ಭಾಷಾ ಸ್ವರೂಪ-ಲಿಪಿಯ ಒಂದು ಸಂಪ್ರದಾಯ ಮತ್ತು ಇತಿಹಾಸ ಇವುಗಳನ್ನು ಇಡೀ ಭಾರತದ ನೆಲೆಯಲ್ಲಿ ಗಂಭೀರವಾಗಿ ವಿಚಾರಮಾಡಲು ಒಳ್ಳೆಯ ಅವಕಾಶವುಂಟಾಗಿದೆ.

**ದಾನಶಾಸನ** – ಪಲ್ಮಿಡಿ ಮತ್ತು ಮೂಟಿವಳ್ಳಿ ಗ್ರಾಮಗಳು ಇಂದಿಗೂ ನೀರಾವರಿ ಬೇಸಾಯಕ್ಕೆ ಸೇರುತ್ತವೆ (ಇದಕ್ಕೆ ಅನುಕೂಲವಾಗಿರುವಂತೆ ಯಗಚಿ ನದಿಯು ಬೇಲೂರಿನ ಬಳಿ ಹರಿಯುವುದು. ಅಣೆಕಟ್ಟು ಈಚಿನದಾಗಿದೆ. ಇದಕ್ಕೆ ಮುಂಚೆ ಮಲೆನಾಡಿನ ಭಾಗವಾಗಿ ಬೇಸಾಯಕ್ಕೆ ಮಳೆಯನ್ನು ಕೆರೆಯ ಆಶ್ರಯವನ್ನು ನಂಬಿದ ಬದುಕಾಗಿದ್ದಿತು. ಇಂದಿಗೂ ಈ ಪ್ರದೇಶಕ್ಕೆ ಉತ್ತಮ ರೀತಿಯ ಟಾರು ಬಳಿದ ಹಾದಿಯಿರುವುದಿಲ್ಲ. ಅಂಥ ಹಳೆಯ ಬೇಸಾಯದ ಪದ್ಧತಿಗೆ ಸೇರಿದ ಗ್ರಾಮಗಳು ಎರಡು, ಯುದ್ಧ ವೀರರಿಗೆ 'ಬಾಳ್ಗಟ್ಟು' ಎಂಬ ಆಚರಣೆ ಸೇರಿದಂಥವಾಗಿ ಪ್ರಸಿದ್ಧವಾಗಿದೆ. ಈಗ ಈ ಊರಿನ ಬೇಸಾಯದಲ್ಲಿ ಹಲವಾರು ಗ್ರಾಮೀಣ ರೈತರಿಗೆ ಸೇರಿ ಹೋಗಿರುವ ಹೊಲ-ಗದ್ದೆ-ಬಾಗಾಯತುಗಳಾಗಿವೆ ಮತ್ತು ಕಂದಾಯಕ್ಕೆ ಸೇರಿವೆ. ಅಂದರೆ 'ದಾನ' ವೆನ್ನುವುದು ಎಂದಿನಂತೆ ಉಳಿದಿರುವುದಿಲ್ಲ ಮತ್ತು ಇವುಗಳು 'ದಾನ'ವಾಗಿವೆ, ಎನ್ನುವುದನ್ನು ಶಾಸನವು ಮಾತ್ರವೇ ಸಮರ್ಥಿಸುತ್ತದೆ.

ದಾನ ಶಾಸನದ ಪರಂಪರೆಯು ದೇಗುಲಗಳ ಸಂದರ್ಭದಲ್ಲಿ ಇಂದಿಗೂ ಉಳಿದುಬಂದಿದೆಯಷ್ಟೆ! ಆದರೆ ಇಂಥ ಧಾರ್ಮಿಕ ಪದ್ಧತಿಯು ಹೇಗೆ ಪ್ರಾರಂಭವಾಗಿರ ಬೇಕೆಂಬುದನ್ನು ಈಗಲೂ ಗಮನಿಸಿದಂತಿಲ್ಲ. ಈ ವೀರರು ಏನು ಮಾಡಿದರೆಂಬುದೂ ಸ್ಪಷ್ಟವಿಲ್ಲ. ಇದನ್ನು ಬಾಳ್ಗಟ್ಟು ಎಂದಿರುವ ಆಚರಣೆಯು ರೈತಾಪಿಗಳಲ್ಲಿ ಗೌಣವಾಗಿರುವ ಸಾಧ್ಯತೆಯಿದೆ. ಅದುದರಿಂದ ಇದರ ಐತಿಹಾಸಿಕ ವಿಷಯವೇ ಮುಖ್ಯವಾಗಿದೆ.

ಈ ಶಾಸನವು ಹೊಯ್ಸಳರ ಆಳ್ವಿಕೆಯ ಭಾಗದಲ್ಲಿ ಕಂಡು ಬಂದುದಲ್ಲದೆ ಅವರಿಗೂ ಮುಂಚೆ ಸುಮಾರು ಕ್ರಿ.ಶ. ಐದನೆಯ ಶತಮಾನದಲ್ಲಿ ಕದಂಬರ ಆಳ್ವಿಕೆಗೆ ಸೇರಿದ್ದಿರಬೇಕಾಗುತ್ತದೆ. ಅಲ್ಲದೆ ಸಣ್ಣಪುಟ ಯುದ್ಧಗಳು ಸಾಮಾನ್ಯವೂ ಆಗಿದ್ದಿರಬಹುದಾಗಿದೆ. ಅಂಥ ಒಂದು ಯುದ್ಧದ ಗೆಲುವಾಗಿ ಈ ಶಾಸನವಿದೆ. ಅಶೋಕನ ಪಾಳಿ ಭಾಷೆಯ ಧರ್ಮ ಸಂಸ್ಥಾಪನೆಯ ಪ್ರಸಾರ ಶಾಸನಗಳಂತೆ. ಪ್ರಸ್ತುತ ಹಲ್ಮಿಡಿಯ

* ಕೆಂಗೇರಿ ಉಪನಗರ, ಬೆಂಗಳೂರು ಜಿಲ್ಲೆ.

ಶಾಸನವು ಅಂಥ ಧರ್ಮ ಪ್ರಸಾರದ ವಿಷಯವಾಗಿರುವುದಿಲ್ಲ. ಅಲ್ಲದೆ ಆ ಸಮಯದಲ್ಲಿ ರಾಜ ಧರ್ಮಕ್ಕೆ ಸಂಸ್ಕೃತವು ತನ್ನ ಸಾಹಿತ್ಯದ ಬಲದಿಂದ ಇಡೀ ಭಾರತದಲ್ಲಿ ಶಾಸ್ತ್ರ-ಭಾಷೆಯೂ ಆಗಿದ್ದಿತು. ಹಾಗೂ ಪ್ರಾದೇಶಿಕವಾದ ಮಾತಿನ ರೂಪದಲ್ಲಿದ್ದ ಭಾಷೆಗಳ ಮೇಲೆ ಸಂಸ್ಕೃತದ ಪ್ರಭಾವವು ದಟ್ಟವಾಗಿಯೇ ಇದ್ದುದಾಗಿತ್ತು. ಇಂಥ ಮಿಶ್ರಣವನ್ನು ಈ ಶಾಸನದಲ್ಲಿರುವ ಸಂಸ್ಕೃತ-ಭಾಗವತ ಸಂಪ್ರದಾಯದ ಶ್ಲೋಕದಲ್ಲಿಯೇ ಕಾಣುತ್ತೇವೆ. ಇಂಥ ಪೌರಾಣಿಕ ನೆಲೆಯು ಈ ಶಾಸನಕ್ಕಾಗಿದೆ.

ಈ ಶಾಸನದ ಭಾಷೆಯಲ್ಲಿ ಸಂಸ್ಕೃತದ ಪ್ರಭಾವವಿದ್ದು ಕನ್ನಡದ ಲಿಪಿ ಮತ್ತು ಭಾಷಾ ಸ್ವರೂಪದಲ್ಲಿ ಮೊದಲಿನದಿರಲಾರದು-ಏಕೆಂದರೆ ಇದಕ್ಕೂ ಮುಂಚೆ ಪ್ರಾಕೃತ ಮತ್ತು ಪ್ರಾಕೃತ ಸಂಸ್ಕೃತ ಶಾಸನಗಳು ಇದ್ದುವೆಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ-ಇವು ಕದಂಬರ ಆಳ್ವಿಕೆಗೆ ಸೇರಿದಂಥವಾಗಿದೆ. ಉದಾಹರಣೆಗೆ ಚಂದ್ರವಳ್ಳಿಯ ಶಾಸನ, ತಾಳಗುಂದದ ಪ್ರಣವೇಶ್ವರ ದೇಗುಲದ ಸ್ತಂಭ ಶಾಸನ, ಗುಡ್ನಾಪುರದ ಶಾಸನ (ಸ್ತಂಭಶಾಸನ) ಮತ್ತು ಬನವಸೆಯ ನಾಗಶ್ರೀ ಪ್ರಾಕೃತಶಾಸನ ಇವು ಮುಖ್ಯ. ಆದುದರಿಂದ ಈ ದಾನ ಶಾಸನವು ಅಂಥ ದಾನೇತರ ಹಾಗೂ ದಾನ ಶಾಸನಗಳ ಸಂಪ್ರದಾಯಕ್ಕೆ ಸೇರಿರುತ್ತದೆ.

* * * *

***ದಾನಶಾಸನಗಳ ಇತಿಹಾಸ***

ಕನ್ನಡ ನಾಡಿನ ದಾನ ಶಾಸನಗಳನ್ನು ಗುಹಾಂತರ ದೇವಾಲಯಗಳ ದಾನ ಶೀಲತೆಯಲ್ಲಿ ಕಾಣುತ್ತೇವೆ. ಕ್ರಿ.ಪೂ. ಒಂದು-ಎರಡನೇ ಶತಮಾನಗಳಲ್ಲಿ ಪಶ್ಚಿಮ ಕಡಲ ತೀರ ಪ್ರದೇಶಗಳಿಂದ ಪ್ರಾರಂಭವಾಗುವ ಶಾತವಾಹನರ ಕಾಲದ ಗುಹೆಗಳನ್ನು ಮಹಾಯಾನಕ್ಕೆ ಸೇರಿದ ಬೌದ್ಧರ ಆರಾಧನೆಗಾಗಿ ಗುಹೆಗಳನ್ನು ದಾನವಾಗಿ ಕಡೆಯಿಸಿದಂತೆ ಕಂಡುಬರುತ್ತದೆ. ಈ ಗುಹೆಗಳು ಪ್ರವೇಶದ್ವಾರದಿಂದ ಹಿಡಿದು ಒಳಭಾಗದ ಸುಮಾರು ಮಧ್ಯದಲ್ಲಿ ಬುದ್ಧನ ಧ್ಯಾನಮುದ್ರೆಯ ಪ್ರತಿಮೆಗಳು ಗರ್ಭಗೃಹಗಳಾಗಿ ಪರಿಣಮಿಸುತ್ತವೆ. ಅಲ್ಲದೆ ಈ ಕೇಂದ್ರಗಳು ಬೌದ್ಧ ತೀರ್ಥಕ್ಷೇತ್ರಗಳಾಗಿ ಅಭಿವೃದ್ಧಿಯಾಗಿ ವಾಕಾಟಕರ ಕಾಲಕ್ಕೆ ಪ್ರಸಿದ್ಧವಾಗುತ್ತವೆ.

ಈ ಶಾತವಾಹನರು ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದ ಕಾಲದಿಂದ ಸುಮಾರು ಕ್ರಿ.ಶ. ಏಳನೆಯ ಶತಮಾನದ ಕೊನೆಯ ತನಕ. ವಿದೇಶ ಯಾತ್ರಿಕರಿಗೂ ಮುಖ್ಯಕ್ಷೇತ್ರವಾಗುವಂತೆ ಬೌದ್ಧಮತದ ಪ್ರಭಾವವನ್ನೂ ವಿಕಾಸವನ್ನು ಕಾಣುತ್ತೇವೆ. ಇಲ್ಲಿಗೆ ಚೈನಾ ಭಿಕ್ಷುಗಳಲ್ಲಿ ಪ್ರಮುಖನಾದ ಹ್ಯೂಯತ್ಸಾಂಗನು ಬರೆದಿರುವ ಗ್ರಂಥವು ಪ್ರಸಿದ್ಧವಾಗಿರುವುದಲ್ಲದೆ ಬಾದಾಮಿ ಚಾಲುಕ್ಯರು ಮತ್ತು ಹರ್ಷಚಕ್ರವರ್ತಿಯ ಐತಿಹಾಸಿಕ ಸಂಪರ್ಕವನ್ನೂ ಕಾಣುತ್ತೇವೆ. ಹೀಗೆ ಗುಹಾಂತರ ದೇವಾಲಯಗಳ ಉಗಮವನ್ನು ಗುರುತಿಸುವಲ್ಲಿ ಕ್ರಿ.ಪೂ. ಎರಡನೇ ಶತಮಾನದಿಂದ ಅದರಲ್ಲೂ ಕರ್ನಾಟಕದ ಮಹಾಭೋಜ ವಂಶಕ್ಕೆ ಸೇರಿದ 'ಲೇಣ'ಗಳು ಪ್ರಸಿದ್ಧ ದಾನಗಳು ಆಗಿವೆಯಷ್ಟೆ ಇವುಗಳಲ್ಲಿ ಪ್ರಾಕೃತ ಭಾಷೆಯ ಶಾಸನಗಳಿಂದ ಮೊದಲಾಗಿ ಬೌದ್ಧ ಮಹಾಯಾನದ ಸಂದರ್ಭಗಳಲ್ಲಿ ಸಂಸ್ಕೃತ ಶಾಸನಗಳು ಬಳಕೆಗೆ ಬಂದಿರುವುದನ್ನು ಕಾಣುತ್ತೇವೆ. ಅವುಗಳಲ್ಲಿನ ಕ್ರಮವನ್ನು ಗುರುತಿಸಿದಲ್ಲಿ ಹಲ್ಮಿಡಿ ಶಾಸನದವರೆಗಿನ ದಾನ ಶಾಸನದ ಪರಂಪರೆಯನ್ನು ಗುರುತಿಸಲು ಸಾಧ್ಯವಾಗುತ್ತಿದೆ- ಇದನ್ನು ಜಾನ್‌ಬರ್ಗಿಸ್‌ರವರ ಗ್ರಂಥದಿಂದ ಆಧರಿಸಲಾಗಿದೆ.

***ಬೌದ್ಧ ಕೇಂದ್ರಗಳು ಮತ್ತು ಅವಶ್ಯ ವಿವರಗಳು***

ಅಶೋಕನ ಶಾಸನಗಳಲ್ಲಿ ಮೂರು ಗುಹಾಂತರಗಳಲ್ಲಿ ಕಂಡುಬಂದಿವೆ. ಇವುಗಳಲ್ಲಿ ಮೊದಲೆರಡು ಆತನು ಪಟ್ಟಾಭಿಷಿಕ್ತನಾದ ಹನ್ನೆರಡು ವರ್ಷಗಳ ನಂತರ ಅಂದರೆ ಅವನ ಆಳ್ವಿಕೆಯ ಹದಿಮೂರನೆಯ ವರ್ಷದಲ್ಲಿಯೂ ಮೂರನೆಯದನ್ನು ಅದೇ ರೀತಿ ಹತ್ತೊಂಬತ್ತನೆಯ ವರ್ಷದಲ್ಲಿಯೂ ಕೆತ್ತಿಸಿದನೆನ್ನಲಾಗಿದೆ.

ಗುಹಾಂತರಗಳಲ್ಲಿ ೧.Barabar hills- ಸುದಾಮಗುಹೆ, ಮೊದಲಿಗೆ ಇದನ್ನು ನ್ಯಗ್ರೋಧಗುಹೆ ಎನ್ನಲಾಗಿತ್ತು. ಇದನ್ನು ಅಶೋಕನು ಆಜೀವಕರಿಗೆ [ಭಿಕ್ಷುಗಳು] ಮೀಸಲು ಮಾಡಿದ್ದನು. ಅಶೋಕನು ತನ್ನ ಪ್ರಿಯದರ್ಶಿ ಎಂಬ ಹೆಸರಿನಿಂದ ತನ್ನ ಪಟ್ಟಾಭಿಷೇಕದ ೧೨ ವರ್ಷಗಳ ನಂತರ ರಚಿಸಿದುದಾಗಿದೆ. ಅದೇ ಬಾರಾಬರದ ಮತ್ತೊಂದು ಗುಹೆಯಲ್ಲಿ ಇದನ್ನು ಈಗ ವಿಶ್ವ ಝೋಪ್ರಿಗುಹೆ ಎಂದು ಕರೆಯುತ್ತಿದ್ದಾರೆ -ಸ್ವಲತಿಕಾ ಬೆಟ್ಟ(hill)ದಲ್ಲಿನ ಈ ಗುಹೆಯನ್ನು ಅಜೀವಕರಿಗೆ ಮೀಸಲು ಮಾಡಲಾಗಿದೆ.

-ಅದೇ ಗುಹೆಯಲ್ಲಿ ಮೂರನೆಯ ಶಾಸನವಿದೆ- ಕರ್ಣಚೌಡರ ಎಂದು ಇದನ್ನು ಕರೆಯಲಾಗಿದೆ. ಅಶೋಕನ ಪಟ್ಟಾಭಿಷೇಕದ ಹತ್ತೊಂಬತ್ತನೆಯ ವರ್ಷದ ನಂತರದಲ್ಲಿ ಪ್ರಿಯದರ್ಶಿಯಿಂದ ಅದೇ ಸ್ವಲತಿಕಾ ಗುಹೆಯು ಪ್ರವಾಹಗಳ ಕಾರಣ ಮಳೆಗಾಲದ ವಾಸಕ್ಕಾಗಿ ಎಂದು ಮೀಸಲಾಗಿದೆ.

ಅಶೋಕನು ಆಜೀವಿಕರಿಗಾಗಿ ಮಾಡಿಸಿದ ಬಾರಾಬರ- ಬಿಹಾರ್, ಗುಹೆಗಳು ದಕ್ಷಿಣ ಭಾರತದಲ್ಲಿ ಮುಂದುವರಿದಂತೆ ಕಂಡುಬರುತ್ತದೆ. ಇವುಗಳಲ್ಲಿ ಈಗಿನ ಮಹಾರಾಷ್ಟ್ರಕ್ಕೆ ಸೇರಿದಂತೆ 'ಕುಡ'ದ ಗುಹೆಗಳು (ಲೇಣಗಳು) ಮುಖ್ಯವಾಗುತ್ತವೆ.

ಇಲ್ಲಿ ಐತಿಹಾಸಿಕವಾಗಿ ಗಿರಿನಾರ್‌ದ ರುದ್ರದಾಮನ್ ಶಾಸನದ ವಿಷಯ (ಇದು ಸಂಸ್ಕೃತದಲ್ಲಿದ್ದು probobly A.D. 150) ಆತನ ೭೨ನೇ ವಯಸ್ಸಿನದೆಂದಿರುವುದರಿಂದ

ಮುಂದಿನ ಶಾಸನಗಳಿಗೆ ಮುಖ್ಯವಾಗಬಹುದಾಗಿದೆ. ಇಲ್ಲಿನ ಸಂಸ್ಕೃತ ಲಿಪಿಯ ಕುಡದ ಗುಹಾಲಿಪಿಗಳಿಗೆ ಹೋಲುತ್ತದೆ ಎಂದು ಜಾನ್ ಬರ್ಗೆಸ್ ಅವರು ಗುರುತಿಸುತ್ತಾರೆ. ಇವುಗಳಲ್ಲಿ ಗಾ, ಜಾ, ಟ, ಣಾ, ತೊ, ಥಾ, ಧಿ, ನೌ, ಪಿ, ಭಿ, ಯೌ.ವಿ.ಷಿ.ಟೀ –ಕುಡದ ಶಾಸನ (ಸಂಸ್ಕೃತ)ಗಳಿಂದ ಖಿ, ಗೆ, ಘೊ.ಜಿ, ಥೆ, ಢಿ, ಪ್ರ, ಬೊ, ಮಿ, ರಿ, ಟಿ.ಸಿ,

ಹೀಗೆ ಲಿಪಿ ಸಾಮ್ಯವನ್ನು ಗುರುತಿಸುತ್ತಾರೆ. ಅದುದರಿಂದ ಸದರಿ ಶಾಸನಗಳನ್ನು ಗಮನಿಸಬಹುದು.

ಕುಡ ಶಾಸನ ಸಂಖ್ಯೆ–೭ ಸಂಸ್ಕೃತದಲ್ಲಿ ನಾಲ್ಕು ಸಾಲುಗಳಿವೆ.

ದೇಯ ಧರ್ಮೋ(ರ್ಮೋ)ಯಂ ಶಾಕ್ಯೋ ಪಾ

ಸಿರ[ಕಾ] ವ್ಯಾಪ್ರ [ಫ್ರೀ] ಕಾಯಾ ಯದೆ ಅತ್ರ

ಪುಣ್ಯ[ಮ್] ತದ್ಭವತು ಮಾತಾಪಿತೃ ಪೂ

ರ್ವ್ವಂಗಮಮ್ ಕೃತ್ವಾ ಸರ್ವ್ವಸತ್ವಾನಾ[ಮ್] ಅನುತ್ತ(ರ)ಜ್ಞಾ

ನಾವಾಪ [ಪ್ತ]ಯ[ಯೆ]

ಹೀಗೆಯೆ ಮುಂದಿನ ೩ ಶಾಸನಗಳು ಸಂಸ್ಕೃತ ಭಾಷೆ ಯಲ್ಲಿವೆ. [ಉಳಿದವು ಪಾಲಿಯ ಬ್ರಾಹ್ಮೀ ಲಿಪಿಯಲ್ಲಿವೆ]– – ಮೇಲಿನ ಶಾಸನದಲ್ಲಿ (೧) 'ಧರ್ಮ್ಮೋರ್ಯಂ' ಎಂಬುದರಲ್ಲಿ ಪಿ ಎಂಬ ಲಿಪಿಯು ಮುಂದಿನ ಸಾಲನ್ನೂ ಆಕ್ರಮಿಸುವುದರಿಂದ ಆ ಎರಡನೆಯ ಸಾಲು ಮಧ್ಯೆ ಪದವನ್ನು ಕತ್ತರಿಸುತ್ತದೆ.

(೨) ಲಿಪಿಯು ಅಂದವನ್ನು ಕಳೆದುಕೊಳ್ಳುತ್ತದೆ. ಆಕಾರವು ಕೂಡ ಎರಡು ಸಾಲುಗಳನ್ನು ತುಂಬಿಕೊಳ್ಳುವುದನ್ನು ಹಲ್ಮಿಡಿ ಶಾಸನವನ್ನು ನೆನಪಿಗೆ ತರುತ್ತದೆ– [ಬ್ರಾಹ್ಮೀ] ಇಂತಹ ಅಕ್ಷರಗಳು ಬ್ರಾಹ್ಮಿಯಲ್ಲಿಯೇ ಇರುವಾಗ, ಅಲ್ಲದೆ ಅಶೋಕನ ಶಾಸನಗಳಲ್ಲಿ ಎರಡು ಮೂರು ಶತಮಾನಗಳ ಕಾಲ ಪಳಗಿರುವಾಗ ಸಂಸ್ಕೃತ ಲಿಪಿಯು ಬ್ರಾಹ್ಮೀ ಲಿಪಿಯಲ್ಲಿ ಇನ್ನೂ ಹೊಸದಾಗಿರುವುದನ್ನು ಸಂಸ್ಕೃತ ಶಾಸನಗಳಲ್ಲಿ ಮೊದಲ ಹಂತದ ಪ್ರಯತ್ನ ಗಳೆಂಬುದನ್ನೂ ಗಮನಿಸಬಹುದಾಗಿದೆ.

(೩) ಹಲ್ಮಿಡಿ ಶಾಸನದ ವೇಳೆಗೆ ಲಿಪಿಯು [ಭಾಷೆಯಲ್ಲಿ ಸಂಸ್ಕೃತವಾದರೂ] ಪಳಗಿರುವುದನ್ನೂ ಮರೆಯು ವಂತಿಲ್ಲ–

ವಾಸ್ತವದಲ್ಲಿ ಗುಹಾಲಿಪಿಗೂ ಹಲ್ಮಿಡಿ ಲಿಪಿಗೂ ಸಾಕಷ್ಟು ಅಂತರವನ್ನು ಗುರುತಿಸಬಹುದು. ಹಲ್ಮಿಡಿಯ ಲಿಪಿಯ ಆಕಾರವು ಇನ್ನೂ ಗುಹಾಲಿಪಿಯನ್ನೇ ಹೋಲುತ್ತದೆ ಯಲ್ಲದೆ ಮೇಲೆ ಸೂಚಿಸಿರುವಂತೆ ಎರಡು ಸಾಲು ಗಳನ್ನು ತುಂಬಿಕೊಳ್ಳುತ್ತದೆ. ಅದೆ 'ಅ' ಕಾರವು ಬಲ ದಿಂದ ಎಡಕ್ಕೆ ಬರೆಯುವ ಶೈಲಿಯಲ್ಲಿದೆ

೪) ಆದುದರಿಂದ ಹಲ್ಮಿಡಿ ಲಿಪಿಯು ಅರೆಮಾಯಿಕ್, ಲಿಪಿ ಗಳಿಂದ ಪ್ರೇರಿತವಾದ ಬ್ರಾಹ್ಮೀ ಲಿಪಿಯ ವರ್ಗಕ್ಕೆ 'ಸೂಕ್ಷ್ಮವಾಗಿ' ಸೇರುತ್ತದೆ. ಹಲ್ಮಿಡಿಯ ಲಿಪಿಯಲ್ಲಿ ಅನೇಕ ಅಕ್ಷರಗಳು ಬಲಗಡೆಯಿಂದ ಪ್ರಾರಂಭವಾಗಿ ಎಡಕ್ಕೆ ಹೊರಳಿ ನಂತರದಲ್ಲಿ ಇಡೀ 'ಅಕ್ಕರ'ವು ಎಡದಿಂದ ಬಲಕ್ಕೆ ಹರಿಯುವ ಲಿಪಿಯಾಗುತ್ತದೆ. ಅಂಥದಲ್ಲಿ ಸಾಮಾನ್ಯವಾಗಿ 'ಅ'ಕಾರದಂತೆ ತಲೆಕಟ್ಟು ೯–ವಿರುವುದಿಲ್ಲ ಬದಲು ಮೊಳೆಯ ತಲೆ. 'T'ಯನ್ನು ಪಡೆದಿರುತ್ತವೆ. ಎರಡೂ ಬಗೆಯ ಸಮ್ಮಿಶ್ರಣವನ್ನು ಸಾಮಾನ್ಯವಾಗಿ ಕಾಣುತ್ತೇವಷ್ಟೆ !

(೫) ಹಲ್ಮಿಡಿ ಶಾಸನದ ಪ್ರಾರ್ಥನೆಯ ಸ್ವರೂಪವನ್ನು ಗಮನ ದಲ್ಲಿ 'ಕುಡ'ದ ಸಂಸ್ಕೃತ–ಗುಹಾ ಲಿಪಿಯ ಅಂಶಗಳನ್ನು ಗುರುತಿಸಬಹುದು.

(೬) 'ದಕ್ಷಿಣ ಭಾರತದ ಗುಹಾಲಿಪಿ'ಯೆಂದೂ ಅದರ ಪ್ರಭಾವದಲ್ಲಿ ಹಲ್ಮಿಡಿಯ ಲಿಪಿಯೂ ವಿಕಾಸವಾಗಿರ ಬಹುದೆಂಬ ಸೂಚನೆಯನ್ನು ಕೊಡುವಲ್ಲಿ:

– ಶಾಸನದ ಉದ್ದಿಶ್ಯವು ಪ್ರಾರ್ಥನೆಯನ್ನು ಒಳಗೊಳ್ಳುವು ದನ್ನೂ ಗುರುತಿಸಬಹುದು.

ಉದಾ :– ಕುಡ ಮತ್ತು ಜನ್ನರ್ ಗುಹೆಗಳಲ್ಲಿ ಮಾಡಿಸಿದ 'ದಾತಾರ'ರ ಹೆಸರು ಮಾತ್ರ ಕೆತ್ತಿದ್ದು ನಂತರ 'ಸಿಧಂ'...ಎಂದು ಪ್ರಾರಂಭವಾಗಿ 'ಧೇಯಂ' ಎಂದು ಮುಗಿಯುತ್ತವೆ. 'ದೇಯಂ' ಧಂಮಲ ಲೇಣಂ'. '*Hail The Meritorious gift of a dwelling cave by ....*" ಎಂದೇ ಅನುವಾದಿಸಲಾಗಿದೆ [-Kuda Inscriptions-Cave Temples of India.]

(೭) ಸಾಮಾನ್ಯವಾಗಿ ಶಾಸನಗಳು 'ಸ್ವಸ್ತಿ' ಎಂಬುದರಿಂದ ಮುಗಿತಾಯವಾಗುತ್ತವೆಯಷ್ಟೆ–'ಹಲ್ಮಿಡಿ'ಯಲ್ಲಿಯೂ ಇದು ಕಂಡುಬಂದಿದೆ.

ಜುನ್ನರದ ಕೆಲವು–ಕೇವಲ ಹೆಸರು ಮಾತ್ರ ಕಂಡು ಬರುವ ಶಾಸನಗಳ ಮೊದಲಿಗೆ ಹಾಗೂ –ಚಿತ್ರಗಳಿವೆ. ಇದೇ ಮುಂದೆ ಸ್ವಸ್ತಿ'ಯಾಗಿರುವು ದರಲ್ಲಿ ಸಂಶಯವಿರಲಾರದು. ಉದಾ : ಗೆ ಜುನ್ನರದ ೧೧, ೧೨, ೧೩ ನೇ ಶಾಸನಗಳು–

[*Junnar Inscriptions* Archeological survey of India. Plate XLIX. Editor. Jas Bargess 1878-1879. Varanasi Indological Book House 1964]

- ಕೊನೆಯದಾಗಿ ಕುಡಾ, ಕಾರ್ಲ, ಜುನ್ನರ್ ಮೊದಲಾದ ದಕ್ಷಿಣಭಾರತದ ಬೌದ್ಧ ಗುಹೆಗಳಿಂದ ಮೊದಲಾದ ಶಾಸನಗಳ ಪರಂಪರೆಯು ಕನ್ನಡ ಶಾಸನಗಳಿಗೂ ಸೇರುತ್ತದೆ. ಹಲ್ಮಿಡಿ ಶಾಸನವು ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ.




೧. ಇದರ ಪ್ರಾರ್ಥನಾ ಭಾಗಕ್ಕೆ ಭಾಗವತ ಸಂಪ್ರದಾಯವನ್ನು ಗುರುತಿಸಬಹುದು.

೨. ಹಲ್ಮಿಡಿ ಶಾಸನದ 'ಒಡಲ' ಭಾಷಾ ಸ್ವರೂಪಕ್ಕೆ ಸಂಸ್ಕೃತದ ಭಾಷೆಯನ್ನು ಲಿಪಿಯಲ್ಲದೆ ಶೈಲಿಯನ್ನೂ ಗುರುತಿಸಬಹುದು.

೩. ಈ ಶಾಸನದ ಚೌಕಟ್ಟು ಕುಡ, ಜುನ್ನಾರ್ ಮೊದಲಾದ ಗುಹಾ-ಶಾಸನಗಳನ್ನು ಮುಂದುವರಿಸಿದಂತೆ ಸೂಚಿಸಬಹುದು.

೪. ಮೊದಲಿಗೆ ಪಾಲಿ ಭಾಷೆಯ ಬ್ರಾಹ್ಮೀ ಲಿಪಿಯು ಸಂಸ್ಕೃತ ಭಾಷೆಗೆ ಮಹಾಯಾನಾ ಬೌದ್ಧ ಸಂಪ್ರದಾಯಗಳು ಅವಕಾಶ ಕಲ್ಪಿಸಿದಾಗ ಸಂಸ್ಕೃತ ಶಾಸನಗಳು ಕನ್ನಡಕ್ಕೂ ಹಾದಿಮಾಡಿದವು.

೫. ಬ್ರಾಹ್ಮೀ ಲಿಪಿಯ ಹುಟ್ಟು-ಬೆಳವಣಿಗೆಯ ಬಗ್ಗೆ ಪ್ರತ್ಯೇಕವಾದ ಅಧ್ಯಯನದ ಅವಶ್ಯತೆಯನ್ನು ಕಾಣಬಹುದು. ಏಕೆಂದರೆ ಅದರ ಉಗಮದ ಸಮಯದಲ್ಲಿ ಅಶೋಕನ ಶಾಸನಗಳು, ಖರೋಷ್ಠಿ ಹಾಗೂ ಗ್ರೀಕ್ ಭಾಷೆಗಳಲ್ಲಿಯೂ ರಚಿತವಾಗಿವೆ.



ಡಾ. ಪಿ.ಎನ್. ನರಸಿಂಹಮೂರ್ತಿ*

# ಚಕ್ರವರ್ತಿ ಇಮ್ಮಡಿ ಹರಿಹರನ ತಿರುವೈಲು ಶಾಸನ

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲ್ಲೂಕಿನ ಒಂದು ಪುಟ್ಟ ಗ್ರಾಮ ತಿರುವೈಲು. ಕಾರ್ಕಳ–ಮಂಗಳೂರು ಹೆದ್ದಾರಿಯಲ್ಲಿ ಓಮಂಜೂರು ಗ್ರಾಮಕ್ಕೆ ಎರಡು ಕಿ.ಮೀ. ದೂರ ಪೂರ್ವ ಭಾಗದಲ್ಲಿದೆ. ಇಲ್ಲೊಂದು ಅಮೃತೇಶ್ವರ ಎಂದು ಕರೆಯಲ್ಪಡುವ ಪ್ರಾಚೀನ ಈಶ್ವರ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ಈ ದೇವಸ್ಥಾನದ ಒಳ ಪ್ರಾಕಾರದ ಅಗ್ನೇಯ ದಿಕ್ಕಿನಲ್ಲಿ ಗರ್ಭ ಗುಡಿಯ ಅಧಿಷ್ಠಾನಕ್ಕೆ ತಾಗಿದಂತೆ ಒಂದು ಬೃಹತ್ ಶಾಸನ ಕಲ್ಲನ್ನು ನಿಲ್ಲಿಸಲಾಗಿದೆ. ಇದು ವಿಜಯನಗರ ಚಕ್ರವರ್ತಿ ಇಮ್ಮಡಿ ಹರಿಹರನ ಕಾಲದ್ದು. ಈ ಅಮೃತೇಶ್ವರ ದೇವಾಲಯಕ್ಕೆ ಸಂಬಂಧಿಸಿದಂತೆ ಇರುವ ಒಂದು ಪ್ರಮುಖ ಚಾರಿತ್ರಿಕ ದಾಖಲೆಯಾದ ಈ ಶಾಸನದ ಬಗ್ಗೆ ಒಂದು ಸಂಶೋಧನಾತ್ಮಕ ಚಿಂತನೆಯನ್ನು ಇಲ್ಲಿ ಪ್ರಥಮ ಬಾರಿಗೆ ಮಾಡಲಾಗಿದೆ.

ಎಪ್ಪತ್ತಮೂರು ಸಾಲುಗಳ ಬರಹ ಇರುವ ಇದೊಂದು ಬೃಹತ್ ಶಾಸನ. ದೊಡ್ಡ ಶಿಲಾಫಲಕದ ಎರಡೂ ಬದಿಯಲ್ಲಿ ಇದನ್ನು ಕಂಡರಿಸಲಾಗಿದೆ. ಇದರ ಲಿಪಿ ಮತ್ತು ಭಾಷೆ ಎರಡೂ ಕನ್ನಡ. ಶಾಸನವು ಶಕವರುಷ ೧೩೧೨ ನೆಯ ಶುಕ್ಲ ಸಂವತ್ಸರ ಮೇಷ ಮಾಸ ೧ನೆಯ ಸೋಮವಾರಕ್ಕೆ ಸೇರಿದ್ದು. ಇದು ಕ್ರಿ.ಶ.೧೩೮೯ ಮಾರ್ಚ್ ೨೬ಕ್ಕೆ ಸರಿಹೊಂದುತ್ತದೆ. ಆದರೆ ವಾರ ಮಾತ್ರ ಶುಕ್ರವಾರವಾಗುತ್ತದೆ, ಸೋಮವಾರ ಅಲ್ಲ. ಮೇಷ ೧೧ ಆದರೆ ಅದು ಕ್ರಿ.ಶ. ೧೩೮೯ ಏಪ್ರಿಲ್ ೫ಕ್ಕೆ ಸರಿಹೊಂದುತ್ತದೆ. ಅಂದು ಸೋಮವಾರವಾಗಿತ್ತು. ಪ್ರಾಯಶಃ ಶಾಸನದ ನಿಜವಾದ ತೇದಿ ಇದಾಗಿರಬೇಕು. ಪ್ರಾರಂಭಿಕ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರೆತಿರುವ ಇತರ ವಿಜಯನಗರ ಕಾಲೀನ ಶಾಸನಗಳಂತೆ ಈ ಶಾಸನದ ಭಾಷೆ ಮತ್ತು ಲಿಪಿಗಳಿವೆ.

ಈ ಶಾಸನವು ರಾಜನನ್ನು 'ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರ ಹರಿಹರಮಹಾರಾಯ' ಎಂದು ಉಲ್ಲೇಖಿಸಿದೆ. ರಾಜನ ಬೇರಾವ ಬಿರುದುಗಳೂ ಇಲ್ಲಿ ಉಲ್ಲೇಖಗೊಂಡಿಲ್ಲ.

ಆಗ ಮಲಗರಸನು ಮಂಗಳೂರು ರಾಜ್ಯದ ರಾಜ್ಯಪಾಲನಾಗಿ ಕಾರ್ಯ ನಿರ್ವಹಿಸಿದ್ದ. ಪ್ರಧಾನ, ಮಹಾ ಪ್ರಧಾನ, ದಂಡನಾಯಕ ಇತ್ಯಾದಿಯಾದ ಯಾವ ವಿಶೇಷಣಗಳೂ ಇಲ್ಲದೆ ಶಾಸನ ಈತನನ್ನು ಹೆಸರಿಸಿದೆ. ಪ್ರಾಯಶಃ ಯಾವುದೋ ಹಿರಿಯ ಅಧಿಕಾರಿಯ ಆಜ್ಞಾವರ್ತಿಯಾಗಿ ಈಗ ಕಾರ್ಯನಿರ್ವಹಿಸಿರಬೇಕು. ಅಲ್ಲದೆ ಈತನ ಕುರಿತಾಗಿ ದೊರೆತಿರುವ ಶಾಸನ ಇದೊಂದೆ. ಹಾಗಾಗಿ ಎಷ್ಟು ಕಾಲ ಈತ ರಾಜ್ಯಪಾಲನಾಗಿ ಕಾರ್ಯನಿರ್ವಹಿಸಿದ್ದ ಎನ್ನುವುದು ಗೊತ್ತಾಗುವುದಿಲ್ಲ. ಬಾರಕೂರಿನಲ್ಲಿ ದೊರೆತಿರುವ ಎರಡು ಶಾಸನಗಳ ಪ್ರಕಾರ *[ಎಸ್.ಐ.ಐ. ಸಂ.೭.ಸಂ. ೩೫೧ (ಕ್ರಿ.ಶ.೧೩೮೬) ಮತ್ತು ಸಂ.೩೪೭ (ಕ್ರಿ.ಶ.೧೩೮೭)]* ಮಹಾ ಪ್ರಧಾನ ಮಲ್ಲಪ್ಪ ಒಡೆಯನು ತನ್ನ ರಾಜಧಾನಿ ಬಾರಕೂರಿನಿಂದ ತುಳು, ಹೈವೆ ಮತ್ತು ಕೊಂಕಣಗಳನ್ನು ಆಳುತ್ತಿದ್ದ. ಡಾ. ಕೆ.ವಿ. ರಮೇಶ ಅವರ ಪ್ರಕಾರ ಅಂದಿನ ತುಳುರಾಜ್ಯವೆಂದರೆ ಅದು ಬಾರಕೂರು ಮತ್ತು ಮಂಗಳೂರು ರಾಜ್ಯಗಳೆರಡನ್ನೂ ಒಳಗೊಂಡಿತ್ತು. *[ಡಾ.ಕೆ.ವಿ.ರಮೇಶ–ಎ ಹಿಸ್ಟರಿ ಆಫ್ ಸೌತ್ಕೆನರಾ (೧೯೭೦) ಪು.೧೫೭].* ಪ್ರಾಯಶಃ ಮಂಗಳೂರಿನ ರಾಜ್ಯಪಾಲ ಮಲಗರಸನು ಮಹಾಪ್ರಧಾನ ಮಲ್ಲಪ್ಪ ಒಡೆಯನ ಆಜ್ಞಾವರ್ತಿಯಾಗಿ ಕಾರ್ಯನಿರ್ವಹಿಸಿದ್ದನು; ಶಾಸನದಲ್ಲಿ ಮಾತ್ರ ಇದರ ಉಲ್ಲೇಖ ಇಲ್ಲ. ಮಹಾ ಪ್ರಧಾನ ಮಲ್ಲಪ್ಪ ಒಡೆಯನು ಕ್ರಿ.ಶ.೧೩೯೦ ಫೆಬ್ರವರಿವರೆಗೆ ಬಾರಕೂರಿನ ರಾಜ್ಯಪಾಲನಾಗಿ ಕಾರ್ಯನಿರ್ವಹಿಸಿದ್ದ (ಅದೇ,-ಪು.೧೫೫). ಮುಂದೆ ಕ್ರಿ.ಶ.೧೩೯೫ ರಿಂದ ೧೩೯೬ ರವರೆಗೆ ಈತ ಪುನಃ ಇಲ್ಲಿಯ ರಾಜ್ಯಪಾಲನಾಗಿ ಆಡಳಿತ ನಡೆಸಿದ *(ಅದೆ. ಪು.೧೫೫. ಮತ್ತು ಎಸ್.ಐ.ಐ.ಸಂ.೭–ಸಂ.೩೬೩ ಮತ್ತು ೩೪೨).* ಬಾರಕೂರು ರಾಜ್ಯದ ರಾಜ್ಯಪಾಲರಾಗಿದ್ದ ಹಲವಾರು ಮಂದಿ ಹಿರಿಯ ಅಧಿಕಾರಿಗಳು ಬಾರಕೂರು ಮತ್ತು ಮಂಗಳೂರು ರಾಜ್ಯಗಳೆರಡಕ್ಕೂ ರಾಜ್ಯಪಾಲರಾಗಿ ಆಡಳಿತ ನಡೆಸಿದ ಹಲವಾರು ಉದಾಹರಣೆಗಳಿವೆ (ನೋಡಿ: ಕೆ.ವಿ. ರಮೇಶ – **ಎ ಹಿಸ್ಟರಿ ಆಫ್ ಸೌತ್ ಕೆನರ,** ಚಾಪ್ಟರ್ ೬,

* ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ. ಜಿ. ಎಂ. ಕಾಲೇಜು, ಉಡುಪಿ – ೫೭೬ ೧೦೨.

ಸೌತ್ ಕೆನರ ಅಂಡರ್ ವಿಜಯನಗರ). ಇದು ಆಯಕಟ್ಟಿನ ಸ್ಥಳಗಳ ಭದ್ರತೆಗಾಗಿ ವಿಜಯನಗರ ಚಕ್ರವರ್ತಿಗಳು ಅನುಸರಿಸಿದ ಆಡಳಿತ ನೀತಿ.

ಇದೊಂದು ದಾನ ಶಾಸನ. ಮುಕ್ಕಂಣ ಕದಂಬ ವಂಶದ ಕಾಮದೇವರಸನ ಮಗಳಾದ ಪದುಮಲದೇವಿಯು ತನಗೆ ಚತುರ್ವಿಧ ಪುರುಷಾರ್ಥ ಸಿದ್ಧ್ಯರ್ಥವಾಗಿ ಓಮಂಜೂರು ಶ್ರೀ ಅಮೃತೇಶ್ವರ ದೇವಾಲಯದ ಛತ್ರದಲ್ಲಿ ನಿತ್ಯ ಹಂನ್ನೆರಡು ಮಂದಿ ಬ್ರಾಂಹಣರಿಗೆ ಭೋಜನದ ವ್ಯವಸ್ಥೆಗಾಗಿ ಭೂ ದಾನ ಮಾಡಿದಳು.

ದಾನಮಾಡಿದ ಜಮೀನುಗಳನ್ನು (ಭೂಮಿಗಳನ್ನು) ಪದುಮಲ ದೇವಿಯು ದೊಂಬ ಹೆಗ್ಗಡೆ ಮತ್ತು ಕಯ್ಯರ ಬಳಿಯ ಬಂಕಿ ಸಾಂತಯರ ಶಿವವಪ್ಪಿರಿಯಿಂದ ಕ್ರಯಕ್ಕೆ ಪಡೆದು ನಂತರ ದಾನ ಮಾಡಿದಳು. ಕ್ರಯದ ಹಣ ಎಷ್ಟೆಂದು ಹೇಳದೆ "ವಸ್ತುವ ಕೊಟ್ಟು" ಎಂದಷ್ಟೆ ಶಾಸನ ಹೇಳುತ್ತದೆ (ಶಾಸನ ಪಾಠ-ಸಾಲು ೧೧). ಪ್ರಾಯಶಃ ಇಲ್ಲಿ ವಸ್ತು ವಿನಿಮಯ ರೀತಿಯಲ್ಲಿ ದೇವಾಲಯಕ್ಕಾಗಿ ಕೊಟ್ಟ ಭೂಮಿಗೆ ಬದಲಾಗಿ ಬೇರೆ ಭೂಮಿಯನ್ನು ಕೊಟ್ಟಿರಬೇಕು; ಇದೊಂದು ಊಹೆ ಮಾತ್ರ. ದೊಂಬ ಹೆಗ್ಗಡೆಯಿಂದ ೨೯ ಮುಡಿ ಬೀಜ ಬಿತ್ತುವ ಗದ್ದೆ ಮತ್ತು ಬಂಕಿ ಸಾಂತಯನಿಂದ ೨೫ ಮುಡಿ ಬೀಜ ಬಿತ್ತುವ ಗದ್ದೆಗಳನ್ನು ಕ್ರಯಕ್ಕೆ ಪಡೆಯಲಾಯಿತು. ದೇವಾಲಯದ ಪರವಾಗಿ ಆ ಭೂಮಿಗಳ ಸಾಗುವಳಿ ಜವಾಬ್ದಾರಿಯನ್ನು ಈ ಇಬ್ಬರಿಗೆ ವಹಿಸಲಾಯಿತು. ಈರ್ವರೂ ತಲಾ ೧೮೩ ಮುಡಿಯಂತೆ ಒಟ್ಟು ೩೬೬ ಮುಡಿ ಬತ್ತವನ್ನು ದೇವಾಲಯಕ್ಕೆ ಪ್ರತಿವರ್ಷ ಸಲ್ಲಿಸಬೇಕೆಂಬ ನಿಯಮ ಮಾಡಿ ಭೂ ಸಾಗುವಳಿಯ ಜವಾಬ್ದಾರಿಯನ್ನು ವಂಶ ಪಾರಂಪರ್ಯ ವಾಗಿ ಮಾಡಿ ದಾನದ ಈ ಭೂಮಿಯನ್ನು ಸರ್ವಮಾನ್ಯವಾಗಿ ಮಾಡಲಾಯಿತು [ಇಲ್ಲದಿದ್ದಲ್ಲಿ ದಾನದ ಭೂಮಿಗೆ ದೇವಾಲಯ ತೆರಿಗೆ ಕೊಡಬೇಕಿತ್ತು].

ಶಾಸನ ಪಾಠ ಸಾಲು ೧೨ ರಿಂದ ೨೫ರ ವರೆಗೆ ಈರ್ವರೂ ಕೊಟ್ಟ ಭೂಮಿಗಳ ವಿವರ ಇದೆ. ಇದರ ವಿಸ್ತಾರವನ್ನು ಬೀಜ ಬಿತ್ತುವ ಆಧಾರದಲ್ಲಿ ನಮೂದಿಸಲಾಗಿದೆ. ಹಿಂದೆ ಈ ಭೂಮಿಗಳಿಂದ ಅರಸನಿಗೆ ವಾರ್ಷಿಕ ೨೦ ಗದ್ಯಾಣ ಹೊನ್ನು ತೆರಿಗೆ ರೂಪದಲ್ಲಿ ಸಂದಾಯವಾಗುತ್ತಿತ್ತು. ಇದನ್ನು 'ರಾಯರ ನಿರೂಪದಿಂದ ಮಲಗರಸರು ಕುಳವ ಕಟಿಸಿದರಾಗಿ ಓಮಂಜೂರವರು ಆ ಭೂಮಿಗೆ ತೆಱು ಸಿದ್ಧಾಯ ನಟ್ಟು ಬೆಡು ಬಿದ್ದುಬಿಯ ದುಖಃ ಒಸಗೆ ಆಉದೂ ಇಲ್ಲದೆ ಸರ್ವಮಾಂನ್ಯವಾಗಿ ನಡಸಿಬಹರು' ಎಂದು ಶಾಸನ [ಸಾಲು-೨೭-೨೯] ತಿಳಿಸುತ್ತದೆ. ರಾಜ ತೆರಿಗೆ ಮನ್ನಾ ಮಾಡಿದರೂ ಅದನ್ನು ಪಾಲಿಸುವ ಜವಾಬ್ದಾರಿ ಊರಿನವರಿಗೆ ಇದ್ದುದು ಇದರಿಂದ ತಿಳಿದುಬರುತ್ತದೆ.

ಚಕ್ರವರ್ತಿಯ ಅನುಮತಿಯಿಂದ ರಾಜ್ಯಪಾಲನು ದೇವಾಲಯದ ಛತ್ರದ ಮೇಲುವೆಚ್ಚಕ್ಕಾಗಿ ೬೦ ಗದ್ಯಾಣ ಹೊಂನ್ನು ವಾರ್ಷಿಕ ಉತ್ಪತ್ತಿಯ **ಮೊಳ** ಎಂಬ ಹಳ್ಳಿಯನ್ನು ಸರ್ವಮಾನ್ಯ ಮಾಡಿ ದೇವಾಲಯಕ್ಕೆ ದಾನ ಮಾಡಿದ. ಶಾಸನದ ಸಾಲು ೨೯ ರಿಂದ ೩೬ರ ವರೆಗೆ ಈ ವಾರ್ಷಿಕ ಉತ್ಪತ್ತಿಯ ಹಣದಿಂದ ಏನು ಮಾಡಬೇಕೆಂಬ ವಿವರ ಇದೆ. ಅಲ್ಲದೆ ಈ **ಮೊಳ**ದ ಗ್ರಾಮದಿಂದ ಬರುವ ವಾರ್ಷಿಕ ೨೪ ಮುಡೆ ಬತ್ತವನ್ನು ಶಿವರಾತ್ರಿಯ ಬ್ರಾಹ್ಮಣ ಭೋಜನ, ದೇವರ ಮೂರು ಹೊತ್ತಿನ ಪೂಜೆ ಮತ್ತು ದೀವಿಗೆಯ ಎಂಣೆಗಾಗಿ ಉಪಯೋಗಿಸಬೇಕೆಂದು ಮಾಡಿದ ಕಟ್ಟಳೆಯ ವಿವರ ಇದೆ. ಇದನ್ನು ಕೊಡಬೇಕಾದ ಮೂಲಿಗರು [ಮೂಲ ಹಕ್ಕಿನ ಒಕ್ಕಲು] ಸಕಾಲದಲ್ಲಿ ಕೊಡದೆ ಉಳಿಸಿಕೊಂಡರೆ ತಮ್ಮ ಜಮೀನಿನ ಆದಾಯದಿಂದ ೨೪ ಮುಡಿ ಬತ್ತವನ್ನು ಕೊಡ ಬೇಕು. ಹಾಗೆ ಕೊಡದೆ ಉಳಿಸಿಕೊಂಡರೆ ಜಮೀನಿನ ಮೇಲಿನ ಹಕ್ಕನ್ನು ತಾವಾಗಿ ಕಳದುಕೊಳ್ಳುವರು ಎಂದು ಶಾಸನ ತಿಳಿಸುತ್ತದೆ [ಸಾಲು ೪೫-೪೭].

ಪದುಮಲದೇವಿಯು ಓಮಂಜೂರು ಪಲತಿಟ್ಟು ಎಂಬ ಸ್ಥಳದಲ್ಲಿ ತಾನೆ ಸ್ವತಃ ನಿರ್ಮಿಸಿದ್ದ ಅಡಿಕೆ ತೋಟವೊಂದನ್ನು ಈ ಛತ್ರದಲ್ಲಿ ನಡೆಯುವ ಬ್ರಾಹ್ಮಣ ಭೋಜನದ ದಕ್ಷಿಣೆಯ ಸಲುವಾಗಿ ದಾನ ಮಾಡಿದಳು. ಈ ತೋಟದ ಜವಾಬ್ದಾರಿ ಯನ್ನು ಚಟ್ಟತ್ತಿಲ ವಂಶದ ಗೋವಿಂದ ಮತ್ತು ನಾರಣರಿಗೆ ವಂಶಪಾರಂಪರ್ಯ ಹಕ್ಕಿನೊಂದಿಗೆ ಛತ್ರದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಬ್ರಾಹ್ಮಣರು ಕೊಟ್ಟರು. ದಾನಮಾಡಿದ ತೋಟವನ್ನು ಸರ್ವಮಾನ್ಯ ಮಾಡಲಾಯಿತು. ಈ ವಿಚಾರ ವನ್ನು ಶಾಸನ [ಸಾಲು ೪೭ ರಿಂದ ೫೫] ವಿವರವಾಗಿ ತಿಳಿಸುತ್ತದೆ. ಚಟ್ಟತ್ತಿಲ ವಂಶದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

ಈ ದಾನಕ್ಕೆ ಸಾಕ್ಷಿಗಳಾಗಿದ್ದವರು ಮಂಗಳೂರು ರಾಜ್ಯದ ರಾಜ್ಯಪಾಲ ಮಲಗರಸ, ಬಂಗರು, ಚೌಟರು, ಅರುವದರಸರು, ಮಂಗಳೂರಿನ ನಖರದವರು ದೊಂಬ ಹೆಗ್ಗಡೆ ಮತ್ತು ಓಮಂಜೂರು ಕಯ್ಯರು ಮೊದಲಾದ ಕಟ್ಟಳೆಯವರು.

ಈ ಶಾಸನ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಅತ್ಯಂತ ಪ್ರಮುಖ ದಾಖಲೆ. ಧಾರ್ಮಿಕ ಮತ್ತು ರಾಜಕೀಯ ಭಾಗ ಗಳೆರಡರಲ್ಲೂ ಇದು ಮಹತ್ವ ಪಡೆದಿದೆ. ಪ್ರಸ್ತುತ ಹಲವು ಕಥೆಗಳಿಗೆ ಆಗರವಾಗಿರುವ ಓಮಂಜೂರಿನ ದೇವಾಲಯಕ್ಕೆ ಇದು ಪ್ರಥಮ ದಾಖಲೆ. ಇಲ್ಲಿ ಹೆಸರಿಸಿರುವ ಮುಕ್ಕಂಣ

ಕದಂಬ ಕಾಮದೇವರಸನ ಬಗ್ಗೆ ಏನೂ ವಿವರವಿಲ್ಲ. ಇದು ಈತನ ಕುರಿತಾಗಿ ದೊರೆಯುವ ಪ್ರಥಮ ಹಾಗು ಸದ್ಯಕ್ಕೆ ಒಂದೆ ದಾಖಲೆ. ಶಾಸನದಲ್ಲಿ ಈತನನ್ನು "ಸ್ವಸ್ತಿ ಶ್ರೀ ಹರಧರಣೀ ಪ್ರಸೂತ ಮುಕ್ಕಂಣ ಕದಂಬ ವಂಶದಲು ಶಿವಚಿತ್ತ ಪರಾಯಣ ರಪ್ಪ ಕಾಮದೇವರಸ" ಎಂದು ಉಲ್ಲೇಖಿಸಲಾಗಿದೆ. ಇದು ಈತನ ರಾಜ ಪ್ರಭುತ್ವವನ್ನು ಸೂಚಿಸುತ್ತದೆ. ಆದರೆ ಯಾವ ರಾಜ್ಯವನ್ನು ಆಳುತ್ತಿದ್ದ ಇತ್ಯಾದಿ ವಿಷಯಗಳು ಸಂದೇಹ ಗಳಾಗಿಯೆ ಉಳಿದಿವೆ. ಈತ ಮೂಲ ಕದಂಬ ವಂಶದವನೆ ಅಥವಾ ದಕ್ಷಿಣ ಕನ್ನಡದ ಒಂದು ಕಿರು ಸಾಮಂತ ವಂಶ ದವನೇ ಎಂಬುದು ಹೊಸ ಶಾಸನಗಳಿಂದ ತಿಳಿಯ ಬೇಕು. ಕದಂಬ ವಂಶದ ಬಗೆಗಿನ ಹಲವಾರು ಐತಿಹ್ಯಗಳು ತುಳು ನಾಡಿನಲ್ಲಿ ಅಧಿಕವಾಗಿವೆ. ಕ್ರಿ.ಶ.೯ನೆಯ ಶತಮಾನಕ್ಕೆ ಸೇರುವ ಬಂಟ್ರ ಶಾಸನದಲ್ಲಿ ಕದಂಬ ಶ್ರೀ ಪ್ರಿಥ್ವಿಯ ಉಲ್ಲೇಖ ಇದೆ. *[ಇ.ಐ., ಸಂಪುಟ–೩೭, ಪು. ೨೩–೨೬; ಕೆ.ವಿ. ರಮೇಶ ಮತ್ತು ಎಂ.ಜೆ.ಶರ್ಮ – 'ತುಳುನಾಡಿನ ಶಾಸನಗಳು', ಸಂ–೨೪].* ಈತನನ್ನು "ಸಕಲ ಗುಣ ಗಣಾಳಂಕ್ರಿತ ಕದಮ್ಬ ಕುಲೋದ್ಭವ ಶ್ರೀ ಪ್ರಿಥ್ವಿ" ಎಂದು ಶಾಸನ ವರ್ಣಿಸಿದೆ [ಅದೆ ಶಾಸನ ಪಾಠ–ಸಾಲುಗಳು ೫–೬]. ಈ ಭಾಗದ ಒಬ್ಬ ಪ್ರಮುಖ ರಾಜನಾಗಿ ಈತ ಶಾಸನದಲ್ಲಿ ಚಿತ್ರಿತನಾಗಿದ್ದಾನೆ. ಈತನ ವಂಶ ಮುಂದೆ ಕವಲುಗಳಾಗಿ ಒಡೆದು ಸ್ವತಂತ್ರ ಪಾಳೆಯಪಟ್ಟುಗಳನ್ನು ರಚಿಸಿಕೊಂಡಿದ್ದವೇ ? ಎಂಬುದು ಮುಂದಿನ ಸಂಶೋಧನೆ ಗಳಿಂದ ತಿಳಿಯಬೇಕಾದ ವಿಚಾರ. ಕಾರ್ಕಳ ತಾಲ್ಲೂಕಿನಲ್ಲಿ 'ಕದಂಬ ಗುತ್ತು' ಎಂಬ ಜೈನ ರಾಜ ಮನೆತನ ಇದೆ. ಕದಂಬ [ಕಡಂಬ] ಎಂಬ ಕುಲನಾಮ ಇರುವ ಜೈನ ಮನೆತನಗಳೂ ಇವೆ. ಇವೆಲ್ಲವೂ ದಕ್ಷಿಣ ಕನ್ನಡದಲ್ಲಿ ಕದಂಬ ಪ್ರಭಾವವನ್ನು ತಿಳಿಸುವ ಆಧಾರಗಳಾಗಿವೆ. ಆದರೆ ಮುಕ್ಕಂಣ ಕದಂಬ ಕಾಮದೇವರಸನ ವೃತ್ತಾಂತದ ಬಗೆಗಿನ ಸಮಸ್ಯೆ ಹಾಗೆಯೆ ಉಳಿದಿದೆ.

ಹಿರಿದಾದ ರೀತಿಯಲ್ಲಿ ಓಮಂಜೂರು ಶ್ರೀ ಅಮೃತೇಶ್ವರ ದೇವಾಲಯಕ್ಕೆ ದಾನಗಳನ್ನು ಮಾಡಿದ ಪದುಮಲದೇವಿಯೂ ಸಹ ಇಲ್ಲಿ ಇದ್ದಕ್ಕಿದಂತೆ ಪ್ರಕಟಗೊಂಡಿದ್ದಾಳೆ. ಮುಕ್ಕಂಣ ಕದಂಬ ವಂಶದ ಕಾಮದೇವರಸನ ಮಗಳು ಎಂಬುದಷ್ಟೆ ಇಲ್ಲಿ ಪ್ರತಿಫಲಿತವಾಗಿರುವುದು. ಈಕೆ ರಾಜಕುಮಾರಿ ಎಂಬು ದಂತೂ ಇಲ್ಲಿ ಸ್ಪಷ್ಟ ಬೃಹತ್ ಪ್ರಮಾಣದಲ್ಲಿ ದೇವರ ಪೂಜಾ ಕಾರ್ಯಗಳಿಗಾಗಿ, ಶಿವರಾತ್ರಿ ಪೂಜೆ, ಆಚರಣೆಗಳಿಗಾಗಿ ಮತ್ತು ದೇವಾಲಯದ ಛತ್ರದಲ್ಲಿ ಆಹಾರ ದಾನಕ್ಕಾಗಿ ಹಲವಾರು ಭೂಮಿಗಳನ್ನು ದಾನ ಮಾಡಿರುವುದನ್ನು ಗಮನಿಸಿದಾಗ ಪದುಮಲದೇವಿಯು ಒಂದು ವಿಶಾಲವಾದ ರಾಜ್ಯಕ್ಕೆ ಅಧಿಪತಿ ಯಾಗಿದ್ದು ಆಡಳಿತದ ಜವಾಬ್ದಾರಿ ಹೊಂದಿದ್ದಳೆಂಬ ಅರಿವಾಗುತ್ತದೆ. ಈಕೆ ಯಾವ ರಾಜವಂಶದ ರಾಜ ಅಥವ ರಾಜಕುಮಾರನನ್ನು ಮದುವೆಯಾಗಿದ್ದಳು, ಆ ರಾಜನ ರಾಜ್ಯ ಯಾವುದು ಇತ್ಯಾದಿಗಳೆಲ್ಲವೂ ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಶಾಸನದ ಕೊನೆಯಲ್ಲಿ (ಸಾಲು ೭೧–೭೩) ಇರುವ ಒಂದು ಪ್ರಾರ್ಥನಾ ಕಾವ್ಯವನ್ನು ಇಲ್ಲಿ ಗಮನಿಸುವುದು ಸೂಕ್ತ. ಅದು ಇಂತಿದೆ– "ಹರ ಧರಣೀ ಪ್ರಸೂತನಕಳಂಕ ಕದಂಬ ಕುಲಾಬ್ಧಿ ಚಂದ್ರನುರ್ವ್ವರಿ ಯೊಳು ಸತ್ಯರಾಯರ ಶಿರೋಮಣಿ ಕಾಮನ್ರ ಪಾಲನಾತ್ಮ ಭೋವರಗುಣಿ ಪದ್ಮಲಾಂಬಿಕೆಯ ಧರ್ಮ್ಮವಿದು ಕ್ಷಿತಿವುಳ್ಳ ಕಾಲದೊಳ್ಸ್ಥಿರ ನಡೆಯಲ್ನಿರೀಕ್ಷಿಸಿದ ಪಾಲಿಸು ನೀನಮೃತೇಶ ಶಂಭುವೇ॥". ಇದು ಕದಂಬ ರಾಜ ಕಾಮ ದೇವರಸ ಮತ್ತು ಆತನ ಮಗಳಾದ ಪದುಮಲದೇವಿಯ ಗುಣ ವಿಶೇಷಗಳ ಸುಂದರ ಚಿತ್ರಣವನ್ನು ಕೊಡುತ್ತದೆ. ಇದನ್ನು ಉತ್ಪ್ರೇಕ್ಷೆ ಎಂದು ತಿಳಿಯದೆ ಸಹಜವಾಗಿ ಸ್ವೀಕರಿಸಿದರೆ ಈರ್ವರ ಪ್ರಭಾವ ಸಮಾಜದ ಮೇಲೆ ಎಷ್ಟಿದ್ದಿರಬಹುದು ಎಂಬ ಅರಿವಾಗುತ್ತದೆ.

ಪ್ರಾಚೀನ ಕಾಲದಿಂದಲೂ ತುಳುನಾಡಿನ ರಾಜಕೀಯ, ಸಾಮಾಜಿಕ ಆರ್ಥಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಸ್ತ್ರೀಯರು ಪಾತ್ರವಹಿಸಿ ಅಧಿಕವಾದ ಪ್ರಭಾವವನ್ನು ಬೀರಿ, ಆಡಳಿತದಲ್ಲಿ ಅಷ್ಟೆ ಅಲ್ಲದೆ ನ್ಯಾಯ ಪರಿಪಾಲನೆ, ಶೌರ್ಯ ಪ್ರದರ್ಶನ ಮತ್ತು ಸ್ವತಃ ಸೇನೆಯ ನೇತೃತ್ವ ವಹಿಸಿ ವೀರಾವೇಶ ದಿಂದ ಕಾದಾಡಿ ಜಯ ಪಡೆದ ಉದಾಹರಣೆಗಳು ಈ ಭಾಗದಲ್ಲಿ ವಿಪುಲವಾಗಿ ದೊರೆಯುತ್ತವೆ. ಪದುಮಲ ದೇವಿಯು ಅಂತಹ ರಾಣಿಯರ ಸಾಲಿನಲ್ಲಿ ನಿಂತು ತಾನು ಸುಗುಣೆ ದಾನಶೀಲೆ ಎಂಬುದನ್ನೂ ಮೆರೆದಿದ್ದಾಳೆ. ಹಾಗಾಗಿ ಶಾಸನ ಈಕೆಯನ್ನು "ವರಗುಣಿ" ಎಂದಿರುವುದು.

ಪದುಮಲದೇವಿಗೆ ತಮ್ಮ ಭೂಮಿ [ಗದ್ದೆ]ಗಳನ್ನು ಮಾರಾಟ ಮಾಡಿದದವರು ದೊಂಬ ಹೆಗ್ಗಡೆ ಮತ್ತು ಶಿವವಪ್ಪಿರಿ. ದೊಂಬ ಹೆಗ್ಗಡೆಯನ್ನು **ಮಾರ್ತಾಂಡ ಹರ** ಎಂದು ಶಾಸನ ಹೆಸರಿಸಿದೆ [ಶಾಸನ ಪಾಠ–ಸಾಲು ೧೦]. ಈತನ ಬಗ್ಗೆ ಶಾಸನದಲ್ಲಿ ಬೇರಾವ ಮಾಹಿತಿ ಇಲ್ಲ. ವಿಟ್ಲ ಸೀಮೆಯ ಅರಸರನ್ನು ಪರಂಪರಾಗತವಾಗಿ ದೊಂಬ ಹೆಗ್ಗಡೆ ವಂಶದವರೆಂದು ಕರೆಯಲಾಗಿದೆ. ಈ ಶಾಸನದಲ್ಲಿ ಹೆಸರಿಸಿ ರುವ ದೊಂಬ ಹೆಗ್ಗಡೆ ವಿಟ್ಲ ಅರಸು ಮನೆತನಕ್ಕೆ ಸೇರಿದವನಿರ ಬಹುದು. ದೊಂಬ ಹೆಗ್ಗಡೆ ಕುರಿತಾಗಿ ದೊರೆಯುವ ಶಾಸನಗಳಲ್ಲಿ ಇದು ಎರಡನೆಯದು. ಈ ವಂಶದ ಪ್ರಥಮ ಉಲ್ಲೇಖ ಇರುವುದು ಆಳುಪ ರಾಜ ವೀರ ಪಾಂಡ್ಯನ ಕ್ರಿ.ಶ. ೧೨೫೭ಕ್ಕೆ ಸೇರುವ ವಗೇನಾಡಿನ ಶಾಸನದಲ್ಲಿದೆ *[ತುಳು*

ಕರ್ನಾಟಕದ ಅರಸು ಮನೆತನಗಳು – ಪುಟ ೧೯೪–೧೯೧].
ಅಮೃತೇಶ್ವರ ದೇವಾಲಯದಲ್ಲಿರುವ ನಂಬಿಕೆಯ ಪ್ರಕಾರ ಈ ದೇವಾಲಯಕ್ಕೂ ವಿಟ್ಲದ ಅರಸರಿಗೂ ಸಂಬಂಧವಿದೆ. ಹೇಗೆ ಎನ್ನುವುದು ಮಾತ್ರ ಗೊತ್ತಿಲ್ಲ. ಶಾಸನ ಈ ಸಂಬಂಧದ ವಿಷಯ ಹೊರಗೆಡುಹುತ್ತದೆ. ದೇವಾಲಯಕ್ಕೆ ವರ್ಷಂಪ್ರತಿ ೧೮೩ ಮುಡಿ ಬತ್ತವನ್ನು ಈತ ತಪ್ಪದೆ ಸಲ್ಲಿಸಬೇಕಿತ್ತು. ವಿಟ್ಲದ ಅರಸರ ಮೇಲೆ ಬ್ರಿಟಿಷರು ಕೈಗೊಂಡ ಕ್ರಮಗಳಿಂದಾಗಿ ಅರಸು ತನ್ನ ರಾಜ್ಯ ಮತ್ತು ಅಧಿಕಾರಗಳನ್ನು ಕ್ರಿ.ಶ.೧೮೦೦ರಲ್ಲಿ ಕಳೆದುಕೊಂಡ *[ತುಳು ಕರ್ನಾಟಕ ಅರಸು ಮನೆತನಗಳು– ಪುಟ ೧೯೬–೧೯೮].*

ಪದುಮಲದೇವಿಗೆ ಭೂ ವಿಕ್ರಯ ಮಾಡಿದ ಇನ್ನೊಬ್ಬ ವ್ಯಕ್ತಿಯೆಂದರೆ ಶಿವಪಪ್ಪಿರಿ. ಈತನನ್ನು ಶಾಸನದಲ್ಲಿ ***ಕಯ್ಯರ ಬಳಿಯ ಬಂಕಿಸಾಂತೆಯರ ಶಿವಪಪ್ಪಿರಿ*** ಎಂದು ಹೆಸರಿಸಿದೆ. ಈತನ ಬಗ್ಗೆ ಹೆಚ್ಚಿನ ಮಾಹಿತಿ ಏನೂ ಇಲ್ಲ. ಪ್ರಸ್ತುತದಲ್ಲಿ ಈತನ ಬಗ್ಗೆ ಇರುವ ಶಾಸನ ಇದೊಂದೆ. ಶಾಸನ ಪಾಠ ಸಾಲು ೬೮ರಲ್ಲಿ ಈ ದಾನಕ್ಕೆ ಸಾಕ್ಷಿಗಳಾಗಿದ್ದವರ ಪೈಕಿ ಕಯ್ಯರನ್ನು "ಓಮಂಜೂರು ಕಯ್ಯರು" ಎಂದು ಹೆಸರಿಸಲಾಗಿದೆ. ಆಳುಪ ರಾಜ ರಣಸಾಗರನ ಕ್ರಿ.ಶ.೮ನೆಯ ಶತಮಾನದ ಉತ್ತರಾರ್ಧಕ್ಕೆ ಸೇರುವ ಕರಿಯಂಗಳ ಶಾಸನದಲ್ಲಿ ಕಯ್ರ ವಂಶದ ಉಲ್ಲೇಖ ಇದೆ *[ತುಳುನಾಡಿನ ಶಾಸನಗಳು– ೧೦]* 'ಕಯ್ರ' ಮತ್ತು 'ಕಯ್ಯರ'ಗಳಲ್ಲಿ ವ್ಯತ್ಯಾಸವೇನೂ ಇಲ್ಲ. ಹಾಗಾಗಿ ಅದೇ ಪ್ರಾಚೀನ ಕಯ್ರ ವಂಶ ಮುಂದುವರೆದಿದ್ದು ಭೂ ಕ್ರಯ ಮಾಡಿದ್ದೆ ಅಲ್ಲದೆ ಅದನ್ನು ನೋಡಿಕೊಂಡು ವಾರ್ಷಿಕ ಉತ್ಪತ್ತಿಯಲ್ಲಿ ೧೮೩ ಮುಡಿ ಬತ್ತವನ್ನು ದೇವಾಲಯಕ್ಕೆ ತಪ್ಪದೆ ಸಂದಾಯ ಮಾಡಬೇಕಾದ ಜವಾಬ್ದಾರಿಯನ್ನೂ ಹೊತ್ತಿತು.

ದಾನಕ್ಕೆ ಸಾಕ್ಷಿಗಳಾಗಿದ್ದವರಲ್ಲಿ ಬಂಗರು, ಚೌಟರು, ಲಾಜಾರದ ಅಜಿಲವರು ಮತ್ತು ಮಂಗಲೂರ ನಖರ ಉಲ್ಲೇಖವಾಗಿರುವ ಪ್ರಮುಖರು. ಬಂಗ ಮತ್ತು ಚೌಟ ವಂಶವನ್ನು ರಾಜರ ಹೆಸರಿಲ್ಲದೆಯೆ ಸಾಕ್ಷಿಗಳಾಗಿ ಉಲೇಖಿಸಿರುವ ಉದಾಹರಣೆ ಹಲವಾರು ಶಾಸನಗಳಲ್ಲಿವೆ. ಅಳದಂಗಡಿಗೆ ಅರುವ [ಅಜಿಲ] ಎಂಬ ಹೆಸರೂ ಇದೆ. "ಲಾಜಾರದ ಅಜಿಲವರು" ಪ್ರಾಯಶಃ ಅರುವ[ಅಜಿಲ]ದ ಅರಸರನ್ನೆ ಸೂಚಿಸುವುದಿರಬೇಕು. ಇದು ಹೌದಾದಲ್ಲಿ ಈ ಅರುವದ ಅರಸರು ಅಜಿಲರು. ಅಂದಮೇಲೆ ಈ ಶಾಸನ ಧರ್ಮಕ್ಕೆ ಸಾಕ್ಷಿಗಳಾಗಿದ್ದವರು ಬಂಗ, ಚೌಟ ಮತ್ತು ಅಜಿಲ ರಾಜವಂಶಗಳು. ಆದರೂ "ಲಾಜಾರದ" ಬಗ್ಗೆ ಪ್ರಸ್ತುತ ವಿವರಣೆ ಕಷ್ಟ (ಅಜಾರು ಎಂಬ ಸ್ಥಳ ಹೆಸರಾಂತ ಕ್ಷೇತ್ರವಾದ ಕಟೀಲಿನ ಸಮೀಪ ಇದೆ. ಆದರೆ ಇದನ್ನು 'ಲಾಜಾರ'ದೊಂದಿಗೆ ಸಮೀಕರಿಸುವುದು ಪ್ರಸ್ತುತದಲ್ಲಿ ಸಾಧ್ಯವಿಲ್ಲ.)

ಶಾಸನದಲ್ಲಿರುವ ಹಲವು ಸ್ಥಳನಾಮಗಳು ಅಧ್ಯಯನ ಯೋಗ್ಯ. ಇಲ್ಲಿ ಹೆಸರಿಸಿರುವ 'ಮೊಳ' ಎಂಬ ಹಳ್ಳಿ ಈಗ 'ಮೊಳ ಹಳ್ಳಿ'ಎಂಬ ಹೆಸರಿನಿಂದ ಕರೆಯಲ್ಪಟ್ಟಿದೆ. ದೊಂಬ ಹೆಗ್ಗಡೆಯ ಉಸ್ತುವಾರಿಯಲ್ಲಿದ್ದ ಕುತ್ಯಾಡಿ ತಿಮರು ಬಳಿ ಬಂದು ಪಳ್ಳಿ ಇತ್ತು (ಇದು ಮುಸ್ಲಿಮರು ವಾಸವಿದ್ದ ಸ್ಥಳ) ಈಗಲೂ ಇದೆ. ಹಲವು ರೀತಿಯ ಮತ್ತು ಹೆಸರಿನ ಗದ್ದೆಗಳ ಉಲ್ಲೇಖ ಇಲ್ಲಿದೆ. ಆರ್ಥಿಕ ಸ್ಥಿತಿಗತಿಯ ಅಧ್ಯಯನಕ್ಕೆ ಇವು ಬಹು ಸಹಕಾರಿ. ಅಂತೂ ಹಲವು ರೀತಿಯ ಚಿಂತನೆಗಳಿಗೆ ತಿರುವೈಲಿನ ಈ ಶಾಸನ ಒಂದು ಅಮೂಲ್ಯ ದಾಖಲೆಯಾಗಿದೆ.

ಕೇಂದ್ರ ಶಾಸನ ಇಲಾಖೆಯ ೧೯೨೮–೨೯ರ ವಾರ್ಷಿಕ ವರದಿಯಲ್ಲಿ ಈ ಶಾಸನದ ವರದಿ ಆಗಿದೆ (ಸಂ.೪೬೫). ಕೆಲ ಸಮಯದ ಹಿಂದೆ ನನ್ನ ಅಧ್ಯಯನಕ್ಕಾಗಿ ಶಾಸನವನ್ನು ಪ್ರತಿಮಾಡಿ ಅದರ ಪಾಠ ಸಿದ್ಧಪಡಿಸಿದೆ. ಅದನ್ನು ಈ ಕೆಳಗೆ ಕೊಟ್ಟಿದ್ದೇನೆ.**

**ಶಾಸನಪಾಠ**

೧ ಸ್ವಸ್ತಿಶ್ರೀ [೧*] ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೆಇಲೋಕ್ಯನಗ
೨ ರಾರಂಭ ಮೂಲ ಸ್ತಂಭಾಯ ಶಂಭವೇ । ಜಯಾಭ್ಯುದಯ ಶಕವರುಷ ೧೩೧೨ನೆ–
೩ ಯ ಶುಕ್ಲ ಸಂವತ್ಸರ ಮೇಶ(ಷ) ಮಾಸ ೧ನೆಯ ಸೋಮವಾರದಂದು ಶ್ರೀಮನ್ಮಹಾರಾಜಾಧಿರಾಜ
೪ ರಾಜ ಪರಮೇಶ್ವರ ಶ್ರೀ ವೀರ ಹರಿಹರ ಮಹಾರಾಯರ ರಾಜ್ಯಾಭ್ಯುದಯದಲು ಮಲ್ಲ(ಗ)
೫ ರ್ಸರು ಮಂಗಲೂರ ರಾಜ್ಯವನಾಳುತ್ತಿಹಲ್ಲಿ ಸ್ವಸ್ತಿಶ್ರೀ ಹರಧರಣೀ ಪ್ರಸೂತ ಮುಕ್ಕಂಣ
೬ ಕದಂಬ ವಂಶದಲು ಶಿವಚಿತ್ತ ಪರಾಯಣರಪ್ಪ ಕಾಮದೇವರಸರ ಕುಮಾರಿ ಪದುಮಲದೇವಿ
೭ ಯರು ತಮಗೆ ಚತುರ್ವ್ವಿಧ ಪುರುಷಾರ್ಥ ಸಿದ್ಯರ್ಥವಾಗಿ ವೋಮಂಜೂರ ಅಮೃತನಾಥ ದೇವ–
೮ ರ ದೇವಾಲ್ಯದಲು ಆಚಂದ್ರಾರ್ಕ ಸ್ಥಾಯಿಯಾಗಿ ಮಾಡಿದ ಧರ್ಮ ಪ್ರತಿ ದಿನದಲು ಅಡಿಗೆ
೯ ಯ ಮಾಡುವರನೂ ಸಯ್ತುವಾಗಿ ೧೨ ಮಂದಿ ಬ್ರಾಂಹಣ ಭೋಜನಕ್ಕೆ ಭತ್ರ ನಡವಂತಾಗಿ ಓಮ–

೧೦ ಂಜೂರ ಕುತ್ಪಾಡಿಯಲು ಮಾರ್ತಂಡ ದಹನಾದ ದಾಂಬ ಹೆಗ್ಗಡೆ ಕಯ್ಯರಬಳಿಯ ಬಂಕಿ ಸಾ-
೧೧ ಂತೆಯರ ಶಿವವಪ್ಪಿರಿಗೆ ವಸ್ತುವ ಕೊಟ್ಟು ಧಾರಾಪೂರ್ವಕವಾಗಿ ಅವರ ಕಯಿಂದ ಕೊಂಡಕ್ಷೇತ್ರದ
೧೨ ವಿವರ ಆ ದೊಂಬ ಹೆಗ್ಗಡೆಯ ಕಯ್ಯಲಿ ಕೊಂಡದು ಕುತ್ಯದಿತಿಮರು ಬತ್ತುವ ಬೈದೆ ಕಾ-
೧೩ ರು ಮೂ ೬ ಅದಱಕೆಳಣ ಪಳ್ಳಿ ಬಿತ್ತುವ ಮೂ೩ ಎಣ್ಣಮುದಿಯರು ಬಿತ್ತುವ ಮೂ೩ ಕೊಂಬತ್ತತ್ತಿಮರು
೧೪ ಬಿತ್ತುವ ಮೂಗಿ ತಾತ್ತಿಮರು ೨ ಕಂಬಿತ್ತುವ ಮೂ೪ ಚಿತ್ರಪಾಡಿಯ ಗದೆ ಬಿತ್ತು ವಮೂ೩ ಅ-
೧೫ ದ ಱ ಮೋಲಣಗದೆ ಬಿತ್ತುವ ಮೂ೩ ತೋಡಿಂದ ಬಡಗಣಗಡಿಗಳು ಬಿತ್ತುವ ಮೂ೬ ಅಂ-
೧೬ ತು ಬಿತ್ತುವ ಬೆದೆಕಾರು ಮೂ ೨೯ ಲಂಕಿನ ಕಯಿಂದ ಕೊಂಡದು ಮನೆಯ ಬಾಗಿ-
೧೭ ಲಗದೆ ಬಿತ್ತುವ ಮೂಡೆ ೬ ಕಾಣಂಬೆರರ ಗದ್ದೆ ೩ಕ್ಕೆ ಬಿತ್ತುವ ಮೂ ೧೬ ಕುಡುಪಿನ ಗದೆ ಬಿ-
೧೮ ತ್ತುವ ಮೂಡೆ ೩ ಅಂತು ಬಿತ್ತುವ ಮೂಡೆ ೨೫ ವುಭಯಂ ಬಿತ್ತುವ ಬೆದೆಕಾರು ಮೂ ೫೪ ಅದ-
೧೯ ಕ್ಕೆ ವುಳ್ಳ ಹಾಡಿಯ ಮನೆ ಬಾವಿ ಕೆರೆ ಮರಫಲ ಸಹಿತ ಆ ಮನೆಯಿಂದ ಬಡಗ ಕುಪ್ಪಲ ಬ
೨೦ ಳಿಯ ಸಂಕಳಿಯ ಮಾಣಿಯ ಕ್ಷೇತ್ರದಿಂದ ಪಡುವ ದೇವರ ಜೀಯನ ಮನೆಯಿಂದ ಮೂಡ ಕಾ-
೨೧ ಱು ಹಳ್ಳದಿಂದ ತೆಂಕಲಿಂತೀ ಚತುಸ್ಸೀಮೆಯೊಳಗಾದ ಕ್ಷೇತ್ರವನೂ ಆ ದೊಂಬಹೆಗ್ಗಡೆ ಬಂಕಿಸಾ
೨೨ ಂತರು ಪದುಮಲ ದೇವಿಯರ ಕಯಿಂದ ಕಾರಾಳುಮೆ ಮೂಲವ ಕೊಂಡರಾಗಿ ತಂಮತಂಮ
೨೩ ಕಾರಾಳ್ಮೆಯ ಭೂಮಿಯಿಂದ ದೊಂಬ ಹೆಗ್ಗಡೆ ಇ ಛತ್ರಕ್ಕೆ ಪ್ರತಿ ವರುಷ ೧ಕ್ಕೆ ಸಲಿಕೆಯ
೨೪ ಹಾನೆಯಲಿ ಭತ್ತ ಬಳ ೩೦ ಱ ಲೆಕ್ಕದ ಮೂಡೆ ೧೮೩ ಆ ಮರಿಯದೆಯಲಿ ಬಂಕಿಸಾಂ
೨೫ ತ ನಡಸುವದು ಭತ್ತ ಮೂ೧೮೩ ವುಭಯಂ ಭತ ಮೂಡೆ ೩೬೬ನೂ ತಪ್ಪದೆ ನಡೆಸಿ ಬಹರು
೨೬ ಯೀ ಭೂಮಿಯಲು ಪೂರ್ವ ತೋಡಗಿ ಹೆಚ್ಚು ಕುಂದಿಲ್ಲದೆ ವರುಷಂ ಪ್ರಿ ಅರಸಿಂಗೆ ಸಂದು
೨೭ ಬಹ ಸಿದ್ಧಾಯದ ಗವಿಂ ಹೊಂನನೂ ರಾಯರ ನಿರೂಪದಿಂದ ಮಲಗರಸರು ಕುಳವ ಕಟಿಸಿದರಾ-
೨೮ ಗಿ ಒಮಂಜೂರವರು ಆ ಭೂಮಿಗೆ ತೆಱು ಸಿದ್ದಾಯ ನಟ್ಟು ಬೆಡು ಬಿದ್ದುಬಿಯ ದುಖ ಬಸಗೆ ಆವು-
೨೯ ದೂಯಿಲ್ಲದೆ ಸರ್ವಮಾಂನ್ಯವಾಗಿ ನಡಸಿ ಬಹರು [1*] ಯೀ ಛತ್ರದ ಮೇಲು ವೈಚಕೆ ಮೊಳ ಎಂಬ ವೂರನು ರಾ-
೩೦ ಯರು ವರಾ ೧೩ ಱ ಕುಳವ ಕಡಿಯ್ಸಿ ಧಾರಾಪೂರ್ವಕವಾಗಿ ಕೊಟ್ಟ ಸಂಮಂಧ ಆ ಮೂರು ಸರ್ವಮಾಂನ್ಯವಾಗಿ
೩೧ ಯೀ ಧಂಮ್ಮಕ್ಕೆ ಸಲೂದಾಗಿ ಆ ವೂರಿಂದ ಯೆರಡು ಕಂದಾಯದಲು ವುಪಚಾರ ಜೋಡಿ ಸಹಿತ
೩೨ ಬಹರ್ಗಂ ನೂ ನಡಯ್ಸಿ ಸರ್ವ್ವಮಾಂನ್ಯವಾಗಿ ಬಾಳುವರು [1*] ಆ ಹೊಂನ ವೆಚ್ಚದ ವಿವರ ದಿನಂ
೩೩ ಪ್ರತಿ ಯೀ ಛತ್ರಕ್ಕೆ ತುಪ್ಪ ಕುಡುತೆ ೨ಕ್ಕೆ ತಾರ ೫ ತೋಯೆ ತಾ ೨ ಶಾಕ ೫ ಕ್ಕಂ ತಾರ ೨ ತೆಂಗಿನಕಾಯಿ
೩೪ ಮಜಿಗೆ ತಾ ೩ ವಿಳೆಯ ಬಾಳೆಲೆ ವುಪ್ಪು ಹುಳಿ ಮೆಣಸು ಸಂಬಾರ ಕಟಿಗೆ ಯೆಲ್ಲವಕ್ಕೆ ಸಹಿತ
೩೫ ತಾರ ೪ ಅಂತು ಪಣ ೨ ಱ ಲೆಕ್ಕದಲಿ ತಿಂಗಳು ೧ ಕಂ ಯೇಳೂವರೆ ಹೊಂನ ಮರಿಯಾದಿಯ-
೩೬ ಲಿ ವರಿಷ ೧ ಕಂ ರ್ಗಂ ಹೊಂನೂ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡವುದು ಆ ಮೊಳದ ವೂರ

**ಕಲ್ಲಿನ ಹಿಂಭಾಗ**

೩೭ ..........................ಂಥಾ ಭತ್ತ ಮೂಡೆ ೨೪ ನೂ.............
೩೮ ಶಿವರಾ.........................................................................
೩೯ ಬ್ರಾಂಹ್ಮಣ......................................................................
೪೦ ..................................................ಭತ್ತವನೂ ಆ
೪೧ ಕಾರಾಳ್ಮೆಯ ಮೂಲಿಗರು ಕೊಡದೆ ವೊಳಿಯ್ಸಿದಡೆ ತಂಮ ಕಾರಾಳುಮೆಯ
೪೨ ಲೂ ಬಹಂಥಾ ಭತ್ತ ಮೂ ೨೪ ನೂ ಅಮ್ರುತನಾಥ ದೇವರಿಎ ಶಿವರಾತ್ರೆಯ
೪೩ ಪೂಜೆಗೆ ದೀವಿಗೆಗೆ ೧ ಹಾಡಯೆಂಣೆಗೆ ೩ ಹೊತ್ತಿನ ಪೂಜೆಗೆ ಆಱು ಜ-

೪೪ ನದ ಬ್ರಾಹ್ಮಣ ಭೋಜನಕೆ ಯಿಂತಿಷ್ಟನೂ ಆಚಂದ್ರಾರ್ಕ ಸ್ಥಾಇಯಾ-
೪೫ ಗಿ ನಡಸಿ ಸರ್ವಮಾಂನ್ಯವಾಗಿ ಬಾಳುವರು ಯಿ ಛತ್ರಕ್ಕೆ ಸಲುವಂಥಾ ಭ-
೪೬ ತ್ತವನೂ ಆ ಕಾರಾಳ್ಮೆಯ ಮೂಲಿಗರು ಕೊಡದೆ ವುಳಿಸಿದಡೆ ತಂಮ ಕಾರಾಳ್ಮೆ
೪೭ ಯ ಭೂಮಿಯನೂ ತಾವಾಗಿ ಬಿಟ್ಟವರು । ಮತ್ತಂ ಪದುಮಲ ದೇವಿಯರು ಮಾಡಿದ
೪೮ ಧಂರ್ಮ್ಮ ಒಮಂಜೂರಲು ಪಲತಿಟ್ಟಿನಲು ತಂಮ ಕೆಯಿಂದ ವಸ್ತುವನಿಕ್ಕೆ ತಾವು
೪೯ ಮಾಡಿಸಿದ ಅಡಿಕೆಯ ತೋಟವನೂ ಮೂವತ್ತೆರಡು ಗ್ರಾಮಕ್ಕೆ ಪಡಿಗೆ ಅಕ್ಕಿಗೆ ಮೇ
೫೦ ಲು ವೆಚ್ಚಕ್ಕೆ ಸಹಿತ ಗ ೭ ದಕ್ಷಿಣೆಗೆ ಗ ೫ ಅಂತಾ ಗ ೧೨ ಹೊಂನನೂ ಆಚಂದ್ರಾರ್ಕ್ಕ
೫೧ ಸ್ಥಾಯಿಯಾಗಿ ಸರ್ವ್ವಮಾಂನ್ಯವ ಮಾಡಿ ಬ್ರಾಂಹ್ಮರಿಂಗೆ ಭೋಜನಕ್ಕೆ ದಕ್ಷಿಣೆಗೆಂದು ಆ ತೋ-
೫೨ ಟವನೂ ಧಾರೆಯ (ರದು) ಕೊಟ್ಟರು ಆ ಧರ್ಮ್ಮಸ್ಥಳದ ತೋಟವನೂ ಆ ಬ್ರಾಂಹ್ಮಣರು ಚಟ್ಟ-
೫೩ ತ್ತಿಲ ಗೋಯಿಂದಗೆ ವೂ ನಾರಣಂಗೆ ವೂ ಆ ಅವನು ಮೂಲವ ಕೊಟ್ಟರಾಗಿ ಆ ಚಟ್ಟ
೫೪ ತ್ತಿಲ್ಲವರುಗಳು ತಂಮ ಸಂತತಿ ಸಂತತಿ ವುಳಂನ ಬರ ಯೀ ಧಂರ್ಮ್ಮವ ನಡಸಿ
೫೫ ಬಾಳುವರು ಯಿ ಧಂರ್ಮವನು ಪಾಲಿಸಿದವರಿಗೆ ವಾರಣಾಸಿಯಲು ಸೂರಿಯಗ್ರಹ-
೫೬ ಣದಲಿ ಸಾವಿರ ಕವಿಲೆಯನು ಸಬ್ರಾಂಹ್ಮರಿಗೆ ಕೊಟ್ಟ ಫಲವಹುದು ೧೦೦೦ ಬ್ರಾಂ -
೫೭ ಹ್ಮರಿಂಗೆ ಆಚಂದ್ರಾರ್ಕ ಭೋಜನವನು ನಡಸಿದ ಫಲವಹುದು। ದಾನಪಾಲನ ಯೋ-
೫೮ ಂರ್ಮ್ಮಧ್ಯೇ ದಾನಾ ಶ್ರೇಯೋನು ಪಾಲನಂ ದಾನಾತ್ ಸ್ವರ್ಗಮವಾಪ್ನೋತಿ ಪಾರನಾದಚ್ಯುತ-
೫೯ ಂಪದಂ। ಸಾಮಾಂನೊಯಂ ಧಂರ್ಮ್ಮ ಸೇತು ನೃಪಾಣಾಂ ಕಾಲೇ ಕಾಲೇ ಪಾಲನೀಯೋ-
೬೦ ಭವದ್ಭಿಃ ಸರ್ವ್ವಾಂ ನೇತಾಂ ಭಾವಿನಃ ಪಾರ್ಥಿವೇಂದ್ರಾಂ ಭೂಯೋ ಭೂಯೋ ಯಾಚ-
೬೧ ತೇ ರಾಮಚಂದ್ರಃ । ಯೀ ಧಂರ್ಮ್ಮಕ್ಕೆ ಅಳುಪಿದವನ ತಲೆ ಅರಸಿಂಗೆ ದಂಡ ವರಾಹ
೬೨ ಗ ೧೨೦೦ ಅರಸಳುಪಿದನಾ[ದ*]ಡೆ ವಾರಣಾಸಿಯಲು ಸಾವಿರ ಕಪಿಲೆಯಂ ೧೦೦೦
೬೩ ಬ್ರಾಂಹ್ಮರಂ ಕೊಂಡ(ದ) ದೋಷಕೆ ದೋಷಕೆ ಹೋಹನು। ಸುದತ್ತಾಂ ಪರದತ್ತಾಂ ವಾಯೋ
೬೪ ಹರೇಚ್ಯ(ತ್ಯ) ವಸುಂಧರಾ ಷಷ್ಟಿರ್ವ್ವರುಷ ಸಹಸ್ರಾಣಿ ವಿಷ್ಟಾಯಂ ಜಾಯತೇ
೬೫ ಕ್ರಿಮಿಃ ॥ ಯೇಕಯೇವ ಭಗಿನೀ ಲೋಕೇ ದ್ವಿತಿಯಾ ನಕದಾಚನ ನಗ್ರಾಹ್ಯಾನ ಕರಗ್ರ-
೬೬ ಸ್ತ ವಿಪ್ರದತ್ತಾ ವಸುಂಧರಾ ॥ ಯೀ ದಂರ್ಮ್ಮ ಶಾಸನವನೂ ಮಂಗಲೂರ ನಾಳು-
೬೭ ವ **ಮಲಗರಸರು** ಬಂಗರು ಚವುಟರು ಆಜಾರದ ಅಜುವರು ಮಂಗಲೂರ
೬೮ ನಖರ ಮಿತ್ರಾಟ ಮಂಜಂ ನೋಡತ್ತವರು ಒಮಂಜೂರ ಕಯ್ಯರು ದೊ(ಂ) ಬ ಹೆಗ್ಗ-
೬೯ ಡೆ ಮೊದಲಾದ ಕಟ್ಟಳೆಯವರು ಯಿಂತಿವರೆಲ್ಲರ ಅನುಮತದಿಂದ ಬರದು ಪ್ರತಿಷ್ಟಿಸಿ
೭೦ ದ ಶಾಸನ[॥*] ಯೀ ಧಂರ್ಮ್ಮವ ಮಾಡಿದವರಿಗೆ ಪಾಲಿಸಿದವರಿಗೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ [॥*]
೭೧ ಹರಧರಣೀ ಪ್ರಸೂತನಕಳಂಕ ಕದಂಬ ಕುಲಾಬ್ಧಿ ಚಂದ್ರನುರ್ವ್ವರಿಯೊಳು ಸತ್ಯರಾ-
೭೨ ಯರ ಶಿರೋಮಣಿ ಕಾಮನ್ರು ಪಾಲನಾತ್ಮ ಭೋವರಗುಣಿ ಪದ್ಮಲಾಂಬಿಕೆಯ ಧಂರ್ಮ್ಮ
೭೩ ವಿದು ಕ್ಷಿತಿವುಳ್ಳ ಕಾಲದೊಳ್ಸ್ಥಿರ ನಡೆ(ಯ)ಲ್ನಿರೀಕ್ಷಿಸಿದ ಪಾಲಿಸು ನೀನಮೃತೇಶ ಶಂಭುವೇ ॥*



* ಕೇಂದ್ರ ಶಾಸನ ಇಲಾಖೆ ತನ್ನ ಇತ್ತೀಚಿನ ಪ್ರಕಟಣೆಯಲ್ಲಿ ಈ ಶಾಸನದ ಪಾಠವನ್ನು ಪ್ರಕಟಿಸಿದೆ. ಆದರೆ ಅದರಲ್ಲಿ ಹಲವಾರು ದೋಷಗಳಿರುವುದನ್ನು ಗಮನಿಸಿ ಇಲ್ಲಿ ಶುದ್ಧ ಪಾಠವನ್ನು ಕೊಟ್ಟಿದ್ದೇನೆ.

ವಿ.ಆರ್. ಚೆಲುವರಾಜನ್*

# ಸ್ವಾರಮ್ಮನ ದೇವಾಲಯ ಮತ್ತು ಅಪ್ರಕಟಿತ ಶಾಸನ

ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನಲ್ಲಿ ಅಮರಾಪುರದ ಹೆದ್ದಾರಿಯಲ್ಲಿ ಸುಮಾರು ೩೦ ಕಿ.ಮೀ. ದೂರದಲ್ಲಿ ರಸ್ತೆಯ ಎಡಭಾಗದಲ್ಲಿ ಮದ್ದೆ ಗ್ರಾಮವಿದೆ. ಈ ಗ್ರಾಮವು ಸುಮಾರು ೩೦೦ ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿರುವುದು ಸರ್ಕಾರಿ ದಾಖಲೆಗಳಿಂದ ತಿಳಿದುಬರುತ್ತದೆ. ಊರಿನ ಮಧ್ಯದಲ್ಲಿ ದಕ್ಷಿಣಕ್ಕೆ ಒಂದು ದಾರಿ ಹೋಗುತ್ತದೆ. ಇದೇ ದಾರಿ ಮುಂದೆ ಪೂರ್ವಕ್ಕೆ ತಿರುಗಿ ಗಾರೆಬೆಟ್ಟವೆಂಬ ಸ್ಥಳವನ್ನು ಸೇರುತ್ತದೆ. ಸದರೀ ಬೆಟ್ಟದ ಕೆಳಭಾಗದಲ್ಲಿ "ಸ್ವಾರಮ್ಮನಗುಡಿ" ಎಂಬ ವಿಶಾಲವಾದ ಗುಡಿಯೊಂದಿದೆ. ಸ್ವಲ್ಪ ದೂರದಲ್ಲಿ ಇದೇ ಹೆಸರಿನ ಕೆರೆ ಇದೆ. ದೇವಾಲಯದ ದಕ್ಷಿಣ ಭಾಗದಲ್ಲಿ ಶಂಕರಲಿಂಗನಗುಡ್ಡವಿದ್ದು ಅದರ ತಲೆಯ ಮೇಲೆ ಹೆಂಚೇರಿನ ನೊಳಂಬರ ಕಾಲದಲ್ಲಿ ನಿರ್ಮಿತವಾದ ಶಿವದೇವಾಲಯವಿದೆ.

ಸ್ವಾರಮ್ಮನೇ ಈ ಪ್ರಾಂತ್ಯದ ಆರಾಧ್ಯ ದೇವತೆ ಬೆಂಗಳೂರು, ತುಮಕೂರು, ಚಿತ್ರದುರ್ಗ, ಕೋಲಾರ, ಆಂಧ್ರದ ಅನಂತಪುರ ಜಿಲ್ಲೆಗಳಿಂದ ಇಲ್ಲಿಗೆ ಭಕ್ತ ಸಮೂಹ ಹರಿದು ಬರುತ್ತಿರುತ್ತದೆ. ಕಾಮನ ಹುಣ್ಣಿಮೆಯ ಸಮಯದಲ್ಲಿ ಇಲ್ಲಿ ರಥೋತ್ಸವ ನಡೆಯುತ್ತದೆ.

ಸ್ವಾರಮ್ಮ ಸುಮಾರು ಕ್ರಿ.ಶ. ೧೭೫೦ರಲ್ಲಿ ಜೀವಿಸಿದ್ದ ಶಿವಶರಣೆ. ಮೊದಲಿಗೆ ಶಿರಾ ಫೌಜುದಾರಿ ವಿಭಾಗಕ್ಕೆ ಸೇರಿದ ಈಗಿನ ಮಡಕಶಿರಾ ಪ್ರಾಂತ್ಯದ ಸ್ವಾರಗಿರಿಯವಳು. ಸ್ವಾರಗಿರಿ ಈಗ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿಗೆ ಸೇರಿದೆ. ಅಲ್ಲಿಂದ ಈಕೆ ಪಾವಗಡ ತಾಲ್ಲೂಕು ಮದ್ದೆಗ್ರಾಮಕ್ಕೆ ವಲಸೆ ಬಂದವಳು, ಅವಳ ಪ್ರಾಂತ್ಯದಲ್ಲಿ ಶಿರಾ ನವಾಬರದೇ ದರ್ಬಾರ್. ತನ್ನ ಶಿವಭಕ್ತಿ, ಆಚಾರ, ವಿಚಾರ, ತತ್ವಗಳಿಗೆ ತೊಂದರೆಯಾಗತೊಡಗಿದಾಗ ಆ ಸ್ಥಳವನ್ನು ಬಿಟ್ಟು ಪಾವಗಡ ಪ್ರಾಂತ್ಯದಲ್ಲಿ ನೆಲಸುವ ಇರಾದೆಯಿಂದ ತನ್ನ ಗಂಡನಾದ ಶಂಕರಲಿಂಗನನ್ನು ಉತ್ತರಾಭಿಮುಖವಾಗಿ ಹೋಗಿ ರಕ್ಷಣೆ ಇರುವ ಸ್ಥಳವನ್ನು ಹುಡುಕಿಕೊಂಡು ಬಾ ಎಂದು ಕಳುಹಿಸುತ್ತಾಳೆ.

ಸದರೀ ಕೆಲಸದ ಮೇಲೆ ಹೊರಟ ಗಂಡ ಬಹಳ ದಿನಗಳಾದರೂ ಹಿಂದಕ್ಕೆ ಬರುವುದಿಲ್ಲ. ತಾನೇ ಅವನನ್ನು ಹುಡುಕಿಕೊಂಡು ಬರುತ್ತಾಳೆ. ಗಂಡ ಮತ್ತೊಬ್ಬಳ ಜೊತೆಯಲ್ಲಿ ಸಂಸಾರ ನಡೆಸುತ್ತಿರುವುದನ್ನು ಕಂಡು, ರೋಷಗೊಂಡು, ಕಾಳಿಯಾಗಿ, ಮಸಣಿಯಾಗಿ ಅವನೊಡನೆ ಜಗಳವಾಡಿ ರೋಷದಭರದಲ್ಲಿ ಗಂಡನನ್ನು ಬೆಟ್ಟದಿಂದ ತಳ್ಳಿ ಕೊಂದು ಬಿಡುತ್ತಾಳೆ. ಈಗಿನ ಸೋರಮ್ಮನ ಗುಡಿಯ ಮುಂದೆ ಕೊಂಡವನ್ನು ಮಾಡಿ ಅದರಲ್ಲಿ ಬಿದ್ದುಸಾಯುತ್ತಾಳೆ. ಅವಳ ಮರಣವನ್ನು "ಮಹಾಸತಿ" ಮರಣವಾಗಿ ಜನ ಪರಿಗಣಿಸುತ್ತಾರೆ. ಮಹಾಸತಿಯಾದ ಸ್ವಾರಮ್ಮನ ಪ್ರತಿಮೆಯನ್ನು ಮಾಡಿಸಿ, ಅವಳಿಗೊಂದು ಗುಡಿಯನ್ನು ಕಟ್ಟಿಸಿ ಮದ್ದೆ ಮತ್ತು ಕ್ಯಾತನಹಳ್ಳಿ ಜನತೆ ಪೂಜಿಸತೊಡಗುತ್ತಾರೆ.

ಇಂದು ಸ್ವಾರಮ್ಮನ ದೇವಾಲಯದಲ್ಲಿರುವ ಮೂಲ ವಿಗ್ರಹವನ್ನು ಪರಿಶೀಲನೆ ಮಾಡಿ ನೋಡಿದಾಗ, ಅದರಲ್ಲಿ ಸ್ವಾರಮ್ಮನನ್ನು ಗುರುತಿಸುವ ಯಾವ ಲಕ್ಷಣಗಳೂ ಕಂಡು ಬರುವುದಿಲ್ಲ. ಎಂಟನೆ ಶತಮಾನದ್ದೆಂದು ಹೇಳಬಹುದಾದ ಕರಿಯಕಲ್ಲಿನ ಸುಂದರ ಶಿಲ್ಪವನ್ನೊಳಗೊಂಡ ಮಹಿಷಾಸುರನನ್ನು ಸಂಹಾರ ಮಾಡುತ್ತಿರುವ ಮಹಿಷಮರ್ದಿನಿ ವಿಗ್ರಹವಾಗಿದೆ. ಈ ವಿಗ್ರಹವು ಯಾವಕಾರಣಕ್ಕೂ ಜಾನಪದ ದೇವತೆ ಸ್ವಾರಮ್ಮನದಲ್ಲ ಎಂಬುದನ್ನು ಮೇಲ್ನೋಟದಿಂದಲೇ ಕಂಡುಕೊಳ್ಳಬಹುದಾಗಿದೆ.

ಸದರೀ ವಿಷಯಕ್ಕೆ ಪುಷ್ಟಿಕೊಡುವಂತೆ ದೇವಾಲಯದ ಸುಕನಾಸಿಯ ಬಾಗಿಲುವಾಡದ ಮೇಲಿನ ಪಟ್ಟಿಯಲ್ಲಿ ಹಳೆಗನ್ನಡ ಶಾಸನವೊಂದು ಕಂಡುಬಂದಿದ್ದು ಬುವಿರ್ಯೆ ವೋಜನು ದೇವಾಲಯ ಕಟ್ಟಿದ ಶಿಲ್ಪಿ ಎಂದು ಸ್ಪಷ್ಟಪಡಿಸುತ್ತದೆ. ಶಾಸನದ ಕಾಲವು ಸುಮಾರು ಎಂಟನೇ ಶತಮಾನ

* ಮುನಿಸಿಪಲ್ ಕಛೇರಿ ರಸ್ತೆ, ಪಾವಗಡ – ೫೬೧ ೨೦೨



ಸ್ವಾರಮ್ಮ ಅಥವಾ ಮಹಿಷಾಸುರ ಮರ್ದಿನಿ

ದಾಗಿದ್ದು ಪಾವಗಡ ಪ್ರಾಂತ್ಯದ ಇತಿಹಾಸವನ್ನು ಎಂಟನೇ ಶತಮಾನಕ್ಕೆ ಕೊಂಡೊಯ್ಯುವ ಅಂಶವನ್ನು ಗಮನಿಸಬಹುದು.

ಪಾವಗಡ ತಾಲ್ಲೂಕಿಗೆ ಸೇರಿದ ಸ್ವಾರಮ್ಮನ ಗುಡಿ ಸುತ್ತಮುತ್ತಲ ಪ್ರದೇಶವನ್ನು ತಲಕಾಡಿನ ಗಂಗರಸರು ಪ್ರಥಮದಲ್ಲಿ ಆಳಿದ್ದಾರೆ. ಮುಂದೆ ಗಂಗರಸರ ಸಾಮಂತ ದೊರೆಗಳಾಗಿ ಹೆಂಜೇರಿನ ನೊಳಂಬ ಪಲ್ಲವರು ಆಳಿದ್ದಾರೆ, ನೊಳಂಬವಾಡಿ- ೩೨೦೦೦ ನಾಡಿನ ರಾಜಧಾನಿಯಾದ ಹೆಂಜೇರು ಪಟ್ಟಣವು ಇಂದಿನ ಹೇಮಾವತಿ ಸ್ವಾರಮ್ಮನ ಗುಡಿಯಿಂದ ಬಹಳ ಹತ್ತಿರವಿದ್ದು ಇಲ್ಲಿ ನಡೆದ ಯುದ್ಧಗಳ ಗುರುತಾಗಿ ಅಲ್ಲಲ್ಲಿ ಅನೇಕ ವೀರಗಲ್ಲುಗಳು ಕಂಡುಬರುತ್ತದೆ.

ಕನ್ನಡದ ನೆಲೆಯಲ್ಲೇ ಪ್ರತಿಷ್ಠಾಪನೆಗೊಂಡಿದ್ದ ನಿಡುಗಲ್ ಚೋಳರ ಮುಖ್ಯ ನೆಲೆ ನಿಡುಗಲ್‌ದುರ್ಗವು ಇಲ್ಲಿಂದ ಉತ್ತರ ದಿಕ್ಕಿನಲ್ಲಿದ್ದು ಗಾರೆಬೆಟ್ಟದಿಂದ ಅಲ್ಲಿನ ಕೋಟೆ ಕೊತ್ತಲಗಳನ್ನು ನೋಡಬಹುದಾಗಿದೆ. ಈ ರಾಜ ಮನೆತನಗಳೆಲ್ಲವೂ ಇಲ್ಲಿನ ಒಡೆತನವನ್ನು ಹೊಂದಿದ್ದವು. ಚೋಳರ ಕಾಲದ ಹಲವು ಶಾಸನಗಳಲ್ಲೂ ನಿಡುಗಲ್‌ದುರ್ಗವು ಅಭೇದ್ಯವಾದುದೆಂದೂ ಎಂಟು ದಿಕ್ಕುಗಳಲ್ಲಿ ಭೈರವ, ಗಣಪತಿ, ದುರ್ಗಿ ಮೂರ್ತಿಗಳು ರಕ್ಷಿಸುತ್ತಿವೆಯೆಂದೂ ಆದ ಕಾರಣ ಈ ಕೋಟೆಯನ್ನು ಯಾರೂ ಗೆಲ್ಲಲಾರರು ಎಂದು ಪಾವಗಡ ಶಿಳರ ಶಾಸನ ತಿಳಿಸುತ್ತದೆ. ಶಾಸನದಲ್ಲಿ ಉಲ್ಲೇಖವಾಗಿರುವ ಎಂಟು ದುರ್ಗಿಯರಲ್ಲಿ ಸ್ವಾರಮ್ಮನ ಗುಡಿಯಲ್ಲಿರುವ ವಿಗ್ರಹವೂ ಒಂದಾಗಿರುವ ಸಾಧ್ಯತೆ ಇದೆ. ಏಕೆಂದರೆ ಈ ವಿಗ್ರಹವನ್ನು "ಚೋಳಮ್ಮ" ನೆಂದೂ ಕರೆಯುತ್ತಾರೆ. ಮುಂದೆ ಇದೇ ಹೆಸರು ಸೋಳಮ್ಮನಾಗಿ ಸ್ವಾರಮ್ಮನಾಗಿರಬಹುದು ಎಂದು ಊಹಿಸಬಹುದಾಗಿದೆ.[೧]

ಸ್ವಾರಮ್ಮನು ಶಿರಾದ ನವಾಬರ ಕಾಲದಲ್ಲಿ ಜೀವಿಸಿದ್ದ ಳೆಂದು ಅವಳ ಇತಿಹಾಸವನ್ನು ಗಮನಿಸಿದಾಗ ತಿಳಿದು ಬರುತ್ತದೆ. ಶಿರಾದ ಮೂಲನವಾಬ ದಿಲ್ವಾರಾಖಾನನ ಆಳ್ವಿಕೆಯು ಕೊನೆಗೊಂಡ ವೇಳೆಯಲ್ಲಿ ಮರಾಠರು ಈ ಪ್ರದೇಶವನ್ನು ಹಿಡಿದರು. ಸುಮಾರು ಕಾಲ ಶಿರಾಪ್ರಾಂತ್ಯ ಮತ್ತು ಮಡಕಶಿರಾ ಭಾಗಗಳು ಅವರಲ್ಲೇ ಉಳಿದಿತ್ತು. ಜಸಾಲತ್‌ಜಂಗನೊಡಗೂಡಿ ಹೈದರಾಲಿಯು ೧೭೬೧ ರಲ್ಲಿ ಶಿರಾವನ್ನು ಗೆದ್ದುಕೊಂಡನು[೨]. ಇದಾದ ನಂತರವೂ ಮರಾಠ ರಿಗೂ ಹೈದರಾಲಿ ಕಡೆಯಿಂದ ನಿಯಮಿತರಾದವರಿಗೂ ಯುದ್ಧಗಳು ನಡೆಯುತ್ತಲೇ ಇದ್ದುವು. ಕೊನೆಗೆ ಇಲ್ಲಿಗೆ ಅಧಿಕಾರವನ್ನು ಹೊಂದಿದವನು ಫಯಾಜ್‌ಖಾನ್ ಎಂಬ ಸರದಾರ. ಇವನು ಅತಿಕ್ರೂರವಾದ ದಂಡನೆಗಳನ್ನು ಕೊಡುತ್ತಿದ್ದನು. ಕಟ್ಟಳೆಯಂತೆ ಒಂದು ಗಡಿಗೆ ತುಪ್ಪವನ್ನು ಕೊಡಲಿಲ್ಲವೆಂದು ದೊಡ್ಡ ಬೋರೆಗೌಡನೆಂಬುವನ ಕುಟುಂಬವನ್ನೇ ಕೊಂದುಬಿಟ್ಟನು. ಇದರಿಂದ ಭೀತಿಗೊಂಡ ಜನ ಅಲ್ಲಿಂದ ವಲಸೆ ಹೋಗ ತೊಡಗಿದರು. ಇದೇ ಸಮಯದಲ್ಲಿ ಸ್ವಾರಮ್ಮನು ತನ್ನ ಮನೆಯ ಮುಂದಿದ್ದ ನೀರಿನ ಕೊಳದಲ್ಲಿ ಸ್ನಾನ ಮಾಡುವಾಗ, ಕಟುಕನೊಬ್ಬನು ಪ್ರಾಣಿ ಯನ್ನು ಕತ್ತರಿಸಿದ್ದ ರಕ್ತ ಮಯವಾದ ಮಚ್ಚನ್ನು ತೊಳೆದಿದ್ದನು. ಇದರಿಂದ ಮನನೊಂದ ಸ್ವಾರಮ್ಮ ಅಲ್ಲಿಂದ ಮದ್ದೆ ಪ್ರದೇಶದಲ್ಲಿ ನೆಲಸಲು ಬಂದಳು. ಸುಮಾರು ಕ್ರಿ.ಶ. ೧೭೦೦ಕ್ಕೆ ನಿಡುಗಲ್ಲಿನ ಹೊಟ್ಟಣ್ಣನಾಯಕನಿಂದ ಬಳುವಳಿಯಾಗಿ ಪಡೆದ ಆನೆಗೊಂದಿ ಮೂಲದ ನಾಯಕನು ಮದ್ದೆ ಗ್ರಾಮವನ್ನು ನಿರ್ಮಿಸಿದನು. ಅದಕ್ಕೆ ಮೊದಲು ಈ ಪ್ರಾಂತ್ಯವೆಲ್ಲಾ ಬಯಲು ಭೂಮಿ. ಶಿರಾದ ಫಯಾಜ್‌ಖಾನೆ ಮತ್ತು ಮದ್ದೆ ಗ್ರಾಮದ ಹೆಸರು ಸ್ವಾರಮ್ಮನ ಕಥೆಯಲ್ಲಿ ಬರುವುದರಿಂದ ಇದೊಂದು ಇತಿಹಾಸ ಆಧಾರವಾಗಿರುವುದರಿಂದ ಸ್ವಾರಮ್ಮ ೧೭೬೮ರ ಸಮಯ ದಲ್ಲಿದ್ದವಳೆಂದು ಹೇಳಬಹುದಾಗಿದೆ.

ಸ್ವಾರಮ್ಮನ ಗುಡಿಯಲ್ಲಿ ಹಾಲಿ ದೊರೆತಿರುವ ಶಾಸನವು ಕ್ರಿ.ಶ. ೮೦೦ಕ್ಕೆ ಸಂಬಂಧಿಸಿರುವುದರಿಂದಲೂ ಸ್ವಾರಮ್ಮನ ಜೀವಿತಕಾಲವು ೧೭೬೮ರ ಸಮಯವಾಗಿದ್ದು ಒಳಗಿನ ವಿಗ್ರಹವು ಮಹಿಷಾಸುರ ಮರ್ದಿನಿ ವಿಗ್ರಹವಾಗಿರುವುದರಿಂದ ಜಾನಪದರು ಅದನ್ನು ಸ್ವಾರಮ್ಮನೆಂದು ಕರೆದರೂ ಅದು



ಸ್ವಾರಮ್ಮ ದೇವಾಲಯದ ಹೊರನೋಟ

ಸ್ವಾರಮ್ಮ ವಿಗ್ರಹವಲ್ಲವೆಂದು ಹೇಳಬಹುದು. ಇಲ್ಲಿ ನಡೆಯುವ ಹಬ್ಬದ ಸಂದರ್ಭಗಳಲ್ಲಿ ನೂರಾರು ಕಲಾವಿದರು ಈ ದೇವತೆಯ ಬಗ್ಗೆ ಸುದೀರ್ಘವಾದ ಹಾಡುಗಳನ್ನು ಹೇಳುತ್ತಾರೆ. ಅದರಲ್ಲೂ ಬೇಲೂರಿನಿಂದ ಬಂದ ಬಡಗಿಗಳು ಒಂದು 'ಮರದ' ಸುಂದರವಾದ ಸೋರಮ್ಮನವಿಗ್ರಹವನ್ನು ಮಾಡಿದ ರೆಂದೂ ಅವರಿಗೆಲ್ಲ ಇಲ್ಲಿ ಜನತೆ ಬಹಳವಾದ ಇನಾಮು ಗಳನ್ನು ಕೊಟ್ಟರೆಂಬ ವಿವರಣೆಗಳಿರುವ ಘಟ್ಟಗಳನ್ನು ವಿವರಿಸು ತ್ತಾರೆ. ಇದೊಂದು ದಾಖಲೆಯಲ್ಲದಿದ್ದರೂ ಸಾಂದರ್ಭಿಕ ನಿರೂಪಣೆಗೆ ಸಹಾಯಕವಾಗಿರುವುದರಿಂದ ಸದರಿ ಮಾಹಿತಿ ಯನ್ನು ಪರಿಶೀಲಿಸುವುದು ತಪ್ಪಾಗುವುದಿಲ್ಲ[೩] ಅಂದರೆ ಸ್ವಾರಮ್ಮನು. ಮಹಾಸತಿಯಾದ ಮೇಲೆ ಮಾಡಿಸಿದ ಅವಳ ಪುತ್ಥಳಿ, ಕಲ್ಲಿನದಲ್ಲ ಮರದ್ದು ಎಂದು ತಿಳಿದುಬರತ್ತದೆ. ಅದನ್ನೆ ಪ್ರಾಚೀನವಾಗಿದ್ದ ಮಹಿಷಾಸುರಮರ್ದಿನಿಯ ದೇವಾಲಯದಲ್ಲೋ, ಅದರ ಬಳಿಯೋ ಪ್ರತಿಷ್ಠಾಪನೆ ಮಾಡಿರಬಹುದು. ಕಾಲಕಳೆದಂತೆ ಅದು ಕಾರಣಾಂತಗಳಿಂದ ನಷ್ಟವಾಗಲು ಬದಲಿಗೆ ಮಹಿಷಾಸುರಮರ್ದಿನಿಯನ್ನೇ ಸ್ವಾರಮ್ಮನೆಂದು ಕರೆದಿರುವರು. ಅಂದಿನಿಂದ ಜಾನಪದ ದೇವತೆಯಾದ ಸ್ವಾರಮ್ಮನು ಮಹಿಷಾಸುರಮರ್ದಿನಿಯಲ್ಲಿ ಲೀನವೆಂದು ಭಾವನೆಯನ್ನು ಹೊಂದಿರಬಹುದು.

**ದೇವಾಲಯ :** ಮಹಿಷಾಸುರಮರ್ದಿನಿ ಅಥವಾ ಸ್ವಾರಮ್ಮನ ದೇವಾಲಯವು ಮೇಲ್ನೋಟಕ್ಕೆ ಬಹಳ ಪ್ರಾಚೀನ ದೇವಾಲಯವೆಂಬ ಅಭಿಪ್ರಾಯವನ್ನು ಕೊಡುತ್ತದೆ. ಬಹಳ ವಿಶಾಲವಾಗಿದ್ದು ಒಳ ದೇವಾಲಯವನ್ನು ಸುತ್ತುವರಿದು ಪ್ರಾಕಾರದ ಗೋಡೆಯಿದ್ದು ಒಳ ಮುಖವಾಗಿ ಕಲ್ಲು ಚಪ್ಪಡಿ ಗಳಿಂದ ನಿರ್ಮಿತವಾದ ಮಂಟಪಗಳಿವೆ. ಇಲ್ಲಿ ಬಂದ ಜನ ಉಳಿದುಕೊಳ್ಳಲು ಅನುಕೂಲಗಳಿವೆ. ಸದರಿ ಪ್ರಕಾರದ ಪೂರ್ವ ದಿಕ್ಕಿನಿಂದ ದೇವಾಲಯವನ್ನು ಪ್ರವೇಶಿಸಲು ಮುಖದ್ವಾರವಿದೆ. ಇದನ್ನು ಕಲ್ಲು ಕಂಬಗಳಿಂದಲೂ, ತೊಲೆಗಳಿಂದಲೂ ನಿರ್ಮಿಸ ಲಾಗಿದೆ. ಈ ಬಾಗಿಲಿನ ಮೇಲೆ ಯಾವ ವಿಧವಾದ ಗೋಪುರ ಗಳೂ ಇಲ್ಲ. ಮುಚ್ಚುವ ಬಾಗಿಲುಗಳೂ ಹಾಳಾಗಿದೆ.

ಮುಖದ್ವಾರದಿಂದ ಸುಮಾರು ೩೦ ಅಡಿ ಒಳ ನಡೆದರೆ ಪ್ರಧಾನ ದೇವಾಲಯ ಸಿಗುತ್ತದೆ. ದೇವಾಲಯವನ್ನು ಒಳಹೊಕ್ಕು ನೋಡಿದರೆ ತೆರೆದ ಹಜಾರ ನವರಂಗ, ಅಂತರಾಳ, ಗರ್ಭಗೃಹ ಗಳಿಂದ ಕೂಡಿರುವುದು ಕಂಡು ಬರುತ್ತದೆ.

ತೆರೆದ ಪಡಸಾಲೆಯು ೧೬ ಕಂಬಗಳಿಂದ ಕೂಡಿದ್ದು ಕಂಬಗಳು ಬುಡದಲ್ಲಿ ಚೌಕಾಕಾರವಾಗಿದ್ದು ಮೇಲೆ ಬರುತ್ತಾ ಎಂಟು ಮೂಲೆಗಳಿಂದ ಕೂಡಿದ್ದು, ಮೇಲುಭಾಗವು ದುಂಡನೆ ಯಾಕಾರದಲ್ಲಿದೆ. ತಲೆಯ ಮೇಲೆ ಮಾಳಿಗೆಯ ತೊಲೆಗಳನ್ನು ಹೊರಲು ಚೌಕ ಬೋದುಗೆಯನ್ನು ಕೂಡಿಸಲಾಗಿದೆ. ಎಂಟು ಅಡಿ ಎತ್ತರವಿರುವ ಈ ಕಂಬಗಳಲ್ಲಿ ಹೆಚ್ಚಿನ ಶಿಲ್ಪ ಚಾತುರ್ಯ ವೇನೂ ಇರುವುದಿಲ್ಲ. ತೆರೆದ ಪಡಸಾಲೆಯನ್ನು ದಾಟಿಕೊಂಡು ಪ್ರಥಮ ದ್ವಾರದಿಂದ ಒಳ ಹೋದರೆ ಸುಮಾರು ೨೫x೨೫ ಅಡಿಗಳ ನವರಂಗವಿದೆ. ನವರಂಗದ ಮಧ್ಯ ಭಾಗದಲ್ಲಿ ನಾಲ್ಕು ಕಂಬಗಳಿದ್ದು ಮಾಳಿಗೆಯನ್ನು ಹೊತ್ತಿದೆ. ಒಳ ಗೋಡೆ ಗಳಲ್ಲಿ ಕೋಷ್ಠಗಳಾಗಲೀ ಇತರೆ ಶಿಲ್ಪಗಳಾಗಲೀ ಇಲ್ಲ. ಬೆಳಕು ಬಿರುವ ಯಾವ ವ್ಯವಸ್ಥೆಯೂ ಇಲ್ಲಿ ಇಲ್ಲದೆ ಇರುವುದರಿಂದ ನವರಂಗವು ಕತ್ತಲೆಮಯವಾಗಿದೆ. ಇಲ್ಲಿಂದ ಅಂತರಾಳಕ್ಕೆ (ಸುಕನಾಸಿ) ಹೋಗುವ ಬಾಗಿಲು ಬಹಳ ಚಿಕ್ಕದಾಗಿದ್ದು ಬಾಗಿಲಿನ ಚೌಕಟ್ಟನ್ನು ಬಸಾಲ್ಟ್‌ಶಿಲೆಯಿಂದ ಮಾಡಲಾಗಿದೆ. ಬಾಗಿಲಿನ ಅಡ್ಡಪಟ್ಟಿಯಲ್ಲಿ ಶಾಸನವನ್ನು ಬಿಡಿಸಲಾಗಿದೆ.

ಅಂತರಾಳದ ಮಾಳಿಗೆಯು ಚೌಕನೆಯ ಮತ್ತು ತ್ರಿಕೋಣ ಶಿಲೆಗಳಿಂದ ಮಾಡಲಾಗಿದ್ದ, ಕಮಲದ ಚಿತ್ರವಿರುವ ಶಿಲೆಯಿಂದ ಮುಚ್ಚಲಾಗಿದೆ. ಗರ್ಭಗೃಹದ ಗೋಡೆಗಳು ದೊಡ್ಡಚಪ್ಪಡಿ ಗಳಿಂದ ನಿರ್ಮಾಣವಾಗಿದ್ದು ಛತ್ತಿನ ಚೌರಸಗಳಲ್ಲಿ ಅರಳಿದ ಕಮಲಗಳ ವಿನ್ಯಾಸವಿದೆ.

ಗರ್ಭಗೃಹದ ಗೋಪುರವು ಕದಂಬನಾಗರ ಶೈಲಿಯ ಲಿದ್ದು ಮೇಲೆ ಹೋದಂತೆಲ್ಲಾ ಕಿರಿದಾಗುತ್ತಾ ಪಿರಮಿಡ್ ಆಕಾರವನ್ನು ಹೋಲುತ್ತದೆ. ಅಧಿಷ್ಠಾನ ಭೂಮಿಕೆ, ವೇದಿಕೆ ಕಂಠಗಳು ನಿರ್ದಿಷ್ಟವಾದ ಮಾದರಿಯಲ್ಲಿಲ್ಲದೆ ಸಾದಾ ಪಟ್ಟಿಕೆ ಗಳಿಂದ ಕೂಡಿದೆ. ಗೋಡೆಗಳಲ್ಲೂ ಕುಡ್ಯಸ್ತಂಭಗಳಿವೆ. ಗೂಡು ಗಳಲ್ಲಿ ಗೊಂಬೆಗಳಿಲ್ಲ ಸಾದಾ ಇದೆ. ದೇವಸ್ಥಾನದ ಪ್ರಾಕಾರದಲ್ಲಿ ಭಕ್ತರ ವಿಗ್ರಹಗಳು ನಾಗರಕಲ್ಲುಗಳು ಬಿದ್ದಿವೆ.

ಮಹಿಷಾಸುರ ಮರ್ದಿನಿ ಅಥವಾ ಸೋರಮ್ಮನ ವಿಗ್ರಹ ವೆಂದು ಕರೆಯುವ ಗರ್ಭಗೃಹದಲ್ಲಿ ವಿರಾಜಮಾನವಾಗಿರುವ ವಿಗ್ರಹವು ಕಪ್ಪನೆಯ ಬಸಾಲ್ಟ್ ಶಿಲಿಯಿಂದ ನಿರ್ಮಾಣವಾಗಿದ್ದು

ಸುಮಾರು ೪ ಅಡಿ ಎತ್ತರವಿದೆ. ಇದನ್ನು ಪೀಠದ ಮೇಲೆ ಕೂಡಿಸಿದ್ದರೂ ಪೀಠವು ನೆಲದಲ್ಲಿ ಹೂತುಹೋಗಿದೆ. ಮೇಲಕ್ಕೆ ಕಾಣುವುದಿಲ್ಲ. ಈ ವಿಗ್ರಹವು ಮಾನವ ಶರೀರ ಎಮ್ಮೆಯ ತಲೆಯನ್ನು ಹೊಂದಿರುವ ಮಹಿಷಾಸುರನನ್ನು ಕಾಲಿನಿಂದ ತುಳಿದು ಹಿಡಿದು ಖಡ್ಗದಿಂದ ಸಂಹಾರ ಮಾಡುತ್ತಿರುವ ಮಹಿಷಾಸುರಮರ್ದಿನಿಯ ವಿಗ್ರಹವಾಗಿದೆ. ದೇವಿಯ ವಿಗ್ರಹವು ಎಂಟು ಕೈಗಳಿಂದ ಕೂಡಿದ್ದು ವಿವಿಧ ಬಗೆಯ ಆಯುಧಗಳಿಂದ ಕೂಡಿದೆ. ವಿಗ್ರಹದ ಎಡಭಾಗದ ಕೆಳಗಿನ ಕೈ ಮಹಿಷಾಸುರನ ತಲೆಯನ್ನು ಹಿಂದಕ್ಕೆ ತಿರುಚಿ ಹಿಡಿದು ಕೊಂಡಿದೆ. ಮತ್ತೊಂದು ಕೈಯಲ್ಲಿ ಗುರಾಣಿಯಿದ್ದು, ಬಿಲ್ಲು ಮತ್ತು ಶಂಖವನ್ನು ಇನ್ನೆರಡು ಕೈಗಳಲ್ಲಿ ಬಿಡಿಸಲಾಗಿದೆ. ವಿಗ್ರಹದ ಬಲಭುಜಗಳನ್ನು ಪರಿಶೀಲಿಸಿದರೆ, ಕೆಳಗಿನ ಕೈಲಿ ಉದ್ದನೆಯ ಅಗಲವಾದ ಖಡ್ಗವಿದ್ದು ಅದು ಕೆಳಗೆ ಬಿದ್ದಿರುವ ಮಹಿಷಾಸುರನ ದೇಹವನ್ನು ಸೀಳುತ್ತಿದೆ. ಖಡ್ಗ ಎರಡೂ ಕಡೆ ಹರಿತವಾಗಿದೆ. ಮೇಲಿನ ಕೈ ಬಾಣವನ್ನು ಹಿಡಿದಿದೆ. ಮೂರನೆಯ ಕೈ ಶತ್ರುಗಳನ್ನು ದೂರದಿಂದಲೇ ಕೊಲ್ಲಬಲ್ಲ ಎಸೆಯುವ ಪ್ರಯೋಗ ಚಕ್ರವನ್ನು ಹಿಡಿದಿದೆ. ಮೇಲಿನ ಕೈ ಬತ್ತಳಿಕೆಯಿಂದ ಬಾಣವನ್ನು ತೆಗೆಯುವ ಸನ್ನಾಹದಲ್ಲಿದೆ. ಹೀಗೆ ಮಹಿಷಾಸುರನೊಡನೆ ಯುದ್ಧ ನಿರತಳಾಗಿರುವ ದೇವಿಯ ಎಲ್ಲಾ ಎಂಟು ಕೈಗಳೂ ಕಾರ್ಯತತ್ಪರವಾಗಿವೆ.

ದೇವಿಯು ತನ್ನ ಬಲಗಾಲನ್ನು ಅಸುರನ ಸೊಂಟದ ಮೇಲಿಟ್ಟು ಅವನನ್ನು ಬಲವಾಗಿ ಮೆಟ್ಟಿಹಿಡಿದು, ಎಡಗಾಲಿನಿಂದ ಅವನ ಕೈಯನ್ನು ಮೆಟ್ಟಿಹಿಡಿದು ತಲೆಯನ್ನು ತಿರುಚಿರುವುದರಿಂದ ಮಹಿಷನು ದೇವಿಯ ಬಂಧನಕ್ಕೊಳಗಾಗಿದ್ದಾನೆ. ದೇವಿಯ ಕಂಠಾಭರಣ, ಕಿವಿಯ ಓಲೆಗಳು, ತೋಳಬಂದಿಗಳು, ಕೈಬಳೆಗಳು ಕಾಲುಬಳೆಗಳು, ಸ್ತನವಸ್ತ್ರ, ಸೊಂಟದ ಕಿರುಗೆಜ್ಜೆಯ ಸರ, ನಡುವಸ್ತ್ರಗಳನ್ನು ಶಿಲ್ಪಿಯು ಸಮಯ ಪ್ರಜ್ಞೆಯಿಂದ ಬಿಡಿಸಿದ್ದಾನೆ.

ಮಹಿಷಾಸುರನ ಎಮ್ಮೆಯ ಮುಖ, ಕೊಂಬುಗಳು, ಕೈಯಲ್ಲಿನ ಖಡ್ಗ ತೊಟ್ಟಿರುವ ಕವಚ, ನಡುವಸ್ತ್ರ, ಸೋತು ಬಿದ್ದಿರುವ ಭಂಗಿಯನ್ನು ಶಿಲ್ಪಿಯು ಬಹು ಚೊಕ್ಕವಾಗಿ ಬಿಡಿಸಿದ್ದಾನೆ.

ಮಹಿಷಾಸುರಮರ್ದಿನಿ ವಿಗ್ರಹವು ಯುದ್ಧನಿರತ ಹೋರಾಟದ ಭಂಗಿಯಲ್ಲಿರುವುದರಿಂದ ಮುಖವನ್ನು ಭಂಗಿಗೆ ತಕ್ಕಂತೆ ಎಡಗಡೆಗೆ ತಿರುಗಿಸಲಾಗಿದೆ. ತಲೆಯ ಮೇಲಿನ ಕಿರೀಟ ಉದ್ದವಾಗಿದ್ದು, ಬಾದಾಮಿ, ಐಹೊಳೆಯ ಗುಹಾಂತರ ದೇವಾಲಯದ ಶಿಲ್ಪದಲ್ಲಿರುವ ಕಿರೀಟವನ್ನು ಹೋಲುತ್ತದೆ. ದೇವಿಯ ತಲೆಯ ಹಿಂಭಾಗದಲ್ಲಿ ಪ್ರಭಾಚಕ್ರವನ್ನು ಬಿಡಿಸಲಾಗಿದೆ. ವಿಗ್ರಹದ ಶಿಲ್ಪ, ಲಕ್ಷಣಗಳನ್ನು ಗಮನಿಸಿದಾಗ ಪ್ರಾಚೀನತೆ ಕಂಡುಬರುತ್ತದೆ.

**ಬಾಗಿಲುವಾಡದ ಶಾಸನ**

ಸ್ವಾರಮ್ಮನ ದೇವಾಲಯದಲ್ಲಿ ನವರಂಗದಿಂದ ಅಂತರಾಳಕ್ಕೆ ಹೋಗುವ ಬಾಗಿಲಿನ ಚೌಕಟ್ಟಿನ ಅಡ್ಡಪಟ್ಟಿಯ ಮೇಲೆ ೨೪ ಅಕ್ಷರಗಳಿಂದ ಕೂಡಿದ ಕನ್ನಡ ಶಾಸನವಿದ್ದು. ಇದು ಪ್ರಕಟಗೊಂಡಿರುವುದಿಲ್ಲ. ಅಕ್ಷರಗಳು ಅತಿ ಗುಂಡಾಗಿದ್ದು ಆಳವಾಗಿ ಸ್ಪಷ್ಟವಾಗಿದೆ. ಅಕ್ಷರಗಳ ಮಧ್ಯ ಸಮಸ್ಥಳವನ್ನು ಬಿಟ್ಟಿದೆ. ಒಂದೊಂದು ಅಕ್ಷರವೂ ೩ ಇಂಚುಗಳ ಅಳತೆಯಲ್ಲಿದೆ. ೮ನೇ ಶತಮಾನದ ಲಿಪಿಯನ್ನೊಳಗೊಂಡಿದೆ. ಅಕ್ಷರಗಳು ಬಹಳ ಗುಂಡಾಗಿದ್ದು. ಲಿಪಿಯ ಬೆಳವಣಿಗೆಯನ್ನು ತೋರಿಸುತ್ತದೆ. ಇದರಲ್ಲಿ ಬಳಸಿರುವ "ಜ" ಅಕ್ಷರವು ತನ್ನ ಪೂರ್ವದ ಗಂಗರ ಶೈಲಿಯಲ್ಲಿದೆ. ಕ, ಮತ್ತು ರ ಗಳು. ಉದ್ದನೆಯ (longitudinal) ಲಕ್ಷಣವನ್ನು ಹೊಂದಿ. ಶ್ರೀ ಮತ್ತು ಣವತ್ತುಗಳು ಕೆಳಕೆಬಾಗಿದ ತಲೆಕಟ್ಟಿನ ದೀರ್ಘಾಕ್ಷಗಳು ಕಾಲಮಾನವನ್ನು ಗುರುತಿಸಲು ಸಹಕಾರಿಯಾಗಿದೆ. ಲಿಪಿತಜ್ಞ ದೇವರಕೊಂಡಾ ರೆಡ್ಡಿಯವರು ಶಾಸನದ ಕಾಲವನ್ನು ಕ್ರಿ.ಶ.೭೫೦ ರಿಂದ ೮೦೦ ಎಂದು ಅಭಿಪ್ರಾಯಪಡುತ್ತಾರೆ.

**ಶಾಸನದ ಪಾಠ**

**ಸಿದ್ಧಂ, ಸ್ವಸ್ತಿಶ್ರೀ ನೀಲಕಣ್ಠೋಜರಾಮಗ ಬುವಿರೈವೋಜ ಪ್ರಸಾದವ ಬೆಸಗೆಯ್ದ**

ಇಲ್ಲಿ ಸ್ವಸ್ತಿಶ್ರೀಗೆ ಮೊದಲು ಸುರುಳಿಯಾಕಾರದ ಸಂಕೇತಾಕ್ಷರವನ್ನು ಬಿಡಿಸಲಾಗಿದೆ. ಇದೊಂದು ಶುಭ ಚಿಹ್ನೆಯೆಂದು ಹೇಳುವುದುಂಟು. ಆದರೆ ಎಪಿಗ್ರಾಫಿಯಾ ಕರ್ನಾಟಿಕದ ಹಲವು ಸಂಪುಟಗಳಲ್ಲಿ ಇದಕ್ಕೆ "ಸಿದ್ಧಂ" ಎಂಬ ಅರ್ಥವನ್ನು ಕೊಡಲಾಗಿದೆ.

ಧವಲಾ ಟೀಕಾ ಸಮನ್ವಿತ ಷಟ್ಖಂಡಾಗಮದಲ್ಲಿ 'ಸಿದ್ಧಂ' ಎಂದರೆ ಸಿದ್ಧಿಯುಳ್ಳವನು ಸಿದ್ಧರು, ನಿಷ್ಠಿತರು. ಅಂದರೆ ಎಲ್ಲಾ ಕರ್ತವ್ಯವನ್ನು ಮುಗಿಸಿರುವವನು. ಕೃತಕೃತ್ಯನು, ಮೋಕ್ಷ ಪುರುಷಾರ್ಥವನ್ನು ಸಾಧಿಸಿದವರು ಎಂದು ಹೇಳಲಾಗಿದೆ. ಯೋಗಿಯ ಒಂದು ವರ್ಗ, ಅಲೌಕಿಕ ಶಕ್ತಿ ಸಂಪನ್ನ ಎಂಬ ಅರ್ಥವೂ ಇದೆ. ಇದು ಹೆಚ್ಚಾಗಿ ಜೈನ ಧರ್ಮೀಯರು ಪ್ರಯೋಗಿಸುವ ಪದವೆಂದೂ ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಶಾಸನದ ಮೊದಲಲ್ಲಿ ಒಬ್ಬ ಮಹಾ ಪುರುಷನ ಸ್ಮರಣೆ ಕಂಡುಬರುತ್ತದೆ.

ಇಲ್ಲಿ **'ಪ್ರಸಾದ'** – ದೇವಾಲಯವೆಂದೇ ಶಬ್ದವನ್ನು ಅರ್ಥೈಸಬಹುದು. ಕನ್ನಡ, ಕನ್ನಡ ಶಬ್ದಕೋಶದಲ್ಲಿ ಪ್ರಸಾದದ ಅರ್ಥ ಹೀಗಿದೆ.[೪] ಅರಮನೆ, ದೇವಾಲಯ ವಿಶಾಲವಾದ ಕಟ್ಟಡ, ದರ್ಶಕರಿಗಾಗಿ ಮಾಡಿದ ಉಚ್ಚಸ್ಥಾನ ಎಂಬ ವಿವರ ದೊರೆಯುತ್ತದೆ. ರಾಮಾಯಣ, ಮಹಾಭಾರತಗಳಲ್ಲಿ ಈ

ಪದವನ್ನು ರಾಮಮಂದಿರ ಎಂಬ ಅರ್ಥದಲ್ಲಿ ಬಳಸಲಾಗಿದೆ. ಆದರೆ ಕರ್ನಾಟಕದ ಅನೇಕ ದೇವಾಲಯಗಳ ಬಳಿ ದೊರೆತಿರುವ ಶಾಸನಗಳಲ್ಲಿ ಪ್ರಸಾದವೆಂಬ ಪದವನ್ನು ವಿಶೇಷವಾಗಿ ದೇವಾಲಯ ಎಂಬ ಅರ್ಥದಲ್ಲಿಯೇ ಬಳಸಲಾಗಿದೆ. ಕೀರ್ತಿವರ್ಮನ ಪಟ್ಟದಕಲ್ಲಿನ ಶಾಸನದಲ್ಲಿ ಮಹಾ ಶೈಲಪ್ರಾಸಾದದ ಪ್ರಸ್ತಾಪವಿದೆ. ಹೊಯ್ಸಳರ ಕಾಲದ ದೊಡ್ಡಗದ್ದವಳ್ಳಿಯ ಲಕ್ಷ್ಮಿ ದೇವಾಲಯವನ್ನು ಮಹಾ ಲಕ್ಷ್ಮೀ ದೇವಿಯ ಪ್ರಾಸಾದವೆಂದು ಕರೆಯಲಾಗಿದೆ. ೧೦ನೇ ಶತಮಾನದ ನಂತರದ ಶಾಸನಗಳಲ್ಲಿ ಈ ಪದದ ಬಳಕೆ ಕಡಿಮೆಯಾಗಿದೆ.[೫]

**ಪ್ರಾಸಾದ**ವೆಂಬ ಮಾತು ಮೂಲವಿಗ್ರಹವಿರುವ ಚೌಕಾಕಾರದ ಕಿರಿದಾದ ಕೊಠಡಿ ಅಥವಾ ಗರ್ಭಗೃಹಕ್ಕೆ ಅನ್ವಯಿಸುತ್ತದೆ. ಇಲ್ಲಿ ಬಾಗಿಲಿನ ಮೇಲಿನ ಶಾಸನದಲ್ಲಿ ಪ್ರಸಾದದ ಪ್ರಯೋಗವಿರುವುದರಿಂದ ಗರ್ಭಗುಡಿಯನ್ನು ನಿರ್ಮಿಸಿದ ಬಗ್ಗೆ ಈ ಶಾಸನವಾಗುತ್ತದೆ.

ಬೆಸಗೆಯ್ದ– ಮಾಡಿದ, ಅಪ್ಪಣೆಯಂತೆ ಮಾಡಿದ, ಕೆಲಸದ ಸೇವೆ ಎಂಬ ಅರ್ಥವನ್ನು ಕನ್ನಡ, ಕನ್ನಡ ಅರ್ಥ ಕೋಶದಲ್ಲಿದೆ. ಶಿಲ್ಪಿ ಭುವಿರೈವೋಜನು ಪ್ರಸಾದ ಅಂದರೆ ದೇವಸ್ಥಾನವನ್ನು ನಿರ್ಮಿಸಿದ ಎಂದಾಗುತ್ತದೆ.

ಇಲ್ಲಿ ಭುವಿರೈವೋಜನ ಹೆಸರಿನಲ್ಲಿ ವೋಜ ಎಂಬ ಪದ ಪ್ರಯೋಗವಿದ್ದು ಕಲ್ಲುಕುಟಿಗ, ಶಿಲ್ಪಿ ಎಂಬ ಅರ್ಥವನ್ನು ಕೊಡುತ್ತದೆ. ಎಲ್ಲವನ್ನೂ ಸೇರಿಸಿದರೆ ನೀಲಕಂಣ್ಠೋಜರಮಗ ಭುವಿರೈವೋಜ ದೇವಸ್ಥಾನವನ್ನು ನಿರ್ಮಿಸಿದನು ಎಂದು ಶಾಸನ ಅರ್ಥವನ್ನು ಕೊಡುತ್ತದೆ.

(ಶಾಸನ ಮತ್ತು ದೇವಾಲಯದ ಬಗ್ಗೆ ಮಾಹಿತಿ ಸಂಗ್ರಹಮಾಡುವ ಸಮಯದಲ್ಲಿ ಎಮ್.ಜಿ. ಗಿರಿಜಾಪತಿ ಯವರು ಶಾಸನದ ನಕಲನ್ನು ತೆಗೆಯಲು ಸಹಾಯ ಮಾಡಿ ದ್ದಾರೆ. ವಿ.ಆರ್. ಶ್ರೀನಿವಾಸನ್, ಲಿಂಗಣ್ಣ, ಹಿಮವಂತರಾಜ್ ಮತ್ತು ದೇವಾಲಯದ ಪೂಜಾರಿಗಳಾದ ಮೋಹನ್ ರವರು ಸ್ಥಳ ಪರಿಚಯ ಮತ್ತು ಐತಿಹಾಸಿಕ ಮಹತ್ವದ ಸ್ಥಳಗಳನ್ನು ತೋರಿಸಿದ್ದಾರೆ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಡಾ. ಚಿತ್ತಯ್ಯ ಪೂಜಾರ್., ನಿಡುಗಲ್ ಒಂದು ಸಾಂಸ್ಕೃತಿಕ ಅಧ್ಯಯನ.**

೨. **ತುಮಕೂರು ಜಿಲ್ಲಾ ಗೆಜೆಟಿಯರ್.**

೩. **ಸಣ್ಣನಾಗಪ್ಪ., ಸ್ವಾರಮ್ಮನ ಮೇಲೆ ಪದ ನೂರು.**

೪. **ಕನ್ನಡ ಕನ್ನಡ ಶಬ್ದಕೋಶ,** ಶ್ರೀ ಅರವಿಂದಸೂಗೂರು, ಶಾಬಾಧಿಮಠ ಬುಕ್ ಡಿಪೋ, ಗದಗ.

೫. ಡಾ. ಬಾ.ರಾ. ಗೋಪಾಲ್., **ಕರ್ನಾಟಕದ ಕಲೆಗಳು,** ಸಂಪುಟ ೪–ವಾಸ್ತು.


*Keep away from people who try to*
*believe your ambitions.*
*Small people always do that,*
*but really great make you feel*
*that you, too, can become great.*
*-Mark Twain*

ಡಾ. ಕೆ. ವಸಂತಲಕ್ಷ್ಮಿ*

# ಮುಳಗುಂದದ ಭೈರವ ಶಿಲ್ಪ

ಮುಳಗುಂದ ನಾಡು ಮೊದಲಿನಿಂದಲೂ ಜೈನಧರ್ಮ ಮತ್ತು ಶೈವಧರ್ಮಗಳ ನೆಲೆವೀಡಾಗಿತ್ತು. ಪ್ರಾಚೀನ ಕಾಲದಿಂದಲೂ ಜೈನಕೇಂದ್ರವಾಗಿದ್ದು, ರಾಷ್ಟ್ರಕೂಟರ ಕಾಲದಲ್ಲಿ ಪವಿತ್ರ ಜೈನಕ್ಷೇತ್ರವಾದ ಮುಳಗುಂದವು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶೈವಮತದ ಪ್ರಮುಖ ಕೇಂದ್ರಗಳಲ್ಲಿ ಒಂದಾಯಿತು. ಕಲ್ಯಾಣ ಚಾಲುಕ್ಯರ ದೊರೆ ಒಂದನೇ ಜಗದೇಕಮಲ್ಲನ ಮಹಾಸಾಮಂತನಾಗಿದ್ದ ಶೋಭರಸನು ಮುಳುಗುಂದ ಪನ್ನೆರಡನ್ನು ಆಳುತ್ತಿದ್ದನು. ಮಹಾಶಿವಭಕ್ತನಾದ ಶೋಭರಸನು ಮುಳುಗುಂದದಲ್ಲಿ ಶೋಭನೇಶ್ವರ ದೇವಾಲಯವನ್ನು ಕಟ್ಟಿಸಿದನಲ್ಲದೇ ಹರ್ಲೆ, ಕಣವಿ ಮತ್ತು ಮಾಗಡಿಯಲ್ಲಿ ಶಿವಾಲಯಗಳನ್ನು ನಿರ್ಮಿಸುತ್ತಾನೆ. ಮುಚ್ಚಂಡಿ ಗ್ರಾಮದಲ್ಲಿ 'ಜಗದೇಕ ಮಲ್ಲೇಶ್ವರ' ದೇವಾಲಯವನ್ನು ಕಟ್ಟಿಸುತ್ತಾನೆ. ಇವನಂತೆ ಮತ್ತೊಬ್ಬ ಸಾಮಂತನಾದ ಕೇಶವರಸನು ಮುಳುಗುಂದದಲ್ಲಿ ಸ್ವಯಂಭೂ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ದಾನ ನೀಡಿದ್ದಾನೆ. ಒಂದನೇ ಸೋಮೇಶ್ವರನ ಕಾಲದಲ್ಲಿ ಮುಳುಗುಂದದ ಊರೊಡೆಯ ನಗರೇಶ್ವರ ದೇವಾಲಯಕ್ಕೆ ದಾನ ನೀಡುತ್ತಾನೆ. ಮುಳುಗುಂದದಲ್ಲಿ ಅನೇಕ ಜನ ಶೈವ ಯತಿಗಳು ನೆಲೆಸಿದ್ದರು. ಇಲ್ಲಿಯ ದೇವೇಶ್ವರ ದೇವರ ಸ್ಥಾನಾಚಾರ್ಯರಾಗಿದ್ದ ವಿದ್ಯಾಭರಣ ಪಂಡಿತರು (ಕ್ರಿ.ಶ. ೯೯೪) ಸ್ವಯಂಭೂ ದೇವಾಲಯದ ಸ್ಥಾನಾಚಾರ್ಯರಾಗಿದ್ದ 'ಅಹಂಕಾರ ದೋಷರಹಿತರೂ, ಪ್ರತ್ಯಕ್ಷ ರುದ್ರಾವತಾರರೆನ್ನಿಸಿದ್ದ ಪವಿತ್ರರಾಶಿ ಮುನಿಗಳು, ಅವರ ಶಿಷ್ಯರಾದ ಚತುರಾನನ ಪಂಡಿತರು ಇಲ್ಲಿದ್ದರು.



ಮಹಾಕಾಳ ಭೈರವಸ್ವಾಮಿ ಮುಳಗುಂದ

ಮುಳಗುಂದ ನಾಡಿನ ಕಾಳಾಮುಖ ಯತಿವೃಂದದಲ್ಲಿ ವಿಶೇಷವಾಗಿ ಗಮನಸೆಳೆದ ಯತಿಗಳೆಂದರೆ 'ಭಾರಶಿವ ದೇವರು', ಇವರನ್ನು ಶಾಸನವು-'ಕಲಿಯುಗ ಗಾಂಗೇಯ', 'ಸೌಚಾಂಜನೇಯ', 'ದಶಪ್ರತ್ಯಯಜ್ಞಾನಿ' 'ಪ್ರತ್ಯಕ್ಷರುದ್ರ' 'ದಾನಸಮುದ್ರ'ರೆಂದು ಪ್ರಶಂಸಿಸಿದೆ. ಇವರು ಮುಳಗುಂದದ 'ಸೋಭನೇಶ್ವರ' 'ಗುಣದಬ್ಬೇಶ್ವರ' ಮತ್ತು ಮಾಗುಣ್ಡಿಯ 'ಲೋಕೇಶ್ವರ' ದೇವಾಲಯಗಳ ಸ್ಥಾನಾಚಾರ್ಯರಾಗಿದ್ದರು. ಹರ್ತಿ, ಕಣವಿಯ ಶಿವಾಲಯಗಳೂ ಇವರಿಗೆ ಸೇರಿತ್ತಲ್ಲದೇ, ಬನವಾಸಿನಾಡಿನ ಮುಚ್ಚಂಡಿಯ 'ಜಗದೇಕಮಲ್ಲೇಶ್ವರ' ದೇವಾಲಯದ ಸ್ಥಾನೀಕರೂ ಆಗಿದ್ದು, ಬಯಲ ಬಳ್ಳಿಗಾವೆ, ಕೆರೆಪಳ್ಳಿ, ಬಂಕಸರಿಣ್ಣೆ, ಸಗರಣಿಕೆ, ಮಾವಿನಪಳ್ಳಿ, ಸಿರಿಪಳ್ಳಿ

* ೧೬೭೬, ೧೦ನೇ ಮುಖ್ಯರಸ್ತೆ, ೫ 'ಎ' ಅಡ್ಡರಸ್ತೆ, ಬನಶಂಕರಿ ೧ನೇ ಘಟ್ಟ, ೨ನೇ ಹಂತ, ಬೆಂಗಳೂರು-೫೬೦ ೦೫೦.

ಎಂಬ ಏಳು ಗ್ರಾಮಗಳು ಸೇರಿದಂತೆ 'ತಪೋರಾಜ್ಯ'ವನ್ನು ಆಳುತ್ತಿದ್ದರೆಂದು ಶಾಸನ ತಿಳಿಸಿದೆ. ಇವರ ಶಿಷ್ಯನಾಗಿದ್ದ 'ಶೋಭರಸ'ನು ಇವರ ಪ್ರಭಾವದಿಂದ ಬ್ರಹ್ಮಚರ್ಯ'ವನ್ನು ಆಚರಿಸುತ್ತಾ ಶಿವಾಲಯಗಳನ್ನು ನಿರ್ಮಿಸಿ ಮಹಾಶಿವಭಕ್ತನಾಗಿದ್ದನು. ಇವನನ್ನು ಭಾರಶಿವದೇವರು ಹೊಗಳುತ್ತಿದ್ದರಂತೆ.

ಭಾರಶಿವದೇವರು 'ನಾಗಸ್ವಾಮಿ' ಎಂಬ ಶಿಷ್ಯನನ್ನು ಆರಿಸಿ ಪೋಷಿಸಿ ಅವನಿಗೆ ಮದುವೆಯನ್ನು ಮಾಡಿ ಅವನನ್ನು ಬ್ರಹ್ಮಪುರಿ ಮುಖ್ಯನನ್ನಾಗಿಸುತ್ತಾರೆ. ಅಲ್ಲಿಯ ಸಾಸಿರ್ವ್ವರು ತ್ರೈಪುರುಷ ದೇವಾಲಯವನ್ನೂ, ಮಠ, ಆಶ್ರಮಗಳನ್ನು ನಿರ್ಮಿಸಿದ್ದ ನಾಗಸ್ವಾಮಿಯು ಅಲ್ಲಿ ಸುಖದಿಂದ್ದನೆಂದು ಶಾಸನ ತಿಳಿಸಿದೆ. ಈ ಭಾರಶಿವದೇವರು ತ್ರಿಕಾಲಜ್ಞಾನಿಗಳಾಗಿದ್ದರು. ತಮಗೆ ಅಂತ್ಯಕಾಲವು 'ಶ್ರಾವಣ ಬಹುಳ ಅಷ್ಟಮಿ' ಎಂದು ತಿಳಿದು ಅದಕ್ಕೆ ಎಂಟು ದಿನಗಳ ಮೊದಲೇ ಪ್ರಜಾಪರಿವಾರವನ್ನು ಸೇರಿಸಿ ಚೆಲ್ಲಪಯ್ಯನೆಂಬ ಶಿಷ್ಯನಿರೆ 'ಸ್ಥಾನ ಪಟ್ಟ'ವನ್ನು ಕಟ್ಟಿದರಲ್ಲದೇ ತಮ್ಮ ನೆಚ್ಚಿನ ಶಿಷ್ಯ ನಾಗಸ್ವಾಮಿಗೆ ಪರೋಕ್ಷ ವಿನಯವಾಗಿ 'ಗಂಗಾಸ್ನಾನವನ್ನು ಮಾಡಿ ಗಯೆಯಲ್ಲಿ ಪಿಂಡಪ್ರದಾನ ಮಾಡಿ ವಾರಣಾಸಿಯಲ್ಲಿ ದೇವಾಲಯವನ್ನು ಮಾಡಿಸಬೇಕೆಂದು ಆದೇಶಿಸುತ್ತಾನೆ. ನಾಗಸ್ವಾಮಿಯು ಅನೇಕ ವ್ರತಗಳನ್ನು ಮಾಡಿ ತಮ್ಮ ವೃತ್ತಿಗಳಲ್ಲಿ ಸ್ವಲ್ಪ ಉಳಿಸಿ, ಮಿಕ್ಕೆಲ್ಲವನ್ನು ದಾನ ಮಾಡಿ ತೀರ್ಥಯಾತ್ರೆಗೆ ಹೋಗುವನೆಂದು ಶಾಸನ ತಿಳಿಸುತ್ತಿದೆ. ಹೀಗೆ ತನ್ನ ಜೀವಿತದಲ್ಲಿ 'ಪ್ರತ್ಯಕ್ಷರುದ್ರ'ರಂತಿದ್ದ ಭಾರಶಿವದೇವರು ವಾರಣಾಸಿಯಲ್ಲಿ ದೇವಾಲಯ ನಿರ್ಮಿಸಲು ತಿಳಿಸಿದ್ದನ್ನು ಗಮನಿಸಿದರೆ ಅವರು ಕಾಶಿಕ್ಷೇತ್ರದ ಯತಿಪರಂಪರೆಯವರೆಂದೂ, ಅಲ್ಲಿಯ ಅಧಿದೈವವಾದ ಕಾಳಭೈರವನ ಆರಾಧಕರೆಂದೂ ತಿಳಿಯುತ್ತದೆ. ಆದಿಶಂಕರಾಚಾರ್ಯರು 'ಕಾಳಭೈರವ ಅಷ್ಟಕ'ದಲ್ಲಿ ಕಾಳಭೈರವದೇವನನ್ನು 'ಕಾಶಿಕಾ ಪುರಾಧಿನಾಥ ಕಾಲಭೈರವಂ ಭಜೆ' ಎಂದಿರುತ್ತಾರೆ.

ವಿವೇಕ ಚಿಂತಾಮಣಿಯಲ್ಲಿ ಶೈವ ಪ್ರಭೇದ ತಿಳಿಸುವಲ್ಲಿ ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತಗಳೆಂದು ನಾಲ್ಕು ವಿಧಗಳನ್ನು ತಿಳಿಸಿದೆ. ಇವುಗಳಲ್ಲಿ ಭೈರವ ಪರವಾದದ್ದನ್ನು 'ದಕ್ಷಿಣ'ವೆಂದು ತಿಳಿಸಿದೆ; ಶೈವ ಪಂಥಗಳಲ್ಲಿ ಪಾಶುಪತ ಪಂಥವೂ ಪ್ರಾಚೀನವೂ ಶ್ರೇಷ್ಠವೂ ಆಗಿದೆ. ಪಾಶುಪತರು ಮುಕ್ತಾಯವಸ್ಥೆಯಲ್ಲಿ ಜ್ಞಾನವುಳ್ಳವರೆಂದು ತಿಳಿದು ಬರುತ್ತದೆ. ಪಾಶುಪತರಲ್ಲಿ ಕೆಲವರು ಕಾಳಭೈರವನ ಆರಾಧಕರಾಗಿದ್ದರೆಂದು ಅವರ ಶಿಷ್ಯರು ಹಲವೆಡೆ ಭೈರವ ದೇವಾಲಯಗಳನ್ನು ನಿರ್ಮಿಸಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ.

ಮಹಾಪಾಶುಪತರನ್ನು 'ವಾಮನ ಪುರಾಣವು' ಉಲ್ಲೇಖಿಸಿದೆ. ಲೊರಾಂಜೋರವರು ಇವರು ಸಾಧಾರಣ


ಭೈರವಿ ಮುಳಗುಂದ

ಪಾಶುಪತರಿಗಿಂತ ಭಿನ್ನರೆಂದಿದ್ದಾರೆ. ಹಂದಿಕ್ಯ ಅವರು ಮಹಾಪಾಶುಪತರ ಬಗೆಗೆ ತಿಳಿಸುವಲ್ಲಿ ೧೦ನೇ ಶತಮಾನದ 'ಉದಯನ' ೧೧ನೇ ಶತಮಾನದ ವರದರಾಜ ಮತ್ತು ೧೬೦೦ರಲ್ಲಿದ್ದ ಶಂಕರಮಿಶ್ರರನ್ನು ಉದಾಹರಿಸಿದ್ದಾರೆ. ಮಹೇಂದ್ರ ವರ್ಮನ 'ಮತ್ತ ವಿಲಾಸ'ವು ಕಾಪಾಲಿಕನಾಗಿದ್ದ 'ಮಹಾಪಾಶುಪತ'ನ ಬಗೆಗೆ ಬೆಳಕು ಚೆಲ್ಲಿದೆ. ಆನಂದಗಿರಿಯ 'ಶಂಕರ ವಿಜಯ'ದಲ್ಲಿ ಕಾಪಾಲಿಕರ ಗುರುವಾದ 'ಉನ್ಮತ್ತ ಭೈರವ'ನ ಪ್ರಾಸ್ತಾಪವಿದೆ. ಕಾಪಾಲಿಕನಾದ ಉನ್ಮತ್ತ ಭೈರವನು ಶೂದ್ರಜಾತಿಯವನೆಂದೂ ಅವನ ಶರೀರವು ಚಿತಾಭಸ್ಮದಿಂದ ಉದ್ಧೂಳಿತವಾಗಿತ್ತೆಂದೂ, ಅವನು ಕೊರಳಲ್ಲಿ ರುಂಡಮಾಲೆಯನ್ನು ಧರಿಸಿದ್ದು, ಹಣೆ ಮೇಲೆ ಸಮಾನಾಂತರವಾಗಿ ಮೂರು

ಕಪ್ಪು ಗೆರೆಗಳಿದ್ದು, ಜಟೆಯನ್ನು ಎತ್ತಿ ಕಟ್ಟಿದ್ದ ಇವನ ವೇಷ ಗಮನಾರ್ಹವಾದದ್ದು. ಸೊಂಟಪಟ್ಟಿ, ಹುಲಿಚರ್ಮಧಾರಿಯಾಗಿ ಕಾಪಾಲಿಕನ ಎಡಗೈಯಲ್ಲಿ ಕಪಲಾಪಾತ್ರೆ ಇದ್ದು ಬಲಗೈಯಿಂದ ಜೋರಾಗಿ ಗಂಟೆಯನ್ನು ಬಾರಿಸುತ್ತಾ "ಓ ಶಂಭೋ" "ಅಹೋಕಾಳೇಶ" ಎಂದು ಜಪಿಸುತ್ತಿದ್ದನೆಂದು ಆನಂದಗಿರಿ ವರ್ಣಿಸಿದ್ದಾನೆ. ಧನಪತಿಯ ಪ್ರಕಾರ "ಲೈಂಗಿಕ ಸಮಾಗಮ ದಿಂದಾಗುವ ಆನಂದದ ನೈಜ ಸ್ವರೂಪವೇ ಭೈರವನೂ, ಮೃತ್ಯುಮುಖದಲ್ಲಿ ಆ ಆನಂದವನ್ನು ಪಡೆಯುವುದೇ ಮೋಕ್ಷ ವಾಗಿದೆ." ಎಂಬ ಉಲ್ಲೇಖಗಳಿವೆ. ಕಾಪಾಲಿಕರ ಬಗೆಗೆ ತಿಳಿಸುವಲ್ಲಿ ವಿದ್ಯಾಶಂಕರ್‌ರವರು ದಾಖಲಿಸಿದ್ದಾರೆ. *[ಆಸ್ವಾದ 'ಕಾಪಾಲಿಕರು'-ಡಾ. ಎಸ್. ವಿದ್ಯಾಶಂಕರ್', ಪುಟ ೪೨೩.]*

ಈ ಎಲ್ಲಾ ಆಧಾರಗಳನ್ನು ಗಮನಿಸಿದರೆ, ಪಾಶುಪತ ಪಂಥಕ್ಕೆ ಸೇರಿದ್ದ ಕಾಳಾಮುಖ ಯತಿಗಳು "ಭೈರವನನ್ನು ಆರಾಧಿಸುತ್ತಿದ್ದರೆಂಬುದು" ವಿದಿತವಾಗುತ್ತದೆ.

ಮುಳಗುಂದ ಗ್ರಾಮದಲ್ಲಿ ಕಾಳಭೈರವನ ಗುಡಿ ಯೊಂದಿದ್ದು ಇಲ್ಲಿ ವಿಶೇಷವಾಗಿ ಗಮನಸೆಳೆಯುವ ಕಾಳಭೈರವನ ಶಿಲ್ಪವಿದೆ. ಶಿವಪುರಾಣವು ಈಶ್ವರನ ಭೈರವನ ಸ್ವರೂಪದ ಬಗೆಗೆ ತಿಳಿಸುತ್ತಾ "ಭೈರವನ ರೂಪವು ಶಂಕರನ ಪೂರ್ಣರೂಪವೆಂದಿದೆ. ಭೈರವ ಸ್ವರೂಪದ ಮಹತ್ವವನ್ನು ತಿಳಿಸುವಲ್ಲಿ "ಜಗತ್ತಿನ ಮಾಯೆಯಿಂದ ಕೂಡಿ ತಮವಾದ ಪ್ರತಿಭೆಯುಳ್ಳ ಸಾಮಾನ್ಯರಿಗೆ, ಶಿವನ ಈ ರೂಪದ ಶ್ರೇಷ್ಠತೆ ತಿಳಿಯುವುದಿಲ್ಲ"ವೆಂದಿದೆ. ಈ ಕಾರಣದಿಂದಲೇ ಜಗತ್ತಿನಲ್ಲಿ ಭೈರವನ ಆರಾಧನೆ ಕಡಿಮೆ ಎಂದಿದೆ. 'ಭೈರವ' ಎಂದರೆ ಲೋಕವನ್ನು ಭರಿಸುವವನು (ರಕ್ಷಿಸುವವನು) ಎಂದರ್ಥ; ಇವನ ಸ್ವರೂಪವು ಭೀಷಣಾಕಾರವಾಗಿದ್ದು ಇವನು 'ಭೈರವ'ನೆನ್ನಿಸಿದ್ದಾನೆ. ಯಮನಿಗೂ ಇವನು ಭೈರವನಾದ್ದರಿಂದ 'ಕಾಲಭೈರವ'ನೆನ್ನಿಸುವನು. ಈಶ್ವರನು ಸರ್ವಸೃಷ್ಟಿಯ ಲಯ ಕರ್ತ. ಭೈರವನು ದುಷ್ಟಸಂಹಾರಿಯೂ, ಭಕ್ತರ 'ಪಾಪಭಕ್ಷಕ'ನೂ ಆಗಿದ್ದಾನೆ.

ಭೈರವನ ಶಿಲ್ಪದ ಲಕ್ಷಣಗಳನ್ನು ಗಮನಿಸಿದರೆ, ವಿಷ್ಣು ಧರ್ಮೋತ್ತರ ಪುರಾಣವು ಉಬ್ಬಿದ ಹೊಟ್ಟೆ, ಗುಂಡಾದ ಹಳದಿ ಕಣ್ಣುಗಳು, ಕೋರೆಹಲ್ಲು, ದೊಡ್ಡದ ದ ಮೂಗಿನ ಹೊಳ್ಳೆಗಳನ್ನುಳ್ಳ ರುಂಡಮಾಲೆಯನ್ನು ಧರಿಸಿದ್ದಾನೆ. ನಾಗಾಭರಣಗಳೊಂದಿಗೆ, ಉಳಿದ ಆಭರಣಗಳು ಇರುತ್ತದೆ. ಕಾಳಮೇಘವರ್ಣದ, ನಗ್ನದೇಹಿ, ಅನೇಕ ಕೈಗಳಿದ್ದು ವಿವಿಧ ಆಯುಧಗಳನ್ನು ಹಿಡಿದಿರುತ್ತಾನೆ ಎಂದಿದೆ. ರೂಪಮಂಟಣವು "ವಟುಕ ಭೈರವ ಕಲ್ಪ'ವು ತಿಳಿಸಿರುವಂತೆ ಕೆಂಪುವರ್ಣದ ಜಟೆಯುಳ್ಳ ತ್ರಿನೇತ್ರ, ಕೆಂಪು ಬಣ್ಣದ ದೇಹವಿದ್ದು ಕೈಗಳಲ್ಲಿ ಶೂಲ ಪಾಶ ಡಮರು ಮತ್ತು ಕಪಾಲಗಳನ್ನು ಹಿಡಿದಿರುತ್ತಾನೆ. ನಾಯಿ ಮೇಲೆ ಕುಳಿತ ಇವನ ಬಳಿ ಪ್ರೇತಗಣದ ಪರಿವಾರ ವಿರುತ್ತದೆಂದು ತಿಳಿಸಿದೆ. (T.A. Gopinathrao-*Elements of Hindu Iconography*, Vol.-II. P.No. 177)

ಸ್ವರ್ಣಾಕರ್ಷಕ ಭೈರವನನ್ನು ಆರಾಧಿಸಿದರೆ ವಿಶೇಷ ಜ್ಞಾನಿಗಳಾಗುವರು. ಸಂಸಾರ ಸುಖವು ಲಭಿಸುತ್ತದೆಂದು ತಿಳಿಸಿದೆ. ಇವನ ಲಕ್ಷಣಗಳೆಂದರೆ 'ಪೀತದೇಹಿ, ಚತುರ್ಭುಜ ನಾಗಿದ್ದು ಕೈಗಳಲ್ಲಿ ಒಂದರಲ್ಲಿ ಸ್ವರ್ಣಪಾತ್ರೆ ಇರುತ್ತದೆ. ಸಕಲಾಭರಣ ಹೊಂದಿದ್ದು ದೇವಗಣ ಸ್ತುತಿಸುತ್ತಿವೆ. ಇವನ ೨ ಭುಜಗಳ ಬಳಿ ಚಾಮರ, ದೊಡ್ಡಶೂಲ ಮತ್ತು ತೋಮರ ಗಳಿರುತ್ತವೆ ಎಂದು ತಿಳಿಸಿದೆ.

ರುದ್ರಯಾಮಳವು ಎಂಟು ಜನ ಭೈರವರ, ಎಂಟು ಗುಂಪನ್ನು ತಿಳಿಸಿದ್ದು ಕಾಳಭೈರವನ ಸ್ವರೂಪವು ಸರ್ವಶ್ರೇಷ್ಠ ವೆಂದಿದೆ. ಶಾರದಾ ತಿಲಕ ತಂತ್ರವು ಸಾತ್ವಿಕ, ರಾಜಸ ಮತ್ತು ತಾಮಸಿಕ ರೂಪಗಳನ್ನು ಹೇಳಿದ್ದು ದಕ್ಷಿಣ ದೇಶದಲ್ಲಿ ಸಾತ್ವಿಕ ರೂಪವೇ ಹೆಚ್ಚು ಬಳಕೆಯಲ್ಲಿದೆ. ರಾಜಸ ಭೈರವದ ರೂಪದಲ್ಲಿ ರುಂಡಮಾಲೆಯನ್ನು ಧರಿಸಿದ್ದ ೮ ಕೈಗಳ ಭೈರವನು ಸರ್ಪಾ ಭರಣವನ್ನು ಕೋರೆದಾಡೆಗಳನ್ನು ಹೊಂದಿದ ಭವ್ಯರೂಪ ವಾಗಿದೆ.

ಮುಳುಗುಂದ ಗ್ರಾಮದಲ್ಲಿರುವ ಭೈರವನ ಶಿಲ್ಪದ ಬಗೆಗೆ ಹೆಚ್ಚಿನ ವಿದ್ವಾಂಸರ ಗಮನ ಹರಿದಿಲ್ಲ. ಈ ಭವ್ಯಮೂರ್ತಿಯ ಬಗೆಗೆ ಡಾ. ಅ. ಸುಂದರರವರು ಇದನ್ನು ವೀರಭದ್ರನ ಭವ್ಯಶಿಲ್ಪವೆಂದು ಭಾವಿಸಿರುತ್ತಾರೆ.

ರುಂಡಯುಕ್ತವಾದ ಪೀಠದ ಮೇಲೆ ಸು. ೧೧' ಎತ್ತರದ ಉಗ್ರರೂಪದ ಮಹಾಕಾಳ ಭೈರವಸ್ವಾಮಿಯು ಆಲೀಢ ಭಂಗಿಯಲ್ಲಿ ನಿಂತಿದ್ದಾನೆ. ಭೈರವನ ಶಿರದ ಹಿಂದೆ ಫಣಾ ವಳಿಯ ಪ್ರಭಾವಗಳಿ ಇದೆ. ರೌದ್ರಾವತಾರದ ರೂಪವನ್ನು ದೇಹದ ಅಂಗಸೌಷ್ಠವವು ಬಿಂಬಿಸುತ್ತಿದೆ. ಅಗಲವಾದ ಮುಖದಲ್ಲಿ ಇರುವ ದಪ್ಪದಾದ ದುಂಡಾದ ಕಣ್ಣುಗಳು, ಘೋರವಾದ ಮೀಸೆ, ಅರೆತೆರೆದ ತುಟಿಗಳು, ರುಂಡಯುಕ್ತ ವಾದ ಜಟೆ ಇದೆ. ದೇವನು ಷಡ್ಭುಜನಾಗಿದ್ದು ಕ್ರಮವಾಗಿ ಎರಡು ಬಲಗೈಗಳಲ್ಲಿ ಉದ್ದವಾದ ಖಡ್ಗ ಮತ್ತು ಖೇಟಕವಿದೆ ಎಡಗೈಗಳಲ್ಲಿ ಮೇಲಿನ ಕೈ ಡಮರುವನ್ನು ಹಿಡಿದಿದ್ದು, ಮತ್ತೊಂದು ಕೈ ಸ್ಪಷ್ಟವಿಲ್ಲ. ಕೆಳ ಎಡಗೈನಿಂದ ನರನ ಶವವನ್ನು ತಲೆಕೆಳಗಾಗಿಸಿ ಕಾಲುಗಳನ್ನು ಹಿಡಿದಿದ್ದಾನೆ. ಇದು ಈ ಶಿಲ್ಪದ ಭೀಕರತೆಯನ್ನು ಹೆಚ್ಚಿಸಿದೆ. ಸಾಮಾನ್ಯವಾಗಿ ಭೈರವನ ಎಡ ಕೆಳಗೈ ನರನ ರುಂಡವನ್ನು ಹಿಡಿದಿರುತ್ತದೆ. ಇಂಥ ಭೀಕರ

ಕಾರದ ಮಹಾಕಾಳನ ಇಬ್ಬದಿಯಲ್ಲೂ ಸೇವಕಿಯರು ಇದ್ದು ಕೈಗಳಲ್ಲಿ ಖಡ್ಗ, ತ್ರಿಶೂಲ, ಡಮರು ಮತ್ತು ಪಾನಪಾತ್ರೆಗಳಿವೆ. ಈ ಮಹಾಭೈರವನ ಶಿಲ್ಪದ ಹಿಂಬದಿಯಲ್ಲಿ ಸಿಂಹಪೀಠ ರಚಿಸಿದ್ದು ಅದರ ನಡುವೆ ಭೈರವನಿದ್ದಾನೆ. ಪೀಠದ ಮೇಲೆ ಇಕ್ಕೆಡೆಯಲ್ಲೂ ಚಾಮರಾಧಾರಿಯರೂ, ಗಂಧರ್ವರು ನರ್ತಿಸುತ್ತಿರುವಂತೆ ಬಿಡಿಸಲಾಗಿದೆ. ಮಹಾದೇವನ ಕೈಗಳಲ್ಲಿ ದಪ್ಪದಾದ ಕಡಗಗಳಿವೆ. ಕೊರಳಲ್ಲಿ ಗಂಟೆಗಳ ಏಕಾವಳಿ ಇದೆ. ಉದ್ದವಾದ ರುಂಡ ಮಾಲೆ ಧರಿಸಿರುವ ದೇವನಿಗೆ ಗಂಟೆಯ ಅಲಂಕಾರವಿರುವ ಕಟಿಬಂಧವಿದೆ. ನಗ್ನದೇಹಿಯಾದ ಇವನ ಪಾದಗಳಲ್ಲಿ ಕಾಲ್ಕಡಗಗಳಿವೆ. ಗೆಜ್ಜೆ ಇದೆ. ಈ ಶಿಲ್ಪವು ವಿಶಾಲವಾದ ಅಂಕಣವೊಂದರಲ್ಲಿ ಇದೆ. ದೇವಾಲಯವು 'ಗರ್ಭಗೃಹದಂತಿಲ್ಲ' ಗರ್ಭಗೃಹ, ಮುಖಮಂಟಪ ಮಾತ್ರವಿರುವ ಈ ಗುಡಿಯ ಹೊರಗಿನ ಕಟ್ಟೆಯ ಮೇಲೆ ಸು. ೧೦ನೇ ಶತಮಾನದ ಭೈರವಿಯ ಶಿಲ್ಪವಿದೆ. ಈ ಭವ್ಯಮೂರ್ತಿಯನ್ನು ಗಮನಿಸಿದರೆ ಮುಳುಗಂದದ ಮತ್ತೊಂದು ಶಾಸನವು "ಮಹಾಕಾಳಭೈರವನ ಪಾದಾರಾಧಕರೆಂದಿದ್ದು" ಈ ಶಿಲ್ಪವು ಅದೇ ಎಂದು ತಿಳಿದು ಬರುತ್ತದೆ.

ಹೆಂಜೇರಿನ 'ದೊಡ್ಡಪ್ಪನ ದೇವಾಲಯವೂ ಭೈರವನ ಆಲಯವಾಗಿದ್ದು ಇಲ್ಲಿ 'ವರುಣಶಿವ ಭಟಾರರು ಆಳುತ್ತಿದ್ದರು. ಬೇಲೂರು ತಾಲೂಕಿನ ಭೈರವನ ಗುಡ್ಡ ದೇವಾಲಯಕ್ಕೆ ರುದ್ರಶಿವಮುನಿಗಳು ಸ್ಥಾನಿಕರಾಗಿದ್ದರು. ಇದನ್ನು ಗಮನಿಸಿದಾಗ– "ಭಾರಶಿವ ಮುನಿ"ಗಳು ಪೂಜಿಸಿದ "ಮಹಾಕಾಳ ಭೈರವನು" ಈ ದೇವನೆಂದು ತಿಳಿದುಬರುತ್ತದೆ. ಕರ್ನಾಟಕದಲ್ಲಿದ್ದ ಭೈರವನ ಆರಾಧನೆ ಬಗೆಗೆ ಹೆಚ್ಚಿನ ಅಧ್ಯಯನವಿನ್ನೂ ಆಗಬೇಕಾಗಿದೆ !





ಕೆದಜೆದರಾತಿ ಭೂಪರ ಶಿರೋಮಣಿಗಳ್ ನೆಗಟ್ದಾಲಿ ಕಲ್ಗಳು ।
ರ್ವಿದ ಭಟಶಸ್ತ್ರ ಸಂಚಯದ ಮಿಂಚುಗಳೊಪ್ಪುವ ಮಿಂಚುಗಳ್ ಸಮಂ ॥
ತೊದವಿದ ರಕ್ತಜಾಳ ಜಳಧಾರೆಗಳಾಗಿರೆ ವರ್ಷಮಿಂತು ಪೋಲ್ತುದು
ಮಟಿಗಾಲಮಂ ನೆಗಟ್ದಿ ಬಿಜ್ಜಳದೇವನ ಸಂಗರಾಂಗಣಂ ॥

ಸುರಿದ ಕರುಳ್ ಕರುಳ್ ತೊಡರೆ ಬಿಟ್ದ ಭಟರ್ ಭಟರಸ್ತ್ರಘಾತದಿಂ ।
ದುರುಳ್ದ ಹಯಂ ಹಯಂಗಳೆಡೆಯೊಳ್ ಕುಣಿವಟ್ಟೆಗಳಟ್ಟೆಯಂ ಭಯಂ ॥
ಕರತರಮಾಗೆ ನೋಟ್ಪ ಮರುಳಾ ಮರುಳಂ ಗೆಲೆ ಸೋವ ತನ್ನಿಶಾ ।
ಚರಿಯರೆನಲ್ಕೆ ನೋಡಲರಿದಾಯ್ತು ರಣಂ ಗಿರಿದುರ್ಗಮಲ್ಲನಾ ॥

(– ಕ್ರಿ.ಶ. ೧೧೬೨ರ ಷಿಕಾರಿಪುರ ಶಾಸನ)



ಡಾ. ಶ್ರೀಮತಿ ಸ್ಮಿತಾ ಸುರೇಬಾನಕರ*

# ಪಲಾಶಿಕಾ ಪನ್ನಿರ್ಚ್ಛಾಸಿರದಲ್ಲಿ ಶಾಸನೋಕ್ತ ಸಾರಿಗೆ ಮತ್ತು ಸಂಚಾರ ಸೌಕರ್ಯ

ಆದಿ ಕದಂಬರ ದೊರೆಗಳಾದ ಮೃಗೇಶವರ್ಮ ಮತ್ತು ರವಿವರ್ಮರ ತಾಮ್ರಪಟಗಳಲ್ಲಿ ಶ್ರೀ ವಿಜಯ ಪಲಾಶಿಕಾ ಎಂದು ಖ್ಯಾತಿಪಡೆದು ಅವರ ಎರಡನೆಯ ರಾಜಧಾನಿಯಾಗಿಯೂ, ಗೋವೆ ಕದಂಬರ ಶಾಸನಗಳಲ್ಲಿ ಹಲಸಿಗೆ-೧೨೦೦೦ ಎಂದು ಪ್ರಸಿದ್ಧಿ ಪಡೆದು, ಅವರ ಆಡಳಿತದ ಮುಖ್ಯಕೇಂದ್ರದಲ್ಲೊಂದಾದ ಹಲಸಿ, ಇಂದಿನ ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ಒಂದು ಗ್ರಾಮ. ಪಲಾಶಿಕಾ ಪನ್ನಿಚ್ಛಾಸಿರ ಎಂದು ಪ್ರಸಿದ್ಧಿ ಪಡೆದ ಈ ವಿಭಾಗವು, ಬೆಳಗಾವಿ ಜಿಲ್ಲೆಯ ಖಾನಾಪೂರ, ಬೈಲಹೊಂಗಲ್ ತಾಲೂಕಿನ ಕೆಲವು ಗ್ರಾಮಗಳನ್ನು, ಧಾರವಾಡ ಜಿಲ್ಲೆಯ ಪಶ್ಚಿಮ ಭಾಗವನ್ನು ಮತ್ತು ಉತ್ತರ ಕನ್ನಡ ಜಿಲ್ಲೆಯ ಪೂರ್ವೋತ್ತರ ಭಾಗಗಳನ್ನು ಒಳಗೊಂಡಿತ್ತೆಂಬುದು ಶಾಸನಗಳಿಂದ ವಿದಿತವಾಗುತ್ತದೆ. ಈ ಹಿನ್ನೆಲೆಯಲ್ಲಿ ಗೋವೆಕದಂಬರ ಶಾಸನಗಳನ್ನು ಅವಲೋಕಿಸಿ ಹಲಸಿಗೆ ಪ್ರದೇಶದ ಸಾರಿಗೆ ಮತ್ತು ಸಂಚಾರ ಸೌಕರ್ಯಗಳನ್ನು ಪ್ರಸ್ತುತ ಪ್ರಬಂಧದಲ್ಲಿ ವಿವರಿಸಲಾಗಿದೆ.

ಶಾಸನಗಳಲ್ಲಿ ದಾರಿಯನ್ನು, ವೀದಿ, ಪಥ, ಬಟ್ಟೆ ಎಂಬ ಪದಗಳಿಂದ ಉಲ್ಲೇಖಿಸಲಾಗಿದೆ. ಕುಲವಳ್ಳಿ ಶಾಸನದಲ್ಲಿ ಹಳ್ಳಿಯದಾರಿಯ ಉಲ್ಲೇಖವಿದ್ದು, ಇದೇ ದಾರಿಯನ್ನು ಕುರಿತು ನರೇಂದ್ರ ಶಾಸನವು, ಸವಣಪಲ್ಲಿಯ ಬಟ್ಟೆ ಎಂದು ಹೆಸರಿಸುತ್ತದೆ. ಕಾಟನೂರು ಶಾಸನದಲ್ಲಿ ನೂಲೆಯ ಬಟ್ಟೆ, ಸೋಮನ ಕೊಪ್ಪದ ಶಾಸನದಲ್ಲಿ ಹಗೆದಗೆ ದಾರಿ ಎಂಬ ಉಲ್ಲೇಖವಿದೆ. ಮಡಕೆಹೊನ್ನೆಹಳ್ಳಿ ಶಾಸನ ಬೇಗೂರು ದಾರಿ, ಬೈಲೂರು ಶಾಸನ ಕೆರೆವಾಡದ ದಾರಿ, ಮನಗುಂಡಿಶಾಸನ ಹುಪ್ಪವಳ್ಳಿ ದಾರಿ, ಹುಬ್ಬಳ್ಳಿ ಶಾಸನ ಉಣಕಲ್ ರಸ್ತೆ, ದೇಗಾಂವ್ ಗಡಿಶಾಸನ ಭಂಡಿಯ ದಾರಿ, ಕಕ್ಕೇರಿಯಿಂದ ಕುಲವಳ್ಳಿಗೆ ಹೋಗುವ ಭಂಡಿಯದಾರಿ, ಮನಗುಂಡಿ ಶಾಸನ ಹಳ್ಳಗೆರೆಯಿಂದ ಬರುವ ಭಂಡಿಯದಾರಿ, ಮನಗುಂಡಿಯ ಇನ್ನೊಂದು ಶಾಸನ ನವಲೂರಿನಿಂದ ಹಳ್ಳಂಗೆರೆಗೆ ಹೋಗುವ ಭಂಡಿಯದಾರಿ ಮತ್ತು ಹಲಸಿಶಾಸನ ಶಕಟಮಾರ್ಗ (ಭಂಡಿಯದಾರಿ) ಗಳನ್ನು ಉಲ್ಲೇಖಿಸಿವೆ.

ಹಲಸಿ ಪ್ರದೇಶದ ಶಾಸನಗಳಲ್ಲಿ ಹೆದ್ದಾರಿಗಳ ಉಲ್ಲೇಖವೂ ಸಿಗುತ್ತದೆ. ಮುಗದ ಶಾಸನ ಆಣಿಲಾಪೂರ ಪೆರವಟ್ಟೆ (High-way) ಮತ್ತು ಮಣಿಗುಂಡಿಗೆ ಪೆರವಟ್ಟೆ, ಕಿರಿಹಲಸಿಗೆ ತಾಮ್ರಪಟ ಶಾಸನ ಎರಡು ಮಹಾಮಾರ್ಗಗಳನ್ನು, ದೇಗಾಂವೆ ಗಡಿಶಾಸನ ಮಿಂದವಳ್ಳಿಯಿಂದ ಕೆರವಾಡಕ್ಕೆ ಹೋಗುವ ಮತ್ತು ಮಿಂದವಳ್ಳಿಯೆಡೆಗೆ ಹೋಗುವ ಹೆದ್ದಾರಿಗಳನ್ನು, ನರೇಂದ್ರಶಾಸನ ಹೆರ್‌ವಟ್ಟೆಯನ್ನು ಮತ್ತು ಕೆನ್ನೆಲೆಯಡೆಗೆ ಹೋಗುವ ಮಹಾಹೆದ್ದಾರಿಯನ್ನು ಉಲ್ಲೇಖಿಸಿವೆ. ಹಲಸಿಶಾಸನದಲ್ಲಿ ಪೂರ್ವವೀದಿದ್ವಯಂ ಮತ್ತು ಹಲಸಿಗೆ ಪಟಗಳಲ್ಲಿ ಪುರಾತನದ್ವಾರ, ಹೆದ್ದಾರಿ ಎಂಬ ಉಲ್ಲೇಖವಿದೆ. ಎಲ್ಲಕ್ಕಿಂತ ಮಹತ್ವದ ಮಾಹಿತಿ ದೊಡವಾಡ ತಾಮ್ರ ಪಟಗಳಿಂದ ದೊರೆಯುತ್ತದೆ. ಈ ತಾಮ್ರಪಟಗಳಲ್ಲಿ ರಾಷ್ಟ್ರೀಯ ಹೆದ್ದಾರಿಯ ಉಲ್ಲೇಖವಿದ್ದು, ಅದು 100 ದಂಡಗಳ ಅಗಲವಿದ್ದು, ನುಚ್ಚಣಿಕೆ, ಸಿಮ್‌ದೂರು, ಮುನಿಯೂರುಗಳೆಡೆ ಹೋಗುತ್ತಿದ್ದು, ದೊಡವಾಡದ ಪಶ್ಚಿಮಭಾಗದಲ್ಲಿ ಹಾಯ್ದು ಹೋಗುತ್ತಿತ್ತೆಂದು ತಿಳಿಯುತ್ತದೆ. 'ಅನವರತ ಸುಖ ಸಂಚಾರಾರ್ಥ' ಎಂಬ ಹೆದ್ದಾರಿ ಕುರಿತ ಹೇಳಿಕೆ ಈ ಪ್ರದೇಶದ ಶಾಸನಗಳಲ್ಲಿ ಕಂಡು ಬರುತ್ತದೆ.

ಇದಲ್ಲದೇ ಊರು ಅಥವಾ ಗ್ರಾಮಗಳ ಒಳಗಿರುವ ದಾರಿಗಳ ಬಗ್ಗೆ ಕೂಡ ಶಾಸನಗಳಲ್ಲಿ ವಿವರಗಳಿವೆ. ದೇವರ ಹುಬ್ಬಳ್ಳಿಯ ಶಾಸನದಲ್ಲಿ ರಾಜಬೀದಿಯ (ರಾಜ ವೀದಿ) ಪಶ್ಚಿಮಕ್ಕಿರುವ ಅಂಗಡಿಬೀದಿ ಎಂಬ ವಿವರಣೆಯಿದೆ. ರಾಜಬೀದಿಯ ಉಲ್ಲೇಖ ದೇಗಾಂವ್ ಶಾಸನದಲ್ಲೂ ಇದೆ. ಅನೇಕ ಕಡೆ ರಾಜಬೀದಿಯ ಉಲ್ಲೇಖವಿರುವುದರಿಂದ ಬಹುಶಃ ಇದನ್ನು ಪ್ರಮುಖ ಬೀದಿ ಎಂದು ಅರ್ಥೈಸಬಹುದು. ಕಿರಿಹಲಸಿಗೆ ತಾಮ್ರಪಟ ಶಾಸನಗಳಲ್ಲಿ 'ಕ್ಷಪಣಕ ಆಕ್ಷಗೃಹ ವೀಥಿ' ಅಥವಾ ಜೈನ ಸನ್ಯಾಸಿಯ ಮನೆಯ ದಾರಿ, ಮನಗುಂಡಿ ಶಾಸನ ನೀರುಸಾಗರದೆಡೆ ಹೋಗುವ ದಾರಿ ಮನಗುಂಡಿ ಮೂಲಕ ಹಾದು ಹೋಗುವುದೆಂದು, ಮತ್ತೊಂದು ದಾರಿ ಹರಿಜನ ಓಣಿಯಿಂದ ಕಣಗಿಲೆ ಹಳ್ಳಿಯೆಡೆ

* ಪ್ರವಾಚಕರು, ಆರ್.ಪಿ.ಡಿ. ಮಹಾವಿದ್ಯಾಲಯ, ಬೆಳಗಾಂವಿ.

ಹೋಗುವದೆಂದು ಆದೇ ಶಾಸನದಲ್ಲಿ ಮನಗುಂಡಿ ದಾರಿಯಲ್ಲಿ ಸಾಲಾಗಿ ಹಾಯ್ದು ಹೋಗುವ ಆನೆಗಳ ವರ್ಣನೆಯಿದೆ.

ಪ್ರಚಲಿತದಲ್ಲಿದ್ದ ಜಲ-ಸ್ಥಳ ಮಾರ್ಗಗಳಲ್ಲದೆ ಸಾರಿಗೆ ಸೌಕರ್ಯಗಳ ಬಗೆಗಿನ ವಿವರಗಳು ಹಲಸಿನಾಡಿನ ಶಾಸನ ಗಳಲ್ಲಿ ದೊರೆಯುತ್ತದೆ.

ಭಂಡಿ ಸರ್ವಸಾಮಾನ್ಯವಾಗಿ ಸಂಚಾರಕ್ಕಾಗಿ ಉಪ ಯೋಗಿಸಲಾಗುತ್ತಿತ್ತು. ಬಿದಿರಿನ ಭಂಡಿ, ಮರದ ಭಂಡಿಯ ಉಲ್ಲೇಖಗಳಲ್ಲದೆ ದವಸದ ಭಂಡಿ, ಬೆಲ್ಲದ ಭಂಡಿ, ಬಾಡುಕೈ ಭಂಡಿ ಮುಂತಾದವುಗಳೂ ಶಾಸನೋಕ್ತ.

ಕೃಷಿ ಉತ್ಪನ್ನಗಳು, ವ್ಯಾಪಾರಿಸರಕುಗಳು ಮತ್ತು ಜನರ ಓಡಾಟಕ್ಕಾಗಿ ಕುದುರೆ, ಕತ್ತೆ, ಕೋಣ, ಹೇಸರುಗತ್ತೆ, ಎತ್ತು ಗಳನ್ನು ಉಪಯೋಗಿಸಲಾಗುತ್ತಿದ್ದ ಬಗೆಗಿನ ಉಲ್ಲೇಖ ಗೋಲಿಹಳ್ಳಿ ಶಾಸನದಲ್ಲಿದೆ. ಎಮ್ಮೆ, ಕುದುರೆ, ತೊತ್ತು, ಬಂಡಿಗಳ ಮೂಲಕ, ಮೂಟೆ, ಹೆಡಿಗೆ, ಜಲ್ಲೆಗಳನ್ನು ತಲೆಯ ಮೇಲೆ ಹೊತ್ತುಕೊಂಡು, ಕಂಕುಳಲ್ಲಿ ಇಟ್ಟುಕೊಂಡು, ಹೆಗಲಮೇಲೆ ಹಸುಬೆ ಹಾಕಿಕೊಂಡು ವ್ಯಾಪಾರಕ್ಕೆ ಹೋಗುತ್ತಿದ್ದರು.

ಶ್ರೀಮಂತ, ಪ್ರತಿಷ್ಠಿತ ವರ್ಗದ ಜನರು, ಅಧಿಕಾರಿಗಳು ವೇಗ ಮತ್ತು ಪ್ರತಿಷ್ಠೆಯ ಸಂಕೇತವಾದ ಕುದುರೆಗಳನ್ನು ಸವಾರಿಗಾಗಿ ಬಳಸುತ್ತಿದ್ದರು. ಅರಸು ಮನೆತನದವರು ಆನೆ ಸವಾರಿ ಮಾಡುತ್ತಿದ್ದರು. ಸುಸಂಸ್ಕೃತರು, ವಾಗ್ಮಿಗಳು, ಕವಿಗಳು, ಪಂಡಿತರು ಮತ್ತು ಉಚ್ಚಮನೆತನದ ಸ್ತ್ರೀಯರು ಪಲ್ಲಕ್ಕಿಯಲ್ಲಿ (ಅಂದೋಲಿಕೆ) ಓಡಾಡುತ್ತಿದ್ದರೆಂಬ ವಿವರ ದೇಗಾಂವ್ ಶಾಸನದಲ್ಲಿದೆ.

ಹಲಸಿಯ ವರ್ತಕರು ಕತ್ತೆ, ಕೋಣ, ಭಂಡಿ, ಆನೆ, ಹಡಗುಗಳಲ್ಲಿ ಮುತ್ತು ಮಾಣಿಕ್ಯ ಮುಂತಾದವುಗಳನ್ನು ಹೇರಿಕೊಂಡು ಜಲ-ಸ್ಥಳಯಾತ್ರೆಗೆ ಹೊರಡುತ್ತಿದ್ದರೆಂದು ಒಂದು ಶಾಸನವು ಸ್ಪಷ್ಟವಾಗಿ ಹೇಳುತ್ತದೆ.

ನೌಕೆಗಳನ್ನು ವಿಶೇಷವಾಗಿ ಹೊರದೇಶಗಳಿಂದ, ಹೊರದೇಶಗಳಿಗೆ ಸರಕುಗಳನ್ನು ಆಮದು/ರಫ್ತು ಮಾಡಲು ಬಳಸಲಾಗುತಿತ್ತು. ಗೋವೆಕದಂಬರು ಹಡಗುಗಳನ್ನು ಕಟ್ಟಿ ಸಂಚರಿಸುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ. ವರ್ತಕರು ಹಡಗಿನಲ್ಲಿ ಸರಕು ಹೇರಿಕೊಂಡು ಪರದೇಶಗಳಿಗೆ ಹೋಗು ವಾಗ ನಕ್ಷತ್ರಪಥ ನೋಡುತ್ತ ಹಡಗು ನಡೆಸುತ್ತಿದ್ದ ವಿಷಯ ಶಾಸನ ಮತ್ತು ವಚನಗಳಲ್ಲಿವೆ. ದೊಡ್ಡವಾಡದ ಶಾಸನ ಸಮುದ್ರಯಾನದ ಬಗ್ಗೆ ತಿಳಿಸುತ್ತದೆ ದೋಣಿ/ಹಡಗು ನೌಕಾ ದಳದ ಕಾಳಗದಲ್ಲಿ ಮರಣವನ್ನಪ್ಪಿದ ವೀರರ ಸ್ಮರಣಾರ್ಥ ನಿಲ್ಲಿಸಿದ ವೀರಗಲ್ಲುಗಳಿವೆ. ಗೋವೆ ಕದಂಬರ ನೌಕಾದಳ ಇತಿಹಾಸ ಪ್ರಸಿದ್ಧ. ಅದು ಅವರ ಸೈನ್ಯದ ಪ್ರಮುಖ ಅಂಗವಾಗಿತ್ತು. ನರೇಂದ್ರ ಶಾಸನ ಗೋವೆ ಕದಂಬರ ದೊರೆ ಇಮ್ಮಡಿ ಚಟ್ಟಯ್ಯ ಸೌರಾಷ್ಟ್ರಕ್ಕೆ ನೌಕಾಯಾನ ಕೈಕೊಂಡನೆಂದು ತಿಳಿಸುತ್ತದೆ. ಮೊದಲನೆಯ ಜಯಕೇಶಿಯ ತಾಮ್ರಪಟಶಾಸನ ಆತ ತನ್ನ ಮಂತ್ರಿಯಾದ ಸಾದನೊನಿಗೆ ಕರಾವಳಿ ಪ್ರದೇಶಕ್ಕೆ ಬರುವ ಹಡಗುಗಳಲ್ಲಿಯ ಸರಕುಗಳ ಮೇಲೆ ಸುಂಕವಿಧಿಸಲು ಆದೇಶವಿತ್ತ ಬಗ್ಗೆ ತಿಳಿಸುತ್ತದೆ. ಗೋವೆಕದಂಬರ ನೌಕಾದಳದ ಬೆಳವಣಿಗೆಯ ಬಗ್ಗೆ ಅನ್ಯ ಆಧಾರಗಳು ಶಾಸನಗಳಿಂದ ದೊರೆಯುತ್ತದೆ. ಗೋಲಿಹಳ್ಳಿ ಮತ್ತು ನರೇಂದ್ರ ಶಾಸನಗಳು ಚಟ್ಟಯ್ಯನ ನೌಕಾದಾಳಿಗಳ ಬಗ್ಗೆ ತಿಳಿಸುತ್ತವೆ.

ದೇಗಾಂವ್ ಶಾಸನ ಇಮ್ಮಡಿ ಜಯಕೇಶಿಯ ತಂದೆ ಯಾದ ವಿಜಯಾದಿತ್ಯನು ವಿವಿಧ ದ್ವೀಪಗಳಿಗೆ ನೌಕಾದಳ ದೊಂದಿಗೆ ದಂಡಯಾತ್ರೆ ಕೈಗೊಂಡನೆಂದು ತಿಳಿಸುತ್ತದೆ. ಗೋವೆ ಕದಂಬರ ಎಲ್ಲ ದೊರೆಗಳಿಗೂ 'ಪಶ್ಚಿಮ ಸಮುದ್ರಾಧೀಶ್ವರ' ಎಂಬ ಬಿರುದಿದ್ದುದು ಗಮನೀಯ. ವಹಿತ್ರ, ಭೈತ್ರ, ಪೋತ್, ತರಮ್‌ದ, ನಾವು, ಪಾರಾದವಾರ, ತರಣ ಮುಂತಾದ ಕ್ಷಿಪಣಿಗಳನ್ನು ಯುದ್ಧ ನೌಕೆಗಳಿಗೆ ಕೂಡಿಸುತ್ತಿದ್ದರೆಂಬ ಸಂಗತಿ 'ನಾವು ಚಕ್ರ ಆಕ್ರಮಿತ ಸಿಂಧೋರಮುಖಾರಿತ ನಭಸಿಹ ಕ್ಷಿಪರಧ್ವಾನ ತನ್ಯೆಯ' ಎಂಬ ವರ್ಣನೆಯಿಂದ ವಿದಿತವಾಗುತ್ತದೆ.

ಕದಂಬರ ನೌಕಾದಳ ಅತ್ಯಂತ ಪರಿಣಾಮಕಾರಿಯಾಗಿದ್ದು ಮೂವರು ದೊರೆಗಳು ಯಶಸ್ವಿ ನೌಕಾಯುದ್ಧಗಳನ್ನು ಕೈ ಕೊಂಡ ಮಾಹಿತಿ ಶಾಸನಗಳಿಂದ ದೊರೆಯುತ್ತದೆ.

> 'ಜಿತ್ವಾ ಸಿಂಹಳ ಪರಾಶಿಕ ಕನಕದ್ವೀಪ ಅಧಿಪನ ಅಂಬುಧೌ ಸಜ್ಜಾಹುತ್ ಭತ್ರೈರ ವಹಿಕ್ರ ನೀವಹೈಹ........' ಮತ್ತು
>
> ಬಹಿತ್ರ ಸಂತತೆಗಳಿಂದ ಸೇತುವೆಯಂ ಕಟ್ಟಿ..........

ಮೊದಲನೆಯ ಜಯಕೇಶಿ ಮೇಲೆ ಹೇಳಿದ ನಾವು ಚಕ್ರ ಮತ್ತು ಕ್ಷಿಪಣಿಗಳಿಂದ ಲಂಕೆಗೆ ದಾಳಿಮಾಡಿದ್ದನು. ದೇಗಾಂವೆ ಶಾಸನದಿಂದ ಮೊದಲನೆಯ ವಿಜಯಾದಿತ್ಯ **'ಪೋತಪರಂಪರಾಭಿಹಿನಿಕೆ'** ದೊಡಗೂಡಿದ ನೌಕಾದಾಳಿ ಯನ್ನು ವಿವಿಧ ದ್ವೀಪಗಳಿಗೆ ಮಾಡಿದ್ದನೆಂದು ತಿಳಿಯುತ್ತದೆ.

ಕದಂಬ ಮಂಡಲದಲ್ಲಿ ಸಾಗವಾನಿ ಮತ್ತಿತರ ಉತ್ತಮ ಪ್ರಕಾರದ ಮರ ಅಲ್ಲಿಯ ನಿಬಿಡ ಅರಣ್ಯಗಳಲ್ಲಿ ಲಭ್ಯವಿದ್ದುದ ರಿಂದ ಹಡಗು ಕಟ್ಟುವ ಕೈಗಾರಿಕೆ ಬೆಳೆಯಲು ಕಾರಣ ವಾಯಿತು. ದೊರೆ ಚಟ್ಟಯ್ಯ ಸೇತುವೆಯ ಹಾಗೆ ಕಾಣುವ ಹಡಗುಗಳ ಸಾಲನ್ನು ಲಂಕೆಯವರೆಗೂ ಒಯ್ದಿದ್ದನೆಂದು ನರೇಂದ್ರ ಶಾಸನ ತಿಳಿಸುತ್ತದೆ.

ಸಂಚಾರ ಸಾರಿಗೆಗಳ ಮೇಲೆ ವಿವಿಧ ಪ್ರಕಾರದ ತೆರಿಗೆಗಳನ್ನು ವಿಧಿಸುತ್ತಿದ್ದರು. ದಾರಿಗಾಗಿ ವಿಧಿಸುತ್ತಿದ್ದ ಕೀಳ್ಬಟ್ಟೆ ಸುಂಕ, ಮೇಲ್‌ಬಟ್ಟೆ ಸುಂಕ, ಎತ್ತಿನ ಸುಂಕ, ಗಾಡಿಸುಂಕ,

ನಾವೆದೆರೆ, ನದಿಯ ಬೀಯ ಮುಂತಾದವುಗಳ ಬಗ್ಗೆ ಶಾಸನಗಳು ತಿಳಿಸುವ ಸಂಗತಿಗಳು ಮೌಲಿಕವಾದವುಗಳು. ಇದಲ್ಲದೇ ಮೇಯಿದೆರೆ, ಭಂಡಿರೆ, ನೆಲಮೆಟ್ಟು (ಕುದುರೆ ಮತ್ತು ಬೇರೆ ಪ್ರಾಣಿ ಕಟ್ಟುವ ಸ್ಥಳದ ಮೇಲಿನ ಸುಂಕ) ಮುಂತಾದ ಸಾರಿಗೆ ತೆರಿಗೆಗಳು ರಾಜಬೊಕ್ಕಸಕ್ಕೆ ಸಂದಾಯ ವಾಗುತ್ತಿದ್ದವು. ಸುಂಕದಕಟ್ಟೆಯಲ್ಲಿ ಸಾರಿಗೆಯ ಪ್ರಕಾರ, ವಾಹನಗಳ ರೂಪುರೇಷೆ, ಬಣ್ಣ, ವಯಸ್ಸು ಬರೆಸುತ್ತಿದ್ದರಲ್ಲದೇ ಸರಕಿನ ಅಧಿಕೃತತೆಯುಳ್ಳ ಚೀಟಿಯನ್ನು ಕೊಡುತ್ತಿದ್ದರು.

ಒಟ್ಟಿನಲ್ಲಿ ಸ್ಥಳಮಾರ್ಗ ಅಥವಾ ಪಾದಮಾರ್ಗ ಮತ್ತು ಜಲಮಾರ್ಗಗಳೆರಡೂ ಬಳಕೆಯಲ್ಲಿದ್ದವು. ಪ್ರಮುಖ ವ್ಯಾಪಾರ ಕೇಂದ್ರಗಳ ಮಧ್ಯೆ ವಿಶಾಲವಾದ ರಸ್ತೆಗಳಿದ್ದವು, ಉದಾಹರಣೆಗೆ ಪ್ರಸಿದ್ಧ ವ್ಯಾಪಾರಕೇಂದ್ರವಾದ ತೇರದಾಳದಿಂದ ಹಲಸಿಗೆ ಹನ್ನಿರ್ಚ್ಛಾಸಿರಕ್ಕೆ ಹೆಬ್ಬಟ್ಟೆಯಿದ್ದಂತೆ ಶಾಸನ ತಿಳಿಸುತ್ತದೆ. ಪಾದ ಮಾರ್ಗ ಮುಖ್ಯವಾಗಿ ಬಂಡಿಯ ದಾರಿ, ಬಂಡಿಯ ಹೆದ್ದಾರಿ, ರಾಜಬೀದಿ, ಕೀಳ್ಬಟ್ಟೆ, ಮೇಲ್ಬಟ್ಟೆ, ಅಡವಟ್ಟೆಗಳ ಮುಖಾಂತರ ಸಾಗುತ್ತಿತ್ತು. ಮಧ್ಯದಲ್ಲಿ ನದಿಹಳ್ಳಗಳನ್ನು ತೆಪ್ಪ, ದೋಣಿ, ನಾವೆಗಳ ಮೂಲಕ ದಾಟುತ್ತಿದ್ದರು. ನದಿಯ ಆಳ ಕಡಿಮೆ ಇದ್ದಾಗ ಇಳಿದು ನಡೆದು ಬರುತ್ತಿದ್ದರು. ಹೀಗೆ ನದಿಯನ್ನು ದಾಟುವುದಕ್ಕೆ ಅನುಕೂಲವಾದ ಜಲಮಾರ್ಗಕ್ಕೆ 'ಕಡುಹು' ಎನ್ನುತ್ತಿದ್ದರೆಂದು ಡಾ॥ ಚಿದಾನಂದಮೂರ್ತಿ ಅಭಿಪ್ರಾಯ ಪಡುತ್ತಾರೆ. ಜಲಮಾರ್ಗ ಎರಡು ರೀತಿಯಾದುದು. ಮೊದಲನೆಯದು ಸಣ್ಣ ಹಳ್ಳಗಳನ್ನು, ದೊಡ್ಡ ನದಿಗಳನ್ನು ದಾಟುವ ಕಡುಹು ಎಂಬ ಮಾರ್ಗಗಳು. ಇಂತಹ ಕಡೆ ದೋಣಿಯಿಂದ ಸಾಮಾನುಗಳನ್ನು ಸಾಗಿಸುತ್ತಿದ್ದರು. ಸಮುದ್ರ ಯಾನಕ್ಕಾಗಿ ಹಡಗು ಅಥವಾ ಭೈತ್ರಗಳನ್ನು ಉಪಯೋಗಿಸು ತ್ತಿದ್ದರು. ದೊಡ್ಡವಾಡ ಶಾಸನ ಸಮುದ್ರಯಾನವನ್ನು ತಿಳಿಸುತ್ತದೆ. ಇದಲ್ಲದೇ ಕೆಲವು ನದಿಗಳಿಗೆ ಸೇತುವೆ ಕಟ್ಟಿದ್ದರು, ಹಡಗು ಗಳನ್ನು ವ್ಯಾಪಾರಸ್ಥರು ಸರಕು ಸಾಗಾಣಿಕೆಗಾಗಿ ಮತ್ತು ನೌಕಾಪಡೆಯಲ್ಲಿ ಬಳಸುತ್ತಿದ್ದರು.

ಪಾದಮಾರ್ಗ ಮತ್ತು ಜಲಮಾರ್ಗಗಳಲ್ಲಿ ಬಳಸುತ್ತಿದ್ದ ಸಾಗಾಣಿಕೆಯ ಸಾಧನಗಳ ವಿವರಣೆ ಅಪೂರ್ಣವೆನಿಸುವುದು. ಭೂಮಾರ್ಗಗಳಲ್ಲಿ ವ್ಯಾಪಾರ ನಡೆಯುತ್ತಿದ್ದುದು ಮುಖ್ಯವಾಗಿ ಎತ್ತಿನಬಂಡಿಗಳ ಮೇಲೆ. ಎತ್ತು, ಕತ್ತೆ ಕೋಣ, ಕುದುರೆ ಮುಂತಾದ ಪ್ರಾಣಿಗಳ ಮೇಲೆಯೂ ಸಾಮಾನುಗಳನ್ನು ಹೇರಿ ಸಾಗಿಸು ತ್ತಿದ್ದರೆಂದು ಲಭ್ಯವಿದ್ದ ಮಾಹಿತಿಯಿಂದ ತಿಳಿಯುತ್ತದೆ. ಕುದುರೆ, ಆನೆ, ಪಲ್ಲಕ್ಕಿಗಳನ್ನು ಸವಾರಿಗಳಿಗಾಗಿ ಬಳಸುತ್ತಿದ್ದರು.

ಇವು ಸ್ಥಳ ಅಥವಾ ನೆಲಮಾರ್ಗದ ಮುಖ್ಯ ಸಾರಿಗೆ ಸಾಧನಗಳಾಗಿದ್ದವು. ಈ ಪ್ರದೇಶದ ಶಾಸನಗಳಲ್ಲಿ ದಾರಿ, ಹೆದ್ದಾರಿ, ಮಹಾಮಾರ್ಗಗಳ ಬಗ್ಗೆ ಉಲ್ಲೇಖವಿದ್ದರೂ ಈ ಬೀದಿಗಳ, ಹೆದ್ದಾರಿಗಳ, ಮಾರ್ಗಗಳ ನಿರ್ಮಿತಿ ಬಗ್ಗೆ ಅಥವಾ ಅವುಗಳ ನಿರ್ವಹಣೆಯ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ಪಾದಮಾರ್ಗಕ್ಕೆ ಅಥವಾ ರಸ್ತೆಗಳನ್ನು ನಿರ್ಮಿಸಿ ಅವುಗಳನ್ನು ಆಗಾಗ್ಗೆ ಸರಿಪಡಿಸುವ ವಿಷಯದಲ್ಲಿ ಸರಕಾರ ಆಸಕ್ತವಾಗಿ ದ್ದಿತೇ ಎನ್ನುವ ವಿಷಯ ಶಾಸನಗಳಿಂದ ತಿಳಿಯುವುದಿಲ್ಲ. ಪ್ರಮುಖ ವ್ಯಾಪಾರಕೇಂದ್ರಗಳ ಮಧ್ಯೆಯಿದ್ದ (ತೇರದಾಳದಿಂದ ಹಲಸಿಗೆಯ ಹೆಬ್ಬಟ್ಟೆ) ದೊಡ್ಡ ಮಾರ್ಗಗಳನ್ನಾದರೂ ಸರಕಾರವು ಸುಸ್ಥಿತಿಯಲ್ಲಿಡಲು ಪ್ರಯತ್ನಿಸುತ್ತಿದ್ದಿರಬೇಕು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.**, ೨೦೦೩, ಬೆಂಗಳೂರು, ಎಂ. ಚಿದಾನಂದಮೂರ್ತಿ.
೨. *Economic Conditions in Karnataka.*, 1975, G.R. Kuppaswamy, Dharwad.
೩. *Kadamaba Kula.*, 1990, G.M. Moraes, Delhi.
೪. *Kadambas of Goa and Their Inscriptions*, R.N. Gurav, Unpublished thesis K.U.D.
೫. **ಶಾಸನಗಳಲ್ಲಿ ಕರ್ನಾಟಕದ ವರ್ತಕರು.**, ೧೯೮೬, ಬಿ.ಆರ್. ಹಿರೇಮಠ, ಧಾರವಾಡ.
೬. ***Halasi nadu-A study;*** Smita Surebankar, Unpublished thesis submitted to KUD, 2001.
೭. *Karnataka Inscriptions*, Vol.V.
೮. **ಧಾರವಾಡ ತಾಲೂಕಿನ ಶಾಸನಗಳು.**
೯. *South Indian Inscriptions*, Vols. XI and XV.
೧೦. *Epigraphia Indica*, Vol.XIII.

ಡಾ. ಪಿ.ವಿ. ಕೃಷ್ಣಮೂರ್ತಿ*

# ಬೆಂಗಳೂರು ಜಿಲ್ಲಾ ಪರಿಸರದ ಶಾಸನೋಕ್ತ ಕೆರೆಗಳು

ಮಾನವನ ಸಂಸ್ಕೃತಿಯ ವಿಕಸನದಲ್ಲಿ 'ನೀರು' ಅಮೋಘ ವಾದ ಪ್ರಭಾವವನ್ನು ಬೀರಿದೆ. ಪ್ರಾಗೈತಿಹಾಸಿಕ ಕಾಲದ ಮಾನವನು, ತನ್ನ ವಾಸಕ್ಕಾಗಿ ಆಯ್ದುಕೊಂಡ ಎಡೆಗಳು; ಸಾಮಾನ್ಯವಾಗಿ ನೀರು ಸಿಗುವಂತಹ ನೈಸರ್ಗಿಕ ತಾಣಗಳೇ ಆಗಿದ್ದವು. ನದಿಯ ದಡ, ಸರೋವರ, ಕುಂಟೆಗಳ ಸಾನಿಧ್ಯ ಇತ್ಯಾದಿ. ಕಾಲಾಂತರದಲ್ಲಿ ಮಾನವ; ಬೇಟೆ, ಪಶುಪಾಲನಾ ಹಂತಗಳನ್ನು ದಾಟಿ ಕೃಷಿಯನ್ನು ತನ್ನ ಮುಖ್ಯ ಜೀವನಾಧಾರ ಕಸುಬೆಂದು ಭಾವಿಸತೊಡಗಿದ ಕಾಲದಿಂದಲೇ ಮಳೆಯ ಅಥವಾ ಹೊಳೆಯ ನೀರನ್ನು ಸಾಕಷ್ಟು ಕಾಲ ಹಿಡಿದಿಟ್ಟು ಕೊಳ್ಳುವ ಅವಶ್ಯಕತೆ ಕಂಡುಬಂದಿತು. ಅವನು ಈ ದಿಸೆಯಲ್ಲಿ ಮುನ್ನಡೆದು ಕೃತಕವಾಗಿ ನೀರನ್ನು ಸಂಗ್ರಹಿಸಿಟ್ಟುಕೊಳ್ಳಲು, ತನ್ನ ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಲು ನಡೆಯಿಸಿದ ಪ್ರಯತ್ನ ಗಳ ಫಲಗಳೇ ಕೆರೆ-ಕಟ್ಟೆಗಳಾಗಿ ರೂಪತಾಳಿದವು. ಇಂತಹ ಪ್ರಯತ್ನಗಳು ನೂತನ ಶಿಲಾಯುಗದ ಅಂತಿಮ ಘಟ್ಟಕ್ಕಾಗಲೇ ವ್ಯಾಪಕವಾಗಿ ನಡೆದು, ಮಾನವ ಒಂದೆಡೆ ನೆಲೆನಿಂತು ತನ್ನ ಅಶನ-ವಸನಗಳನ್ನು ಪೂರೈಸಿಕೊಳ್ಳತೊಡಗಿದ್ದನು. ಆದರೆ ಕೆರೆಗಳ ರಚನೆಯೇ ಒಂದು ತಂತ್ರಜ್ಞಾನವಾಗಿ ಆಗ ರೂಪು ಗೊಂಡಿರಲಿಲ್ಲವೆನ್ನಬಹುದು. ಮುಂದಿನ ಕಾಲಮಾನದಲ್ಲಿ, ಅದರಲ್ಲೂ ಬಯಲು ನಾಡಿನ ಪ್ರದೇಶಗಳಲ್ಲಿ ವ್ಯವಸ್ಥಿತವಾಗಿ ಕೆರೆ ಕಾಲುವೆಗಳ ರಚನಾಕಾರ್ಯ ಆರಂಭಗೊಂಡಿದ್ದಿತೆಂದು ಹೇಳಬಹುದು. ಆಳರಸರು, ಅಧಿಕಾರಿಗಳು, ಸ್ಥಳೀಯರು ತಮ್ಮ ರಾಜ್ಯದ, ಪ್ರದೇಶದ, ಊರಿನ ಅಭಿವೃದ್ಧಿಯ ದೃಷ್ಟಿ ಯಿಂದ ಅಗತ್ಯ ನೀರಿನ ತಾಣಗಳಾದ ಕೆರೆಗಳನ್ನು ಅವಿಭಾಜ್ಯ ವಾಗಿ ನಿರ್ಮಿಸಿರುವುದು; ಬಯಲು ಪ್ರದೇಶದ ಪ್ರತಿಯೊಂದು ಊರಿನಲ್ಲೂ ಕೆರೆಯೊಂದಿರುವುದರ ಹಿನ್ನೆಲೆಯಲ್ಲಿ ಗ್ರಹಿಸ ಬಹುದಾಗಿದೆ. ಅಲ್ಲದೆ ಆ ತಾಣಗಳನ್ನು ಸಮುದ್ರ, ಸಾಗರ ಎಂದು ಮುಂತಾದ ವೈಭವಯುತವಾದ ವಿಶೇಷಣಗಳಿಂದ ಕೂಡಿಸಿ ಕರೆದುಕೊಂಡಿರುವುದು ಕಂಡು ಬರುತ್ತದೆ. ಅಂತೆಯೇ ಕೆರೆ, ಸಮುದ್ರ(ಸಂದ್ರ), ಏರಿ, ಕಟ್ಟೆ, ಕೊಳ, ಕುಂಟೆ, ತೀರ್ಥ, ದೋಣೆ ಇತ್ಯಾದಿ ಜಲಾಶಯ ಸೂಚಿ ಪದಗಳನ್ನು ಪ್ರತ್ಯಯ ಗಳಾಗಿ ಪಡೆದ ಊರ ಹೆಸರುಗಳಿಗೇನೂ ಕೊರತೆಯಿಲ್ಲ.

ಜೀವಂಗಳಿಗೆಲ್ಲಾ ಉದಕವೇ ಪ್ರಾಣ[೧] ಅಂತೆಯೇ 'ಭೂಮಿಯ ಮೇಲಿನ ದೇವ, ನರ, ಮೃಗ ಪಕ್ಷಿ ಮೊದಲಾದ ಯೋನಿ ಜೀವರಾಶಿಗಳೆಲ್ಲವನ್ನೂ ರಕ್ಷಿಸಲೆಂದು[೨] ಕೆರೆಗಳನ್ನು ಕಟ್ಟಿಸಿದ ಪುಣ್ಯಾತ್ಮರು ಇದ್ದಾರೆ. ಅಷ್ಟೇ ಅಲ್ಲ ಅಂದಿನ ತಾಯಂದಿರು ತಮ್ಮ ಮಕ್ಕಳಿಗೆ 'ಕೆಱೆಯಂ ಕಟ್ಟಿಸು, ಭಾವಿಯಂ ಸವಸು' ಎಂದು ಮುಂತಾಗಿ ಕಿವಿಯಲ್ಲಿ ಉಸಿರಿಸುತ್ತ ಹಾಲೆರೆ ಯುತ್ತಿದ್ದರು.[೩] ಅಂದಿನ ಅಳರಸರಾದರೂ, 'ಆರುಂ ಒಲ್ಲದ ಕಲ್ಕಾಡ ಬೆಟ್ಟಂ ಸವತಳಂ ಮಾಡಿಯೋಡಿಲ ಮನೆಯು ನನ್ನನವನವುಮಂ ಮಾಡಿಸಿ ಕೆಱೆಯಂ ಕಟ್ಟಿಸಿ ತೊರೆಯ ಸೆರೆಯಿಟ್ಟು ಓವಟಿ ನೆಲನಂ ಪಿರಿದುಂಯಾಯಸದಿಂ ಸುಕ್ಷೇತ್ರಂ' ಮಾಡಿಸುತ್ತಿದ್ದರು.[೪] ಈ ರೀತಿಯಾಗಿ ನಮ್ಮ ಪೂರ್ವಜರು ನೀರು-ಕೆರೆಗಳ ಮಹತ್ವವನ್ನು ಮನಗಂಡಿದ್ದರು.

ಒಟ್ಟಾರೆ ಮಾನವ ಒಂದೆಡೆ ನೆಲೆನಿಲ್ಲಲು ಕಾರಣ ಕೆರೆಯೋ, ಕೆರೆಯೇ ಕಾರಣವಾಗಿ ಊರೋ ರಚನೆಗೊಂಡು ಪರಸ್ಪರ ಪೂರಕವಾಗಿ ಬೆಳೆದುಕೊಂಡು ಮಾನವನ ಜೀವನ ವಿಕಸನದಲ್ಲಿ ಕೆರೆಕಟ್ಟೆಗಳು ಪರೋಕ್ಷವಾಗಿ ಪ್ರಮುಖ ಸ್ಥಾನ ಪಡೆದಿದ್ದವು ಎಂಬುದು ಸರಿಯಷ್ಟೆ.

ಬೆಂಗಳೂರು ನಗರವೂ ಸೇರಿದಂತೆ ಬೆಂಗಳೂರು ಉತ್ತರ, ಪೂರ್ವ ಮತ್ತು ದಕ್ಷಿಣ ಹಾಗೂ ಆನೇಕಲ್ ತಾಲ್ಲೂಕು ಗಳನ್ನು ಒಳಗೊಂಡಂತೆ ಇರುವ ಈ ಜಿಲ್ಲೆಯ ವಿಸ್ತಾರ ಕೇವಲ ೨೧೯೧ ಚ.ಕಿ.ಮೀ. ಮಾತ್ರ. ರಾಜ್ಯದ ಅತ್ಯಂತ ಚಿಕ್ಕ ಜಿಲ್ಲೆ; ಆದರೆ ಅತ್ಯಧಿಕ ಜನ ಸಾಂದ್ರತೆಯುಳ್ಳದ್ದಾಗಿದೆ. ಈ ಜಿಲ್ಲೆ ಭೌಗೋಳಿಕವಾಗಿ ಬಯಲುನಾಡಿನ ಪ್ರದೇಶವೆಂದು ಗುರುತಿಸಲಾಗಿದೆ. ಬೆಂಗಳೂರು ಜಿಲ್ಲಾ ಪ್ರದೇಶವು, ಈಶಾನ್ಯ ಮತ್ತು ಪೂರ್ವಕ್ಕೆ ಬಹುಮಟ್ಟಿಗೆ ಸಮತಟ್ಟಾಗಿದ್ದು ದಕ್ಷಿಣ ಪಿನಾಕಿನೀ ನದಿಯ ಜಲಾನಯನ ಪ್ರದೇಶವಾಗಿದೆ. ವಾಯುವ್ಯ ಮತ್ತು ಪಶ್ಚಿಮ ಪ್ರದೇಶಗಳು ಅರ್ಕಾವತೀ ನದಿಗೆ ನೀರುಣಿ ಸುವ ಕೊರಕಲು ಪ್ರದೇಶದಿಂದ ಕೂಡಿದೆ. ದಕ್ಷಿಣ ಭಾಗ ದಲ್ಲಿ ಬನ್ನೇರುಘಟ್ಟದ ಬೆಟ್ಟ ಗುಡ್ಡಗಳ ಸಾಲುಗಳಿದ್ದು ಇದರ ಪಶ್ಚಿಮಕ್ಕಿರುವ ಪ್ರದೇಶಗಳು ಅರ್ಕಾವತಿಗೂ, ಪೂರ್ವಕ್ಕಿರುವ

* ೩೭, 'ಶ್ರೀಕೃಷ್ಣಕೃಪ' ೩ನೇ ಕ್ರಾಸ್, ಸುಬ್ಬಣ್ಣ ಲೇ-ಔಟ್, ಹರಿನಗರ ಕ್ರಾಸ್, ಬೆಂಗಳೂರು - ೫೬೦ ೦೬೨.




*೧. ಧರ್ಮಾಂಬುಧಿ, ೨. ಬೆಳ್ಳಂದೂರು, ೩. ಚೆಲ್ಲಘಟ್ಟ, ೪. ಕೆಂಪಾಂಬುಧಿ, ೫. ಹೆಬ್ಬಾಳ, ೬. ಸ್ಯಾಂಕಿ, ೭. ಜಕ್ಕೂರು, ೮. ರಾಚೇನಹಳ್ಳಿ, ೯. ನಾಗವಾರ, ೧೦. ಹೆಣ್ಣೂರು, ೧೧. ದೊಡ್ಡಗುಬ್ಬಿ, ೧೨. ಕಲ್ಲಕೆರೆ, ೧೩. ರಾಮಪುರ, ೧೪. ಅಗರ, ೧೫. ಕಾಡುಗೊಂಡನಹಳ್ಳಿ, ೧೬. ಕೆ.ಆರ್. ಪುರಂ, ೧೭. ಲಾಲ್‌ಬಾಗ್, ೧೮. ಮತ್ತಿಕೆರೆ, ೧೯. ಹಲಸೂರು, ೨೦. ಸಂಪಂಗಿ ಕೆರೆ, ೨೧. ಚಿನ್ನಾಗರ, ೨೨. ಮೇಸ್ತ್ರಿಪಾಳ್ಯ, ೨೩. ಕೋರಮಂಗಲ, ೨೪. ತಾವರೆಕೆರೆ, ೨೫. ಚಿಕ್ಕ ಆಡುಗೋಡಿ, ೨೬. ಸಾರಕ್ಕಿ ಅಗ್ರಹಾರ, ೨೭. ಜರಗನಹಳ್ಳಿ, ೨೮. ಯಡಿಯೂರು, ೨೯. ಚೆನ್ನಮ್ಮನ ಕುಂಟೆ, ೩೦. ಹೊಸಕೆರೆಹಳ್ಳಿ, ೩೧. ಅಗರ ಕೆರೆ, ೩೨. ಸುದ್ದಗುಂಟೆಪಾಳ್ಯ, ೩೩. ರೂಪೇನಅಗ್ರಹಾರ, ೩೪. ವಂಗನಹಳ್ಳಿ, ೩೫. ಪರಂಗಿಪಾಳ್ಯ, ೩೬. ಬಂಡೇಪಾಳ್ಯ, ೩೭. ಮಂಗಮ್ಮನಪಾಳ್ಯ, ೩೮. ಗೊಲ್ಲರಪಾಳ್ಯ, ೩೯. ಇಬ್ಬಲೂರು, ೪೦. ನಾಯಂಡಹಳ್ಳಿ, ೪೧. ಬಿನ್ನಿಮಿಲ್, ೪೨. ಸಿದ್ದಿಕಟ್ಟೆ, ೪೩. ಕುರುಬರಹಳ್ಳಿ, ೪೪. ಗೆದ್ದಲಹಳ್ಳಿ, ೪೫. ನಾಗಶೆಟ್ಟಿಹಳ್ಳಿ, ೪೬. ಕಲ್ಲುಗೊಂಡನಹಳ್ಳಿ, ೪೭. ಕಾಚೇನಹಳ್ಳಿ, ೪೮. ಕಮ್ಮನಹಳ್ಳಿ, ೪೯. ಲಿಂಗರಾಜಪುರ, ೫೦. ಮೇಡಹಳ್ಳಿ, ೫೧. ಕಗ್ಗದಾಸಪುರ, ೫೨. ಮಹದೇವಪುರ, ೫೩. ವಿಭೂತಿಪುರ, ೫೪. ದೊಡ್ಡನಕ್ಕುಂದಿ.*

ಪ್ರದೇಶಗಳು ದಕ್ಷಿಣ ಪಿನಾಕಿನಿಗೂ ನೀರೊದಗಿಸುತ್ತವೆ. ಬೆಂಗಳೂರು ಜಿಲ್ಲಾ ಪ್ರದೇಶದಲ್ಲಿ ಸುಮಾರು ನಾನೂರಕ್ಕೂ ಹೆಚ್ಚು ಕೆರೆಗಳು ಅಸ್ತಿತ್ವ ಪಡೆದಿದ್ದು ಅವುಗಳಲ್ಲಿ ಕೆಲವು ಬಹಳ ಹಿಂದಿನಿಂದಲೇ ಇದ್ದು ಶಾಸನೋಕ್ತವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಪ್ರಸ್ತುತ ಆ ಶಾಸನೋಕ್ತ ಕೆರೆಗಳ ಅವಲೋಕನ ಈ ಬರಹದ ಉದ್ದೇಶವಾಗಿದೆ.

ಗಂಗರಸರ ಆಳ್ವಿಕೆಯ ಕಾಲಕ್ಕಾಗಲೇ ಈ ಜಿಲ್ಲಾ ಪ್ರದೇಶದಲ್ಲಿ ಅನೇಕ ಕೆರೆಗಳು ಅಸ್ತಿತ್ವ ಪಡೆದಿದ್ದವು. ಮುಖ್ಯವಾಗಿ ಗಂಗರಸರ ಕಾಲದ ಕೆರೆಗಳಲ್ಲಿ ಕ್ರಿ.ಶ. ೮೭೦ರಲ್ಲಿ ಸತ್ಯವಾಕ್ಯ ಪೆರ್ಮಾನಡಿಯ ಸಾಮಂತನಾದ ಕಲಿಯುಗದಣುಗ ನಾಗತ್ತರನ ಆಳೂ, ಇರ್ವ್ವಲಿಯೂರಿನ ಒಡೆಯ, ಇರುಗಮಯ್ಯನ ಮಗ ಸಿರಿಯಮಯ್ಯ ಎಂಬುವನು ಬೆಂಗಳೂರು ದಕ್ಷಿಣ ತಾಲ್ಲೂಕು ಅಗರದ ಬಳಿ ಮೂಡಣ ಕೆರೆಯೊಂದನ್ನು ಕಟ್ಟಿಸಿದ ವಿವರ ಹಾಗೂ ಅದಕ್ಕೂ ಮೊದಲು ಅಲ್ಲಿನ ಎರಡು ಕೆರೆಗಳಿಗೆ ತೂಬುಗಳನ್ನು ಇಡಿಸಿದ ವಿವರ ಶಾಸನೋಕ್ತವಾಗಿದೆ.[೫] ಇನ್ನೂ ಅನೇಕ ಕೆರೆಗಳು ಗಂಗರಸರ ಕಾಲದಲ್ಲಿ ರಚನೆಯಾಗಿರ

ಬಹುದಾದರೂ, ಶಾಸನೋಲ್ಲೇಖಗಳು ಅಲಭ್ಯ. ಕ್ರಿ.ಶ. ೧೦ನೇ ಶತಮಾನದ ಕೊನೆಕೊನೆಗೆ ಬೆಂಗಳೂರು ಜಿಲ್ಲಾ ಪ್ರದೇಶವು ಚೋಳರ ಆಳ್ವಿಕೆಗೆ ಒಳಪಟ್ಟಿತು. ಆಗಲೂ ಕೆರೆಗಳ ನಿರ್ಮಾಣ ಕಾರ್ಯ ಅವಿರತನಾಗಿ ಮುಂದು ವರೆದಿರುವುದು ಕಂಡು ಬರುತ್ತದೆ. ಸಣ್ಣೈನಾಡ ಗಾಮುಂಡನ ಮಗ ರಾಜರಾಜ ವೇಳಾನ್ ಎಂಬುವನು ಪಟ್ಟಂದೂರು ಕೆರೆಯನ್ನು ಕಟ್ಟಿಸಿದ ವಿವರ ಕ್ರಿ.ಶ. ೧೦೪೩ರ ಚೋಳ ರಾಜೇಂದ್ರನ ಕಾಡುಗೋಡಿಯ ಶಾಸನದಲ್ಲಿ ಬಂದಿದೆ.[೬] ಹನ್ನೆರಡನೆಯ ಶತಮಾನದ ವೇಳೆಗೆ ಹೊಯ್ಸಳರ ಆಳ್ವಿಕೆ ಬೆಂಗಳೂರು ಜಿಲ್ಲಾ ಪ್ರದೇಶದ ಮೇಲೆ ನೆಲೆಗೊಂಡಿತು. ಕೆರೆಕಟ್ಟೆಗಳ ರಚನಾ ಕಾರ್ಯ ನಿಲ್ಲಲಿಲ್ಲ. ಹೊಯ್ಸಳರ ಮಹಾಮಂಡಳೇಶ್ವರರಾದ ಕಜ್ಜಿಡ ಮಹಾ ರಾಯರೂ, ಪೂರ್ವಾದಿರಾಯರೂ ಆನೇಕಲ್ ತಾಲ್ಲೂಕು ಪ್ರದೇಶದಲ್ಲಿ ಅನೇಕ ಕೆರೆಕಟ್ಟೆಗಳ ನಿರ್ಮಾಣ ಕಾರ್ಯವನ್ನು ಕೈಗೊಂಡ ವಿವರ ಗಮನ ಸೆಳೆಯುತ್ತದೆ. ಕ್ರಿ.ಶ. ೧೨೬೫ರ ಹಂದೇನಹಳ್ಳಿ ಗ್ರಾಮದ ಶಾಸನವು[೭] ಮಂಡಲರಾಯ ತ್ರಿಭುವನಮಲ್ಲ ಕಜ್ಜಿಡಮಹಾರಾಯನಿಂದ ಆ ಗ್ರಾಮದ ಕೆರೆ ರಚನೆಗೊಂಡಿದ್ದನ್ನು ಉಲ್ಲೇಖಿಸುತ್ತದೆ. ತ್ರಿಭುವನಮಲ್ಲ ಪೂರ್ವಾದಿರಾಯ ವೆಲ್ಲಾಳ ಪೆರಮಾಳ್ ಎಂಬುವನಿಗಾಗಿ ಸೋಮಗಾವುಂಡನ ಮದ್ಯೆಯನ್ನನ ಮಗ ವೈರವನ್ ಎಂಬುವನು ಕೆರೆಯೊಂದನ್ನು ಕಟ್ಟಿಸಿದ ವಿವರ ಕ್ರಿ.ಶ. ೧೨೭೪ರ ಮಾಯಸಂದ್ರ ಗ್ರಾಮದ ಶಾಸನದಲ್ಲಿ[೮] ಬಂದಿದೆ. ಬೆಂಗಳೂರು ಪೂರ್ವ ತಾಲ್ಲೂಕಿನ ವಿಭೂತಿಪುರ ಗ್ರಾಮದ ಶಾಸನವು ಕ್ರಿ.ಶ. ೧೩೦೭ರಲ್ಲಿ ಮಾಸಂದಿನಾಡಿನ ಪಶ್ಚಿಮ ಭಾಗದ ಅಧಿಕಾರಿ ಸೆಂಬಿದೇವನ್, ನಾಡಗೌಡ ವಿಲ್ಲಗಾವುಂಡನ್ ಮುಂತಾದವರು ಸೇರಿ ಕಾಡನ್ನು ಕಡಿದು, ಮರಳನ್ನು ತೆಗೆದು, ಮಟ್ಟಮಾಡಿ ಕೆರೆಯೊಂದನ್ನು ರಚಿಸಿ, ಊರೊಂದನ್ನು ಕಟ್ಟಿ ಆ ಊರಿಗೆ ವಾಚ್ಚಿದೇವಪುರವೆಂದು ನಾಮಕರಣ ಮಾಡಿ, ವಾಚ್ಚಿದೇವ ಎಂಬುವ ಯತಿಗೆ ಮಡಪುರಂ ಅಂದರೆ ಪುರ ಧರ್ಮವಾಗಿ ದತ್ತಿಬಿಟ್ಟ ಸಂಗತಿಯನ್ನು[೯] ತಿಳಿಸುತ್ತದೆ. ಕ್ರಿ.ಶ. ೧೩೧೦ರಲ್ಲಿ ಹೊಯ್ಸಳ ವೀರಬಲ್ಲಾಳನ ಸಾಮಂತಾಧಿಪತಿ ಯಾಪ ನರಲೋಕ ಗಂಡ ಮಯಿಲೆಯನಾಯಕರ ಸೋದರ ಚೆಂನಯನಾಯಕನು ಮೂರು ಸಾವಿರ ಹೊನ್ನನಿಕ್ಕೆ 'ರಾಮಸಮುದ್ರ' ಎಂಬ ಕರೆಯನ್ನು ಕಟ್ಟಿಸಿದ ವಿವರ ಬೆಂಗಳೂರು ದಕ್ಷಿಣ ತಾಲ್ಲೂಕು ರಾಮಸಂದ್ರದ ಹೀರೇಕೆರೆ ಸಮೀಪದ ಶಾಸನದಿಂದ[೧೦] ತಿಳಿಯುತ್ತದೆ. ಇದೇ ವರ್ಷಕ್ಕೆ ಸೇರಿದ ಬೆಂಗಳೂರು ಪೂರ್ವ ತಾಲ್ಲೂಕಿನ ಕಲ್ಲುಕೆರೆಯ ಶಾಸನವು[೧೧] ಅತಿವೃಷ್ಟಿಯಾಗಿ ಕಲಕೆರೆ ಮತ್ತು ಕೆರಳಬೆನಹಳ್ಳಿಯ ಕೆರೆಗಳ ವಡವುಗಳು ಒಡೆದು ಹೋದ ಸಂದರ್ಭದಲ್ಲಿ ಕಲು ಕೆರೆಯ ದಾಮೋದರಸೆಟ್ಟಿ, ಆ ಎರಡೂ ಕೆರೆಗಳ ವಡವನ್ನು ಪುನರ್ ನಿರ್ಮಾಣ ಮಾಡಿಸುತ್ತಾನೆ. ಆಗ ನಾಡಿನ ದಂಡ ನಾಯಕರು, ನಾಡ ಸಮಸ್ತರು, ಪ್ರಜೆಗೌಡುಗಳು ಒಟ್ಟಿಗೆ ಸೇರಿ ಅವನಿಗೆ ಕಟ್ಟುಕೊಡುಗೆಯಾಗಿ ಹೊಲ, ಗದ್ದೆಗಳನ್ನು ಸರ್ವಮಾನ್ಯವಾಗಿ ದತ್ತಿ ನೀಡಿರುವುದನ್ನು ವಿವರಿಸುತ್ತದೆ.

ಈ ಮೇಲಿನ ಶಾಸನೋಕ್ತ ವಿವರಗಳನ್ನು ಗಮನಿಸಿದರೆ; ನಮ್ಮ ಪೂರ್ವಿಕರು ಕೆರೆ–ಕಟ್ಟೆಗಳ ರಚನೆಗೆ ಎಷ್ಟು ಮಹತ್ವವನ್ನು ನೀಡಿದ್ದರು ಎಂಬುದನ್ನು ತಿಳಿಯಬಹುದಾಗಿದೆ. ರಾಜ ಮಹಾರಾಜರಿಗಿಂತ ಹೆಚ್ಚಾಗಿ ಅವರ ಕೈಕೆಳಗಿನ ಮಹಾ ಮಂಡಳೇಶ್ವರರು, ಸಾಮಂತರು ಅಧಿಕಾರಿಗಳು, ನಾಡಗೌಡ, ಪ್ರಜೆ, ಸೆಟ್ಟಿ ವರ್ತಕರೇ ಮೊದಲಾದವರು ಪುಣ್ಯಾರ್ಜನೆಯ ನೆಪದಲ್ಲಿ ಕೆರೆಕಟ್ಟೆಗಳ ರಚನೆಯನ್ನು ಕೈಗೊಂಡಿರುವುದು ಗಮನ ಸೆಳೆಯುತ್ತದೆ. ಕೆರೆಕಟ್ಟೆಗಳ ರಚನಾ ಕಾರ್ಯ ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲೂ ನಡೆದಿರುವುದಕ್ಕೆ ಸಾಕ್ಷಿಯಾಗಿ ಆನೇಕಲ್ ತಾಲ್ಲೂಕು ಸಿಡಿಹೊಸಕೋಟೆಯ ಕ್ರಿ.ಶ. ೧೮೦೧ ರಲ್ಲಿ ಮರಿಗೌಡ ಮತ್ತು ರಾಮಶೆಟ್ಟಿ ಎಂಬುವರು ಕೆರೆಕುಂಟೆ ಮುಂತಾದವುಗಳನ್ನು ಮಾಡಿಸಿರುವುದಕ್ಕೆ ಪ್ರತಿಫಲವಾಗಿ ಹೊಲದ ಕೊಡುಗೆ ನೀಡಿರುವುದನ್ನು ಶಾಸನವೊಂದು[೧೨] ದಾಖಲಿಸುತ್ತದೆ. ಕ್ರಿ.ಶ.೧೮೩೪ರಲ್ಲಿ ಬೆಂಗಳೂರು ಉತ್ತರ ತಾಲೂಕಿನ ಮತ್ತಿಕೆರೆಯಲ್ಲಿ ನೆಲುವಲೂರು ವೀರಾಸಾಮಿಪಿಳ್ಳೆ ಎಂಬುವನು ಕೆರೆಯನ್ನು ಕಟ್ಟಿಸಿದ (ಬೆಂಗಳೂರು ೧೬೦).

ಕೇವಲ ಕೆರೆಯನ್ನು ಕಟ್ಟುವುದಷ್ಟೇ ಅಲ್ಲ, ಅದರಿಂದ ಕ್ರಮವಾಗಿ, ನೀರನ್ನು ಪಡೆದುಕೊಳ್ಳಲು ತೂಬುಗಳು ಕೂಡ ಅಷ್ಟೇ ಮುಖ್ಯ. ಅಂದರೆ ಕೆರೆಗಳ ರಚನೆಯೊಂದಿಗೆ ಸೂಕ್ತವಾದ ರೀತಿಯಲ್ಲಿ ತೂಬುಗಳನ್ನು ಕೆರೆಗಳ ಅವಿಭಾಜ್ಯ ಅಂಗವಾಗಿ ಯೋಜಿಸುವುದು ಬಹು ಮುಖ್ಯವಾದ ಅಂಶ. ಬಹುಶಃ ಆ ಕಾರಣದಿಂದಲೇ ಇರಬೇಕು ಕೆರೆಗಳ ರಚನೆಯೊಂದಿಗೆ ಅಥವಾ ಪ್ರತ್ಯೇಕವಾಗಿ ತೂಬುಗಳನ್ನು ಇಡಿಸಿದ ಬಗ್ಗೆ ಶಾಸನಗಳು ವಿವರಿಸುತ್ತವೆ. ಉದಾ: ಕ್ರಿ.ಶ. ೮೭೦ರ ಅಗರದ ಎರಡು ಕೆರೆಗಳಿಗೆ ತೂಬನ್ನಿರಿಸಿದ ವಿವರ ಈ ಮೇಲೆಯೇ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೩೧೬ರ ಆನೇಕಲ್ ತಾಲ್ಲೂಕು ಬಿದುರುಗೆರೆಯ ಶಾಸನ[೧೩] ಕೆರೆಯ ತೂಬಿನ ಮೇಲಿದ್ದು ತ್ರಿಭುವನಮಲ್ಲ ಪೂರ್ವಾದಿರಾಯ ಶಂಬಾಂಡ್ಯೆ ಎಂಬುವ ಪೂರ್ವರಾಯನ್ 'ಈ ಶಿವಸಮುತ್ತಿರ ಕೆರೆಯ ತೂಬನ್ನು ಮಾಡಿಸಿದ' ಎಂದು ತಿಳಿಸುತ್ತದೆ.

ಯಾವುದೇ ವಾಸ್ತು ರಚನೆಯು ಅನುಗಾಲವೂ ಉಳಿದು ಬರಬೇಕಾದರೆ ಅವುಗಳ ನಿರ್ವಹಣೆಯ ಕಾರ್ಯ ಕಾಲ ಕಾಲಕ್ಕೆ ನಡೆಯುತ್ತಿರಬೇಕು. ಅಂತೆಯೇ ಕೆರೆಗಳಾದರೂ ಹೊರತಲ್ಲ. ಅವುಗಳ ದುರಸ್ತಿ ಮತ್ತು ನಿರ್ವಹಣೆ ಕಾರ್ಯ ಬಹು ಮುಖ್ಯ ಎಂಬ ಅಂಶವನ್ನು ನಮ್ಮ ಪೂರ್ವಜರು

ಸರಿಯಾಗಿಯೇ ಮನಗಂಡಿದ್ದರು. ಹಾಗಾಗಿ ಕೆರೆಗಳ ರಚನೆಯೊಂದಿಗೆ ಅವುಗಳ ದುರಸ್ತಿ ಮತ್ತು ನಿರ್ವಹಣೆಯ ಬಗ್ಗೆಯು ಕ್ರಮ ತೆಗೆದುಕೊಂಡಿದ್ದರು. ಬಹುಮಟ್ಟಿಗೆ ಕೆರೆಯ ನಿರ್ವಹಣೆಯನ್ನು ಅದನ್ನು ಕಟ್ಟಿಸಿದವರ ಜವಾಬ್ದಾರಿಗೇ ವಹಿಸಿರುವುದು ಕಂಡುಬರುತ್ತದೆ. ಅಂತೆಯೇ ಅದಕ್ಕಾಗಿಯೇ ದತ್ತಿಯನ್ನು ನೀಡಿರುತ್ತಿದ್ದರು. ಅಲ್ಲದೆ ಅತಿವೃಷ್ಟಿ ಅಥವಾ ಬೇರೆ ಕಾರಣಗಳಿಂದ ಕೆರೆಯ ವಡವು ಕಿತ್ತುಹೋದರೆ ಅದರ ಜೀರ್ಣೋದ್ಧಾರ ಕಾರ್ಯವನ್ನು ನಿರ್ವಹಿಸಿದ ಬಗ್ಗೆ ಕಲ್ಲುಕೆರೆ-ಕೆರಳಬೆನಹಳ್ಳಿ ಕೆರೆಗಳ ಉಲ್ಲೇಖದ ಸಂದರ್ಭದಲ್ಲಿ ಗಮನಿಸಿದ್ದೇವೆ. ಕ್ರಿ.ಶ. ೧೩೦೨ ರಲ್ಲಿ ಆನೇಕಲ್ ತಾಲ್ಲೂಕು ಜಿಗಣಿ ಗ್ರಾಮದ ಕೆರೆ ಒಡೆದಿದ್ದಾಗ ಶಿರಿಕೋಶ ಮಾರಪ್ಪ ಎಂಬುವನು ಜೀರ್ಣೋದ್ಧಾರ ಮಾಡಿಸಿದ ವಿವರ ಶಾಸನೋಕ್ತವಾಗಿದೆ.[೧೪] ಆ ಕೆಲಸಕ್ಕಾಗಿ ನಾಡಿನ ನಾಯಕರು, ಗೌಡಪ್ರಜೆಗಳು ಹಲವು ಭೂಮಿ ಕಾಣಿಗಳನ್ನು ಆತನಿಗೆ ಕೊಡುಗೆಯಾಗಿ ನೀಡುರುವುದನ್ನು ಅದು ಉಲ್ಲೇಖಿಸುತ್ತದೆ.

ಕೆರೆಗಳನ್ನು ಕಟ್ಟಿಸುವುದನ್ನೇನೊ ಜನರು ಪುಣ್ಯಕಾರ್ಯವೆಂದು ಭಾವಿಸಿದ್ದರು; ಆದರೆ ಆ ಕಾರ್ಯವನ್ನು ಕೈಗೊಳ್ಳಲು ಅಪಾರ ಆರ್ಥಿಕ ಮತ್ತು ಮಾನವಸಂಪನ್ಮೂಲ ಅಗತ್ಯವಿದ್ದಿತು. ಅಂತಹ ಶಕ್ತಿ ಸಾಮರ್ಥ್ಯವನ್ನು ಹೊಂದಿರುವ ಸಂಘಟಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದವು. ಆಗ ಅವರು ಆ ಕೆರೆ-ಕಟ್ಟೆಯ ಕೆಳಗೆ ಒಂದು ನಿರ್ದಿಷ್ಟ ಪ್ರಮಾಣದ ಗದ್ದೆ ಭೂಮಿಗೆ ಹಕ್ಕುದಾರರಾಗುತ್ತಿದ್ದರು. ಅದನ್ನು 'ಕೆರೆಕಟ್ಟು ಕೊಡುಗೆ' ಎಂದು ಕರೆದಿರುವುದು ಕಂಡುಬರುತ್ತದೆ. ಇದನ್ನೇ 'ಬಿತ್ತುವಟ್ಟ' ಎಂದು ಪ್ರಾಚೀನ ಕಾಲದಲ್ಲಿ ಕರೆದಿರುವುದು. ಅದರ ಪ್ರಮಾಣ ಬಹುತೇಕ ಹತ್ತನೇ ಒಂದು ಭಾಗದಷ್ಟಾಗಿರುತ್ತಿತ್ತೆಂದು ತೋರುತ್ತದೆ. ಹಾಗಾಗಿ ಅದನ್ನೇ 'ದಶವಂದ' ಎಂದೂ ಕರೆದಿರುತ್ತಾರೆ. ಪ್ರಸ್ತುತ 'ಕೆರೆಕಟ್ಟು ಕೊಡುಗೆ'ಯನ್ನು ಪ್ರಸ್ತಾಪಿಸುವ ಶಾಸನಗಳು ಬೆಂಗಳೂರು ಪೂರ್ವ ತಾಲ್ಲೂಕಿನ ಹೂಡಿ,[೧೫] ಗುಬ್ಬಿಹೊಸಹಳ್ಳಿ,[೧೬] ಗಾಣಿಗರಹಳ್ಳಿ,[೧೭] ಆನೇಕಲ್ ತಾಲ್ಲೂಕಿನ ಸರ್ಜಾಪುರ[೧೮] ಸಿಡಿಹೊಸಕೋಟೆ[೧೯] ಮೊದಲಾದ ಸ್ಥಳಗಳ ಕೆರೆಗಳಿಗೆ ಸಂಬಂಧಿಸಿದಂತೆ ಲಭ್ಯವಾಗಿದೆ.

ಕೆರೆಕಟ್ಟೆಗಳ ಸಮೀಪದಲ್ಲಿ ಹಲವು ನಿರ್ದಿಷ್ಟ ದೇವತೆಗಳ ಶಿಲ್ಪಗಳು ಅಥವಾ ಅವುಗಳನ್ನೊಳಗೊಂಡ ಮಂಟಪ ಅಥವಾ ದೇವಾಲಯಗಳು ಅಸ್ತಿತ್ವ ಪಡೆದಿರುವುದನ್ನು ನಾವು ಅನೇಕ ಕಡೆ ಕಾಣಬಹುದಾಗಿದೆ. ಪ್ರಾಯಶಃ ಕೆರೆಯ ರಚನೆಯೊಂದಿಗೆ ಅದನ್ನು ನಿಯತವಾಗಿ ಪ್ರತಿಷ್ಠಾಪಿಸಬೇಕಾದ ಒಂದು ಸಂಪ್ರದಾಯ ಪ್ರಚಲಿತವಿದ್ದಿತೆಂದು ತೋರುತ್ತದೆ. ಅನೇಕ ಕೆರೆಕಟ್ಟೆಗಳ ಮೇಲೆ ದುರ್ಗಾದೇವಿಯ ಶಿಲ್ಪವಿರುವುದು ಸಾಮಾನ್ಯ. ಪ್ರಸ್ತುತ ಕ್ರಿ.ಶ. ೧೦೪೩ರ ಪಟ್ಟಂದೂರು ಕೆರೆಯ ಶಾಸನವು[೨೦] ಈ ಕೆರೆಯ ರಚನೆಯೊಂದಿಗೆ ದುರ್ಗಾ, ಕ್ಷೇತ್ರಪಾಲ ಮತ್ತು ಗಣಪತಿ ದೇವರುಗಳನ್ನು ಅಲ್ಲಿ ಸ್ಥಾಪಿಸಿದ ವಿವರವನ್ನು ನೀಡುತ್ತದೆ.

ನಾಡ ಶ್ರೀಮಂತರು ಅಥವಾ ನಾಡ ಒಡೆಯರು ತಮ್ಮ ಹಾಗೂ ತಮ್ಮ ಕುಟುಂಬದವರ ಇಲ್ಲವೆ ರಾಜನ ಶ್ರೇಯೋಭಿವೃದ್ಧಿಯನ್ನು ಬಯಸಿ ವಿಪ್ರರಿಗೆ ದಾನದತ್ತಿಗಳನ್ನು ನೀಡುವ ಸಂಪ್ರದಾಯ ಅನಾದಿ ಕಾಲದಿಂದ ಬಂದಿದೆ. ಹಾಗೇ ನೀಡುವಾಗ ಅನೇಕ ಕೆರೆಕಟ್ಟೆಗಳ ಕೆಳಗಿನ ಗದ್ದೆ ಭೂಮಿಯನ್ನು ದಾನ ನೀಡಿರುವುದುಂಟು. ಬೆಂಗಳೂರು ದಕ್ಷಿಣ ತಾಲ್ಲೂಕಿನ ಹೊಂಗಸಂದ್ರದ ಕ್ರಿ.ಶ. ೧೨೮೨ ಮತ್ತು ೧೨೯೪ರ ಶಾಸನಗಳಲ್ಲಿ[೨೧] ಉದಯ ಸಮುತ್ತಿರಂ, ಅನುಮಸಮುತ್ತಿರ ಮತ್ತು ಉಣಂಗಿಮಾರನ್‌ಕುಟ್ಟೈ ಕೆಳಗಿನ ಗದ್ದೆಭೂಮಿಯನ್ನು ಮಹಾಜನ-೨೮ ಜನ ಬ್ರಾಹ್ಮಣರಿಗೆ ದತ್ತಿ ನೀಡಿರುವ ಸಂಗತಿ ಬಂದಿದೆ. ಆನೇಕಲ್ ತಾಲ್ಲೂಕಿನ ಹಂದೇನಹಳ್ಳಿ ಗ್ರಾಮದ ಕ್ರಿ.ಶ. ೧೨೮೫ರ ಹೊಯ್ಸಳ ಮಹಾಮಂಡಲೇಶ್ವರ ಕಜ್ಜಿಡ ಮಹಾರಾಯನ ಶಾಸನವು[೨೨] ಆತನಿಂದ ರಚನೆಗೊಂಡ ಅಲ್ಲಿನ ಕೆರೆಯ ಕೆಳಗೆ ೧೨ ಜನ ಬ್ರಾಹ್ಮಣರಿಗೆ ದತ್ತಿ ನೀಡಿದ ವಿವರವನ್ನು ನೀಡುತ್ತದೆ.

ಈ ಜಿಲ್ಲಾ ಪರಿಸರದಲ್ಲಿ ಹೊಯ್ಸಳರ ಕಾಲದ ಶಾಸನಗಳಲ್ಲೇ ಹೆಚ್ಚಿನ ಕೆರೆಕಟ್ಟೆಗಳ ಉಲ್ಲೇಖಗಳು ಕಂಡು ಬಂದಿವೆ. ಕ್ರಿ.ಶ. ೧೧೧೦ರ ಶಾಸನವು[೨೩] ಬೇಗೂರಿನ ದೊಡ್ಡ ಕೆರೆಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೧೨ರ ಹೊಂಗ ಸಂದ್ರದ ಶಾಸನವು[೨೪] ಅನುಮಸಮುತ್ತಿರಂ, ಉಣಂಗಿ ಮಾರನ್‌ಕುಟ್ಟೈ, ಅದೇ ಸ್ಥಳದ ೧೨೯೪ರ ಶಾಸನವು[೨೫] ಉದಯ ಸಮುತ್ತಿರ; ಕ್ರಿ.ಶ.೧೨೮೮ರ ಶಾಸನವು[೨೬] ದೊಮ್ಮಲೂರಿನ ದೊಡ್ಡಕೆರೆ, ವಿಣ್ಣಮಂಗಲದ ಕೆರೆ, ಕೆಂಪಾಪುರ ಕೆರೆ (೧೩೦೬),[೨೭] ಚೊಕ್ಕಿಸೆಟ್ಟಿಕೆರೆ (೧೩೧೦),[೨೮] ಹೂಡಿ ಶಾಸನೋಕ್ತ ಮರಿಯ ಕೆರೆ, ಪಿಡಾರಿಕೆರೆ (೧೩೩೨)[೨೯] ಮುಖ್ಯವಾದುವಾಗಿವೆ.

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಶಾಸನಗಳಲ್ಲೂ ಅನೇಕ ಊರುಗಳ ಕೆರೆಗಳ ಉಲ್ಲೇಖಗಳು ಬಂದಿವೆ. ಆನೇಕಲ್ ತಾಲ್ಲೂಕಿನ ಬನ್ನೇರುಘಟ್ಟ (೧೪೯೬),[೩೦] ಮಾಯಸಂದ್ರ (೧೪೧೨),[೩೧] ಚಿಂತಲಮಡಿವಾಳ (೧೪೩೩),[೩೨] ಆನೇಕಲ್ (೧೬೧೪),[೩೩] ಸರ್ಜಾಪುರ (೧೬೫೦)[೩೪] ಶಾಸನಗಳಲ್ಲಿ ತತ್ತನಕೆರೆ, ಬೆಳಿವಾರಣದಕೆರೆ, ಹಿರಿಯಕೆರೆ, ದೊಡ್ಡಕೆರೆ ಎಂಬುವ ಉಲ್ಲೇಖಗಳು ಬಂದಿವೆ. ಬೆಂಗಳೂರು ಉತ್ತರ ತಾಲ್ಲೂಕಿನ ನಾಗಿಸೆಟ್ಟಿಹಳ್ಳಿ (೧೩೪೨),[೩೫] ಕೊಡಿಗೆಹಳ್ಳಿ (೧೪೩೧);[೩೬] ಗೊಂಗಡಿ ಪುರ (೧೪೯೫),[೩೭] ಹೆಸರುಘಟ್ಟ (೧೫೩೨),[೩೮] ಹೆಬ್ಬಾಳ (೧೬೭೬)[೩೯]ದ ಶಾಸನಗಳಲ್ಲಿ ಹಿರಿಯಕೆರೆ, ಹೊನ್ನ

ಸಮುದ್ರದಕೆರೆ, ಶಿವನಸಮುದ್ರದ ಕೆರೆ, ದೇವಸಮುದ್ರದ ಹಿರಿಯಕೆರೆ, ಕೆಂಪಬಸವಂಣನಕೆರೆ, ಹೆಬ್ಬಳಲ ಹಿರಿಯಕೆರೆ, ರೂಪಸಮುದ್ರ ಎಂಬುವ ಉಲ್ಲೇಖಗಳನ್ನು ಕಾಣಬಹುದಾಗಿದೆ. ಬೆಂಗಳೂರುಪೂರ್ವ ತಾಲ್ಲೂಕು ಜ್ಯೋತಿಪುರ (ಸು.೧೬೦೦),[೪೦] ಗುಬ್ಬಿ ಹೊಸಹಳ್ಳಿ (೧೬೪೪),[೪೧] ದೊಮ್ಮಲೂರು,[೪೨] ಸ್ಥಳಗಳಿಗೆ ಸೇರಿದ ಶಾಸನಗಳಲ್ಲಿ ಚೊಕ್ಕನಾಥಸ್ವಾಮಿ ಹಿರಿಯಕೆರೆ, ಬಾಳೆಯಕೆರೆ ಎಂಬಿವೆ ಮುಂತಾದ ಕೆರೆಗಳು ಉಲ್ಲೇಖ ಬಂದಿವೆ.

ಹತ್ತೊಂಬತ್ತನೆಯ ಶತಮಾನದ ಅವಧಿಯಲ್ಲೂ ಜಲಾಶ್ರಯ ತಾಣಗಳಾದ ಕೆರೆ, ಕಟ್ಟೆ, ಕೊಳಗಳ ರಚನಾಕಾರ್ಯ ಮುಂದುವರಿದಿರುವುದನ್ನು ಕ್ರಿ.ಶ. ೧೮೦೧ರ ಸಿಡಿಹೊಸಕೋಟೆ ಮತ್ತು ಕ್ರಿ.ಶ. ೧೮೧೮ರ ಬನ್ನೇರುಘಟ್ಟ, ಕ್ರಿ.ಶ. ೧೮೫೪ರ ಮತ್ತಿಕೆರೆ (ಬೆಂಗಳೂರು ೧೬೦) ಶಾಸನ[೪೩]ಗಳು ಬಿಂಬಿಸುತ್ತವೆ.

ನೀರನ್ನು ಸಂಗ್ರಹಿಸಿಟ್ಟುಕೊಂಡು ಅದನ್ನು ತನ್ನ ಅಗತ್ಯಕ್ಕೆ ತಕ್ಕ ಹಾಗೆ ಉಪಯೋಗವಾಗುವಂತೆ ಮಾಡಿಕೊಂಡ ಮಾನವನ ಪ್ರಯತ್ನದ ಫಲವಾಗಿ ಕೆರೆಕಟ್ಟೆಗಳ ರಚನಾಕಾರ್ಯವು ನಾಗರೀಕತೆಯ ಬೆಳವಣಿಗೆಯಲ್ಲಿ ಒಂದು ಬಹುಮುಖ್ಯ ಸೋಪಾನ ಅಥವಾ ಅಡಿಗಲ್ಲಾಗಿ ನಿಂತಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ, ಆದರೆ ಇಂದಿನ ಬೆಂಗಳೂರು ಜಿಲ್ಲಾ ಪ್ರದೇಶದಲ್ಲಿ ಶೇ.೨೦ರಷ್ಟು ಪ್ರದೇಶ ನಗರೀಕರಣಕ್ಕೆ ಈಡಾಗಿ ನೂರಾರು ಕೆರೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಪರಿಸರದ ವೈಪರೀತ್ಯಕ್ಕೂ ಕಾರಣವಾಗಿರುವುದು; ನೀರಿಗಾಗಿ ಪರಾವಲಂಬನೆಯು ಅಧಿಕಗೊಂಡು, ಅದರ ವ್ಯವಸ್ಥೆಯಲ್ಲಿ ತುಸು ಏರುಪೇರಾದರೂ ಉಂಟಾಗುವ ಪರಿಣಾಮಗಳು ಊಹಾತೀತ ನೆಲೆಯನ್ನು ತಲುಪಿವೆ ಎಂಬುದು ಮಾತ್ರ ಸತ್ಯ.

ಒಟ್ಟಾರೆ ಮಾನವ ಒಂದೆಡೆ ನೆಲೆನಿಲ್ಲಲು ಕಾರಣ ಕೆರೆ, ಕೆರೆಯೇ ಕಾರಣವಾಗಿ ಊರು ರಚನೆಗೊಂಡು ಪರಸ್ಪರ ಪೂರಕವಾಗಿ ಬೆಳೆದುಕೊಂಡು ಮಾನವನ ಜೀವನ ವಿಕಸನದಲ್ಲಿ ಕೆರೆಕಟ್ಟೆಗಳು ಪರೋಕ್ಷವಾಗಿ ಪ್ರಮುಖ ಸ್ಥಾನ ಪಡೆದಿದ್ದವು ಎಂಬುದು ಸರಿಯಷ್ಟೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಶಾಸನ ಸಂಗ್ರಹ** (ಸಂ.ಎ.ಎಂ. ಅಣ್ಣಿಗೇರಿ; ಆರ್. ಶೇಷಶಾಸ್ತ್ರಿ); ಶಾ.ಸಂ. ೨೬, ಬೆಂಗಳೂರು, ೧೯೮೨.
೨. **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ IX, ಬೆಂಗಳೂರು ೧೧೧, ಕ್ರಿ.ಶ. ೧೩೧೦.
೩. **ಶಾಸನ ಸಂಗ್ರಹ**, ಶಾ.ಸಂ. ೨೩.
೪. ಅದೇ., ಶಾ.ಸಂ. ೧೨.
೫. **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ IX, ಬೆಂಗಳೂರು ೭೯, ಸು. ಕ್ರಿ.ಶ. ೮೭೦
೬ ಅದೇ., ಬೆಂಗಳೂರು ೧೪೨.
೭. ಅದೇ., ಆನೇಕಲ್ ೪೧.
೮. ಅದೇ., ೪೫.
೯. ಅದೇ., ಬೆಂಗಳೂರು ೧೩೩.
೧೦. ಅದೇ., ೧೧೧.
೧೧. ಅದೇ., ಬೆಂಗಳೂರು ೧೬೬, ೧೬೭.
೧೨. ಅದೇ., ಆನೇಕಲ್ ೭೦.
೧೩. ಅದೇ., ೯೪.
೧೪. ಅದೇ., ೮೦.
೧೫. ಅದೇ., ಬೆಂಗಳೂರು ೬೧.
೧೬. ಅದೇ., (ಗುಬ್ಬಿ ಹೊಸಹಳ್ಳಿ)
೧೭. ಅದೇ., ೨೪.
೧೮. ಅದೇ., ಆನೇಕಲ್ ೭.
೧೯. ಅದೇ., ೭೦.
೨೦. ಅದೇ., ಬೆಂಗಳೂರು, ೧೪೨.
೨೧. ಅದೇ., ೯೯ ಮತ್ತು ೧೦೦.
೨೨. ಅದೇ., ಆನೇಕಲ್ ೪೧.
೨೩. ಅದೇ., ಬೆಂಗಳೂರು ೮೫ ಸಿ.
೨೪. ಅದೇ., ೯೯.
೨೫. ಅದೇ., ೧೦೦.
೨೬. ಅದೇ., ೧೦.
೨೭. ಅದೇ., ೭೬.
೨೮. ಅದೇ., ೧೬೬.
೨೯. ಅದೇ., ಆನೇಕಲ್ ೬೩.
೩೦. ಅದೇ., (ಪರಿಷ್ಕೃತ) ೮೮.
೩೧. ಅದೇ., ೪೪.
೩೨. ಅದೇ., ೩೫.
೩೩. ಅದೇ., ೪೭.
೩೪. ಅದೇ., ೭.
೩೫. ಅದೇ., ಬೆಂಗಳೂರು ೧೨೯.
೩೬. ಅದೇ., ೧೨೭.
೩೭. ಅದೇ., ೧೨೩.
೩೮. ಅದೇ., ನೆಲಮಂಗಲ ೩೧.
೩೯. ಅದೇ., ಬೆಂಗಳೂರು ೧೩೭.
೪೦. ಅದೇ., ಹೊಸಕೋಟೆ ೧೨೦.
೪೧. ಅದೇ., (ಗುಬ್ಬಿ ಹೊಸಹಳ್ಳಿ).
೪೨. ಅದೇ., ಬೆಂಗಳೂರು ೧೦.
೪೩. ಅದೇ., ಆನೇಕಲ್ ೭೦ ಮತ್ತು ೮೯.

ಡಾ. ಕರುಣಾ ವಿಜಯೇಂದ್ರ*

# ಶಾಸನಗಳ ಬಿರುದಾವಳಿಗಳಲ್ಲಿ ನೃತ್ಯದ ಉಲ್ಲೇಖಗಳು

ಸಾಂಸ್ಕೃತಿಕ ಇತಿಹಾಸ ಅಧ್ಯಯನದ ಹಿರಿಯ ವಿದ್ವಾಂಸರಾದ ಡಾ|| ಚಿದಾನಂದಮೂರ್ತಿಯವರ ಒಂದು ಹೇಳಿಕೆ ಹೀಗಿದೆ "ಹಿಂದಿನ ಕನ್ನಡ ಕವಿಗಳಾಗಲಿ, ಶಾಸನ ಕಾರರಾಗಲಿ ಬಹುಜ್ಞಾನಸಂಪನ್ನರಾಗಿದ್ದುದಲ್ಲದೆ, ಸಾಹಿತ್ಯ, ಸಂಗೀತ, ನರ್ತನ, ಚಿತ್ರಕಲೆಗಳಂತಹ ಲಲಿತಕಲೆಗಳಲ್ಲಿ ಅಭಿರುಚಿಯನ್ನು, ಪ್ರೌಢಿಮೆಯನ್ನು ಬೆಳೆಸಿಕೊಂಡವರಾಗಿದ್ದರು. ಅವಕಾಶ ಸಿಕ್ಕಾಗ ಹಿಂದಿನ ಕನ್ನಡ ಕವಿಗಳು ಸ್ವಲ್ಪ ಹೆಚ್ಚೇ ಎನ್ನಬಹುದಾದಷ್ಟು ಪ್ರಮಾಣದಲ್ಲಿ..... ವರ್ಣನೆಗಳನ್ನು ನೀಡಿದರೂ....... ಸಂಸ್ಕೃತಿಯ ವಿದ್ಯಾರ್ಥಿಗಳಿಗೆ ಆ ವರ್ಣನೆ ವಜ್ರದಗಣಿಗಳು ಎಂದು ಹೇಳಲೇಬೇಕಾಗಿದೆ."[೧] ಈ ಹೇಳಿಕೆಯು ಶಾಸನಗಳಲ್ಲಿನ ನೃತ್ಯ ವಿಷಯದ ಅಧ್ಯಯನಕ್ಕೆ ಬಹಳ ಅನ್ವಯವಾಗುತ್ತದೆ. ಶಾಸನಗಳಲ್ಲಿ ನೃತ್ಯ ವಿಷಯಕ್ಕೆ ಸಂಬಂಧಪಟ್ಟಂತೆ ವಿವರಗಳು ದೊರಕುವುದು ಬಹಳ ವಿರಳ. ಬಿರುದಾವಳಿಗಳಲ್ಲಿ ದಾನದ ವಿವರಗಳಲ್ಲಿ, ದಾನಿಗಳ ಉಲ್ಲೇಖಗಳಲ್ಲಿ, ಒಂದು ದೇವಾಲಯದ ಪ್ರಾಮುಖ್ಯತೆಯನ್ನು ವಿವರಿಸುವಾಗ ನೃತ್ಯದ ಉಲ್ಲೇಖಗಳು, ನೃತ್ಯದ ವಿಚಾರಗಳು ದೊರಕುತ್ತವೆ.

ಪ್ರಸ್ತುತ ಲೇಖನ ಶಾಸನಗಳ ಬಿರುದಾವಳಿಗಳಲ್ಲಿ ದೊರೆಯುವ ನೃತ್ಯದ ಪಾರಿಭಾಷಿಕ ಶಬ್ದಗಳ ವಿಷಯ ಸಂಗ್ರಹಣೆ ಹಾಗೂ ವಿವರಗಳನ್ನು ಒಳಗೊಂಡಿದೆ. ಕ್ರಿಶ. ೯ನೆಯ ಶತಮಾನದಿಂದ ೧೩ನೆಯ ಶತಮಾನದವರೆಗಿನ ಕೆಲವು ಪ್ರಮುಖ ಶಾಸನಗಳನ್ನು ಗಮನಿಸಲಾಗಿದೆ.

ಶಾಸನಗಳಲ್ಲಿ ಸಂಗೀತ ಮತ್ತು ನೃತ್ಯಗಳ ಪಾರಿಭಾಷಿಕ ಪದಗಳ ಸಂಗ್ರಹ ಮತ್ತು ವಿಶ್ಲೇಷಣೆಗಳನ್ನೊಳಗೊಂಡ ಅಧ್ಯಯನವನ್ನು ಇಬ್ಬರು ವಿದ್ವಾಂಸರ ಪುಸ್ತಕಗಳಲ್ಲಿ ಕಾಣಬಹುದು. ಡಾ|| ಎಂ. ಚಿದಾನಂದಮೂರ್ತಿ ಅವರ **ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತ ವಿಚಾರ** ಎಂಬ ಕಿರು ಪುಸ್ತಕ ಹಾಗೂ ಡಾ|| ಹೇಮಾಗೋವಿಂದರಾಜು ಅವರ **ಡ್ಯಾನ್ಸ್ ಟರ್‌ಮಿನಾಲಜೀಸ್ ಇನ್ ಸೌತ್‌ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್**. ಇನ್ನುಳಿದಂತೆ ಕೆಲವು ಹಿರಿಯ ವಿದ್ವಾಂಸರ ಬಿಡಿ ಲೇಖನಗಳು ಇದ್ದರೂ, ಸಂಶೋಧನಾತ್ಮಕ ವಿವರಣೆ ಮತ್ತು ವಿಶ್ಲೇಷಣೆ ಈ ಮೇಲಿನ ಎರಡು ಪುಸ್ತಕಗಳಲ್ಲಿ ಕಂಡುಬರುತ್ತದೆ.

**ಶಾಸನಗಳ ಬಿರುದಾವಳಿಗಳಲ್ಲಿ ನೃತ್ಯದ ಉಲ್ಲೇಖ :**

ಬಿರುದಾವಳಿಗಳಲ್ಲಿ ರಾಜವರ್ಗದವರು, ಸಾಮಂತರು, ದಂಡ ನಾಯಕರು ಇತರ ಶ್ರೀಮಂತ ವರ್ಗದವರು, ಕುಲೀನ ಸ್ತ್ರೀಯರು, ಲಲಿತಕಲೆ ಅದರಲ್ಲಿಯೂ ನೃತ್ಯ ಸಂಗೀತ ಕಲೆಗಳಲ್ಲಿ ಪಾಂಡಿತ್ಯ ಹೊಂದಿದ್ದ ಬಗ್ಗೆ ಬಹುವಿಧವಾಗಿ ವರ್ಣಿಸಿರುವುದನ್ನು ಈ ಮುಂದೆ ಗಮನಿಸಬಹುದು. ಬಿರುದಾವಳಿಗಳಲ್ಲಿ ನಟ ನರ್ತನ, ನರ್ತ್ತಕ, ನೃತ್ಯ, ಭರತ ಈ ಪದಗಳು ಕ್ರಿ.ಶ. ಸು. ೫೫೦ರಿಂದಲೇ ಕಂಡುಬರುತ್ತದೆ.

ಕ್ರಿ.ಶ. ಸು. ೬ನೆಯ ಶತಮಾನದ ಒಂದು ತಾಮ್ರ ಶಾಸನದಲ್ಲಿ 'ಪುನ್ನಾಟ' ರಾಜವಂಶದ ತಮರ ಕಶ್ಯಪ ಮನೆತನದ ರಾಷ್ಟ್ರವರ್ಮನನ್ನು ವರ್ಣಿಸುವಾಗ, 'ನಟನರ್ತ್ತನ ನಾದ್ಯುತ್ಸವ ವೇಪ್ರ' ಎಂಬ ಉಲ್ಲೇಖ ದೊರೆಯುತ್ತದೆ[೨]. ನಟನರ್ತನ ನಾದ್ಯುತ್ಸವ ವೇಪ್ರ' ಎಂಬುದು ನಟನೆ ನರ್ತನಗಳಲ್ಲದೆ, ವಿಶೇಷ ಉತ್ಸವಗಳಲ್ಲಿ ಭಾಗವಹಿಸುವಂತಹ ಕಲಾವಿದರಿಗೆ ಆಶ್ರಯದಾತನಾಗಿದ್ದನು ಎಂದೂ, ಉತ್ತಮ ಪ್ರಜಾಪಾಲಕನಾದ ರಾಜನ ಆಶ್ರಯದಲ್ಲಿ ಅವನ ಪ್ರಜೆಗಳು ಕಲಾವಿದರು ಸದಾ ಮಂಗಳಕಾರ್ಯಗಳಲ್ಲಿ ಹಾಗೂ ಉತ್ಸವಗಳಲ್ಲಿ ಬಹಳ ಉತ್ಸುಕರಾಗಿ ಸಂಭ್ರಮದಿಂದ ಪಾಲ್ಗೊಳ್ಳುತ್ತಿದ್ದರು ಎಂದು ಅರ್ಥೈಸಬಹುದು. (ಉತ್ಸವ ಎಂದಾಗ ಇಲ್ಲಿ ಅನೇಕ ರೀತಿಯ ಉತ್ಸವಗಳಾಗಿರಬಹುದು. ಪ್ರಾಚೀನ ಭಾರತದಲ್ಲಿ, ಕರ್ನಾಟಕದಲ್ಲಿ ಅನೇಕಾನೇಕ ರೀತಿಯ ಉತ್ಸವಗಳು ಮಾಸ, ತಿಥಿಗಳ, ನಕ್ಷತ್ರಗಳ ಹಿನ್ನೆಲೆಯಲ್ಲಿ ಆಚರಿಸಲ್ಪಡುತ್ತಿದ್ದವು. ಪ್ರತಿಯೊಂದು ಉತ್ಸವಕ್ಕೂ ತನ್ನದೇ ಆದ ವೈಶಿಷ್ಟ್ಯವಿತ್ತು. ಸಾಧಾರಣವಾಗಿ ಉತ್ಸವಗಳಲ್ಲಿ ಕಲಾವಿದ ವಿವಿಧ ರೀತಿಯ ವೇಷಭೂಷಣಗಳಿಂದ ತಮ್ಮನ್ನು ವಿಶೇಷವಾಗಿ ಅಲಂಕರಿಸಿಕೊಂಡು

* ಸಹ ಸಂಶೋಧಕರು, ಇಂದಿರಾಗಾಂಧಿ ರಾಷ್ಟ್ರೀಯ ಕಲಾ ಕೇಂದ್ರ, ದಕ್ಷಿಣ ಪ್ರಾದೇಶಿಕ ಕೇಂದ್ರ, ಜೆ.ಸಿ. ರಸ್ತೆ, ಬೆಂಗಳೂರು.


ಮೂರನೆಯ ಗುಹೆಯಲ್ಲಿನ ಪ್ರಸ್ತುತ ಸ್ಥಿತಿ ಇದರಂತೆ
ನಮಗೆ ಊಹೆ ಮತ್ತು ರೇಖೆಗಳು


ಅಜಂತಾದಲ್ಲಿ ಕಲಾಕೃತಿಯ ರೇಖೆಗಳು


ಕೈಗಳ ಭಂಗಿಗಳು


ಪಾದದ ರೇಖಾ ವಿನ್ಯಾಸ

ಕಮಲದ ಪಕಳೆ ಮತ್ತು ಮೀನಿನಾಕಾರದ ಕಣ್ಣುಗಳು



ನರ್ತಿಸುವ ಮೂಲಕ ಇತರರನ್ನು ಸಂಭ್ರಮದ ವಾತಾವರಣಕ್ಕೆ ಎಳೆದೂಯ್ಯುತ್ತಿದ್ದರು). ಒಟ್ಟಿನಲ್ಲಿ ರಾಜಾಶ್ರಯದಲ್ಲಿ ಅನೇಕ ವಿಧವಾದ ಮಂಗಳಕಾರ್ಯಗಳು, ಉತ್ಸವಗಳು ನಡೆಯುತ್ತಿದ್ದು ಕಲಾವಿದರು, ಕಲಾರಸಿಕರು, ಸಾಮಾನ್ಯ ಜನರು, ಸಂಭ್ರಮ ದಿಂದ ಪಾಲ್ಗೊಳ್ಳುತ್ತಿದ್ದುದರ ಸಂದರ್ಭವನ್ನು ಈ ಶಾಸನವು ಬಣ್ಣಿಸುತ್ತಿದ್ದು, ಈ ಎಲ್ಲ ಚಟುವಟಿಕೆಗಳಿಗೆ ರಾಜನು ಪೋಷಕ ನಾಗಿದ್ದನು ಎಂಬುದನ್ನು ಈ ಶಾಸನದ ಒಂದು ಸಾಲಿನಿಂದ ತಿಳಿದುಬರುತ್ತದೆ.

ಕ್ರಿ.ಶ. ೭೫೩– ೫೪ರ ಎರಡನೇ ಕೀರ್ತಿವರ್ಮನ ಒಂದು ಶಾಸನದಲ್ಲಿ ಚಲುಕ್ಯ ರಾಜವಂಶಾವಳಿಯನ್ನು ವಿವರಿಸುವಾಗ ವಿಕ್ರಮಾದಿತ್ಯನನ್ನು ಹೆಸರಿಸುವಾಗ 'ನಟಪಾದ ಯುಗ್ಮ' ಎಂಬುವ ಬಿರುದಿನಿಂದ ಅವನನ್ನು ಗುರುತಿಸ ಲಾಗಿದೆ[೩]. 'ನಟ ಪಾದಯುಗ್ಮ' ಪದವು 'ಅಭಿನಯ ಮತ್ತು ನೃತ್ಯ ಎರಡರಲ್ಲೂ ಪಾರಂಗತನಾಗಿ ಪ್ರಕಾಶಿಸುವವನು' ಎಂಬ ಅರ್ಥವಲ್ಲದೆ, ಶಾಸನದಲ್ಲಿ ವಿವರವಾಗಿ ವಾಕ್ಯಗಳನ್ನು ಗಮನಿಸಿ ದಾಗ [ಮುಖ್ಯವಾಗಿ, ೮, ೯ನೇ ಸಾಲು] 'ವಿಕ್ರಮಾದಿತ್ಯನು ತನ್ನ ಸಾಮಂತರನ್ನು ನಿಂತಲ್ಲಿ ನಿಲ್ಲಲು ಬಿಡದೆ, ಸದಾ ಅವರನ್ನು ತನಗೆ ಬೇಕಾದ ಹಾಗೆ ಕುಣಿಸುತ್ತಿದ್ದನು' ಎಂಬ ಅರ್ಥವೂ ದೊರೆಯುತ್ತದೆ. ಕೇವಲ ಮೂರು ಪದಗಳಲ್ಲಿ ವಿಕ್ರಮಾದಿತ್ಯನ ಪಾಂಡಿತ್ಯವನ್ನು, ಆತನ ಆಡಳಿತ ವೈಖರಿಯನ್ನು ತಿಳಿಸಿರುವ ಶಾಸನದ ಕವಿಯ ಕವಿತಾರಚನೆಯ ಶೈಲಿ ವಿಶೇಷವಾದದ್ದು,

ಎರಡನೇ ವಿಕ್ರಮಾದಿತ್ಯನ ಕಾಲಕ್ಕೆ, ನೃತ್ಯಕ್ಷೇತ್ರದ ವಿಚಾರಗಳನ್ನು ತಿಳಿಸುವಂತಹ ಎರಡು ಪ್ರಮುಖ ಶಾಸನಗಳು ದೊರೆಯುತ್ತವೆ. ಎರಡನೇ ವಿಕ್ರಮಾದಿತ್ಯನ ಕಾಂಚೀ ರಾಜ್ಯದ ಮೇಲಿನ ದಂಡಯಾತ್ರೆಯ ವಿಜಯದ ಸಂಕೇತವಾಗಿ ಆತನ ರಾಣಿ 'ಲೋಕಮಹಾದೇವಿ' ಪಟ್ಟದಕಲ್ಲಿನಲ್ಲಿ ವಿರೂಪಾಕ್ಷ' ದೇವಾಲಯವನ್ನು (ಕ್ರಿ.ಶ. ಸು. ೮ನೇ ಶತಮಾನ) ಕಟ್ಟಿಸಿ ಅನೇಕ ದಾನ ದತ್ತಿಗಳನ್ನು ನೀಡುತ್ತಾಳೆ. ನೃತ್ಯದ ಅಧ್ಯಯನಕ್ಕೆ ಈ ದೇವಾಲಯವು ಬಹುಮುಖ್ಯವಾಗಿದೆ. ಈ ದೇವಾಲಯ ದಲ್ಲಿ ೮ನೇ ಶತಮಾನದ ನೃತ್ಯಕಲಾವಿದ ನೊಬ್ಬನನ್ನು ಬಣ್ಣಿಸುವ ಎರಡು ಶಾಸನಗಳು ದೊರೆಯುತ್ತವೆ.[೪] 'ನಟಸೇವ್ಯ' ಬಿರುದಾಂಕಿತನಾದ ನಾಟ್ಯಾಚಾರ್ಯ ನಿದ್ದನೆಂದೂ, ಆತನ ಪಾಂಡಿತ್ಯದ ಮುಂದೆ ಇತರ ಕಲಾವಿದರ ಗರ್ವವೆಂಬ ಪರ್ವತವು 'ನಟಸೇವ್ಯನ' ಪಾಂಡಿತ್ಯದ ಮುಂದೆ ವಜ್ರಾಘಾತ ದಂತೆ ಮುರಿದು ಬೀಳುತ್ತಿತ್ತು ಎಂಬ ವರ್ಣನೆ ಇದ್ದರೆ, ಇನ್ನೊಂದು ಶಾಸನದಲ್ಲಿ ಈ ನಟಸೇವ್ಯನು ಭರತಾಗಮದಲ್ಲಿ ಪಂಡಿತನೆಂದೂ ಈತನ ಮುಂದೆ ಯಥೋಚಿತವಾಗಿ ನಾಟ್ಯಶಾಸ್ತ್ರದಲ್ಲಿ[೫] ವಿವರಿಸಿರುವ ನೃತ್ತ ಪ್ರಭೇದಗಳನ್ನು (ಅಗ್ರತಲ ಸಂಚರ ಪಾದಭೇದ) ಮಾಡಿ ತೋರಿಸಿದವರನ್ನು ಮಾತ್ರ ನರ್ತಕರೆಂದು ಪರಿಗಣಿಸಲು ಸಾಧ್ಯ ಎಂಬ ವಿವರಣೆ ದೊರಕುತ್ತದೆ.

'ನಟಸೇವ್ಯ' ಬಿರುದಾಂಕಿತನಾದ, ನಾಟ್ಯಾಚಾರ್ಯ ನಾದ ಈತನು ಒಬ್ಬ ನೃತ್ಯಮೀಮಾಂಸಕನಾಗಿರಬೇಕೆಂದೂ, ಈ ಕಾಲಕ್ಕೆ ನಾಟ್ಯಶಾಸ್ತ್ರಕ್ಕೆ ಸಮಾನಾಂತರವಾದ ಒಂದು ಗ್ರಂಥವನ್ನು ರಚಿಸಿರಬಹುದೆಂದು ವಿದ್ವಾಂಸರ ಅಭಿಮತ[೬]. ಪಟ್ಟದಕಲ್ಲಿನ ಈ ಎರಡು ಶಾಸನಗಳ ನಂತರ 'ನಾಟ್ಯಶಾಸ್ತ್ರದಲ್ಲಿ' ಪಾರಂಗತರು ಎಂದೂ, ಮುಖ್ಯವಾಗಿ ನೃತ್ಯದಲ್ಲಿ ಪ್ರಾವೀಣ್ಯತೆ ಯನ್ನು ಪಡೆದಿದ್ದರು ಎಂದು ತಿಳಿಸಲು ಶಾಸನಗಳಲ್ಲಿ 'ಭರತ' ಪದದ ಉಪಯೋಗ ಸಾಕಷ್ಟು ಬರುವುದನ್ನು ಗಮನಿಸ ಬಹುದು.

ಕ್ರಿ.ಶ. ೯೦೬ರ ಒಂದು ಜೈನ ತಾಮ್ರಶಾಸನದಲ್ಲಿ ಗಂಗ ದೊರೆ ನೀತಿಮಾರ್ಗ ಎರಡನೇ ಎರೆಯಂಗದೇವನನ್ನು 'ನೃತ್ಯಾದಿ ತತ್ ಶಿಕ್ಷೋ' ಎಂದೂ 'ಗೇಯ ವಾದ್ಯ ನೃತ್ಯ ವಿದ್ಯೋಪ ವಿದ್ಯಾ ಭರತೇನ' ಎಂದು ಉಲ್ಲೇಖಿಸಲಾಗಿದೆ.[೭]

ಕಲ್ಯಾಣ ಚಾಲುಕ್ಯ ದೊರೆ ಒಂದನೇ ಸೋಮೇಶ್ವರನಿಗೆ '.............ನಾಟಕ ಭರತ ಕಲಾನಿಪುಣ' ಎಂಬ ಬಿರುದು ಸೊರಬ ತಾಲೂಕಿನ ಒಂದು ಶಾಸನದಲ್ಲಿದ್ದರೆ[೮] ಹಾನುಗಲ್ಲು

ದಯಾಸಿಂಹನನ್ನು 'ಚಿತ್ರ ಪತ್ರ ಭರತಾಧ್ಯಾಯ ಅನೇಕ ಚತುಷ್ಷಷ್ಟಿ ಕಲಾಸಮಗ್ರ...' ಎಂದು ಮಂಜರಾಬಾದ್‌ನ ಒಂದು ಶಾಸನದಲ್ಲಿ ವರ್ಣನೆ ಇದೆ.[೯] ೬೪ ಕಲೆಗಳಲ್ಲಿ ಪರಿಪೂರ್ಣತೆ ಹೊಂದಲು ನೃತ್ಯದಲ್ಲಿ ಪರಿಣತಿ ಹೊಂದುವುದು ಅಂದರೆ ಭರತನ ನಾಟ್ಯಶಾಸ್ತ್ರದಲ್ಲಿ ಪಾರಂಗತರಾಗುವುದು ಅನಿವಾರ್ಯವಾಗಿತ್ತು ಎಂದು ಈ ಶಾಸನವು ಸೂಚಿಸುತ್ತದೆ ಎಂಬುದು ಡಾ॥ ಹೇಮಾ ಗೋವಿಂಧರಾಜು ಅವರ ಅಭಿಪ್ರಾಯವಾಗಿದೆ.[೧೦]

ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನನ್ನು ಶಿಕಾರಿಪುರದ ಒಂದು ಶಾಸನದಲ್ಲಿ '....... ತರ್ಕ ವ್ಯಾಕರಣ ಕಾವ್ಯನಾಟಕ ಭರತಾದ್ಯನೇಕ ಸಾಹಿತ್ಯ ವಿದ್ಯಾಪ್ರವೀಣ..' ಎಂಬುದಾಗಿಯೂ[೧೧] ಹಿರೇಕೇರೂರಿನ ಒಂದು ಶಾಸನದಲ್ಲಿ '... ತರ್ಕ್ಕವ್ಯಾಕರಣ ಪುರಾಣ ಕಾವ್ಯನಾಟಕ ಭರತ ವಾತ್ಸಾಯನಾದ ವಿದ್ಯಾಸಾರ...'[೧೨] ಎಂಬ ಉಲ್ಲೇಖವು ದೊರೆಯುತ್ತದೆ.

ಬಿರುದಾವಳಿಗಳಲ್ಲಿ ಉತ್ಪ್ರೇಕ್ಷೆ ಕಂಡು ಬಂದರೂ ಉಲ್ಲೇಖಿತ ಕಲೆಗಳಲ್ಲಿ ಅವರಿಗೆ ತಕ್ಕಮಟ್ಟಿನ ಜ್ಞಾನಾರ್ಜನೆ ಇರುತ್ತಿತ್ತು ಎಂದು ಮೇಲಿನ ಎರಡು ಶಾಸನಗಳಿಂದ ತಿಳಿದು ಬರುತ್ತದೆ.

ಕ್ರಿ.ಶ. ೧೨ನೇ ಶತಮಾನದ ಶಾಸನಗಳಲ್ಲಿ ಹೊಯ್ಸಳ ದೊರೆಗಳ ಬಿರುದಾವಳಿಗಳಲ್ಲಿ '...ಸಂಗೀತ ಪ್ರಸಂಗ ಭಂಗೀ ಸಂಗತ ಚತುರ ಭರತನುಂ.....'[೧೩]

'.... ಸುವಿಹಿತ ಸಂಗೀತ ಗೋಷ್ಟೀ ಭರತಂ ವಾತ್ಸಾಯನಾದಿ ಸಕಳಕಳಾಪ್ರೌಢಿ ಪ್ರಕಾಶನಿರತಂ...'[೧೪] ಎಂದೂ '... ಭರತಾಗಮ ತರ್ಕ್ಕ ವ್ಯಾಕರಣೋಪನಿಷತ್ಪುರಾಣ ನಾಟಕ ಕಾವ್ಯೋತ್ಕರ ವಿದ್ವಜ್ಜನನುತ ನೆನಿಪ...'[೧೫] ಎಂಬ ವಿವಿಧ ರೀತಿಯ ವರ್ಣನೆಗಳು ದೊರಕುತ್ತದೆ.

ಶ್ರವಣಬೆಳಗೊಳದ ಶಾಸನದಲ್ಲಿ ಪ್ರಭಾಚಂದ್ರ ದೇವ ಎಂಬುವನನ್ನು ..'ಸುಕರ ಕವಿನಿವಾಸಂ, ಭಾರತೀನೃತ್ಯ ರಂಗಂ....' ಎಂದು ಬಣ್ಣಿಸಲಾಗಿದೆ.[೧೬]

ಕ್ರಿ.ಶ. ೧೦೬೫ರ ಒಂದು ಶಾಸನದಲ್ಲಿ 'ಗೀತವಾದ್ಯ ನ್ರಿತ್ಯವೇಣುವೀಣಾರವ ಸಂಗತ[೧೭] ಎಂಬ ಸಾಲು ಬಹು ವಿಶೇಷದ್ದಾಗಿದೆ. ಗೀತ ಅಂದರೆ ಸಂಗೀತದಲ್ಲಿ, ವಿವಿಧ ವಾದ್ಯಗಳು ಅಂದರೆ ಆತೋದ್ಯ, ಅವನದ್ಧ, ಸುಶಿರ, ತಂತೀವಾದ್ಯಗಳಲ್ಲಿ, ನೃತ್ಯದಲ್ಲಿ ಅಭಿರುಚಿಯನ್ನು ಹೊಂದಿದ್ದವನು ಎಂಬ ವಿಶೇಷ ಉಲ್ಲೇಖ ದೊರತಿದೆ. ಇದರಿಂದ ಪ್ರದರ್ಶನ ಕಲೆಗಳಾದ ಸಂಗೀತ, ವಿವಿಧ ವಾದ್ಯಗಳಲ್ಲಿ ಹಾಗೂ ನೃತ್ಯ ಇವುಗಳಿಗೆ ಸಮಾನ ರೀತಿಯಾದ ಮನ್ನಣೆ ಇದ್ದದ್ದು, ಪ್ರದರ್ಶನ ಕಲೆಗಳಾದ ಇವುಗಳನ್ನು ತಕ್ಕಮಟ್ಟಿಗೆ ವ್ಯಾಸಂಗವನ್ನು ನಡೆಸಿರುತ್ತಿದ್ದರು ಎಂದು ತಿಳಿಯುಬಹುದು. ಹಾಗೆಯೇ 'ಕವಿ ಗಮಕ ವಾದಿ ವಾಗ್ಮಿ ವಾಗ್ಜೀವಕ ನಟ ನರ್ತ್ತನ ನರ್ತ್ತಕ ಗಾಯಕ ವಾದಕ ತಪೋಧನಾಧನ ಬ್ರಾಹ್ಮಣ ಪರಿವಾರ ಪರಿಪೋಷಣ ...[೧೮] ಸಂಗೀತ ಪ್ರಸಂಗ ಭಂಗೀ ಸಂಗತ ಚತುರ ಭರತನುಂ, ತರ್ಕ್ಕವಿದ್ಯಾ ವಿಸ್ತಾರ ವಿಚಾರ ತನುಂ...[೧೯]; ಸೌಜನ್ಯ ಮೂರ್ತಿ ಲೋಕೈಕ ಕೀರ್ತಿ ಗೀತ ನೃತ್ಯ ವಾದ್ಯ (ಆ)ತೋದ್ಯ ವಿನೋದ...[೨೦] ಎಂದೂ. 'ಮಧುರ ರಂಗ, ನೃತ್ಯರಂಗ...[೨೧] ಎಂಬ ವೈವಿಧ್ಯಮಯವಾದ ವರ್ಣನೆಗಳು ಹೊಯ್ಸಳರ ಕಾಲದ ರಾಜರ, ಸಾಮಂತರ ಬಿರುದಾವಳಿಗಳಲ್ಲಿ ಕಾಣುತ್ತೇವೆ.

ತಾವರೆಗೆರೆ ನಕರೇಶ್ವರ ದೇವಾಚಾರ್ಯ್ಯನಾದ ಸೋಮೇಶ್ವರ ಪಂಡಿತನನ್ನು '... ಸರ್ವ ಸಿದ್ಧಾಂತ ತರ್ಕ್ಕ ವ್ಯಾಕರಣ ಕಾವ್ಯನಾಟಕ ಭರತಾದ್ಯನೇಕ ಸಾಹಿತ್ಯವಿದ್ಯಾ ಪ್ರವೀಣರುಮಪ್ಪ' ಎಂದು ಬಣ್ಣಿಸಲಾಗಿದೆ.[೨೨]

ಸವದತ್ತಿಯ ಒಂದು ಶಾಸನವು ತ್ರೈಲೋಕ್ಯಮಲ್ಲ ಬಿರುದಾಂಕಿತ ಕಲ್ಯಾಣ ಚಾಲುಕ್ಯದೊರೆ ಆರನೇ ವಿಕ್ರಮಾದಿತ್ಯನನ್ನು ವಾದ್ಯವಿದ್ಯೆಯಲ್ಲಿ ಅಗ್ರಗಣ್ಯನೆಂದೂ, ನೃತ್ಯ, ಸಂಗೀತಾದಿ ವಿದ್ಯೆಗಳಲ್ಲಿ ಕಲಾನೈಪುಣ್ಯವನ್ನು ಪಡೆದವ ನೆಂದೂ, ವಿವಿಧ ವಿದ್ಯೆಗಳಲ್ಲಿ ಪಾಂಡಿತ್ಯವನ್ನು ಪಡೆದು ರಾರಾಜಿಸುವ ಸಾರ್ವಭೌಮನೆಂದು ವರ್ಣಿಸಿದೆ.[೨೩]

ಶಾಸನಗಳ ಬಿರುದಾವಳಿಗಳಲ್ಲಿ ನೃತ್ಯ ಸಂಗೀತ ವಾದ್ಯಗಳ ಉಲ್ಲೇಖವಾಗಿದೆ ಎಂಬ ಕಾರಣದಿಂದಲೇ ವರ್ಣನೆಗೊಳಗಾದ ರಾಜ/ವ್ಯಕ್ತಿಗೆ ಆ ವಿದ್ಯೆಯಲ್ಲಿ ಸಂಪೂರ್ಣವಾದ ಪಾಂಡಿತ್ಯ ಇತ್ತು ಎಂದು ನಂಬಲಾಗದಿದ್ದರೂ ಒಂದೇ ಕಾಲದ ವಿವಿಧ ಶಾಸನಗಳಲ್ಲಿ ಅದೇ ವ್ಯಕ್ತಿಯನ್ನು ಶಾಸನಗಳು ಬಣ್ಣಿಸುವಾಗ ಒಂದೆರಡು ಪದಗಳ ವ್ಯತ್ಯಾಸದಲ್ಲಿ ಅದೇ ಅರ್ಥಕೊಡುವ ಸಾಲುಗಳು ಕಂಡುಬರುತ್ತವೆ. ಇಂತಹ ಸಂದರ್ಭದಲ್ಲಿ ವ್ಯಕ್ತಿಗಳಿಗೆ ನಾಟ್ಯಶಾಸ್ತ್ರದಲ್ಲಿ ಸಂಪೂರ್ಣ ಪಾಂಡಿತ್ಯ ಇಲ್ಲದಿದ್ದರೂ ಸಂಬಂಧಿತ ವಿಷಯದಲ್ಲಿ ತಕ್ಕಮಟ್ಟಿನ ಜ್ಞಾನಾರ್ಜನೆ ಇರುತಿತ್ತು ಎಂಬುದರಲ್ಲಿ ಸಂಶಯವಿಲ್ಲ.

ರಾಜರನ್ನು, ದಂಡನಾಯಕರನ್ನು ಆಚಾರ್ಯ ಪಂಡಿತರನ್ನಲ್ಲದೆ, ರಾಣಿಯರನ್ನು ಸ್ತ್ರೀವರ್ಗದ ಕಲಾವಿದೆ ಯರನ್ನು ವರ್ಣಿಸಿ ದಾಖಲಿಸಿರುವ ನಿದರ್ಶನಗಳು ದೊರೆಯುತ್ತವೆ.

ಕಲ್ಯಾಣ ಚಾಲುಕ್ಯ ದೊರೆ ರಾಜ ತ್ರಿಭುಜವನಮಲ್ಲ ದೇವನ ಪತ್ನಿ ಕೇತಲದೇವಿಯನ್ನು 'ಶ್ರೀ ಮದಭಿನವ ಸರಸ್ವತಿ ಹಿರಿಯ ಕೇತಲದೇವಿಯರು' ಎಂದು ಬಣ್ಣಿಸಲಾಗಿದೆ.[೨೪] 'ಶ್ರೀಮದಭಿನವ ಸರಸ್ವತಿ' ಎಂಬ ಬಿರುದು ನೃತ್ಯ ಅಭಿನಯ ಮತ್ತು ನಾಟ್ಯದಲ್ಲಿ ಉತ್ಕೃಷ್ಟವಾದ ಪಾಂಡಿತ್ಯವನ್ನು

ಹೊಂದಿದವರಿಗೆ ಮಾತ್ರ ಸಲ್ಲುವಂತಹ ಬಿರುದಾಗಿತ್ತು (ಇಂದಿಗೂ ಈ ರೀತಿಯ ಬಿರುದಿಗೆ ಅದೇ ಮಾನ್ಯತೆ ಇದೆ.) ಅನೇಕ ಶಾಸನಗಳಲ್ಲಿ ಕೇತಲದೇವಿಯರು ದೇವಾಲಯಗಳನ್ನು ನಿರ್ಮಿಸಿ, ಅಲ್ಲಿನ ರಂಗಭೋಗಕ್ಕಾಗಿ, ಕಲಾವಿದರಿಗಾಗಿ ದಾನದತ್ತಿ ನೀಡಿರುವ ನಿದರ್ಶನ ದೊರೆಯುತ್ತದೆ.

ಪೆರ್ಮ್ಮಾಡಿದೇವನ ಪತ್ನಿ ಬಾಚಲದೇವಿಯರನ್ನು ಒಂದು ಶಾಸನದಲ್ಲಿ 'ಅರಿಬಿರುದ ಪಾತ್ರ ಜಗದಳೆ' ಎಂದೂ ನೃತ್ಯವಿದ್ಯಾ ಪ್ರಭಾವ ಪ್ರಭೂತ ನಿರ್ಮ್ಮಳ ಯಶೋ ವಿಭಾಸಿನಿ..ಸ್ಥಾನಪಾತ್ರ ಮುಖನಣ್ದನೆ। ಪ್ರತಿ ಪಕ್ಷಗಾಯಕಾಗಾನ ಎಂದೂ... ಚತುರವಿದ್ಯಾ ವಿನೋದೆ ಎಂದು ಬಹುವಿಧವಾಗಿ ವರ್ಣಿಸಲಾಗಿದೆ. ಅವಳ ಕೀರ್ತಿರಾಗವನ್ನು ಹಾಡುತ್ತಿದ್ದ ಕಲಾವಿದೆಯರಿಗೆ ದಣಿವು ಎಂಬುದು ತಿಳಿದಿರಲಿಲ್ಲವೆಂಬ ಉತ್ಪ್ರೇಕ್ಷೆಯ ವಿವರಣೆಯನ್ನು ಕಾಣುತ್ತೇವೆ. ಒಟ್ಟಿನಲ್ಲಿ ಬಾಚಲದೇವಿ ಸಂಗೀತ ನೃತ್ಯಕಲೆಗಳಲ್ಲಿ ಒಳ್ಳೆಯ ಪ್ರಖ್ಯಾತಿಯನ್ನು ಹೊಂದಿದ್ದವಳೆಂದೂ ಆಕೆಗೆ 'ಪಾತ್ರಜಗದಳೆ' ಎಂಬ ಬಿರುದು ಇರುವುದೂ ಆಲಹಳ್ಳಿಯ ಶಾಸನದಿಂದ ತಿಳಿದುಬರುತ್ತದೆ.[೨೫] ಶಿಕಾರಿಪುರದ ಒಂದು ಶಾಸನದಲ್ಲಿ "ಸಂಗೀತ ಪ್ರಸಂಗ ವಿವೇಕ ಚೂಡಾಮಣಿ' ಪೊಚ್ಚ ಪೊಸ ದೇಸಿ ಮಾರ್ಗ್ಗದೊಳಚ್ಚರಿ ರಸಭಾವದೋಜು ಬಹುವಿಧಗತಿ ಯೊಳ್ ... ಗದೂಳ್‌ನಚ್ಚಣಿ ನಿರ್ಬ್ಬಾಣ ಪಾತ್ರಮೆನಿಸಿದ ಪಾತ್ರದ ಗತಿಯೋಳ್ ವಳನ ವರ್ತ್ತನ..." ಎಂಬ ಸಾಲುಗಳು ದೊರಕುತ್ತದೆ.[೨೬] ಶಾಸನವು ಬಹಳ ತ್ರುಟಿತವಾಗಿದ್ದರೂ ನೃತ್ಯಕ್ಕೆ ಆ ಕಾಲದ ನೃತ್ಯಶೈಲಿಯ ಬಗ್ಗೆ ಅನೇಕ ಮಾಹಿತಿಗಳನ್ನೊದ ಗಿಸುವ ಬಹುಮುಖ್ಯ ಶಾಸನವಾಗಿದೆ. ಶಾಸನದ ಮೊದಲ ಸಾಲು ಕಲ್ಯಾಣ ಚಾಲುಕ್ಯ ದೊರೆ ಒಂದನೇ ಸೋಮೇಶ್ವರನ ಪತ್ನಿ ಲಚ್ಚಲದೇವಿಗೆ ಇದ್ದ ಬಿರುದನ್ನು ಬಣ್ಣಿಸುತ್ತದೆ. ಆ ನಂತರದ ಸಾಲಿನಲ್ಲಿ ಉಕ್ತವಾಗಿರುವ ವಿಷಯ ಕ್ರಿ.ಶ. ೧೧ನೇ ಶತಮಾನದ ಹೊತ್ತಿಗೆ ನೃತ್ಯಕ್ಷೇತ್ರದಲ್ಲಿ ನರ್ತನ ಶೈಲಿಯಲ್ಲಿ ಕಂಡು ಬರುತ್ತಿದ್ದ ಹೊಸ ಅವಿಷ್ಕಾರಗಳ ಮಾಹಿತಿಯನ್ನು ಒದಗಿಸುತ್ತಿದೆ.

ಕರ್ನಾಟಕದ ನೃತ್ಯಶೈಲಿಯನ್ನು ಶಿಲ್ಪಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಿ ಗಮನಿಸಿದಾಗ ಕ್ರಿ.ಶ. ಸುಮಾರು ೯ನೇ ಶತಮಾನದವರೆಗೂ ಸ್ಪಷ್ಟವಾಗಿ ನಾಟ್ಯಶಾಸ್ತ್ರದ ಹಿನ್ನೆಲೆಯಲ್ಲಿಯೇ ಬೆಳೆದು ಬಂದ ನೃತ್ಯ ಪದ್ಧತಿಯು ೯ನೇ ಶತಮಾನದ ಕೊನೆಯ ಹೊತ್ತಿಗೆ ನಾಟ್ಯಶಾಸ್ತ್ರದ ಚೌಕಟ್ಟಿನಿಂದ ಹೊರಬರುತ್ತ ಅಂದರೆ ಮಾರ್ಗಪದ್ಧತಿಯಿಂದ ಹೊರಬರುತ್ತ ಹೊಸ ಅವಿಷ್ಕಾರಗಳಿಗೆ ತನ್ನನ್ನು ತೆರೆದುಕೊಂಡು ಪ್ರಾಂತೀಯ ಶೈಲಿಗಳ ಬೆಳವಣಿಗೆಗೆ ಒತ್ತಾಸೆಯಾಗಿ ದೇಸಿಪದ್ಧತಿ, ದೇಸೀನೃತ್ಯಗಳ ಪ್ರಚಲಿತಕ್ಕೆ ಪರ್ವಕಾಲವಾಗಿ ಪರಿಣಮಿಸಿತು. ಕ್ರಿ.ಶ. ಸು. ೧೧ ಹಾಗೂ ೧೨ನೇ ಶತಮಾನದ ಹೊತ್ತಿಗೆ ಸ್ಪಷ್ಟವಾಗಿ ನಾಟ್ಯಶಾಸ್ತ್ರಕ್ಕಿಂತ ಭಿನ್ನವಾಗಿ, ಹೊಸ ಶೈಲಿಗಳು ರೂಢಿಗೆ ಬಂದಿದ್ದನ್ನು ಶಾಸ್ತ್ರಗ್ರಂಥಗಳು, ಸಾಹಿತ್ಯಕೃತಿಗಳು, ಶಿಲ್ಪಗಳು ಸಾಕ್ಷಿಯಾಗಿ ಪ್ರಚುರ ಪಡಿಸುತ್ತವೆ. ಈ ಮನ್ವಂತರದ ಪರ್ವಕಾಲದಲ್ಲಿಯೇ, ಹೊರಡಿಸಲಾಗಿರುವ ಈ ಶಾಸನದ ದಾಖಲೆ ಬಹಳ ಸ್ಪಷ್ಟವಾಗಿ ಹೊಸದಾಗಿ ಅಸ್ತಿತ್ವಕ್ಕೆ ಬರುತ್ತಿರುವ ದೇಸೀ ಪದ್ಧತಿಯೊಡನೆ ಮಾರ್ಗ ಪದ್ಧತಿಯ (ನಾಟ್ಯಶಾಸ್ತ್ರದ ಪ್ರಕಾರಗಳು)ನ್ನು ಅಳವಡಿಸಿಕೊಂಡು ರಸ, ಭಾವಗಳನ್ನು ಬಹಳ ಲೀಲಾಜಾಲವಾಗಿ ಅನೇಕ ವಿಧವಾಗಿ ಪ್ರಸ್ತುತ ಪಡಿಸುತ್ತಾ ಎಲ್ಲರಲ್ಲಿ ಉತ್ತಮವಾದ ಹಾಗೂ ಲಕ್ಷಣನರ್ತ್ತಕಿ ಎಂದು ಹೆಸರು ಪಡೆದ ಪಾತ್ರದವಳಾದ, ಅಂದರೆ ಒಬ್ಬ ಪ್ರಬುದ್ಧ ನರ್ತಕಿಯ ಸ್ಥಾನದಲ್ಲಿರುವ ಲಚ್ಚಲದೇವಿಯು ಅನೇಕ ಗತಿಭೇದಗಳ ಸಹಾಯದಿಂದ 'ವಲನ, ವರ್ತ್ತನ'ಗಳೆಂಬ ವಿವಿಧ ಚೌರಿಭೇದಗಳನ್ನು (ಅನೇಕರೀತಿ ಬಾಗೂ, ತಿರುಗುವಿಕೆಗಳನ್ನೊಳಗೊಂಡ ನೃತ್ತ ಪ್ರಭೇದ) ನರ್ತಿಸಿದಳು ಎಂಬ ವಿಷಯವು ಈ ಶಾಸನದಲ್ಲಿದೆ.

ಸಾಧಾರಣವಾಗಿ ನೃತ್ಯದಲ್ಲಿ ಒಂದು ಪ್ರೌಢಿಮೆಯನ್ನು ಬೆಳೆಸಿಕೊಂಡು ಸಾಕಷ್ಟು ವರ್ಷಗಳಿಂದ ನರ್ತನದಲ್ಲಿ ಪಳಗಿದ ಪ್ರಬುದ್ಧ ನರ್ತಕಿಯರು ಅನೇಕ ಹೊಸ ಹೊಸ ಅವಿಷ್ಕಾರಗಳನ್ನು ಮಾರ್ಗದ ಚೌಕಟ್ಟಿನಲ್ಲಿ ಕಾಲದ ಮಿತಿಯಲ್ಲಿ ಹೊರತರುತ್ತಾರೆ. ಅದೇ ರೀತಿಯಾಗಿ ಲಚ್ಚಲದೇವಿಯ ಅದೇ ಹೊಸದಾಗಿ ನೃತ್ಯಕ್ಷೇತ್ರಕ್ಕೆ ಪರಿಚಯಿಸಲ್ಪಡುತ್ತಿದ್ದ **'ದೇಸೀಶೈಲಿಯ'** ನೃತ್ಯವನ್ನು ಮಾರ್ಗದ ಅನುಸಾರವಾಗಿ ಮಾಡಿರುವ ಸಾಧ್ಯತೆಗಳಿವೆ. ಇಲ್ಲಿ ಇನ್ನೊಂದು ಮುಖ್ಯವಾದ ಅಂಶವೆಂದರೆ ದೇಸೀಶೈಲಿಯ ನೃತ್ಯವನ್ನು ಮಾಡಲು ವಲನ, ವರ್ತನಗಳೆಂಬ ಚೌರಿಭೇದಗಳ ಅವಶ್ಯಕತೆ ಹೆಚ್ಚಿರುತ್ತವೆ. [ನಿರ್ದಿಷ್ಟ ಗತಿಯಲ್ಲಿ ನೆಗೆಯುವುದು. ತಿರುಗುವುದು ದೇಸೀಶೈಲಿಯ ವೈಶಿಷ್ಟ್ಯ] ಈ ರೀತಿಯಾದ ನರ್ತನವನ್ನು ಬಹಳ ಸೊಗಸಾಗಿ ಲಚ್ಚಲದೇವಿಯು ಮಾಡಿರುವ, ಹೊಸಶೈಲಿಗೆ ತನ್ನನ್ನು ತಾನು ಒಗ್ಗಿಸಿಕೊಂಡಿರುವ ಸಾಧ್ಯತೆಗಳನ್ನು ಈ ಶಾಸನವು ತಿಳಿಸುತ್ತಿದೆ. ಮುಂದೆ ಎರಡನೇ ಸೋಮೇಶ್ವರನು ಮಾನಸೋಲ್ಲಾಸ–ಅಭಿಲಾಷಿತಾರ್ಥ ಚಿಂತಾಮಣಿ ಎಂಬ ಶಾಸ್ತ್ರಗ್ರಂಥವನ್ನು ರಚಿಸಿದ್ದು, ಅದರಲ್ಲಿ ಹೆಚ್ಚಾಗಿ ದೇಸೀಪದ್ಧತಿಯ ವಿವರಗಳು ದೊರಕುವುದು ಬಹಳ ಗಮನಾರ್ಹವಾದ ಅಂಶವಾಗಿದೆ. ಕಲ್ಯಾಣ ಚಾಲುಕ್ಯರ ನಂತರ ಹೊಯ್ಸಳ ವಂಶದ ಶಿಲ್ಪಗಳನ್ನು ಗಮನಿಸಿದಾಗ ಅವರ ಕಾಲದ ನೃತ್ಯಶೈಲಿ ವೈಶಿಷ್ಟ್ಯಪೂರ್ಣವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ಅವರ ಕಾಲದ ಶಾಸನಗಳಲ್ಲಿ ವಿವಿಧ ವರ್ಣನೆಗಳ ಸಾಲುಗಳು ಇದನ್ನು ಪುಷ್ಟೀಕರಿಸುತ್ತವೆ. ಹೊಯ್ಸಳ ವಿಷ್ಣುವರ್ಧನನ ರಾಣಿ, ಪಟ್ಟಮಹಿಷಿ ಶಾಂತಲೆಯನ್ನು ವಿಚಿತ್ರನರ್ತನ ಪಾತ್ರ

ಶಿಖಾಮಣಿ[೨೭] ಎಂದೂ, 'ಭರತಾಗಮ ತಿರುಳೆನಿಸಲು (ಉ) ಭಯಕ್ರಮ ನೃತ್ಯಂ ಶಾನ್ತಿದೇವಿಯೋಳ್ ಸೋಗಯಿಸುಗಂ' ಎಂಬ ಸಾಲುಗಳು ಶಾಂತಲೆಯ ಮಾರ್ಗ ಮತ್ತು ದೇಸಿ, ಪದ್ಧತಿಯ ವಿವಿಧ ನೃತ್ಯಗಳನ್ನು ಸುಕುಮಾರ, ಉದ್ಧತ ನೃತ್ಯಗಳನ್ನು ಬಹಳ ಲೀಲಾಜಾಲವಾಗಿ ಮಾಡುತ್ತಾ ನರ್ತಿಸುವ ನೃತ್ಯಗಳಿಗೆ ಸೊಗಸನ್ನು ನೀಡುವಂತಹ ಕಲಾವಿದೆಯಾಗಿದ್ದಳು ಎಂಬ ವಿವರಗಳು ದೊರಕುತ್ತದೆ.[೨೮] ಬೇಲೂರಿನ ಅನೇಕ ಶಾಸನಗಳಲ್ಲಿ ಸಂಗೀತಸಂಗತ ಸರಸ್ವತಿ[೨೯] ಎಂದೂ ಗೀತವಾದ್ಯ ಸೂತ್ರಧಾರೆ[೩೦] ಎಂದೂ, ಗೀತವಾದ್ಯ ಸೂತ್ರಧಾರೆಯುಂ[೩೧] ಎಂದೂ ವಿವಿಧ ರೀತಿಯಾಗಿ ಆಕೆಯ ಸಂಗೀತಕಲೆಯ ಪಾಂಡಿತ್ಯವನ್ನು ಶಾಸನಗಳು ಬಣ್ಣಿಸಿವೆ.

ಈ ಎಲ್ಲ ಹಿನ್ನೆಲೆಯಲ್ಲಿ ವಿವೇಚಿಸಿದಾಗ ಶಾಂತಲೆ ಮತ್ತು ಆ ಕಾಲದ ನರ್ತಕಿಯರು ನಾಟ್ಯಶಾಸ್ತ್ರವಲ್ಲದೆ ಆ ಕಾಲಕ್ಕೆ ಪ್ರಚಲಿತದಲ್ಲಿದ್ದ ಸಮಕಾಲೀನ ದೇಸೀಪದ್ಧತಿಗಳಲ್ಲಿ ಹೊಸಹೊಸ ನೃತ್ಯಗಳನ್ನು ಮಾಡುತ್ತಿದ್ದರು ಎಂಬುದು ಬಹಳ ಸ್ಪಷ್ಟವಾಗಿ ತಿಳಿದುಬರುತ್ತದೆ.

ಚಿಂಚೋಲಿಯ ಒಂದು ಶಾಸನದಿಂದ ಶ್ರೀಧರ ದಂಡನಾಯಕನ ಧರ್ಮಪತ್ನಿ ಒಬ್ಬ ಅತ್ಯುತ್ತಮ ಕಲಾವಿದೆಯಾಗಿದ್ದಳು ಎಂದು ತಿಳಿದುಬರುತ್ತದೆ.[೩೨]

ಶಾಸನದ ಸಾಲುಗಳು ಹೀಗಿವೆ "ಶ್ರೀಧರ ದಂಡನಾಯಕನದ್ಧಾ೯ಂಗ ಲಕ್ಷ್ಮಿ ಬೆಂಬಿಳಿಸುವ ಪಾತ್ರಕ್ಕೆ ಗಂಟಲಿಗಾಳಂ ಮಚ್ಚಗಿಸುವ ಪಾತ್ರಕ್ಕೆ ಮಸ್ತಕ ಸೂಲಂ..... ವಿಷಮ ಪಾತ್ರದ ಸೂತ್ರ ಕಳಶಕ್ಕೆ ವಿಳಸಮೆನಿಸಿರ್ದ ಗುಂಡಲಿ ಜಾಕಿಯಕ್ಕನಾ ಪೆಂಪಂ ಪೇಳ್ವಂ....'

ಈಕೆ ಸವಾಲಾಗುವಂತಹ ಪಾತ್ರಗಳನ್ನು ಇತರ ಕಲಾವಿದರ ಮನಸ್ಸು ಹೊಯ್ದಾಡುವ ರೀತಿಯಲ್ಲಿ ಮಾಡುತ್ತಿದ್ದಳೆಂದೂ, ಅಸೂಯೆ ಪಡುವಂತೆ ತನಗೆ ದೊರೆತ ವಿವಿಧ ಸನ್ನಿವೇಶಗಳನ್ನು ಬಹಳ ಸಂದರ್ಭೋಚಿತವಾಗಿ ನಟಿಸಿ ಅಭಿನಯದಲ್ಲಿ ಉತ್ತುಂಗಕ್ಕೇರಿದಳು ಎಂದೂ 'ಗುಂಡಲಿ ಜಾಕಿಯಕ್ಕ' ಎಂದು ಹೆಸರು ಗಳಿಸಿದ್ದ ಆಕೆಯ ಪ್ರಸಿದ್ಧಿ ಹೇಳತೀರದು ಎಂದೂ ವರ್ಣನೆ ಇದೆ. ಒಟ್ಟಿನಲ್ಲಿ ಈ ಶಾಸನದಿಂದ ಜಾಕಿಯಕ್ಕ ಎಂಬುವಳು ಒಬ್ಬ ಅತ್ಯುತ್ತಮ ಕಲಾವಿದೆಯಾಗಿದ್ದಳೆಂದು ತಿಳಿದು ಬರುತ್ತದೆ. ಇನ್ನೊಂದು ಬಹಳ ಮುಖ್ಯವಾದ ಅಂಶ : ಈ ಕಲಾವಿದೆಗೆ 'ಗುಂಡಲಿ ಜಾಕಿಯಕ್ಕ' ಎಂಬ ಬಿರುದು ಇರುವುದು 'ಗುಂಡಲಿ'; 'ಸಾಂದಲಿ' ಎಂಬುದು ಆಕಾಲಕ್ಕೆ ಪ್ರಚಲಿತದಲ್ಲಿದ್ದ ಕರ್ನಾಟಕ ದೇಶದ್ದೇ ಆದ ಒಂದು ದೇಸೀ ನೃತ್ಯ ಶೈಲಿ[೩೩], ಇದೊಂದು ವಿಶೇಷರೀತಿಯ ನೃತ್ಯವಾಗಿದ್ದು ಇದನ್ನು ಮಾಡುವಂತಹ ಕಲಾವಿದರ, ತಂಡಗಳೇ ಬೇರೆ ಇರುತಿತ್ತು. ಈ ನೃತ್ಯವನ್ನು ಯಾವರೀತಿ ಹೇಗೆ ಮಾಡಬೇಕು ಏನಿರುತ್ತದೆ ಎಂಬುದು ಶಾರಂಙ್ಗದೇವನ ಸಂಗೀತರತ್ನಾಕರ ಶಾಸ್ತ್ರಗ್ರಂಥದಲಿ ವಿವರಣೆ ಇದೆ. ಇಂತಹ ನೃತ್ಯವನ್ನು ಮಾಡುತ್ತಿದ್ದ ಜಾಕಿಯಕ್ಕನಿಗೆ 'ಗುಂಡಲಿ ಜಾಕಿಯಕ್ಕ' ಎಂಬ ಬಿರುದು ಬಂದಿರುವ ಸಾಧ್ಯತೆ ಗಳೂ ಇದೆ. ಇದರಿಂದ ಈಕೆ ಮಾರ್ಗ/ದೇಸಿ ಪದ್ಧತಿಗಳಲ್ಲಿ ನುರಿತ ಕಲಾವಿದೆಯಾಗಿದ್ದಳು ಎಂದು ಬಹಳ ಸ್ಪಷ್ಟವಾಗಿ ತಿಳಿದುಬರುತ್ತದೆ.

ಬೇಲೂರಿನ ಒಂದು ಶಾಸನವು ಅರಮನೆಯಲ್ಲಿ ನಡೆದಿರಬಹುದಾದ ನೃತ್ಯ ಸನ್ನಿವೇಶದ ವಿವರವನ್ನು ಒದಗಿಸುತ್ತದೆ. ಸಾಧಾರಣವಾಗಿ ಶಾಸನಗಳಲ್ಲಿ ದೇವಾಲಯಗಳಲ್ಲಿ ರಂಗಭೋಗಕ್ಕಾಗಿ ನೀಡುವ ದಾನಗಳ ಉಲ್ಲೇಖಗಳೇ ಸಿಗುತ್ತವೆ. ಸಾಹಿತ್ಯ ರಚನೆಗಳಲ್ಲಿ ಅರಮನೆಯಲ್ಲಿ ನಡೆದಿರುವ ನೃತ್ಯ ಸಂಗೀತ ಕಾರ್ಯಕ್ರಮಗಳ ವಿವಿಧ ಉಲ್ಲೇಖಗಳು ವಿವರಗಳು ಸಾಕಷ್ಟು ದೊರಕುತ್ತವೆ. ಆದರೆ ಶಾಸನದಲ್ಲಿ ಅರಮನೆಯ ಉತ್ಸವದ ವಿವರಣೆ ದೊರೆಯುವುದು ಬಹಳ ವಿರಳ. ಈ ನಿಟ್ಟಿನಲ್ಲಿ ಬೇಲೂರಿನ ಹೊಯ್ಸಳ ದೊರೆ ಒಂದನೇ ನರಸಿಂಹನಕಾಲದ ಈ ಶಾಸನ ಬಹಳ ವಿಶೇಷವಾದ, ಅಪರೂಪವಾದ ಶಾಸನವಾಗಿದೆ.[೩೪]

ಹೊಯ್ಸಳ ದೊರೆ ಒಂದನೇ ನರಸಿಂಹನ ಜನ್ಮೋತ್ಸವದ ಸಂದರ್ಭದಲಿ ರಾಜಸಭೆಯಲಿ ನಡೆದಿರಬಹುದಾದ ಸಾಂಸ್ಕೃತಿಕ ಕಾರ್ಯಕ್ರಮದ ಬಗ್ಗೆ ಈ ರೀತಿಯಾದ ವರ್ಣನೆ ಇದೆ. 'ಅರಮನೆಯಲ್ಲಿ ಎಲ್ಲ ದಿಗ್ಗಜರು ತಮಗೆಂದೇ ನಿಯೋಜಿತ ಆಸನಗಳಲ್ಲಿ ಕುಳಿತಾಗ, ತಾಳಗೀತವಾದ್ಯಗಳಿಂದ ಚಕ್ರವರ್ತಿಯ ವೀರಗುಣಗಳನ್ನು ಕಥಾ ಪ್ರಸಂಗಗಳನ್ನು ಹಾಡಿ, ಅಲ್ಲೇ ಇದ್ದ ಕವಿಗಳನ್ನು ಗಮಕ ಕಲಾವಿದರನ್ನು ಮೆಚ್ಚಿಸಿ ಸಂದರ್ಭಕ್ಕೆ ತಕ್ಕ ಹಾಗೆ ಕಲಾವಿದರು ಕಾರ್ಯಕ್ರಮವನ್ನು ನಡೆಸಿಕೊಟ್ಟು ನಾರಸಿಂಹ ಮಹಾರಾಜನನ್ನು ಮೆಚ್ಚಿಸಿ ಅನೇಕ ಮೆಚ್ಚು ಕೊಡುಗೆಗಳನ್ನು ಪಡೆದರು ಎಂಬುದು ಶಾಸನದ ಸಾರಾಂಶ.

ಸಾಧಾರಣವಾಗಿ ಆಶ್ರಯದಾತನನ್ನು ಮೆಚ್ಚಿಸುವ ರೀತಿಯಲ್ಲಿ ಸಾಹಿತ್ಯ ರಚನೆ, ಸಾಂಸ್ಕೃತಿಕ ಕಾರ್ಯಕ್ರಮಗಳು ಪ್ರಸ್ತುತಿ ನಡೆಯುತ್ತಿತ್ತು ಎಂಬುದು ತಿಳಿದಸಂಗತಿ. ರಾಜಾಶ್ರಯದಲ್ಲಿ ಸಮಾಜದ ಎಲ್ಲ ಜನರ ಮನೋನ್ನತಿಗಾಗಿ ವಿವಿಧ ಸಂದರ್ಭಗಳಲ್ಲಿ ಕಲಾವಿದರು ಉತ್ಸವಗಳಲ್ಲಿ ಸಂಭ್ರಮದಿಂದ ಪಾಲ್ಗೊಂಡು ಜನಮನಗಳನ್ನು ರಂಜಿಸುತ್ತಿದ್ದರು ಎಂದು ಕ್ರಿಶ. ೯ನೇ ಶತಮಾನದ ಶಾಸನದಿಂದ ಹಿಡಿದು ಕ್ರಿಶ. ೧೩ನೇ ಶತಮಾನದ ಶಾಸನದವರೆಗೆ ಗಮನಿಸಿದ ಶಾಸನಗಳಿಂದ ತಿಳಿದುಬರುತ್ತದೆ.

ರಾಜ್ಯದ, ಪ್ರಜೆಗಳ, ಸಂಸ್ಕೃತಿಯ ರಕ್ಷಾಪಾಲಕರಾದ ರಾಜರು, ಸಾಮಂತರು, ಅಧಿಕಾರಿಗಳು ಅವರ ಕುಟುಂಬ ವರ್ಗದವರು ತಮ್ಮದೇ ರೀತಿಯಾದ ಜವಾಬ್ದಾರಿಗಳನ್ನು ಹೊಂದಿರುತ್ತಿದ್ದರು. ಜೀವನದ ಎಲ್ಲ ಸ್ತರದ ವಿದ್ಯೆಗಳನ್ನು ಕರತಲಾಮಲಕ ಮಾಡಿಕೊಂಡಿಲ್ಲದಿದ್ದರೂ ೬೪ ಕಲೆಗಳಲ್ಲಿ ಶ್ರೇಷ್ಠ ಪಾಂಡಿತ್ಯವನ್ನು ಗಳಿಸದಿದ್ದರೂ, ಅವುಗಳ ಬಗ್ಗೆ, ವಿಚಾರಧಾರೆಗಳ ಬಗ್ಗೆ ತಕ್ಕ ಮಟ್ಟಿನ ಜ್ಞಾನಾರ್ಜನೆಯನ್ನು ಪಡೆದಿರುತ್ತಿದ್ದರು; ವಿವಿಧ ಕ್ಷೇತ್ರಗಳ ಬಗ್ಗೆ ಆಸಕ್ತಿ ವಹಿಸಿ 'ದೇಹಿ ಎಂದು ಬೇಡಿ ಬರುವ' ಆಶ್ರಯದಾತರಿಗೆ ಸಂಪೂರ್ಣವಾದ ಪ್ರೋತ್ಸಾಹವನ್ನು ನೀಡಿ ಸಂಸ್ಕೃತಿಯ ಉಳಿವಿಗಾಗಿ ಶ್ರಮಿಸುತ್ತಿದ್ದರು. ಇದರಿಂದ ಎಲ್ಲ ಕ್ಷೇತ್ರದ 'ಕಲೆ–ಕಲಾವಿದ–ಆಶ್ರಯದಾತ'ನಲ್ಲಿ ಒಂದು ರೀತಿಯಾದ ಅವಿನಾಭಾವ ಸಂಬಂಧವೇರ್ಪಟ್ಟು ಪ್ರತಿಯೊಬ್ಬರು ದೇಶ, ಕಾಲ, ಸಂಸ್ಕೃತಿಯ ರಕ್ಷಣೆಗಾಗಿ ಶ್ರಮಿಸುತ್ತಿದ್ದರು. ಇದರಿಂದಾಗಿ ಸುಭದ್ರ ಸಮಾಜದ ನಿರ್ಮಾಣದ ಕನಸನ್ನು ಅಂದಿನ ರಾಜರು. ಸಾಮಂತರು ಸಾಕಾರಗೊಳಿಸುತ್ತಿದ್ದರು.

(ಈ ಲೇಖನದಲ್ಲಿ ಉಪಯೋಗಿಸಲ್ಪಟ್ಟಿರುವ ಶಾಸನಗಳಲ್ಲಿ ಉಲ್ಲೇಖಿತ ಪಾರಿಭಾಷಿಕ ಪದಗಳ ಅರ್ಥವಿಶ್ಲೇಷಣೆಗೆ ನೆರವು ನೀಡಿದ ಡಾ॥ ಶತಾವಧಾನಿ ಆರ್.ಗಣೇಶ್ ಹಾಗೂ ಡಾ॥ ಎಚ್.ಎಸ್. ಗೋಪಾಲ ರಾವ್ ಅವರನ್ನು ಇಲ್ಲಿ ಗೌರವದಿಂದ ಸ್ಮರಿಸುತ್ತೇನೆ.)



## ಆಧಾರಸೂಚಿ ಮತ್ತು ಟಿಪ್ಪಣೆಗಳು


೧. ಚಿದಾನಂದಮೂರ್ತಿ ಎಂ. **ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ**. ಪ್ರಸಾರಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೮೪. ಪುಟ. ೩,೪.

೨. **ಎ.ಕ. IV.** (ಪರಿಷ್ಕೃತ ಆವೃತ್ತಿ) ಯಳಂದೂರು, ೧೬೭, ಕ್ರಿ.ಶ. ಸು. ೫೫೦.

೩. **ಎ.ಇಂ. III.** ಶಾಸನ ೧. ಪುಟ. ೪.

೪. i ಇಂ.ಆಂ. X ನಂ. CIV. ೧೬೬–೧೬೭.

(ii ವಿವರಗಳಿಗೆ ನೋಡಿ: 'ಅಗ್ರತಲಸಂಚರ ಪಾದಭೇದ– ಒಂದು ವಿಶ್ಲೇಷಣೆ'– **ಇತಿಹಾಸದರ್ಶನ**, ಸಂಪುಟ–೧೮. ಪು. ೫೮–೬೧).

೫. ಭರತಮುನಿಯಿಂದ ರಚಿಸಲ್ಪಟ್ಟಿರುವ ಶಾಸ್ತ್ರಗ್ರಂಥ.

೬ ನಂದಗೋಪಾಲ್. ಚೂಡಾಮಣಿ., **ಡ್ಯಾನ್ಸ್ ಅಂಡ್‌ಮ್ಯೂಸಿಕ್ ಇನ್, ಟೆಂಪಲ್ ಆರ್ಕಿಟೆಕ್ಚರ್**, ಆಗಮ ಪಬ್ಲಿಕೇಷನ್ಸ್, ನವದೆಹಲಿ, ೧೯೯೦. ಪುಟ. ೪೯.

೭. **ಎ.ಕ. IV.** (ಪ.ಆ)., ಚಾಮರಾಜನಗರ ೩೫೪. ಕ್ರಿ.ಶ. ೯೦೬.

೮. **ಎ.ಕ. VIII.** (ಪ.ಆ)., ಸೊರಬ ೨೪೯. ಕ್ರಿ.ಶ. ೧೦೬೫.

೯. I **ಎ.ಕ. V.** (ಪ.ಆ) ಮಂಜರಾಬಾದ್ ೧೮ ಕ್ರಿ.ಶ. ೧೧೯೫ .

ii ಗೋವಿಂದರಾಜು ಹೇಮಾ., **ಡ್ಯಾನ್ಸ್ ಟರ್ಮಿನಾಲಜೀಸ್ ಅಂಡ್ ದೇರ್ ಎಪಿಗ್ರಫಿಕಲ್ ಇಂಟರ್‌ಪ್ರೆಟೆಷನ್ಸ್**, ಹರ್ಮನ್ ಪಬ್ಲಿಕೇಷನ್ಸ್, ನವದೆಹಲಿ, ೧೯೯೩. ಪುಟ ೩೩. ೩೮.

೧೧. **ಎ.ಕ. VII. I** (ಹಳೇ ಆವೃತ್ತಿ) ಶಿಕಾರಿಪುರ ೯೪. ಕ್ರಿ.ಶ. ೧೧೯೪.

೧೨. ಕ.ಇನ್ಸ್. **IV.** ಹಿರೇಕೇರೂರ್ ೩೮, ಕ್ರಿ.ಶ. ೧೧೧೯.

೧೩. **ಎ.ಕ. XIII.** (ಹ.ಆ) ಹಾಸನ ೬೬, ಕ್ರಿ.ಶ. ೧೧೩೫.

೧೪. **ಎ.ಕ. IX.** (ಪ.ಆ) ಬೇಲೂರು ೪೧೯, ಕ್ರಿ.ಶ. ೧೧೬೭.

೧೫. **ಎ.ಕ. II.** (ಪ.ಆ) ಹಾಸನ ೫೭೧, ಕ್ರಿ.ಶ. ೧೧೮೧.

೧೬. **ಎ.ಕ. II.** (ಪ.ಆ) ಶ್ರವಣಬೆಳಗೊಳ ೧೭೪, ಕ್ರಿ.ಶ ೧೧೩೯.

೧೭. **ಎ.ಕ. IX.** (ಪ.ಆ) ಸಕಲೇಶಪುರ, ೪೫. ಕ್ರಿ.ಶ. ೧೧೯೫.

೧೮. **ಎ.ಕ. IX.** (ಪ.ಆ) ಬೇಲೂರು ೪೧೧. ಕ್ರಿ.ಶ. ೧೧೬೦.

೧೯. ಎ.ಕ. **VII. I.** (ಹ.ಆ) ಚೆನ್ನಗಿರಿ. ೬೪. ಕ್ರಿ.ಶ. ೧೨೧೪.
೨೦. ಎ.ಕ. **XII.** (ಹ.ಆ) ತಿಪಟೂರು ೬೧. ಕ್ರಿ.ಶ. ೧೧೬೨.
೨೧. ಎ.ಕ. **VIII.** (ಹ.ಆ) ಸೊರಬ ೨೮ ಕ್ರಿ.ಶ. ೧೨೦೮.
೨೨. ಎ.ಕ. **VII. I.** (ಹ.ಆ) ಶಿಕಾರಿಪುರ ೯೪. ಕ್ರಿ.ಶ. ೧೦೯೪.
೨೩. ಸೌ.ಇಂ.ಇನ್ಸ್. **XX.** ಪರಿಸರಗಡ ನಂ.೬೩ ಕ್ರಿ.ಶ. ೧೦೯೩.
೨೪. ಸೌ.ಇಂ.ಇನ್ಸ್. **IX. I.** ನಂ. ೧೫೯.
೨೫. ಎ.ಕ. **VII. I.** (ಹ.ಆ) ನಂ.೬೭. ಕ್ರಿ.ಶ. ೧೧೧೩.
೨೬. ಎ.ಕ. **VII. I.** (ಹ.ಆ) ಶಿಕಾರಿಪುರ ೧೦೯ ಕ್ರಿ.ಶ. ೧೦೭೦.
೨೭. ಎ.ಕ. **IX.** (ಪ.ಆ) ಬೇಲೂರು ೧೬೮. ಕ್ರಿ.ಶ. ೧೧೧೭.
೨೮. ಎ.ಕ. **IX.** (ಪ.ಆ) ಬೇಲೂರು ೯೬.
೨೯. ಎ.ಕ. **IX.** (ಪ.ಆ) ಬೇಲೂರು ೯೬.
೩೦. ಎ.ಕ. **II.** (ಪ.ಆ) ಚಿಕ್ಕ ಬೆಟ್ಟ ನಂ. ೧೭೬ ಕ್ರಿ.ಶ. ೧೧೩೧.
೩೧. ಎಂ.ಎ.ಆರ್. ೧೧೪೧–ಪುಟ. ೩೧೫–೨೧೭.
೩೨. ಸೌ.ಇಂ.ಇನ್ಸ್. **XV III.** ಗದಗ. ೬೪ ಕ್ರಿ.ಶ. ೧೧೮೫..
೩೩. ಕುಂಜನ್ನಿರಾಜ. ಕೆ. ಮತ್ತು ಬರ್ನರ್.ರಾಧಾ. **ಸಂಗೀತರತ್ನಾಕರ** (ಆಂಗ್ಲಭಾಷಾಂತರ) ಸಂಪುಟ **IV.** ಅಡಿಯಾರ್ ಲೈಬ್ರರಿ ಅಂಡ್ ರಿಸರ್ಚ್‌ಸೆಂಟರ್. ಚೆನ್ನೈ ೧೯೭೬. ಪುಟ. ೧೯೧ರಿಂದ ೧೯೪.

ಸರಸ್ವತೀವ ಕಾರ್ಣಾಟೀ ವಿಜಯಾಂಕಾ ಜಯತ್ಯಸೌ
ಯಾ ವಿದರ್ಭಗಿರಾಂ ವಾಸಃ ಕಾಲಿದಾಸಾದನಂತರಮ್

– **'ಸೂಕ್ತಿ ಮುಕ್ತಾವಲಿ'**

*The soul of a man is divided in to three parts :*
*Intelligence, Reason and Passion.*
*Intelligence and Passion are possessed by other*
*animals, but Reason by man alone....*
*Reason is immortal, all else is mortal.*

**- Pythogoras**

ಸುಂಕಂ ಗೋವರ್ಧನ *

# ತೇಕಲ್ ವರದರಾಜಸ್ವಾಮಿ ದೇವಾಲಯದ ಶಾಸನಗಳು

ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ಹೋಬಳಿ ಕೇಂದ್ರವಾಗಿರುವ ತೇಕಲ್ ಗ್ರಾಮವು ಮಾಲೂರು-ಬಂಗಾರ ಪೇಟೆ ಮಾರ್ಗಮಧ್ಯದಲ್ಲಿದೆ. ಈ ತೇಕಲ್ ಗ್ರಾಮದ ಸುತ್ತ ಮುತ್ತಲ ಪ್ರದೇಶವನ್ನು 'ತೇಕಲ್ ನಾಡು' ಎಂದು ಶಾಸನಗಳು ಉಲ್ಲೇಖಿಸುತ್ತವೆ.

ದಕ್ಷಿಣ ಭಾರತದ ಅತ್ಯಂತ ದೊಡ್ಡದಾದ ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ಮಾನವನ ಅವಶೇಷಗಳು ದೊರೆತ ಬನಹಳ್ಳಿಯು ಈ ತೇಕಲ್ ಬೆಟ್ಟಗಳ ಸಾಲಿನ ತಪ್ಪಲಿನಲ್ಲೇ ಇದೆ. ಈ ಬನಹಳ್ಳಿಗೆ ೫ ಕಿ.ಮೀ. ದೂರದಲ್ಲಿರುವ ಮಂಚಕಲ್ಲು ಗ್ರಾಮದಲ್ಲಿ ಸಹ ಇಂದಿಗೂ ಕಲ್ಲುಗೋರಿಗಳು ನೋಡಲು ಸಿಗುತ್ತವೆ. ತೇಕಲ್ಲಿನ ಬೆಟ್ಟ ಗಳಲ್ಲಿ ಸಹ ಪ್ರಾಗೈತಿಹಾಸಿಕ ಮಾನವನು ಇದ್ದಿರಬೇಕೆಂಬ ಅನುಮಾನವೂ ಇದೆ.[೧]

ಕ್ರಿ.ಶ. ೮ನೆಯ ಶತಮಾನದಲ್ಲಿ ಬಾಣರಸರ ಆಳ್ವಿಕೆಗೆ "ತೇಕಲ್‌ನಾಡೆಪ್ಪತ್ತು" ಎಂಬ ಪ್ರದೇಶವು ಸೇರಿದ್ದಿತೆಂದು ಒಂದು ಶಾಸನವು ಉಲ್ಲೇಖಿಸುತ್ತದೆ.[೨] ತನ್ನ ಸುತ್ತಮುತ್ತಲ ೭೦ ಗ್ರಾಮಗಳಿಗೆ ಕೇಂದ್ರವಾಗಿದ್ದ ತೇಕಲ್ ಪಟ್ಟಣವು ೮ನೆಯ ಶತಮಾನದಲ್ಲೇ ಅಸ್ತಿತ್ವದಲ್ಲಿದ್ದು ನಂತರದ ಗಂಗರ ಶಾಸನ ಗಳಲ್ಲೂ ತೇಕಲ್ ನಾಡು ಉಲ್ಲೇಖವಾಗಿದೆ. ಹಾಗೆಯೇ ನೊಳಂಬರ ಆಳ್ವಿಕೆಗೂ ಈ ಪ್ರದೇಶ ಸೇರಿದ್ದಿತು. ನಂತರ ಹೊಯ್ಸಳರು, ಇವರ ಅಧೀನರಾಗಿ ಚೋಳಗಂಗರು ಮತ್ತು ಕರ್ಕಡ ಮಹಾರಾಯರು ಈ ಪ್ರದೇಶವನ್ನು ಆಳಿದರು. ವಿಜಯನಗರದ ಆಳ್ವಿಕೆಯ ಸಂದರ್ಭದಲ್ಲಿ ಈ ತೇಕಲ್ ನಾಡು ಮುಳವಾಯಿ ಚಾವಡಿಗೆ (ಮುಳಬಾಗಿಲು ರಾಜ್ಯ) ಸೇರಿತ್ತು. ೨ ಶಾಸನಗಳಲ್ಲಿ ತೇಕಲ್‌ನಾಡಿನ ಪ್ರಸ್ತಾಪ ೮ನೇ ಶತಮಾನದಿಂದಲೇ ಕಂಡುಬಂದರೂ, ತೇಕಲ್ ಗ್ರಾಮದಲ್ಲಿ ೧೪ನೇ ಶತಮಾನದ ನಂತರದ ಶಾಸನಗಳಷ್ಟೆ ಲಭ್ಯವಾಗಿವೆ.

ತೇಕಲ್‌ನಾಡಿನ ಮುಖ್ಯ ಕೇಂದ್ರವಾದ ತೇಕಲ್ಲು (ಟೇಕಲ್) ದೇವಾಲಯ ಸಂಪತ್ತಿನಿಂದ ಒಂದು ಕಾಲದಲ್ಲಿ ಕಂಗೊಳಿಸುತ್ತಿತ್ತು ಎಂದು ಹೇಳಲಾಗಿದೆ. ಐತಿಹ್ಯದಂತೆ ಇಲ್ಲಿ ೧೦೧ ದೇವಾಲಯಗಳು ೧೦೧ ಕಲ್ಯಾಣಿಗಳು ಇದ್ದಿತೆಂದು ಹೇಳಲಾಗುತ್ತದೆ. ಆದರೆ ಇಂದಿಗೆ ವಿಶಾಲವಾದ ವರದ ರಾಜಸ್ವಾಮಿ ದೇವಾಲಯ, ಸಿಂಗಪ್ಪೆರುಮಾಳ್ ದೇವಾಲಯ, ಸೋಮೇಶ್ವರ ದೇವಾಲಯ, ಮಾರಿ ದೇವಾಲಯ, ಆಂಜನೇಯ ದೇವಾಲಯ, ಪಟಾಲಮ್ಮ ಗುಡಿ ಮುಂತಾದ ಬೆರಳೆಣಿಕೆಯ ದೇವಾಲಯಗಳು ಮಾತ್ರ ಅಸ್ತಿತ್ವದಲ್ಲಿವೆ.


ತೇಕಲ್ ವರದರಾಜಸ್ವಾಮಿ ದೇವಾಲಯದ ಹಿಂಬದಿಯ ನೋಟ

ತೇಕಲ್‌ನಾಡಿಗೆ ಸಂಬಂಧಿಸಿದ ಹಾಗೆ ಈವರೆಗೆ ಪ್ರಕಟ ವಾಗಿರುವ ಸುಮಾರು ೭೫ ಶಾಸನಗಳಲ್ಲಿ ೩೩ ಶಾಸನಗಳು ತೇಕಲ್ಲಿನ ವರದರಾಜಸ್ವಾಮಿ ಗುಡಿಯೊಂದರಲ್ಲಿ ಇವೆ.

ಇಲ್ಲಿನ ಅತ್ಯಂತ ಮುಖ್ಯವಾದ ಈ ವರದರಾಜಸ್ವಾಮಿ ಗುಡಿಯು ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಇಲ್ಲಿರುವ ಶಾಸನಗಳಲ್ಲಿ ಅತ್ಯಂತ ಪ್ರಾಚೀನ ಶಾಸನವೆಂದರೆ ೧೩೧೦ರ ತಮಿಳು ಶಾಸನ. ಇಲ್ಲಿಂದ ಆರಂಭವಾಗಿ ಸುಮಾರು ೧೫ನೆಯ ಶತಮಾನದ ಕೊನೆಯ ವರೆಗಿನ ಶಾಸನಗಳು ಇಲ್ಲಿವೆ. ಈ ನಡುವಿನ ಕಾಲಮಾನದಲ್ಲಿ ಹೊಯ್ಸಳರು ಈ ದೇವಾಲಯಕ್ಕೆ ನೀಡಿದ ಪ್ರೋತ್ಸಾಹ, ಈ ಕಾಲದ ಈ ದೇವಾಲಯದ ಆಡಳಿತ ಮಂಡಳಿಯ ಸ್ಥಾನಿಕ

* ೪೭, ೧೭ನೇ ಅಡ್ಡರಸ್ತೆ, ರಂಗನಾಥಪುರಂ, ಮಲ್ಲೇಶ್ವರಂ, ಬೆಂಗಳೂರು ೫೬೦ ೦೦೩.

ನಾಗಿ **ಚೊಕ್ಕಪ್ಪೆರುಮಾಳ್ ದಾಸನು** ಈ ದೇವಾಲಯಕ್ಕಾಗಿ ಶ್ರಮಿಸಿದ್ದು, ನಂತರ ವಿಜಯನಗರದ ಅರಸರ ಮಾಂಡಳೀಕನಾಗಿದ್ದ **ಗೋಪರಾಜ** ಮತ್ತು ಆತನ ಮಹಾಪ್ರಧಾನನಾದ **ನಿಂಗರಾಜನು** ಈ ದೇವಾಲಯಕ್ಕಾಗಿ ನೀಡಿದ ದಾನಗಳು, ಮಾಡಿದ ನಿರ್ಮಾಣಗಳು ಇನ್ನೂ ಅನೇಕ ಸಂಗತಿಗಳನ್ನು ಇಲ್ಲಿನ ಶಾಸನಗಳು ದಾಖಲಿಸಿವೆ.

**ದಾನಗಳು :** ದಾನ ಶಾಸನಗಳಲ್ಲಿ ದೇವಾಲಯಗಳಲ್ಲಿ ಪೂಜಾಕೈಂಕರ್ಯಗಳಿಗೆ ನೀಡುವ ದತ್ತಿಯನ್ನು ದೇವಾದಾಯ ಎನ್ನುವರು. ಬ್ರಾಹ್ಮಣರಿಗೆ ಅವರು ಆಚರಿಸಬೇಕಾದ ಷಟ್ಕರ್ಮಗಳಿಗೆ ಪೂರಕವಾಗುವಂತೆ ನೀಡಲಾದ ಅಗ್ರಹಾರ, ಭೂಮಿ ಮತ್ತು ವೃತ್ತಿಗಳೇ ಮುಂತಾದ ದಾನದತ್ತಿಗಳನ್ನು ಬ್ರಹ್ಮದಾಯ ಎಂತಲೂ ಮತ್ತು ಶೈಕ್ಷಣಿಕ, ಧಾರ್ಮಿಕ ಜ್ಞಾನಗಳ ಪ್ರಚಾರಾರ್ಥವಾಗಿ **ಪುರಧರ್ಮಗಳು** ಎಂದೂ ಕರೆಯುತ್ತಾರೆ.[೩]

ತೇಕಲ್ಲಿನ ವರದರಾಜಸ್ವಾಮಿ ಗುಡಿಯಲ್ಲಿರುವ ಬಹುತೇಕ ಎಲ್ಲಾ ಶಾಸನಗಳೂ ದಾನಶಾಸನಗಳೇ ಆಗಿದ್ದು ಈ ಮೇಲಿನ ಮೂರೂ ಗುಂಪಿನ ಶಾಸನಗಳನ್ನು ಇಲ್ಲಿ ನಾವು ಕಾಣಬಹುದು. ಈ ಗುಡಿಗೆ ಹೊಯ್ಸಳರ ಕಾಲದಲ್ಲಿ ಒಂದು ಸುವ್ಯಸ್ಥಿತವಾದ ಆಡಳಿತ ಮಂಡಳಿ ಇದ್ದು ಇದರ ನೇತಾರನಾಗಿ ಚೊಕ್ಕಪ್ಪೆರುಮಾಳ್‌ದಾಸನು ಇಲ್ಲಿ ಸ್ಥಾನಿಕನಾಗಿದ್ದುಗೊಂಡು ಅನೇಕ ದಾನಗಳನ್ನು ಪಡೆಯುವಲ್ಲಿಯೂ, ಹಾಗೂ ಕೆಲವು ದಾನಗಳನ್ನು ನೀಡುವಲ್ಲಿಯೂ ಗಮನಾರ್ಹ ಪಾತ್ರವಹಿಸಿದ್ದಾನೆ. ಈ ದೇವಾಲಯದ ಅನೇಕ ಶಾಸನಗಳು ಈತನ ಕಾಲದ್ದಾಗಿದ್ದು ಇವನ ಕಾರ್ಯಕ್ಷಮತೆಯನ್ನು ತೋರಿಸುತ್ತದೆ. ಹಾಗೆಯೇ ಇಲ್ಲಿನ ಶಾಸನಗಳಲ್ಲಿ ಉಕ್ತವಾದ ಮುಖ್ಯರು[೫] ದೇಗುಲಾಭಿವೃದ್ಧಿಗೆ ಶ್ರಮಿಸಿರುವುದು ತಿಳಿಯುತ್ತದೆ.

**ವಲ್ಲಪ್ಪ ದಣ್ಣಾಯಕ :** ಹೊಯ್ಸಳರ ಮೂರನೇ ಬಲ್ಲಾಳನ ಭಾವಮೈದುನನಾದ ಸೋಮೇದಣ್ಣಾಯಕನ ಮಗ ವಲ್ಲಪ್ಪ ದಣ್ಣಾಯಕನು ಈ ಪ್ರದೇಶದಲ್ಲಿ ಆಳ್ವಿಕೆಯಲ್ಲಿದ್ದನು. ವರದರಾಜ ಸ್ವಾಮಿಯ ಪರಮಭಕ್ತನಾಗಿದ್ದ ಇವನು ತನ್ನ ಅಣ್ಣನಾದ ಧಾತಿ ಸಿಂಗೇ ದಣ್ಣಾಯಕನ ಜೊತೆಗೂಡಿ ತೇಕಲ್ಲಿಗೆ ಮೊದಲನೆಯ ಬಾರಿಗೆ ಒಳಕೋಟೆ ಮತ್ತು ಹೊರಕೋಟೆಯನ್ನು ಕಟ್ಟಿಸಿದನು. ಇವನು ಇಲ್ಲಿನ ವರದರಾಜದೇವರಿಗೆ ಒಂದೇ ವರ್ಷದಲ್ಲಿ ೪ ದಾನಗಳನ್ನು ಸಂದಾಯ ಮಾಡುವುದರ ಮೂಲಕ ಈ ದೇವಾಲಯದ ಸಂಪತ್ತು ವೃದ್ಧಿಸುವಲ್ಲಿ ಸಹಕಾರಿಯಾಗಿದ್ದಾನೆ. (i) ಮೊಟ್ಟ ಮೊದಲಿಗೆ ೧೩೨೮ರ ವೈಯ್ಯಾಶಿ (ಜ್ಯೇಷ್ಠ) ಮಾಸದಲ್ಲಿ ವರದರಾಜಸ್ವಾಮಿ ದೇವಾಲಯದ ಸ್ಥಾನಿಕನಾದ ಚೊಕ್ಕಪ್ಪೆರುಮಾಳ್ ದಾಸನಿಗೆ ಪ್ರಮಾಣವನ್ನು ಮಾಡಿ ತೇಕಲ್‌ನಾಡಿನಲ್ಲಿರುವ 'ಆಳಂಬಾಳು' ಎನ್ನುವ



ಸುಂಕಂ ಗೋವರ್ಧನ

ಗ್ರಾಮವನ್ನು, ಅದರ ಎಲ್ಲೆಯನ್ನು ಗುರುತಿಸಿ ಅದರೊಳಗಿನ ನೀರು, ಮರಗಳೂ ಸೇರಿದಂತೆ ಇರುವ ಸಕಲ ಸಂಪತ್ತನ್ನೂ ವರದರಾಜಸ್ವಾಮಿ ಗುಡಿಯ ಅಮೃತಪಡಿ (ಮಧ್ಯಾಹ್ನದ ನೈವೇದ್ಯ) ಶಾತ್ತುಪ್ಪಡಿ (ಚಂದನ ಸಮರ್ಪಣೆ) ತಿರುವಿಳಕ್ಕು (ನಂದಾದೀವಿಗೆಗಾಗಿ), ತಿರುಮೇರ್‌ಪೂಚ್ಚು (ದೇವರಿಗೆ ನಿತ್ಯ ಅಭ್ಯಂಜನಕ್ಕೆ) ಹಾಗೂ ತಿರುಪಣ್ಣಿ (ದೇವಾಲಯದ ರಿಪೇರಿಗಾಗಿ) ಈ ದಾನವನ್ನು ನೀಡಿದ್ದಾನೆ.[೪] (ii) ಕ್ರಿ.ಶ. ೧೩೨೮ರ ಇದೇ ಮಾಸದಲ್ಲಿ ತೇಕಲ್ ನಾಡಿನ ನಾಡಜನರು ಈ ನಾಡಿನ 'ಚಿರತ್ತಿಮಂಗಲದ' ದೊಡ್ಡ ಏರಿಯ ಮುಂದೆ ಇದ್ದ ೧೦ ಕಂಡುಗ ಗದ್ದೆಯನ್ನು ಈ ದೇವರಿಗೆ ಶಾಸನೋಕ್ತ ದಾನ ನೀಡಿದ್ದಾರೆ.[೫] (iii) ಇದೇ ವರ್ಷದ ಆವನಿ ಮಾಸದಲ್ಲಿ (ಭಾದ್ರಪದ) ವಲ್ಲಪ್ಪ ದಣ್ಣಾಯಕನು ಉದಕಪ್ರಮಾಣವನ್ನು ಮಾಡಿ ಕೈವಾರ ನಾಡಿನಲ್ಲಿರುವ 'ಕ್ನಾಜ್‌ಪಳ್ಳಿ'ಯನ್ನು ಕೊಂಡು ಕೊಂಡು ಈ ದೇವರ ಅಮೃತಪಡಿ, ಚಂದನ, ದೇವರ ಅಭ್ಯಂಜನ, ನಂದಾದೀವಿಗೆ ಮತ್ತು ದೇವಾಲಯದ ಜೀರ್ಣೋದ್ಧಾರಕ್ಕಾಗಿ ಸರ್ವಮಾನ್ಯ ದಾನವನ್ನು ನೀಡಿದ್ದಾನೆ.[೬] (iv) ಇದೇ ವರ್ಷದ ಅರ್ಪಾಸಿ (ಕಾರ್ತೀಕ) ಮಾಸದಲ್ಲಿ ಈ ಮೇಲೆ ಹೇಳಿದ ಕಾರಣಗಳಿಗಾಗಿಯೇ 'ಕೊಡಮ್ಬಲಿಯೂರಿನ' ಕೆಳಗೆ ಇರುವ 'ಪೂವೈಪಳ್ಳಿ' ಎಂಬ ಗ್ರಾಮವನ್ನು ಅದರ ಸಕಲ ಸಂಪತ್ತಿ ನೊಡನೆ ದಾನ ನೀಡಿದ್ದಾನೆ.[೭] ಒಟ್ಟಿನಲ್ಲಿ ವಲ್ಲಪ್ಪ ದಣ್ಣಾಯಕನ ವತಿಯಿಂದ ಈ ದೇವಾಲಯಕ್ಕೆ ಒಂದು ವರ್ಷದಲ್ಲಿ ನಾಲ್ಕು ದಾನಗಳನ್ನು ನೀಡಿರುವುದನ್ನು ನೋಡಿದರೆ ಈ ದೇವಾಲಯದಲ್ಲಿ ಈ ವರ್ಷ ಏನೋ ಅಭಿವೃದ್ಧಿ ನಡೆದಿರಬೇಕು ಎಂದು ಅನಿಸುತ್ತದೆ ಮತ್ತು ಈ ನಾಲ್ಕು ದಾನಶಾಸನಗಳಲ್ಲಿ ಮೂರನೇ ಬಲ್ಲಾಳನ ತೋಳಿಗೂ, ಬಾಳಿಗೂ(ಕತ್ತಿ) ಜಯವಾಗಲೆಂಬ ಹಾರೈಕೆಯ ನುಡಿಗಳಿವೆ. ಆದುದರಿಂದ ಈ ವರ್ಷದಲ್ಲಿ ಯಾವುದೋ ಯುದ್ಧವಾಗಿರಬೇಕು.

**ಕರ್ಕಡ ಮಹಾರಾಯ :** ಕ್ರಿ.ಶ. ೧೩೩೪ರಲ್ಲಿ ಕುವಳಾಲ ಪುರಪರಮೇಶ್ವರ, ನಂದಗಿರಿನಾಥ, ಸತ್ಯವಾಚಕ ಎಂಬ ಬಿರುದುಗಳನ್ನು ಹೊಂದಿದ್ದ ಚೋಳಗಂಗ ದೊರೆ ಕರ್ಕಡ ಮಹಾರಾಯನು ಈ ದೇವಾಲಯಕ್ಕೆ ೨ ದಾನಗಳನ್ನು ನೀಡಿದ್ದಾನೆ. ಈ ಎರಡೂ ದಾನಗಳನ್ನು ಚೊಕ್ಕಪ್ಪೆರುಮಾಳದಾಸನು ಪಡೆದಿರುತ್ತಾನೆ.

(i) ೧೩೩೪ರ ಆವನಿ(ಭಾದ್ರಪದ) ಮಾಸದಲ್ಲಿ ತೇಕಲ್ಲಿನ ಅರುಳಾಳನಾಥನಿಗೆ (ವರದರಾಜಸ್ವಾಮಿ) ಪ್ರಮಾಣವನ್ನು ಮಾಡಿ ಈ ದೇವಾಲಯದ ಅಮೃತಪಡಿ, ಚಂದನ, ನಂದಾದೀವಿಗೆ ಮತ್ತು ದೇವಾಲಯದ ರಿಪೇರಿಯ ಕಾರಣಗಳಿಗಾಗಿ ಧಾರಾಪೂರ್ವಕವಾಗಿ 'ತಲೈಮಲೈನಾಡಿನ' 'ಚಾಮುಂಡಾರ್ಪಳ್ಳಿ' ಎಂಬ ಗ್ರಾಮವನ್ನು ಆಚಂದ್ರಾರ್ಕವಾಗಿ ಸಲ್ಲುವಂತೆ ಸರ್ವಮಾನ್ಯದ ದಾನವನ್ನು ನೀಡಿದ್ದಾನೆ.[೮] (ii) ೧೩೩೪ರ ಭಾದ್ರಪದ ಮಾಸದಲ್ಲಿ ತಗಡಾಧಿರಾಜನು ಈ ದೇವಾಲಯಕ್ಕೆ ನೀಡಿರುವ 'ಸಿಮಿಡಪಟ್ಟುವಿನ' 'ಮಲ್ಯೆಮಂದಿಯಾಗರಮ್' ಎಂಬ ಗ್ರಾಮವನ್ನು ಸರ್ವಮಾನ್ಯವಾಗಿ ದಾನ ನೀಡಿದ್ದಾನೆ. ಈ ಶಾಸನಕ್ಕೆ ಕರ್ಕಡರಾಯನ ಒಪ್ಪವಿದೆ.[೯]

**ಇತರ ದಾನಗಳು :** ಕ್ರಿ.ಶ. ೧೩೩೬ರ ಶಾಸನವೊಂದು ಆವಣಿ(ಭಾದ್ರಪದ) ಮಾಸದಲ್ಲಿ ಮೂರನೆಯ ರಾಜೇಂದ್ರ ಚೋಳನ ಮಗನಾದ ಚಿತ್ತಾನಾದರ್ ಅಥವಾ ಚೋಳಪ್ಪ ಪೆರುಮಾಳ್ ಈ ದೇವಾಲಯಕ್ಕೆ 'ಪುಲಿಕ್ಕುಜಿ' ಎಂಬ ಗ್ರಾಮವನ್ನು ಸರ್ವಮಾನ್ಯದಾಗಿ ಅಮೃತಪಡಿ, ಚಂದನ, ನಂದಾದೀವಿಗೆ ಮತ್ತು ದೇವಾಲಯದ ರಿಪೇರಿಗಾಗಿ ದಾನವನ್ನು ನೀಡಿದ್ದಾನೆ.[೧೦] ಕ್ರಿ.ಶ. ೧೩೩೭ರ ಶಾಸನವೊಂದರಲ್ಲಿ ಧಾತಿ ಸಿಂಗೇದಣ್ಣಾಯಕನ ಕಾಲದ ನಾಯಕನಾದ ಕೋನೆಯಪ್ಪೆಮ್ಮೆ ನಾಯಕನು ತೇಕಲ್ಲಿನ ಅರುಳಾಳನಾಥನಿಗೆ (ವರದರಾಜ) ಈ ದೇವಾಲಯದ ಸ್ಥಾನಿಕನಾದ ಚೊಕ್ಕಪ್ಪೆರುಮಾಳ್ ದಾಸನಿಗೆ ಪ್ರಮಾಣವನ್ನು ಮಾಡಿ 'ಪೊನ್ ಮಾಣಿಕ್ಕ ನಾಡಿನ' 'ಪುತ್ತೂರನ್ನು' ಸರ್ವಮಾನ್ಯವಾಗಿ ದಾನವಿತ್ತುದರ ಉಲ್ಲೇಖವಿದೆ.[೧೧] ಇದೇ ಪೆಮ್ಮೆಯ ನಾಯಕನು ಈ ದೇವಾಲಯಕ್ಕೆ ೧೩೪೩ರಲ್ಲಿ ಮತ್ತೊಮ್ಮೆ ದಾನವನ್ನು ಕೊಟ್ಟಿದ್ದಾನೆ. ತೇಕಲ್ ನಾಡಿನ ಸೀಪತಿಪಳ್ಳಿಯನ್ನು ಮತ್ತು ಗೋವಿಂದನಾಯಕರು ಕಟ್ಟಿಸಿದ ದೊಡ್ಡ ಕೆರೆಯನ್ನು ವರದರಾಜದೇವರ ಅಮೃತಪಡಿ, ಚಂದನ, ಅಭ್ಯಂಜನ, ದೇವಾಲಯದ ರಿಪೇರಿಗೆ ದಾನವಿತ್ತಿದ್ದಾನೆ. ಈ ಶಾಸನದಲ್ಲಿ ಇವನು ಎಱಮಂಜಿ ಪೆಮ್ಮಯ ನಾಯಕನ ಮಗನಾದ ಪೆರಿಯಪೆಮ್ಮೆಯ ನಾಯಕ ಎಂಬ ಹೆಚ್ಚಿನ ಸಂಗತಿ ಕಾಣುತ್ತದೆ.

**ಚೊಕ್ಕ ಪೆರುಮಾಳ್‌ದಾಸ :** ಚೊಕ್ಕಪೆರುಮಾಳ್‌ದಾಸನು ಹೊಯ್ಸಳರ ಕಾಲದಲ್ಲಿ ಈ ದೇವಾಲಯದ ಸ್ಥಾನಿಕನಾಗಿದ್ದು ಈ ದೇವಾಲಯದ ಆಡಳಿತವನ್ನು ನಡೆಸಿದವನು. ಇವನ ಕಾಲದಲ್ಲಿ ಸಂದಾಯವಾಗಿರುವಷ್ಟು ದಾನಗಳು ಇನ್ನಾವ ಕಾಲದಲ್ಲಿಯೂ ಇಲ್ಲ. ದೇವರ ಪೂಜಾಕೈಂಕರ್ಯಗಳು ಇವನ ಕಾಲದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆದುದ್ದರ ಉಲ್ಲೇಖಗಳಿವೆ. ಇವನು ದಾನವನ್ನು ಸ್ವೀಕರಿಸುವುದು ಮಾತ್ರವಲ್ಲ ನೀಡುವುದರಲ್ಲೂ ಸಮರ್ಥನಾಗಿದ್ದನು. ಇವನನ್ನು ಶಾಸನಗಳು ಕಲಿಯುಗ ಪ್ರಹ್ಲಾದನ್, ಸಮಯ ದೊಶಕ ಗಂಡನ್ ಎಂದೆಲ್ಲಾ ಕೊಂಡಾಡಿದೆ. ಇವನ ಶಾಸನಗಳು ಈ ದೇವಾಲಯದಲ್ಲಿ ೧೩೧೦ ರಿಂದ ೧೩೫೬ ರವರೆಗಿನ ಅವಧಿಯಲ್ಲಿ ದೊರೆಯುತ್ತದೆ. ತೇಕಲ್ಲಿನ ವರದರಾಜಸ್ವಾಮಿಯ ಗುಡಿಯ ಶಾಸನಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದ ಶಾಸನವೆಂದರೆ ೧೩೧೦ರ ಶಾಸನ. ಈ ಶಾಸನದಲ್ಲಿ ವರದರಾಜಸ್ವಾಮಿಯ ಗುಡಿಯ ಸ್ಥಾನಿಕನಾದ ಚೊಕ್ಕಪೆರುಮಾಳದಾಸನು ಈ ದೇವಾಲಯದ ನಂಬಿಮಾರ್‌ಭಟ್ಟರ್, ಪೆರುಮಾಳಭಟ್ಟರ್, ಮೇಲ್ಪಾಡಿ ದಾಮೋದರ ಪೆರುಮಾಳಭಟ್ಟರ್, ಚೊಕ್ಕರ್‌ಪೆರಿಯ ಪೆರುಮಾಳ್, ಕೇಶವ ಪೆರುಮಾಳ್, ಕರುಣಾಕರ ಪೆರುಮಾಳ್ ಎಂಬ ೬ ಜನ ಪೂಜಾರಿಗಳಿಗೆ ದಾನವನ್ನು ನೀಡಿ, ಈ ೬ ಜನರಲ್ಲಿ ವರಂದರುಮ್‌ಪೆರುಮಾಳ ಮತ್ತು ದಾಮೋದರ ಪೆರುಮಾಳರೆಂಬ ಇಬ್ಬರು ಅರ್ಚಕರನ್ನು ಮುಖ್ಯ ಅರ್ಚಕರಾಗಿ ನೇಮಿಸಿ, 'ವತಿಹಳ್ಳಿಯ' ದೊಡ್ಡ ಏರಿಯ ಬಳಿ ಮುಕ್ಕಂಡುಗ ಗದ್ದೆಯನ್ನು ಇವರಿಗೆ ದಾನವಾಗಿ ಬಿಟ್ಟಿದ್ದಾನೆ.[೧೩]

ಕ್ರಿ.ಶ. ೧೩೩೬ ರಲ್ಲಿ ಚೊಕ್ಕಪೆರುಮಾಳ ದಾಸನು ಈ ದೇವಾಲಯದ ಅರಣಿಗೆ ಪ್ರಮಾಣವನ್ನು ಮಾಡಿ 'ಕೋಯಿರ್ ತಿರುಚ್ಚ್ಯೂ'ರಲ್ಲಿ ಭೂಮಿಯನ್ನು ಹಾಗೂ 'ಆಳಂಬಾಳಿನಲ್ಲಿ' ೧ ಖಂಡುಗ ಗದ್ದೆಯನ್ನು ದಾನವಾಗಿ ನೀಡಿದನು.[೧೪]

ಕ್ರಿ.ಶ. ೧೩೩೮ರಲ್ಲಿ ಹೊಯ್ಸಳ ಮಹಾಪ್ರಧಾನನಾದ ವಲ್ಲಪ್ಪ ದಣ್ಣಾಯಕನ ತೋಳಿಗೂ ಮತ್ತು ಬಾಳಿಗೂ (ಕತ್ತಿ) ಜಯವಾಗಲೆಂದು ಚೊಕ್ಕಪೆರುಮಾಳ ದಾಸನು ೮ ಜನ ಪೂಜಾರಿಗಳಿಗೆ ತೆರಿಗೆ ಮನ್ನಾ ಮಾಡಿ ಹಬ್ಬಗಳ ಸಂದರ್ಭದಲ್ಲಿ ಅವರಿಗೆ ಕೆಲವು ಹಣವನ್ನು ಕೊಟ್ಟು ಕೆಲವು ಭೂಮಿಯನ್ನು ದಾನವಾಗಿ ನೀಡಿದ್ದಾನೆ.[೧೫]

೧೩೫೬ರಲ್ಲಿ ಚೊಕ್ಕ ಪೆರುಮಾಳ್‌ದಾಸನು ವರದಿಗೆ ತೇಕಲ್‌ನಾಡಿನ ಆಳಂಬಾಳುವಿನಲ್ಲಿ ದೊಡ್ಡ ಏರಿಯಲ್ಲಿ ೧೫ ಗುಳಿಗ ಗದ್ದೆಯನ್ನು, ಮೇರ್ಪಾಡಿ ಊರಿನಲ್ಲಿ ೧ ಕಂಡುಗ ಹೊಲವನ್ನು ದಾನ ಮಾಡಿದ್ದಾನೆ.[೧೬] ಬಹುಶಃ ೧೩೫೬ರಲ್ಲಿ ಕೊಟ್ಟದಾನವೇ ಚೊಕ್ಕಪೆರುಮಾಳದಾಸನು ಕೊಟ್ಟ ಕೊನೆಯ ದಾನವಿರಬೇಕು. ನಂತರದ ಶಾಸನಗಳಲ್ಲಿ ಇವನ ಪ್ರಸ್ತಾವವಿರುವ ಯಾವ ಶಾಸನಗಳು ಇಲ್ಲ. ಒಂದು ವಿಷಾದದ ಸಂಗತಿಯೆಂದರೆ ಇವನ ಕಾಲದಲ್ಲಿ ದೇವಾಲಯದ ಯಾವ

ಭಾಗವನ್ನಾಗಲಿ ಇನ್ನಿತರ ನಿರ್ಮಾಣದ ಯಾವ ವಿಷಯದ ಉಲ್ಲೇಖವೂ ಇಲ್ಲ. ಬಹುಶಃ ಈ ದೇವಾಲಯದ ನವರಂಗದ ವರೆಗಿನ ಈಗ ನಾವು ಕಾಣುವ ಭಾಗಗಳು ಇವನ ಕಾಲದ ಹೊತ್ತಿಗೆ, ನಿರ್ಮಾಣವಾಗಿದ್ದವು. ಹೊಯ್ಸಳ ಶೈಲಿಯ ಈ ವಾಸ್ತುಭಾಗವು ಇವನ ಕಾಲದಲ್ಲಿ ಅಥವಾ ಇದಕ್ಕೂ ಮುಂಚೆ ನಿರ್ಮಾಣವಾಗಿದೆ.

**ಗೋಪರಾಜ** : ವಿಜಯನಗರದ ಅರಸು ೨ ನೆಯ ದೇವ ರಾಯನ ಬಲಭುಜದ ಪ್ರತಾಪನಾಗಿ ದೇವರಾಯನ ಆಪ್ತ ವಲಯದಲ್ಲಿ ಇದ್ದವನು ಸಾಳುವ ತಿಪ್ಪರಾಜ ಒಡೆಯನ ಮಗ ಗೋಪರಾಜ. ಈ ದೇವರಾಯನ ನಿರೂಪದಂತೆ ಮುಳಿವಾಯಿ ರಾಜ್ಯ [ಮುಳಬಾಗಿಲು ರಾಜ್ಯ]ದ ಒಡೆಯ ರಾದ ಮಾದಣ್ಣ ಒಡೆಯರು ಮತ್ತು ಲಕ್ಕಣ್ಣ ಒಡೆಯರು ತೇಕಲ್ಲಿಗೆ ಬಂದು ಮುಳಿವಾಯಿ ರಾಜ್ಯಕ್ಕೆ ಸೇರಿದ ತೇಕಲ್ ನಾಡನ್ನು ಗೋಪ ರಾಜನಿಗೆ ತೇಕಲ್ಲನ್ನು ಆಳಲು ಕೊಟ್ಟರು.[೧೭] ತರುವಾಯ ಗೋಪರಾಜನು ಮಹಾಮಂಡಳೇಶ್ವರನಾಗಿ ತೇಕಲ್ಲನ್ನು ಆಳಿದನು. ಇವನನ್ನು ಶಾಸನಗಳು ಮಹಾ ಮಂಡಳೇಶ್ವರ, ಮೇದಿನಿ ಮೀಸರಗಂಡ, ಕಠಾರಿಸಾಳುವ, ತ್ರಿಭುವನರಾಯ, ಗಂಡರಗೂಳಿ, ಸಂಬುರಾಯ ಸ್ಥಾಪನಾಚಾರ್ಯ, ದಕ್ಷಿಣ ಸುರ ತಾಳ, ವಿಭಾಡರಾಯ, ಪಕ್ಷಿಸಾಳುವ ಎಂದೆಲ್ಲಾ ಹೊಗಳಿವೆ.

ಹಿಂದೆ ಹೊಯ್ಸಳರ ಮಂಡಳೇಶ್ವರರಾಗಿದ್ದ ಸಿಂಗಿ ದಣ್ಣಾಯಕ ಮತ್ತು ವಲ್ಲಪ್ಪ ದಣ್ಣಾಯಕರು ಕಟ್ಟಿಸಿದ್ದ ಕಲ್ಲುಕೋಟೆ ತಳಮಟ್ಟವಾಗಿ ಬಿದ್ದುಹೋಗಿತ್ತು. ವರದರಾಜಸ್ವಾಮಿಯ ನಿರೂಪದಂತೆ ತೇಕಲ್ಲಿನಒಡೆಯ ಗೋಪರಾಜನು ಇದರ ಪುನಃಪ್ರತಿಷ್ಠೆ ಆಗಬೇಕೆಂದು ಯೋಚಿಸಿ ತಾನು ಮತ್ತು ತನ್ನ ಪ್ರಧಾನನಾದ ಸಿಂಗರಾಜನ ಮೂಲಕ ತೇಕಲ್ಲಿಗೆ ಒಳಕೋಟೆ ಮತ್ತು ಹೊರಕೋಟೆಯನ್ನು ಭದ್ರವಾಗಿ ಕಟ್ಟಿಸಿದನು.[೧೮] ವರದರಾಜಸ್ವಾಮಿ ಗುಡಿಗೆ ಮುಖ್ಯದ್ವಾರವನ್ನು ಮಾಡಿಸಿದಾಗ ೧೪೩೦ರಲ್ಲಿ ಬಡಗಿಯಾದ ಚೋಜದೇವ ಮತ್ತು ಅಂಜಲಿ, ಅಂಗೋಜಗಳಿಗೆ ಕುದುರೆ ಸತ್ತಿಗೆಗಳನ್ನು ಕೊಟ್ಟು ಗೋಪ ರಾಜನು ತಾನೇ ಧಾರೆಯೆರೆದು ಕೆಲವು ಭೂಮಿಯನ್ನು ಅವರಿಗೆ ದಾನವಾಗಿ ನೀಡಿದ್ದಾನೆ. ಇಬ್ಬರಿಗೂ 'ಸಿವದಿಹಳ್ಳಿ ಯಲ್ಲಿ' ೧॥ ಖಂಡುಗ ಗದ್ದೆಯನ್ನು ಕಾಣಿಯಾಗಿ ನೀಡಿದ್ದಾನೆ.[೧೯]

ಈಗ ನಾವು ಈ ಗುಡಿಯಲ್ಲಿ ಕಾಣುವ ಮುಖಮಂಟಪ, ಗರುಡಸ್ತಂಭ, ಬಲಿಪೀಠ, ಮುಖ್ಯಪ್ರಾಕಾರ, ಮುಖ್ಯಗೋಪುರ ಎಲ್ಲವೂ ಗೋಪರಾಜನ ಕಾಲದಲ್ಲಿಯೇ ನಿರ್ಮಾಣವಾದುದು. ವರದರಾಜ ಗುಡಿಯ ಪಕ್ಕದಲ್ಲಿರುವ ಅಮ್ಮನವರ ಗುಡಿಯೂ ಸಹ ಇವನ ಕಾಲದ್ದು. ವರದರಾಜ ಗುಡಿಯ ಮುಖ್ಯದ್ವಾರದ ಎಡಗಡೆ ಮತ್ತು ಬಲಗಡೆ ಇರುವ ಸಾಕಷ್ಟು ದೀರ್ಘವಾದ ಶಾಸನಗಳು ಇವನ ಕಾಲದ ರಚನೆಗಳನ್ನು ಮತ್ತು ದಾನಗಳನ್ನು ಕುರಿತು ಮಹತ್ವದ ಸಂಗತಿಗಳನ್ನು ತಿಳಿಸುತ್ತವೆ.

೧೪೩೦ರಲ್ಲಿ ಸಿಂಗರಾಜನು ಮುಖ್ಯದ್ವಾರವನ್ನು ನಿರ್ಮಿಸಿದಾಗ ಈ ದೇವಾಲಯದ ರಂಗಭೋಗದಲ್ಲಿದ್ದ ಸುಮಾರು ೨೦ ಜನ ನಟಯರು, ವಾದ್ಯಗಾರರಿಗೆ, ಅನೇಕ ದತ್ತಿಗಳನ್ನು ಗೋಪರಾಜನು ಧಾರೆಯೆರೆದು ನೀಡಿದ್ದಾನೆ.

ಈ ದೇವಾಲಯದ ಅಂಗಪೂಜೆಯಲ್ಲಿ ನಿರತರಾಗಿದ್ದ ಪೂಜಾರಿಗಳಾದ ತಿಗುಳಬ್ರಾಹ್ಮಣರು ವರದರಾಜಭಟ್ಟರು, ದೇವರಾಜ ಭಟ್ಟರು, ಶಾಮಂಣನವರು, ಪರಿಚಾರಕರಾದ ರಾಮರು. ದೇವರಿಗೆ ಬೋನವ ಮಾಡುವ ಅಳಗಿವರದರು, ದೇವರನಾಮ ಸ್ಮರಣೆಯನ್ನು ಮಾಡುವ ಶ್ರೀ ವೈಷ್ಣವರು, ಆಯಿ ಪಿಳ್ಳೆ ಬನ್ನೂರುಘಟ್ಟದ ತಿರುವೆಂಗಡದಾಸರು, ಹಿರಿಯ ದಾಸನು, ದೇವಣ್ಣನು, ವಿನವರದಣ್ಣನು, ಮಾಧವದಾಸನು ಇವರೆಲ್ಲರು ಈ ಸಂದರ್ಭದಲ್ಲಿ ಸ್ವತಃ ಗೋಪರಾಜನ ಕೈಯಿಂದಲೇ ದಾನವನ್ನು ಸ್ವೀಕರಿಸಿದ್ದಾರೆ ಮತ್ತು ಈ ದೇವಾ ಲಯದ ರಂಗಭೋಗ ಸೇವೆಯಲ್ಲಿ ನಿರತರಾಗಿದ್ದ ಶಂಖ ನುಡಿಸುತ್ತಿದ್ದ ಶ್ರೀರಂಗ, ಉಪಾಂಗಕ್ಕಿದ್ದ ವರದ, ಹಾಡುತ್ತಿದ್ದ ವರದಿಕಾ. ಅವರ ಮಗಳು ಅಲ್ಲಿನಾಚಿ, ಅರಂಗಿದೇವಿ, ನಟುವ ನಾಯಿನಾರು ಮಗಳು ಚಿಕ್ಕನಾಚಿ ಮುಂತಾದವರಿ ಗೆಲ್ಲರಿಗೂ ಗೋಪರಾಜನು ಸೆಟ್ಟಿಹಳ್ಳಿಯನ್ನು ಧಾರೆಯೆರೆದು ಕೊಟ್ಟನು.

ಇದಲ್ಲದೆ ಇಲ್ಲಿಯ ಸುಮಾರು ೨೦ ಜನ ನಟಿಯರಿಗೆ, ಹಾಡುವವರಿಗೆ ವಾದ್ಯ ನುಡಿಸುವವರಿಗೆ [ಇವರೆಲ್ಲ ದೇವಾ ಲಯದ ರಂಗಭೋಗದ ನೃತ್ಯ ಸೇವೆಯಲ್ಲಿದ್ದವರು] ತೇಕಲ್ ನಾಡಿನ 'ಆಳಂಬಾಳು', 'ಕೆಂಮಾಳ', 'ವತಿಹಳ್ಳಿ', 'ವಿರಂಗ ಪುತ್ತೂರು' 'ಹುಣಿಸೆಕೊಪ್ಪ', 'ಅಂಣಂದನಹಳ್ಳಿ', ಎಂಬ ಗ್ರಾಮ ಗಳನ್ನು ದಾನವಾಗಿ ನೀಡಿದ್ದಾನೆ. ಇದರ ಮೂಲಕ ಈ ಹಳ್ಳಿ ಗಳಲ್ಲಿ ದೇವಾಲಯದ ರಂಗಭೋಗ ಸೇವೆಯಲ್ಲಿ ನಿರತರಾಗಿ ದ್ದವರು ವಾಸಿಸುತ್ತಿದ್ದುದಕ್ಕೆ ಸ್ಪಷ್ಟವಾದ ಉಲ್ಲೇಖವಾಗಿದೆ.

ಇಂತಹ ಗೋಪರಾಜನು. ತನ್ನ ಮಹಾಪ್ರಧಾನನಾಗಿದ್ದ ಸಿಂಗರಾಜನು ಕಟ್ಟಿಸಿದ ಗೋಪಸಮುದ್ರ [ಇಂದಿನ ಗೋಪ ಸಂದ್ರ] ಎಂಬ ಊರಿನಲ್ಲಿ, ಸಿಂಗರಾಜನೇ ನಿರ್ಮಿಸಿದ ಅರಮನೆಯಲ್ಲಿ ವಾಸಿಸುತ್ತಿದ್ದುದಕ್ಕೆ ಸ್ಪಷ್ಟವಾದ ಶಾಸನಾಧಾರ ಇದೆ.[೨೦]

**ಸಿಂಗರಾಜ** : ಮಲ್ಲಮರಾಜನ ಸುಪುತ್ರನಾದ ಸಿಂಗ ರಾಜನು ಮಹಾಮಂಡಳೇಶ್ವರನಾದ ಗೋಪರಾಜನಿಗೆ ಮಹಾಪ್ರಧಾನ ನಾಗಿದ್ದುಕೊಂಡು ತೇಕಲ್‌ನಾಡಿಗೆ, ವರದರಾಜ

ಗುಡಿಗೆ ಮತ್ತು ಗೋಪರಾಜನಿಗೆ ಅವನು ಮಾಡಿದ ಉಪಕಾರ ದೊಡ್ಡದು. ಈ ಹಿಂದೆ ಪ್ರಸ್ತಾಪಿಸಿದ ಗೋಪರಾಜನ ಮಹತ್ವದ ಕಾರ್ಯ ಗಳ ಹಿಂದೆ ಮುಕ್ಕಾಲು ಭಾಗ ಸಿಂಗರಾಜನ ಶ್ರದ್ಧೆಯಿದೆ. ತನ್ಮೂಲಕ ತೇಕಲ್‌ನಾಡಿನ ಅತ್ಯಂತ ಮುಖ್ಯ ಸಂಸ್ಕೃತಿ ಸಂಪನ್ನನಾಗಿ ಸಿಂಗರಾಜನ ಕೊಡುಗೆ ದೊಡ್ಡದು.

ತೇಕಲ್‌ನಾಡಿಗೆ ಸಿಂಗರಾಜನು ಎರಡುಸುತ್ತಿನ ಕೋಟೆ ಯನ್ನು ಕಟ್ಟಿಸಿದನು ಮತ್ತು ವರದರಾಜಸ್ವಾಮಿಯ ತಿರುಮಾನಕ್ಕೆ [ವಿಶೇಷ ದಿನಗಳಲ್ಲಿ ನಡೆಯುವ ಉತ್ಸವ] ದೇವಾಲಯದ ಹಿಂದೆ ಮತ್ತು ಮುಂದಣ ಭಾಗದಲ್ಲಿ ಮಂಟಪವನ್ನು ಕಟ್ಟಿಸಿದನು.[೨೧] ಗೋಪರಾಜನ ಹೆಸರನ್ನು ಶಾಶ್ವತವಾಗಿರಿಸಲು ಅವನ ಹೆಸರಿನಲ್ಲಿ ಗೋಪಸಮುದ್ರ ಎಂಬ ಕೊಳವನ್ನು ಕಟ್ಟಿಸಿ ಈ ಕೊಳದ ಪಡುವಣ ಭಾಗದಲ್ಲಿ ಗೋಪರಾಜ ನಿಗೆ ಅರಮನೆಯನ್ನು ಕಟ್ಟಿಸಿದವನೇ ಸಿಂಗರಾಜನು.

ವರದರಾಜಸ್ವಾಮಿಯ ಪರಮಭಕ್ತನಾಗಿದ್ದ ಸಿಂಗ ರಾಜನು, ದೇವಾಲಯದ ಬಲಭಾಗದಲ್ಲಿ ತನಗೆ ಅರಮನೆ ಯನ್ನು ಕಲ್ಪಿಸಿಕೊಂಡನು. "ಈತನು ಉದಯತ್ತಿಸಂಧ್ಯ ಕಾಲದಲ್ಲಿ ಎರಡು ಹೊತ್ತಿನ ಸ್ನಾನ, ಔಪಾಸನ, ಮನೆಯ ದೇಹಾರವನ್ನು ಮಾಡಿ ವರದರಾಜದೇವರ ಶಿಖರ ಸಂದರ್ಶನವ ಮಾಡಿ ದೇವರಿಗೆ ನೈವೇದ್ಯ, ತಾಂಬೂಲ ಮುಂತಾದವುಗಳನ್ನು ಸಮರ್ಪಿಸಿ, ತೊಳಸಿತೀರ್ಥವನ್ನು ಕೊಂಡು, ಅಂಗರಂಗಭೋಗವನ್ನೇ ಪ್ರತಿಷ್ಠೆ ಮಾಡಿಸಿದನು. ದೇವರ ಮುಖಮಂಟಪದ ಮುಂದೆ ಇರುವ, ಈ ಹಿಂದೆ ಕುಂಡಪ ದಣ್ಣಾಯಕರ ಕಟ್ಟಿಸಿದ ಮೂಡಣ ಗೋಪುರಕ್ಕೆ ಕದವನ್ನು ಮಾಡಿಸಿ ಈ ಶುಭ ಸಂದರ್ಭದಲ್ಲಿ, ಲಂಖಣ್ಣ ಒಡೆಯರಿಗೂ, ಮಾದಣ್ಣ ಒಡೆಯರಿಗೂ, ತಿಪ್ಪರಾಜ ಒಡೆಯ ರಿಗೂ, ಗೋಪರಾಜ ಒಡೆಯರಿಗೂ ಸಕಲ ಸಾಮ್ರಾಜ್ಯವಾಗ ಬೇಕೆಂದು 'ಚಿಕಟಿಮಂಗಲ'ದ ಅಗ್ರಹಾರವನ್ನು, ದೇವರಿಗೆ ೧೨ ಖಂಡುಗ ಗದ್ದೆಯನ್ನು ಧಾರೆನೆರೆದು ಬಿಟ್ಟನು.

ಈ ಶಾಸನದ ಮುಖ್ಯ ಸಂಗತಿಯೆಂದರೆ ಈ ಹಿಂದೆಯೇ ಕುಂಡಪ ದಣ್ಣಾಯಕನು ಈ ದೇವಾಲಯಕ್ಕೆ ಗೋಪುರವನ್ನು ಕಟ್ಟಿಸಿದ್ದನು. ಇದಕ್ಕೆ ಸಿಂಗರಾಜನು ಬಾಗಿಲನ್ನು ಮಾಡಿಸಿದನು ಎಂಬುವ ದೀರ್ಘವಾದ ವಿವರವು ಒಂದು ಶಾಸನದಲ್ಲಿ ವ್ಯಕ್ತವಾಗಿದೆ.

"ವಿಜಯನಗರದ ಅರಸು ದೇವರಾಯನು ಆಳುತ್ತಿರು ವಾಗ ಅವನ ಭುಜಬಲದ ಪ್ರತಾಪನಾಗಿ ಮತ್ತು ಮಹಾ ಮಂಡಳೇಶ್ವರನಾಗಿ ಗೋಪರಾಜನು ಆಳುತ್ತಿದ್ದನು. ಈ ಗೋಪ ರಾಜನ ಮಹಾಪ್ರಧಾನವಾಗಿದ್ದ ಮಲ್ಲಮರಾಜನ ಮಗನಾದ ಸಿಂಗರಾಜನು ಪೊಲೆನಾಡ ಮಾದನಹಳ್ಳಿಗೂ ಪಡುವಣದಲ್ಲಿದ್ದ ಮಾರಗೌಡನಕಟ್ಟೆಯ ಮೇಲಕ್ಕಿರುವ ಗಂಡಭೇರುಂಡದಂತಿದ್ದ ಮಾವಿನ ಮರವನ್ನು ಮತ್ತು ಮಾರನಹಳ್ಳಿಗೆ ಅಡ್ಡಬರುವ ಹೊಲದಿಂದ ಕಟ್ಟಿಕೆಯನ್ನು ತರಿಸಿ ಕಲ್ಲುವರದರಾಜ ದೇವರ ಮುಖಮಂಟಪದ ಗೋಪುರದ ಕದವಿಗೆ ತರಿಸಿ ತೇಕಲ್ಲಿನಲ್ಲಿ ಬಡಗಿಯಾಗಿದ್ದ ಬೇವೋಜನ ಮಗ ಚೋಜದೇವೋಜಗಳ ಕೈಯಿಂದ ಮರಗೆಲಸವನ್ನು ಮಾಡಿಸಿ ಈ ದೇವಾಲಯದ ಗೋಪುರಕ್ಕೆ ಸುಂದರವಾದ ಮಾವಿನ ಮರದ ಬಾಗಿಲನ್ನು ಮಾಡಿಸಿದನು.[೨೨] ಈ ಕದಕ್ಕೆ ಅಂಜಲಿಲಿಂಗೋಜಗಳ ಕೈಯಲ್ಲಿ ಕಬ್ಬಿಣದ ಕೆಲಸವನ್ನು ಮಾಡಿಸಿ ಈ ಇಬ್ಬರು ವೋಜಗಳಿಗೆ ಗೋಪರಾಜನ ವತಿಯಿಂದ ದಾನಗಳನ್ನು ನೀಡಿದ್ದುದರ ಉಲ್ಲೇಖ ಈ ಹಿಂದೆಯೇ ಬಂದಿದೆ.

ತೇಕಲ್ಲಿಗೆ ಎರಡು ಸುತ್ತಿನ ಕೋಟೆಯನ್ನು ನಿರ್ಮಿಸಿದ ಮೇಲೆ. ಈ ಶುಭ ಸಂದರ್ಭದ ಸವಿನೆನಪಿಗೆ ವರದರಾಜ ಸ್ವಾಮಿಯ ಮುಖಮಂಟಪದ ಸನ್ನಿಧಿಯಲ್ಲಿ 'ರಾಜ ಗಂಭೀರ' ಎನ್ನುವ ಕೊತ್ತಳವನ್ನು ಸಿಂಗರಾಜನು ಮಾಡಿಸಿದನು. ಈ ಶುಭ ಸಂದರ್ಭದಲ್ಲಿ ಗೋಪರಾಜನ ಮಗನಾದ ತಿಪ್ಪಯ್ಯನು ಹುಲಿಗಳನ್ನು ಹಿಡಿದು ತರಿಸಿ ಬೇಟೆಯಾಡಿದನು[೨೩] ಎಂದು ಒಂದು ಶಾಸನವು ತಿಳಿಸುತ್ತದೆ. ಇಂದಿಗೂ ಈ ಪ್ರಾಂತ್ಯದಲ್ಲಿ ಚಿರತೆ ಬೇಟೆಯಾಡುವ ಕತೆಗಳು ಜನಜನಿತವಾಗಿದ್ದು ಈಗಲೂ ದೇವಾಲಯದ ಎಡಗಡೆ ಇರುವ ಒಂದು ಕೋಣೆಯಲ್ಲಿ ಒಂದು ದೊಡ್ಡ ಮರದ ಚಿರತೆ ಬೋನು ಇದೆ.

ಈ ದೇವಾಲಯಕ್ಕೆ ಸಂಬಂಧಿಸಿದಂತೆ ನಮಗೆ ಸಿಗುವ ಕೊನೆಯ ಶಾಸನ ೧೪೯೯ ರ ಕಾಲದ್ದು. ಕಟಾರಿಸಾಳುವ ನರಸಿಂಹನು ರಾಜನಾಗಿದ್ದ ಕಾಲದಲ್ಲಿ ನರಸನಾಯಕನು ಪೃಥ್ವಿಯನ್ನು ಆಳುತ್ತಿದ್ದನು. ಈ ಕಾಲದಲ್ಲಿ ಕಶ್ಯಪ ಗೋತ್ರದ ನಾಗಸಿದ್ದಯ ವಂಶದಲ್ಲಿ ಜನಿಸಿದ, ಮಂಡಳೀಕ ರವಿ ರಾಹು ಎಂಬ ಬಿರುದಾಂಕಿತನಾದ ವಿಶ್ವನಾಥ ರಾಹುತನ ಮಗ ರಾಮರಾಹುತ ಎನ್ನುವ ಮಾಂಡಳಿಕನು ತೇಕಲ್ ಅರುಳ್ಳ ನಾಥನಿಗೆ (ವರದರಾಜಸ್ವಾಮಿ) ತೇಕಲ್‌ನಾಡಿನ 'ತಮ್ಮಟ್ಟತೆರೈ' ಗ್ರಾಮದ ನಾಲ್ಕು ಸೀಮೆಯನ್ನು ಗುರುತಿಸಿ, ಸರ್ವಮಾನ್ಯದ ಶಾಸನವನ್ನು, ಈ ದೇವಾಲಯದ ಅಮೃತಪಡಿ, ಶಾತ್ತುಪ್ಪಡಿ (ಚಂದನ), ತಿರುವಿಳಕ್ಕು (ನಂದಾದೀಪಕ್ಕೆ) ತಿರುಪಣ್ಣಿಕ್ಕು (ದೇವಾಲಯದ ರಿಪೇರಿಗಾಗಿ) ಕಾರಣಗಳಿಗಾಗಿ ದಾನವನ್ನು ನೀಡಿದ್ದಾನೆ.[೨೪]

**ಪೂಜಾ ಕೈಂಕರ್ಯಗಳು** : ಈ ದೇವಾಲಯದ ಶಾಸನಗಳಲ್ಲಿ ಪೂಜಾಕೈಂಕರ್ಯಗಳ ಪ್ರಸ್ತಾಪವೂ ವಿಶೇಷವಾಗಿ ಬರುತ್ತದೆ. ಈ ಎಲ್ಲಾ ಪಾರಿಭಾಷಿಕ ಪದಗಳನ್ನು ಒಂದು ಗೂಡಿಸಿ ಅದರ ಪುಟ್ಟ ವಿವರಣೆಯನ್ನು ಈ ಮುಂದೆ ನೀಡ ಲಾಗಿದೆ. ಈ ದೇವಳಕ್ಕೆ 'ಅಮುದಪಡಿ' (ಅಮೃತಪಡಿ) ಗಾಗಿ

ಪ್ರತಿಯೊಬ್ಬ ದಾನಿಗಳು ದಾನವನ್ನು ನೀಡಿದ್ದಾರೆ. ಆದುದರಿಂದ ಈ ದೇವಾಲಯದಲ್ಲಿ ನಿತ್ಯಪ್ರಸಾದವು ಆಗುತ್ತಿತ್ತು ಎಂದು ಗೊತ್ತಾಗುತ್ತದೆ. ಇನ್ನೊಂದು ವಿಶೇಷ ಪದ 'ಶಾತ್ತುಪ್ಪುಡಿ' ಎಂದರೆ ಶ್ರೀಚಂದನದ ಸೇವೆ. ದೇವರ ಅರ್ಚಾಮೂರ್ತಿಗೆ ಚಂದನವನ್ನು ಲೇಪಿಸುವುದು ಒಂದು ಸಂಪ್ರದಾಯ. ಬಹುಶಃ ಅರ್ಚಾಮೂರ್ತಿಯೂ ಸ್ಪಷ್ಟವಾಗಿ ಕಾಣಲೆಂದು ಈ ರೀತಿ ಮಾಡುತ್ತಿದ್ದಿರಬೇಕು. 'ತಿರುವಿಳಕ್ಕು' ಎಂದರೆ ನಂದಾದೀಪ. ಈ ದೇವಾಲಯದಲ್ಲಿ ಸದಾ ನಂದಾದೀಪ ಉರಿಯುತ್ತಿರ ಬೇಕೆಂದು ಬಹುತೇಕ ಎಲ್ಲಾ ದಾನಿಗಳು ದಾನವನ್ನು ನೀಡಿದ್ದಾರೆ. ಕೇವಲ ಮೂಲ ಮೂರ್ತಿಯ ಮುಂದೆಯೇ ಅಲ್ಲದೆ ಈ ದೇವಾಲಯದಲ್ಲಿರುವ ಆಳ್ವಾರುಗಳ, ಆಚಾರ್ಯರ ಶಿಲ್ಪಗಳ ಎದುರೂ ಮತ್ತು ದೇವಳದ ಅನೇಕ ಭಾಗಗಳಲ್ಲಿ ಈ ದೀಪಗಳನ್ನು ಬಹುಶಃ ಹೊತ್ತಿಸುದ್ದಿರಬೇಕು. 'ತಿರುಪಣ್ಣಿಕ್ಕು' ಎಂದರೆ ದೇವಾಲಯದ ರಿಪೇರಿಗಾಗಿ ನೀಡುವ ದಾನ. ದೇವಾಲಯದ ಯಾವ ಭಾಗವೂ ಹಾಳಾಗಬಾರದು. ಒಂದು ವೇಳೆ ಹಾಳಾದರೆ ಮತ್ತು ದೇವಾಲಯಕ್ಕೆ ಹೆಚ್ಚಿನ ಭಾಗವನ್ನು ನಿರ್ಮಿಸಬೇಕಾದರೆ ಈ ದಾನವನ್ನು ನೀಡುತ್ತಾರೆ. ಈ ದೇವಾಲಯಕ್ಕೆ ದಾನ ನೀಡಿದ ಪ್ರತಿಯೊಬ್ಬರೂ ಇದರ ರಿಪೇರಿಗಾಗಿ ಹಲವಾರು ಗ್ರಾಮಗಳನ್ನು ಉಂಬಳಿ ನೀಡಿದ್ದರೂ ಈ ದೇವಾಲಯದ ಸ್ಥಿತಿ ಅಷ್ಟೇನೂ ಚೆನ್ನಾಗಿಲ್ಲ. ಇಂದಿಗೂ ಅದರ ರಿಪೇರಿ ನಡೆಯುತ್ತಲೇ ಇರುತ್ತದೆ. 'ತಿರುಮೇರ್ ಪೂಚ್ಚು' ಎಂದರೆ ದೇವರ ನಿತ್ಯಸ್ನಾನವಾದ ಅಭ್ಯಂಜನ ಸೇವೆ. ಇದಾದನಂತರ ದೇವಾಲಯದ ಅನೇಕ ಸೇವೆಗಳಲ್ಲಿ ಮುಖ್ಯವಾದದ್ದು ದೇವರಿಗೆ ಹೂಮಾಲೆಯನ್ನು ಸಮರ್ಪಿಸುವುದು. ಈ ಪುಷ್ಪ ಸೇವೆಯಲ್ಲಿ ತುಳಸಿಯ ಹಾರದ ಪಾತ್ರವೂ ವಿಶೇಷವೇ ಇದನ್ನು 'ತಿರುಮಾಲೈ' ಎಂದು ಇಲ್ಲಿನ ಶಾಸನಗಳು ಪ್ರಸ್ತಾಪಿಸುತ್ತದೆ.

ಈ ದೇವಾಲಯದಲ್ಲಿ ಒಂದು ಜಾವ, ಎರಡು ಜಾವ, ನಾಲ್ಕು ಜಾವಗಳಲ್ಲಿ ಪೂಜೆಯನ್ನು ಮಾಡಿ ಪ್ರಸಾದವನ್ನು ಹಂಚುತ್ತಿದ್ದರು. ಈ ಸೇವೆಗಳನ್ನು 'ನಾಳಿ ಪ್ರಸಾದ' ಎನ್ನುತ್ತಿದ್ದರು. ಇವುಗಳಲ್ಲಿ ನಾಟಿ ಪ್ರಸಾದ (ಒಂದು ಪ್ರಹರದಲ್ಲಿ ಮಾಡುವ ಸೇವೆ) 'ಇರುನಾಱಿಪ್ರಸಾದ' (ಎರಡು ಪ್ರಹರದಲ್ಲಿ ಮಾಡುವ ಸೇವೆ), 'ನಾಱ್‌ವಳಿ ನಾಟಿ ಪ್ರಸಾದ' (ಒಂದು ದಿನದಲ್ಲಿ ನಾಲ್ಕು ಜಾವದಲ್ಲಿ ಮಾಡುವ ಸೇವೆ). ಈ ಪ್ರಸಾದಗಳನ್ನು ತಯಾರಿಸಲು ಅರಗಿ ಎನ್ನುವವಳು ಒಬ್ಬಳು ಇದ್ದಳೆಂದು ಶಾಸನವೊಂದು ಉಲ್ಲೇಖಿಸುತ್ತದೆ.

ಈ ದೇವಾಲಯದ ಶಾಸನಗಳಲ್ಲಿ ಇರುಪಡಿಯ ಉಲ್ಲೇಖವೂ ಇದೆ. ಈ ಮುಖ್ಯವಾದ ಎರಡು ಪಡಿ ಸೇವೆಗಳಲ್ಲಿ 'ಅಮೃತಪಡಿ' ಈ ಹಿಂದೆಯೇ ಉಲ್ಲೇಖವಾಗಿದೆ. ಮತ್ತೊಂದು 'ಪಾಲಪಡಿ'.

ಇದಲ್ಲದೆ ಕೋಯಿರ್ ಪರಿಕರಗಳಿಗಾಗಿ (ದೇವಾಲಯದ ಯಾವುದೇ ರೀತಿಯ ಅವಶ್ಯ ಪರಿಕರಗಳನ್ನು ಕೊಳ್ಳಲು) ಹಲವಾರು ದಾನಗಳು ಇಲ್ಲಿ ಸಂದಾಯವಾಗಿದೆ. ಗರ್ಭಗುಡಿಯಲ್ಲಿ ನಡೆಸುವ ಎಲ್ಲಾ ಪೂಜೆಗಳನ್ನು 'ಶ್ರೀಕಾರ್ಯ' ಎಂದು ಕರೆದು ಇಲ್ಲಿನ ಶಾಸನಗಳು ಈ ಶ್ರೀ ಕಾರ್ಯಗಳನ್ನು ವಿವರಿಸುತ್ತವೆ.

ತಿರುವಂದಿಕಾಪು (ತಿರು=ಶ್ರೀ, ವಂದಿ=ಸಂಧ್ಯೆ ಕಾಪು= ಆರತಿ)ವನ್ನು ದೇವರಿಗೆ ಸಂಧ್ಯಾ ಸಮಯದಲ್ಲಿ ಬೆಳಗುತ್ತಿದ್ದರು. ಈ ಸಂಧ್ಯಾಸಮಯಗಳ ಮಹಾಮಂಗಳಾರತಿ ಸಂದರ್ಭದಲ್ಲಿ 'ತಿರುವಾಯ್‌ಮೋಳಿ' ಎಂಬ ದ್ರಾವಿಡ ವೇದವನ್ನು ಇಲ್ಲಿ ಹಾಡುತ್ತಿದ್ದರು. ಇದಾದ ನಂತರ 'ತಿರುಪ್ಪಲ್ಲಾಂಡು' ವನ್ನು ಹಾಡಿ ದೇವರಿಗೆ ಆಶೀರ್ವದಿಸುವ ಒಂದು ಸಂಪ್ರದಾಯವು ಇಲ್ಲಿತ್ತು. (ತಿರು=ಶ್ರೀ, ಪಲ್=ಹಲವು, ಆಂಡು= ವರ್ಷಗಳು) ಹಲವು ವರ್ಷಗಳ ಕಾಲ ಸುಖವಾಗಿರು ಎಂದು ಮಕ್ಕಳಿಗೆ ಹರಸುವ ರೀತಿಯಲ್ಲಿ ದೇವರಿಗೆ ಹಾರೈಸುವ ಹಕ್ಕು ಅರ್ಚಕನಿಗಲ್ಲದೆ ಇನ್ನಾರಿಗೂ ಇರುವುದಿಲ್ಲ. ಈ ತಿರುಪ್ಪಲ್ಲಾಂಡುವನ್ನು ಹಾಡುತ್ತಿದ್ದುದರ ಮಹತ್ವಪೂರ್ಣ ಉಲ್ಲೇಖ ಈ ದೇವಾಲಯದ ಶಾಸನದಲ್ಲಿದೆ.

ಈ ಎಲ್ಲಾ ಸೇವೆಗಳನ್ನು ತೇಕಲ್ಲಿನ ವರದರಾಜಸ್ವಾಮಿಗೆ ಮಾಡುತ್ತಿದ್ದು ದೇವರ ನಿಮಂದ [ನೈವೇದ್ಯ]ಕ್ಕೆ ಈ ಎಲ್ಲಾ ಸೇವೆಗಳನ್ನು ಮಾಡಿ ತಮ್ಮ ಕೈಲಾದ ಪರಿಷ್ (ಕಾಣಿಕೆ)ಗಳನ್ನು ರಾಜರುಗಳಿಂದ ಸ್ವೀಕರಿಸಿ ದೇವಾಲಯದ ಆಡಳಿತ ಮಂಡಳಿ ವರದರಾಜದೇವರ ಅರುಳಿ (ದಯೆ)ಗೆ ಸಕಲರೂ ಪಾತ್ರರಾಗುವಂತೆ ವೈಭವಯುತವಾದ ಉತ್ಸವಾದಿಗಳನ್ನು ನಡೆಸುತ್ತಿದ್ದುದರ ಉಲ್ಲೇಖಗಳು ಇಲ್ಲಿನ ಶಾಸನಗಳಿಂದ ನಮಗೆ ಲಭ್ಯವಾಗಿದೆ.

(ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಹಾಗೂ ಲೇಖನ ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಿದ ಗುರುಗಳಾದ ಡಾ. ಕೆ.ಆರ್. ಗಣೇಶ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ ಹಾಗೂ ಗೆಳೆಯರಾದ ಬಿ. ಚೆನ್ನಬಸಪ್ಪ ಮತ್ತು ವಿ.ಎಸ್. ಮೂರ್ತಿ ಅವರಿಗೆ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. C. Krishnamurthy : Banahalli : A Neolithic Site. *Archaeology in Karnataka.* Ed|| A. Sundara. Mysore 1990.

೨. SII. VOI, VII, No.3 (ಈ ಸಂಪುಟದಲ್ಲಿ ತೇಕಾಲ್‌ನಾಡಿಟ್ಟಿತ್ತು ಎಂದು ದಾಖಲಾಗಿದ್ದು ಇದನ್ನು ತೇಕಲ್‌ನಾಡೆಟ್ಟಿತ್ತು ಎಂದು ಡಾ|| ಪಿ.ವಿ. ಕೃಷ್ಣಮೂರ್ತಿಯವರು ತಮ್ಮ **'ತಮಿಳು ನಾಡಿನ ಕನ್ನಡ ಶಾಸನಗಳು'** ಪುಸ್ತಕದಲ್ಲಿ ಗ್ರಹಿಸಿದ್ದಾರೆ).

೩. ಪುರಧರ್ಮ ಶಾಸನಗಳು : ಒಂದು ಅವಲೋಕನ, ಪಿ.ವಿ. ಕೃಷ್ಣಮೂರ್ತಿ, **ಇತಿಹಾಸ ದರ್ಶನ** ಸಂ. ೩, (೧೯೮೮), ಪು. ೧೫೨.

೪. *Epigraphia Carnatica Vol. X.* ಮಾಲೂರು ೧೦.

೫. ಅದೇ ಮಾಲೂರು ೧೧.

೬ ಅದೇ ಮಾಲೂರು ೧೨.

೭. ಅದೇ ಮಾಲೂರು ೧೩.

೮. ಅದೇ ಮಾಲೂರು ೧೪.

೯. ಅದೇ ಮಾಲೂರು ೧೫.

೧೦. ಅದೇ ಮಾಲೂರು ೭.

೧೧. ಅದೇ ಮಾಲೂರು ೮.

೧೨. ಅದೇ ಮಾಲೂರು ೨೦.

೧೩. ಅದೇ ಮಾಲೂರು ೯.

೧೪. ಅದೇ ಮಾಲೂರು ೨೪.

೧೫. ಅದೇ ಮಾಲೂರು ೧೬.

೧೬. ಅದೇ ಮಾಲೂರು ೨೨.

೧೭. ಅದೇ ಮಾಲೂರು ೧.

೧೮. ಅದೇ ಮಾಲೂರು ೪.

೧೯. ಅದೇ ಮಾಲೂರು ೩.

೨೦. ಅದೇ ಮಾಲೂರು ೪.

೨೧. ಅದೇ ಮಾಲೂರು ೪.

೨೨. ಅದೇ ಸಂಪುಟ *XVII.* ಮಾಲೂರು ೩.

೨೩. ಅದೇ ಸಂಪುಟ *X.* ಮಾಲೂರು ೧.

೨೪. ಅದೇ ಮಾಲೂರು ೫.




ರತಿಯಂ ಬೈಚಲದೇವಿ ಪುಷ್ಪಶರನಂ ಬಲ್ಲಾಳನಾಭೂಮಿ ಭೃ।
ತ್ಸುತೆಯಂ ಬೈಚಲದೇವಿ ಚಂದ್ರಧರನಂ ಬಲ್ಲಾಳನಂ ಭೋರುಹ
ಸ್ಥಿತೆಯಂ ಬೈಚಲದೇವಿ ಚಕ್ರಧರನಂ ಬಲ್ಲಾಳನನ್ಯೋನ್ಯ ಸಂ।
ಗತಿಯಿಂ ಪೋಲ್ವರೆನಲ್ಕ ದೇವೊಗಟ್ಟುದೋ ಸೌಭಾಗ್ಯ ಸಂಪತ್ತಿಯಂ ॥

**ಇಮ್ಮಡಿ ಬಲ್ಲಾಳನ ರಾಣಿ ಬೈಚಲದೇವಿಯ**
**ವರ್ಣನೆ : ಕಡೂರು ೧೨೫ (ಕ್ರಿ.ಶ. ೧೨೧೮)**



ಡಾ. ಹನಮಂತ ಮೇಲಿನಮನಿ*

# ಹಂಪೆಯ ಶಾಸನೋಕ್ತ ಬಾವಿಗಳು

ವಿಜಯನಗರ ಸಾಮ್ರಾಜ್ಯದ ಬಹುಪಾಲು ಭೂ ಪ್ರದೇಶವು ಅಲ್ಪಾವಧಿಯ ಮುಂಗಾರು ಮಳೆಯ ಮೇಲೆ ಅವಲಂಬಿಸಿದುದಾಗಿತ್ತು. ತುಂಗಭದ್ರೆ ಹಾಗೂ ಕಾವೇರಿ ಎರಡೇ ಸರ್ವಋತು ನದಿಗಳಾಗಿದ್ದು, ಮಿಕ್ಕ ನದಿಗಳು, ಹಳ್ಳಗಳು ಕೇವಲ ಮಳೆಗಾಲದಲ್ಲಿ ಹರಿಯುತ್ತಿದ್ದವು. ಈ ಕಾರಣದಿಂದಾಗಿ ನೀರಾವರಿ ಕಾರ್ಯಗಳಿಗಾಗಿ ಅಂದಿನವರು ಅಂತರ್ಜಲ ಮೂಲಗಳನ್ನು ಅವಲಂಬಿಸ ಬೇಕಾಯಿತು. ಪ್ರಾದೇಶಿಕ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಬಾವಿಗಳನ್ನು ಅಗೆದು ಬೇಸಾಯಕ್ಕೆ ಬಳಸಿಕೊಂಡರು. ಈ ವಿಧವಾದ ಬಾವಿ ನೀರಾವರಿಯಿಂದ ಒಂದರಿಂದ ಇಪ್ಪತ್ತು ಎಕರೆ ಭೂಮಿಗೆ ನೀರುಣಿಸಬಹುದಾಗಿತ್ತು. ಹೀಗಾಗಿ ನದಿ ಮತ್ತು ಕಾಲುವೆಗಳಿಂದ ದೂರದಲ್ಲಿರುವ ಪ್ರದೇಶಗಳಲ್ಲಿ ನೂರಾರು ಬಾವಿಗಳು ತಲೆ ಎತ್ತಿದವು.

ಬಾವಿ ಕಟ್ಟಿಸುವುದು ಪುಣ್ಯದ ಕೆಲಸವೆಂಬ ಭಾವನೆ ಅಂದಿನ ಜನರಲ್ಲಿತ್ತು. ಅದಕ್ಕಾಗಿ ಲಕ್ಷ್ಮೀಧರಾಮಾತ್ಯನ ಶಾಸನ[೧]ದಲ್ಲಿ

"ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿ ಸಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬು ಕೆಯ್ ನಂಬಿದ..."ಎಂಬ ಮಾತಿದೆ. ಈ ಮಾತಿಗೆ ಅನುಗುಣವಾಗಿ ಜನರ ಉಪಯೋಗಕ್ಕಾಗಿ ಇಲ್ಲಿ ಹಲವಾರು ಬಾವಿಗಳು ನಿರ್ಮಾಣವಾಗಿವೆ. ಬಾವಿಗಳ ರಚನೆಯ ಉದ್ದೇಶ: (i) ನೀರಾವರಿಗೆ (ii) ಜನರಿಗೆ ಕುಡಿಯಲು (iii) ದೇವರ ಪೂಜೆಗೆ

**(i) ನೀರಾವರಿ :** ವ್ಯವಸಾಯಕ್ಕಾಗಿ ಹಂಪೆ ಪ್ರದೇಶದಲ್ಲಿ ಬಾವಿಗಳು ನಿರ್ಮಾಣಗೊಂಡಿರುವುದನ್ನು ಅಲ್ಲಿನ ಶಾಸನಗಳು ಹೀಗೆ ಉಕ್ತ ಮಾಡಿವೆ :

**ಏತದ ಬಾವಿ\ಹೊಲ ಸೀಮೆಬಾವಿ :** ಕಪಿಲೆಯ ಇನ್ನೊಂದು ರೂಪ ಏತ. ಇವು ಹಲವಾರು ರೂಪದಲ್ಲಿ ವ್ಯವಸಾಯಕ್ಕೆ ನೀರುಣಿಸುವ ಕಾರ್ಯ ಮಾಡುತ್ತಿದ್ದವು. ಹೀಗಾಗಿ "ಬಾವಿ ನೀರಾವರಿಯ ವ್ಯವಸ್ಥೆಯಲ್ಲಿ ಏತಗಳು ಅನಿವಾರ್ಯವಾಗಿದ್ದವು.[೨] ವಿಜಯನಗರ ಕಾಲದಲ್ಲಿಯೂ ಏತಗಳ ಮೂಲಕ ನೀರಾವರಿ ಚಟುವಟಿಕೆಗಳು ನಡೆಯುತ್ತಿದ್ದ ವೆಂಬುದನ್ನು ಕಪಿಲಾಶ್ರಮದ ಬಳಿಯ ಒಂದು ಶಾಸನ ತಿಳಿಸುತ್ತದೆ. ಈ ತ್ರುಟಿತ ಶಾಸನದಲ್ಲಿ '.......ದೆಸೆಯಲು ಮಲ್ಲನ ಮೆದೆ ಯೇತದ ಭಾವಿ......'[೩] ಎಂಬುದು ಮೇಲಿನ ಮಾತಿಗೆ ಪುಷ್ಟಿಯನ್ನೀಯುತ್ತದೆ.

ಈ ಶಾಸನದಲ್ಲಿ ಏತದ ಬಾವಿಯಲ್ಲದೆ ಹೊಲ ಸೀಮೆಯ ಬಾವಿ, ಕಪಿಲೆಯ ಬಾವಿ ಮತ್ತು ಇನ್ನೂ ಕೆಲವು ಹೆಸರಿಲ್ಲದ ಬಾವಿಗಳ ಉಲ್ಲೇಖ ಕಂಡುಬರುತ್ತವೆ; ಈ ಬಾವಿಗಳಿಂದ ನೀರನ್ನು ವ್ಯವಸಾಯಕ್ಕೆ ಬಳಸುತ್ತಿದ್ದರೆಂದು ತಿಳಿಯುತ್ತದೆ ಆದರೆ ಈ ಬಾವಿಗಳು ಈಗ ಅಸ್ತಿತ್ವದಲ್ಲಿಲ್ಲ.

**(ii) ಕುಡಿಯುವ ನೀರಿಗಾಗಿ :** ಸಾರ್ವಜನಿಕರ ಉಪಯೋಗಕ್ಕಾಗಿ ಹಂಪೆ ಪ್ರದೇಶದಲ್ಲಿ ಕೆಲವು ಬಾವಿಗಳು ನಿರ್ಮಾಣಗೊಂಡಿದ್ದವು. ಅಲ್ಲಿಯ ಶಾಸನಗಳು ಅವುಗಳನ್ನು ಪ್ರಸ್ತಾಪಿಸಿವೆ. ಅವು :

**ಮಹಾದೇವಿಯಕ್ಕ ಬಾವಿ :** ವಿರೂಪಾಕ್ಷ ಪೇಟೆಯ ಕೊನೆ; ನಂದಿಮಂಟಪದ ದಕ್ಷಿಣಕ್ಕೆ ಬಂಡೆಯ ಮೇಲಿನ ಒಂದು ಶಾಸನ[೪] "ಮಹಾದೇವಿಯಕ್ಕ ಬಾವಿ" ಮತ್ತು "ಕೆಳಬಾವಿ"ಯನನ್ನು ಉಲ್ಲೇಖಿಸಿದೆ. "ದೊಡ್ಡ ಗುಂಡೊಂದು ಈ ಬಾವಿಯನ್ನು ಭಾಗಶಃ ಮುಚ್ಚಿದೆ"[೫] ಎಂದು ಹೇಳಲಾಗಿದೆ ಯಾದರೂ ಈಗ ಈ ಬಾವಿ ಪೂರ್ತಿ ಮುಚ್ಚಿಹೋಗಿದೆ. ಮೊದಲ ಬಾವಿಯನ್ನು ಮಹಾದೇವಿಯಕ್ಕ ಎಂಬವಳು ಕಟ್ಟಿಸಿರಬೇಕು. ಆದ್ದರಿಂದ ಅದಕ್ಕೆ ಆ ಹೆಸರು ಬಂದಿರ ಬಹುದು. ಇದರ ಕೆಳಗೆ ಇದ್ದಿರಬಹುದಾದ ಬಾವಿಯನ್ನು 'ಕೆಳಬಾವಿ' ಎಂದು ಶಾಸನದಲ್ಲಿ ಕರೆಯಲಾಗಿದೆ. ಇದು ಇಂದು ಕಾಣಸಿಗುವುದಿಲ್ಲ.

* ಎಸ್.ಆರ್.ಭಗವತಿ, ಸಂಖ್ಯೆ E.W.S. ೩೯೧, ನವನಗರ, ಹುಬ್ಬಳ್ಳಿ–೨೫.



ಅಹಮ್ಮದಖಾನನು ಕಟ್ಟಿಸಿದ ಬಾವಿ

**ಬಿಳಿಯ ಬಾವಿ :** ವಿಠಲಸ್ವಾಮಿದೇವಾಲಯದ ಮುಂದಿರುವ ಮಂಟಪದ ದಕ್ಷಿಣ ಗೋಡೆಯಲ್ಲಿ ಕ್ರಿ.ಶ. ೧೫೧೩ರ ಒಂದು ಶಾಸನ[೬] '....ಕಂಪಿಲೆಯ ಮಾಗಣೆಯಲೂ ಸಾಯಣಾಪುರದ ಗ್ರಾಮ ೧ ಗುಡದ ಸೀಮೇಲೂ ಬಿಳಿಯ ಬಾ[ವಿ]ಯ.....' ಎಂದು ಉಲ್ಲೇಖಿಸುತ್ತದೆ ಈ ಬಾವಿ ಇಂದು ಕಾಣಸಿಗುವುದಿಲ್ಲ.

**ನಾಡದ ಬಾವಿ/ಕಪಿಲೆಯ ಬಾವಿ:** ಕಮಲಾಪುರದಲ್ಲಿರುವ ಕೇಂದ್ರ ಪ್ರಾಚ್ಯವಸ್ತು ಸಂಗ್ರಹಾಲಯದ ಬಳಿ ರಸ್ತೆ ಬದಿಯಲ್ಲಿರುವ ಗುಂಡಿನಲ್ಲಿರುವ ಕ್ರಿ.ಶ. ೧೫೩೧ರ ಒಂದು ಶಾಸನ[೭] "......ಕುಂತೂರ ಎತಿರಾಯ ದೇವಗಳ ಮಕ್ಕಳು ವಲ್ಲಭಯಗಳೂ ಅಗಸಿದ ನಾಡದ ಬಾವಿ ಕೊಂಡ[ಮರ] ಸಯನವರು ಅಗಸಿದ ಕಪಿಲೆಯ ಭಾವಿ....." ಎಂದಿದೆ. ಇದರಿಂದ 'ನಾಡದ ಬಾವಿ'ಯನ್ನು ಕುಂತೂರ ಯತಿರಾಜ ದೇವನ ಮಗ ವಲ್ಲಭಯ ಕಟ್ಟಿಸಿದರೆ; 'ಕಪಿಲೆಯ ಬಾವಿ'ಯನ್ನು ಕೊಂಡಮರಸಯ್ಯ ಕಟ್ಟಿಸಿದನೆಂದು ತಿಳಿಯುತ್ತದೆ. ಕಪಿಲಾಶ್ರಮ ಬಳಿಯ ಶಾಸನ[೮]ವು ಕೂಡಾ 'ಕಪಿಲೆಯ ಬಾವಿ'ಯನ್ನು ಉಲ್ಲೇಖಿಸುತ್ತದೆ. ಬಹುಶಃ ಈ ಬಾವಿ ಕಪಿಲಾಶ್ರಮದ ಪಕ್ಕದಲ್ಲೇ ಇದ್ದಿರಬೇಕು. ಹೀಗಾಗಿ ಆಶ್ರಮದ ಹೆಸರೇ ಈ ಬಾವಿಗೆ ಬಂದಿರಬಹುದು. ಈ ಬಾವಿಯೂ ಈಗ ಕಾಣಸಿಗುವುದಿಲ್ಲ.

**ಅಗಸರ ಬಾವಿ :** ಕ್ರಿ.ಶ. ೧೫೪೫ರ ಒಂದು ಶಾಸನ (ಹಂಪಿ ೧೯೧) "...ವಿಠಲಕ್ಕೆ ಬಹದಾರಿ ಮೇರೆ ಪಡವಲೂ ತೇರಬೀದಿ ಮೇರೆ ಬಡಗಲೂ ಅಗಸರ ಬಾವಿ ಬಳಿಯ......" ಎಂದು ಉಲ್ಲೇಖಿ ಸಿದೆ. ವಿಠಲ ದೇವಾಲಯದ ತೇರು ಬೀದಿಯ (ಬಡಗಲೂ) ಉತ್ತರಕ್ಕೆ ಈ ಬಾವಿ ಇತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಬಹುಶಃ ಅಗಸರು ಬಟ್ಟೆಯನ್ನು ತೊಳೆಯಲು ಈ ಬಾವಿ ನೀರನ್ನು ಬಳಸುತ್ತಿದ್ದರೆಂದು ತೋರುತ್ತದೆ. ಹೀಗಾಗಿ ಈ ಬಾವಿಗೆ ಅಗಸರ ಬಾವಿ ಎಂಬ ಹೆಸರು ಬಂದಿರಬಹುದು. ಆದರೆ ಈ ಬಾವಿ ಈಗ ಕಾಣ ಸಿಗುವುದಿಲ್ಲ.

(iii) ದೇವರಪೂಜೆಗೆ ಬೇಕಾಗುವ ನೀರಿಗಾಗಿ ಹಲವು ಬಾವಿಗಳು ಹಂಪೆ ಪ್ರದೇಶದಲ್ಲಿ ನಿರ್ಮಾಣಗೊಂಡಂತೆ ತೋರುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿಯ ಶಾಸನಗಳು ಪ್ರಸ್ತಾಪಿಸುತ್ತವೆ.

**ಅಶ್ವತ್ಥ ಬಾವಿ :** ಈಗಿನ ಗಾಯತ್ರಿಪೀಠದ ದಕ್ಷಿಣಕ್ಕಿರುವ ದಾರಿಯ ಪಕ್ಕದಲ್ಲಿರುವ ಗುಂಡಿನ ಮೇಲಿನ ಕ್ರಿ.ಶ. ೧೪೯೦ರ ಒಂದು ಶಾಸನ[೯] '.......ಕ್ರಿಯಾಶಕ್ತಿವೊಡೆಯರ ಸಿಷ್ಯ ಭಕ್ತರ ನಾಗಪ್ಪಗಳು ಮಾಡಿಸಿದಂಥಾ ವಿನಾಯಕ ಅಶ್ವತ್ಥ ಬಾವಿಯನೂ...." ಎಂದಿದೆ. ಈ ಬಾವಿಯನ್ನು ಕ್ರಿಯಾಶಕ್ತಿವೊಡೆಯರ ಶಿಷ್ಯ ಭಕ್ತರ ನಾಗಪ್ಪ ಎಂಬುವವನು ಕಟ್ಟಿಸಿದನೆಂದು ಶಾಸನ ಹೇಳುತ್ತದೆ. ಈ ಬಾವಿಯಲ್ಲದೆ ಇವನು ವಿನಾಯಕನ ಮೂರ್ತಿಯನ್ನು ಮಾಡಿಸಿದನೆಂದು ತಿಳಿಸುತ್ತದೆ. ಈ ಬಾವಿ ವಿನಾಯಕನ ಪೂಜೆಗಾಗಿ ಭಕ್ತರ ನಾಗಪ್ಪ ಮಾಡಿಸಿರಬಹುದು. ಆದರೆ ಈ ಬಾವಿ ಈಗ ಕಾಣಸಿಗುವುದಿಲ್ಲ.

**ಅರೆ ಶಂಕರ ಬಾವಿ :** ಈತ ತಳವಾರ ಘಟ್ಟ ಬಾಗಿಲೆಂದು ಕರೆಯುವ ಬಾಗಿಲಿನ ಮೂಲ ಹೆಸರು 'ಅರೆಶಂಕರ ಬಾಗಿಲು'. ವಿಠಲದೇವಾಲಯದ ಗರ್ಭಗೃಹದ ಪಶ್ಚಿಮ ಅಧಿಷ್ಠಾನದಲ್ಲಿರುವ ಕ್ರಿ.ಶ. ೧೫೪೫ರ ಒಂದು ಶಾಸನ[೧೦] '.....ವಿಜಯನಾಗರಕ್ಕೆ ಬಹ ದಾರಿ ಮೇರೆ ತೆಂಕಲೂ' ಅಱೆ ಶಂಖರನ ಬಾವಿ ಬಾಗಿಲಿಂದ... ಎಂದಿದೆ. ಮೇರೆಯನ್ನು ಹೇಳುವ ಸಂದರ್ಭದಲ್ಲಿ ಈ ಬಾವಿಗಳ ಪ್ರಸ್ತಾಪ ಬಂದಿದೆ. ಅರೆಶಂಕರನ ಪೂಜೆಗಾಗಿ ಈ ಬಾವಿ ನಿರ್ಮಿತವಾಗಿರಬೇಕು. ಈ ಬಾವಿಗೆ



ರಂಗನಾಥ ಬಾವಿ



ಬೆನಕನ ಬಾವಿ

ಬಾಗಿಲಿತ್ತೆಂದು ಶಾಸನ ಹೇಳುತ್ತದೆ. ಆದರೆ ಇಂದು ಈ ಬಾವಿ ಕಂಡುಬರುವುದಿಲ್ಲ.

**ಬೆನಕನ ಬಾವಿ :** ಅರಮನೆಯ ಪ್ರದೇಶದಿಂದ ಮಾತಂಗ ಪರ್ವತಕ್ಕೆ ಹೋಗುವ ಕಾಲುದಾರಿಯ ಕಣಿವೆಯಲ್ಲಿ ದೇವಾಲಯದ ಹಿಂಬದಿಗೆ ದೊಡ್ಡ ಗುಂಡಿನಲ್ಲಿರುವ ಕ್ರಿ.ಶ. ೧೪೧೧ರ ಒಂದು ಶಾಸನ[೧೧] "....ರುಕು ಶಾಖೆಯ ಭಾರದ್ವಾಜ ಗೋತ್ರದ ನಿರಾಕಾರದ ನರಹರಿದೇವಗಳ ಮಕ[ಳು] ದೇವ ರಾಯರು ಕಟಿಸಿದ ಬ್ಯನಕನ ಬಾವಿ ಧರ್ಮಾ...." ಎಂದು ಉಲ್ಲೇಖಿಸಿದೆ. ಈ ಬಾವಿ ಚಿಕ್ಕದಿದ್ದು, ಮೆಟ್ಟಿಲುಗಳನ್ನು ಹೊಂದಿದೆ. ಶಾಸನದ ಪಕ್ಕದಲ್ಲಿ ಗಣೇಶನ ಅಪೂರ್ಣವಾದ ಶಿಲ್ಪವಿದೆ. ಹೀಗಾಗಿ ಈ ದೇವರ ಹೆಸರೇ ಈ ಬಾವಿಗೆ ಬಂದಿರಬೇಕು. ಈ ಬಾವಿ ಬೆನಕನ ಪೂಜೆಗಾಗಿ ನೀರು ತರಲು ನಿರ್ಮಾಣವಾಗಿರಬೇಕು. ಈಗ ಈ ಬಾವಿ ಜೀರ್ಣಾ ವಸ್ಥೆಯಲ್ಲಿ ಇಂದಿಗೂ ಅಸ್ತಿತ್ವದಲ್ಲಿದೆ.

**ಲಿಂಗ ಬಾವಿ :** ಬೇಟೆಕಾರರ ಹೆಬ್ಬಾಗಿಲಿನ ಈಶಾನ್ಯಕ್ಕೆ ಶಿಥಿಲವಾದ ದೇವಸ್ಥಾನದ ಉತ್ತರಗೋಡೆಯಲ್ಲಿರುವ ಗುಂಡಿನ ಮೇಲಿರುವ ತೆಲುಗು ಭಾಷೆಯ ಒಂದು ಶಾಸನ[೧೨] 'ಲಿಂಗ್ಗಬಾವಿ ಬಸವಂಣೊಡೆಯಲಸ್ಥರಂ ಸ್ವರಜನಲಕುಂನು ಮೇಲುಕೊರು ಕಟಿಪಾದ' ಎಂದು ಲಿಂಗ ಬಾವಿಯನ್ನು ಉಲ್ಲೇಖಿಸುತ್ತದೆ. ಇದೇ ಶಾಸನದ ಹತ್ತಿರ ಬಾವಿಗೆ ಕಟ್ಟಲಾದ[೫] ಕಲ್ಲಿನ ಮೇಲಿರುವ ಶಾಸನವು ಕೂಡಾ 'ಲಿಂಗ ಬಾವಿ'ಯನ್ನು ಉಲ್ಲೇಖಿಸುತ್ತದೆ. ಬಹುಶಃ ಈ ಬಾವಿ ತಾನು ಹೊಂದಿದ ದೇವರನ್ನು ಸೂಚಿಸುತ್ತದೆ. ಈ ಬಾವಿ ಈಗ ಕಾಣಸಿಗುವುದಿಲ್ಲ.

**ರಂಗನಾಥ ಬಾವಿ :** ಮಾಲ್ಯವಂತ ದೇವಾಲಯದ ಉತ್ತರಕ್ಕಿರುವ ಗುಂಡಿನ ಮೇಲಿನ ಒಂದು ತೆಲುಗು ಶಾಸನ[೧೩] 'ರುದಿರೋದ್ಗಾ ತಿರಿವಿದಿ ಚೆಟಿನಾಗಿನೆನಿ ಕೊಮಾರುಂಡು ಚಿಂನಪನಾಯಂಡು ಕಟಿಂಚಿನ ರಂಗನಾತನಿ ಬಾವಿ ಶ್ರೀ', ಎಂದು "ರಂಗನಾಥನ ಬಾವಿ"ಯನ್ನು ಉಲ್ಲೇಖಿಸುತ್ತದೆ. ಇದನ್ನು ತಿರಿವಿದಿ ಚಿಟಿನಾಗಿನೇನಿಯ ಮಗ ಚಿನ್ನನಾಯಂಡು ಕಟ್ಟಿಸಿದನೆಂದು ಆ ಶಾಸನ ಹೇಳುತ್ತದೆ. ಈ ಶಾಸನದ ಆಗ್ನೇಯಕ್ಕಿರುವ ಬಾವಿಯೇ 'ರಂಗನಾಥ ಬಾವಿ' ಯಾಗಿರಬೇಕು.[೧೪] ಬಹುಶಃ ಈ ಬಾವಿ ರಂಗನಾಥ ದೇವರ ಪೂಜೆ ಪುನಸ್ಕಾರಕ್ಕಾಗಿಯೇ ಕಟ್ಟಿಸಿದುದಾಗಿರಬೇಕು. ಈಗ ಈ ಬಾವಿ ಸಂಪೂರ್ಣವಾಗಿ ಹಾಳಾಗಿದೆ. ಅದರ ಅವಶೇಷಗಳು ಮಾತ್ರ ಕಾಣಸಿಗುತ್ತವೆ.

ಈ ಮೇಲ್ಕಾಣಿಸಿದ ಹೆಸರುಳ್ಳ ಬಾವಿಗಳಲ್ಲದೆ ಇನ್ನೂ ಕೆಲವು ಹೆಸರಿಲ್ಲದ ಬಾವಿಗಳು ಹಂಪೆಯ ಶಾಸನಗಳಲ್ಲಿ ಕಂಡುಬರುತ್ತವೆ. ಅಹಮದ್‌ಖಾನ್ ಧರ್ಮಶಾಲೆಯ ಮುಂಭಾಗದ ತೊಲೆಯ ಮೇಲಿನ ಒಂದು ಶಾಸನವು ಧರ್ಮ ಶಾಲೆ ಮತ್ತು ಪಕ್ಕದಲ್ಲಿರುವ ಬಾವಿಯನ್ನು ಉಲ್ಲೇಖಿಸುತ್ತದೆ.[೧೫] ಈ ಧರ್ಮ ಶಾಲೆ ಹಾಗೂ ಬಾವಿಯ ಕಾರ್ಯಕ್ಕೆ ದಾನ ನೀಡಿದವನು ಅಹಮದಖಾನ್ ಎಂಬ ಓರ್ವ ಮುಸ್ಲಿಂ ಅಧಿಕಾರಿ. ಇದನ್ನು ಸಾರ್ವಜನಿಕ ಸೌಖ್ಯಕ್ಕಾಗಿ ಹಾಗೂ ಅವನ ಒಡೆಯನಾದ ಎರಡನೆಯ ದೇವರಾಯನ ಪುಣ್ಯ ಸ್ಮರಣೆಗಾಗಿ ಕ್ರಿ.ಶ. ೧೪೩೯ರಲ್ಲಿ ನಿರ್ಮಿಸಿದ. ಈ ಬಾವಿ ಇಂದಿಗೂ ಅಸ್ತಿತ್ವದಲ್ಲಿದೆ.

ಅಹಮದ್‌ಖಾನ್ ಧರ್ಮಶಾಲೆಯ ಪಶ್ಚಿಮಕ್ಕೆ ಬೆಟ್ಟದ ಮೇಲಿರುವ ಬಾವಿಯನ್ನು ದೇವರಪಲ್ಲಿ ಮುಮ್ಮಡಿಸೆಟ್ಟಿಗೆ ಪುಣ್ಯವಾಗಲೆಂದು ನಂಜೆದೇವರ ನಿರಾಸಿಮಠಕ್ಕೆ ದಾನ ಮಾಡಿದ್ದು ಬಾವಿಯ ಪಕ್ಕದಲ್ಲಿರುವ ಶಾಸನದಿಂದ ತಿಳಿಯುತ್ತದೆ.[೧೬]



ಲಿಂಗ ಬಾವಿ

ಅಹಮದ್‌ಖಾನ್ ಧರ್ಮಶಾಲೆ ಮತ್ತು ಕೃಷ್ಣ ದೇವಾಲಯದ ದಾರಿ ಮಧ್ಯದ ಬಂಡೆಯ ಮೇಲಿನ ಶಾಸನವು ಮತ್ತೊಂದು ಬಾವಿಯನ್ನು ಕಬಿರಾವುತನ ಮಗ ಪಿಲಿಕುಂ ಚಲಕನು ಬಯಿರಾವುತನಿಗೆ ಕೊಟ್ಟದ್ದನ್ನು ಉಲ್ಲೇಖಿಸುತ್ತದೆ.[೧೭]

ಮಾಲ್ಯವಂತ ಪರ್ವತದ ಈಶಾನ್ಯಕ್ಕೆ ತುರ್ತು ಕಾಲುವೆಯ ಬಲದಂಡೆಯ ಒಡ್ಡಿನ ಮೇಲಿನ ಗುಂಡಿನ ಮೇಲಿರುವ ಶಾಸನ[೧೮], (ಕ್ರಿ.ಶ. ೧೫೫೮) ಒಂದು ಬಾವಿಯನ್ನು ಉಲ್ಲೇಖಿಸುತ್ತದೆ.

ಒಟ್ಟಾರೆ, ಹಂಪೆ ಪ್ರದೇಶದ ಬಾವಿಗಳು ನೀರಾವರಿಗಾಗಿ, ಕುಡಿಯುವ ನೀರಿಗಾಗಿ ದೇವರ ಪೂಜಾದಿಗಳಿಗಾಗಿ ನಿರ್ಮಿಸ ಲಾಗಿದ್ದವು. ಹಂಪೆಯ ಗಣೇಶ ಗುಡಿಯ ಮುಂಭಾಗದ ಮಂಟಪದಲ್ಲಿ ನಿಲ್ಲಿಸಿರುವ ಶಾಸನವು ಬಾವಿಗಳನ್ನು ಕಟ್ಟಿಸು ವುದು ಒಂದು ಪುಣ್ಯ ಕಾರ್ಯವೆಂದೇ ನಿರೂಪಿಸಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ. ೩. (ಹಂಪಿ ಶಾಸನಗಳು).**, ದೇವರಕೊಂಡಾರೆಡ್ಡಿ (ಸಂ.) ಶಾ.ಸಂ. ೬೯. ಸಾಲು : ೪೬–೪೭.

೨. ಸಿ.ಟಿ.ಎಂ. ಕೊಟ್ರಯ್ಯ(ಮೂಲ). ಎಂ. ಧ್ರುವ ನಾರಾಯಣ(ಅನು): **ವಿಜಯನಗರ ಸಾಮ್ರಾಜ್ಯ ನೀರಾವರಿ ವ್ಯವಸ್ಥೆ**, ಪುಟ. ೯೧.

೩. ದೇವರಕೊಂಡಾರೆಡ್ಡಿ (ಸಂ): ಅದೇ; ಪುಟ. ೨೮೨, ಶಾ.ಸಂ. ೩೯೮.

೪. ಅದೇ ಪುಟ. ೯೩, ಶಾ.ಸಂ. ೧೦೬.

೫. **ವಿಜಯನಗರ ಅಧ್ಯಯನ ಸಂಪುಟ** ೧, (ಸಂ.) ಡಾ. ಡಿ. ವಿ. ದೇವರಾಜ್, ಡಾ. ಸಿ. ಎಸ್. ಪಾಟೀಲ ಪು. ೬೮

೬ ಪೂರ್ವೋಕ್ತ., ಪುಟ. ೧೬೨. ಶಾ.ಸಂ. ೨೦೮.

೭. ಅದೇ. ಪುಟ. ೨೩೩. ಶಾ.ಸಂ. ೩೨೨.

೮. ಅದೇ.

೯. ಅದೇ ಪುಟ. ೫೨. ಶಾ.ಸಂ.೬೧.

೧೦. ಅದೇ. ಪುಟ. ೧೪೬. ಶಾ.ಸಂ. ೧೯೧.

೧೧. ಅದೇ ಪುಟ. ೨೧೭. ಶಾ.ಸಂ. ೨೯೬.

೧೨. ಅದೇ. ಪುಟ. ೨೬೨. ಶಾ.ಸಂ. ೩೬೬.

೧೩. ಅದೇ. ಪುಟ. ೨೬೩. ಶಾ.ಸಂ. ೩೬೯.

೧೪. D.V. Devaraj : *Vijayanagar Progress of Research. 1984-87.* I.No:110. P.No. 51. "To the south-east of the inscription is a small well, which can be identified as the well of Ranganath."

೧೫. ಪೂರ್ವೋಕ್ತ., ಪುಟ. ೨೨೪. ಶಾ. ಸಂ. ೩೧೧.

೧೬. ಅದೇ., ಪುಟ. ೨೪೯. ಶಾ. ಸಂ. ೩೪೨.

೧೭. ಅದೇ., ಪುಟ. ೨೨೩. ಶಾ. ಸಂ. ೩೦೯.

೧೮. ಅದೇ., ಪುಟ. ೨೬೯. ಶಾ. ಸಂ. ೩೮೨.

ಡಾ. ಧನವಂತ ಹಾಜವಗೋಳ*

# ಶಾಸನಗಳಲ್ಲಿ 'ಮಹಾಜನಗಳು'

ಪ್ರಾಚೀನ ಕರ್ನಾಟಕದ ಸಮಾಜ ವೃತ್ತಿ ಆಧಾರದ ಮೇಲೆ ವಿಭಜನೆಗೊಂಡಿದ್ದಿತು. ಅನಂತರದ ಕಾಲದಲ್ಲಿ ಆ ವೃತ್ತಿಗಳೇ ಜಾತಿಗಳಾಗಿ ಪರಿಣಮಿಸಿದವು. ಮಧ್ಯಯುಗದ ಕರ್ನಾಟಕದಲ್ಲಂತೂ ಎಲ್ಲ ಜಾತಿಯವರೂ ಯಾವುದೇ ವೃತ್ತಿಯನ್ನು ಅವಲಂಬಿಸಬಹುದಾಗಿತ್ತು. ಇಂಥ ಉದಾರ ನೀತಿಯೊಂದು ಅಸ್ತಿತ್ವದಲ್ಲಿ ಬಂದ ಕಾರಣಕ್ಕಾಗಿ ಆ ಕಾಲದಲ್ಲಿ ಜಾತಿಪರಿಪಾಲನೆಯು ಅಷ್ಟೊಂದು ಕಟ್ಟುನಿಟ್ಟಾಗಿ ಜಾರಿಯಲ್ಲಿರಲಿಲ್ಲವೆಂದು ತಿಳಿದುಬರುತ್ತದೆ. ಹೀಗಿರುವಾಗ ಆ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಜನಗಳನ್ನು ಕುರಿತು ವರ್ಣಿಸುವಾಗ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ 'ಮಹಾಜನಗಳು' ಎಂಬ ಪದ ವ್ಯಾಪಕವಾಗಿ ಬಳಕೆಯಾಗಿದೆ. 'ಮಹಾಜನಗಳು' ಎಂದರೆ ಯಾರು? ನಮ್ಮ ವಿದ್ವಾಂಸರು ಈ ಪದ ಪ್ರಯೋಗ ಕುರಿತು ಏನೆಂದು ಅರ್ಥಯಿಸುತ್ತ ಬಂದಿದ್ದಾರೆ? ಇದು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಕೇವಲ ಬ್ರಾಹ್ಮಣರಿಗೆ ಮಾತ್ರ ಅನ್ವಯವಾಗುತ್ತಿತ್ತೊ? ಇತ್ಯಾದಿ ಹಲವು ಪ್ರಶ್ನೆಗಳು ಹುಟ್ಟಿಕೊಳ್ಳುತ್ತಿವೆ. ನಿಜವಾಗಿ ಈ ಪದದ ಅರ್ಥ ವಿವರಣೆ ಏನು? ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಇಲ್ಲಿ 'ಜನ' ಎಂದರೆ ಮನುಷ್ಯರು ಎಂಬುದಂತೂ ಸ್ಪಷ್ಟವಿದೆ. ಈ ಪದಕ್ಕೆ ಅಂತ್ಯಪ್ರತ್ಯಯ'-ಗಳು' ಸೇರುವ ಮೂಲಕ ಬಹುವಚನವಾಗಿಯೂ ಇದು ಬಳಕೆಗೊಳ್ಳುತ್ತಿದೆ. ಅಲ್ಲದೆ 'ಜನ' ಶಬ್ದ ಮೂಲರೂಪದಲ್ಲೂ ಬಹುವಚನವಾಗಿಯೇ ಬಳಕೆಯಾಗಿರುವುದನ್ನು ಕಾಣಬಹುದು. ಈ ಶಬ್ದಕ್ಕೆ ಪೂರ್ವ ಪ್ರತ್ಯಯವಾಗಿ 'ಮಹಾ' ಎಂಬ ರೂಪ ಸೇರಿಕೊಂಡಿದೆ. ಹೀಗೆ ಪೂರ್ವ ಪ್ರತ್ಯಯ ಸೇರುವುದರಿಂದ ಕೆಲವು ಕಡೆ ಅರ್ಥವ್ಯತ್ಯಾಸಗಳಾದರೆ ಇನ್ನು ಕೆಲವು ಕಡೆ ಅರ್ಥದಲ್ಲಿ ಯಾವ ಬದಲಾವಣೆಗಳೂ ಆಗುವುದಿಲ್ಲ. ಉದಾಹರಣೆಗೆ-ಮನೆ-ಮಹಾಮನೆ ಸಾಗರ-ಮಹಾಸಾಗರ; ಆನಂದ-ಮಹಾದಾನಂದ ನವಮಿ-ಮಹಾನವಮಿ; ದೇವಿ-ಮಹಾದೇವಿ; ಆತ್ಮ-ಮಹಾತ್ಮ ಬಲ-ಮಹಾಬಲ; ಭಾಗ-ಮಹಾಭಾಗ ಮುಂತಾದವುಗಳು. ಇಲ್ಲಿ 'ಮಹಾ' ಎನ್ನುವ ಪೂರ್ಣಪ್ರತ್ಯಯ ರೂಪ ಸೇರುವುದರಿಂದ ಅರ್ಥವ್ಯತ್ಯಾಸ ವುಂಟಾದುದನ್ನು ಕಾಣಬಹುದು. ಇನ್ನು ಕೆಲವು ಕಡೆ ಯಾವುದೂ ಅರ್ಥ ವ್ಯತ್ಯಾಸ ಉಂಟಾಗುವುದಿಲ್ಲ. ಉದಾಹರಣೆಗೆ ರಾಜ-ಮಹಾರಾಜ; ಮಂಡಳೇಶ್ವರ-ಮಹಾಮಂಡಳೇಶ್ವರ; ಸಾಮಂತ-ಮಹಾಸಾಮಂತ; ದಂಡನಾಯಕ-ಮಹಾದಂಡನಾಯಕ ಇತ್ಯಾದಿ ಶಬ್ದಪ್ರಯೋಗಗಳಲ್ಲಿ ಅರ್ಥವ್ಯತ್ಯಾಸವಾಗದಿರುವುದನ್ನು ಕಾಣುಬಹುದು ಇದರಿಂದ 'ಮಹಾ' ಎಂಬ ರೂಪ ಸೇರಿದಾಗ ಆ ಪದ ಬಳಕೆಯಾದ ಸಂದರ್ಭವನ್ನು ಹಿನ್ನೆಲೆಯಾಗಿಟ್ಟುಕೊಂಡು ಅದರ ಅರ್ಥವನ್ನು ಗ್ರಹಿಸಬೇಕೆಂದು ತೋರುತ್ತದೆ. 'ಮಹಾಜನ' ಎಂಬ ಅಡ್ಡ ಹೆಸರು ಇದೇ 'ಭೂ ಕಂದಾಯ ವಸೂಲಿ ಮಾಡುವವರು', 'ಅಗ್ರಹಾರದವರು ಮಹಾಜನಗಳು' ಎಂದು ಅವರಿಗಿದೆ.

ಈಗಾಗಲೇ ಹೇಳಿದಂತೆ 'ಜನ' ಎಂದರೆ ಮನುಷ್ಯರು, ವ್ಯಕ್ತಿಗಳು, ಮಂದಿ, ಮಾನವರು ಎಂಬ ಅರ್ಥಗಳಿವೆ. 'ಮಹಾಜನ' ಎಂದರೆ ದೊಡ್ಡಮನುಷ್ಯರು ಸತ್ಪುರುಷರು ಎಂದು ಅರ್ಥವಾಗುತ್ತದೆ. 'ಮಹಾಜನೋಯೇ ನ ಗತಃ ಸ ಪಂಥಾ' ಎಂದು ಸುಭಾಷಿತ ಹೇಳುತ್ತದೆ. ಶಾಸನಗಳಲ್ಲಿ 'ಮಹಾಜನಂಗಳ್' ಎಂದು ಪ್ರಯೋಗವಾಗಿದೆ. ಪ್ರಾಚೀನ ಕಾಲದ ಅಗ್ರಹಾರ ಅಥವಾ ಬ್ರಹ್ಮಪುರಿಗಳಲ್ಲಿ ವಾಸಿಸುವ ಬ್ರಾಹ್ಮಣರನ್ನು 'ಮಹಾಜನ'ಗಳೆಂದು ಕರೆಯುತ್ತಿದ್ದರೆಂದು ಹೇಳಲಾಗುತ್ತಿದೆ. ಇವರನ್ನು ಹೊರತು ಪಡಿಸಿ ಉಳಿದ ಕ್ಷತ್ರಿಯ, ವೈಶ್ಯ ಶೂದ್ರ ವರ್ಣದ ಜನರನ್ನು 'ಮಹಾಜನಗಳು' ಎಂದು ಕರೆಯುತ್ತಿರಲಿಲ್ಲವೆ? 'ಮಹಾಜನ' ಶಬ್ದದ ಅರ್ಥವ್ಯಾಪ್ತಿ ವ್ಯಾಪಕವಾಗಿದ್ದರೂ, ಹಾಗೆ ಕರೆಸಿಕೊಳ್ಳುವ ಯೋಗ್ಯತೆಯುಳ್ಳ ಜನಗಳು ಇತರ ವರ್ಗಗಳಲ್ಲಿ ಇದ್ದರೂ ವಿದ್ವಾಂಸರು 'ಬ್ರಾಹ್ಮಣ' ರನ್ನು ಮಾತ್ರ 'ಮಹಾಜನ'ಗಳೆಂದು ಕರೆಯುತ್ತಿದ್ದರೆಂದು ಹೇಳುತ್ತ ಬಂದಿರುವುದು ಸರಿಯಾದ ಕ್ರಮವಲ್ಲ. ಶಾಸನವೊಂದರಲ್ಲಿ

* ಪ್ರಾಧ್ಯಾಪಕರು, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ.

'ನಗರ ಮಹಾಜನಂಗಳ್' ಎಂಬ ಪ್ರಯೋಗವಿದೆ. ಇಲ್ಲಿ 'ನಗರದ ಮಹಾಜನಗಳು' ಎಂದರೆ ಆ ನಗರದಲ್ಲಿ ವಾಸಿಸುತ್ತಿರುವ 'ಎಲ್ಲ ಜನಗಳು' ಎಂಬ ಸಾರ್ವತ್ರಿಕ ಅರ್ಥವಿರುವುದನ್ನು ಗಮನಿಸಬಹುದು; ಆ ನಗರದ ದೊಡ್ಡ ಮನುಷ್ಯರು, ಸತ್ಪುರುಷರು, ಗಣ್ಯರು ಎಂದರ್ಥವಾಗುತ್ತದೆಯೇ ವಿನಹ ಆ ನಗರದ ಬ್ರಾಹ್ಮಣರು ಮಾತ್ರ ಎಂದು ಅರ್ಥವಾಗುವುದಿಲ್ಲ. ಒಂದು ವೇಳೆ ಹೀಗೆ ಅರ್ಥಯಿಸಿದ್ದಾದರೆ ಅದು ಆ ಪದದ ಸಂಕುಚಿತಾರ್ಥವಾಗುತ್ತದೆ.

'ಅಗ್ರಹಾರದ ಬ್ರಾಹ್ಮಣ ಮಹಾಜನಗಳು' ಎಂದು ಇದ್ದಾಗ ಮಾತ್ರ ಮಹಾಜನಗಳು ಎಂದರೆ ಬ್ರಾಹ್ಮಣರು. ಅಗ್ರಹಾರದಲ್ಲಿರುವವರು: ಅಗ್ರಹಾರದ ಬ್ರಾಹ್ಮಣರೆಲ್ಲ ಮಹಾಜನಗಳು ಎಂದು ಅರ್ಥಯಿಸಿದರೆ ಅದು ಸರಿಯಾದ ಕ್ರಮವೆನಿಸುತ್ತದೆ; ಅಲ್ಲದೆ ಇಲ್ಲಿ ಅಗ್ರಹಾರದ ಬ್ರಾಹ್ಮಣರನ್ನು ಮಹಾಜನಗಳು ಎಂದು ಕರೆದಿರುವುದು ಸ್ಪಷ್ಟವಿದೆ.

ಮುಳುಗುಂದ ಶಾಸನದಲ್ಲಿ 'ಮಹಾಜನ ಅರ್ಜುನಶೆಟ್ಟಿ' ಎಂಬ ಪ್ರಯೋಗವಿದೆ. ಇಲ್ಲಿ ಒಬ್ಬ ವ್ಯಾಪಾರಿಯನ್ನು 'ಮಹಾಜನ' ಎಂದು ಕರೆದಿರುವುದು ದೊಡ್ಡಮನುಷ್ಯ, ಸತ್ಪುರುಷ ಎಂಬರ್ಥದಲ್ಲಿ ಎಂಬುದನ್ನು ಗಮನಿಸಬೇಕು. ಇದರಿಂದ ಸ್ಪಷ್ಟವಾಗುವುದೇನಂದರೆ 'ಮಹಾಜನ' ಎಂಬ ಪದ ಪ್ರಯೊಗದ ಬಳಕೆಯ ಸಂದರ್ಭವನ್ನು ಗ್ರಹಿಸಿ ಅರ್ಥಯಿಸಬೇಕೆನ್ನುವುದು; ಎಲ್ಲ ಸಂದರ್ಭಗಳಲ್ಲಿ ಮಹಾಜನಗಳೆಂದರೆ ಬ್ರಾಹ್ಮಣರಲ್ಲ ಎಂದು ತಿಳಿಯುವುದು.

ಆದ್ದರಿಂದ ಶಾಸನಗಳಲ್ಲಿ ಬಳಕೆಯಾದ ಇಂಥ ಪದಗಳನ್ನು ವಿಶ್ಲೇಷಿಸುವಾಗ ಅದರ ಪ್ರಯೋಗದ ಸಂದರ್ಭವನ್ನು ಗಮನಿಸಿ ಅರ್ಥವಿವರಣೆ ನೀಡಬೇಕೆಂಬುದು ನಮ್ಮ ಅಭಿಪ್ರಾಯವಾಗಿದೆ. ಆಗ ಮಾತ್ರ ಅಂಥ ಪದಗಳಿಗೆ ಅರ್ಥ ವ್ಯಾಪ್ತಿಯನ್ನು ತಂದುಕೊಟ್ಟಂತಾಗುತ್ತದೆ. ಶಾಸನಗಳಲ್ಲಿ ಬಳಕೆಯಾದ 'ಮಹಾಜನಗಳು' ಎಂಬ ಪದ ಸಮಾಜದ ಎಲ್ಲ ಮನುಷ್ಯರಿಗೆ ಅನ್ವಯವಾಗುವಂಥದ್ದಾಗಿದೆ' ಎನ್ನಬಹುದು.



ಒಂದು ಶಬ್ದಕ್ಕೆ ಒಂದು ಅರ್ಥವಿದೆ ಎಂದರೆ, ಆ ಅರ್ಥವೂ ಸರ್ವಕಾಲಕ್ಕೂ ಒಂದೇ ಆಗಿರುವುದಿಲ್ಲ. ಸಂದರ್ಭಾನುಸಾರ ಶಬ್ದದ ಅರ್ಥಗಳಲ್ಲಿ ವ್ಯತ್ಯಾಸಗಳುಂಟಾಗುತ್ತವೆ. ಆದುದರಿಂದ ಪ್ರತಿಯೊಂದು ಶಬ್ದದ ಉತ್ಪತ್ತಿ, ಅದು ಬದಲಾವಣೆ ಹೊಂದಿದ ಬೇರೆ ಬೇರೆಯ ರೂಪಗಳೂ ಸದ್ಯದಲ್ಲಿ ಅದು ಹೊಂದಿರುವ ರೂಪ, ಮಿಕ್ಕ ಶಬ್ದಗಳ ಜೊತೆಯಲ್ಲಿ ಹೋಲಿಸಿದರೆ ಕಂಡುಬರುವ ಸಾಮ್ಯ, ವೈಷಮ್ಯಗಳು ಮುಂತಾದುವನ್ನೆಲ್ಲ ಅಭ್ಯಾಸ ಮಾಡಬೇಕಾಗುತ್ತದೆ. ಕೆಲವು ವೇಳೆ ಒಂದೊಂದು ಶಬ್ದ ಬಿಡಿ ಪ್ರಯೋಗಗಳಲ್ಲಿ ದೊರೆಯದೇ ಹೋಗಬಹುದು. ಆಗ ಯಾವುದಾದರೂ ಗಾದೆಗಳಲ್ಲಿ, ನುಡಿಗಟ್ಟುಗಳಲ್ಲಿ, ವಾಗ್ರೂಢಿಗಳಲ್ಲಿ ಅದರ ಸುಳುವು ಕಾಣಬರುತ್ತದೆಯೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಇದೇ ಆಳವಾದ ಸಂಶೋಧನೆ ಆಗಬಹುದು.

**ಕನ್ನಡ ನಿಘಂಟು ಶಾಸ್ತ್ರ ಪರಿಚಯ :**
**– ಪ್ರೊ॥ ಜಿ. ವೆಂಕಟಸುಬ್ಬಯ್ಯ**

ಸರಸ್ವತಿದೇವಿ ಎಸ್. ಭಗವತಿ*

# ಹಂಪೆಯ ಶಾಸನೋಕ್ತ ಬಾಗಿಲುಗಳು

ಹಂಪೆಯಲ್ಲಿ ವಿಶಾಲವಾದ ಕೋಟೆಗೆ ಹಲವಾರು ಪ್ರವೇಶ ದ್ವಾರಗಳಿರುತ್ತಿದ್ದವು. ಅವನ್ನು ಸುಲಭವಾಗಿ ಗುರುತಿಸಲು ಅವಕ್ಕೆ ಬೇರೆ ಬೇರೆ ಹೆಸರನ್ನಿಡಲಾಗಿದ್ದಿತು. ಉದಾಹರಣೆಗೆ ಕೋಟೆ ಶಂಕರದೇವರ ಬಾಗಿಲು, ಹೊದೆಯ ಬಾಗಿಲು, ಸಿಂಘಾರದ ಹೆಬ್ಬಾಗಿಲು ಮೊದಲಾದವುಗಳು ಇಂಥ ಹಲವಾರು ಬಾಗಿಲುಗಳನ್ನು ಹಂಪೆಯ ಶಾಸನಗಳು ಪ್ರಸ್ತಾಪಿಸಿವೆ.

**ಕೋಟೆಶಂಕರ ದೇವರ ಬಾಗಿಲು :** ಪ್ರಸನ್ನ ವಿರೂಪಾಕ್ಷ ದೇವಾಲಯದ ವಾಯುವ್ಯಕ್ಕೆ ಕಮಲಾಪುರ-ಹಂಪಿ ರಸ್ತೆಯ ಪೂರ್ವಕ್ಕೆ ದೊಡ್ಡ ಗುಂಡಿನ ಮೇಲಿನ ಶಾಸನ 'ಕೋಟಿಶಂಕರ ದೇವರ ಬಾಗಿಲು' ಎಂದು ದಾಖಲಿಸಿದೆ[೧]. ಕೋಟೆಗೆ ಹೊಂದಿ ಕೊಂಡು ಶಂಕರದೇವರ ಗುಡಿ ಇದೆ. ಆದ್ದರಿಂದ ಈ ದೇವರ ಹೆಸರು ಈ ಬಾಗಿಲಿಗೆ ರೂಢಿಗತವಾಗಿದೆ.


ಕೋಟೆ ಶಂಕರದೇವರ ಬಾಗಿಲು

**ಹೊದೆಯ ಬಾಗಿಲು :** ದಿಡ್ಡಿಮಾಗಣಿ ಪ್ರದೇಶದ ಹೊದೆಯ ಬಾಗಿಲಿನ ವಾಯುವ್ಯಕ್ಕೆ ಬಾಳೆ ತೋಟದಲ್ಲಿನ ಗುಂಡಿನ ಮೇಲಿನ ಶಾಸನ 'ಹೊಡೆಯ ಬಾಗಿಲ'ನ್ನು ಉಲ್ಲೇಖಿಸುತ್ತದೆ. ಹೊಡೆ ಎಂದರೆ ಗುಡ್ಡದ ಇಳಿಜಾರು, ಇದು ಹಾಗೆ ಇಳಿಜಾರು ಪ್ರದೇಶದಲ್ಲಿರುವುದರಿಂದ ಈ ಹೆಸರಿನಿಂದ ಈ ಬಾಗಿಲನ್ನು ಗುರುತಿಸಲಾಗಿದೆ. ಹೊದೆಯ ಬಾಗಿಲ ವಿನಾಯಕ ದೇವರಿಗೆ ವೀರ ಹರಿಹರ ಭೂಮಿದಾನ ಮಾಡಿರುವುದನ್ನು ಅದು ತಿಳಿಸುತ್ತದೆ. ಈ ಬಾಗಿಲು ಉತ್ತರಾಭಿ ಮುಖವಾಗಿದ್ದು, ಅರಮನೆ ಪ್ರದೇಶದಿಂದ ಮತಂಗ ಪರ್ವತಕ್ಕೆ ಹೋಗುವುದಕ್ಕಾಗಿ ನಿರ್ಮಿಸಲಾಗಿದೆ.[೨]


ಹೊದೆಯ ಬಾಗಿಲು

**ಸಿಂಘಾರದ ಹೆಬ್ಬಾಗಿಲು :** ಆನೆಶಾಲೆಯ ಹಿಂಭಾಗದಲ್ಲಿ ಸಿಂಘಾರದ ಹೆಬ್ಬಾಗಿಲಿನ ಉತ್ತರಕ್ಕಿರುವ ಸಣ್ಣಬೆಟ್ಟದ ಮೇಲಿನ ಗುಂಡಿನ ಮೇಲಿರುವ ಶಾಸನ 'ಸಿಂಘಾರದ ಬಾಗಿಲ'ನ್ನು ದಾಖಲಿಸಿದೆ. ಇದು ವಿಜಯನಗರ ಪಟ್ಟಣಕ್ಕೆ ಪೂರ್ವಾಭಿಮುಖವಾಗಿದೆ. ಈ ಹೆಬ್ಬಾಗಿಲನ್ನು ವೀರ ಬುಕ್ಕರಾಯನ (i) ಕಾಲದಲ್ಲಿ ನಿರ್ಮಿಸಲಾಗಿದೆ. ವಿಜಯನಗರ ಪಟ್ಟಣದ ಸಿಂಘಾರಪುರಕ್ಕೆ ಈ ಹೆಬ್ಬಾಗಿಲು ಪ್ರವೇಶ ನೀಡುವುದರಿಂದ ಇದನ್ನು 'ಸಿಂಘಾರದ ಹೆಬ್ಬಾಗಿಲು' ಎಂದು ಕರೆಯಲಾಗಿದೆ.

ಸಿಂಘಾರದ ಹೆಬ್ಬಾಗಿಲಿನ ಪ್ರವೇಶ ದ್ವಾರದ ಎರಡೂ ಬದಿಗೆ ಬಲಿಷ್ಠವಾದ ಗೋಡೆಗಳಿವೆ. ಮುಂಭಾಗದಲ್ಲಿಯೂ ಇದೇ ರೀತಿಯಾದ ಗೋಡೆಗಳಿವೆ. ಒಳಗಡೆಗೆ ಬರುವ ದಾರಿಗಳು ಅಂಕುಡೊಂಕಾಗಿವೆ. ಈ ಬಾಗಿಲ ಮಧ್ಯಭಾಗದಲ್ಲಿ ವಿಶಾಲವಾದ ಆವರಣವಿದೆ. ಈ ಆವರಣದ ಎಡಭಾಗದಲ್ಲಿ ವೈಷ್ಣವ ದೇವಾಲಯವಿದೆ. ಪ್ರವೇಶದ್ವಾರದ ಪಾರ್ಶ್ವದಲ್ಲಿ ಉಪ ಬಾಗಿಲಿದ್ದು, ಇದರ ಮುಖೇನ ಪಶ್ಚಿಮಕ್ಕೆ ಸಾಗಿದರೆ

* ಮನೆ ನಂ. ಇ.ಡಬ್ಲ್ಯೂಎಸ್. ೩೯೧, ನವನಗರ, ಹುಬ್ಬಳ್ಳಿ-೨೫.



ಸಿಂಘಾರದ ಹೆಬ್ಬಾಗಿಲು



ಸೋಮವಾರದ ಬಾಗಿಲು

ಸಿಂಘಾರಪುರ ದೊರೆಯುತ್ತದೆ. ಸಿಂಘಾರಪುರವನ್ನು "ಕ್ರಿ.ಶ. ೧೫೧೩ರ ಶಾಸನ 'ಸಿಂಘಾರಪುರದ ಗ್ರಾಮ' ಎಂದು ಉಲ್ಲೇಖಿಸುತ್ತದೆ."[೩]

**ಬೇಟೆಕಾರರ ಹೆಬ್ಬಾಗಿಲು** : ಕ್ರಿ.ಶ. ೧೩೮೦ರ ಶಾಸನ "ಹರಿಹರ ಮಹಾರಾಯ ಮನೆಯ ಎಡವಂಕದ ಬೇಟೆಕಾರ ಮಲಗೆಯನಾಯ್ಕನ ಮಗ ಬಢ್ಢೆಯನಾಯ್ಕನ ಬೇಟೆಕಾರರ ಹೆಬ್ಬಾಗಿಲ ಪೂರ್ವಕ್ಕೆ ಒರತೆಯ ಮೈಲಾರದೇವರನ್ನು ಪ್ರತಿಷ್ಠಾಪಿಸಿ, ಅದರ ಆಗ್ನೇಯಕ್ಕೆ ಆಲದ ಅರವೆ(ವನ) ಮತ್ತು ಆ ದೇವರ ಹಿಂದೆ ವಾಯವ್ಯಕ್ಕೆ ಒರತೆಯ ಕೊಂಡವನ್ನು ಮಾಡಿಸಿದನೆಂದು ತಿಳಿಸುತ್ತದೆ."[೪]

ವಿಜಯನಗರದ ಅರಸರು ಬೇಟೆಯಾಡುವುದರಲ್ಲಿ ನಿಪುಣರಾಗಿದ್ದರು. ಅಡವಿಯಲ್ಲಿ ಬೇಟೆಯಾಡಿ ಈ ಹೆಬ್ಬಾಗಿಲ ಮೂಲಕ ನಗರವನ್ನು ಪ್ರವೇಶ ಮಾಡುತ್ತಿದ್ದರು. ಹೀಗಾಗಿ ಈ ಹೆಬ್ಬಾಗಿಲಿಗೆ 'ಬೇಟೆಕಾರರ ಹೆಬ್ಬಾಗಿಲು' ಎಂದು ಕರೆಯಲಾಯಿತು. ಮಾಲ್ಯವಂತ ರಘುನಾಥ ದೇವಾಲಯದ ಆಗ್ನೇಯ ದಿಕ್ಕಿಗೆ ಬೇಟೆಕಾರರ ಹೆಬ್ಬಾಗಿಲಿದೆ. ಇದರ ಸುತ್ತಲೂ ಬೆಟ್ಟ-ಗುಡ್ಡ-ಕಾಡು ಆವರಿಸಿದೆ. ಎರಡು ಬೆಟ್ಟಗಳ ಕಂದಕದ ಮಧ್ಯದಲ್ಲಿ ಈ ಹೆಬ್ಬಾಗಿಲನ್ನು ಬಹು ಜಾಣ್ಮೆಯಿಂದ ನಿರ್ಮಿಸಲಾಗಿದೆ. ದೂರದಿಂದ ಕಾಣದಂತೆ ಗೋಡೆಗಳನ್ನು ಕಟ್ಟಲಾಗಿದೆ. ಪ್ರವೇಶದ್ವಾರದ ಪಾರ್ಶ್ವದಲ್ಲಿ ವಿಶಾಲವಾದ ಆವರಣವಿದೆ. ಉತ್ತರಾಭಿಮುಖವಾಗಿ ಸಾಗುವ ಗೋಡೆಗಳ ಮಧ್ಯದ ವಿಶಾಲವಾದ ಆವರಣದಲ್ಲಿ ದಕ್ಷಿಣಾಭಿಮುಖವಾಗಿ ಒಂದು ದೇವಾಲಯವಿದೆ. ಬೇಟೆಕಾರರ ಹೆಬ್ಬಾಗಿಲು ಪೂರ್ಣವಾಗಿ ಗೋಚರಿಸದಿದ್ದರೂ ಇಟ್ಟಿಗೆ, ಗಾರೆ, ಕಲ್ಲಿನ ಅವಶೇಷಗಳಿಂದ ವ್ಯಾಪಕವಾಗಿ ಕಂಡುಬರುತ್ತದೆ.

**ಸೋಮವಾರದ ಬಾಗಿಲು** : ಆನೆಯ ಸಾಲಿನ ಹಿಂದಿನ ಜೈನಬಸದಿಯ ಸಮೀಪದ ಸೋಮವಾರ ಬಾಗಿಲಿನ ಉತ್ತರಕ್ಕಿರುವ ಬೆಟ್ಟದ ಮೇಲಿನ ಗುಂಡಿನ ಮೇಲಿರುವ ಶಾಸನ 'ಸೋಮವಾರದ ಬಾಗಿಲ'ನ್ನು ಮತ್ತು ಬೆಟ್ಟದ ಸೋಮಯದೇವ ಕೊತ್ತಳವನ್ನು ಉಲ್ಲೇಖಿಸುತ್ತದೆ. ಈ



ಬೇಟೆಕಾರರ ಹೆಬ್ಬಾಗಿಲು



ಉದಯಗಿರಿ ಬಾಗಿಲು

ಕೊತ್ತಳದ ಹತ್ತಿರ ಸೋಮವಾರದಂದು ಮಾರುಕಟ್ಟೆ ನೆರವೇರುತ್ತಿತ್ತು. ಅದಕ್ಕಾಗಿ ಆ ಕೊತ್ತಳವನ್ನು ಸೋಮವಾರದ ಕೊತ್ತಳವೆಂದು ಹತ್ತಿರದಲ್ಲಿದ್ದ ಬಾಗಿಲನ್ನು ಸೋಮವಾರದ ಬಾಗಿಲು ಎಂದು ಕರೆದಿರಬಹುದಾಗಿದೆ.[೫] ೧ ನೆಯ ಬುಕ್ಕ ರಾಯನ ಉಚ್ಛ್ರಾಯದ ಕಾಲದಲ್ಲಿ ಬಂದ ವಿದೇಶಿ ಪ್ರವಾಸಿಗರು ಈ ಸೋಮವಾರದ ಮಾರುಕಟ್ಟೆಯನ್ನು ದಾಖಲಿಸಿದ್ದಾರೆ.[೬]

ಸಿಂಘಾರದ ಹೆಬ್ಬಾಗಿಲಿನ ದಕ್ಷಿಣ ಭಾಗಕ್ಕೆ ಪೂರ್ವಾಭಿಮುಖವಾಗಿರುವ ಸೋಮವಾರದ ಬಾಗಿಲು ಭಾಗಶಃ ಹಾಳಾಗಿದೆ. ಈ ಬಾಗಿಲ ಮುಂಭಾಗದಲ್ಲಿ ದಕ್ಷಿಣಾಭಿಮುಖವಾಗಿ ಶೈವ ದೇವಾಲಯವಿದೆ. ಸುಮಾರು ೨೦ ಅಡಿ ಅಗಲ, ೨೦ ಅಡಿ ಎತ್ತರವಾಗಿರುವ ಈ ಬಾಗಿಲಿನ ಪಾರ್ಶ್ವದ ಗೋಡೆಗಳಲ್ಲಿ ಗಣೇಶ, ಆಂಜನೇಯ, ಹಂಸ, ಆನೆ ಮತ್ತು ಬಿಲ್ಲು-ಬಾಣಗಳನ್ನು ಹಿಡಿದು ನಿಂತಿರುವ ವೀರರ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ.

**ಉದಯಗಿರಿ ಬಾಗಿಲು :** ಕ್ರಿ.ಶ. ೧೫೫೪ರ ಶಾಸನ "ಉದಯಗಿರಿ ಬಾಗಿಲು"ನ್ನು ಉಲ್ಲೇಖಿಸುತ್ತದೆ.[೭] ಇದು ವಿಜಯನಗರದ ಮೂಡಲಕ್ಕೆ ಕಮಲಾಪುರದಿಂದ ಕಂಪ್ಲಿಗೆ ಹೋಗುವ ರಸ್ತೆಯ ಬದಿಯಲ್ಲಿದೆ. ಇದನ್ನು ಎರಡು ಬೆಟ್ಟಗಳ ನಡುವಿನ ಕಣಿವೆಯನ್ನು ಬಳಸಿ ಕಟ್ಟಲಾಗಿದೆ. ಉದಯಗಿರಿಯಿಂದ ಬರುವವರು ಈ ಬಾಗಿಲನ್ನೇ ಬಳಸಿಕೊಂಡು ಬರುತ್ತಿದ್ದರು. ಹೀಗಾಗಿ ಈ ಬಾಗಿಲಿಗೆ ಉದಯಗಿರಿ ಬಾಗಿಲು ಎಂದು ಹೆಸರು ಬಂದಿತು. ಪೂರ್ವಾಭಿಮುಖವಾಗಿರುವ ಈ ಬಾಗಿಲು ದೂರದಿಂದ ನೋಡಲು ಕಾಣದಂತೆ ಗೋಡೆಗಳನ್ನು ನಿರ್ಮಿಸಲಾಗಿದೆ. ಇದು ಇತರ ಬಾಗಿಲುಗಳ ಲಕ್ಷಣವನ್ನೇ ಇದು ಹೊಂದಿದೆ. ಈ ಬಾಗಿಲದ ಬಳಿ ಇರುವ ಒಂದು ದೇವಾಲಯವು ಹಾಳಾಗಿದೆ.

**ಉಪ್ಪರಿಗೆ ಬಾಗಿಲು :** ಕ್ರಿ.ಶ.೧೫೫೭ರ ಒಂದು ಶಾಸನ ರಾಜಬೀದಿಯ ಪಡುವಣಕ್ಕಿದ್ದ "ಉಪ್ಪರಿಗೆ ಬಾಗಿಲನ್ನು ಉಲ್ಲೇಖಿಸುತ್ತದೆ. ಯಾವುದಾದರೂ ಮಹಡಿ ಅಥವಾ ಸೌಧಕ್ಕೆ ಇದ್ದ ಬಾಗಿಲು ಇದಾಗಿರಬೇಕು. ಮೂಡಣದಲ್ಲಿ ತೋಟ, ಬಡಗಣದಲ್ಲಿ ರಾಜಬೀದಿ, ತೆಂಕಣದಲ್ಲಿ ದೇವರಗುಡಿಯಿತ್ತೆಂದು ಶಾಸನ ಇದರ ಮೇರೆಯನ್ನು ಹೇಳಿದೆ.[೮]

**ಕೊತಾರದ ಬಾಗಿಲು :** ಕ್ರಿ.ಶ.೧೪೫೫ರ ಶಾಸನ "ಕೊತಾರದ ಬಾಗಿಲ"ನ್ನು ಉಲ್ಲೇಖಿಸುತ್ತದೆ. ಇದು ಉಗ್ರಾಣಕ್ಕೆ ಸಂಬಂಧಿಸಿದ ಬಾಗಿಲಾಗಿರಬೇಕು. ಇದು ವಿಜಯನಗರ ಕೋಟೆಯ ಈಶಾನ್ಯ ದಿಕ್ಕಿನಲ್ಲಿದೆ. ಪೂರ್ವಾಭಿಮುಖವಾಗಿರುವ ಈ ಬಾಗಿಲು ಇಂದು ಭಗ್ನಾವಸ್ಥೆಯಲ್ಲಿದೆ.[೯]

**ಪೆನುಗೊಂಡೆ ಬಾಗಿಲು :** ಕ್ರಿ.ಶ.೧೫೪೦ರ ಶಾಸನ ಪೆನುಗೊಂಡೆ ಬಾಗಿಲನ್ನು ದಾಖಲಿಸುತ್ತದೆ. ವರದರಾಜಮ್ಮನ ಪಟ್ಟಣದ ಮೂಡಣಕ್ಕೆ ಈ ಬಾಗಿಲಿತ್ತು. ಈ ಬಾಗಿಲಿನ ಬಳಿಯಲ್ಲಿ ಶ್ರೀ ರಘುನಾಥ ದೇವರನ್ನು ಪ್ರತಿಷ್ಠಾಪಿಸಲಾಗಿತ್ತೆಂದು ಶಾಸನ ತಿಳಿಸುತ್ತದೆ.[೧೦] ಈ ಬಾಗಿಲು ಕಮಲಾಪುರದ ಆಗ್ನೇಯ ದಿಕ್ಕಿಗಿರುವ ಪಟ್ಟಾಭಿರಾಮ ದೇವಾಲಯದ ಹತ್ತಿರದಲ್ಲಿದೆ.ಇದು ಪೆನುಗೊಂಡದಿಂದ ವರದರಾಜಮ್ಮನ ಪಟ್ಟಣಕ್ಕೆ ಪ್ರವೇಶವನ್ನು ಕಲ್ಪಿಸುತ್ತದೆ.

ಪೆನುಗೊಂಡೆ ಬಾಗಿಲಿಗೆ 'ಸಣ್ಣಕ್ಕಪ್ಪನ ಅಗಸೆ' ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಈ ಬಾಗಿಲ ಹಿಂದೆ ಮತ್ತು ಮುಂಭಾಗದಲ್ಲಿ ಸಾಲು ಮಂಟಪಗಳಿವೆ. ಇವುಗಳ ಮಧ್ಯದಲ್ಲಿ ಬೀದಿ ಇದೆ. ಈ ಬೀದಿಯೇ ವರದರಾಜಮ್ಮನ ಬಜಾರು. ಈ ಬಾಗಿಲು ಮತ್ತು ಕೋಟೆಗೆ ಹೊಂದಿಕೊಂಡು ಮೂರು ದೇವಾಲಯಗಳಿವೆ. ಅವುಗಳಲ್ಲಿ ಒಂದನ್ನು ಅಚ್ಯುತ ರಾಯನ ಕಾಲ(ಕ್ರಿ.ಶ.೧೫೪೦) ದಲ್ಲಿ ನಿರ್ಮಿಸಲಾದ ಶ್ರೀ ರಘುನಾಥ ದೇವಾಲಯವೆಂದು ಹಂಪೆ ಶಾಸನ ಸ್ಪಷ್ಟಪಡಿಸುತ್ತದೆ. ಇನ್ನುಳಿದ ಎರಡು ದೇವಾಲಯಗಳ ಬಗೆಗೆ ತಿಳಿದು ಬರುವುದಿಲ್ಲ.

ಹೀಗೆ ಹಲವಾರು ಬಾಗಿಲುಗಳನ್ನು ಇಲ್ಲಿಯ ಶಾಸನಗಳು ಪ್ರಸ್ತಾಪಿಸುತ್ತಿದ್ದು, ಅವುಗಳ ಮುಖ್ಯ ಲಕ್ಷಣಗಳನ್ನು ಈ ರೀತಿ ಗುರುತಿಸಬಹುದು. (೧) ಪ್ರತಿಯೊಂದು ದ್ವಾರದ ಪ್ರವೇಶದಲ್ಲಿ ದೇವರ ಗುಡಿಗಳಿರುವುದು ಸಾಮಾನ್ಯ ಇವನ್ನು ಕೆಲವು ಸಲ ಆಯಾ ದೇವರ ಹೆಸರುಗಳಿಂದಲೇ ಗುರುತಿಸಿರುವುದುಂಟು. (೨) ಹಲವು ದ್ವಾರಗಳು ಮಹಾ ದ್ವಾರಗಳಾಗಿ ಬೇರೆ ಊರುಗಳಿಗೆ ಸಂಪರ್ಕ ಕಲ್ಪಿಸಿದರೆ ಇನ್ನೂ ಹಲವು ಗುಪ್ತದ್ವಾರಗಳಾಗಿದ್ದವು. ಇವನ್ನೂ ಯಾರಿಗೂ ಕಾಣದ ಹಾಗೆ ಕಟ್ಟಿರುತ್ತಿದ್ದರು. ಈ ಲಕ್ಷಣಗಳನ್ನವಲಂಬಿಸಿಯೂ ಇವುಗಳಲ್ಲಿ ಕೆಲವಕ್ಕೆ ಹೆಸರು ಬಂದಿರುವಂತಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Vijayanagar Progress of Research* 1984-87, p-45.

"This Inscription refers to the gate called Kotisankaradevara Bagilu, meaning gate way of God Kotisankara, the gate to the west of the 'sisters boulders' is the nearest to this Inscription and there fore may be identified as the gate way of God Kotisankara"

೨. *Vijayanagar progress of Research* 1984-87, P-54.

".......The gate on the way from the Royal Center to the matanga hill contains a large sculpture of vinayaka carved on large boulder. out side the gate near by is a well mentioned in another inscription as Byanaka(Vinayaka). Hence, this gate may mention donation to Vinayaka in it."

೩. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ.** ೩, ಹಂಪಿ ಶಾಸನಗಳು, ದೇವರಕೊಂಡಾರೆಡ್ಡಿ (ಸಂ): ಶಾಸನ ಸಂಖ್ಯೆ: ೨೦೮.

೪. ಅದೇ. ಪುಟ. ೨೬೧. ಶಾಸನ ಸಂಖ್ಯೆ : ೩೬೫.

೫. *Vijayanagar progress of Research.* 1983-84, P-23.

" The market day near this gate was on Monday as the gate it self is called as the Monday gate."

೬ Robert Sewell: *A Forgotten Empire.* P-256.

೭. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ.** ೩, ಹಂಪಿ ಶಾಸನಗಳು., ಶಾಸನ ಸಂಖ್ಯೆ : ೧೮೭, ಪುಟ. ೧೪೧.

೮. ಅದೇ., ಪುಟ. ೨೫೬. ಶಾಸನ ಸಂಖ್ಯೆ : ೩೫೧.

೯. ಅದೇ., ಪುಟ. ೨೮೪. ಶಾಸನ ಸಂಖ್ಯೆ : ೩೯೮.

೧೦. ಅದೇ., ಪುಟ. ೨೩೮. ಶಾಸನ ಸಂಖ್ಯೆ : ೩೨೬.


ಧನದಂ ದಕ್ಷಿಣ ವಾಯುವೇಕೆ ತಡೆದತ್ತೇಂ ತೀಡಿತಿಲ್ಲಿನ್ನು ಮೆಂ ।
ಬಿನೆಗಂ ವೈರಿಕರೋಟಿ ಕೋಟಿಮುಖನಾ ಸಾರಂಧ್ರದೊಳ್ ಮಂದ್ರ ನಿ ॥
ಸ್ವನ ಮುಣ್ಮಲ್ ಮಳಯಾನಿಳಂ ಸುಟಿದು ಕಾಲಕ್ಷೇಪಮಂ ವಿಷ್ಣು ಭೂ ।
ಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀ ನದಿ ತೀರದೊಳ್ ॥

**– ಹಾಸನ ೫೩. ಕ್ರಿಶ. ೧೧೭೦**

ಡಾ. ಜಯಮ್ಮ ಕರಿಯಣ್ಣ*

# ಹಲಸುಬಾಳು ಫಲಹಾರ ಮಠದ ನಾಲ್ಕು ತಾಮ್ರಶಾಸನಗಳು

ಚಿಕ್ಕಮಗಳೂರು ತಾಲೂಕಿನ ಶಾಸನ ಸಂಪುಟಗಳನ್ನು ಪರಿಶೀಲಿಸುತ್ತಿದ್ದಾಗ ಹಲಸುಬಾಳುವಿನ ಫಳಾರಮಠದ ಶಾಸನಗಳಲ್ಲಿ ಬರುವ ಆದಿಗದ್ದಿಗೆ, ಶ್ರೀಗುರು ದತ್ತಾತ್ರೇಯ, ಗಾಳಿಪೂಜೆ, ಶ್ರೀಶೈಲ ಪಂಚಮಠ, ಶ್ರೀಗಿರಿ ಸೂರ್ಯ ಸಿಂಹಾಸನ ಮುಂತಾದ ಪದಪುಂಜಗಳು ಗಮನ ಸೆಳೆದವು. ಈ ಹಿನ್ನೆಲೆಯಲ್ಲಿ ಆ ಮಠಕ್ಕೆ ಸಂಬಂಧಿಸಿದ ನಾಲ್ಕು ತಾಮ್ರ ಶಾಸನಗಳ ಪರಿಚಯ ಮಾಡಲಾಗಿದೆ.

*ಶ್ರೀ ಶೈಲ ಪರ್ವತದ ವೀರಭಿಕ್ಷವೃತ್ತಿಗಳ ಮಠದ ಪಟ್ಟದ ಉದನೆಸ್ವಾಮಿಯವರು ಫಾಳಿಪೂಜೆ ಚಂದ್ರದ್ರೋಣ ಪರ್ವತದ ಫಲಹಾರದ ಸ್ವಾಮಿ ಯವರ ಮಟದ ಪಟ್ಟದ ದೊಡ್ಡ ಸ್ವಾಮಿ ಯವರು ಮಾಡುವ ಶರಣಾರ್ತಿ. ಈಶ್ವರ ಸಂವತ್ಸರದ ಮಾಗ ಶುದ್ಧ ೩ ವರ್ರಿಗೆ ನಾವು ಶಿವಯೋಗ ಆನಂದಲು ಇದ್ದೇವೆ. ನಿಮ್ಮ ಶಿವಯೋಗ ಆನಂದಗಳಿಗೆ ಆಗಾಗ್ಗೆ ನಮ್ಮ ಮೇಲಣ ಪ್ರೀತಿ ಟರಪ್ಸಿ (ತರಿಸಿ) ಕಳಿಸಬಹುದು. ಈ ಮಠಕ್ಕೆ ಆ ಮಠಕ್ಕೆ ನಮ್ಮ ಶಿಷ್ಯರು ತಮ್ಮ ಶಿಷ್ಯರಿಗೂ ಪರಂಬರ್ರಿಕೆ ಉಂಟಪ್ಪೆ. ಆ ವಿವರ ಹೀಗಿದೆ, ಸುಡುಗಾಡ ಸಿದ್ದರು, ಗೋಲು ಕೊಂಡೆಯವರು, ಎಕಾನಟ್ಟ ಜೂಹಂಜಿಕಂ ಕಳರು ಸಹ ಶಿಷ್ಯರು, ಪೂರ್ವಮೇರೆಗೆ ಕೊಡುವುದು. ಕಾಣಿಕೆ ತೆಗೆದುಕೊಂಡು ಈ ಧರ್ಮದಲ್ಲಿ ರೂಪಾಯಿ ಹನ್ನೆರಡು, ಎಂಟು ಸಿಂಹಾಸನಕ್ಕೆ ಕೊಡುವುದು. ಕೊಡುವುದಿಲ್ಲ ಎಂದು ಹೇಳುವ ಶಿಷ್ಯನು ಕಾಶಿಗೆ, ರಾಮೇಶ್ವರಕ್ಕೆ ಮತ್ತು ಗುರುವಿಗೆ ಹೊರತು ಎಂದು ಹೇಳಿರುವ ದಾನ ಶಾಸನದ ಕಾಲ ಕ್ರಿ.ಶ. ೧೬೯೮ಕ್ಕೆ ಸೇರುತ್ತದೆ. ಶಾಸನದ ಸಂಗತಿಯಲ್ಲಿ ಇಂದಿನ ಭಾಷೆ ಬಳಸಿ ಮೇಲಿನಂತೆ ಹೇಳಬಹುದಾಗಿದೆ.*

ಇದೇ ಫಲಹಾರ ಮಠಕ್ಕೆ ಸೇರಿದ ಕ್ರಿ.ಶ. ೧೭೦೨ರ ಶಾಸನ ಶ್ರೀ ಪರ್ವತ, ಸ್ವಯಂಬು ಶ್ರೀಲಿಂಗ ಚಕ್ರವರ್ತಿ ಶ್ರೀ ಮನ್ಮಹಾಮಲ್ಲಿಕಾರ್ಜುನ ದೇವರ ಸಂಪ್ರದಾಯಕ್ಕೆ ಸೇರಿದ ಶ್ರೀ ಕೈಲಾಸದ ಮೇಲಣ ದೇವ ಮಹಾಮಹಂತು ಮುಖ್ಯವಾದ ಪೃಥ್ವಿಗೆ ಭೂಕೈಲಾಸ ನಿವಾಸರಾದ ಶ್ರೀಶೈಲ ಪಂಚಮಟ ಪಂಚಗೃಹಕೆ ಮುಖ್ಯರಾದ, ಶ್ರೀನಂದಿನಾಥ, ಶ್ರೀಭೃಂಗಿನಾಥ ಶ್ರೀವೀರಭದ್ರ ದೇವರು ಮುಖ್ಯರಾದ ಶ್ರೀ ಗಿರಿಸೂರ್ಯ ಸಿಂಹಾಸನಕೆ ಕಾರಣಕರ್ತರಾದ ಶ್ರೀವೀರಶೈವ ಪ್ರಸನ್ನ ವಿರುಪಾಕ್ಷವರ್ತಿ ಪಟ್ಟದ ಉದಾನ ಸ್ವಾಮಿಯವರು, ಸಮಸ್ತ *ಭುವನರಜತ ಚಲಸ್ಥಾಪನಾಚಾರ್ಯ ಪ್ರಮತಾದಿ ನಾಯಕ ಉಭಯ ಸಮಯ ಹರಿಯಜಸುರ ಇಂದ್ರಾದಿ ದೇವಗಣ, ಋಷಿಗಣ, ರಾಜಗಣ, ರಾಕ್ಷಸಗಣ ಮುಂತಾದ ಗಣ ಸಮೂಹ ರಾರಾಜಿಸುತ್ತಾ ಚತುರಾಚಾರ್ಯ ಪೀಠಸಿಂಹಾಸನ ರೂಢರಾದ ಫಾಳಿಪೂಜೆ ೧೨ ಯೋಜನ ಪರ್ವತದ ಮಧ್ಯದಲ್ಲಿ ಉದ್ಭವಿಸಿದ ವಿರುಪಾಕ್ಷಲಿಂಗಕ್ಕೆ ಆದಿಗದ್ದಿಗೆ ಶ್ರೀಗುರು ದತ್ತಾತ್ರೇಯ ಶ್ರೀ ಫಳಾರಮಠದ ಸ್ವಾಮಿಯವರಿಗೆ (ಚಿತ್ರಭಾನು ಸಂಸ್ಸತದ ಆಶ್ವೀಜ ಬ.೫ ಗುರುವಾರ) ಬರೆಸಿ ಕೊಟ್ಟ ದಾನಶಾಸನ ಹೇಳುವುದು ಆ ಮಠ, ಈ ಮಠ, ಕೂಡಿ ನಡೆಸುವ ಧರ್ಮದಾಸೋಹ ನಡೆಸುವ ರೀತಿಯನ್ನು ಹೀಗೆ ತಿಳಿಸುತ್ತದೆ. ಹಿರೆಹೊಳೆಯಿಂದ ದಕ್ಷಿಣ, ಪಶ್ಚಿಮ, ಉತ್ತರದಿಕ್ಕೂ ಸೇರಿದಂತೆ ಈ ಮೂರು ದಿಕ್ಕಿನಲ್ಲಿರುವ ಸುಡುಗಾಡುಸಿದ್ದರು, ಪಾಕನಾಟವರು, ಜೆಡೆಜೋಗಿಗಳು, ಗೋಲುಕೊಂಡೇರು, ಜಂಗಲರು, ಉಪ್ಪಿನ ಕಂಗಳರು ಇಂತಿವರು ಕೊಡುವ ಕಪ್ಪವನ್ನು ನೀವು ತೆಗೆದುಕೊಂಡು ದಾಸೋಹ, ದೀಪಾರಾಧನೆಯನ್ನು ನಡೆಸಿ. ಮುಂದೆ ಇವರಲ್ಲಿ ಯಾರಾದರೂ ಕಾಣಿಕೆ ತೆಗೆದುಕೊಂಡರೆ ನಮ್ಮ ಶ್ರೀಶೈಲ ಸೂರ್ಯಸಿಂಹಾಸನಕೆ ದೂರಾದವರು. ಮತ್ತು ಕಾಶಿಯಲ್ಲಿ ಗೋಹತ್ಯ, ಬ್ರಹ್ಮಹತ್ಯ, ಸ್ತ್ರೀಹತ್ಯ ಮಾಡಿದ ಹಾಗೆಂದು, ಲಿಂಗ ಸಮ್ಮತಿಯಿಂದ ತ್ರಿಮೂರ್ತಿಗಳು, ಸೂರ್ಯಚಂದ್ರರು ಮತ್ತು ಅಷ್ಟದಿಕಾಲ್ಪಕರ ಸಾಕ್ಷಿಯಾಗಿ ಬರೆದು ಕೊಟ್ಟ ದಾನ ಶಾಸನ ಎಂದು ಇಂದಿನ ಭಾಷಾ ಶೈಲಿಗೆ ಅಳವಡಿಸಿ ಹೇಳಬಹು ದಾಗಿದೆ.*

*ಇದೇ ಫಲಹಾರ ಮಠಕ್ಕೆ ಸಂಬಂಧಿಸಿದ ಕ್ರಿ.ಶ. ೧೭೦೭ಕ್ಕೆ ಸೇರಿದ ತಾಮ್ರಶಾಸನದಲ್ಲಿ : ೫೬ ಮಹಾನಾಡ ಪ್ರಜೆಗಳು ಫಲಹಾರದ ಫಾಳಿಪೂಜೆ ಚನ್ನವೀರದೇವರ ಮಠಕ್ಕೆ ಹೊಯ್ಸಳ (ವೀರ) ಬಲ್ಲಾಳದೇವನು ಕಾಣಿಕೆಯಾಗಿ ಕೊಟ್ಟ ದಾನ ಶಾಸನ. ಈ ಶಾಸನ ರಾಜನನ್ನು ಮಲೆಯ ಪೂವಿನ ದಂಡ, ಅಸಹಾಯಶೂರ, ಗಿರಿದುರ್ಗಮಲ್ಲ, ಛಲದಂಕವೀರ, ಸಪ್ತಕ್ಷೋಣಿ ವಿಷ್ಣುವರ್ಧನ, ಅರಿರಾಯ ಗಿರಿವ್ರಜ, ಗಜಪತಿ ಗಂಡಭೇರುಂಡ, ಅಶ್ವಪತಿ ಅನಂಗ ಮಹಾರುದ್ರ,*

* ಆಶೀರ್ವಾದ, ನಂ. ೨೯೩೩, ೧೩ನೇ ಮುಖ್ಯರಸ್ತೆ ವಿಜಯನಗರ ೨ನೇ ಹಂತ, ಬೆಂಗಳೂರು – ೫೬೦ ೦೪೦.

ನೂರೆಂಟುಘಟೆ ಆನೆಯ ತುಳಿದ ಹುಲಿರಾಯ, ಎಂದು ಹೊಗಳಿರುವ ವೀರಬಲ್ಲಾಳರಾಯರಿಗೆ ಪ್ರಸನ್ನನಾದಂಥ ಶ್ರೀರಾಮನ ಸೇವಕನಾಗಿದ್ದ ಹನುಮಂತ ಸ್ಥಾಪಿಸಿದ ಪರ್ವತ ಎಂದಿದೆ. ಈ ಪರ್ವತದಲ್ಲಿ ಸಂಜೀವಿನಿ, ಸಿದ್ಧರಸ, ಸುವರ್ಣ ಮಯವಾದ ಚಂದ್ರದ್ರೋಣಿ ವೇದಪರ್ವತದಲ್ಲಿ ಅಚಲ, ಜರಿಗುಹೆಗಹ್ವರ, ಮಹಾಕಾನನ ಮತ್ತು ಭೂತ ಬೇತಾಳ, ಭಯಂಕರವಾದ ಮೃಗ, ವಾಘ್ರ, ಘಟಸರ್ಪಗಳು ವಾಸ ವಾಗಿದ್ದವು. ಅಲ್ಲಿ ಮುನಿಜನಸ್ತೋಮವೂ ವಾಸ ಮಾಡುತ್ತಿದ್ದಿತು. ಆ ಪರ್ವತದಲ್ಲಿ ಮೂಲಿಕೆ, ಮಾಂಸವೇಧಿ, ಮಹಾಔಷಧ, ಮುಂತಾದ ಔಷಧಯುಕ್ತ ಮೂಲಿಕೆಗಳು ದೊರಕುತ್ತಿದ್ದವು. ಇಷ್ಟು ಮಾತ್ರವಲ್ಲದೆ ಅಷ್ಟಭೈರವ ಗಣೇಶ್ವರ, ಮಹಂಕಾಳಿ, ವೀರಭದ್ರ, ನರಸಿಂಹ, ನವದುರ್ಗಿ, ನವನಾಥ ಸಿಧರಕ್ಷಾ ಮುಂತಾದ ದೇವತೆಗಳು, ಬುದ್ಬುದ ಜಲ, ಮಹಾಉಶ್ರಷಾ। ಕಾರ್ಮುಗಿಲ ಕಾವಳ, ತುಷಾರ ತುಂಬಿ ಸಮೃದ್ಧಿಯಾಗಿತ್ತು. ಇಂತಹ ಸಮೃದ್ಧಿಯಿಂದ ಕೂಡಿ, ಫಲವತ್ತಾಗಿದ್ದ ಪರ್ವತದಲ್ಲಿ ಘಾಳಿಪೂಜೆಯ ಶ್ರೀವಿರುಪಾಕ್ಷ ಸ್ವಾಮಿಯವರ ಪ್ರೀತಿ ಪ್ರೇಮದ, ಸುಜನ, ಶುದ್ಧ ಶಿವಾಚಾರ ಸಂಪನ್ನರಾದ, ರಾಜಮಾನ್ಯ ಶ್ರೀ ಘಾಳಿಪೂಜೆಯ ಪುರಾಣದ ಬಗೆಯ ಫಲಹಾರದ ದೇವರ ಶಿಷ್ಯರಾದ ಚೆನ್ನವೀರದೇವರ ಮಠಕೆ ವ್ಯಯನಾಮ ಸಂವತ್ಸರ ದಲ್ಲಿ ಚಪ್ಪನ್ನಯಿವತ್ತಾರು ದೇಶಭಾಗದ ಮಹಾನಾಡುಗಳಲ್ಲಿರು ತ್ತಿದ್ದ ಮೊಸಗೆ ಸೀಮೆಗೆ ಶಂಕರದೇವರ ಸಂಗನ ಬಸವಪ್ಪ ನಾಗಲವಟ್ಟರಾಚಪ್ಪ, ಉಪ್ಪಿನ ರಾಚಪ್ಪ, ರಾಯಭಾನಿಮಾರ್ಗಕೆ ವೊಡೇರ ಬಸವಪ್ಪ, ಗೋದಿಯಡಪ್ಪ ಜವಳಕೋಟೆ ಸಾಂತಸೆಟ್ಟಿ, ಹಂಪಸಾಗರಕ್ಕೆ ನೀಲಿಹಳಿ ವೀರಪ್ಪ, ಹಿರೇತುಂಬಳದ ಸೀಮೆಗೆ ಬದನೆಹಾಳ ರಾಯಿಸೆಟ್ಟಿ, ಕರಕಂತ್ಯೆಯ ಅಬಚಿನೀಲಪ್ಪ, ಹೊಸಪೇಟೆ ಬೆಂಡೆ ಬೆಂಬಳಿ ಸೀಮೆಗೆ ಹುಗ್ಗಿ ರಾಚಪ್ಪ, ಗುರುಶರಣ ಯೇಚರಡಿಬಸವಪ್ಪ, ಹರವಿ ಶಿವಣ್ಣ, ಸಿಂಧುನೂರ ಸೀಮೆಗೆ ಪಡುವನಾಡು ಹೆಡೆಯಪ್ಪ, ಜವಳಿ ಬಸವಪ್ಪ, ಬಂಕಾಪುರದ ಸೀಮೆಗೆ ಹಿಡಿಪುಳಿ ಚೆನ್ನಬಸವಪ್ಪ, ಮಹಾದೇವಿ ಚೆನ್ನಬಸವಪ್ಪ, ಸಾವುನೂರ ಸೋಮಣ್ಣ, ಕೂರಿ ಬಸವಪ್ಪ, ಗದುಗಿನ ಸೀಮೆಗೆ ಗೋದಿ ನೀಲಪ್ಪ, ಆನವಟ್ಟ ಚೆನ್ನಬಸೆಟ್ಟಿ, ಲಕುಮೇಶ್ವರ ಸೀಮೆಗೆ-ನಂದಿ-ವಡೇರು, ಗಡದಲಕ್ಕಿಸೆಟ್ಟಿ, ಹುಬ್ಬಳ್ಳಿ ಸೀಮೆಗೆ ಪಟೆದನಾಗಣ್ಣ, ಬಸವಾ ಪಟ್ಟದ ಸೀಮೆಗೆ ಹೂಲಿಕೇರಿ ಚೆನ್ನಪ್ಪ, ಆಯರ ಬಸೆಟ್ಟಿ, ರಬಳಿಗೆ ಲಿಂಗಣ್ಣ, ಗೂಳೂರ ಸೀಮೆಗೆ ಹೊಟ್ಟೆ ಹುಚ್ಚಪ್ಪ, ಚಿಕಿ(ಕ್ಕ) ನಾಯಕನಹಳ್ಳಿ ಸೀಮೆಗೆ ಕಂದಿಕೆರೆ ಚೆನಮಲ್ಲಪ್ಪನ ಚೆನ್ನಣ್ಣ, ವಸ್ತಾರೆ ಬೇಲೂರ ಸೀಮೆಗೆ ಪಟ್ಟದ ಸೆಟ್ಟಿಗಳು, ಸಾಮಿಸೆಟ್ಟಿ, ಮಹಂತಸೆಟ್ಟಿ, ಮಲೆಯಪ್ಪ, ಹಂಪೆ ಚೆನ್ನಪ್ಪ, ದುಮ್ಮಿ ವಿರಕ್ತೈಯ, ಹಾಸನದ ಸೀಮೆಗೆ ಆವಿಸೆಟ್ಟಿ, ಕೆಂಪಣ್ಣಸೆಟ್ಟಿ, ದೇಪಿಸೆಟ್ಟಿ, ಪದುಮಣ್ಣ, ನರಸಿಂಹಪುರದ ಸೀಮೆಗೆ ಕಂಕಣದ ಗೋಲುಪ, ನಿಖರದ ಕೋಟುರಸೆಟ್ಟಿ, ಕೊಡಲಿಪೇಟೆಗೆ ಹೆಮ್ಮೆಲ ರೇವಣ್ಣ, ಬಾಳೆಕಾಯಿ ಬಸಪ್ಪ, ಕಲಹಳಿ (ಕಲ್ಲಹಳ್ಳಿ) ಪರುವಿಸೆಟಿ, ಜಾವಣಿಗೆ ಸ್ಥಳಕ್ಕೆ ಮೊರಲೆ ಚಿಕ್ಕಣ್ಣ, ಗೌರಸೆಟ್ಟಿ ಸಿದ್ಧಣ್ಣ, ದೊಡೊಡೇರು ಕಳಸೈಯನ ಬಗೆ ಶಿವಣ್ಣನ ಚೆನ್ನಯ್ಯ ಹಚುಗುಳದ ಲೊಕ್ಕಿಸ್ಥಳಕ್ಕೆ ವೀರದಿಮ್ಮಗೌಡ, ಬೆಂಡಗದ ಸ್ಥಳಕ್ಕೆ ಗೌಡಗಳೂ ಮಗಣ ಮೆನೆಮೇಲಂಣ ಕೊತ್ತಿಬಸವಪ್ಪ, ಗೋಣಕಲಸೀಮೆಗೆ ತಂಮ್ಮಿಯಕ್ಕನ ಲಿಂಗಣಗೌಡ ಮಲ್ಲಣ್ಣ, ತೊಗರಿಹಂಕಲ ಚಿನ್ನಣ್ಣ ಮುಂತಾದ ಮಹಾನಾಡುಗಳ ಗೌಡುಗಳು ಕೂಡಿ ಬರೆಸಿಕೊಟ್ಟ ಧರ್ಮ ಪ್ರಯೋಜನದ ದಾನಪಟ್ಟೆ ಕ್ರಮ ಏನೆಂದರೆ-ಲೊಕ್ಕಿ ಕಟ್ಟೆಗೆ ಬಂದಂಥಾ ಉಭಯ ಮಾರ್ಗದಲ್ಲಿ (ಬರುವ-ಹೋಗುವ) ಹೇರು ಗಡುಚು(ಭಾರವಾದ) ಬದಿಸ್ತನ ನಡೆವೊಂದಕ್ಕೆ ೮..... ವೀಸ (ಧಾನ್ಯ ಮುಂತಾದ ವಸ್ತುಗಳಿರಬಹುದೆ?) ಭೂಸ ಬದ್ದಿಸಿದ ನಡೆವೊಂದಕ್ಕೆ ಅರೆ ಮೀಸದಂತೆ ಪಾರಂಪರ್ಯವಾಗಿ ಸೂರ್ಯಚಂದ್ರಾದಿಗಳಿರುವ ತನಕ ಘಾಳಿಪೂಜೆಮಠಕ್ಕೆ ಮಿರಾಸಿಯ (ಭತ್ಯ) ಮಾಡಿ ಕೊಟ್ಟ ದಾನಪತ್ರದ ಸಾರವನ್ನು ಹೇಳಬಹುದಾಗಿದೆ.

ಅದೇ ಮಠಕ್ಕೆ ಸಂಬಂಧಿಸಿದ ಮತ್ತೊಂದು ಶಾಸನದ ಕಾಲ ಕ್ರಿ.ಶ. ೧೭೧೭. ಆ ತಾಮ್ರ ಶಾಸನದಲ್ಲಿ ಶ್ರೀ ಶೈಲ ಅಥವಾ ಶ್ರೀಪರ್ವತದ ವೀರಭಿಕ್ಷಾವತಿ ಮಠದ ಉದಾನ ಸ್ವಾಮಿಯವರು ಘಾಳಿಪೂಜೆ ಫಲಹಾರ ಮಠದ ಸ್ವಾಮಿಯ ವರಿಗೆ ಬರೆದ ಪತ್ರ ಹೀಗಿದೆ. ಸಮಸ್ತಭುವನ್ನಾ ರಾಜರಕ್ತಾ ಚಲ್ಲ ಸ್ಥಾಪನಾಚಾರ್ಯರು, ಇಂದ್ರಾದಿ ದೇವಗಣ, ಶ್ರೀಗಣ ರಾಜಗಣ, ರಾಕ್ಷಸಗಣ ಮುಂತಾದ ಗಣಗಳ ಗುಂಪಿನಿಂದ ಕೂಡಿದ ಚತುರಾಚಾರ್ಯ ಪಟ್ಟಸಿಂಹಾಸನ ರೂಢರಾದ, ಹನ್ನೆರಡು ಯೋಜನ ಪರ್ವತದ ಮಧ್ಯೆ ಉದ್ಭವಿಸಿದ ಶ್ರೀವಿರುಪಾಕ್ಷಲಿಂಗಕ್ಕೆ ಸಮಯಾಚಾರ ಮೂರ್ತಿಗಳು, ಆದಿಗದ್ದಿಗೆ ಶ್ರೀಗುರು ದತ್ತಾತ್ರೇಯ ಪಳಾರದ ಮಠದ ಸ್ವಾಮಿಯವರಿಗೆ, ಶ್ರೀ ಸ್ವಯಂಭು ಮಹಾಮಲ್ಲಿ ಕಾರ್ಜುನ ದೇವರ ಸಂಪ್ರದಾಯಕರಾದ, ಪೃಥ್ವಿಗೆ ಭೂಕೈಲಾಸ ದಂತಿರುವ ಶ್ರೀ ಶೈಲ ಪಂಚಮಠ ಪಂಚಗ್ರಹಕೆ ಮುಖ್ಯರಾದ ಶ್ರೀ ನಂದಿ ನಾಥ, ಶ್ರೀ ಭೃಂಗಿನಾಥ ಶ್ರೀವೀರಭದ್ರ ದೇವರು ಮುಖ್ಯರಾದ ಶ್ರೀಗಿರಿಸೂರ್ಯಸಿಂಹಾಸನಕೆ ಕಾರಣಕರ್ತರಾದ ಶ್ರೀ ವೀರಶೈವ ಪ್ರಸನ್ನಾ ಶ್ರೀವೀರಭಿಕ್ಷವೃತ್ತಿ ಉದಾನ ಸಾಮಿಯವರು ಶಾಲಿವಾಹನ ಶಕೆ ೧೬೪೦ ರ ಹೇವಿಳಂಬಿ ಸಂವತ್ಸರ, ಚೈತ್ರ ಶುದ್ಧ ೧೦ ಗುರುವಾರ ಕನ್ನುಲ್ಲಾ ಬಾಬಾನ ದೊರೆಗಳು

ಮತ್ತು ಉದಾನೆ ವೀರಾಭಿಕ್ಷಪತಿಗಳು ಬರೆಸಿಕೊಟ್ಟ ತಾಮ್ರದ ದಾನಪತ್ರದ ಕ್ರಮ–ಏನೆಂದರೆ ಪರ್ವತದ ಸಿಂಹಾಸನ ಗಾಳಿ ಪೂಜೆ ಮಠ ಕೂಡಿ, ಗಾಳಿಪೂಜೆಮಠ ಪರ್ವತವೆ ಕೂಡಿ ಇವರು ಅವರು ದೇಹಾನುಬಂದಿಗಳಾದ ಕಾರಣ, ಹಿರೇಹೊಳೆ ಕೃಷ್ಣಾನದಿಯಿಂದ ದಕ್ಷಿಣದಿಕ್ಕಿನ ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿರುವ ಪರ್ವತವನ್ನು ಹೊಂದಿರುವಂಥ, ಸೂತ್ರಧಾರಿ ಗಳಾದಂತಾ ಪೀಠದವರಾಡ ಚರಂತಿಗಳು, ಆರರ್‍ರಿರ್‍ರು, ಶಟ್ಟಿ, ವರ್ತಕರು, ಗೌಡರುಗಳು, ರೆಡ್ಡಿ ವಕ್ಕಲತನ ದವರು, ಕುಂಚ್ಚಿಗರು, ಕಡಿಮೆಜನ ಸಹ ನೆಡಕೊಳ್ಳುವಂತಹ ವರು ಗಾಳಿಪೂಜೆ ಗಿರಿಪಟ್ಟದ ಸ್ವಾಮಿಯವರಿಗೆ ಕಾಣಿಕೆ, ಕಪ್ಪ ಕೊಡತಕ್ಕದ್ದು. ಶ್ರೀ ಪರ್ವತಕ್ಕೆ ಕೊಡುವ ಕೆಲಸವಿಲ್ಲ. ಸದರಿ ಈ ಮೂರು ದಿಕ್ಕಿನಲ್ಲಿರುವ ಸುಡುಗಾಡು ಸಿದ್ದರು, ಜೆಡೆಜೋಗಿಗಳು, ಜಂಗಲ್ಲೆರ್‍ರು, ಪಾಕನಾಟ್ಟಿಮರಿನ ಗೊಲ್ಲರು, ಹೆಳವರು, ಉಪಿನಾತ್ರಂಗಳರು, ಮಾರ್‍ರಿಯವರು, ಹಾಲುವಕ್ಕಿಯವರು, ಪಂಡರು, ಗಣಾಯಿತ್ತಾದವರು, ಕಾಡಶಿದ್ದರು, ಗಾರ್ದಪ ಗೊಲ್ಲರು, ಮುಂತಾದವರು ಗಾಳಿಪೂಜೆಪೀಠದ ಸ್ವಾಮಿಯ ವರಿಗೆ ಕಪ್ಪ ಕಾಣಿಕೆ ಕೊಟ್ಟು ಎಲ್ಲೆದಾನೂಹಾ ದೀಪಾರಾಧನೆ ನಡೆಸಿಕೊಂಡು ಹೋಗತಕ್ಕದ್ದು. ಇವರಿಂದ ಇವರ ಜಾಗಗಳಲ್ಲಿ ಕಾಣ್ಕೆ ತೆಗೆದುಕೊಂಡರೆ ಶ್ರೀಶೈಲ ಸೂರ್ಯಸಿಂಹಾಸನಕೆ ದೂರವಾದಂತೆಯೆ ಸರಿ. ಗಾಳಿಪೂಜೆ ಪೀಠದ ಸ್ವಾಮಿಯ ವರಿಗೆ ನಮಸ್ಕರಿಸಿ, ವೀರಭಿಕ್ಷವೃತ್ತಿ ಉದಾನೆ ಸ್ವಾಮಿಯವರು ಬೆಳ್ಳಿ ಪಾಲಿಕೆ, ಮುತ್ತಿನ ಕಂಠಿ, ಬಂಗಾರದ ಕೊಡೆ, ವೂಟಬೆಯ [?] ಚಾಮರಗಳು, ಮಕರತೋರಣ, ಪಾಯಿಮ್ರುತ್ತುಪು, ಮುಕ್ಕಂಣ ವೈಜ್ಯ ಬಸವನಡ್ಯೆಕ್ಕೆ, ನಂದಿಧ್ವಜ, ಭೇರಿಡ್ಯೆಂಕ ಪಂಚವಾದ್ಯ ಮುಂತಾದವುಗಳನ್ನು ದಾನವಾಗಿ ನೀಡಿದುದನ್ನು ಚಪ್ಪೊಗೊಂಡಿನ ಪ್ರಕಾರ (ತಾಮ್ರ ಪತ್ರದ ಪ್ರಕಾರ) ಬರೆಸಿ ಕೊಟ್ಟಿರುವುದಾಗಿ ಹೇಳಿದೆ. ಅಲ್ಲದೆ ಕಪ್ಪ, ಕಾಣಿಕೆ ತೆಗೆದು ಕೊಂಡರೆ ಸೂರ್ಯಸಿಂಹಾಸನಕೆ ದೂರವಾದಂತೆ – ಶ್ರೀ ಮಲ್ಲಿಕಾರ್ಜುನ ದೇವರಿಗೆ ತಪ್ಪಿ ನಡೆದಹಾಗೆ, ಕಾಶಿಯಲ್ಲಿ ಗೋಹತ್ಯ, ಶಿಸುಹತ್ಯ, ಬ್ರಹ್ಮಹತ್ಯ, ಸ್ತ್ರಿಹತ್ಯ, ಅಶ್ವಹತ್ಯ ಮಾಡಿದ ಹಾಗೆ ಎಂದು ಎಲ್ಲರ ಸಮ್ಮತಿಯಿಂದ ಬರೆಸಿಕೊಟ್ಟ ದಾನ ಪತ್ರವನ್ನು ಸಾರವಾಗಿ ಸದ್ಯ ಹೇಳಿದೆ.

ಇದಲ್ಲದೆ ಈ ಪತ್ರಕ್ಕೆ ತ್ರಿಮೂರ್ತಿಗಳು, ಸೂರ್ಯಚಂದ್ರರು, ಅಷ್ಟದಿಕ್ಪಾಲಕರು ಸಾಕ್ಷಿಗಳು ಎಂದು ಹೇಳಿದೆ. ಈ ದಾನಕ್ಕೆ ಸಾಕ್ಷಿಗಳಾದ ಕಂನುಲ್ಲು ಪೇಟೆ ಮಲ್ಲಪ ಶೆಟ್ಟರ ವನವೀರಪ ಶೆಟ್ಟರ, ನಂಜಪ್ಪ ಶೆಟ್ಟರ, ನಂಜಪ್ಪ ಶೆಟ್ಟರ, ಮತ್ತು ರೆಡ್ಡಿಮಲ್ಲಪ್ಪ ಇವರ ಸಮ್ಮತಿಯಿಂದ ದಾನ ಶಾಸನವನ್ನು ಕಂಡರಿಸಿದವನು ಮಲ್ಲಪನ ಮಗ ವೀರಪ್ಪ ಎಂದು ವಿವರ ಇದೆ.

ಮೇಲಿನ ನಾಲ್ಕು ಶಾಸನಗಳ ಹಿನ್ನೆಲೆಯಲ್ಲಿ ಈ ಫಲಹಾರ ಮಠವು ೧೬೬೮ರ ಶಾಸನ ಪರಮಹಂಸ ಪರಿವ್ರಾಜಕಾಚಾರ್ಯ ಮುಂತಾದ ವಿಶೇಷಣಗಳಿಂದ ಶ್ರೀಶೈಲ ಪರ್ವತದ ವೀರಭಿಕ್ಷಾವೃತ್ತಿಗಳ ಮಠದ ಪಟ್ಟದ ಉದ್ದಾನ ಸ್ವಾಮಿಯವರನ್ನು ಉಲ್ಲೇಖಿಸಿದೆ. ಘಾಳಿಪೂಜೆ, ಚಂದ್ರದ್ರೋಣ ಪರ್ವತದ ಉಲ್ಲೇಖವೂ ಬಂದಿದೆ. ಈ ಫಲಹಾರ ಮಠವು ೧೭೦೭ರಲ್ಲಿ ಚೆನ್ನವೀರದೇವರ ಮಠ ಹಾಗೂ ಗಾಳೀಪೂಜೆ ಮಠ ಎಂಬ ಎರಡು ಹೆಸರುಗಳಿಂದಲೂ ಗುರುತಿಸಿ ಕೊಂಡಿತ್ತು. ಅಲ್ಲಿನ ದೇವರನ್ನು ಫಲಹಾರ ದೇವರು ಎಂದು ಗುರುತಿಸಲಾಗಿತ್ತು. ಕ್ರಿ.ಶ. ೧೭೦೨ರ ಶಾಸನ ಶ್ರೀ ಶೈಲ ಪಂಚಮಠದ ಸೂರ್ಯ ಸಿಂಹಾಸನವನ್ನು ಹೆಸರಿಸಿದೆ. ಗಾಳಿಪೂಜೆ ಹನ್ನೆರಡು ಯೋಜನ ಪರ್ವತವೆಂದು ಹೇಳಿದೆ. ಇದರಲ್ಲಿ ಆದಿಗದ್ದಿಗೆ ಶ್ರೀಗುರುದತ್ತಾತ್ರೇಯ ಫಳಹಾರ ಮಠವೆಂದು ಕರೆಯಲಾಗಿದೆ. ಹಾಗೂ ಫಲಹಾರ ಮಠಕ್ಕೂ ಗಾಳಿಪೂಜೆ ಮಠಕ್ಕೂ ಯಾವ ವ್ಯತ್ಯಾಸವೂ ಇಲ್ಲವೆಂದೂ ಎರಡು ಒಂದೇ ಎಂದು ಹೇಳಿರುವುದು ಗಮನಾರ್ಹ. ಕ್ರಿ.ಶ. ೧೭೧೭ರ ಶಾಸನ ಗಾಳಿಪೂಜೆ ಗಿರಿಪಟ್ಟದ ದೇವರೆಂದು ಕರೆಯಲಾಗಿದೆ. ಗಾಳಿಪೂಜೆಪೀಠ ಎಂದೂ ಕರೆಯಲಾಗಿದೆ. ಈ ದೇವರಿಗೆ ಮತ್ತು ಮಠಕ್ಕೆ ನಡೆದುಕೊಳ್ಳಬೇಕಾದ ಒಕ್ಕಲುಗಳು ಉತ್ತರದಲ್ಲಿ ಕೃಷ್ಣಾನದಿಯಿಂದ ದಕ್ಷಿಣಕ್ಕೆ ಇರುವ ಪ್ರಾಂತ್ಯಗಳ ಚರಂತರು, ಶೆಟ್ಟಿ ವರ್ತಕರು, ಗೌಡರು, ರೆಡ್ಡಿಗಳು, ಕುಂಚ್ಚಿಗರು ಮೊದಲಾದವರನ್ನು ಹೆಸರಿಸಿದೆ.

ಈ ಅಂಶಗಳನ್ನು ಗಮನಿಸಿದಾಗ ಶ್ರೀ ಶೈಲ ಪೀಠಕ್ಕೆ ಸೇರಿದ ಈ ಶಾಖಾ ಮಠವು ಅವಧೂತ ಸಂಪ್ರದಾಯದ ಪ್ರಭಾವವನ್ನೂ ಮೇಳೈಸಿಕೊಂಡು ಬಾಬಾಬುಡನ್ ಗಿರಿಯ ದತ್ತ ಪೀಠದೊಂದಿಗೆ ಸಂಬಂಧವನ್ನು ಹೊಂದಿದ್ದು ಅವಧೂತ ಸಂಪ್ರದಾಯದ ಕಾರ್ಯನಿರ್ವಹಿಸುತ್ತದೆ. ಇದೊಂದು ಗಮನಾರ್ಹ ಬೆಳವಣಿಗೆ, ಆ ಕಾಲಕ್ಕೆ ಚಂದ್ರದ್ರೋಣ ಪರ್ವತ ದಲ್ಲಿ ದತ್ತಾತ್ರೇಯ ಪೀಠವಿತ್ತು ಎಂಬುದನ್ನು ತಿಳಿಯಬಹು ದಾಗಿದೆ.



ಕು. ಜಯಶ್ರೀ ದೇಶಮಾನ್ಯ*
ಡಾ॥ ರು.ಮ. ಷಡಕ್ಷರಯ್ಯ**

# ಗುಲಬರ್ಗಾ ಜಿಲ್ಲೆಯ ತೂನ್ನೂರಿನಲ್ಲಿ ಹೊಸ ಬೌದ್ಧ ನೆಲೆ

ಗುಲಬರ್ಗಾ ಜಿಲ್ಲೆಯ ಚಿತಾಪುರ ತಾಲೂಕಿನ ತೂನ್ನೂರಿನಲ್ಲಿ ಪ್ರಾಚೀನ ಬೌದ್ಧ ಪುರಾವೆಗಳು ಪತ್ತೆಯಾಗಿವೆ. ಈ ಸ್ಥಳವು ಪ್ರಸಿದ್ಧ ಬೌದ್ಧ ಕೇಂದ್ರವೆನಿಸಿದ ಸನ್ನತಿಯಿಂದ ಹಾಗೂ ರೈಲ್ವೆ ನಿಲ್ದಾಣ ನಾಲವಾರದಿಂದ ಸನ್ನತಿಯ ಮುಖ್ಯ ರಸ್ತೆಯಿಂದ ಈ ಸ್ಥಳವು ಸುಮಾರು ೩ ಕಿ.ಮೀ. ಅಂತರದಲ್ಲಿದೆ. ಅದು ಭೀಮಾನದಿಯ ಎಡದಂಡೆಯ ಸಮೀಪವಿದೆ. ಈ ಪ್ರದೇಶದಲ್ಲಿ ಬೆಳಕಿಗೆ ಬಂದ ಬೌದ್ಧನೆಲೆಗಳನ್ನು ಅಧ್ಯಯನ ಮಾಡಲು ಹೋದಾಗ ಅನಿರೀಕ್ಷಿತವಾಗಿ ಈ ಹೊಸ ನೆಲೆಯು ಪತ್ತೆಯಾಯಿತು. ಅದು ತೂನ್ನೂರು ಗ್ರಾಮದಿಂದ ಸುಮಾರು ಅರ್ಧ ಕಿ.ಮೀ. ದೂರದಲ್ಲಿದೆ. ಜೊತೆಯಲ್ಲಿ ಈ ಊರ ಹತ್ತಿರ ಹಾಗೂ ಈ ಬೌದ್ಧ ನಿವೇಶನದ ದಾರಿಯಲ್ಲಿ ಒಂದು ವಿಶಾಲವಾದ ಜನವಸತಿ ನಿವೇಶನ ಪತ್ತೆಯಾಯಿತು. ಈ ಎರಡು ನೆಲೆಗಳಲ್ಲಿ ವಿವಿಧ ರೀತಿಯಲ್ಲಿ ಪುರಾವೆಗಳು ಕಂಡುಬಂದವು.

ಜನವಸತಿ ನಿವೇಶನವು ಸುಮಾರು ೧ ಹೆಕ್ಟೇರ್ ಪ್ರದೇಶದಲ್ಲಿ ಆವರಿಸಿಕೊಂಡಿದೆ. ಈ ನೆಲೆಯನ್ನು ನಿರಂತರ ವಾಗಿ ರಂಟೆಕುಂಟೆಯಿಂದ ಸಾಗುವಳಿ ಮಾಡಲಾಗಿದೆ. ಅದರ ಮಣ್ಣು ಸ್ವಲ್ಪ ಬೂದಿಗಪ್ಪು ಇದೆ. ಹೇರಳ ಪ್ರಮಾಣದ ಗಡಿಗೆ ಮಡಿಕೆಗಳು ಕಂಡು ಬಂದವು. ಹೆಚ್ಚಿನ ಸಂಖ್ಯೆಯ ಗಡಿಗೆಗಳು ತಿಳುಗೆಂಪು ಬಣ್ಣದವಾಗಿವೆ. ಈ ಗಡಿಗೆಗಳ ನಮೂನೆಗಳು ಶಾತವಾಹನರ ಕಾಲದ ಗಡಿಗೆಗಳನ್ನು ಹೋಲುತ್ತವೆ. ಇನ್ನುಳಿದ ಗಡಿಗೆಗಳು ಆಧುನಿಕ ಕಾಲಕ್ಕೆ ಸೇರಿವೆ. ಏಕೆಂದರೆ ಈ ನೆಲೆಯು ಈ ಗ್ರಾಮದಿಂದ ತುಂಬ ಹತ್ತಿರವಿರುವುದರಿಂದ ಆಧುನಿಕ ಗಡಿಗೆಗಳು ಬೆರೆತುಕೊಂಡಿರುವುದು ಕಾರಣವಾಗಿದೆ.

ಈ ಬೌದ್ಧ ನೆಲೆಯು ಊರ ಪಶ್ಚಿಮದಲ್ಲಿರುವ ಶ್ರೀ ಮಲ್ಲನಗೌಡರ ವಿಸ್ತಾರವಾದ ಹೊಲದಲ್ಲಿ ಹರಡಿದೆ. ಈ ಬೌದ್ಧ ನೆಲೆಯಲ್ಲಿ ಅನೇಕ ಫಲಕಗಳು ತೂನ್ನೂರಿನಿಂದ ಮಾಳಗಿಗೆ ಸಾಗುವ ಚಕ್ಕಡಿ ರಸ್ತೆಯಲ್ಲಿ ಇರುವ ಶ್ರೀ ಮಲ್ಲನ ಗೌಡರ ಹೊಲದ ಬದಿಯಲ್ಲಿ ಹಾಗೂ ಹೊಲದಲ್ಲಿ ಹರಡಿಕೊಂಡಿವೆ. ಶಿಲ್ಪ ಫಲಕಗಳು ಈ ಹೊಲದಿಂದ ದಕ್ಷಿಣಕ್ಕೆ ಮತ್ತು ಪಶ್ಚಿಮಕ್ಕೆ ೧ಕಿ.ಮೀ ದೂರದವರೆಗೆ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿವೆ. ಅಲ್ಲೆಲ್ಲಾ ಕಪ್ಪು ಭೂಮಿಯಿದ್ದು ಹೊಲಗಳ ಮೇರೆಗಳನ್ನು ಹಾಕಲಾಗಿದೆ. ಅಲ್ಲಿಯ ಭೂಮಿಯನ್ನು ನಿರಂತರವಾಗಿ ಸಾಗುವಳಿ ಮಾಡಲಾಗುತ್ತಿದೆ. ಈ ಚಕ್ಕಡಿಯ ದಾರಿ ಬದಿಗಳಲ್ಲಿ ಮತ್ತು ದಾರಿಯಲ್ಲಿ ಸುಣ್ಣದ ಕಲ್ಲುಗಳನ್ನು ಹಾಕಿರುವುದರಿಂದ ಜನರು ಓಡಾಡುವುದಕ್ಕೆ ಚಕ್ಕಡಿಯ ಓಡಾಟಕ್ಕೆ ಅದು ದುರ್ಗಮವೆನಿಸಿದೆ. ಒಟ್ಟಾರೆ ಈ ನೆಲೆಯಲ್ಲಿ ಅನೇಕ ಸ್ಮಾರಕ ಶಿಲ್ಪದ ತುಂಡುಗಳು, ಜಾತಕಕಥೆಯ ಶಿಲ್ಪಗಳು, ಸ್ತೂಪ ಬೇಲಿಯ ಶಿಲ್ಪ ತುಂಡುಗಳು ಮುಂತಾದವು ಕಾಣಿಸಿ ಕೊಂಡಿವೆ.

ಸ್ಮಾರಕ ಶಿಲ್ಪಗಳಲ್ಲಿ ಎರಡು ಶಿಲ್ಪಗಳು ವಿಶೇಷ ಗಮನವನ್ನು ಸೆಳೆಯುತ್ತವೆ. ಒಂದು ರಾಜ ಮಹಾರಾಜರಿಗೆ ಸಂಬಂಧಿಸಿರಬೇಕು. ಇನ್ನೊಂದು ವರ್ತಕರ ಹಾಗೂ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಕಾಣುತ್ತದೆ.

ಒಂದು ತುಂಡಾದ ಶಿಲ್ಪಫಲಕದ ಮೇಲಿನ ಮತ್ತು ಕೆಳಗಿನ ಭಾಗ ಮುರಿದಿವೆ. ಉಳಿದ ಅದರ ನಡುವಿನ ಭಾಗದಲ್ಲಿ ಒಬ್ಬ ವ್ಯಕ್ತಿ ಮಂಚದ ಮೇಲೆ ಪ್ರಲಂಬಾಸನದಲ್ಲಿ ಕುಳಿತಿರುವನು. ಬಲಗೈಯನ್ನು ಸ್ವಲ್ಪ ಬಗ್ಗಿಸಿ ಮೇಲಕ್ಕೆತ್ತಿರುವನು. ಎಡಗೈಯನ್ನು ಸೊಂಟದ ಕೆಳಗೆ ಬಗ್ಗಿಸಿ ಇಟ್ಟಿರುವನು. ವಸ್ತ್ರಾಭರಣಗಳನ್ನು ಧರಿಸಿರುವನು. ಅವನ ಬದಿಗಳಲ್ಲಿಬ್ಬರು ಸೇವಕಿಯರು ನಿಂತಿದ್ದು, ಒಬ್ಬಳನ್ನು ಮಾತ್ರ ಕಿರಿದಾಗಿ ತೋರಿಸಲಾಗಿದೆ. ಇನ್ನೊಬ್ಬಳು ಚೌರಿಯನ್ನು ಹಿಡಿದು ಅವನ ಎಡಬದಿಗೆ ನಿಂತಿದ್ದಾಳೆ. ಆಕೆಯು ವಸ್ತ್ರಾಭರಣ ಧರಿಸಿರುವಳು. ಆತನು ಕುಳಿತ ಸಿಂಹಾಸನದ ಕೆಳಗಡೆ ಒಬ್ಬ ವ್ಯಕ್ತಿ ಆತನ ಪಾದವನ್ನು ಹಿಡಿದು ಕುಳಿತುಕೊಂಡಿರುವನು. ಇದೊಂದು ವಿಶೇಷ ಅಂಶವಾಗಿದೆ. ಅವನು ತನ್ನ ಬಲಗೈಯನ್ನು ಬಗ್ಗಿಸಿ ಆಶೀರ್ವಾದ ಮಾಡುವ ರೀತಿಯಲ್ಲಿ ಮೇಲಕ್ಕೆತ್ತಿದ್ದಾನೆ. (ಚಿತ್ರ ೧).

* ಸಂಶೋಧಕರು, ನಂ.೧೩, ಸರಸ್ವತಿ ಹಾಸ್ಟೆಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
** ನಿರ್ದೇಶಕರು, (ಕಾ.ನಿ.) ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಇನ್ನೊಂದು ತುಂಡು ಶಿಲ್ಪಫಲಕದ ಕೆಳಗಿನ ಭಾಗ ಮುರಿದುಹೋಗಿದೆ. ಉಳಿದ ಭಾಗಗಳಲ್ಲಿ ಎರಡು ದೃಶ್ಯಗಳಿವೆ. ಕೆಳಗಿನ ದೃಶ್ಯದಲ್ಲಿ ಇಬ್ಬರು ಸ್ತ್ರೀಯರ ನಡುವೆ ಒಬ್ಬ ಕುಳಿತ ಕುಜ್ಜ ವ್ಯಕ್ತಿಯ ಚಿತ್ರವಿದೆ. ಈ ಕುಬ್ಜವ್ಯಕ್ತಿಯು ಈ ಸ್ತ್ರೀಯರ ಪತಿಯೋ ಅಥವಾ ಮಗುವೋ ಎಂಬುದು ಸ್ಪಷ್ಟವಾಗಬೇಕಾಗಿದೆ. ಬಲಗಡೆ ಕುಳಿತ ಮಹಿಳೆ ಆತನ ತಲೆಯನ್ನು ತನ್ನ ಎಡಗೈಯಿಂದ ಹಿಡಿದುಕೊಂಡಿದ್ದಾಳೆ. ಆಕೆಯು ಮುಂಚಾಚಿದ ಬಲಗೈಯ ಭಾಗ, ತೊಡೆಯ ಭಾಗ ಮತ್ತು ಮುಖದ ಭಾಗ ಶಿಥಿಲವಾಗಿವೆ. ಎಡಗಡೆ ಕುಳಿತ ಮಹಿಳೆಯ ಮುಖಭಾಗ, ಬಲಪುಚ್ಛಭಾಗ ಎಡಗೈ ಭಾಗ ಶಿಥಿಲವಾಗಿವೆ. ಇವರ ನಡುವೆ ಕುಳಿತ ವ್ಯಕ್ತಿಯ ಶೈಲಿ ವಿಶಿಷ್ಟವೆನಿಸಿದೆ. ಮೇಲಿನ ಭಾಗದಲ್ಲಿ ಎರಡು ಕೊಡಗಳ ನಡುವೆ ಮೇಲ್ಭಾಗದಲ್ಲಿ ಮತ್ತೊಂದು ಕೊಡವನ್ನು ಕೆತ್ತಲಾಗಿದೆ. ಫಲಕದ ಮೇಲಿನ ಭಾಗ ವೃತ್ತಾಕಾರವಾಗಿದೆ. (ಚಿತ್ರ ೨).

ಕಲ್ಲಿನಲ್ಲಿ ಕೆತ್ತಲಾಗಿರುವ ೨೪ ಚಕ್ರಗಳಿರುವ ಧರ್ಮ ಚಕ್ರವನ್ನು ಕಾಣುತ್ತೇವೆ. ಮತ್ತೊಂದು ಶಿಲ್ಪದ ತುಂಡಿನಲ್ಲಿ ಒಡೆದ ಚಿತ್ರವಿದೆ. ಅದರ ಕೆಳಗಿನ ಭಾಗ ಮುರಿದಿದೆ. ಆ ಚಕ್ರದ ನಡುವಿನ ಗುಮಕ್ಕ ಕೂಡಿಸಲಾಗಿದೆ. ಈ ಭಾಗ ಸ್ತೂಪದ ಪ್ರಕಾರವೆಂದು ಹೇಳಬಹುದು.

ಮತ್ತೊಂದು ಶಿಲ್ಪದಲ್ಲಿ ಅನೇಕ ಹಲ್ಲುಗಳ ಚಿತ್ರಗಳಿವೆ. ಅದರಲ್ಲಿ ಒಬ್ಬ ವ್ಯಕ್ತಿ ಮಾತ್ರ ನಮಗೆ ಕಾಣಿಸಿಕೊಳ್ಳುತ್ತಾನೆ. ಈ ಭಾಗ ಸ್ತೂಪದ ಪುರಾವೆಯೆಂದು ಹೇಳಬಹುದು. ಅದು ಸ್ತೂಪದಿಂದ ಒಡೆದ ಅರೆಗಂಬ ಚಿತ್ರಗಳು ಉಳಿದಿವೆ. ಇದೊಂದು ಸ್ತೂಪದ ಬೇಲಿಭಾಗವಿರಬೇಕು.

ಇನ್ನೊಂದು ಶಿಲ್ಪದಲ್ಲಿ ಆನೆಯ ಚಿತ್ರವಿದೆ. ಆನೆಯ ಎರಡು ಕಿವಿಗಳು ಹಾಗೂ ಅದರ ಎರಡು ಕಣ್ಣುಗಳು ದೊಡ್ಡದಾಗಿವೆ. ಅದರ ಶಿಲ್ಪದ ಶಿರ ಮಾತ್ರ ಕಾಣಿಸುತ್ತಿದೆ. ಉಳಿದ ಶರೀರದ ಭಾಗವು ಒಡೆದು ಹೋಗಿದೆ.

ಇನ್ನೊಂದು ಶಿಲ್ಪಫಲಕ ತುಂಡಿನಲ್ಲಿ ಸ್ತೂಪದ ಬೇಲಿ ಫಲಕವಾಗಿದೆ. ಅದರಲ್ಲಿ ಅರೆಗಂಬಗಳ ಪಟ್ಟಿಕೆಯಿದೆ. ಒಂದು ತುಂಡು ಫಲಕದಲ್ಲಿ ಒಡೆದ ಶಿರಭಾಗ ಇನ್ನಿತರ ಅಂಕಣಗಳಿವೆ.

ಈ ಶಿಲ್ಪದ ಕೆಳಗಿನ ಮತ್ತು ಮೇಲಿನ ಭಾಗಗಳು ಮುರಿದಿವೆ. ಉಳಿದ ಭಾಗದಲ್ಲಿ ಕುದುರೆಯ ದೇಹದ ಬಲಗಡೆಯಲ್ಲಿ ಒಬ್ಬ ಪುರುಷನನ್ನು ತೋರಿಸಿದೆ. ಆತನ ಕೈಯಲ್ಲಿ ಒಂದು ಕೋಲಿದೆ. ಕುದುರೆಯ ಹಿಂದಿನ ಭಾಗದ ಕಾಲುಗಳು ಒಡೆದುಹೋಗಿವೆ. (ಚಿತ್ರ ೩).

ಮತ್ತೊಂದು ತುಂಡು ಶಿಲ್ಪದಲ್ಲಿ ಕೇವಲ ಕೆಳಗಿನ ಪಟ್ಟಿಕೆಯಲ್ಲಿ ಎಂಟು ಜನರು ಕೈಯಲ್ಲಿ ವಿವಿಧ ಉಪಕರಣಗಳನ್ನು ಹಿಡಿದಿರುವರು. ನಾಯಿಯೊಂದು ಕೋಣದ ಎದುರಿಗೆ ನಿಂತಿದೆ? ಅದರ ಬಲಗಡೆಯಲ್ಲಿ ನಾಲ್ವರು ಹಾಗೂ ಎಡಗಡೆಯಲ್ಲಿ ಮೂವರು ನಿಂತಿದ್ದಾರೆ. (ಚಿತ್ರ ೪).

ಅಲ್ಲಿಯ ಒಂದು ಶಿಲ್ಪ ಫಲಕವು ಬಹುದೊಡ್ಡದಾಗಿದೆ. ಅದನ್ನು ಮೂರು ಪಟ್ಟಿಕೆಗಳನ್ನಾಗಿ ವಿಂಗಡಿಸಬಹುದು. ಮೇಲಿನ ಫಲಕದ ಮೂರು ಸಾಲುಗಳಲ್ಲಿ ಕ್ರಮವಾಗಿ ಒಂದು, ನಾಲ್ಕು ಮತ್ತು ಐದು ಕೊಡಗಳ ಚಿತ್ರಗಳಿವೆ. ಎರಡನೆಯ ಫಲಕದಲ್ಲಿ ಒಬ್ಬ ವ್ಯಕ್ತಿಯನ್ನು ನಾಲ್ವರು ತಲಾ ಒಂದು ಕಡೆ ಇಬ್ಬರಂತೆ ಒಬ್ಬನನ್ನು ಕೈಯಲ್ಲಿ ಕೂಡ ಹಿಡಿದಿದ್ದಾನೆ. ಅದರ ಕೆಳಗಿನ ಪಟ್ಟಿಕೆಯ ಮೇಲೆ ಶಾಸನವನ್ನು ಕೆತ್ತಲಾಗಿದೆ. (ಚಿತ್ರ ೫).

**ಶಾಸನಗಳು**

I, ಶಾಸನ ಶಿಲ್ಪ ಫಲಕದ ಶಾಸನಪಾಠ

೧ ವಲವಸ ಪಪಲಾನ ಕಣ್ಹಸ

೨ ವಲಯಸ ಅಲದಾನಕಿದಿತಲಯ

೩ ಅ ಪಿ ಸ ಮ ನು ರ ಲಿ ಗ ಮ ಸ ಯ

೪ ಮದ ಕಾಮ ಕಣ ತೊನು

೫ ಅಪಿಮುರಿ ಯು ಯ ಸಿ ಯ

ಈ ಶಾಸನದದಲ್ಲಿ ಕಣ್ಹಸ ಇತ್ಯಾದಿ ವಿವರಗಳಿವೆ. ಅಕ್ಷರಗಳ ತಲೆಯ ಮೇಲೆ ಮೊಳೆ ಆಕಾರದ ತಲೆಗಳಿವೆ. ಈ ಶೈಲಿಯು ಸು.ಕ್ರಿ.ಶ. ೩ನೇ ಶತಮಾನದ ಅಕ್ಷರಗಳನ್ನು ಹೋಲುವುದರಿಂದ ಈ ಶಿಲ್ಪ ಶಾಸನ ಆ ಕಾಲದ್ದಾಗಿದೆ.

ಅದರ ಕೆಳಗಿನ ಮತ್ತು ಕೊನೆಯ ಪಟ್ಟಿಕೆಯನ್ನು ಎರಡು ಭಾಗಗಳನ್ನಾಗಿ ವಿಭಜಿಸಲಾಗಿದೆ. ಒಂದರಲ್ಲಿ ಒಬ್ಬ ಪುರುಷನು ಕುದುರೆಯನ್ನು ತೆಗೆದುಕೊಂಡು ಹೋಗುತ್ತಿದ್ದಾನೆ. ಕುದುರೆಯ ಮೇಲ್ಭಾಗದಲ್ಲಿ ಇಬ್ಬರು ಪುರುಷರು ಇದ್ದಾರೆ. ಇನ್ನೊಂದು ಭಾಗದಲ್ಲಿ ಒಬ್ಬ ವ್ಯಕ್ತಿಯ ಬದಿಗಳಲ್ಲಿ ಇಬ್ಬರು ಕುಳಿತಿದ್ದರೆ, ನಡುವಿನ ವ್ಯಕ್ತಿಯ ಬಲಗೈ ಸಹ ಈ ಮೇಲಿನಂತೆ ಮಡಚಿ ದೇಹದ ಮೇಲೆ ಇಟ್ಟಿದ್ದಾನೆ. ಇನ್ನೊಂದು ಕೈಯನ್ನು ಮತ್ತೊಂದು ಕಡೆ ಇಳಿಬಿಟ್ಟಿರುವನು.

II, ನಕನ್ಹಸ

ಈ ಶಾಸನದ ಅಕ್ಷರಗಳ ಶೈಲಿಯಿಂದ ಅದರ ಕಾಲ ಸು.ಕ್ರಿ.ಶ. ೧–೨ನೇ ಶತಮಾನ. ತುಂಡು ಶಾಸನವು ಕನ್ಹಸನ ಹೆಸರನ್ನು ಉಲ್ಲೇಖಿಸುತ್ತದೆ. ಈ ಅಕ್ಷರಗಳಿಗೆ ತಲೆಕಟ್ಟು ಇರುವುದಿಲ್ಲ.

ಕನ್ಹಸನ ಹೆಸರು ಅಲ್ಲಿಯ ಇನ್ನೊಂದು ಶಾಸನದಲ್ಲಿ ಕಣ್ಹಸನೆಂದು ಬರೆಯಲಾಗಿದೆ. ಅದರ ಕಾಲ ಸು. ಕ್ರಿ.ಶ. ೩ನೇ ಶತಮಾನ. ಕನ್ಹಸನು ಕೃಷ್ಣನೆಂದು ಅರ್ಥೈಸಲಾಗಿದೆ.

ತುಂಡು ಶಾಸನದ ಪಾಠ

III, ಹ ವ ಲಿ ಅ

ಈ ತುಂಡು ಶಾಸನದಲ್ಲಿ 'ಹ ವ ಲ ನ' ಹೆಸರಿದೆ. ದುಂಡಾದ ಅಕ್ಷರಗಳುಳ್ಳ ತಲೆಯ ಮೇಲೆ ಇಲ್ಲಿಯೂ ಯಾವುದೇ ತಲೆಕಟ್ಟು ಇರುವುದಿಲ್ಲ. ಹೀಗಾಗಿ ಈ ತುಂಡು ಶಾಸನದ ಕಾಲ ಸು. ಕ್ರಿ.ಶ. ೧-೨ನೇ ಶತಮಾನವೆಂದು ಹೇಳಬಹುದು.

ಈ ಮೇಲಿನ ವಿವರಗಳಿಂದ ಈ ಸ್ಥಳದಲ್ಲಿ ಎರಡು ಕಾಲಘಟ್ಟಗಳ ಶಾಸನಗಳಿರುವುದು ತಿಳಿಯುತ್ತದೆ. ಒಂದು ಸು. ಕ್ರಿ.ಶ. ೧-೨ನೇ ಶತಮಾನ, ಇನ್ನೊಂದು ಸು. ಕ್ರಿ.ಶ. ೩ನೇ ಶತಮಾನದ್ದಾಗಿದೆ.

ಅಲ್ಲಿಯ ಒಂದು ತುಂಡು ಶಿಲ್ಪ ಫಲಕದಲ್ಲಿ ಜಾತಕ ಕಥೆಯ ನಿದರ್ಶನವನ್ನು ಎರಡು ಪಟ್ಟಿಕೆಗಳಲ್ಲಿ ಕಂಡರಿಸಲಾಗಿದೆ. ಒಂದರಲ್ಲಿ ಕೆಳಗಿನ ಫಲಕದಲ್ಲಿ ಕೇವಲ ಶಿಲ್ಪಗಳ ಮೇಲಿನ ಅರ್ಧಭಾಗ ಉಳಿದಿದೆ. ಇನ್ನೊಂದರಲ್ಲಿ ಶಿಲ್ಪಗಳ ಪೂರ್ಣ ವಿವರಗಳಿವೆ. ಕೆಳಗಿನ ಭಾಗದ ಶಿಲ್ಪದಲ್ಲಿ ತಲೆಗೆ ರುಮಾಲು (ಕಿರೀಟ) ಧರಿಸಿದ ಶಿರೋ ಭಾಗವುಳ್ಳ ವ್ಯಕ್ತಿಯನ್ನು ಉಳಿದ ಚಿತ್ರಗಳಿಗಿಂತ ದೊಡ್ಡದಾಗಿ ಚಿತ್ರಿಸಲಾಗಿದೆ. (ಚಿತ್ರ ೬).

ಆತನ ಬಲಬದಿಗೆ ಮೂವರು ಆತನನ್ನು ನೋಡುತ್ತಾ ಕುಳಿತಿರುವರು. ಆತನ ಎಡಬದಿಗೆ ಒಬ್ಬ ವ್ಯಕ್ತಿ ಕುಳಿತಿದ್ದಾನೆ. ಆ ವ್ಯಕ್ತಿಯ ಎಡಕ್ಕೆ ಇಬ್ಬರು ಕುಳಿತು ಅವನನ್ನು ನೋಡುತ್ತಿರುವರು. ನಡುವೆ ಕುಳಿತಿರುವ ಈರ್ವರ ನಡುವೆ ಒಬ್ಬ ವ್ಯಕ್ತಿ ಛತ್ರಿಯನ್ನು ಇಬ್ಬರಿಗೂ ಹಿಡಿದು ನಿಂತಿದ್ದಾನೆ. ಮೇಲಿನ ಫಲಕದಲ್ಲಿ ಅರಸನು ತುಂಬಿದ ಒಂದು ಗಂಟು ಅಥವಾ ಬಕೇಟನ್ನು? ಒಬ್ಬ ವ್ಯಕ್ತಿಗೆ ಹಸ್ತಾಂತರಿಸುತ್ತಾ ನಿಂತಿರುವನು. ಅವರ ಎಡಬದಿಗೆ ಒಬ್ಬ ಕೈಮುಗಿದು ನಿಂತಿರುವನು. ಅವರ ಎಡಬದಿಗೆ ನಾಲ್ವರು ನಿಂತಿರುವರು. ನಿಂತ ಹಸು, ಕರುಗಳೂ ಇವೆ ಮತ್ತು ಶಾಲಾಕಾರದ ಕಟ್ಟಡಗಳಿರುವವು.

ಅಲ್ಲಿಯ ನೆಲೆಯ ಮತ್ತೊಂದು ಶಿಲ್ಪ ಫಲಕದಲ್ಲಿ ಕುದುರೆ, ಆನೆ ಮುಂತಾದ ಚಿತ್ರಗಳಿವೆ. ಈ ಎಲ್ಲಾ ಶಿಲ್ಪ ಫಲಕಗಳು ಬಹುತೇಕ ಚೈತ್ಯಾಲಯ ಅಥವಾ ಸ್ತೂಪಕ್ಕೆ ಸಂಬಂಧಿಸಿವೆ. ಅಲ್ಲಿಂದ ಹತ್ತಿರದಲ್ಲಿ ಉತ್ತರಕ್ಕೆ ಒಳಗೆ ಊರಿಗೆ ಹೋಗುವ ದಾರಿಯ ನಡುವೆ, ಭೀಮಾನದಿಗೆ ಸೇರಿದ ವಿಶಾಲ ಇಳಿಜಾರಾದ ಹಳ್ಳವಿದೆ. ವಿಶಿಷ್ಟವೆಂದರೆ ಅಲ್ಲಿಯ ಅನೇಕ ಹೊಲಗಳ ಮೇರೆಗಳ ಮೇಲೆ ಸುಣ್ಣದ ಶಿಲೆಗಳನ್ನು ಬಳಸಿ ಎತ್ತರದ ಗೋಡೆಗಳನ್ನು ಕಟ್ಟಲಾಗಿದೆ. ಹೀಗಾಗಿ ಅಲ್ಲಿದ್ದ ಚೈತ್ಯಾಲಯದ ಕಟ್ಟಡ ಸ್ತೂಪದ ಅನೇಕ ಶಿಲ್ಪ ಫಲಕಗಳು ಸುಮಾರು ೧ ಕಿ.ಮೀ. ಸುತ್ತಳತೆಯಲ್ಲಿ ಹರಡಿರುವುದು ಗೋಚರಿಸುತ್ತವೆ. ಮಲ್ಲನಗೌಡರ ಹೊಲದ ಪರಿಸರದಲ್ಲಿ ಕಾಣಿಸಿರುವುದರಿಂದ ಅಲ್ಲಿಂದ ಚೈತ್ಯಾಲಯ ಅಥವಾ ಸ್ತೂಪವು, ಸು. ಕ್ರಿ.ಶ. ೩ನೆಯ ಶತಮಾನದಲ್ಲಿ ಇದ್ದಿತ್ತೆಂದು ಹೇಳಬಹುದು. ಅಷ್ಟೇ ಅಲ್ಲ ಅದರ ಪ್ರಾಚೀನತೆ ಸು. ೧-೨ನೇ ಶತಮಾನಕ್ಕೆ ಹೋಗುತ್ತದೆ. ಏಕೆಂದರೆ ಆ ಕಾಲದ ಶಾಸನ ತುಂಡುಗಳು ಅಲ್ಲಿಯೆ ಕಾಣಿಸಿವೆ. ಅದರ ನೆಲೆಯಲ್ಲಿ ಹಾಳಾದ ಜನವಸತಿ ನಿಲಯವು ಸಮಕಾಲೀನದಾಗಿದೆ. ಅಲ್ಲಿಯ ಶಿಲ್ಪಗಳ ಕಲಾಶೈಲಿಯು ಸನ್ನತಿಯ ಪ್ರದೇಶದಲ್ಲಿ ದೊರೆತ ಶಿಲ್ಪಗಳನ್ನು ಹೋಲುತ್ತದೆ.

ನಾಲವಾರದ ಮಾರುತಿ ದೇವಾಲಯದ ಮುಂದೆ ಒಂದು ಶಿಲ್ಪಪಟ್ಟಿಕೆಯಿದೆ. ಅದು ಸುಣ್ಣದ ಶಿಲೆಯಾಗಿದೆ. ಅದರಲ್ಲಿ ಹೂಬಳ್ಳಿಯ ಅಲಂಕರಣೆಯಿದೆ. ಈ ಹೂಬಳ್ಳಿ ಅಲಂಕರಣ ಕಣಗಿನಹಾಳ ಸ್ತೂಪದ ಕೆಲವು ಶಿಲ್ಪಫಲಕಗಳ ಅಲಂಕರಣವನ್ನು ಹೋಲುತ್ತವೆ. ಹೀಗಾಗಿ ಈ ಶಿಲ್ಪವನ್ನು ಸನ್ನತಿ ಪ್ರದೇಶದಿಂದ ತಂದಿರುವ ಸಾಧ್ಯತೆಯಿದೆ. ಯಾಕೆಂದರೆ ಈ ನಮೂನೆಯ ಈ ಕಾಲದ ಶಿಲ್ಪಗಳು ಅಲ್ಲಿ ಕಾಣುವುದಿಲ್ಲ.

ಮಾಂದಾತ ಜಾತಕದಲ್ಲಿ ಮಾಂದಾತ ಅರಸನು ಚಕ್ರವರ್ತಿಯಾಗಿ ಸ್ವರ್ಗಕ್ಕೆ ಪ್ರವೇಶಿಸಿದ. ಆದ ಕಾರಣ ಆತ ಇಂದ್ರನ ಜೊತೆ ಸರಿಸಮಾನ ಸ್ಥಾನದಲ್ಲಿ ಕುಳಿತುಕೊಂಡ. ಆಗ ಆತನಿಗೆ ಇಡೀ ಸಿಂಹಾಸನ ಸಿಕ್ಕಿದರೆ ಎಂಬ ಆಸೆಯುಂಟಾಯಿತು. ಅದಕ್ಕಾಗಿ ಆತನು ತನ್ನ ಮೂಲಸ್ಥಿತಿಗೆ ಹಿಂದಿರುಗಿದನು. ಇದೊಂದು ಮಾಂದಾತ ಜಾತಕದ ಕಥೆಯಾಗಿದೆ. ಈ ಶಿಲ್ಪದಲ್ಲಿ ಇಬ್ಬರು ಕುಳಿತಿರುವ ಚಿತ್ರಗಳು, ಆನೆ, ಮಂತ್ರಿ, ಕುದುರೆ, ಚಿತ್ರಗಳು ಅಲ್ಲಿ ಇರುವುದರಿಂದ ಮತ್ತು ಆತನು ಇಂದ್ರನ ಜೊತೆ ಕುಳಿತಿರುವುದರಿಂದ ಮಾಂದಾತ ಜಾತಕ ಕತೆಯ ನಿರೂಪಣೆಯೆಂದು ಗುರುತಿಸಲಾಗಿದೆ.

ತೂನ್ನೂರಿನ ಆ ಸ್ಥಳ ಈಶ್ವರ ದೇವಾಲಯದ ಮುಂದೆ ನೊಗಹಾರಿದ ಎತ್ತಿನ ಬಂಡಿಯ ಶಿಲ್ಪವಿದೆ. ಕೇವಲ ಆ ಶಿಲ್ಪದ ಕೆಳಗಿನ ಭಾಗದಲ್ಲಿ ಯಾವ ಶಿಲ್ಪಗಳಿರುವುದಿಲ್ಲ. ಇದು ಕೇವಲ ಸ್ಮಾರಕ ಶಿಲ್ಪವಾಗಿದೆ. ಇಲ್ಲಿಯೂ ಕಟ್ಟೆಯ ಮೇಲೆ ನಾಗನ ಶಿಲ್ಪಫಲಕ ಒಡೆದು ಎರಡು ತುಂಡಾಗಿದೆ. ಅದರ ಮೇಲಿನ ಭಾಗದಲ್ಲಿ ಹೆಡೆಗಳ ಕೊರಳಿಗೆ ಸುತ್ತಿದ ದಪ್ಪನೆಯ ಸರವಿದೆ. ಬದಿಗೆ ಏಕ ಹೆಡೆಯುಳ್ಳ ನಾಗಗಳಿವೆ.



ಬಿರಾದಾರ ಶ್ರೀಶೈಲ*

# ಸೇಡಂ : ಒಂದು ಬೌದ್ಧರ ನೆಲೆ

ಸುಮಾರು ೨೦೦೦ ವರ್ಷಗಳ ಹಿಂದೆ ಮೌರ್ಯರು ಮತ್ತು ಶಾತವಾಹನರ ಆಳ್ವಿಕೆಯ ಅವಧಿಯಲ್ಲಿ ಭಾರತದಲ್ಲಿ ಬೌದ್ಧ ಧರ್ಮವು ಜನಪ್ರಿಯಗೊಂಡು ಔನ್ನತ್ಯದ ಹಂತವನ್ನು ತಲುಪಿ ಇಲ್ಲಿಯ ಜೀವನ ಮತ್ತು ಸಂಸ್ಕೃತಿಯ ಮೇಲೆ ಅಪಾರವಾದ ಪ್ರಭಾವವನ್ನು ಉಂಟುಮಾಡಿತು.

ಕ್ರಿ.ಶ. ೮ನೇ ಶತಮಾನದ ನಂತರ ಶಂಕರಾಚಾರ್ಯರಾದಿಯಾಗಿ ಅನೇಕ ಮಹಾ ಪುರುಷರು ಹಿಂದೂ ಧರ್ಮದಲ್ಲಿ ಮಾಡಿದ ಸುಧಾರಣೆ ಮತ್ತು ಕ್ರಾಂತಿಯಿಂದಾಗಿ ಬೌದ್ಧ ಧರ್ಮವು ಭಾರತದಲ್ಲಿ ಅವನತಿ ಹೊಂದಿತು. ಬೌದ್ಧ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ದಕ್ಷಿಣ ಭಾರತದ ಆಂಧ್ರಪ್ರದೇಶದ ಅಮರಾ ವತಿ, ನಾಗಾರ್ಜುನಕೊಂಡ, ಭಟ್ಟಿಪ್ರೋಲು, ಘಂಟಸಾಲ ಮತ್ತು ಕರ್ನಾಟಕದಲ್ಲಿ ಸನ್ನತಿ ಇವು ಪ್ರಮುಖವಾದ ಬೌದ್ಧ ಧರ್ಮಗಳ ಕೇಂದ್ರಗಳಾಗಿದ್ದವೆಂಬುದು ಇಲ್ಲಿಯವರೆಗೆ ತಿಳಿದು ಬಂದ ವಿಷಯ.

ಕರ್ನಾಟಕದ ಕಲ್ಬುರ್ಗಿ ಜಿಲ್ಲೆಯ ಸನ್ನತ್ತಿಯಿಂದ ದಕ್ಷಿಣಕ್ಕೆ ಸುಮಾರು ೫೦ ಕಿ.ಮೀ. ದೂರದಲ್ಲಿರುವ ಸೇಡಂ ಪಟ್ಟಣವು ಕೂಡಾ ಮೌರ್ಯ ಮತ್ತು ಶಾತವಾಹನರ ಆಳ್ವಿಕೆಯ ಅವಧಿಯಲ್ಲಿ ಬೌದ್ಧ ಧರ್ಮದ ನೆಲೆಯಾಗಿತ್ತೆಂಬ ಸೂಚನೆಗಳು ಅಲ್ಲಿ ಸಿಗುವ ಕೆಲವು ಅವಶೇಷಗಳಿಂದ ತಿಳಿದುಬರುತಲಿದೆ. ಬೃಹತ್ ಗಾತ್ರದ ಇಟ್ಟಂಗಿಗಳು (೧X೨ ಅಡಿ ಉದ್ದಳತೆಯ) ಹಾಸು ಬಂಡೆಗಲ್ಲುಗಳು, ವಿಪುಲವಾಗಿ ಬಳಸಿದ ಸುಣ್ಣದ ಕಲ್ಲುಗಳು, ಉಬ್ಬುಶಿಲ್ಪದ ಕೆತ್ತನೆ, ಶಾತವಾಹನರ ರಾಜ ಲಾಂಛನವಾದ ನಾಗಶಿಲ್ಪ ಇವು ಮೌರ್ಯ ಮತ್ತು ಶಾತವಾಹನರ ಕಾಲದ ಬೌದ್ಧ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುವ ಅವಶೇಷಗಳಾಗಿವೆ. ಇವುಗಳೆಲ್ಲವೂ ಬೌದ್ಧ ಧರ್ಮದ ಪ್ರಮುಖ ಕೇಂದ್ರವಾದ ಸನ್ನತಿಯಲ್ಲಿ ಹೇರಳವಾಗಿ ಸಿಗುತ್ತವೆ. ಬುದ್ಧನ ಜಾತಕ ಕಥೆ, ಆ ಕಾಲದ ಸಾಮಾಜಿಕ ಧಾರ್ಮಿಕ ಜೀವನಕ್ಕೆ ಸಂಬಂಧಿಸಿದ ಅನೇಕ ವಿಷಯಗಳು ಉಬ್ಬು ಶಿಲ್ಪದಲ್ಲಿ ಕೆತ್ತಿದ್ದು ಕಾಣಬಹುದು.

ಪ್ರಾಚೀನ ಕಾಲದಲ್ಲಿ ಸೇಡಂ ಪಟ್ಟಣದ ಸುತ್ತ ಅಭೇದ್ಯವಾದ ಕೋಟೆ ಇತ್ತೆಂಬ ವಿಷಯವು ಸ್ಥಳೀಯ ಶಾಸನ ಮತ್ತು ಅಳಿದುಳಿದ ಕೋಟೆಯ ಭಗ್ನಾವಶೇಷಗಳಿಂದ ತಿಳಿದುಬರುತ್ತದೆ. ಮೇಲೆ ತಿಳಿಸಿರುವಂತೆ (ಬೃಹತ್ ಗಾತ್ರದ) ಇಟ್ಟಂಗಿ ಗಳು ಕೋಟೆಯ ಭಗ್ನಾವಶೇಷದ ಅಡಿಯಲ್ಲಿ ಬಿದ್ದಿರುವುದು ಗೋಚರಿಸುತ್ತದೆ. ಹಳೆಯ ಸೇಡಂ ಪಟ್ಟಣದ ಮುಖ್ಯ ಬೀದಿಯಲ್ಲಿರುವ ಹಾರಪ್ಪಯ್ಯನ ಮಠದ ಹತ್ತಿರ ಇರುವ ಖಾಸಗಿ ಕಟ್ಟಡದ ಪ್ರವೇಶ ದ್ವಾರದಲ್ಲಿರುವ ಸುಮಾರು ೫X೬ ಅಡಿ ಉದ್ದಳತೆಯ ಬೃಹತ್ ಗಾತ್ರದ ಸುಣ್ಣದ ಶಿಲೆಯ ಹಾಸು ಬಂಡೆಗಲ್ಲೊಂದಿದೆ. ಇದರ ಮೇಲೆ ಆನೆಗಳು ಕೈಯಲ್ಲಿ ಭರ್ಜಿಯನ್ನು ಹಿಡಿದು ಯುದ್ಧಮಾಡುವ ಯೋಧನ ಚಿತ್ರವನ್ನು ಉಬ್ಬು ಶಿಲ್ಪದಲ್ಲಿ ಕೆತ್ತಲಾಗಿದೆ.

ದಕ್ಷಿಣ ಭಾರತದ ಪ್ರತಿಷ್ಠಿತ ರಾಜ ಮನೆತನಗಳಲ್ಲಿ ಶಾತವಾಹನರು ಮೊದಲಿಗರು. ಇವರು ಬೌದ್ಧ ಧರ್ಮದ ಪೋಷಕರಾಗಿದ್ದರು. ನಾಗನಹೆಡೆಯು ಅವರ ರಾಜ ಲಾಂಛನವಾಗಿತ್ತು. ಸೇಡಂ ಪಟ್ಟಣದ ನೂಲಾಗಲ್ಲಿಯಲ್ಲಿರುವ ಮಸೀದಿ ಬದಿಯ ಕಿರು ರಸ್ತೆಯಲ್ಲಿ ಒಂದು ಸುಣ್ಣದ ಕಲ್ಲಿನಲ್ಲಿ ನಿರ್ಮಿಸಿದ ಭಗ್ನವಾದ ನಾಗನಶಿಲ್ಪವೊಂದು ಅನಾಥವಾಗಿ ಬಿದ್ದಿದೆ. ಸೇಡಂ ಪಟ್ಟಣವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೆಂಬ ಅಂಶ ಈ ಶಿಲ್ಪದಿಂದ ತಿಳಿದುಬರುತ್ತದೆ.

ಇತ್ತೀಚೆಗೆ ಸೇಡಂ ತಾಲೂಕಿನ (ಸೇಡಂದಿಂದ ೧೮ ಕಿ.ಮೀ. ದೂರದಲ್ಲಿ) ಕೋಡ್ಲಾ ಗ್ರಾಮದ ಹೊರವಲಯದಲ್ಲಿ ಕ್ಷೇತ್ರ ಕಾರ್ಯದಲ್ಲಿ ಬೌದ್ಧರ ಕಾಲದ (ಕ್ರಿ.ಶ. ೩ ರಿಂದ ಕ್ರಿ.ಶ. ೨ನೇ ಶತಮಾನದ) ಕೆಲವು ಅವಶೇಷಗಳಾದ ಬೃಹತ್ ಗಾತ್ರದ ಇಟ್ಟಂಗಿಗಳು, ಮಡಿಕೆಯ ಚೂರುಗಳು ಮತ್ತು ಬೌದ್ಧರು ಪೂಜಿಸುವ ಬುದ್ಧನ ಪಾದುಕೆಯ ಚಿಹ್ನೆಯಿರುವ ಶಿಲ್ಪ ಶೋಧಿಸಲಾಗಿದೆ. ಈ ಎಲ್ಲಾ ಸಂಗತಿಗಳು ಸೇಡಂ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಮೌರ್ಯ ಮತ್ತು ಶಾತವಾಹನರ ಕಾಲದಲ್ಲಿ ಬೌದ್ಧಧರ್ಮ ಮತ್ತು ಸಂಸ್ಕೃತಿ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ತಿಳಿದುಬರುತ್ತದೆ. ಸ್ಪಷ್ಟ ಮತ್ತು ಖಚಿತವಾದ ಮಾಹಿತಿಗಾಗಿ ಈ ಸ್ಥಳದ ಮೇಲೆ ಇನ್ನೂ ಹೆಚ್ಚಿನ ಸಂಶೋಧನೆ ಮತ್ತು ಉತ್ಖನನ ಕಾರ್ಯ ಅವಶ್ಯವಾಗಿ ನಡೆಯಬೇಕಾಗಿದೆ.



* ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ನೃಪತುಂಗ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಸೇಡಂ.

ಗಾಂಧೀಜಿ ಚಂದ್ರಪ್ಪಾ*

# ಹೈದ್ರಾಬಾದ ಕರ್ನಾಟಕದಲ್ಲಿ ಬೌದ್ಧಧರ್ಮ

ಹೈದ್ರಾಬಾದ ಕರ್ನಾಟಕದ ಪ್ರದೇಶವು ಇಡೀ ಕರ್ನಾಟಕ ಸಂದರ್ಭದಲ್ಲಿ ನೋಡಿದಾಗ ಸಾಂಸ್ಕೃತಿಕವಾಗಿ, ರಾಜಕೀಯ ವಾಗಿ, ಸಾಹಿತ್ಯಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ಪ್ರಾಚೀನ ಕಾಲದಿಂದಲೂ ಶ್ರೀಮಂತಿಕೆಯನ್ನು ಸಾರಿದೆ.

ಇಂಥ ಪ್ರಾಂತ್ಯವು ಭಾಷಾವಾರು ಪ್ರಾಂತ ರಚನೆಯಾಗಿ ಕರ್ನಾಟಕದಲ್ಲಿ ಸೇರ್ಪಡೆಯಾದಂದಿನಿಂದ ಈ ಪ್ರದೇಶಕ್ಕೆ 'ಹೈದ್ರಾಬಾದ ಕರ್ನಾಟಕ'ವೆಂದು ಕರೆಯುತ್ತ ಬಂದಿದ್ದಾರೆ.[೧] ಕಲ್ಯಾಣ ಶರಣರ ಬೀಡಾದ ಈ ಪ್ರದೇಶಕ್ಕೆ 'ಕಲ್ಯಾಣ ಕರ್ನಾಟಕ' ವೆಂದು ಕರೆಯುವುದು ಹೆಚ್ಚು ಸೂಕ್ತ ಎಂಬ ಮನವರಿಕೆಯು ಇತ್ತೀಚಿಗೆ ಜನರಲ್ಲಿ ಮೂಡುತ್ತಿದೆ. ಇಂಥ ನಾಡಿನಲ್ಲಿ ಬುದ್ಧನ ಶಾಂತಿಯ ಸಂದೇಶವನ್ನು ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ.

**ಐತಿಹಾಸಿಕ ಹಿನ್ನೆಲೆ :** ಹೈದ್ರಾಬಾದ-ಕರ್ನಾಟಕ ಪ್ರದೇಶ ವನ್ನು ಸುಮಾರು ಕ್ರಿ.ಪೂ. ಎರಡನೆಯ ಶತಮಾನದಿಂದ ರಾಜಮನೆತನಗಳಾದ ಮೌರ್ಯರು, ಶಾತವಾಹನರು, ಆರನೆಯ ಶತಮಾನದಲ್ಲಿ ಬಾದಾಮಿಯ ಚಾಲುಕ್ಯರು ಅನಂತರ ರಾಷ್ಟ್ರಕೂಟರು ರಾಜ್ಯವಾಳಿದರು.[೨] ರಾಷ್ಟ್ರಕೂಟರ ದೊರೆಯಾದ ಅಮೋಘವರ್ಷ ನೃಪತುಂಗನು ಮಳಖೇಡ ವನ್ನು ರಾಜಧಾನಿಯಾಗಿ ಮಾಡಿಕೊಂಡು ರಾಜ್ಯವಾಳಿದನು. ಈತನ ಕಾಲದಲ್ಲಿ ಬೌದ್ಧ ಧರ್ಮವು ರಾಜಾಶ್ರಯ ಪಡೆದಿತ್ತು. ಕ್ರಿ.ಶ. ೯೭೩ರ ನಂತರ ಕಲ್ಯಾಣಿ ಚಾಲುಕ್ಯರು ಇಲ್ಲಿ ಆಳ್ವಿಕೆ ಮಾಡಿದರು.

**ಬೌದ್ಧ ಧರ್ಮ :** ಕರ್ನಾಟಕದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಬೌದ್ಧಧರ್ಮ ಒಂದು. ಇಂತಹ ಧರ್ಮದ ಅನೇಕ ಅವಶೇಷಗಳನ್ನು ಹೈದ್ರಾಬಾದ ಕರ್ನಾಟಕದಲ್ಲಿ ಕಾಣುತ್ತೇವೆ. ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಸನ್ನತಿಯು ಪ್ರಾಚೀನ ಕಾಲದ ಬೌದ್ಧ ಧರ್ಮದ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ. ಈ ಭಾಗದಲ್ಲಿ ಆಳಿದ ಮೌರ್ಯರ ಶಾಸನಗಳು, ನಾಣ್ಯಗಳು, ಚೈತ್ಯಗಳು ಕಾಣುತ್ತೇವೆ. ೧೯೫೪ ರಲ್ಲಿ ಕಪಟರಾಳ ಕೃಷ್ಣರಾಯರು ಸನ್ನತಿಯನ್ನು ಕುರಿತು ಶೋಧಿಸಿದರು. ಉತ್ಖನನದ ನಂತರ ಇದು ಬೌದ್ಧ ಧರ್ಮದ ಪ್ರಮುಖ ಕೇಂದ್ರವಾಗಿತ್ತೆಂದು ತಿಳಿಯಿತು.[೩] ಇಲ್ಲಿ ದೊರೆತಿರುವ ಅವಶೇಷಗಳ ಮೂಲಕ ಮೌರ್ಯರು ಬೌದ್ಧಧರ್ಮದ ನೀತಿ ನಿಯಮವನ್ನನುಸರಿಸಿ ಮೇಲು-ಕೀಳೆಂಬ ಭೇದ-ಭಾವವಿಡದೆ ಸರ್ವರೂ ಸಮಾನರೆಂಬಂತೆ ಆಳ್ವಿಕೆಯು ಮಾಡುತ್ತಿದ್ದರು. ಮೌರ್ಯರ ನಂತರ ಬಂದ ಶಾತವಾಹನರು ಬೌದ್ಧ ಧರ್ಮಕ್ಕೆ ರಾಜಾಶ್ರಯ ಕೊಟ್ಟಿದ್ದರು. ಅರಸರುಗಳಾದ ಶಾತಕರ್ಣಿ, ಗೌತಮಿ ಪುತ್ರ ಶಾತಕರ್ಣಿಯರು ತಮ್ಮ ಆಳ್ವಿಕೆಯ ಕಾಲದಲ್ಲಿ ಸನ್ನತಿಯಲ್ಲಿ ಚೈತ್ಯಾಲಯಗಳು, ಸ್ತೂಪಗಳು, ಶಿಕ್ಷಣ ಕೇಂದ್ರ ಗಳನ್ನು ಸ್ಥಾಪಿಸಿದರು.[೪] ಅಂದಿನಿಂದ ಇಂದಿಗೂ ಈ ಹೈದ್ರಾಬಾದ ಕರ್ನಾಟಕದಲ್ಲಿ ಬೌದ್ಧಧರ್ಮದ ತನ್ನ ಅಸ್ತಿತ್ವವನ್ನು ಕಾಣುತ್ತೇವೆ.

ಮೌರ್ಯರ ಅಶೋಕನಿಗೆ ಸಂಬಂಧಪಟ್ಟ ಅನೇಕ ಶಾಸನಗಳು ಕೊಪ್ಪಳ, ಮಸ್ಕಿ, ಸನ್ನತಿ, ಮುಂತಾದ ಸ್ಥಳಗಳಲ್ಲಿ ಲಭ್ಯವಿವೆ. ಅಶೋಕನ ಆಳ್ವಿಕೆಯು ಹಾಗೂ ಆತನ ಶಾಂತಿಯ ಸಂಕೇತದ ಬಿರುದಾದ 'ದೇವನಾಂಪ್ರಿಯ ಅಶೋಕ' ಎಂಬುದ ರಿಂದ ಜನರಲ್ಲಿ ಧರ್ಮದ ಬಗ್ಗೆ ಆಸಕ್ತಿಯು ಹುಟ್ಟಿತು. ಅಶೋಕನ ಹೈದ್ರಾಬಾದ ಕರ್ನಾಟಕದಲ್ಲಿ ಆಳ್ವಿಕೆಯ; ಹಾಗೂ ಬೌದ್ಧ ಸ್ತೂಪ, ಶಿಲಾಲೇಖಗಳು, ಬುದ್ಧನ ಕುರಿತು ಜೀವನದ ಚಿತ್ರಣ ಗಳು, ಫಲಕಗಳು, ಪಾದಗಳು, ಬೋಧಿವೃಕ್ಷ, ತ್ರಿರತ್ನಜ್ಞಾನ ಮುಂತಾದ[೫] ಅವಶೇಷಗಳು ಲಭ್ಯವಾಗಿರುವುದರಿಂದ ಈ ಮಾತಿಗೆ ಪೋಷಣೆ ಒದಗುತ್ತದೆ.

ಸನ್ನತಿಯು ಬೌದ್ಧಧರ್ಮದ ಕೇಂದ್ರವಾಗಿದ್ದುದಕ್ಕೂ ಪೂರಕ ಪುರಾವೆ ಒದಗುತ್ತದೆ. ಇಂದಿಗೂ ಅಲ್ಲಿ ಪ್ರವಾಸಿಗರನ್ನು ಕೈ ಮಾಡಿ ಕರೆಯುತ್ತಿರುವ ವಿಶಿಷ್ಟವೆನಿಸುವ 'ಚಂದ್ರಲಾ ಪರಮೇಶ್ವರಿ' ದೇವಸ್ಥಾನವು ಭೀಮಾ ನದಿಯ ದಂಡೆಯ ಮೇಲೆ ನಿರ್ಮಿತವಾಗಿದೆ. ಅನೇಕ ಆಧಾರಗಳಿಂದ 'ಚಂದ್ರಲಾಂಬೆ' ಎಂಬುದು ಬೌದ್ಧರ ಹೆಸರು ಮುಂದೆ ಚಂದ್ರ ಲಾಪರಮೇಶ್ವರಿ ಆಗಿದೆ ಎಂಬುದು ಕಪಟರಾಳರು ಹಾಗೂ ಡಾ. ತಾಳ್ತಜೆ ವಸಂತಕುಮಾರ ಅವರ ಅಭಿಪ್ರಾಯ ವಾಗಿದೆ.[೬]

ಸಗರ ಚಕ್ರವರ್ತಿ ಆಳ್ವಿಕೆ ಮಾಡಿದ ಸಗರನಾಡಿನ ಕೇಂದ್ರವಾದ ಶಹಾಪುರ, ಮಹತ್ವ ಪಡೆದ ಧಾರ್ಮಿಕ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ಅಧ್ಯಯನ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

ಕೇಂದ್ರವಾಗಿದೆ. ಸಗರಾದ್ರಿ ಪರ್ವತ ಬೆಟ್ಟದ ಮೇಲೆ ಹಲವಾರು ಪವಿತ್ರ ತಾಣಗಳಿವೆ. ಶಹಾಪುರದಿಂದ ಭೀಮರಾಯನ ಗುಡಿಗೆ ಹೋಗುವ ಮಾರ್ಗದಲ್ಲಿ ಎಡಕ್ಕೆ ಮಲಗಿರುವ ಸಗರಾದ್ರಿ ಪರ್ವತ ಶ್ರೇಣಿಯಲ್ಲಿ ಮುಗಿಲತ್ತ ಮುಖ ಮಾಡಿ ಅಂಗಾತ ಮಲಗಿರುವ ನಿಸರ್ಗಬುದ್ಧನ ರೂಪರೇಷೆ ಜಗತ್ತಿನ ಪ್ರವಾಸಿಗರನ್ನು ಮಂತ್ರಮುಗ್ಧಗೊಳಿಸುತ್ತದೆ.[೭] ಬೆಟ್ಟದ ಮಡಿಲಲ್ಲಿ ಬುದ್ಧನ ಅಗಲವಾದ ಹಣೆ ಚೂಪಾದ ಮೂಗು ವಿಶಾಲವಾದ ಎದೆಯಂತೆ ಒಡೆದು ಕಾಣುವ ಬುದ್ಧನ ರೂಪದ ಈ ನೈಸರ್ಗಿಕ ರಚನೆ, ನಿಜಕ್ಕೂ ವಿಸ್ಮಯವನ್ನುಂಟುಮಾಡುತ್ತದೆ.

**ಶಿಕ್ಷಣದ ಕೇಂದ್ರಗಳು** : ಪ್ರಾಚೀನ ಶಿಕ್ಷಣ ಪದ್ಧತಿ ಹೆಚ್ಚಾಗಿ ಧಾರ್ಮಿಕ, ಆಧ್ಯಾತ್ಮಿಕ, ಹಿನ್ನೆಲೆಯಿಂದ ಕೂಡಿ ತನ್ನ ಪರಂಪರೆಗೆ ಹೊಂದಿಕೊಂಡು ಬಂದಿದೆ. 'ಅನ್ನದಾನಕ್ಕಿಂತ ವಿದ್ಯಾದಾನ ಬಹುಶ್ರೇಷ್ಠ'; ವಿದ್ಯೆಗಿಂತ ಶ್ರೇಷ್ಠವಾದದ್ದು ಮತ್ತೊಂದಿಲ್ಲ. ಎಂಬ ಉಕ್ತಿಯಂತೆ ಈ ಪದ್ಧತಿಯಲ್ಲಿ ಶಿಕ್ಷಣಕ್ಕೆ ಮಹತ್ವದ ಸ್ಥಾನ ಕೊಟ್ಟಿದ್ದರು. ಬಹು ಪ್ರಾಚೀನ ಕಾಲದಲ್ಲಿ ಶಿಕ್ಷಣ ಮೌಖಿಕ ಪರಂಪರೆಯಲ್ಲಿದ್ದಿತು. ಕ್ರಿಪೂ. ಮೂರನೇ ಶತಮಾನದಿಂದ ಶಿಕ್ಷಣ ಅಕ್ಷರಗಳ ರೂಪದಲ್ಲಿ ಪ್ರಾರಂಭವಾಯಿತು. ಪ್ರಾಚೀನ ಕಾಲದಲ್ಲಿ ಬೌದ್ಧಧರ್ಮ ಅನೇಕ ಶಿಕ್ಷಣ ಕೇಂದ್ರಗಳನ್ನು ಹೊಂದಿತ್ತು. ಉದಾ: ನಾಸಿಕ, ನಾಲಂದ, ಅಜಂತಾ, ಎಲ್ಲೋರ, ನಾಗಾರ್ಜುನಕೊಂಡ ಮುಂತಾದವು ಬೌದ್ಧ ಕೇಂದ್ರಗಳಾಗಿದ್ದವು. ಇದೇ ಸಂದರ್ಭದಲ್ಲಿ ಹೈದ್ರಾಬಾದ ಕರ್ನಾಟಕದ ಬೌದ್ಧ ಧರ್ಮದ ಕೇಂದ್ರಗಳೆಂದರೆ ಸನ್ನತಿ, ನಾಗಾವಿ, ಶಿರವಾಳ ಮುಂತಾದವು. ಇವುಗಳ ಮುಖಾಂತರ ಈ ಭಾಗದಲ್ಲಿ ಜನತೆಯು ಬೌದ್ಧ ಧರ್ಮ ಪ್ರಭಾವಕ್ಕೆ ಒಳಗಾಯಿತು. ಸಂಘ ಸಂಸ್ಥೆಗಳು ಚೈತ್ಯಾಲಯಗಳಲ್ಲಿ ಶಿಕ್ಷಣ ಕೊಡುತ್ತಿದ್ದುವು. ಹೀಗಾಗಿ ಈ ಪ್ರದೇಶದಲ್ಲಿ ಬೌದ್ಧ ಭಿಕ್ಷುಗಳು ಧರ್ಮ ಪ್ರಸಾರ ಮಾಡಲು ಕಾರಣವಾಯಿತು. ಅಲ್ಲದೆ ಶಿಸ್ತು ಸಂಯಮ ಇವೆಲ್ಲವುಗಳನ್ನು ಬೌದ್ಧ ಶಿಕ್ಷಣದಲ್ಲಿ ಕಾಣುತ್ತೇವೆ. ಬ್ರಾಹ್ಮಣ ಶಿಕ್ಷಣ ಪದ್ಧತಿಯು ಉಪನಯನದಿಂದ ಪ್ರಾರಂಭವಾದರೆ ಬೌದ್ಧರಲ್ಲಿ ಪಬ್ಬಜ ಎಂಬುದರಿಂದ ನಡೆಯುತ್ತಿತ್ತು. ವಿದ್ಯಾರ್ಥಿ ಜೀವನ ೧೨ ವರ್ಷವೆಂದು ಖಚಿತ ಪಡಿಸಲಾಗಿತ್ತು. ವಿದ್ಯಾರ್ಥಿ ಜೀವನ ಮುಗಿದ ಮೇಲೆ ಶ್ರವಣನೆಂದು ಕರೆಯುತ್ತಿದ್ದರು.[೮]

ಬೌದ್ಧ ಧರ್ಮದಲ್ಲಿ ಶಿಕ್ಷಣ ಪದ್ಧತಿಯು ಸಾಮೂಹಿಕವಾಗಿ ಹಾಗೂ ಜಾತಿ, ಮತ, ಪಂಥ ಭೇದವೆನ್ನದೆ ಎಲ್ಲರೂ ಸಾಮಾನ್ಯವಾದ ಪ್ರಾಕೃತ ಪಾಳಿ ಭಾಷೆಯಲ್ಲಿ ಕಲಿಯುತ್ತಿದ್ದರು. ಈ ಭಾಗದ ಶಿಕ್ಷಣ ಕೇಂದ್ರಗಳಲ್ಲಿ ಚಿತ್ತಾಪುರ ತಾಲ್ಲೂಕಿನ ಸನ್ನತಿ ಹಾಗೂ ನಾಗಾಯಿಯು ಬೌದ್ಧಧರ್ಮದ ಪ್ರಮುಖ ಶಿಕ್ಷಣ ಕೇಂದ್ರವಾಗಿದ್ದವು. ಇಲ್ಲಿ ವಿದ್ಯಾರ್ಥಿಗಳು ಬೌದ್ಧಧರ್ಮದ ತತ್ವದ ಮೇಲೆ ಶಿಕ್ಷಣ ಪಡೆಯುತ್ತಿದ್ದರು. ಮೊದಮೊದಲಿಗೆ ಸ್ತ್ರೀಯರಿಗೆ ಶಿಕ್ಷಣ ಸೌಲಭ್ಯವಿರಲಿಲ್ಲ. ಕಾಲಾನುಕ್ರಮದಲ್ಲಿ ಬುದ್ಧನು ತನ್ನ ಸಾಕುತಾಯಿಯಾದ ಪ್ರಜಾಪತಿಯನ್ನು ಸಂಘಕ್ಕೆ ಸೇರಲು ಅವಕಾಶ ಒದಗಿಸಿಕೊಟ್ಟನು. ನಾಗಾವಿ ಒಂದನೆಯ ಶತಮಾನದಲ್ಲಿ ಬೌದ್ಧಧರ್ಮದ ಶಿಕ್ಷಣ ಕೇಂದ್ರವಾಗಿತ್ತು ಎಂದು ತಿಳಿದುಬರುತ್ತದೆ. ಚಿತ್ ಎಂದರೆ 'ಜ್ಞಾನ'. ಹಿಂದಿನ ಕಾಲದಲ್ಲಿ ಚಿತ್ತಾಪುರವೆಂದರೆ ಜ್ಞಾನದ ಪಟ್ಟಣವೆಂದು ಕರೆಯುತ್ತಿದ್ದರು. ಹೀಗಾಗಿ ಚಿತ್ತಾಪುರವೂ ಬೌದ್ಧಧರ್ಮದ ಜ್ಞಾನದ ಬೀಡಾಗಿತ್ತೆಂದು ಹೇಳಬಹುದು. ನಾಗಾವಿಯಲ್ಲಿ ೮೦೦ ವಿದ್ಯಾರ್ಥಿಗಳಿದ್ದ ವಿಷಯವನ್ನು ಶಿಲಾಶಾಸನಗಳು ಹೇಳುತ್ತವೆ. ಇಲ್ಲಿನ ವಿದ್ಯಾರ್ಥಿಗಳು ಬಹಳ ಶಿಸ್ತಿನಿಂದ ಜ್ಞಾನಾರ್ಜನೆಯನ್ನು ಪಡೆಯುತ್ತಿದ್ದರು. ಈ ಭಾಗದಲ್ಲಿ ಅಂದರೆ ಇಂದಿನ ಮಹಾರಾಷ್ಟ್ರ ಕರ್ನಾಟಕ ಆಂಧ್ರಗಳನ್ನೊಳಗೊಂಡ ಪ್ರದೇಶದಲ್ಲಿ ಬೌದ್ಧ ಧರ್ಮದ ಬೆಳವಣಿಗೆ ಕಾಣುತ್ತೇವೆ.

ಹೈದ್ರಾಬಾದ ಕರ್ನಾಟಕದಲ್ಲಿ ಅನೇಕ ಶಾಸನಗಳು, ಬೌದ್ಧಧರ್ಮದ ಕೇಂದ್ರಗಳು, ಶಿಕ್ಷಣ ಕೇಂದ್ರಗಳು, ಸ್ತೂಪಗಳು, ಚೈತ್ಯಾಲಯಗಳು, ವಿಹಾರಗಳು, ನಿರ್ಮಾಣವಾಗಿರುವುದರಿಂದ ಈ ಭಾಗದಲ್ಲಿ ಭಿಕ್ಷುಗಳು ಮೂಲೆ ಮೂಲೆಯಲ್ಲಿ ಅಲೆದಾಡಿ ಜಾತಿ ಅಸ್ಪೃಶ್ಯತೆಯಾಗಲಿ, ಮೇಲು-ಕೀಳು, ಬಡವ-ಶ್ರೀಮಂತ, ಹೆಣ್ಣು-ಗಂಡು ಎಂಬ ಭೇದಭಾವ ಇರದೆ ಎಲ್ಲರೂ ಸಮಾನರು ಎಂಬುದನ್ನು ಮನವರಿಕೆ ಮಾಡುವಲ್ಲಿ ಯಶಸ್ಸುಗೊಂಡ ಸೂಚನೆ ಸಿಗುತ್ತದೆ. ಹಾಗೂ ಹೈದ್ರಾಬಾದ-ಕರ್ನಾಟಕದ ನೆಲೆಯಲ್ಲಿ ಬೌದ್ಧಧರ್ಮವು ೨೦೦೦ ವರ್ಷಗಳಿಂದ ಪ್ರಾಚೀನತೆಯನ್ನು ಉಳಿಸಿಕೊಂಡು ಬಂದಿತೆನ್ನಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಜಯದೇವಿ. ಎಂ ಗಾಯಕವಾಡ., **ಪ್ರಾಚೀನ ಬೌದ್ಧ ವಿದ್ಯಾ ಕೇಂದ್ರ ಸನ್ನತಿ,** ಪು. ೩೩.
೨. ಡಾ. ಬಸವರಾಜ ಪೋಲಿಸ ಪಾಟೀಲ (ಸಂ)., **ಬಿಡುಗಡೆ** ಪು. ೨.
೩. **ಗುಲಬರ್ಗಾ ಜಿಲ್ಲೆ, ಭಾರತದ ಗ್ಯಾಸೆಟಿಯರ್**, ಕರ್ನಾಟಕ ರಾಜ್ಯ ಪು. ೭೮೨-೭೮೩.
೪. ಜಯದೇವಿ ಎಂ. ಗಾಯಕವಾಡ., **ಪ್ರಾಚೀನ ಬೌದ್ಧ ವಿದ್ಯಾ ಕೇಂದ್ರ ಸನ್ನತಿ,** ಪು. ೨೩.
೫. ಡಾ. ತಾಳಜೆ ವಸಂತಕುಮಾರ., **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ,** ಪು. ೨೫೨.
೬. ಜಯದೇವಿ ಎಂ. ಗಾಯಕವಾಡ., **ಅದೇ.,** ಪು. ೩೪-೩೫.
೭. **ಗುಲಬರ್ಗಾ ಜಿಲ್ಲೆ, ಭಾರತದ ಗ್ಯಾಸೆಟಿಯರ್.,** ಅದೇ., ಪು. ೭೭೬.
೮. ಎಸ್.ಬಿ. ಯಾದವಾಡ., **ಉದಯೋನ್ಮುಖ ಭಾರತದಲ್ಲಿ ಶಿಕ್ಷಣ.**

ಸುಭಾಷ ಕಮ್ಮಾರ*

# ಬಾದಾಮಿಯ ಗುಹಾಚಿತ್ರಗಳ ರೇಖಾ ಲಾಲಿತ್ಯ ಮತ್ತು ವರ್ಣಗಳ ಬಳಕೆ

ಕರ್ನಾಟಕದಲ್ಲಿ ಕಲೆಯ ಸಮೃದ್ಧಿ ಹಾಗು ಸೌಂದರ್ಯದ ಕಲ್ಪನೆಗಳು ಮೂಡುವುದೇ ಬಾದಾಮಿ ಚಾಲುಕ್ಯರ ಕಲಾ ಕೃತಿಗಳಿಂದ. ಅಲ್ಲಿನ ಕಲಾಕೃತಿಗಳು (ವಾಸ್ತು, ಶಿಲ್ಪ ಚಿತ್ರ) ತಮ್ಮ ವೈಶಿಷ್ಟ್ಯಗಳಿಂದಾಗಿ ನೋಡುಗರ (ರಸಿಕರ) ಗಮನ ವನ್ನು ಸೆಳೆಯುವಂಥವು. ಬಾದಾಮಿ ಎಂದೊಡನೆ ಅಲ್ಲಿನ ಗುಹಾಲಯಗಳು, ಸೌಂದರ್ಯದ ಗರ್ಭಗುಡಿ ಎನಿಸುತ್ತವೆ.

ಬಾದಾಮಿಯನ್ನು ಸಾಂಸ್ಕೃತಿಕ ಹಿನ್ನೆಲೆಯಿಂದ ನೋಡಿ ತರ್ಕಿಸಿ ಅಧ್ಯಯನ ಮಾಡಿದ ವಿದ್ವಾಂಸರಾದ ಪ್ರೊ.ಸಿ. ಶಿವರಾಮ ಮೂರ್ತಿ[೧], ಥಾಮಸ್ ಮುನ್ರೊ[೨], ಜಾನ್ ವಿಲ್ಸನ್[೨ಅ], ಜೇಮ್ಸ್ ಬರ್ಗಸ್[೨ಅ], ಡಾ. ಅ. ಸುಂದರ[೩], ಡಾ. ಶಿವರಾಮ ಕಾರಂತ[೪], ಡಾ. ಚೂಡಾಮಣಿ ನಂದಗೋಪಾಲ[೫], ಡಾ. ಎಂ.ಎಸ್. ನಾಗರಾಜರಾವ್[೬], ಡಾ. ಶೀಲಾಕಾಂತ ಪತ್ತಾರ[೭], ಅಲ್ಲಿನ ಗುಹಾಲಯದ ಮೇಲ್ಬಾವಣಿಯ ಚಿತ್ರಗಳನ್ನು ನೋಡಿ ಸ್ಫೂರ್ತಿ ಪಡೆದು ನಕಲು ಪ್ರತಿಗಳನ್ನು ಚಿತ್ರಿಸಿದವರಲ್ಲಿ ಎಂ.ವ್ಹಿ. ಮಿಣಜಗಿ[೮], ಅಹವಾರ್ಸಿ[೯], ಎಂ.ಎಸ್. ಚಂದ್ರಶೇಖರ್[೧೦], ಆರ್.ಎಂ. ಹಡಪದ[೧೧], ಹೀಗೆ ಇನ್ನೂ ಅನೇಕ ವಿದ್ವಾಂಸರು ತಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ಚರ್ಚೆಗಳನ್ನು ನಡೆಸಿ ಚಿತ್ರಿಸಿದ್ದಾರೆ.

ಮುಕ್ತ ಭಾವನೆಗಳಿಗೆ ಸೂಕ್ತ ಅವಕಾಶವೇ 'ಕಲೆ' ಎಂದು ಹೇಳುತ್ತೇವೆಯಾದರೂ 'ಡಾ. ಜಿ.ಎಸ್. ಶಿವರುದ್ರಪ್ಪನವರು: 'ಕಲೆಯೆಂದರೆ ಸ್ಥೂಲವಾಗಿ ಹೇಳುವುದಾದರೆ 'ಉಪಾಯ' ಅಥವಾ 'ಕೌಶಲ' ಎಂದು ಅರ್ಥ. ಯಾವ ಉಪಾಯ ಅಥವಾ ಕೌಶಲದ ಮೂಲಕ ಸೃಜನಶೀಲವಾದ ಮನಸ್ಸೊಂದು ತನ್ನ ಯಾವ ಭಾವನೆಗಳ ಅನುಭವಗಳನ್ನು ಮತ್ತೊಂದು ಮನಸ್ಸಿಗೆ ಮುಟ್ಟಿಸುವಂತೆ ಸೌಂದರ್ಯ ನಿರ್ಮಾಣ ಕ್ರಿಯೆ ಯಲ್ಲಿ ತೊಡಗುತ್ತದೆಯೋ ಆ ಕ್ರಿಯೆಯ ಪರಿಣಾಮವನ್ನೇ 'ಕಲೆ' 'ಕಲಾಕೃತಿ'[೧೨]ಎಂದಿದ್ದಾರೆ. ಮನುಷ್ಯನ ಮನಸ್ಸುಗಳ ತೀವ್ರತೆಯನ್ನು ಮೊದ ಮೊದಲು ತನ್ನ ಅಭಿವ್ಯಕ್ತಿ ಆಸೆಯನ್ನು 'ಕಲ್ಲು ಪಡೆ', 'ಕಲ್ಲಾಸರೆ', ಕಲ್ಲು ಮೇಲ್ಬಾವಣಿಯನ್ನೇ ಮೊದಲು ಗಮನಿಸಿದ್ದು, ಭಿತ್ತಿಚಿತ್ರ ಪರಂಪರೆಗೆ ನಾಂದಿಯಾಯಿತು. ಅವನ ಅಭಿವ್ಯಕ್ತಿ ಸಾಮರ್ಥ್ಯವನ್ನು (ಬಟ್ಟೆ ಹಲಗೆ) ಕ್ಯಾನ್ವಾಸಿನಂತೆ ಹವ್ಯಾಸವಾಗಿ ಪ್ರಾರಂಭಿಸಿದ ಅಂದಿನ ದಿನಗಳ ಕಲಾಭಿರುಚಿಯ ನಿರ್ಮಿತ ಅಂಶ, ಇಂದಿನ ನಮ್ಮ ಪರಂಪರೆಗೆ ಸಾಕ್ಷಿಯಾದ ದ್ದನ್ನು ಡಾ. ಅ. ಸುಂದರ[೧೩] ಅವರ ಶೋಧನೆಯಿಂದ ತಿಳಿಯುತ್ತದೆ

ಇದಕ್ಕೊಂದು ಮಾರ್ಗೋಪಾಯವನ್ನು ಡಾ. ಶಿವರಾಮ ಕಾರಂತರು; 'ಗುಹಾಲಯ ಅಜಂತಾದಿಂದ ಪ್ರಥಮ ಪ್ರಯತ್ನ ವೆಂದು ಪ್ರಾರಂಭಿಸಿ ಅದರ ಉಚ್ಛ್ರಾಯ ಸ್ಥಿತಿ ತಲುಪಲು ತೆಗೆದುಕೊಂಡ ಕಾಲಗತಿ ಪ್ರಮಾಣ ಹಲವಾರು ಶತಮಾನ ಗಳವರೆಗೆ ಮುಂದುವರೆಯಿತು ಎಂದಿದ್ದಾರೆ.[೧೪]

**ಗುಹಾಲಯ ನಿರ್ಮಾಣ :** 'ಕಾವ್ಯಗಳಲ್ಲಿ ಚಿತ್ರಶಾಲೆ ಗಳ ವರ್ಣನೆ ಸಿಕ್ಕರೂ ವಾಸ್ತವಿಕ ಸಾಕ್ಷ್ಯವಿಲ್ಲ' ಎಂದು ಡಾ. ಶಿವರಾಮಕಾರಂತರು ಹೇಳುತ್ತಾ 'ಅಜಂತಾ ನಂತರ ಉತ್ಕೃಷ್ಟವಾದ ಕಲಾ ನೈಪುಣ್ಯತೆಯ ಸಾಕ್ಷಿಯೇ ಈ ಬಾದಾಮಿ ಮೊದಲ ಪ್ರಯತ್ನ ಎಂದು ಅಭಿಪ್ರಾಯಪಟ್ಟಿದ್ದಾರೆ. ಬಾದಾ ಮಿಯ ಮೂರನೆಯ ಗುಹೆಯನ್ನು ಉದಾಹರಿಸಿದ್ದಾರೆ.[೧೫] ಅದರ ನಿರ್ಮಾಣ ಕಾಲ ಕ್ರಿಶ *೫೫೦–೫೭೮* ಎಂಬುದಾಗಿಯೂ *[ಕೀರ್ತಿವರ್ಮ (೫೫೬–೯೭), ಮಂಗಳೇಶ (೫೯೭–೬೦೯), ಪುಲಕೇಶಿ–II (೬೦೯–೬೪೨)]*[೧೬] ಶಾಸನ ದಿಂದ ತಿಳಿದು ಬರುವ ವಿಚಾರವಾದರೆ ಅದಕ್ಕಿಂತಲೂ ಮುಂಚಿನ ಏಳು ಶತಮಾನಗಳನ್ನು ಅಜಂತಾದ ಗುಹಾಲಯ ಗಳಲ್ಲಿ ಕಾಣುತ್ತೇವೆ. ಬಾದಾಮಿಯನ್ನು ಸೇರಿಕೊಂಡು ದಕ್ಷಿಣ ಪ್ರದೇಶವನ್ನು ಕ್ರಿಸ್ತಪೂರ್ವ ಎರಡು ಶತಮಾನಗಳಿಂದ, ಕ್ರಿಸ್ತಶಕ ಎರಡು ಶತಮಾನಗಳ ಅವಧಿಯಲ್ಲಿ ಸಾತವಾಹನ ವಂಶದ ಅರಸರು ಆಳುತ್ತಿದ್ದರು. ಅಜಂತಾದ ಎರಡನೆಯ ಗುಹೆಯಲ್ಲಿ ಕ್ರಿಸ್ತಪೂರ್ವ ಎರಡನೆಯ ಶತಮಾನದ ಬ್ರಾಹ್ಮೀ ಲಿಪಿಯ ಶಾಸನವಿದೆ. ಈ ಕಾಲದಲ್ಲಿ ಸಾಂಚಿಯ ಸ್ತೂಪಗಳ ಎದುರಿನ ಸುಂದರ ತೋರಣಗಳು ನಿರ್ಮಾಣಗೊಂಡ ಕಾಲವೂ ಒಂದೇ ಎಂಬುದನ್ನು ಡಾ. ಶಿವರಾಮ ಕಾರಂತರು ತಮ್ಮ ಅಧ್ಯಯನದ

* ಸಂ. ೧೧೧(೭೫), ೮ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಮಹಾಕವಿ ವ್ಯಾಸ ರಸ್ತೆ, ಹನುಮಂತನಗರ, ಬೆಂಗಳೂರು – ೫೬೦ ೦೧೯.

ಪೂರಕ ಅಂಶವನ್ನು ಸಿ. ಶಿವರಾಮಮೂರ್ತಿ ಅವರ[೧೭] ಅಭಿಪ್ರಾಯದಿಂದ ಖಚಿತಪಡಿಸಿದ್ದನ್ನು ಸ್ಮರಿಸಿದ್ದಾರೆ.

**ಗುಹಾಲಯದ ಮೇಲ್ಛಾವಣಿಯಲ್ಲಿನ ಚಿತ್ರರಚನೆಯ ಉದ್ದೇಶ :** ಉತ್ಕೃಷ್ಟತೆಯನ್ನು ನೆನೆಯುವಾಗ ಸಹಜವಾಗಿ ಮಾನವರು ತಮ್ಮ ಮುಖವನ್ನು ಮೇಲೆ ನೋಡುವಂತೆ ಮಾಡಿ ದೈವತ್ವವನ್ನು ಕಲ್ಪಿಸುತ್ತಾರೆ. ಅಂತಾಗಿ ಗುಹಾಲಯದ ಮೇಲ್ಛಾವಣಿಯನ್ನು ಆಯ್ಕೆ ಮಾಡಿಕೊಂಡ ರೀತಿ ಕೈಗೆ ನಿಲುಕದಿರಲೆಂದು ಇರಬೇಕು. ಜನರು ಮುಟ್ಟಿ, ತಟ್ಟಿ, ಕೆರೆದು ಹಾಳು ಮಾಡದಿರಲೆಂದು ಅವು ಹಾಳಾಗದಿರಲಿ, ಮಕ್ಕಳ ಕೈಗೆ ಎಟುಕದಿರಲೆಂದು ಕಲಾವಿದರ ಊಹೆಯಾಗಿರಬೇಕು.[೧೮] ಯಥಾದರ್ಶನ (Perspective) ದೃಷ್ಟಿಯಿಂದ ಮೇಲಕ್ಕೆ ಸುಂದರ ಮುದ ನೀಡುತ್ತಾ ಸಾರ್ವತ್ರಿಕವಾದ ರಮ್ಯತೆಯನ್ನು ಗೋಚರಿಸುವುದು ಅವರ ಕಲ್ಪನೆಯಲ್ಲಿ ಇತ್ತೆಂದು ಚಿತ್ರಕಲಾವಿದ ಎಂ.ಎಸ್. ಚಂದ್ರಶೇಖರ್[೧೯] ಮತ್ತು ವಿದ್ವಾಂಸ ಡಾ. ಶೀಲಾಕಾಂತ ಪತ್ತಾರ[೨೦] ಅವರ ಅಭಿಪ್ರಾಯವಾಗಿದೆ. (ನಾನು ಚಿಕ್ಕವನಿದ್ದಾಗ ನಮ್ಮೂರಿನ ದೇವಾಲಯದಲ್ಲಿ ಚಿತ್ರ ರಚಿಸಿದ ಅನುಭವದಿಂದ ಕಂಡಿದ್ದೇನೆ) ಇದು ಕೂಡಾ ಪೂರಕ ಅಂಶವಾಗಿದೆ. ಕೆಳಗಿನ ಗೋಡೆ ಬದಿಯಾದರೆ ಕೆರೆದು ಹಾಳು ಮಾಡುವ ಸಂಭವ ಇರುವುದರಿಂದ. ಬಾದಾಮಿ ಯಂತ ಕೆಂಪು ಮತ್ತು ಕಂದು ಬಣ್ಣದ ಬೃಹದಾಕಾರದ ಕಲ್ಲಾಸರೆಯನ್ನೇ ತಮ್ಮ ಕನಸಿನ ಕ್ಯಾನ್ವಾಸ ಎಂದು ಭಾವಿಸಿ ವಾಸ್ತುಶಿಲ್ಪ, ಚಿತ್ರ ಗಳನ್ನೇ ಸೃಷ್ಟಿಸಿದ್ದು ಅವರ ಸೃಜನಶೀಲತೆಯ ಪರಿಣತಿಗೆ ಸಾಕ್ಷಿಯಾಗಿವೆ.

**ಕಲಾಶಾಸ್ತ್ರ ಗ್ರಂಥಗಳು :** ಚಿತ್ರಕಲೆಯ ಮೌಲಿಕ ಗ್ರಂಥಗಳು ಚಿತ್ರ ರಚನೆಯ ಕುರಿತು ರೂಪಭೇದ ಪ್ರಮಾಣ, ಭಾವ, ಲಾವಣ್ಯ, ಸಾದೃಶ್ಯ, ವರ್ಣ, ರೇಖೆಗಳಿಗೆ ಸಂಬಂಧಿಸಿದ ಅಂಶ ಗಳನ್ನು ಒಳಗೊಂಡಿವೆ. ಅಲಂಕಾರಶಾಸ್ತ್ರಗಳು ಸೌಂದರ್ಯದ ಆಧಾರವನ್ನೇ ಮೂಲವಾಗಿರಿಸಿ ಲಭ್ಯವಿವೆ. ಪ್ರಾಚೀನ ಕೃತಿ ಗಳಾದ ೧) ವಾತ್ಸಾಯನನ ಕಾಮಶಾಸ್ತ್ರ, ೨) ಬೃಹತ್ ಸಂಹಿತಾ, ೩) ವಿಷ್ಣು ಧರ್ಮೋತ್ತರ ಪುರಾಣ, ೪) ಮಾನ ಸೋಲ್ಲಾಸ, ೫) ಮತ್ಸ್ಯ ಪುರಾಣ, ೬) ಹರಿವಂಶ ಪುರಾಣಗಳಲ್ಲಿ ಚಿತ್ರಕಲೆಯ ಕುರಿತ ಅಧ್ಯಾಯಗಳಿವೆ.

ಕಾಳಿದಾಸನ ಮೇಘದೂತ, ರಘುವಂಶಗಳಲ್ಲಿ ಚಿತ್ರ ಕಲೆಯ ಉಲ್ಲೇಖ ವಿಪುಲವಾಗಿದೆ. ಭವಭೂತಿಯ ಉತ್ತರ ರಾಮಚರಿತದಲ್ಲಿ ಅರ್ಜುನ ಎಂಬ ಚಿತ್ರಕಾರನು ರಾಮನ ಜೀವನವನ್ನು ಚಿತ್ರಿಸುವ ಭಿತ್ತಿಚಿತ್ರಗಳನ್ನು ರಚಿಸಿದನೆಂದು ಹೇಳಲಾಗಿದೆ. ವಿಷ್ಣುಧರ್ಮೋತ್ತರ ಪುರಾಣ 'ಚಿತ್ರಸೂತ್ರ'ದಲ್ಲಿ ಕಲೆಗಳಲ್ಲಿ ಚಿತ್ರಕಲೆಯೇ (ಶ್ರೇಷ್ಠವೆಂದು ಹೇಳಲಾಗಿದೆ. ಕಾಲಾನಂ ಪ್ರವರಂ ಚಿತ್ರಂ)[೨೧] ಮುಂದೆ ವಿಷ್ಣುಧರ್ಮೋತ್ತರ ಪುರಾಣದಲ್ಲಿಯೂ ಬಣ್ಣದ ಕುರಿತು ಹಳದಿ, ಕೆಂಪು ಹಸಿರು ಇವುಗಳ ಹಿತಮಿತ ಬಳಕೆ ಮಾಡುವುದು ರಾಜನನ್ನು ರಾಜ ಸಭೆಯನ್ನು ಚಿತ್ರಿಸುವ ಬಗ್ಗೆ ನಿರ್ದೇಶನವಿದೆ. ಅಂದಿನ ಕಲಾವಿದರು ಇವುಗಳನ್ನು ಅಧ್ಯಯನ ಮಾಡಿ ಶ್ರೇಷ್ಠ ಕಲಾಕೃತಿ ರಚಿಸಿದ್ದಾರೆಂದು ತಿಳಿಯಬಹುದು.

**ಭಿತ್ತಿ ಚಿತ್ರಕ್ಕೆ ಗಾರೆಯ ರಚನೆ :** ಜಿಗುಟು ಹೊಂದಿರುವ ಗುಣವುಳ್ಳ ಮಣ್ಣನ್ನು ಪುಡಿ ಮಾಡಿ ಸೋಸಿ ಮರವಜ್ರವನ್ನು ಸೇರಿಸಿ ಕುದಿಸಿದ ನೀರಿನೊಂದಿಗೆ ಬೆರೆಸುತ್ತಾ ಸುಣ್ಣದ ಕಲ್ಲು ಪುಡಿ ಪುಡಿ ಮಾಡಿ ಅದನ್ನು ಕಲಸುತ್ತಾ ಜೋನು ಬೆಲ್ಲವನ್ನು ಸೇರಿಸಿ ದೊಡ್ಡ ಗಾಲಿಯುಳ್ಳ ತಿರುವು ಕಲ್ಲಿರುವ ಒರಳಿನಲ್ಲಿ ಹಾಕಿ ಲೋಳೆಸರ ಮಿಶ್ರಣ ಮಾಡುತ್ತಿದ್ದರು. ಎತ್ತಿನ ಸಹಾಯದಿಂದ ತಿರುವುತ್ತಿದ್ದರು. ಅದು ಕಠಿಣತೆ ಪಡೆಯುವು ದರೊಳಗಾಗಿ ಮುದ್ದೆಯಂತಾದ ಮೆದು ಗಾರೆಯನ್ನು ಮೇಲ್ಛಾವಣಿಯ ಉಬ್ಬು ತಗ್ಗುಗಳಿಗೆ ಮೆತ್ತಿ ತ್ಯಾವೆಯಿಂದ ಸಮತಟ್ಟಾದ ರೀತಿಯಲ್ಲಿ ತೀಡುವುದು ಮತ್ತು ಹಸಿ ಇರುವಂತೆಯೇ ಕಾಯ್ದು ಹಾಲನ್ನು ಸಿಂಪಡಿಸುತ್ತಿದ್ದುದು ಗಮನಾರ್ಹವಾಗಿದೆ. ಇದರಂತೆಯೇ ಇನ್ನೊಂದು ವಿಧಾನ ಜೇಡಿಮಣ್ಣಿನೊಂದಿಗೆ ಗುಗ್ಗಲು ಜೇನು ಮೇಣ, ಅತಿ ಮಧುರ, ಮುರುಬೆಲ್ಲ, ಕುಸುಂಬಗಳನ್ನು ಎಣ್ಣೆಯಲ್ಲಿ ಸೇರಿಸಿ ಮಿಶ್ರಣ ಮಾಡುತ್ತಾ ಅದಕ್ಕೆ ಸುಟ್ಟಿರುವ ಸುಣ್ಣದೊಂದಿಗೆ ಬಿಲ್ವಪತ್ರೆ ಕಾಯಿಯ ಮೇಣ, ಅರೆದ ಉದ್ದಿನ ಪುಡಿ ಸೇರಿಸಿ ಎಲ್ಲವನ್ನು ತಿಂಗಳು ಕಾಲ ಜಿಡ್ಡು ಮಿಶ್ರಿತ ನೀರಿನಿಂದ ಸೇಚನ ಮಾಡಿ ಚಿತ್ರ ರಚಿಸುವ ಗೋಡೆಗೆ ಸಮನಾಗಿ ಹಚ್ಚುತ್ತಿದ್ದು, ಅದು ಒಣಗಿದಂತೆಲ್ಲ ಪುನಃ ಪುನಃ ಎಣ್ಣೆಯಿಂದ ಮಿಶ್ರಣ ಮಾಡಿದ ಮಣ್ಣಿನ ಲೇಪನ ಮಾಡುತ್ತಾ ಆಗಾಗ್ಗೆ ಹಾಲು ಎರಚಿ ತೊಳೆಯುತ್ತಿರಬೇಕು. ಈ ಬಗೆಯ ಲೇಪನ ಮಾಡುವುದರಿಂದ ನೂರಾರು ವರ್ಷಗಳ ಕಾಲ ಉಳಿಯುತ್ತದೆಂದು ಡಾ. ಅ.ಲ. ನರಸಿಂಹನ್‌ರವರು[೨೨] ತಮ್ಮ ಸಂಶೋಧನಾ ಕೃತಿಯಲ್ಲಿ ದಾಖಲಿಸಿದ್ದಾರೆ. ಇದು ಸಹ ಕಾಲಾನಂತರವೂ ಉಳಿಯುವ ಸಾಧ್ಯತೆ ಇದೆ.

ಕಲಾಕೃತಿ ರಚನೆಗೆ ಸಿದ್ಧವಾದ ಗಾರೆಯ ಮೇಲೆ ಅಂದಿನ ಕಾಲದ ರಾಜರುಗಳ ಜೀವನ ಪದ್ಧತಿ, ರಾಜ್ಯಾಡಳಿತ ದಲ್ಲಿ ಜರುಗುವ ಸಾಂಸ್ಕೃತಿಕ ಸನ್ನಿವೇಶಗಳು ಆಚರಣೆಗಳು, ದೇವಾನುದೇವತೆಗಳ ಇಷ್ಟಾನುಸಾರ ಭಂಗಿಗಳನ್ನು ಚಿತ್ರಿಸಿದ್ದಾರೆ. ಜೊತೆಗೆ ಪ್ರಾಣಿ, ಪಕ್ಷಿಸಂಕುಲ, ಲತೆ, ಗಿಡ ಮರಗಳು ಎಲ್ಲವನ್ನು ಸಮಯೋಚಿತವಾಗಿ ಕೃತಿಯಲ್ಲಿ ಮೇಳೈಸಿಕೊಂಡಿದ್ದು ಅವರ ನೈಪುಣ್ಯತೆಗೆ ಸಾಕ್ಷಿಯಾಗಿವೆ. ಇಲ್ಲಿಯ ತನಕ ಅರಿವೆಗಳಂತಹ ಚಿಕ್ಕ ಪುಟ್ಟ ವಸ್ತುಗಳ ಮೇಲೆ ಬರೆಯಲು ಕಲಿತಿದ್ದ ಚಿತ್ರಕಾರರಿಗೆ ಇನ್ನಷ್ಟು ವಿಶಾಲವಾದ ದೀರ್ಘಕಾಲ ಉಳಿಯಬಹುದಾದ

'ಗೋಡೆ' ಎಂಬ ಸಾಮಗ್ರಿ ದೊರಕಿದಂತಾಯಿತು. ಇದು ಒಂದು ರಾಜ್ಯವನ್ನೇ ಗೆಲ್ಲಲು ದೊರಕಿದ ಅವಕಾಶ ಎಂದು ಕೆಲವು ಭಾರತೀಯ ಚಿತ್ರಕಾರರು ತಿಳಿದುಕೊಂಡಿದ್ದಾರೆ ಎಂದು ಡಾ. ಶಿವರಾಮಕಾರಂತರ[೨೩] ಅಭಿಪ್ರಾಯವಾಗಿದೆ. ಎಂಟು ಶತಮಾನಗಳಷ್ಟು ಸುದೀರ್ಘವಾಗಿ ಬಂದ ಆ ಪರಂಪರೆ ಯಿಂದಾಗಿ ಗುಹಾಲಯ ಪದ್ಧತಿ ಕಲಿಸುವ ಉತ್ತಮ ಶಾಲೆಯೂ, ಭಿತ್ತಿಚಿತ್ರ ರಚನಾ ಕೌಶಲ್ಯದ ಪ್ರಯೋಗವೂ ಇತ್ತೆಂದು ಹೇಳುವುದು ಪೂರಕ ಅಂಶವಾಗಿದೆ.

**ಬಾದಾಮಿಯ ಗುಹಾಲಯದ ಚಿತ್ರಗಳು :** ಈ ಚಿತ್ರಗಳ ಕುರಿತು ಡಾ. ಅ.ಲ. ನರಸಿಂಹನ್ ಅವರು ಕರ್ನಾಟಕದಲ್ಲಿ ಬಾದಾಮಿಯು ಉಳಿದಿರುವ ಚಿತ್ರಶಾಲೆಗಳ ಪೈಕಿ ಮೊದಲನೆ ಯದಾದ ಹಾಗೂ ಏಕೈಕ ಚಿತ್ರಿತ ಗುಹಾಲಯ. ಇಲ್ಲಿನ ಚಿತ್ರಗಳನ್ನು ಕುರಿತಂತೆ ೧೮೧೮ರಲ್ಲಿಯೇ ಥಾಮಸ್ ಮುನ್ರೊ ಹೇಳಿದ ವಿಷಯವಾಗಿ ಜಾನ್ ವಿಲ್ಸನ್ ೧೮೫೦-೫೧ರಲ್ಲಿ ತಿಳಿಸುತ್ತಾರೆ. ಬಾದಾಮಿಯ ಚಿತ್ರಗಳ ಬಗ್ಗೆ ಮತ್ತೆ ಪರೀವಿಕ್ಷಣೆ ನಡೆಸಿ ೧೮೭೪ರಲ್ಲಿ ಜೇಮ್ಸ್ ಬರ್ಗಸ್ ವರದಿಯೊಂದನ್ನು ನೀಡಿದ್ದು ಅಲ್ಲಿಯ ಚಿತ್ರಗಳು ಮತ್ತು ಶಿಲ್ಪಕ್ಕೆ ಬಣ್ಣ ಹಾಕಿದ ಬಗ್ಗೆ ಹಾಗೂ ನಾಶವಾಗಿದ್ದ ಬಗ್ಗೆ[೨೪] ತಿಳಿಸುತ್ತಾರೆ.

ಪ್ರಸ್ತುತ ಮೂರನೆಯ ಗುಹೆಯ ಮುಂಚಾಚಿರುವ ಚಜ್ಜದ ಕೆಳಗಿರುವ ಚಿತ್ರಗಳ ಕುರುಹಿನ ವಿನಹ ಉಳಿದಂತೆ ಯಾವುದೇ ಚಿತ್ರಗಳು ಅಲ್ಲಿ ಉಳಿದಿಲ್ಲ. ಒಂದು ಕಾಲದಲ್ಲಿ ಇಡೀ ಗುಹೆಯು ಚಿತ್ರಗಳಿಂದ ಕೂಡಿತ್ತೆಂದು ತಿಳಿಸುವ ಎಂ.ಎಸ್. ನಾಗರಾಜರಾಯರು ಈಗ ಉಳಿದಿರುವ ಚಿತ್ರಗಳ ವಿಷಯ ಬಣ್ಣ ಇತ್ಯಾದಿಗಳ ಬಗ್ಗೆ ಹೇಳುತ್ತಾರೆ.[೨೫] ಮುಂದು ವರೆದು, *Originally the entire cave appears to have been painted. The style of paintings is comparable to the Ajanta murals, these murals are very impartant as they are the earliest among the wall Paintings of Hindu temples in india*[೨೬] ಭಾರತದ ಕಲೆ ಹಿರಿಮೆಯನ್ನು ವಿವರಿಸುತ್ತಾ ಪೂರ್ವದಲ್ಲಿ ಅಲ್ಲಿರುವ ಕೃತಿಗಳ ಕುರಿತು ಪೂರ್ಣ ರೀತಿಯಲ್ಲಿ ವಿವರಣೆ ನೀಡಿದ್ದಾರೆ. ಇದೇ ಮಾತನ್ನು ೧೯೭೫ರಲ್ಲಿ ಪ್ರಕಟವಾದ ಸಿ. ಶಿವರಾಮಮೂರ್ತಿಯವರ ಲೇಖನವನ್ನು ಆಧರಿಸಿದೆ ಎಂದು ವಿಜಾಪೂರ ಜಿಲ್ಹಾ ಗೆಜೆಟಿಯರ್‌ನಲ್ಲಿ *Though cave itself is vaishnavaite the paintings seem to deposit shaivite subjects. The most important and best preserved being that of the betrothal of shiva and parvati* ಎಂದು ಹೇಳಿದ್ದು ಅದಕ್ಕೆ ಯಾವುದೇ ಆಧಾರವಿರು ವಂತೆ ಕಂಡುಬರುವುದಿಲ್ಲ ಎಂದು ಡಾ. ಅ.ಲ. ನರಸಿಂಹನ್ ತಮ್ಮ ಸಂಶೋಧನಾ ಪ್ರಬಂಧದಲ್ಲಿ ಅಭಿಪ್ರಾಯಪಟ್ಟಿದ್ದಾರೆ.[೨೭]

ಈಚೆಗೆ ಬಾದಾಮಿ ಬಳಿಯಲ್ಲಿ ಹಲವಾರು ಆದಿಮ ಕಲೆಯನ್ನು ಗುರುತಿಸಿದ ಡಾ. ಅ. ಸುಂದರ ಅವರು ಪ್ರಸ್ತುತ ವೈಷ್ಣವ (೩ನೆ) ಗುಹೆಯ ಚಿತ್ರಗಳ ಬಗ್ಗೆ ಹೇಳುತ್ತಾ ಇಲ್ಲಿಯ ನೀಲಿ ಬಣ್ಣವನ್ನು ಮಧ್ಯ ಏಷಿಯಾದಿಂದ ಆಮದು ಮಾಡಿಕೊಂಡಿರ ಬೇಕು ಎಂದು ಹೇಳಿ; ಗದೆ ಹಿಡಿದು ನಿಂತ ರಾಜ, ಅಪ್ಸರೆ ಯರು, ಹಿಂಬದಿಯ ಪರದೆಯನ್ನು ಅಳವಡಿಸಲು ಕ್ಲಿಪ್ ನಂತಹ ಉಪಕರಣಗಳ ಬಗ್ಗೆ ವಿವರಿಸುತ್ತಾರೆ. ಹಾಗೂ ಡಾ. ಅ. ಸುಂದರ ಅವರು ಬಾದಾಮಿಯ ಇನ್ನೊಂದು ಬಂಡೆಯ ಹಿಂಬದಿಯಲ್ಲಿ ಕೆಲವು ಚಿತ್ರಗಳನ್ನು ಗುರುತಿಸಿದ್ದು ಅವು ಈ ಗುಹೆಯ ಚಿತ್ರಗಳ ಶೈಲಿಯಲ್ಲಿಯೇ ಇದ್ದು ಆದರೆ ಬಿಡಿಯಾಗಿರುವುದರಿಂದ ಈ ಚಿತ್ರಗಳನ್ನು ಬರೆಯುವ ಮೊದಲಿಗೆ ಕೈಕುದರಲು ಇಲ್ಲಿ ಬಿಡಿಸಿರಬೇಕೆಂದು ಊಹಿ ಸುತ್ತಾರೆ. ಅಜಂತೆಯ ಕಾಲದ ಅದಕ್ಕೆ ಸಮನಾದ ಇಲ್ಲಿಯ ಚಿತ್ರಗಳು ಬಹು ಜನರ ಗಮನ ಸೆಳೆದು ಚರ್ಚೆಯಾಗಿದ್ದು ಅಲ್ಲಿ ಉಳಿದಿರುವುದನ್ನು ರಕ್ಷಿಸಿದ್ದರೂ ಚಿತ್ರಗಳು ಗುರುತಿಸ ಲಾರದಷ್ಟು ಹಾಳಾಗಿವೆ.[೨೮]ಆದರೆ ಇದೇ ಚಿತ್ರಗಳ ವಿವರಣೆಯ ರೂಪದಲ್ಲಿ ಇವುಗಳ ಪ್ರತಿಕೃತಿ ಮಾಡಿದ ಕಲಾವಿದರಾದ ಎಂ.ವ್ಹಿ.ಮಿಣಜಗಿ ಮತ್ತು ಅಹವಾಸಿ, ಎಂ.ಎನ್. ಚಂದ್ರಶೇಖರ ರವರ ಕೆಲವು ಚಿತ್ರಗಳ ಆಧಾರದಿಂದ ಮಾತ್ರ ಸಾಧ್ಯವಾಗಿವೆ.

ಧಾರವಾಡದ ಇತಿಹಾಸ ಸಂಶೋಧನಾ ಸಂಸ್ಥೆಯವರಿ ಗಾಗಿ ಎಂ.ವ್ಹಿ. ಮಿಣಜಗಿ ಪ್ರತಿಕೃತಿ ಮಾಡಿಕೊಟ್ಟಿದ್ದಾರೆ. ೧೯೭೫ರಲ್ಲಿ ಲಲಿತಕಲಾ ಅಕಾಡೆಮಿ, ಅಹವಾಸಿ ತಂಡ ದವರು ರಚಿಸಿದ್ದಾರೆ. ಇಲ್ಲಿನ ಒಂದು ಚಿತ್ರದಲ್ಲಿ ದೊರೆಯೊಬ್ಬನ ಒಡ್ಡೋಲಗವಿದೆ. ಚಿತ್ರದ ಅರ್ಧ ಭಾಗದ ಮುಂಗಡೆಯಲ್ಲಿ ದೊರೆ ಕುಳಿತಿದ್ದಾನೆ. ಅವನ ಸಮ್ಮುಖದಲ್ಲಿ ಕುಳಿತ ಅರಸಿ ಯೊಬ್ಬಳು ಚಿತ್ರಿತವಾಗಿದ್ದಾಳೆ. ದೊರೆಯ ಮುಖ ಮೈಗಳು ಅಳಿಸಿಹೋಗಿವೆ ಮಡಿಸಿದ ಕಾಲುಗಳಷ್ಟೇ ಕಾಣಿಸುತ್ತವೆ. ಎದೆಯ ಮೇಲೆ ಯಜ್ಞೋಪವೀತದಂತೆ ಮುತ್ತಿನಸರ ಕಾಣಿಸುತ್ತದೆ. ದೊರೆಯ ಬೆನ್ನಕಡೆ ಎಂದರೆ ಚಿತ್ರದ ಎಡಭಾಗ ದಲ್ಲಿ ನರ್ತಕಿಯರು, ವಾದ್ಯಗಾರರು ಕಾಣಿಸುತ್ತಾರೆ. ಅರಸಿಯ ಬೆಂಗಡೆ ಮತ್ತು ಹಿಂಗಡೆಯಲ್ಲಿ ಕುಂಚ ಹಿಡಿದು ಸೇವೆ ಸಲ್ಲಿಸುವ ಪರಿಚಾರಕ, ಚಾರಕಿಯರಿದ್ದಾರೆ. ದೂರ ಎತ್ತರದಲ್ಲಿ ಪ್ರೇಕ್ಷಕ ವರ್ಗವಿದೆ. ಚಿತ್ರದ ಅಲ್ಲಲ್ಲಿ ಬಳಿದ ಬಣ್ಣಗಳು ಒಚ್ಚಿ ಹೋದ ದೆಸೆಯಿಂದ ಅದರ ರೇಖೆಗಳು ಚೆಲುವನ್ನು ಅನುಭವಿಸುವುದು ಕಷ್ಟವಾಗುತ್ತದೆ.

ಇಲ್ಲಿನ ಚಿತ್ರಗಳಲ್ಲಿ ತದ್ರೂಪಿ ಪ್ರಯತ್ನವಿದೆಯಾದರೂ ಮೈಬಣ್ಣವನ್ನು ಬರೆಯುವುದರಲ್ಲಿ, ಒಟ್ಟು ಚಿತ್ರಗಳ ವರ್ಣಕ್ಕೆ ಪುಷ್ಟಿಯನ್ನು ಒದಗಿಸುವುದರಲ್ಲಿ ವಾಸ್ತವಿಕ ಅನುಕರಣೆ ಇಲ್ಲ. ದೊರೆಯ ಹಿಂದಿನ ನರ್ತಕಿಯ ಮೈ ಬಣ್ಣ ನೀಲ ಛಾಯೆ



ಬಾದಾಮಿಯ ಪ್ರಾಚ್ಯ ಸಂಗ್ರಹಾಯಲದಲ್ಲಿನ ಶಿಲ್ಪದ ರೇಖಾಚಿತ್ರ



ದುರ್ಗಾ ದೇವಾಲಯದ 'ಶಿವ' ಐಹೊಳೆ ರೇಖಾಚಿತ್ರ



ಆರ್.ಎಂ. ಹಡಪದರ ರೇಖಾಚಿತ್ರ

ರಾಣಿ ಮತ್ತು ಚಾಮರ (ಚೌರಿ) ಬೀಸುವ ಸಖಿಯರುಗಳು, ಇಂದ್ರಸಭಾ : ೬ನೇ ಶತಮಾನ





ಅಜಂತಾದ ಕಲಾಕೃತಿ



ಕೀರ್ತಿವರ್ಮ ಮತ್ತು ಅವನ ರಾಣಿ : ೬ನೇ ಶತಮಾನ



ತಾಯಿ ಮತ್ತು ಮಗು;
ಆರ್.ಎಂ. ಹಡಪದರ
ತೈಲವರ್ಣ ಕಲಾಕೃತಿ.



(ಗಣಪನ ತಾಯಿ ಮತ್ತು ತಂದೆ)
ಶಿವ, ಪಾರ್ವತಿ ನಂದಿಯೊಂದಿಗೆ
ಆರ್.ಎಂ. ಹಡಪದರ ರೇಖಾಚಿತ್ರ



ದುರ್ಗೆ 'ದುರ್ಗಾಮಾತಾ'
ವಿಜಯ ಸಿಂಧೂರರ
ತೈಲವರ್ಣ ಕೃತಿ

ಲೇಡಿ ವ್ಯರ್ಥ ಟ್ರೇ :
ಅಜಂತ–ಕಲಾವಿದ
(ಕೃಪೆ : ಎಂ.ಎಸ್. ಚಂದ್ರಶೇಖರ)



ಯೋಧರು :
ಅರ್.ಎಂ. ಹಡಪದರವರ
ರೇಖೆಗಳ ಕಲಾಕೃತಿ



ರಾಣಿ ಮತ್ತು ಸಖಿಯರು
ಚಾಮರ ಬೀಸುತ್ತಿರುವವರು :
೬ನೇ ಶತಮಾನ



ಯಿದ್ದು, ಈ ಪುಟದಲ್ಲಿ ಉದಹರಿಸಿರುವ ಛಾಯಾಚಿತ್ರ ನರ್ತಕಿಯ ಬೆಂಗಡೆಯ ನೋಟವನ್ನು ಒದಗಿಸುತ್ತದೆ. ಚಿತ್ರಗಳ ವಿವಿಧ ಆಕೃತಿಗಳೊಳಗೆ ಮೇಳವೂ ಬಣ್ಣಗಳಲ್ಲಿ ಹೊಂದಿಕೆಯು ಕಾಣಿಸುವಂಥಾ ಕೃತಿಯಿದು. ಅದರಲ್ಲಿಯೂ ನರ್ತಕ, ನರ್ತಕಿಯರು ಹಿಮ್ಮೇಳದೊಡನೆ ನಿಂತಿರುವ ಗುಂಪು ತುಂಬಾ ಆಕರ್ಷಕವಾಗಿವೆ. ಚಿತ್ರಕಾರ ಅಹವಾಸಿಯವರು ಈ ಚಿತ್ರದ ಬಿಡಿಭಾಗಗಳನ್ನು ಬೇರೆ ಬೇರೆಯಾಗಿ ಆರಿಸಿ ಪ್ರತಿ ತೆಗೆದು ಅವುಗಳ ಒಳ್ಳೆಯ ಲಕ್ಷಣಗಳನ್ನು ಸ್ವಾರಸ್ಯವಾಗಿ ಉದಾಹರಿಸಿದ್ದಾರೆ.

ಇನ್ನೊಂದು ಇಂಥಹದೇ ಆಸ್ಥಾನದ ಚಿತ್ರವಿದೆ. ಅದರ ಮುಂಭಾಗದಲ್ಲಿ ದೊರೆ ಅವನ ಅರಸಿ, ಪರಿವಾರಗಳು ಕಾಣಿಸಿದರೆ ಬೆಂಗಡೆ ಎತ್ತರದಲ್ಲಿ ಇಂದ್ರನ ಒಡ್ಡೋಲಗ ಸಹಿತನಾಗಿ ದೊರೆಯನ್ನು ಹರಿಸುವಂತೆ ಚಿತ್ರ ವಸ್ತುವನ್ನು ಕಲ್ಪಿಸಿದ್ದಾರೆ. ಇದು ಚಾಲುಕ್ಯ ದೊರೆ ಕೀರ್ತಿವರ್ಮನನ್ನು ಉದ್ದೇಶಿಸಿ ಬರೆದಿರಬಹುದಾದ ಚಿತ್ರವೆಂದು ಕೆಲವರ ಊಹೆ (ಸಿ. ಶಿವರಾಮಮೂರ್ತಿ). ಅರಸು ಸಿಂಹಾಸನದಲ್ಲಿ ಕುಳಿತಿದ್ದಾನೆ. ತನ್ನ ಒಂದು ಕಾಲನ್ನು ಮಡಿಸಿ ಮಣೆಯೊಂದರ ಮೇಲಕ್ಕೆ ಇರಿಸಿದ್ದಾನೆ. ಅವನ ಮುಂಗಡೆಯಲ್ಲಿ ರಾಣಿ ಒಂದು ಕಾಲನ್ನು ಮಡಿಸಿ ಇನ್ನೊಂದನ್ನು ಮುಂದಕ್ಕೆ ಚಾಚಿ ಕುಳಿತಿದ್ದಾಳೆ. ಅವಳ ಆಕೃತಿಯ ರೇಖೆ ಬಣ್ಣಗಾರಿಕೆಯ ರೀತಿ ಸಿಲೋನಿನ ಸಿಗ್ರಿಯ ಗುಹೆಯಲ್ಲಿನ ಅಂಥದೇ ಒಬ್ಬಳ ರೂಪವನ್ನು ನಮ್ಮ ಸ್ಮರಣೆಗೆ ತರುವಂತಿದೆ. ಈ ಎರಡನೆಯ ಭಿತ್ತಿಚಿತ್ರವೂ ಹಲವಾರು ವ್ಯಕ್ತಿಗಳಿಂದ ಕೂಡಿದ ಜಟಿಲ ಸಮೂಹ.

ಇಲ್ಲಿನ ಇನ್ನೆರಡು ಮುಖ್ಯ ಚಿತ್ರಗಳೆಂಬುವು ಗಗನದಲ್ಲಿ ಹಾರುತ್ತಿರುವ ವಿದ್ಯಾಧರ ದಂಪತಿಗಳದ್ದು. ಅಂಥ ಒಂದು ಚಿತ್ರದಲ್ಲಿ ಒಬ್ಬರು ಇನ್ನೊಬ್ಬರ ಕೊರಳನ್ನು ಅಪ್ಪಿ ಹಿಡಿದಂತೆ ಚಿತ್ರಿತರಾಗಿದ್ದಾರೆ. ಇನ್ನೊಂದು ಚಿತ್ರದಲ್ಲಿ ವಿದ್ಯಾಧರ ವೀಣೆಯನ್ನು ಹಿಡಿದು ನುಡಿಸುತ್ತಿದ್ದಾನೆ. ಈ ದಂಪತಿಗಳಲ್ಲಿ ಗಂಡಸರನ್ನು ಪಾಟಲ ಬಣ್ಣದಿಂದಲೂ ಅವರ ಮಡದಿಯರ ಮೈಯನ್ನು ಹಸಿರು, ನೀಲ ವರ್ಣದಿಂದಲೂ ಬಳೆದಿದ್ದಾರೆ. ವಾಸ್ತವಿಕ ದೇಹಗಳ ಬಣ್ಣದ ಚಿತ್ರಣ ಅವರ ಉದ್ದೇಶ.

ಇಲ್ಲಿನ ಗಂಡಸರು ಹೆಂಗಸರು ಬಹುಮಟ್ಟಿಗೆ ಕಟಿಗಿಂತಲೂ ಮೇಲಕ್ಕೆ ಬರಿಮೈಯವರು; ಕಟಿಯಿಂದ ಕೆಳಕ್ಕೆ ಅರಿವೆ ಧರಿಸಿದವರು, ಹಲವು ಸ್ತ್ರೀಯರನ್ನು ಎದೆ ಬರಿದಾಗಿಸಿ ಚಿತ್ರ ರಚಿಸಿರುವಂತೆ ಗುಂಪಿನ ಚಿತ್ರಗಳೂ ಇವೆ; ವಿವಿಧ ದೇಹ ಭಂಗಿಗಳಲ್ಲಿ ಜನರನ್ನು ಕಾಣಿಸಿದ್ದಾರೆ. ಅಂಥಲೆಲ್ಲ ಜನರ ಮೈಬಣ್ಣ ಅರಿವೆಗಳ ಬಣ್ಣ ಅಥವಾ ಬಣ್ಣ ಬಣ್ಣಗಳು, ಹಿನ್ನೆಲೆಯ ಬಣ್ಣಗಳು, ಅವುಗಳೊಳಗಿನ ಮೇಳ ತುಂಬ ಸುಂದರವಾದದ್ದು. ಒಟ್ಟು ಚಿತ್ರ ತಳದ ಮೇಲೆ ವಿವಿಧ ಬಣ್ಣಗಳು ಹರವಿ ಬಿದ್ದು ಒಂದಕೊಂದು ಹೊಂದಿ ಕಾಣಿಸುವ ಮೇಳ ಇಲ್ಲಿನ ಕಲಾಕೃತಿಗಳ (ಶ್ರೇಷ್ಠ ಗುಣ ಎಂದು ಡಾ. ಶಿವರಾಮ ಕಾರಂತರು[೨೯] ಮತ್ತು ಸಿ. ಶಿವರಾಮಮೂರ್ತಿ[೩೦], ಎಂ.ಎಸ್. ನಾಗರಾಜರಾವ್[೩೧] ರವರ ಅಭಿಪ್ರಾಯವಾಗಿದೆ.

ಡಾ. ಚೂಡಾಮಣಿ ನಂದಗೋಪಾಲ ಅವರು ತಮ್ಮ ಅಧ್ಯಯನದಲ್ಲಿ ಚಿತ್ರಗಳ ಮುಖಾಂತರ ನೃತ್ಯದ ಭಂಗಿಗಳ ಮತ್ತು ನೃತ್ಯಗಾರ್ತಿಯರ ಕರಣಗಳ ಕುರಿತು ಮಾಹಿತಿ ಒದಗಿಸಿದ್ದಾರಾದರೂ ಚಿತ್ರಗಳಲ್ಲಿನ ಬಣ್ಣ, ರೇಖೆಗಳ ಕುರಿತಾದ ಅಂಶಗಳ ವಿವರಣೆ ಇಲ್ಲವೆನ್ನಬಹುದು.[೩೨]

**ಭಿತ್ತಿ ಚಿತ್ರಗಳಲ್ಲಿನ ರೇಖಾಲಾಲಿತ್ಯ :** ಲಾಲಿತ್ಯ : ಗಿಡ ಮರಗಳಿಗೆ ಬಳ್ಳಿಯು ಅಂಟಿಕೊಂಡಂತೆ ಬೆಳೆಯುತ್ತ ಗಿಡ ಅಥವಾ ಮರದ ಆಕಾರ ಟೊಂಗೆಗಳನ್ನು ಬಳಸಿ ಮುಂದೆ ಸಾಗುತ್ತ ಹೋಗಿ ಚಿಗುರಿನ ತನಕ ಮುಟ್ಟುತ್ತದೆ. ಆ ಬಳ್ಳಿಯು ಲೀಲಾಜಾಲವಾಗಿ ಹಬ್ಬುತ್ತದೆ. ಅದು ನೋಡುಗನ ಭಾವನೆಗಳಿಗೆ ಹರಿಯುವಿಕೆಯ ಚಲನಶಕ್ತಿ ಅಂತೆಯೇ ಈ 'ಲಾಲಿತ್ಯ' ಇಂತಹ ಅನುಭವವು ಕಲಾವಿದನ ರೇಖೆಗಳಲ್ಲಿ ಅಡಗಿದೆ. ನೀರಿನ ರಭಸ, ಸೆಳೆತ, ಹರಿದುಹೋಗುವ ತಿರುವು ಮತ್ತು ಅದರ ಒಳಹರಿವು ಸುರುಳಿ ಸುರುಳಿಯಾಗಿ ಸರಾಗವಾಗಿ ಸಾಗಿದಂತೆ ಇಲ್ಲಿನ ರೇಖೆಗಳು ಇವೆ. ಬಳ್ಳಿಯಂತೆ ನೀರಿನ ಸುರುಳಿಯಂತೆ ಭಾಸವಾಗುತ್ತವೆ.

ಅಜಂತಾದ ಚಿತ್ರಗಳಂತೆಯೇ ಅವು ತಮ್ಮ 'ಕುಂಚ' 'ವರ್ತಿಕ' 'ತೂಲಿಕ' ಚಿತ್ರ ರಚಿಸುವ ಸಾಧನ. ಇವುಗಳನ್ನು ನವಿಲು ಗರಿಯಿಂದ 'ಕೂರ್ಚಿಕೆ' 'ಚವರಿ' 'ಚಾಮರ' ಅಳಿಲಿನ (ಬಾಲ) ಕೂದಲು ಮತ್ತು ಮೇಕೆಯ (ಆಡಿನ) ಹೊಟ್ಟೆಯ ಭಾಗದ ಕೂದಲುಗಳಿಂದ ತಯಾರಿಸಿದ್ದಿದೆ. ಕುಂಚಗಳನ್ನು ಬಳಸಿ ತೆಳು ದಪ್ಪಗಳ ಅರಿವಿನಿಂದ ಗಾಢತೆ, ಸಭ್ಯತೆ, ಸ್ಪಷ್ಟವಾದ ರೇಖೆಗಳಿಂದ ಚಿತ್ರಿಸಿದ್ದಾರೆ. ಅಂಗರಚನೆಯಲ್ಲಿ ದೂರ ಸಮೀಪ, ಎಡಬಲದ ಕಲ್ಪನೆ ನೀಡಿದ್ದಾರೆ. ಈ ಕುಂಚದಿಂದ ಬಣ್ಣ ನೀಡುವ ಮೊದಲು ಕರಡು ಪ್ರತಿಯನ್ನು ರಚಿಸಿ (ಸೀಸ ಕ್ರೊಮೆಟ್)ದ್ದಾರೆ. ಖನಿಜಗಳಿಂದ, ಇದ್ದಿಲು, ಅಳಲೆಕಾಯಿ ಸುಟ್ಟ ನಂತರ ಹಾಗೆಯೇ ನಿಸರ್ಗದಲ್ಲಿ ದೊರೆತ ಗಿಡಗಳಿಂದ ಇದ್ದಿಲು ಮಾಡಿ ಬಳಕೆ ಮಾಡಿದ್ದಾರೆ.[೩೩]

**ವರ್ಣಗಳ ಬಳಕೆ :** ಇಲ್ಲಿ ಅನೇಕ ಖನಿಜ ಹಾಗೂ ಸಸ್ಯಗಳ ಜನ್ಯ ಬಣ್ಣಗಳಿಂದ 'ಗೊಂದು' ಬಂಧಕ ವಸ್ತುವಾಗಿ ಲೇಪಿಸಲಾಗಿದೆ. ಸುಣ್ಣ ಕೂಡಾ ಉತ್ತಮ ಬಂಧಕ ವಸ್ತುವಾಗಿರುವುದರಿಂದ ಭಿತ್ತಿ ರಚನೆಯಲ್ಲಿ ಅದರ ಬಳಕೆ ಕೂಡಾ ಕಂಡುಬರುತ್ತದೆ. ಹೀರು ಪದರು ಹಸಿ ಇರುವಾಗಲೇ

ನೀರಿನಲ್ಲಿ ಕಲಸಿದ ಬಣ್ಣವನ್ನು ಲೇಪಿಸುವ ತಂತ್ರವನ್ನು **'ಪ್ರೆಸ್ಕೊ'*** ಎಂದು ಕರೆಯಲಾಗಿದೆ. ಆದರೂ ಡಾ. ಶಿವರಾಮ ಕಾರಂತರು[೩೪] ಇದನ್ನು ಗಾರೆ ಚಿತ್ರವೆಂದೇ ಹೇಳಿದ್ದಾರೆ. ವಿದೇಶದ ಅನುಕರಣೆ ಸಲ್ಲದು; 'ಗಾರೆ' ಎಂಬುದೇ ಉತ್ತಮ ಪದ. ಮುಂದೆ ಅವು ಭಾರತೀಯ ವಿಧಾನದ ಭಿತ್ತಿಗಳೆಂದು ಪ್ರೆಸ್ಕೊ ತಂತ್ರಕ್ಕೆ ಸಮೀಪವಾಗಿರುವ **'ಟೆಂಪರಾ'*** ವಿಧಾನವನ್ನು ಅಳವಡಿಸಿ ಈ ಚಿತ್ರಗಳನ್ನು ತಯಾರಿಸಲಾಗಿದೆ. ಎಂದು ತಿಳಿಯಲಾಗಿದೆ. 'ಟೆಂಪರಾ' ಹೀರು ಪದರಿನ ಮೇಲೆ ಬಣ್ಣವನ್ನು ಪದರ ಮೇಲೆ ಮಾಡುತ್ತ ಲೇಪಿಸುವ ಪದ್ಧತಿ ಬಾದಾಮಿ ಭಿತ್ತಿ ಚಿತ್ರಗಳು ಪ್ರೆಸ್ಕೊ, ಟೆಂಪೆರಾಗಳ ಲಕ್ಷಣಗಳನ್ನೊಳಗೊಂಡ ಮಿಶ್ರ ಶೈಲಿಯ ವರ್ಣಚಿತ್ರಗಳೆನ್ನ ಬಹುದು ಎಂದು ಡಾ. ಶೀಲಾಕಾಂತ ಪತ್ತಾರ ಅವರು ಅಭಿಪ್ರಾಯಪಟ್ಟಿದ್ದಾರೆ.[೩೫]

ಇಲ್ಲಿನ ಚಿತ್ರಗಳಲ್ಲಿನ ಕಣ್ಣುಗಳು ತುಂಬಿದ ಭಾವ ಗಡಿಬಿಡಿಯಿಲ್ಲದ ನಿರಾತಂಕ ಸಹಜತೆ ಮೂಡಿವೆ. ನೀಳವಾದ ಮೂಗು, ತುಂಬಿದ ತುಟಿಗಳು ಆಯಾ ಭಂಗಿಗಳಿಗೆ ಸಂಬಂಧಿಸಿದಂತೆ ನೋಡುಗನ ರೀತಿಯಿಂದ ಲೀಲಾಜಾಲ ವಾಗಿ ರೇಖೆಗಳು ಚೆಲುವಾಗಿವೆ. ಎತ್ತರ ತೋರುವ ಕುತ್ತಿಗೆ ಶರೀರದ ಹಾವ ಭಾವಗಳಿಗೆ ವಿವಿಧ ಆಯಾಮ ಒದಗಿಸುವ ಏಕಾಗ್ರತೆ ನಿರ್ಮಿತವಾಗಿವೆ. ಕೈಗಳು ಸಹ ಬಳ್ಳಿಯಂತೆ ಚಿಗುರೆಲೆಗಳ ನಿಮಿರುವಿಕೆಯನ್ನು ಪಡೆದಿವೆ. ಬೆರಗಳುಗಳನ್ನು ಚಿತ್ರಿಸುವಾಗ ರೇಖೆಗಳು ನೇರವಾಗಿ ಬಂದು ಆಯಾ ಭಂಗಿಗಳ ಕರಣಗಳನ್ನು ಅವಲಂಬಿಸಿ ಮುಂದೆ ಉಗುರಿನ ಮುಂದೆ ಸುರುಳೆಯಾಗಿ ಅಂದವಾಗಿ ಮೂಡಿವೆ. ಪ್ರಕೃತಿಯಲ್ಲಿ ನಮ್ಮೊಡನೆ ಜೀವಿಸುವ ಎಲ್ಲ ಪ್ರಾಣಿ, ಪಕ್ಷಿ ಸಂಕುಲ, ಜಲಚರಗಳ ಆಕಾರಗಳನ್ನು ರೇಖೆಗಳಲ್ಲಿ ಒಡಮೂಡಿಸುವಲ್ಲಿ ಚೈತನ್ಯಶೀಲವಾಗಿವೆ. ಶತಮಾನಗಳಿಂದ ರಚಿತವಾಗಿರುವ ಮನುಷ್ಯನ ಚಿತ್ರಗಳು ಆಯಾ ಪ್ರಾದೇಶಿಕ ಪ್ರಜ್ಞೆಗಳೊಡನೆ ಚಿತ್ರಿತವಾದರೂ ಅವು ರೂಪ ಸೌಂದರ್ಯದಲ್ಲಿ ಮಾತ್ರ ಜಾಗತಿಕವಾಗಿ ಒಂದೇ ಆಗಿವೆ. ಚಿತ್ರಕಲಾವಿದ ತಮ್ಮ ತಮ್ಮ ಪ್ರಯತ್ನಗಳ ಮತ್ತು ಶ್ರಮಗಳಿಗೆ ಅನುಗುಣವಾಗಿ ಸಿದ್ಧಿ ಪಡೆದಿದ್ದಾರೆ. ಕೃತಿ ರಚನೆಯ ವಿಧಾನದಲ್ಲಿ ಅವರ ಕನಸುಗಳಿಗೆ ಆಧಾರವಿರುವ ಅನೇಕ ಶಾಸ್ತ್ರೀಯ ಹಾಗೂ ಪಾರಂಪರಿಕ ನಡುವಳಿಕೆಯನ್ನು ರೂಢಿಸಿಕೊಂಡು ಕಾಲ ಮತ್ತು ಪ್ರಜ್ಞೆಯನ್ನು ಮರೆದಿದ್ದಾರೆ. ಚಾಲುಕ್ಯ ಶೈಲಿಯ ಕಲಾಕೃತಿಗಳು (ಚಿತ್ರ ಶಿಲ್ಪಗಳು) ಯಾವುದೇ ನೋಡುಗನ (ರಸಿಕ) ಇಂದ್ರಿಯ ಗಳನ್ನು ಕೆರಳಿಸುವ ರೀತಿಯಲ್ಲಿ ಸಹಜ ನೈಜತೆ ಪಡೆದಿವೆ. ಉತ್ತರ ಭಾರತದ ಜನರ ಮುಖಭಾವಗಳು ಅಜಂತಾದಲ್ಲಿ ಸೃಜಿಸಿದ್ದರೆ, ಬಾದಾಮಿಯಲ್ಲಿ ದಕ್ಷಿಣದ ಪ್ರಭಾವವಿದೆ. ಕಾಂಚೀಪುರದ ಕೈಲಾಸನಾಥ ದೇವಾಲಯದ ಪಲ್ಲವರ ಚಿತ್ರಗಳಲ್ಲಿ ಮುಖಭಾವಗಳು ದಕ್ಷಿಣದವರನ್ನೇ ಹೋಲಿಕೆ ಪಡೆದು ಅಲ್ಲಿ ಗಂಭೀರತೆ, ರೌದ್ರತೆ, ರೇಖೆಗಳಲ್ಲಿ ಗಡಸುತನ ಕಂಡರೆ ಇಲ್ಲಿ ಅದಿಲ್ಲ.[೩೬] ಅತ್ಯಂತ ನಾಜೂಕಾದ ರೀತಿಯ ರೇಖೆಗಳು ಚಿತ್ರಿತಗೊಂಡಿವೆ.

**ಗುಹಾ ಚಿತ್ರಗಳಿಂದ ಪ್ರಭಾವಿತ ಕಲಾವಿದರು :** ಬಾದಾಮಿಯಲ್ಲಿಯೇ ಜನಿಸಿದ ನಾಡೋಜ ಆರ್.ಎಂ. ಹಡಪದ ಅವರು ಈ ಕಲಾಕೃತಿಗಳ ಕುರಿತು ಇಂದಿನ ಗರ್ಭ ನಿನ್ನೆಯ ಫಲ, ನಾಳೆಯ ಉಳಿವು ಸಮಕಾಲೀನ ವಿಚಾರಗಳು ಎಷ್ಟೇ ಪ್ರಗತಿ ಹೊಂದಿದರೂ ಅದು ಇಂದಿನ ಹಿಂದಿನ ಹೊಳಹುಗಳ ಮಿಶ್ರಣವೆ ಆಗಿದೆ[೩೭] ಎಂದು ಅಭಿಪ್ರಾಯ ಪಟ್ಟಿದ್ದಾರೆ.

೧೯೬೫ರ ಏಪ್ರಿಲ್ ಅಂದಿನ ಮೈಸೂರಿನ ಲಲಿತಕಲಾ ಅಕಾಡೆಮಿಯ ಕಲಾ ಸಂಚಿಕೆಯಲ್ಲಿ ಅಹವಾಸಿ ಮತ್ತು ಮಿಣಜಗಿಯವರ ಬಾದಾಮಿಯ ಚಿತ್ರಗಳ ನಕಲು ಪ್ರತಿಕೃತಿಯ ಛಾಯಾಚಿತ್ರಗಳು ಮುದ್ರಣಗೊಂಡಿವೆ.[೩೮]

ಎಂ.ಎಸ್. ಚಂದ್ರಶೇಖರವರು ೧೯೭೬ರಲ್ಲಿ ಅಜಂತಾದ ಚಿತ್ರಗಳ ರಚನೆಯ ಅನುಭವದಿಂದ ಅನೇಕ ಕೃತಿಗಳನ್ನು ನಕಲು ಮಾಡಿದ್ದಾರೆ. ರೇಖೆಗಳು 'ಹುಬ್ಬು' ಕಣ್ಣು ಅದರ ರೆಪ್ಪೆಗಳನ್ನು ರಚಿಸುವಾಗ ಕುಂಚದ ಸೆಳೆತದಿಂದ ಪ್ರಾರಂಭಿಸಿ ಹೋಗುತ್ತಾ ದಪ್ಪವನ್ನು ಚಿತ್ರಿಸಿ ಆ ನಂತರ ಮೇಲೆ ಕೆಳಗೆ ಜಾರುವಾಗ ತೆಳುವಾದ ಕುಡಿ ರೇಖೆಯಾಗಿ ಸ್ಪಷ್ಟಗೊಳ್ಳುವಂತೆ ರಚಿಸಿದ್ದಾರೆ. ಮುಂಗುರುಳ ಸುರುಳಿಯಾಗಿ ತುಂಬುಕೆನ್ನೆಗಳ ಮೇಲೆ ತಲೆಯಿಂದ ಜೋತು ಬಿದ್ದಂತಿದ್ದರೂ ತುಳುಕುವ ಚೆಲುವನ್ನು ನೀಡಿದ್ದಾರೆ. ಲಾಕ್ಷಣಿಕರ ಸೌಂದರ್ಯಾನುಭೂತಿ ಚಿತ್ರಗಳಲ್ಲಿ ಯಶಸ್ವಿಯಾಗಿ ಚಿತ್ರಿಸಿದ್ದಾರೆ. ನೀಳವಾದ ಮೂಗು ತುಂಬಿರುವ ತುಟಿಗಳು ಎತ್ತರವಾದ ಕುತ್ತಿಗೆ, ತೇಲುಗಣ್ಣಿನ ಮಾದಕತೆ ನೀಡುತ್ತವೆ. ಅಜಂತಾದ ಅನುಭವದಿಂದ ನಂತರ ಬಾದಾಮಿಯಲ್ಲಿನ ಚಿತ್ರಗಳನ್ನು ರಚಿಸಿದ್ದು ಅವರಿಗೆ ಸಂತಸ, ಸಾರ್ಥಕತೆ ಪಡೆದಿದ್ದೇನೆ ಎಂದು ಎಂ.ಎಸ್. ಚಂದ್ರಶೇಖರ್[೩೯] ಹೇಳಿ ಕೊಂಡಿದ್ದಾರೆ.

ವಿಜಯ ಸಿಂಧೂರ ಅವರು ಬಾದಾಮಿಯ ಮತ್ತು ಐಹೊಳೆ, ಪಟ್ಟದಕಲ್ಲಿನಲ್ಲಿರುವ ಅನೇಕ ಶಿಲ್ಪಗಳ ಪ್ರಭಾವ ದಿಂದ ಅವು ಅವರ ಕ್ಯಾನ್ವಾಸಿನಲ್ಲಿ ಸೃಜಿಸಿವೆ. ಅಲ್ಲಿ ಬಣ್ಣಗಳ ಚಲನಶಕ್ತಿಯೇ ಬಿಂಬಿಸಿ ಪೂರ್ಣತೆಗೆ ಸಾಕ್ಷಿಯಾಗಿವೆ.[೪೦]

ಅಜಂತಾ, ಚಾಲುಕ್ಯರ ಶೈಲಿಯಿಂದ ಪ್ರಭಾವ ಪಡೆದ ಭಾರತೀಯ ಕಲಾವಿದರಾದ ಅವನೀಂದ್ರನಾಥ ಟಾಗೋರ ಎಂ.ಆರ್. ಅಚರೇಕರ್, ಮುಜುಂದಾರ, ನಂದಲಾಲ್ ಬೋಸ, ಅಮೃತ ಶೇರಗಿಲ್, ಕೆ.ಕೆ. ಹೆಬ್ಬಾರ, ಆರ್.ಎಂ. ಹಡಪದ,

ಚಾವ್ಡಾ, ಚಂದ್ರನಾಥಾಚಾರ್ಯ, ಪ.ಸ. ಕುಮಾರ, ಕಮಲೇಶ, ಮಕಾಳಿ, ಸುಭಾಷ ಕಮ್ಮಾರ, ಜೆ.ಎಂ.ಎಸ್. ಮಣಿ, ಮನೋಹರ, ಎಂ.ಎಸ್. ಮೂರ್ತಿ, ಕೊಂಡಾಚಾರ್ಯ, ಪರಮೇಶ್ವರ ಆಚಾರ್ಯ, ನೀಲಕಂಠಾಚಾರ್ ಹಾಗೂ ಇನ್ನಿತರರು– ಅವರ ಕೆಲವೊಂದು ಚಿತ್ರಗಳು ಇಂಧು ನಮಗೆ ನೋಡಲು ದೊರೆಯುತ್ತವೆ. ಆದರೆ ಮಿಣಜಗಿ, ಅಹವಾಸಿ ಯವರ ಪ್ರತಿಕೃತಿಗಳಿಂದ ನಲವತ್ತು ವರ್ಷಗಳ ಹಿಂದಿನ ಚಿತ್ರಗಳ ಪರಿಸ್ಥಿತಿ ಉತ್ತಮ ಇದ್ದಿದ್ದರೆ ಅವು ಇಂದಿಗಿಲ್ಲ. ಅವರುಗಳ ಪ್ರತಿಕೃತಿಗಳೇ ನಮಗೆ ಆಧಾರವಾಗಿವೆ. ಇವೆಲ್ಲವೂ ಸಂಬಂಧಿಸಿದವರ ನಿರ್ಲಕ್ಷ್ಯದಿಂದಾಗಿ ಹಾಳಾಗಿವೆ.

ಚಾಲುಕ್ಯರ ಚಿತ್ರ, ಶಿಲ್ಪಗಳ ವಿಶೇಷ ಅಧ್ಯಯನ ಆಗಬೇಕಾಗಿರುವುದು ಇಂದಿನ ಅಗತ್ಯವೂ ಹೌದು. ಚಿತ್ರಕಲಾ ಶಿಕ್ಷಣ ಪದ್ಧತಿ ಕುರಿತ ಮಾತೆತ್ತಿದರೆ ಆಧುನಿಕತೆ ಸಮಕಾಲೀನ ಕಲೆಯ ಬಗ್ಗೆ ಮಾತನಾಡುವ ಕಲಾಶಾಲೆಗಳು ಭಾರತೀಯ ಆ ಪರಂಪರೆಯ ಅಧ್ಯಯನದ ನಿರ್ಲಕ್ಷ್ಯ, ಶ್ರಮರಹಿತವಾಗಿ ಬೇರುಗಳಿಲ್ಲದ (ಗಿಡ) ಸಸಿಯಂತೆ ಶಿಕ್ಷಣ ನೀಡುತ್ತಿವೆ. ನಮ್ಮ ನಾಡಿನ ಕೆಲವು ಶೈಲಿಗಳ ಪೈಕಿಯೇ ಅತೀ ಪ್ರಾಚೀನ ಎನಿಸುವ ಚಾಲುಕ್ಯರ ಅದ್ಭುತವಾದ ಶೈಲಿಯನ್ನು ಗಮನಿಸಿ ಚಿತ್ರಿಸಿದರೆ ನಾಳಿನ ಕಲಾವಿದರ ಜಾಗೃತಿ ಮತ್ತು ನಮ್ಮತನದ ಅಗತ್ಯತೆಯ ಅರಿವು ಬೇಕಾಗುತ್ತದೆ. ಕಲಾಶಿಕ್ಷಕರ ಪೂರ್ಣವಾದ ಅರಿವು ಪ್ರಸ್ತುತವಾಗಬೇಕು. ಶ್ರೇಷ್ಠ ರೇಖೆಗಳು ಮತ್ತು ಬಣ್ಣಗಳ ಮೂಲವೇ ಈ ಚಾಲುಕ್ಯರ ಗುಹಾಲಯದ ರಚನೆಯ ಚಿತ್ರಗಳು.

(ಕೃತಜ್ಞತೆಗಳು : ಈ ಲೇಖನ ಸಿದ್ಧಗೊಳ್ಳುವಲ್ಲಿ ನನಗೆ ಬೌದ್ಧಿಕ, ಮಾನಸಿಕ, ಸ್ಫೂರ್ತಿ ನೀಡಿದ, ವಿದ್ವಾಂಸರಾದ, ಡಾ. ಎಚ್.ಎಸ್. ಗೋಪಾಲರಾವ್, ಡಾ. ಚೂಡಾಮಣಿ ನಂದಗೋಪಾಲ್, ಡಾ. ಸೂರ್ಯನಾಥಕಾಮತ್, ಡಾ. ಕರುಣಾ ವಿಜಯೇಂದ್ರ, ಡಾ. ಪ್ರಮೀಳಾ ಲೋಚನ, ಜೆ.ಎಂ.ಎಸ್. ಮಣಿ, ಡಾ. ಆರ್. ಗಣೇಶ್ ಮತ್ತಿತರರು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Sivaramamurthy C., *Soures of History,* konark publication. New Delhi-Bombay University 1979, Page No. 219.

೨. ಡಾ. ನರಸಿಂಹನ್ ಅ.ಲ., **ಕರ್ನಾಟಕ ಭಿತ್ತಿಚಿತ್ರ ಪರಂಪರೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೯೮, ಪುಟ. ೧೬೫.

೨ಅ. ಅದೇ.

೨ಆ. ಅದೇ.

೩. ಡಾ. ಸುಂದರ. ಅ. **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ಪುಟ. ೨೭–೨೮.

೪. ಡಾ. ಕಾರಂತ ಶಿವರಾಮ, **ಕರ್ನಾಟಕದಲ್ಲಿ ಚಿತ್ರಕಲೆ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ. ೨೪.

೫. Dr. Nandagopal Choodamani, *Dance and music in the temple Architecture,* Agam Kala Prakashan, New Delhi-1990, Page. 112-113.

೬ Dr. Nagarajrao, *The Chalukyas of Badami*1978, The Mythic Society, Page-312.

೭. ಡಾ. ಪತ್ತಾರ ಶೀಲಾಕಾಂತ., **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೮. ಎಂ.ವ್ಹಿ. ಮಿಣಜಗಿ–ಧಾರವಾಡದ ಇತಿಹಾಸ ಸಂಶೋಧನಾ ಸಂಸ್ಥೆಯಲ್ಲಿ ಬಾದಾಮಿಯ ಚಿತ್ರಗಳ ಪ್ರತಿಕೃತಿ ಸಂಗ್ರಹ ಮಾಡಿದ್ದಾರೆ.

೯. ಅಹಿವಾಸಿ–೧೯೬೫ರಲ್ಲಿ ಮೈಸೂರು ಲಲಿತಕಲಾ ಅಕಾಡೆಮಿ ಮೇರಿಗೆ ನಕಲು ತಯಾರಿಸಿದ ಚಿತ್ರತಂಡದವರು.

೧೦. ಚಂದ್ರಶೇಖರ ಎಂ.ಎನ್., ಅಜಂತಾ ನಂತರ ಬಾದಾಮಿಯ ಚಿತ್ರಗಳ ಪ್ರತಿಕೃತಿ ಮಾಡಿದವರು.

೧೧. ಹಡಪದ ಆರ್.ಎಂ., ಹುಟ್ಟೂರಾದ ಬಾದಾಮಿಯ ಚಿತ್ರ, ಶಿಲ್ಪಿಗಳ ಮಧ್ಯೆ ಬಾಲ್ಯ ಕಳೆದು ಅಲ್ಲಿನ ಶಿಲ್ಪಿ ಚಿತ್ರಗಳಿಂದ ಸ್ಫೂರ್ತಿ ಪಡೆದವರು.

೧೨. ಹಡಪದ ಆರ್.ಎಂ., **ಸಮಕಾಲೀನ ಕಲೆ,** ಕಲಾ ವಿಶೇಷೋಪನ್ಯಾಸಗಳು ೨ ಮತ್ತು ೩–ಕರ್ನಾಟಕ ಲಲಿತಕಲಾ ಅಕಾಡೆಮಿ–೧೯೮೯.

೧೩. ಡಾ. ಸುಂದರ. ಅ., **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,** ಪುಟ. ೨೭.

೧೪. ಡಾ. ಕಾರಂತ ಶಿವರಾಮ., **ಕರ್ನಾಟಕದಲ್ಲಿ ಚಿತ್ರಕಲೆ,** ಪುಟ.

೧೫. ಡಾ. ಪತ್ತಾರ., ಶೀಲಾಕಾಂತ **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಪುಟ. ೨೦೦.

೧೬. ಡಾ. ಕಾಮತ ಸೂರ್ಯನಾಥ., **ಕರ್ನಾಟಕ ಸಂಕ್ಷಿಪ್ತ ಪರಿಚಯ,** ಜೂಪಿಟರ್ ಬುಕ್ಸ್, ಬೆಂಗಳೂರು, ೧೬೭೩, ಪುಟ ೬೨.

೧೭. ಡಾ. ಕಾರಂತ ಶಿವರಾಮ., **ಕರ್ನಾಟಕದಲ್ಲಿ ಚಿತ್ರಕಲೆ,** ಪುಟ. ೨೨.

೧೮. ಡಾ. ಪತ್ತಾರ ಶೀಲಾಕಾಂತ ಅವರೊಡನೆ ಚರ್ಚಿಸಿದ್ದು.

೧೯. ಚಂದ್ರಶೇಖರ ಎಂ.ಎಸ್. ಅವರೊಡನೆ ಚರ್ಚಿಸಿದ್ದು.

೨೦. ಡಾ. ಪತ್ತಾರ ಶೀಲಾಕಾಂತ ಅವರೊಡನೆ ಚರ್ಚಿಸಿದ್ದು.

೨೧. ಅದೇ, **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಪುಟ.

೨೨. ಡಾ. ನರಸಿಂಹನ್, ಅ.ಅ., ಅದೇ., ಪುಟ. ೨೮.

೨೩. ಡಾ. ಕಾರಂತ ಶಿವರಾಮ., ಅದೇ., ಪುಟ. ೨೩.

೨೪. ಡಾ. ನರಸಿಂಹನ್., ಅ.ಲ., ಅದೇ., ಪುಟ. ೧೬೬.

೨೫. ಅದೇ. ಪುಟ. ೧೯೭.

೨೬ Dr. Nagarajrao, *The Chalukyas of Badami,* Page-313.

೨೭. ಡಾ. ನರಸಿಂಹನ್, ಅ.ಲ., ಅದೇ., ಪುಟ. ೧೬೫.

೨೮. ಡಾ. ಕಾರಂತ ಶಿವರಾಮ., ಅದೇ., ಪುಟ. ೨೪.

೨೯. ಅದೇ, ಪುಟ. ೨೪.

೩೦. Shivaramamurthy C. *Sources of History,* Page. 219.

೩೧. Dr. Nagarajrao M.S. *The Chalukyas of Badami,* Page. 313.

೩೨. Dr. Nandagopal Choodamani, *op.cit.,* Page. 112-13.

೩೩. ಡಾ. ಪತ್ತಾರ ಶೀಲಾಕಾಂತ, ಅದೇ.,

* ಫ್ರೆಸ್ಕೋ ಗೋಡೆಯ ಮೇಲೆ ಸುಣ್ಣವನ್ನು ಲೇಪಿಸಿ ಸುಣ್ಣವು ಹಸಿ ಇರುವಾಗಲೇ ಚಿತ್ರವು ಪೂರ್ಣವಾಗಿ ಚಿತ್ರಿತವಾಗುವಂತೆ ಚಿತ್ರಿಸುವುದು ಫ್ರೆಸ್ಕೋ ಪದ್ಧತಿ ವೈಶಿಷ್ಟ್ಯವಾಗಿದೆ. ಸುಣ್ಣವು ಒಣಗಿದ ನಂತರ ಅದರೊಂದಿಗೆ ಚಿತ್ರವು ಗಟ್ಟಿಗೊಂಡು ಶಾಶ್ವತವಾಗಿ ಉಳಿಯುತ್ತದೆ.

(ಋಣ : ತಿಪ್ಪೇಸ್ವಾಮಿ ಪಿ.ಆರ್. **ಕಲಾಕೋಶ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ಪುಟ. ೨೪೪.)

೩೪. ಡಾ. ಕಾರಂತ ಶಿವರಾಮ., ಅದೇ., ಪುಟ. ೨೪.

* ಟೆಂಪರಾ–ಮೊಟ್ಟೆ ಅಥವಾ ಯಾವುದೇ ಬಗೆಯ ಅಂಟಿನೊಡನೆ ಕರಗುವ ಮತ್ತು ಕರಗದ ಬಣ್ಣಗಳನ್ನು ಬೆರೆಸಿ ತಯಾರಿಸುವ ವಿಶೇಷ ವರ್ಣಗಳ ಮಾಧ್ಯಮ.

ಟೆಂಪೆರಾದ ಹಲವು ವೈಶಿಷ್ಟ್ಯಗಳು : ೧) ಬೇರೆ ಬೇರೆ ಮಾಧ್ಯಮಗಳ ಅನುಕರಣೆ, ೨) ಪದರವಾಗಿ ಬಳಿಯುವಿಕೆ, ೩) ಹೊಳಪಿಲ್ಲದ ಮೇಲ್ಮೈ, ೪) ಬೇಗ ಒಣಗುವಿಕೆ, ೫) ಯಾವುದೇ ಆಧಾರದ ಮೇಲೆ ಬರೆಯಬಹುದಾದ ಸಾಮರ್ಥ್ಯ ಇತ್ಯಾದಿ ಕಾಲಕ್ರಮೇಣ ಮಾಸಿ ಹೋಗುವುದು ಇದರ ದುರ್ಗುಣಗಳಲ್ಲಿ ಒಂದು. ಈ ಮಾಸುವಿಕೆ ಸಹ ನಿರ್ದಿಷ್ಟವಿಲ್ಲ ಮತ್ತೆ ಮತ್ತೆ ಹಾಗೂ ಮೇಲಿಂದ ಮೇಲೆ ಲೇಪನ ಮಾಡಬೇಕಾಗುವ ಅವಶ್ಯಕತೆ ಇದಕ್ಕಿದೆ.

(ಋಣ : ತಿಪ್ಪೇಸ್ವಾಮಿ ಪಿ.ಆರ್. **ಕಲಾಕೋಶ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ಪುಟ. ೧೬೭.)

೩೫. ಡಾ. ಪತ್ತಾರ ಶೀಲಾಕಾಂತ., ಅದೇ., ಪುಟ. ೨೬೦.

೩೬. ಡಾ. ಲೋಚನ ಪ್ರಮೀಳಾರೊಂದಿಗೆ ಕಾಂಚಿಪುರದ ಕೈಲಾಸನಾಥ ದೇವಾಲಯದಲ್ಲಿ ಪಲ್ಲವ ಶೈಲಿಯ ಚಿತ್ರಗಳನ್ನು ನೋಡುತ್ತಾ ಅಲ್ಲಿಯೇ ಚರ್ಚಿಸಿದ್ದು, ಚಾಲುಕ್ಯ–ಪಲ್ಲವರ ವಿಶೇಷತೆಯನ್ನು ಕೈಲಾಸನಾಥ ದೇವಾಲಯದ ಆವರಣದ ಸುತ್ತಲೂ ಇರುವ ಮಂಟಪಗಳ ಒಳಗಿರುವ ಚಿತ್ರಗಳನ್ನು ವೀಕ್ಷಿಸಿದ ನಂತರ ಚರ್ಚಿಸಿದ್ದು.

೩೭. ನಾಡೋಜ ಹಡಪದ ಆರ್.ಎಂ. **ಸಮಕಾಲೀನ ಕಲೆ,** ಕಲಾ ವಿಶೇಷೋಪನ್ಯಾಸಗಳು–೨ ಮತ್ತು ೩, ಕರ್ನಾಟಕ ಲಲಿತಕಲಾ ಅಕಾಡೆಮಿ, ಪುಟ.

೩೮. ಡಾ. ಕಾರಂತ ಶಿವರಾಮ., ಅದೇ., ಪುಟ. ೩೫.

೩೯. ಚಂದ್ರಶೇಖರ ಎಂ.ಎಸ್. ಕಲಾವಿದರೊಡನೆ ಚರ್ಚಿಸಿದ್ದು.

೪೦. *Vijay Sindhur,* Vijay Publication, Jamakhandi-1999, (Paintings).

ನಿಂಗನಗೌಡ ದೇಸಾಯಿ*

# ಕೆಂಬಾವಿಯ ಅಪರೂಪದ ವೃಷಭನಾಥ ವಿಗ್ರಹ

ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಕೆಂಬಾವಿಯಲ್ಲಿ ದೊರೆತಿರುವ ಈ ಅಪರೂಪದ ವೃಷಭನಾಥ ವಿಗ್ರಹ ಕ್ರಿ.ಶ. ೯ನೇ ಶತಮಾನದ್ದು. ಕೆಂಬಾವಿಯ ಮಾದರಿ ಪ್ರಾಥಮಿಕ ಶಾಲೆಯ ಆವರಣದಲ್ಲಿರುವ ಈ ವಿಗ್ರಹ ಯಾರದು ಎಂಬ ಬಗ್ಗೆ ಗ್ರಾಮಸ್ಥರಿಗೆ ಗೊತ್ತಿರಲಿಲ್ಲ. ಕೆಲವರು ಮಹಾವೀರ ಎಂದು, ಮತ್ತೆ ಕೆಲವರು ಬುದ್ಧನೆಂದು, ತಮಗೆ ತೋಚಿದಂತೆ-ಕರೆಯುತ್ತಿದ್ದರು.

ನಾನು ವಿಗ್ರಹದ ಬಳಿಗೆ ಬಂದು ಇದನ್ನು ಪರಿಶೀಲಿಸಿದಾಗ ಇದು ಜೈನ ತೀರ್ಥಂಕರ ವಿಗ್ರಹವಂತೂ, ನಿಶ್ಚಿತವೆಂದು ಮನನವಾಯಿತು. ಆದರೆ ಯಾವ ವಿಗ್ರಹ ಎಂಬ ಬಗ್ಗೆ ಇತಿಹಾಸ ಕೆದಕಿ ವಿಗ್ರಹದ ಭಾವ, ಭಂಗಿ ಮತ್ತು ಮುಖಮುದ್ರೆಗಳನ್ನೆಲ್ಲಾ ಗಮನಿಸಿದಾಗ ಜೈನರ ಪ್ರಥಮ ತೀರ್ಥಂಕರ ವೃಷಭನಾಥ ವಿಗ್ರಹವೆಂದು ಖಚಿತವಾಯಿತು. ವೃಷಭನಾಥನೆಂದು ಖಚಿತ ಪಡಿಸಲು ವಿಗ್ರಹ ಕೆಳಗಿರುವ ವೃಷಭ ಲಾಂಛನವೇ ನನಗೆ ಬಹುಮುಖ್ಯ ಆಧಾರವಾಯಿತು. ಈ ವೃಷಭನಾಥನಿಗೆ ಆದಿನಾಥ ಎಂದೂ ಕೂಡಾ ಕರೆಯುತ್ತಾರೆ.

ಈ ವೃಷಭನಾಥ (ಆದಿನಾಥ) ವಿಗ್ರಹ ೩ ಅಡಿ ಎತ್ತರ, ೨ ಅಡಿಗೂ ಹೆಚ್ಚು ಅಗಲವಿದ್ದು ಪದ್ಮಾಸನ ಹಾಕಿ ಕುಳಿತಿರುವ ಶಾಂತಚಿತ್ತ ಮುಖ ಮುದ್ರೆಯೊಂದಿಗೆ ಧ್ಯಾನಭಂಗಿಯಲ್ಲಿದೆ. ವಿಗ್ರಹದ ತಲೆಗೂದಲು ಗುಂಗುರು ಗುಂಗುರು ಆಗಿದ್ದು, ಎರಡೂ ಕೈಗಳು ಒಂದರ ಮೇಲೆ ಒಂದು ಹಾಕಿ ಕುಳಿತಿರುವ ವಿಗ್ರಹದ ಮುಂಗೈಗಳು ಭಗ್ನಗೊಂಡಿವೆ. ಅಲ್ಲದೇ ವಿಗ್ರಹ ಸಂಪೂರ್ಣ ನಗ್ನ ಹಾಗೂ ನಿರಾಭರಣವಾಗಿದೆ. ಕಪ್ಪು ಕಲ್ಲಿನಲ್ಲಿ ಕೆತ್ತಿರುವ ವಿಗ್ರಹದ ಮೂಲ ಸ್ವರೂಪ ಅತ್ಯಂತ ಸುಂದರವಾಗಿದ್ದಿರಬಹುದೆಂದು ಇದನ್ನು ಸೂಕ್ಷ್ಮವಾಗಿ ಗಮನಿಸಿದರೆ ಅರಿವಾಗುತ್ತದೆ.

ಶಾಲಾ ಬಯಲಲ್ಲಿ ರಕ್ಷಣೆ ಇಲ್ಲದೆ ಇರುವುದರಿಂದ ಯಾರೋ ಅದರ ಮುಖ ಹಾಗೂ ನಾಸಿಕವನ್ನು ಸಂಪೂರ್ಣ



ವೃಷಭನಾಥ ವಿಗ್ರಹ

ಭಗ್ನಗೊಳಿಸಿದ್ದಾರೆ. ಈ ವಿಗ್ರಹ ಸುಮಾರು ವರ್ಷಗಳ ಹಿಂದೆಯೇ ಗ್ರಾಮದ ಕೋಟೆ, ಗೋಡೆಯೊಳಗಿನಿಂದ ಇಲ್ಲಿ ತಂದಿಡಲಾಗಿದೆ. ಇಲ್ಲಿ ತಂದಿಟ್ಟ ನಂತರ ಅನೇಕ ಬಾರಿ ಬೋರಲು ಬಿದ್ದಿದೆ. ಕಾರಣ ಗ್ರಾಮದಲ್ಲಿ ಮಾತೆಯರಿಗೆ ಪ್ರಸವ ವೇದನೆಯಾದಾಗ ಈ ವಿಗ್ರಹವನ್ನು ಬೋರಲಾಗಿ ಹಾಕಿದರೆ ಹೆರಿಗೆ ಸುಸೂತ್ರವಾಗಿ ಆಗುತ್ತದೆ ಎಂಬ ಮೂಢ ನಂಬಿಕೆಗೆ ಬಲಿಯಾದ ಈ ವಿಗ್ರಹ ಮೇಲಿಂದ ಮೇಲೆ ಬೋರಲು ಬಿದ್ದುದುಂಟು. ಮತ್ತೆ ಯಾರೋ ತಿಳುವಳಿಕೆಯುಳ್ಳವರು ಸರಿಯಾಗಿ ಕೂಡಿಸಿದರು. ಮತ್ತೆ ಅಜ್ಞಾನಿಗಳು ಬೋರಲು ಹಾಕಿ ಈ ವಿಗ್ರಹ ಕಿವಿ, ಮುಖ, ನಾಸಿಕ

* (ಪನಿ): ಪರಿಸನಹಳ್ಳಿ, ಸಿ.ಆರ್.ಪಿ. ಮಲ್ಲಾ(ಬಿ).

ಮುಂತಾದವುಗಳೂ ಹಾಳಾಗಿ ಹೋಗಿವೆ ಎಂದು ಸ್ಥಳೀಯರು ತಿಳಿಸುತ್ತಾರೆ.

ಈ ವೃಷಭನಾಥ ವಿಗ್ರಹದ ಕೆಳಗೆ ಆಸೀನ ವೃಷಭ (ಬಸವ) ಶಿಲ್ಪವಿದೆ. ವೃಷಭನಾಥ ತೀರ್ಥಂಕರನ ಲಾಂಛನವಾದ ಬಸವನ ಚಿತ್ರವುಳ್ಳ ಇಂತಹ ಶಿಲ್ಪ ಈ ಭಾಗದಲ್ಲಿ ಈಗಾಗಲೇ ಅಲ್ಲಲ್ಲಿ ದೊರೆತರೂ ಕೂಡಾ ಇಷ್ಟೊಂದು ಸ್ಪಷ್ಟವಾದ ಲಾಂಛನವುಳ್ಳ ವಿಗ್ರಹ ದೊರೆತಿರುವುದು ಈ ಭಾಗದಲ್ಲಿನ ಅಪರೂಪ ಶಿಲ್ಪವಾಗಿದೆ. ಇಂಥಹ ಉತ್ತಮ ವಿಗ್ರಹವನ್ನು ಹಲವಾರು ವರ್ಷಗಳಿಂದ ಸಂರಕ್ಷಿಸಿಕೊಂಡು ಬಂದ ಗ್ರಾಮಸ್ಥರು, ಶಾಲಾ ಶಿಕ್ಷಕರು ಇತಿಹಾಸಕ್ಕೆ ಅಪಾರ ಕೊಡುಗೆ ನೀಡಿದ್ದಾರೆ. ಆದರೆ ಸಾರ್ವಜನಿಕರ ಮೂಢ ನಂಬಿಕೆಗೆ ಈ ಐತಿಹಾಸಿಕ ಮಹತ್ವದ ವಿಗ್ರಹ ಬಲಿಯಾಗದಂತೆ ಶಾಶ್ವತ ರಕ್ಷಣೆ ವ್ಯವಸ್ಥೆ ಮಾಡುವದು ಅವಶ್ಯವಿದೆ.

ಈ ವಿಗ್ರಹವನ್ನು ಶೈಲಿಯ ದೃಷ್ಟಿಯಿಂದ ನೋಡಲಾಗಿ ಕ್ರಿ.ಶ. ೯ನೇ ಶತಮಾನದ ರಾಷ್ಟ್ರಕೂಟರ ಕಾಲದಲ್ಲಿ ಕೆತ್ತಲಾಗಿದೆ ಎಂದು ಹೇಳಬಹುದು. ಅಲ್ಲದೇ ಸ್ಪಷ್ಟವಾದ ಲಾಂಛನ ಕೆತ್ತಿದ್ದನ್ನು ನೋಡಿದರೆ ಈ ವಿಗ್ರಹ ಉತ್ತಮ ಶಿಲ್ಪಿಯಿಂದ ಕೆತ್ತಲಾಗಿದೆ ಎಂದು ಹೇಳಬಹುದು.

**ಕೆಂಬಾವಿಯ ಖ್ಯಾತಿ :** ಪ್ರಾಚೀನ ಶಾಸನಗಳಲ್ಲಿ ಕೆಂಭಾವಿಯೆಂದೇ ಉಲ್ಲೇಖಿತಗೊಂಡಿರುವ ಕೆಂಭಾವಿ ಗ್ರಾಮ ಹಿಂದೆ ಹನ್ನೊಂದು ಹಳ್ಳಿಗಳ ನಂತರ ೨೪ ಹಳ್ಳಿಗಳ ಆಡಳಿತ ಕೇಂದ್ರವಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಬಸವ ಪೂರ್ವ ಯುಗದ ಶರಣ ಭೋಗಣ್ಣನ ಊರು, ಇದೇ ಆಗಿದ್ದುದರಿಂದ ಕೆಂಭಾವಿಗೆ ಮತ್ತಷ್ಟು ಮಹತ್ವ ದೊರೆತಿದೆ. ಈ ಗ್ರಾಮದಲ್ಲಿ ರೇವಣಸಿದ್ದೇಶ್ವರ, ಭೋಗೇಶ್ವರ, ಬಸವಣ್ಣ ಎಂಬ ಪ್ರಾಚೀನ ದೇವಾಲಯಗಳಿವೆ. ಅಲ್ಲದೇ ಆದಿಲ್-ಶಾಹಿ ಕಾಲದ ಮುಸ್ಲಿಂ ಸ್ಮಾರಕಗಳೂ (ಗುಮ್ಮಟಗಳು) ಇಲ್ಲಿವೆ.

ಕ್ರಿ.ಶ. ೧೧ನೇ ಶತಮಾನದಲ್ಲಿ ಕೆಂಭಾವಿ, ಮಹತ್ವದ ಗ್ರಾಮವಾಗಿತ್ತೆಂದು ಶಾಸನಗಳ ಆಧಾರದ ಮೇಲೆ ತಿಳಿಯಬಹುದು. ಇಂತಹ ಐತಿಹಾಸಿಕ ವಿಗ್ರಹ ಹಾಗೂ ಸುತ್ತ ಮುತ್ತಲಿನ ಗ್ರಾಮದ ಶಿಲ್ಪಗಳನ್ನು ಸಂರಕ್ಷಿಸಲು ಒಂದು ವಸ್ತು ಸಂಗ್ರಹಾಲಯದ ಅವಶ್ಯಕತೆಯಿದೆ. ಸಂಬಂಧಪಟ್ಟವರು ಗಮನಹರಿಸಬೇಕು.



**ಕರ್ನಾಟ ದೇಶ**

ಜಿನಧರ್ಮಾ ವಾಸಮಾದತ್ತಮಳ ವಿನಯದಾಗಾರಮಾದತ್ತು ಪದ್ಮಾ
ಸನನಿರ್ಪಾಸದ್ಮ ಮಾದತ್ತ ತಿವಿಶದ ಯಶೋಧಾಮ ಮಾದತ್ತು ವಿದ್ಯಾ
ಧನಜನ್ಮಸ್ಥಾನಮಾದತ್ತ ಸಮತರಳ ಗಂಭೀರ ಸದ್ಗೇಹ ಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರು ಕರ್ನಾಟ ದೇಶಂ

– **ಶಾಸನಪದ್ಯ ಮಂಜರಿ :** (ಸೊರಬ ೨೬೧)

ಕೇಶವ ಉಮರ್ಜಿ*

# ಹುನ್ನೂರಿನ ವೀರಭದ್ರ ಶಿಲ್ಪ

ಆಂಧ್ರ ಪ್ರದೇಶದ ಕಡಪಾ ಜಿಲ್ಲೆ ಮತ್ತು ಹೊಂದಿಕೊಂಡ ಕರ್ನಾಟಕದ ಕೆಲವು ಜಿಲ್ಲೆಗಳ ಅನೇಕ ಜನರು ವೀರಭದ್ರ ದೇವರ ಆರಾಧಕರಾಗಿದ್ದಾರೆ. ಇವರಲ್ಲಿ ಬಹಳಷ್ಟು ಜನರು ತಮ್ಮ ಕುಲದೈವ ಅಥವಾ ಮನೆ ದೇವರಾಗಿ ವಂಶ ಪಾರಂಪರ್ಯ ದಿಂದ ಪೂಜಿಸಿಕೊಂಡು ಬಂದಿದ್ದಾರೆ. ಈ ಭಾಗದಲ್ಲಿ ಅಲ್ಲಲ್ಲಿ ವೀರಭದ್ರ ಶಿಲ್ಪಗಳು ಕಂಡು ಬಂದಿವೆ. ಅಂತಹುದು ಇತ್ತೀಚೆಗೆ ಹುನ್ನೂರಿನಲ್ಲಿ ದೊರೆತ ವೀರಭದ್ರ ಮೂರ್ತಿಯೂ ಒಂದು.

ಇತ್ತೀಚೆಗೆ ಜಮಖಂಡಿ ತಾಲೂಕಿನ ಹುನ್ನೂರು ಗ್ರಾಮ ದಲ್ಲಿ ಶಿವಲಿಂಗಪ್ಪಗಣಿ ಎಂಬವರು ತಮ್ಮ ಮನೆ ಕಟ್ಟುವ ಸಲುವಾಗಿ ಹಳೆಯ ಮನೆಯನ್ನು ಕೆಡವಿದಾಗ ಗೋಡೆಯಲ್ಲಿ ಸುಸ್ಥಿತಿಯಲ್ಲಿದ್ದ ವೀರಭದ್ರ ದೇವರ ಶಿಲ್ಪವು ದೊರೆಯಿತು. ಅವರು ನನ್ನನ್ನು ಕರೆದು ತೋರಿಸಿದರು.

ಅದೊಂದು ಏಕಶಿಲಾ ವಿಗ್ರಹ. ನೋಡಿದೊಡನೆ ವೀರಭದ್ರನ ವಿಗ್ರಹ ಆಗಿರಬಹುದು ಎಂದು ಅಂದಾಜಿಸಿದೆ. ಕಪ್ಪು ಶಿಲೆಯಲ್ಲಿ ನುಣುಪಾಗಿ ಕೆತ್ತಲಾದ ಮೂರ್ತಿಯು ಬಲಗೈಯಲ್ಲಿ ಖಡ್ಗವನ್ನು ಎತ್ತಿ ಹಿಡಿದಿರುವದು ಸ್ಪಷ್ಟವಾಗಿದೆ. ಎಡಗೈಯಲ್ಲಿ ಢಾಲು ಇದೆ. ಕೊರಳಲ್ಲಿ ಕಂಠಾಭರಣಗಳಿವೆ. ನಡುವಿನಲ್ಲಿ ವಸ್ತ್ರಧಾರಣೆ ಮಾಡಿದ್ದು ಬಿಟ್ಟರೆ ಉಳಿದಂತೆ ದೇಹ ಅರೆನಗ್ನವಾಗಿದೆ. ತಲೆಯ ಕೇಶರಾಶಿ ಹೆಗಲ ಮೇಲೆ ಎರಡೂ ಬದಿಗೆ ಇಳಿಬಿದ್ದಿವೆ. ಸುತ್ತಲೂ ಪ್ರಭಾವಳಿ ಇದ್ದು ಮುಖದಲ್ಲಿ ಗಂಭೀರ ಮುದ್ರೆ ಇದೆ. ಮೂರ್ತಿ ನೋಡಲು ಆಕರ್ಷಕ ವಾಗಿದೆ. ಕೆಲವರು ಇದನ್ನು ಸ್ತ್ರೀ ದೇವತೆ ಎಂತಲೂ **ರಾಚವ್ವತಾಯಿ** ಎಂತಲೂ ಕರೆಯ ತೊಡಗಿದ್ದಾರೆ. (ಅದಕ್ಕೆ ಆಧಾರ ವಾಗಿ ಅವರು ಹೇಳುವ ಕಥೆಯನ್ನು ಕೊನೆಗೆ ಕೊಡಲಾಗಿದೆ.)

ಹುನ್ನೂರು ಮತ್ತು ಸುತ್ತಮುತ್ತಲ ಗ್ರಾಮಗಳಲ್ಲಿ ವೀರಭದ್ರ ದೇವರ ಒಂದೂ ದೇವಾಲಯಗಳಿಲ್ಲ. ಶಿವನಿಗೂ ರುದ್ರನಿಗೂ ಇರುವ ಸಂಬಂಧ ವಿಶೇಷವಾದುದು. ವೈದಿಕ ರುದ್ರ ಮರುದ್ಗಣ ಗಳಿಗೆ ಗಣಪತಿಯೇ ಒಡೆಯನಾಗಿದ್ದಾನೆ–ಎಂದು ಗಣೇಶ



ಗಾಯತ್ರಿಯೂ, ಶಿವನ ಪಂಚಮುಖಗಳಲ್ಲಿ ರುದ್ರನೂ ಒಂದೆಂದು ರುದ್ರಗಾಯತ್ರಿಯೂ ಹೇಳುತ್ತದೆ. ಹೀಗೆ ರುದ್ರ–ಗಣಪತಿ ಮತ್ತು ಶಿವನ ತಾದಾತ್ಮ್ಯಕ್ಕೆ ಸಹಕಾರಿಯಾಗಿ ವೇದ ಮಂತ್ರಗಳು ಸಿಗುತ್ತವೆ. ಅದರಂತೆ ವೈದಿಕ ಸಾಹಿತ್ಯದಲ್ಲಿ ಹನ್ನೊಂದು ಜನ ರುದ್ರರು ದೊರೆಯುತ್ತಾರೆ. ಇವರಿಗೆಲ್ಲ ಗುಡಿಯಾಗಲೀ, ಗೂಡಾಗಲೀ, ಅಥವಾ ಆಕಾರ ಹೊಂದಿದ ಮೂರ್ತಿಯಾಗಲೀ, ಇರುವದಿಲ್ಲ. ಇವರಿಗೆಲ್ಲ ಕಟ್ಟಿಗೆಗಳನ್ನೂ ಕಲ್ಲುಗಳನ್ನೂ, ಅಥವಾ ಕಟ್ಟಿಗೆಯ ತುಂಡುಗಳನ್ನೂ

* ಅಗಸ್ತ್ಯಕುಟೀರ, ಹುನ್ನೂರು – ೫೮೭ ೧೧೯. ಬಾಗಲಕೋಟೆ ಜಿಲ್ಲೆ.

ಕಂಡರಿಸಿದ ಊರವರು ಕಾಲಕಾಲಕ್ಕೆ ಅವರನ್ನು ನೆನೆಸಿಕೊಂಡು ಗೌರವ ಸಲ್ಲಿಸುವ, ಪೂಜೆಯ ಹೆಸರಿನಲ್ಲಿ ಮಾಂಸ ಭಕ್ಷಣ, ಸುರಾಪಾನ, ಮೋಜು-ಕುಣಿತ ಇತ್ಯಾದಿ ಮೂಢ ಭಕ್ತಿಯು ಮೆರೆಯುವದನ್ನು ಈ ಭಾಗದ ಹಳ್ಳಿಗಳಲ್ಲಿ ತಾಂಡಾಗಳಲ್ಲಿ ನಾವು ಕಾಣುತ್ತೇವೆ. ಕಾಡು ಜನರು ರುದ್ರನಿಗೆ ಬೆಕ್ಕುಗಳನ್ನು ಬಲಿಕೊಡುತ್ತಿದ್ದರು ಎಂಬುದು ತಿಳಿದು ಬರುತ್ತದೆ. ಅವನಿಗೆ ಮಾರ್ಜಾರ ರುದ್ರ ಎಂಬ ಹೆಸರು. ಉಲ್ಲೇಖ: ***'ಓಂ ನಮೋ ಭಗವತೇ ಮಾರ್ಜಾರ ರುದ್ರಾಯ ದುಷ್ಟ ಸತ್ವ ವಿನಾಶಾಯ ನಖ ದಂಷ್ಟ್ರಾಯುಧಾಯ ಹುಂ ಫಟ್ ಸ್ವಾಹಾ'*** ಎಂಬ ಮಂತ್ರ. ರುದ್ರನಿಗೆ ಪಶುಗಳ ಒಡೆಯನೆಂದು ಪ್ರಸ್ತಾಪ ಅಥರ್ವವೇದದಲ್ಲಿ ಬರುತ್ತದೆ.

ಇನ್ನೊಂದೆಡೆ ಪ್ರಕೃತಿಯ ವಿನಾಶಕ ಭಯಾನಕ ವ್ಯಾಪಾರಗಳ ಮೂರ್ತರೂಪ ರುದ್ರ ಎನ್ನುವ ಕಲ್ಪನೆ ಕಾಣುತ್ತದೆ. ಭೋರೆಂದು ಬೀಸುವ ಬಿರುಗಾಳಿ, ಧಗಧಗನೆ ಉರಿಯುವ ಬೆಂಕಿ, ಕಣ್ಣು ಕೋರೈಸುವ ಮಿಂಚು, ಎದೆ ನಡುಗಿಸುವ ಗುಡುಗು-ಸಿಡಿಲು, ಹುಚ್ಚೆದ್ದು ಹರಿಯುವ ಪ್ರವಾಹ, ಬಂದಲ್ಲಿ ಬರಗಾಲವನ್ನು ತರುವ ಬೇನೆ ಇವೆಲ್ಲವೂ ರುದ್ರನ ಪ್ರತಾಪವೆಂದು ಯಜುರ್ವೇದದ ಶತರುದ್ರೀಯ ಸಂಹಿತೆಯಲ್ಲಿ ಬರುತ್ತದೆ. ರುದ್ರನಿಗೆ ನರಬಲಿ ಕೊಡುತ್ತಿದ್ದ ಪ್ರಸ್ತಾಪ ಮಹಾಭಾರತದ ಜರಾಸಂಧ ಪ್ರಕರಣದಲ್ಲಿ ಕಾಣುತ್ತೇವೆ.

ಕಾಶ್ಯಪ ಸಂಹಿತೆಯ ಪ್ರತಿಮಾ ಲಕ್ಷಣದಲ್ಲಿ ಶಿವಲೀಲಾ ಮೂರ್ತಿಗಳಲ್ಲಿ 'ವೀರಭದ್ರ ಮೂರ್ತಿ'ಯೂ ಒಂದೆಂದೂ ಅದರ ಲಕ್ಷಣಗಳನ್ನು ವಿವರಿಸಿದ್ದಾರೆ.

ವೀರಭದ್ರನ ಅವತಾರ ಕುರಿತು ಹಿನ್ನೆಲೆ ಕಥೆ ಹೀಗಿದೆ: ದಕ್ಷ ಪ್ರಜಾಪತಿಯ ಮಗಳು ದಾಕ್ಷಾಯಣಿ. ದಾಕ್ಷಾಯಣಿಯು ಶಿವನನ್ನು ಕುರಿತು ತಪಸ್ಸು ಮಾಡಿದಾಗ ಒಲಿದ ಶಿವ ಅವಳನ್ನು ವಿವಾಹವಾಗುತ್ತಾನೆ. ಅಸಹನೆಗೊಂಡ ದಕ್ಷನು ಯಜ್ಞ ಮಾಡಲುಪಕ್ರಮಿಸುತ್ತಾನೆ. ಪ್ರಜಾಪತಿಯ ಯಜ್ಞವೆಂದರೆ ಕೇಳಬೇಕೆ? ಎಲ್ಲ ರಾಜಾಧಿರಾಜರೂ ದೇವಾಧಿದೇವತೆಗಳೂ ಆಗಮಿಸುತ್ತಾರೆ. ಎಲ್ಲರಿಗೂ ಆಮಂತ್ರಣ ಕಳಿಸಿದ ದಕ್ಷ ತನ್ನ ಮಗಳು ಮತ್ತು ಅಳಿಯನಿಗೆ ಮಾತ್ರ ಕರೆ ಕಳಿಸುವದಿಲ್ಲ. ಅಂದರೆ ದಾಕ್ಷಾಯಣಿ ಮತ್ತು ಶಿವನನ್ನು ಬಿಟ್ಟು ಉಳಿದ ಎಲ್ಲರನ್ನೂ ಯಜ್ಞಕ್ಕೆ ಕರೆಯುತ್ತಾನೆ. ಇದನ್ನು ತಿಳಿದರೂ ಶಿವ ಸುಮ್ಮನಿರುತ್ತಾನೆ. ಆದರೆ ತಂದೆಯ ಯಜ್ಞದ ಸಮಾಚಾರ ಬೇರೆಯವರಿಂದ ತಿಳಿದ ದಾಕ್ಷಾಯಣಿ ಪತಿಯ ವಿರೋಧದ ನಡುವೆಯೂ ಯಜ್ಞಕ್ಕೆ ಆಗಮಿಸುತ್ತಾಳೆ. ಯಜ್ಞಮಂಟಪಕ್ಕೆ ಬಂದ ಮಗಳನ್ನು ತಂದೆ ಕಣ್ಣೆತ್ತಿ ನೋಡುವದೂ ಇಲ್ಲ. ಅಷ್ಟೇ ಅಲ್ಲ ಮಗಳ ಎದುರೇ ಶಿವನಿಗೆ ಅವಮಾನಿಸುತ್ತಾನೆ. ಪತಿನಿಂದೆ ತಾಳದೇ ಕೋಪಗೊಂಡ ದಾಕ್ಷಾಯಣಿಯು ಯಜ್ಞಕುಂಡದಲ್ಲಿ ಬಿದ್ದು ಪ್ರಾಣಾರ್ಪಣೆಗೈಯುತ್ತಾಳೆ. ಇದನ್ನು ತಿಳಿದ ಶಿವ ಸಿಟ್ಟಿಗೆದ್ದು ತನ್ನ ಜಟೆಗಳನ್ನು ನೆಲಕ್ಕೆ ಅಪ್ಪಳಿಸಲು ವೀರಭದ್ರನು ಹುಟ್ಟಿಕೊಳ್ಳುತ್ತಾನೆ. ಶಿವನ ಆಜ್ಞೆಯಂತೆ ವೀರಭದ್ರನು ದಕ್ಷನ ತಲೆಯನ್ನು ಕಡಿದು, ಅವನು ಮಾಡುತ್ತಿದ್ದ ಯಜ್ಞವನ್ನು ಧ್ವಂಸಗೊಳಿಸುತ್ತಾನೆ. ಇದು ವೀರಭದ್ರನ ಅವತಾರಕ್ಕೆ ಸಂಬಂಧಪಟ್ಟ ಪೌರಾಣಿಕ ಕಥಾನಕ.

ವೀರಭದ್ರನನ್ನು ರುದ್ರಪುತ್ರನೆಂದೂ, ರುದ್ರಕೋಪ ಸಂಭವನೆಂದೂ, ರುದ್ರಗಣಗಳಲ್ಲಿ ಸೇರಿದವನೆಂದೂ, ವ್ಯವಹರಿಸುವುದಿದೆ. ಶಿವನ ಲೀಲಾವತಾರಗಳಲ್ಲಿ ಒಂದು ಎಂದೂ ಎಣಿಕೆ ಇದೆ. ಅವನ ಮೂರ್ತಿ ಲಕ್ಷಣದಲ್ಲಿ ಉಗ್ರ, ಅತಿಕ್ರೂರ, ಸರ್ವದುಷ್ಟ ನಿಬರ್ಹಣ, ಕರಾಳಾಟ್ಟಹಾಸ, ಗದಾ ಮುಷ್ಟಿಹಸ್ತ, ಭುಜಂಗಗಣ ಭೂಷಿತ, ಭಯದ, ಪಾಲ ನೇತ್ರಾನನ, ದಿಗಂಬರ, ಹೀಗೆ ಮೊದಲಾದ ವಿವರಗಳಿವೆ. ಹೀಗೆ ವೀರಭದ್ರನ ಮೂರ್ತಿಗಳನ್ನು ಕುರಿತಾಗಿ ಸ್ವಾರಸ್ಯಕರವಾದ ಮಾಹಿತಿಗಳು ಲಭ್ಯವಾಗುತ್ತವೆ.

**ರಾಚವ್ವಳ ಕಥೆ :** ಜಮಖಂಡಿ ಸಂಸ್ಥಾನಿಕರ ಕಾಲದಲ್ಲಿ ಗೌಂಡಿ ಕೆಲಸ ಮಾಡುತ್ತಿದ್ದ ಕಲ್ಹಳ್ಳಿ ಮಾವಳಪ್ಪ ಎಂಬಾತನು ಪ್ರತಿವರ್ಷ ಶ್ರೀಶೈಲಕ್ಕೆ ಹೋಗುತ್ತಿದ್ದನು. ಕಾಲ್ನಡಿಗೆಯಲ್ಲಿ ಹೋಗುತ್ತಿದ್ದ ಆತ ರಾತ್ರಿಯಾಯಿತೆಂದರೆ ಕಂಡಲ್ಲಿ ಮಲಗುವದು ಬೆಳಿಗ್ಗೆ ಎದ್ದು ಹೊರಡುವದು ಆತನ ಅಭ್ಯಾಸ. ಈಗಿನಂತೆ ನಿಶ್ಚಿತ ಸ್ಥಳದಲ್ಲಿ ತಂಗುವದು, ಅಲ್ಲಿಯವರು ಊಟ, ವಸತಿ ವ್ಯವಸ್ಥೆ ಮಾಡುವದು ಆಗಿನ ಕಾಲದಲ್ಲಿ ಇರಲಿಲ್ಲ. ಹೀಗಾಗಿ ಒಮ್ಮೆ ರಾತ್ರಿ ಮಲಗಿದ್ದು ರಾಚವ್ವ ಎಂಬವಳ ಸಮಾಧಿಯ ಮೇಲೆ. ರಾಚವ್ವಳು ಧರ್ಮನಿಷ್ಠಪವಿತ್ರ ಹೆಣ್ಣುಮಗಳು. ಅವಳ ಸಮಾಧಿ ಎಂದರೆ ಅದೂ ಪವಿತ್ರ ಗದ್ದುಗೆಯೇ. ಬೆಳಿಗ್ಗೆ ಎದ್ದು ಹೊರಟಾಗ ಸಮಾಧಿಯಲ್ಲಿದ್ದ ರಾಚವ್ವ ಆತನ ಶರೀರ ಪ್ರವೇಶ ಮಾಡುತ್ತಾಳೆ. ಯಾಕೆಂದರೆ ಮಾವಳಪ್ಪನೂ ಪ್ರಾಮಾಣಿಕ, ಶ್ರೀಶೈಲ ಮಲ್ಲಿಕಾರ್ಜುನನ ಪರಮ ಭಕ್ತ. ಹೀಗಾಗಿ ಆತ ಅಲ್ಲಿಂದ ಬಂದ ಮೇಲೆ ಏನೋ ಸಿದ್ಧಿ ಪಡೆದವನಂತೆ ಹಳ್ಳಿಯ ಜನರ ಭೂತ ಬಿಡಿಸುವದು, ಮಂತ್ರ ಹಾಕುವದು, ಇತ್ಯಾದಿಗಳನ್ನು ಮಾಡಲು ಶುರು ಮಾಡುತ್ತಾನೆ. ಅದು ಯಶಸ್ವಿಯೂ ಆಗುತ್ತದೆ. ಹೀಗಾಗಿ ಜನರು ಆತನಲ್ಲಿ ರಾಚವ್ವಳಿದ್ದಾಳೆ ಎಂದು ನಂಬುತ್ತಾರೆ. ಆತ ಸತ್ತರೂ ಅವಳ ನೆನಪು ಮಾಸದ ಜನರ ನಂಬಿಕೆಯೇ ಈ **ರಾಚವ್ವತಾಯಿ**-ಎಂಬುದು.



ಸಂತೇಬೆನ್ನೂರು ಸುಮತೀಂದ್ರನಾಡಿಗ್*

# ಉಪ್ಪನಾಯ್ಕನಹಳ್ಳಿಯ ಅಪೂರ್ವ ಮಾಸ್ತಿ ಶಿಲ್ಪಗಳು

ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕು ಸಂತೇಬೆನ್ನೂರು ಹೋಬಳಿ ಉಪ್ಪನಾಯ್ಕನಹಳ್ಳಿ ಎಂದು ಕರೆಯಲ್ಪಡುವ ಈ ಗ್ರಾಮ ಈಗ ಕೇವಲ ೫೦೦ ಜನಸಂಖ್ಯೆ ಉಳ್ಳ ಪುಟ್ಟ ಗ್ರಾಮ. ದಾವಣಗೆರೆ-ಬಾಡ- ಸಂತೇಬೆನ್ನೂರು ಜಿಲ್ಲಾ ರಸ್ತೆಗೆ ೩. ಕಿ.ಮೀ. ದೂರ ಇರುವ ಈ ಗ್ರಾಮಕ್ಕೆ ಇಂದಿಗೂ ವಾಹನ ವ್ಯವಸ್ಥೆ ಇಲ್ಲ. ಈ ಗ್ರಾಮದ ಜನಸಂಖ್ಯೆಯ ಶೇ ೯೫ ಭಾಗ ನಾಯಕ ಜನಾಂಗದವರು. ಬಹುಶಃ ಹಿಂದೆ ಇಲ್ಲಿ ಒಬ್ಬ ಉಪನಾಯಕ ವಾಸಿಸುತ್ತಿದ್ದ ಕಾರಣ, ಈ ಗ್ರಾಮಕ್ಕೆ ಉಪನಾಯಕನಹಳ್ಳಿ ಎಂದು ಕರೆದುಕೊಂಡು, ನಂತರ ಜನಪದರ ಬಾಯಲ್ಲಿ ಅದು ಈಗ ಉಪ್ಪನಾಯ್ಕನಹಳ್ಳಿ ಎಂದು ಬದಲಾಗಿರಬಹುದು. ಸಮೀಪದಲ್ಲೇ ನರಸೀಪುರ ಎಂಬ ಬೇಚಾರಕ್ ಗ್ರಾಮವಿದ್ದು, ಬಹುಶಃ ಇಲ್ಲಿದ್ದ ಉಪನಾಯಕನ ಪತ್ನಿಯ ಹೆಸರಿನ ಗ್ರಾಮ ಅದಾಗಿರುವ ಸಂಭವವಿದೆ. ಈ ಗ್ರಾಮದಲ್ಲಿ ಕರಿಯಮ್ಮನ ದೇವಸ್ಥಾನವಲ್ಲದೆ, ವಿಜಯನಗರ ಕಾಲದ ವೀರಭದ್ರ ದೇವಸ್ಥಾನವೂ ಇದೆ ಜೀರ್ಣೋದ್ಧಾರ ಗೊಳಿಸುತ್ತಿರುವ ಹಳೆಯ ಕರಿಯಮ್ಮನ ದೇವಸ್ಥಾನದಲ್ಲಿ ೧೬ನೇ ಶತಮಾನದ ಪ್ರಾಚೀನ ಶಿಲ್ಪಗಳು ಗಮನಾರ್ಹವಾಗಿವೆ.

ಈ ಹಿಂದೆ ಡಾ|| ಎಂ. ಚಿದಾನಂದಮೂರ್ತಿಯವರು ಇದೇ ತಾಲೂಕಿನ ಬೊಮ್ಮೇನಹಳ್ಳಿ ಗ್ರಾಮದಲ್ಲಿ ಒಟ್ಟಿಗೇ ಇರುವ ಆರು ವಿಶಿಷ್ಟ ಮಾಸ್ತಿಕಲ್ಲಗಳನ್ನು ನಾಡಿನ ಜನತೆಗೆ ಪರಿಚಯ ಮಾಡಿಕೊಟ್ಟಿದ್ದರು. ಆ ಗ್ರಾಮದ ೧೦ ಕಿ.ಮೀ. ವ್ಯಾಪ್ತಿಯೊಳಗೇ ಒಟ್ಟು ಒಂದೇ ಕಡೆ ಎಂಟು ಇನ್ನೊಂದು ರೀತಿಯ ಮಾಸ್ತಿಕಲ್ಲುಗಳು ದೊರೆತಿರುವುದು ಅಚ್ಚರಿ ತರುತ್ತದೆ.

ಸಾಮಾನ್ಯವಾಗಿ ಎಲ್ಲಾ ಮಹಾಸತಿ ಕಲ್ಲುಗಳಲ್ಲಿ ಆತ್ಮಬಲಿದಾನ ಮಾಡಿಕೊಂಡ ಹೆಣ್ಣಿನ ಶಿಲ್ಪದಲ್ಲಿ ಬಲಗೈ ಮೇಲಕ್ಕೆ ಎತ್ತಿದಂತೆಯೇ, ಎಡಗೈನಲ್ಲಿ ಲಿಂಬೇಹಣ್ಣು ಮಾದಳದ ಹಣ್ಣು ಹಿಡಿದು ಕೊಂಡಂತೆಯೂ, ಜಡೆಯ ಹಿಂಭಾಗದಲ್ಲಿ ಕೇದಿಗೆ ಗರಿ ಇರುವಂತಲ್ಲದೆ, ತಲೆಯ ಹಿಂಭಾಗದಲ್ಲಿ ಜ್ವಾಲೆಯೂ, ಶಿಲ್ಪದ ಒಂದು ಭಾಗದಲ್ಲಿ ಅಗ್ನಿಕುಂಡದ ಚಿಹ್ನೆ, ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರ ಇತ್ಯಾದಿ ಇರುವುದು ಸಾಮಾನ್ಯ, ಆದರೆ ಇದಾವುದೂ ಉಪ್ಪನಾಯ್ಕನಹಳ್ಳಿಯ ಮಹಾಸತಿ ಕಲ್ಲುಗಳಲ್ಲಿ ಇಲ್ಲದಿರುವುದು ಗಮನಾರ್ಹ.

ಈ ಗ್ರಾಮದಲ್ಲಿ ಒಂದೇ ಕಡೆ ಇರುವ ಈ ಎಂಟು ಮಾಸ್ತಿಕಲ್ಲುಗಳಲ್ಲಿ ಅರ್ಧದಷ್ಟು ಮೃದು ಬಳಪದ ಕಲ್ಲಿನಲ್ಲಿಯೂ, ಉಳಿದವುಗಳನ್ನು ಬಿಳಿ ಬಣ್ಣದ ಸುಣ್ಣ ಕಲ್ಲಿನಂತಹ ಒರಟು ಕಲ್ಲಿನಲ್ಲಿಯೂ, ಉಬ್ಬುಶಿಲ್ಪದಲ್ಲಿ ಬಿಡಿಸಲಾಗಿದೆ. ಎಲ್ಲಾ ಸತಿಕಲ್ಲುಗಳು ಸುಂದರವಾಗಿಯೂ, ಆಕರ್ಷಕವಾಗಿಯೂ ಇದ್ದು, ವಿಜಯನಗರ ಕಾಲದ ಶಿಲ್ಪಲಕ್ಷಣಗಳನ್ನು ಹೊಂದಿವೆ ಎನಿಸುತ್ತದೆ.

**ಶಿಲ್ಪ ೧ :** ನಾಲ್ಕು ಅಡಿ ಎತ್ತರ ಇರುವ ಈ ಶಿಲ್ಪದಲ್ಲಿ ದಂಪತಿಗಳೀರ್ವರ ಸಮಪ್ರಮಾಣದ ಉಬ್ಬುಶಿಲ್ಪವಿದೆ. ಗಂಡಸು ಬಲಗೈಯಲ್ಲಿ ಚಾಟಿ ಇಟ್ಟುಕೊಂಡಂತಿದ್ದರೆ, ಹೆಣ್ಣಿನ ಎಡಗೈಯಲ್ಲಿ ಕಲಶವಿದೆ. ಗಂಡಿನ ಎಡಗೈ, ಹೆಣ್ಣಿನ ಬಲಗೈ ಸುಮ್ಮನೆ ಇಳಿಬಿಟ್ಟುಕೊಂಡಂತಿವೆ. ಇರ್ವರೂ ಪೀಠದ ಮೇಲೆ ನಿಂತಿರುವಂತಿದ್ದು, ಗಂಡು ಚಾಟಿಏಟಿನಿಂದ ಆತ್ಮ ಬಲಿದಾನ ಮಾಡಿಕೊಂಡಿದ್ದು, ಹೆಣ್ಣು ಅವನ ಜೊತೆಗೆ ಆತ್ಮಬಲಿದಾನ ಮಾಡಿಕೊಂಡಿರಬೇಕು. ಹೀಗಾಗಿ ಸತಿಪತಿಗಳೀರ್ವರ ಚಿತ್ರವನ್ನು ಒಟ್ಟಿಗೆ ಬಿಡಿಸಲಾಗಿದೆ.

ಈ ಶಿಲ್ಪವಿದ್ದ ಕರಿಯಮ್ಮನ ದೇವಸ್ಥಾನದಲ್ಲಿ ಹಿಂದಿನಿಂದಲೂ ಸಿಡಿಪದ್ಧತಿ ಆಚರಣೆಯಲ್ಲಿದ್ದು ಈ ಸಿಡಿಯ ರೀತಿಯದೇ ಇನ್ನೊಂದು ಆಚರಣೆ ಚಾಟಿಏಟು ಹಾಕಿಕೊಂಡು ಆತ್ಮ ಬಲಿದಾನ ಮಾಡಿಕೊಳ್ಳುವುದು ಇರಬಹುದು. ಹೀಗಾಗಿ ಈ ಶಿಲ್ಪದಲ್ಲಿ ಗಂಡಿನ ಕೈಯಲ್ಲಿ ಚಾಟಿ ಸಂಕೇತವಾಗಿ ತೋರಿಸಲಾಗಿದೆ ಎಂದು ಊಹಿಸಬಹುದಾಗಿದೆ.

**ಶಿಲ್ಪ ೨ :** ನಾಲ್ಕು ಅಡಿ ಎತ್ತರ ಇರುವ ಈ ಶಿಲ್ಪದಲ್ಲಿ ಹೆಣ್ಣಿನ ಚಿತ್ರ ಪ್ರಮುಖವಾಗಿ ತೋರಿಸಿದ್ದಾರೆ, ಗಂಡನ್ನು ಚಿಕ್ಕದಾಗಿ ತೋರಿಸಿದೆ. ಹೆಣ್ಣಿನ ಎರಡೂ ಕೈ ಅರೆ

* ಪತ್ರಿಕಾ ವರದಿಗಾರ ಸಂತೇಬೆನ್ನೂರು - ೫೭೭ ೫೫೨ (ದಾವಣಗೆರೆ ಜಿಲ್ಲೆ).



ಉಪ್ಪನಾಯ್ಕನಹಳ್ಳಿ ಮಾಸ್ತಿ ಶಿಲ್ಪ – ೧



ಉಪ್ಪನಾಯ್ಕನಹಳ್ಳಿ ಮಾಸ್ತಿ ಶಿಲ್ಪ – ೨

ಉಪ್ಪನಾಯ್ಕನಹಳ್ಳಿ ಮಾಸ್ತಿ ಶಿಲ್ಪ – ೩



ಉಪ್ಪನಾಯ್ಕನಹಳ್ಳಿ ಮಾಸ್ತಿ ಶಿಲ್ಪ – ೪



ಮೇಲ್ಮುಖವಾಗಿ ತೋರಿಸಿದ್ದು, ಬಲಗೈಯಲ್ಲಿ ಕೆಳಮುಖವಾಗಿರುವಂತೆ ಕತ್ತಿ ಅಥವ ದಂಡ ಹಿಡಿದುಕೊಂಡಂತೆಯೂ ಎಡಗೈನಲ್ಲಿ ಮಂಗಳ ದ್ರವ್ಯಸಹಿತವಾದ ತಟ್ಟೆಯೂ, ಬಲ ಭುಜದ ಮೇಲೆ ಗಿಣಿಯೂ ಇರುವಂತೆಯೂ ಅಲ್ಲದೆ ಶಿಲ್ಪದ ಮೇಲ್ಭಾಗದಲ್ಲಿ ಸಿಂಹ ಲಾಂಛನವನ್ನು ಬಿಡಿಸಲಾಗಿದೆ. ಗಂಡಿನ ಬಲಗೈಯಲ್ಲೂ ಕಲಶವಿದೆ. ಹೆಣ್ಣಿನ ಬಲಗೈಯಲ್ಲಿರುವುದು ಕತ್ತಿಯೋ ಅಥವ ದಂಡವೋ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದ್ದು, ಕತ್ತಿಯಾಗಿ ದ್ದರೆ ಅದು ವೀರಮರಣ ಹೊಂದಿದ ಆಕೆಯ ಗಂಡನದ್ದಾಗಿರಬಹುದು ಎಂಬ ಅಭಿಪ್ರಾಯಕ್ಕೆ ಬರಬಹುದಾಗಿದ್ದರೂ, ಆ ಶಿಲ್ಪ ಲಕ್ಷಣಗಳ ಕಾಲದಂತೆ ಆ ಕಾಲದಲ್ಲಿ ಸತಿ ಹೋಗುವ ವರು ದಂಡ ಹಿಡಿದುಕೊಂಡು ಹೋಗುವ ಪರಿಪಾಟ ಇದ್ದುದು ಷಣ್ಮುಖಸ್ವಾಮಿಗಳ ಷಟಸ್ಥಲ ವಚನಗಳಿಂದ ತಿಳಿದುಬರುವುದು. (**ಷಣ್ಮುಖಸ್ವಾಮಿಗಳ ಷಟ್‌ಸ್ಥಲ ವಚನ ಸಂಕೀರ್ಣವಚನ ಸಂಪುಟ–೯** ಪುಟ–೨೭೬–೨೭೭ ಸಂಖ್ಯೆ ೫೦೦) *ಗಂಡಸತ್ತನೆಂದು ಗಂಡನೊಡನೆ ಕೆಂಡವ ಬೀಳುವನೆಂದು, ಪುಂಡವೀರಮಾಸ್ತಿ ತಾನು ದಂಡೆಯ ಕಟ್ಟಿಕೊಂಡು, ಖಂಡೆಯುವ ಪಿಡಿದು ತಂಡ ತಂಡದ ಜನರ ಮುಂದೆ, ಮೆರೆದುಕೊಂಡು ಬಂದು, ಕಿಚ್ಚಿನ ಹೊಂಡವ ಕಾಡು ಹೆದರಿ ಹಿಮ್ಮೆಟ್ಟಿದಡೆ, ಅವಳಿಗದೇ ಭಂಗವಲ್ಲದೆ ಶೃಂಗಾರ ಮೆರೆವುದೇ ಅಯ್ಯ?, ಪತಿ ಲಿಂಗ, ಸತಿ ಶರಣ ತನ್ನ ಪತಿವ್ರತಾ ಭಾಷೆಯು ನುಡಿದು ನಡೆಯಲ್ಲಿ ತಪ್ಪಿದಡೆ ಅವನ ಭಂಗಕ್ಕೆ ತುದಿ ಮೊದಲಿಲ್ಲ ನೋಡಾ ಅಖಂಡೇಶ್ವರಾ.*

ಹೀಗಾಗಿ ಅದು ದಂಡವಾಗಿರುವ ಸಾಧ್ಯತೆಯೇ ಹೆಚ್ಚು. ಸ್ವರ್ಗಕ್ಕೆ ಹೆಣ್ಣು ಹೋಗುತ್ತಿರುವ ದ್ಯೋತಕವಾಗಿ ಗಿಣಿಯನ್ನು ಬಲಭುಜದ ಮೇಲೆ ಚಿತ್ರಿಸಿರಬಹುದು. ಹೆಣ್ಣಿನ ಎಡಗೈ ಕೆಳಗೆ ಪಂಚಕಲಶಗಳಲ್ಲದೆ, ಸತಿಪತಿಗಳಿಬ್ಬರ ಶಿಲ್ಪಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಹೆಣ್ಣಿನ ತೋಳ್ಬಂದಿ, ಬಳೆ, ಕಾಲ್ಕಡಗ, ಕೈಕಡಗ, ಸೊಂಟದ ಪಟ್ಟಿ, ಮಂಗಳ ಸೂತ್ರ, ಸರ, ನೆರಿಗೆ ಉಳ್ಳ ಲಂಗ ಇತ್ಯಾದಿಗಳನ್ನು ಲಕ್ಷಣವಾಗಿ ಬಿಡಿಸಿರುವುದು, ಇದು ಮಾಸ್ತಿಕಲ್ಲೆಂಬುದರಲ್ಲಿ ಸಂದೇಹವಿಲ್ಲ.

ನ್ನೇ ಹೋಲುವ ಇನ್ನೊಂದು ಕಲ್ಲಿನಲ್ಲಿ ಚಿಕ್ಕದಾಗಿ ಬಿಡಿಸಿರುವ ಗಂಡಿನ ಶಿಲ್ಪದಲ್ಲಿ ಎಡಗೈಯಲ್ಲಿ ಕತ್ತಿ ಹಿಡಿದಂತಿದೆ ಅದು ಬಿಟ್ಟರೆ ಪ್ರಮುಖ ವ್ಯತ್ಯಾಸಗಳಾವುದು ಈ ಉಬ್ಬುಶಿಲ್ಪದಲ್ಲಿ ಕಾಣುವುದಿಲ್ಲ.

**ಶಿಲ್ಪ ೩ :** ಈ ಉಬ್ಬುಶಿಲ್ಪದಲ್ಲಿ ಕೇವಲ ಇವರು ಹೆಂಗಸರನ್ನು ಮಾತ್ರ ತೋರಿಸುತ್ತಿದ್ದು. ಬಹುಶ: ಈರ್ವರು ಒಟ್ಟಿಗೇ ಸತಿಹೋಗಿರಬೇಕು. ಮತ್ತು ಈರ್ವರ ಗಂಡನೂ ಒಬ್ಬನೇ ಆಗಿರಬೇಕು. ಉಬ್ಬುಶಿಲ್ಪದಲ್ಲಿ ತೋರಿಸಿರುವ ಸತಿಗಳೀರ್ವರು ಶಿರೋಭಾಗವೂ, ಈಗ ಹಾಳಾಗಿದೆ ಬಲಗಡೆ ಇರುವ ಸತಿ ಬಲ ಕೈಯಲ್ಲಿ ದಂಡ ಅಥವ ಕತ್ತಿಯೂ, ಎಡಗಡೆ ಇರುವ ಸತಿ ಬಲಕೈಯಲ್ಲಿ ಕಲಶವೂ, ಈರ್ವರ ಎಡಗೈಯಲ್ಲಿ ಮಂಗಳ ಸೂಚಕವಾದ ತಟ್ಟೆಯೂ ಇದ್ದು ಶಿಲ್ಪದ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಹಂಸ, ಗಿಳಿಗಳನ್ನು ಬಿಡಿಸಲಾಗಿದೆ. ಬಲಭಾಗದಲ್ಲಿ ಬಿಡಿಸಿರುವ ಸತಿ ಪೀಠದ ಮೇಲೆ ನಿಂತಿರುವಂತಿದೆ. ಈ ಕಲ್ಲನ್ನು ಬಿಳಿ ಗ್ರ್ಯಾನೆಟ್‌ನಲ್ಲಿ ಬಿಡಿಸಲಾಗಿದೆ.

**ಶಿಲ್ಪ ೪ :** ಬಿಳಿ ಗ್ರ್ಯಾನೈಟ್‌ನಲ್ಲಿ ಬಿಡಿಸಿರುವ ಈ ಶಿಲ್ಪವನ್ನು ಪಾಣಿ ಪೀಠದ ಮೇಲೆ ಇಡುವಂತೆ ಕೆತ್ತಲಾಗಿದೆ ಈ ಶಿಲ್ಪದ ಮುಖದ ಭಾಗವು ಹಾಳಾಗಿದೆ. ಬಹುಶಃ ಇದಕ್ಕೆ ಬಳಸಿರುವ ಕಲ್ಲಿನ ದೋಷ ಇರಬೇಕು. ಈ ಶಿಲ್ಪದಲ್ಲಿಯ ಸತಿ ಕಚ್ಚೆಸೀರೆಯನ್ನು ಸೊಂಟದಿಂದ ಕೆಳಗೆ ಉಟ್ಟಿದಂತಿದ್ದು, ಹಿಂದಿನ ಶಿಲ್ಪದಲ್ಲಿ ಸೂಚಿಸಿದಂತೆ ಬಲಗೈಯಲ್ಲಿ ಕತ್ತಿ ಅಥವಾ ದಂಡ, ಕೆಳಮುಖವಾಗಿಯೂ, ಎಡಗೈಯಲ್ಲಿ ತಟ್ಟೆ ಅಥವಾ ಪಾತ್ರೆ ಇದ್ದು, ಶಿಲ್ಪದ ಅಕ್ಕಪಕ್ಕ ಗಿಣಿ, ಕಾಡುಕೋಳಿಗಳನ್ನು ಬಿಡಿಸಲಾಗಿದೆ ಇಲ್ಲಿ ಆಕೆಯ ಗಂಡನ ಚಿತ್ರ ಯಾವುದೂ ಇರುವುದಿಲ್ಲ.

ಇನ್ನೂ ಮೂರು ಒಂದೇ ತರಹ ಇರುವ ಬೇರೆ ಬೇರೆ ಶಿಲ್ಪಗಳಿದ್ದು, ಈ ಮೂರು ಸಹ ಶಿಲ್ಪ ೪ ರಲ್ಲಿರುವ ಚಿತ್ರದಂತೆಯೇ ಕಡೆಯಲಾಗಿದೆ. ಪಾಣಿಪೀಠದಲ್ಲಿ ನಿಲ್ಲಿಸುವಂತಿರುವ ಈ ಶಿಲ್ಪಗಳು, ಪೂಜೆ, ಅರ್ಚನೆ, ಅಭಿಷೇಕ ಮಾಡುವಂತಿದೆ. ಈಗ ಅವುಗಳನ್ನು ಪಾಣಿಪೀಠದಿಂದ ಬೇರ್ಪಡಿಸಿಡಲಾಗಿದೆ. ದೇವತೆಗಳಂತೆ ಮಾಸತಿಕಲ್ಲುಗಳಿಗೂ ಪೂಜೆ, ಅಭಿಷೇಕ ಆ ದಿನದಲ್ಲಿ ಮಾಡುತ್ತಿರಬಹುದು. ಸಮೀಪದ ಹಿರೇಕೋಗಲೂರಿನಲ್ಲಿರುವ ವೀರಗಲ್ಲುಗಳನ್ನು, ಇದೇ ತರಹ ಪಾಣಿಪೀಠದ ಮೇಲೆ ನಿಲ್ಲಿಸಲಾಗಿದೆ. ಇವುಗಳಲ್ಲದೆ ಈ ಆವರಣದಲ್ಲಿ ಕರಿಯಮ್ಮನ ವಿಗ್ರಹ, ಹಲವಾರು ನಾಗದೇವತೆಗಳ, ನಾಗರಕಲ್ಲುಗಳ ಶಿಲ್ಪಗಳನ್ನು ಹಳೇಗುಡಿಯ ಸುತ್ತಮುತ್ತ ಇಡಲಾಗಿದೆ.

ಆ ಗ್ರಾಮದ ಜನತೆ ಈ ಕಲ್ಲುಗಳನ್ನು ದೇವತೆಗಳ ಚಿತ್ರವೆಂದು ಈಗಲೂ ಪೂಜಿಸುತ್ತಾ ಬಂದಿದ್ದಾರೆ. ಈ ಯಾವ ಕಲ್ಲಿನ ಮೇಲೂ ಬರಹಗಳಾಗಲೀ, ಲಿಪಿಗಳಾಗಲೀ ಇರುವುದಿಲ್ಲ.

ಎಂ. ಚಿದಾನಂದಮೂರ್ತಿ ಅವರು ಈ ಶಿಲ್ಪದ ಭಾವಚಿತ್ರಗಳನ್ನು ನೋಡಿ ಬಹಳಷ್ಟು ಶಿಲ್ಪದಲ್ಲಿ ಸತಿಯು ಕೈಯಲ್ಲಿ ಹಿಡಿದಿರುವುದು ಕತ್ತಿ ಎಂಬ ಅಭಿಪ್ರಾಯಪಟ್ಟಿದ್ದು, ಅದು ಮಡಿದ ಗಂಡನದ್ದಾಗಿರುವ ಸಾಧ್ಯತೆ ಇದೆ ಎಂದು,

ಅಂದಿನ ಕೆಲ ಆಚರಣೆಗಳನ್ನು ಅಭ್ಯಾಸಿಸಿ ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದರೆ, ಇನ್ನು ಕೆಲ ವಿದ್ವಾಂಸರು ಅದು ಕತ್ತಿಯಲ್ಲ, ದಂಡವೇ ಸರಿ ಎಂದು ಷಣ್ಮುಖಸ್ವಾಮಿಗಳ ವಚನ ಉದ್ಧರಿಸಿ ಅಭಿಪ್ರಾಯ ಪಡುತ್ತಾರೆ. ಪತ್ನಿಯ ಆತ್ಮ ಬಲಿದಾನಕ್ಕೆ ಗಂಡನು ಯುದ್ಧದಲ್ಲಿ ಮಡಿದುದೊಂದೇ ಕಾರಣವಾಗುವುದಿಲ್ಲ ಎಂಬ ಅಭಿಪ್ರಾಯವನ್ನು ಡಾ॥ ಎಂ.ಎಂ. ಕಲುಬುರ್ಗಿ, ಡಾ॥ ಆರ್. ಶೇಷಶಾಸ್ತ್ರಿ, ಡಾ॥ ಎಂ. ಚಿದಾನಂದಮೂರ್ತಿ, ಡಾ॥ ಬಸವರಾಜ ಕಲ್ಗುಡಿ ಮುಂತಾದ ವಿದ್ವಾಂಸರ ಅಭಿಪ್ರಾಯ ಪರಿಗಣಿಸುವುದಾದರೇ ಇಲ್ಲಿನ ಸತಿಕಲ್ಲುಗಳು, ಕೇವಲ ಯುದ್ಧದಲ್ಲಿ ಮಡಿದ ಪತಿ ಜೊತೆಗೆ ಸಹಗಮನ ಮಾಡಿದ ಸತಿಯರಲ್ಲದೆ, ದೇವರ ಸೇವೆಗಾಗಿ, ಪತಿಯೊಂದಿಗೆ, ಸತಿಯಾದವರ ಕಲ್ಲುಗಳೂ ಇರುವ ಸಾಧ್ಯತೆಯೂ ಇದೆ. ಶಿಲ್ಪದಲ್ಲಿ ಸೂಚಿಸಿದ ದಂಡ ದಂಡವೂ ಅಲ್ಲ, ಕತ್ತಿಯೂ ಅಲ್ಲ. ದೊಂದಿ, ಪಂಜು ಏಕಾಗಿರಬಾರದೆಂಬ ವಾದವೂ ಇದೆ. ಇನ್ನೊಂದು ಕೈಯಲ್ಲಿ ತೋರಿಸಿರುವ ತಟ್ಟೆ, ತಟ್ಟೆಯಲ್ಲಿ ಗುರಾಣಿ ಎಂಬ ಅಭಿಪ್ರಾಯವೂ, ಲೇಖನ ಮಂಡಿಸಿದಾಗ ವ್ಯಕ್ತವಾಯಿತು. ಒಟ್ಟಿನಲ್ಲಿ ತ್ಯಾಗ ಬಲಿದಾನದ ಪ್ರತೀಕವಾದ ಈ ಕಲ್ಲುಗಳು ಮಾಸ್ತಿಕಲ್ಲುಗಳೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ವಿಜಯನಗರ ಕಾಲದ ನಂತರ ನಿಂತೇ ಹೋಗಿತ್ತೆಂದು ಭಾವಿಸಲಾಗಿದ್ದು, ಈ ಸತಿ ಪದ್ಧತಿ ಹಾಗು ಸತಿಕಲ್ಲು ನಿರ್ಮಾಣ ಆನಂತರದ ದಿನಗಳಲ್ಲೂ ಇತ್ತು ಎಂಬುದಕ್ಕೆ ಇವು ನಿದರ್ಶನವಾಗಿ ಇತಿಹಾಸಾಸಕ್ತರ ಗಮನ ಸೆಳೆಯುವಂತಿವೆ.

(ಈ ಪ್ರಬಂಧ ರಚನೆಗೆ ಅಗತ್ಯ ಸಲಹೆ ಸೂಚನೆ ಕೊಟ್ಟ ಡಾ॥ ಎಂ. ಚಿದಾನಂದಮೂರ್ತಿ. ಡಾ॥ ಬಿ. ರಾಜಶೇಖರಪ್ಪ, ಡಾ॥ ಜಗದೀಶ ಅಗಸೀಬಾಗಿಲವರ, ಡಾ॥ ಹೆಚ್. ಚಂದ್ರಶೇಖರ್, ಪ್ರೊ॥ ಎಂ.ಜಿ. ನಾಗರಾಜ್ ಮತ್ತು ಈ ಅಪೂರ್ವ ಶಿಲ್ಪವನ್ನು ನನ್ನ ಗಮನಕ್ಕೆ ತಂದ ನಿವೃತ್ತ ಶಿಕ್ಷಣಾಧಿಕಾರಿ ಶ್ರೀ ಜಿ. ಮುರಿಗಯ್ಯ ಇವರಿಗೆ ಆಭಾರಿ)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಡಾ॥ ಎಂ. ಚಿದಾನಂದಮೂರ್ತಿ, ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು.

೨. ಡಾ॥ ಎಂ ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.

೩. ಡಾ॥ ಆರ್. ಶೇಷಾಶಾಸ್ತ್ರಿ, ಕರ್ನಾಟಕದ ವೀರಗಲ್ಲುಗಳು.

೪. ವಿಜಯನಗರ ಅಧ್ಯಯನ, (ಸಂಪುಟ ೮–೯–೧೦) : ಡಾ॥ ರು.ಮ. ಷಡಾಕ್ಷರಯ್ಯನವರ ಲೇಖನಗಳು.

೫. ಸಂಕೀರ್ಣ ವಚನ ಸಂಪುಟ – ೯. ಡಾ॥ ವೀರಣ್ಣ ರಾಜೂರ (ಸಂ).

ಮಹಾಯಾನ ಬೌದ್ಧ ಧರ್ಮದ ಕವಲಾಗಿ ಯೋಗಾಚಾರ ಪಂಥದಿಂದ ಬೆಳೆದ ವಜ್ರಯಾನದಲ್ಲಿ ತಾಂತ್ರಿಕ ಶೈವ ಸಂಪ್ರದಾಯದ ಪ್ರಭಾವ ವಿಶೇಷ. ವಜ್ರಯಾನದಲ್ಲಿ ಪೂಜೆಯೇ ಧ್ಯಾನಕ್ಕಿಂತ ಪ್ರಮುಖವಾಗಿ ಮಂತ್ರದ ಪಾತ್ರ ಹೆಚ್ಚು. ದೇವತೆಗಳ ಸಂಖ್ಯೆ ಹೆಚ್ಚು. ಈ ದೇವತೆಗಳು ಶೂನ್ಯತೆಯ ಮಡಿಲಿನಿಂದ ಎದ್ದುಬಂದವರು, ಸ್ಫೂರ್ತಿ ಬಂದ ಹಾಗೆಲ್ಲ ಮೈದಳೆಯುವರೆಂದು ಕಲ್ಪನೆ ಇದೆ :

**ಸ್ಫೂರ್ತಿಶ್ಚ ದೇವತಾಕಾರಾ ನಿಃಸ್ವಭಾವಾ ಸ್ವಭಾವತಃ**
**ಯಥಾ ಯಥಾ ಭವೇತ್ ಸ್ಫೂತಿಃ ಸಾ ತಥಾ ಶೂನ್ಯಾತ್ಮಿಕಾಃ**

ಡಾ. ಎಸ್.ಕೆ. ಜೋಶಿ*

# ಕನ್ನಡ ನೆಲದಲ್ಲಿ ನಾಗಶಿಲ್ಪಗಳು

ಭಾರತೀಯ ಭಾವ ಕಲ್ಪನೆಯಲ್ಲಿ ನಾಗನ ಕಾಲ ತೀರ ಪ್ರಾಚೀನ. ವಿಶ್ವವು ರೂಪುಗೊಳ್ಳುವ ಆದಿಯಲ್ಲಿ 'ಆದಿಶೇಷ' ನಿದ್ದನೆಂಬ ಕಲ್ಪನೆ. ಆದಿಶೇಷನ ಶಿರದ ಮೇಲೆ ನಮ್ಮ ಪೃಥ್ವಿಯು ಸಾಸಿವೆ ಕಾಳಿನ ಗಾತ್ರದಷ್ಟು ಮಾತ್ರ. ವೇದಗಳಲ್ಲಿ ನಾಗಶಬ್ದ ಉಪಯೋಗಿಸಿದ್ದು, ಇದೆ. 'ನಹೇನ ಗಮ್ಯತಿ ಇತಿ'? 'ನಹೇನ ಗಚ್ಚತಿ ಇತಿ' 'ನಃ' ಅಂದರೆ ಹೊಟ್ಟೆ ಅಥವಾ ಎದೆ, 'ಉರಗಃ' ಎಂಬ ಶಬ್ದವೂ ಇದೆ. 'ಉರೇನ ಗಚ್ಚತಿ ಇತಿ', 'ಅಹಿರ್' ಎಂದರೆ ಹಾವು, 'ಅಹಿಪ:' ಅಂದರೆ ಆದಿಶೇಷ. ಅಹಿಚ್ಛತ್ರ ಎಂಬ ನಾಗರಖಂಡವೂ ಇದೆ. 'ಅಹಿಚ್ಚತ' ಎಂಬುದು ಪ್ರಾಚೀನ ಕರ್ನಾಟಕದ ಭಾಗವೇ ಆಗಿತ್ತು. ಈ ಭಾಗವು ಈಗಣ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪಸರಿಸಿತ್ತು.

ಪುರಾಣ ಗ್ರಂಥಗಳು ಗ್ರಂಥಸ್ಥಗಳಾದುದ್ದು ಕ್ರಿ.ಶ. ೫ನೇ ಶತಮಾನದ ಸುತ್ತಮುತ್ತ. ಅದಕ್ಕಿಂತ ಪೂರ್ವದಲ್ಲಿ ಮುಖತಃವಾಗಿದ್ದ ಪರಿ, ಪೌರಾಣಿಕ ಸಾಹಿತ್ಯದಲ್ಲಿ ನಾಗವರ್ಣನೆ ಹಾಗೂ ನಾಗ ಸಂಬಂಧಿತ ಸಂದರ್ಭಗಳು ಸಾಕಷ್ಟು ಸಲ ಚಿತ್ರಿಸಲ್ಪಟ್ಟಿವೆ. ವರುಣ ಪುರಾಣ, ವಾಯುಪುರಾಣ, ಗರುಡ ಪುರಾಣ, ಹಾಗೂ ಮಹಾಭಾರತ ಭಾಗವತಗಳು ಮುಂತಾದವು ವಿವಿಧ ಪರಿಕರಗಳು, ಆದಿಶೇಷನ ಮೇಲೆ ಅನಂತನು ಶಯನಗೊಂಡುದು ದೇವದಾನವರು ಸಮುದ್ರ ಮಂಥನದಲ್ಲಿ ಮಂದಾರ ಪರ್ವತವನ್ನು ಕಡೆಗೋಲು ಮಾಡಿ ವಾಸುಕಿ ಸರ್ಪವನ್ನು ಹಗ್ಗವನ್ನಾಗಿ ಮಾಡಿ, ತನ್ಮೂಲಕ ಉದ್ಭವಿಸಿದ 'ಹಾಲಾಹಲವನ್ನು ಹರಿಬಿಟ್ಟರೆ' ಆಗುವ ಅನಾಹುತವನ್ನು ತಪ್ಪಿಸಲು ಸೇವಿಸಿದಾಗ ಅದು ಗಂಟಲಿನಿಂದ ಕೆಳಗೆ ಇಳಿಯದಂತೆ ನಾಗನನ್ನು ಕುತ್ತಿಗೆಗೆ ಸುತ್ತಿ ನೀಲಕಂಠ ನಾದ ಶಿವ-ನಾಗಭೂಷಣನ ಬಗ್ಗೆಯೂ, ಬಿರಿವ ಗಣಪನ ಹೊಟ್ಟೆಗೆ ಚೌತಿಯ ಚಂದ್ರಮನ ದಿನ ನಾಗನು ಗಣಪನ ಉದರವೇಷ್ಠಿತನಾದುದು, ದಕ್ಷ ಪ್ರಜಾಪತಿಯ ಮಗಳಾದ ದಾಕ್ಷಾಯಣಿ ಹಾಗೂ ತಂದೆ ಕೈಕೊಂಡ ಯಜ್ಞದಲ್ಲಿ ಆತ್ಮಾಹುತಿಯಾಗಿ, ಶಿವತಾಂಡವ ನೃತ್ಯದಲ್ಲಿ ಕೊರಳಲಿದ್ದ ನಾಗ ಭಯಭೀತನಾದುದು; ರಾಮಾಯಣದ ಕಾಲದಲ್ಲಿ, ರಾವಣನು ಶಿವನ ಆತ್ಮಲಿಂಗವನ್ನೇ ತನ್ನ ತಾಯಿಗೆ ಪೂಜೆಗಾಗಿ ತರಲು ತಪಗೈದು, ಶಿವನ ಕೈಲಾಸಪರ್ವತವನ್ನು ಬುಡಸಹಿತ ಅಲುಗಾಡಿಸಿ, ಅಲ್ಲಿಯ ವನಚರರನ್ನು ನಾಗಭೂಷಣನ ನಾಗನಿಂದ ಒಳಗೊಂಡು ಎಲ್ಲ ನಾಗಗಳನ್ನು ಭಯಭೀತ ಮಾಡಿದ ಪ್ರಸಂಗ, ಇತ್ಯಾದಿಗಳು ಮುಂದೆ ಬಂದ ಭಾರತೀಯ ಶಿಲ್ಪ ಸಂಪ್ರದಾಯಕ್ಕೆ ಭಾವ, ಸೌಂದರ್ಯ ಹಾಗೂ ಚಲನೆಯನ್ನು (Mood, movement and beauty) ನೀಡಿವೆ. ಅವುಗಳ ಬಗ್ಗೆ ಮುಂದೆ ಸಾಂದರ್ಭಿಕವಾಗಿ ವಿವರಿಸುವಾ.

ಕದ್ರ್ರು ಹಾಗೂ ಕಾಶ್ಯಪ ದಂಪತಿಗಳಿಗೆ ನಾಗಮಕ್ಕಳು ಜನಿಸಿದರೆ, (ಮೂಲ ಮಹಾಭಾರತ), ಅದೇ ಕಾಶ್ಯಪ ಹಾಗೂ ವೈನತೇಯರ ಜೋಡಿಯಿಂದ ಗರುಡಕುಲ ಹುಟ್ಟಿ ಅದು ಬೆಳೆಯಿತಂತೆ. ಇಂದ್ರಲೋಕದಿಂದ ಗರುಡನು ಅಮೃತವನ್ನು ತರುವಾಗ, ಅದನ್ನು ಪಡೆಯಲು ನಾಗರು ಹವಣಿಸುತ್ತಿರುವಾಗ, ಈ ತಿಕ್ಕಾಟದಲ್ಲಿ ಇಂದ್ರನು ಮಧ್ಯ ಪ್ರವೇಶಿಸಿ ಅಮೃತಕಲಶವನ್ನು ಮರಳಿ ದೇವಲೋಕಕ್ಕೆ ತೆಗೆದುಕೊಂಡು ಧಾವಿಸುತ್ತಿರುವಾಗ ಆ ಕಲಶವು ತುಳುಕಿ ಭೂಲೋಕದ ಹಸಿರು ದರ್ಭವನದಲ್ಲಿ ಚಿಮುಕಿಸಿದಾಗ, ದರ್ಭದ ಮೇಲೆ ಬಿದ್ದ ಅಮೃತದ ಹನಿಗಳನ್ನು ನಾಗರೆಲ್ಲ ನಾಲಿಗೆಯಿಂದ ನೆಕ್ಕಿದಾಗ, ಅವರ ನಾಲಿಗೆಯು ಎರಡು ಸೀಳಾದವೆಂದೂ ಆದರೂ ನಾಗರ ಆಯುಷ್ಯವು ವೃದ್ಧಿಯಾಯಿತೆಂದೂ ಪ್ರತೀತಿ. ಈ ಇಂಥ ಪೌರಾಣಿಕ ಪ್ರಸಂಗಗಳು ಶಿಲ್ಪಕಲೆಯ ಸೌಂದರ್ಯಕ್ಕೆ, ಹಾಗೂ ಕಥಾನಕ ಗಳಿಗೆ ಪರಿಕರಗಳಾಗಿವೆ (Basic data). ಎಲ್ಲೋರಾ, ಅಜಂತಾ, ಕಾರ್ಲಾ, ಕನ್ಹೇರಿ, ಇತ್ಯಾದಿ, ಈ ಮೊದಲು ಪ್ರಾಚೀನ ಕಾಲದಲ್ಲಿ ಕರ್ನಾಟಕದ ಭಾಗಗಳೇ ಆಗಿದ್ದು, ಅಲ್ಲಿಯ ಗುಹಾಂತರ್ದೇವಾಲಯಗಳಲ್ಲಿ ಭಿತ್ತಿಚಿತ್ರಗಳನ್ನಾಗಿ (Bas

* ೬೦, ಸಿಲ್ವರ್ ಆರ್ಚರ್ಡ್, ಶ್ರೀರಂಗಮಾರ್ಗ, ಧಾರವಾಡ - ೫೮೦ ೦೦೧.

relief) ಹಾಗೂ ಉಬ್ಬುಚಿತ್ರಗಳನ್ನಾಗಿ (Full relief ಮನಮೋಹಕವಾಗಿ ಬಿಡಿಸಲಾಗಿದೆ. ಎಲ್ಲೋರಾದ ಕೈಲಾಸನಾಥ (Rock cut cave) ದೇವಾಲಯದಲ್ಲಿ ಹಾಗೂ ಪಟ್ಟದಕಲ್ಲಿನ ವಿರೂಪಾಕ್ಷ ಹಾಗೂ ಐಹೊಳೆಯ ದುರ್ಗಾ ದೇವಾಲಯಗಳಲ್ಲಿ ಈ ತರಹದ ಕಲ್ಲಿನ ಕುಸುರಿಗಳ ಇಂದ್ರಜಾಲದ ಮೋಡಿಯನ್ನು ಕಾಣಬಹುದು.

ಪೌರಾಣಿಕ ನಾಗಕುಲಕ್ಕೆ ಸಂಬಂಧಿಸಿದಂತೆ, ಕದ್ರುವಿನ ಮಕ್ಕಳಾದ 'ನಾಗರು' ಹಾಗೂ 'ವೈನತೇಯಳ ಮಕ್ಕಳಾದ' ಗರುಡರು ಸವತಿಮಕ್ಕಳ ಮಾತ್ಸರ್ಯದಿಂದ ಬೇರೆ ಬೇರೆಯಾಗಿ ಹೋದರು. ಮೊದಲನೆಯ ಗುಂಪು ಶಿವನ ಕಡೆಗೆ ವಾಲಿದರೆ, ಎರಡನೆಯ ಗುಂಪು ವಿಷ್ಣುವಿನ ಭಕ್ತರಾದರು. ನಾಗನು ನೀಲಕಂಠನ ಕೊರಳಲ್ಲಿ ಶೋಭಿಸಿದರೆ ಗರುಡನು ವಿಷ್ಣು ವಾಹನನಾದನು. ಈ ಎರಡೂ ಪ್ರಾಣಿಗಳು ಬದ್ಧ ವೈರಿ ಗಳಾದರು. ಒಬ್ಬರನ್ನೊಬ್ಬರು ಕಂಡರೆ ಸಿಡಿದೇಳು ವಂತಾದರು. ಭಾರತದ ಶಿಲ್ಪಗಳಲ್ಲಿ ಈ ವೈರತ್ವವನ್ನು ದ್ವಂದ್ವತೆಯನ್ನು ವಿಷಯ ವನ್ನಾಗಿಸಿ ವೈವಿಧ್ಯಮಯ ಶಿಲ್ಪರಾಶಿಯನ್ನು ಗುಡಿಗುಂಡಾರ ಗಳಲ್ಲಿ ಅಳವಡಿಸಲಾಯಿತು.

ಜೈನ ಸಂಪ್ರದಾಯದಲ್ಲಿ ನಾಗನ ವೈಶೇಷಿಕತೆ ಇದೆ. ನಾಗನಲ್ಲಿ ದೊಡ್ಡ ಹಿರಿಯ ಮನಸ್ಸೂ ಇದ್ದುದು ಕಂಡು ಬರುತ್ತದೆ. ಪ್ರತಿಭಾವಂತರನ್ನು, ತಪಸ್ವಿಗಳನ್ನು ಮನಸಾ ಭಯ ಭಕ್ತಿಯಿಂದ ಆದರಿಸುವ, ತನ್ನಿಂದಾಗುವಷ್ಟು ಸಹಾಯವನ್ನು ಮಾಡುವ ಸುಜನ ಗುಣವೂ ಇದೆ. ಜೈನ ಮಹಾಮುನಿಗಳಿಗೆ ಬಿಸಿಲು ಗಾಳಿ ಚಳಿಗಳ ಬಾಧೆ ಆಗದಂತೆ, ಅವರು ತಪಸ್ಸುಗೈವಲ್ಲಿ, ಅವರಿಗೆ ಹೆಡೆಬಿಚ್ಚಿ ನೆರಳು ನೀಡುವ ಗುಣ ನಾಗನಲ್ಲಿ. ಅನೇಕ ತೀರ್ಥಂಕರರಿಗೆ, ವಿಶೇಷವಾಗಿ ಪಾರ್ಶ್ವನಾಥನಿಗೆ-ಯಕ್ಷಿಯರಾದ ಕೂಷ್ಮಾಂಡಿನಿ ಹಾಗೂ ಪದ್ಮಾವತಿಯರಿಗೆ ಹೆಡೆ, ಬಿಚ್ಚಿ ನೆರಳು ಕಟ್ಟಿ, ನಾಗನು ಕೃತಾರ್ಥನಾಗಿದ್ದಾನೆ. ಇವು, ಭಾರತೀಯ ಜೈನ ಗುಹೆಗಳಲ್ಲಿ (ಎಲ್ಲೋರಾ, ಬಾದಾಮಿ) ಹಾಗೂ ಜೈನ ಬಸದಿಗಳಲ್ಲಿ (ಶ್ರವಣಬೆಳಗೊಳ) ಸುಂದರವಾಗಿ ಕೆತ್ತನೆಗೊಳ್ಳಲ್ಪಟ್ಟಿವೆ.

ಐತಿಹಾಸಿಕವಾಗಿ, 'ನಾಗಉಗಮ', 'ನಾಗಪ್ರಭೇದ' ಹಾಗೂ ಆಚರಣೆಗಳನ್ನು ನೋಡಬಯಸಿದರೆ, ಪ್ರಥಮತಃ ನಮ್ಮ ರಾಷ್ಟ್ರದಲ್ಲಿ ಪಂಚ ನದಿಗಳ ನಡುವೆ (ಪಂಚ+ ಆಬ್= ಪಂಜಾಬಿ), ಕ್ರಿಪೂ. ೩೦೦೦-೧೫೦೦ ವರೆಗೆ ಹಬ್ಬಿದ್ದ, ಸಿಂಧೂ ತೀರದ ಸಂಸ್ಕೃತಿಯ ಶಿಲ್ಪಕಲಾ ಕೊಡುಗೆಯಲ್ಲಿ ಒಂದಾದ ಮೃತ್ತಿಕಾ ಮುದ್ರಿಕೆ (Earthen Seals) ಗಳಲ್ಲಿ ಚಿತ್ರಿತ 'ಪಶುಪತಿನಾಥ'ನ ಕೊರಳಲ್ಲಿ ಸುತ್ತಿದ ನಾಗನನ್ನು, ಮತ್ತು ಅಂಥವೇ ಮತ್ತಿತರ ಮೃತ್ತಿಕೆಯ ಮುದ್ರಿಕೆಗಳಲ್ಲಿ ಮೂಡಿಸಿದ ಅಶ್ವತ್ಥವೃಕ್ಷದ ಬೊಡ್ಡೆಗೆ ಸುತ್ತಿಕೊಂಡ 'ನಾಗ ವೇಷ್ಠನವನ್ನೂ' ಅಲ್ಲಿ ಕಾಣಬಹುದು.

ಮೌರ್ಯರ ಕಾಲದಲ್ಲಿ ಕ್ರಿಪೂ. ೩೦೦ರ ಸುತ್ತಮುತ್ತ ಪಾಟಲೀಪುತ್ರ, ಬುದ್ಧಗಯಾ, ಸಾರನಾಥ, ಸಾಂಚಿ ಮುಂತಾದ ತಾಣಗಳಲ್ಲಿ ಬುದ್ಧ ಸಂಪ್ರದಾಯದ ಶಿಲಾಮೂರ್ತಿಗಳಲ್ಲಿ ನಾಗಗಳ ಸುಂದರ ಪ್ರತಿಮೆಗಳನ್ನು ಕಾಣಬಹುದು. ಅನಂತರ ದಲ್ಲಿ ಗಾಂಧಾರ ಕಲೆಯ ಮಥುರಾ (ಉ.ಪ್ರ) ಮುಂತಾದ ಕಡೆಗಳಲ್ಲಿ (ಕ್ರಿ.ಶ. ೨೦೦-೪೦೦) ಬುದ್ಧನಿಗೆ ನೆರಳುಗಟ್ಟಿದ ನಾಗಶಿಲ್ಪಗಳನ್ನೂ ಕಾಣಬಹುದು. ತದನಂತರ ಗುಪ್ತರು, ವಾಕಾಟಕರು, ಪಶ್ಚಿಮ ಚಾಲುಕ್ಯರು (ವಾತಾಪಿ), ರಾಷ್ಟ್ರಕೂಟರು ಮುಂತಾದವರ ಸಮಯದಲ್ಲಿ (ಕ್ರಿ.ಶ. ೪೫೦-೯೫೦)ರವರೆಗೆ ನಿರ್ಮಿಸಿದ ಗುಡಿಗಳಲ್ಲಿಯೂ, ಅಜಂತಾ, ಎಲ್ಲೋರಾ, ಎಲೆಫಂಟಾ, ಕಾರ್ಲಾ, ಭಾಜಾ, ಭೇಡಸಾ, ಮುಂತಾದ ಗುಹಾಂತರ್ದೇವಾಲಯಗಳಲ್ಲೂ ಬ್ರಹ್ಮಾನಿನಲ್, ಬೌದ್ಧ, ಜೈನ ಸಂಪ್ರದಾಯಗಳ ದರ್ಶನದಲ್ಲಿ ನಾಗಮೂರ್ತಿ ಗಳನ್ನು-ಆಯಾ ಅಧಿದೈವತಗಳಿಗೆ ಅಲಂಕರಿಸಿದುದನ್ನು-ತೊರೆಯ ಲಾಗಿದೆ, ನಾಗ ನಾಗಿಣಿಯರಾಗಿ, ನಾಗರಾಜ ನಾಗರಾಣಿಯ ರಾಗಿ ಸುಂದರ ಅರ್ಧಾಂಗ ಮಾನವ ಸ್ತ್ರೀ ಪುರುಷ ರೂಪು ಗಳಲ್ಲಿ ಕಾಣಿಸಿದ್ದಾರೆ.

ಈ ಸೌಂದರ್ಯದ ನಾಗ-ನಾಗಿಣಿಯರ ಶಿಲ್ಪಗಳು ಹೇಗಿರಬೇಕು ಎಂಬ ಶಿಲ್ಪಶಾಸ್ತ್ರ ನಿಯಮಗಳನ್ನು 'ಅಂಶು ಮದ್ಭೇದಾಗಮ'ದಲ್ಲಿ ನಮೂದಿಸಲಾಗಿದೆ. ಈ ವಿಷಯವನ್ನು ಮತ್ತಿಷ್ಟು ವೈಭವೀಕರಿಸಿ, ಶಿಲ್ಪರತ್ನದಲ್ಲಿ ವಿವರಿಸಲಾಗಿದೆ. ಅದನ್ನೆ ಮುಂಬಂದ ಶಿಲ್ಪಗಳು ತಮ್ಮ ಕೆತ್ತನೆಯ ಕೃತಿಗಳಲ್ಲಿ ಉಪಯೋಗಿಸಿದುದು ಶಿಲ್ಪಶಾಸ್ತ್ರದ ಬೆಳವಣಿಗೆಯ ಇತಿಹಾಸ ದಲ್ಲಿ ಕಂಡು ಬರುತ್ತದೆ.

'ನಾಗಾನಾಂ ವಕ್ಷತೇ ರೂಪಂ,
ನಾಭೇರೂರ್ಧ್ವ ನರಾಕೃತಿ,
ಸರ್ಪಾಕಾರಂ ಅಧೋಭಾಗಂ,
ಮಸ್ತಕೇ ಭೋಗ ಮಂಡಲಂ...

ಏಕಂ ಫಣಾತ್ರಯಂ ವಾಪಿ
ಪಂಚವಾ ಸಪ್ತವಾ ನವ
ದ್ವಿಜವ್ಹಾಸ್ತೇ ವಿಧಿತಬ್ಯಾ:
ಖಡ್ಗ ಚರ್ಮ ಕರೈರ್ಯುತಾ,'

(ರತ್ನಶಿಲ್ಪ ಅಧ್ಯಾಯ ೫)

ಈ ರೀತಿ, ಪ್ರತಿಮಾಶಾಸ್ತ್ರ ಹಾಗೂ ಶಿಲ್ಪಶಾಸ್ತ್ರಗಳಲ್ಲೂ ಕೂಡ ನಾಗಶಿಲ್ಪಕ್ಕೆ ಅರ್ಥ, ಗಾಂಭೀರ್ಯ, ಸಾಂಕೇತಿಕ

ಸೌಂದರ್ಯಗಳ ರೂಪರೇಷೆಗಳನ್ನು ಕೊಟ್ಟು, ನಾಗ ಹಾಗೂ ನಾಗಿನಿಯರಿಗೆಲ್ಲ ಅರ್ಧ ಮಾನವ ಶರೀರ ಹಾಗೂ ಅರ್ಧ ಸರ್ಪ ಶರೀರ ನೀಡಿ, ಶಾರೀರಿಕ ಸೌಂದರ್ಯದ ಉಬ್ಬು ತಗ್ಗುಗಳೊಂದಿಗೆ ಮತ್ತಷ್ಟು ಅವರು ಚೆಲುವರಾಗುವಂತೆ ಮಾಡಿದ್ದಾರೆ ನಮ್ಮ ಪ್ರಾಚೀನ ಶಿಲ್ಪಿಗಳು.

ಒಂದು, ಮೂರು, ಐದು, ಏಳು ಅಥವಾ ಒಂಬತ್ತು ಹೆಡೆಗಳನ್ನು ಹೊತ್ತು ನಾಗರುಗಳು ರೂಪಿಸಿಕೊಳ್ಳಲ್ಪಟ್ಟರು. ನಾಗನಿಗೆ ಇರುವ ಹೆಡೆಗಳಿಗಿಂತ ನಾಗಿನಿಗೆ ಎರಡು ಕಡಿಮೆ ಇರಬೇಕು ಎಂದು ನಿರ್ಧರಿಸಲಾಗಿದೆ. ಇದು ಆಗಣ ಪುರುಷ ಪ್ರಧಾನ ಸಾಮಾಜಿಕ ಪದ್ಧತಿಯನ್ನು ಎತ್ತಿ ತೋರಿಸುತ್ತದೆ.

'ಮಾಯಾಶಿಲ್ಪ'ದಲ್ಲಿ ಏಳು ಮಹಾ ನಾಗರುಗಳನ್ನು ಹೆಸರಿಸಿ, ಅವರಿಗೆ ಬೇರೆ ಬೇರೆ ಚಿಹ್ನೆ ಹಾಗೂ ಬಣ್ಣಗಳನ್ನು ದೃಢೀಕರಿಸಲಾಗಿದೆ ಪ್ರಕೃತಿಯಲ್ಲಿ ದೊರೆವ ನಾಗರ ಬಣ್ಣಗಳನ್ನು ಇಲ್ಲಿ ಹೊಂದಿಸಲಾಗಿದೆ.

**ವಾಸುಕಿ:** ಬಿಳಿಯ ವರ್ಣ ಹಾಗೂ ಕಂದು ಬಣ್ಣದ ಮೂರು ಗೆರೆಗಳು.

**ತಕ್ಷಕ:** ಕೆಂಪುಬಣ್ಣ ಹಾಗೂ ಹೆಡೆಯ ಮೇಲೆ ಸ್ವಸ್ತಿಕ ಚಿಹ್ನೆ.

**ಕಾರ್ಕೋಟಕ:** ಕಪ್ಪು ಬಣ್ಣ ಹಾಗೂ ಮೂರು–ಬಿಳಿಯ ಗೆರೆಗಳು.

**ಪದ್ಮ:** ಗುಲಾಬಿ ಬಣ್ಣ ಹಾಗೂ ಬಿಳಿಯ ಪಟ್ಟಿ.

**ಮಹಾಪದ್ಮ:** ಶ್ವೇತವರ್ಣ ಹಾಗೂ ತ್ರಿಶೂಲ.

**ಶಂಖಪಾಲ:** ಹಳದಿ ಬಣ್ಣ ಹಾಗೂ ಬಿಳಿ ಪಟ್ಟಿಗಳು

**ಕುಳಿತ:** ಕೆಂಪುಬಣ್ಣ ಹಾಗೂ ಅರ್ಧಚಂದ್ರಾಕೃತಿ.

ಈ ರೀತಿ ಏಳು ನಾಗರಗಳು. ಇವುಗಳಿಗೆ 'ಮಹಾ ನಾಗರಗಳು' ಎಂದು ಕರೆಯುತ್ತಾರೆ. ಇವು ಮಹಾ ಸರ್ಪಗಳು. ಪ್ರತಿಯೊಂದಕ್ಕೂ ಎರಡರಂತೆ ಸೀಳುನಾಲಗೆಗಳು ಇದ್ದು, ಇವು ಏಳು ಹೆಡೆಗಳುಳ್ಳವಾಗಿವೆ. ಮನುಷ್ಯನ ಆಕೃತಿಯ ತಲೆಯ ಮೇಲೆ ರತ್ನಾಲಂಕಾರವಿರಬೇಕು, ಮತ್ತು ದ್ವಿಬಾಹು ಗಳಲ್ಲಿ ಅಕ್ಷಮಾಲೆ ಹಾಗೂ ಕಮಂಡಲುಗಳು ಇರಬೇಕು ಎಂದು ನಿಗದಿಪಡಿಸಲಾಯಿತು. ಹೀಗಾಗಿ ಮಾನವ ದೇಹವು ಸೌಂದರ್ಯದೊಂದಿಗೆ, ಆ ಸಮಕಾಲೀನ ದೇಹಾಭರಣಗಳಿಂ ದೊಡಗೂಡಿ ನಾಗಶಿಲ್ಪಗಳು 'ನಾಗರಾಜ' 'ನಾಗರಾಣಿ' ಎಂಬ ಹೆಸರಿನಲ್ಲಿ 'ಪ್ರಿಯ ದಂಪತಿಗಳಾ'ಗಿ, ಸಾಲಂಕೃತ ರಾಗಿ ಭಾರತೀಯ ಇತರ ದೇವತಾ ಶಿಲ್ಪಗಳಂತೆ ಶೋಭಿಸ ಲಾರಂಭಿಸಿದರು.

ವರುಣ ಪುರಾಣದಲ್ಲಿ ಹೇಳಿದಂತೆ, ಶ್ರಾವಣಮಾಸದ ಶುಕ್ಲ ಪಕ್ಷದ ಪಂಚಮಿ ದಿನ ಹುಟ್ಟಿದುದರಿಂದ, ಇಡೀ ಭರತ ಖಂಡದಲ್ಲಿ ಅಂದು ಅವರ ಜನ್ಮದಿನ ಆಚರಿಸಲು "ನಾಗಪಂಚಮಿ" ಎಂಬ ಹಬ್ಬ ಪ್ರಚಲಿತವಾಯಿತು. ಅಂದು ದ್ರಾವಿಡ ಬ್ರಾಹ್ಮಣರನ್ನು ಬಿಟ್ಟರೆ, ಇಡೀ ದೇಶವೇ ನಾಗಪೂಜೆ ಯನ್ನು ಆಚರಿಸುತ್ತದೆ. ಕರ್ನಾಟಕ ಹಾಗೂ ಮಹಾರಾಷ್ಟ್ರ ಗಳಲ್ಲಿ 'ನಾಗಚೇತಿ' ಎಂದು ಚತುರ್ಥಿಯ ದಿನ ಒಂದು ದಿನ ಮೊದಲೇ ಮಹಿಳೆಯರು ನಾಗಪೂಜೆ ಕೈಕೊಳ್ಳುತ್ತಾರೆ.

ಇನ್ನು ಭಾರತದಲ್ಲಿ, ವಿವಿಧ ಭಾಗಗಳಲ್ಲಿ, ನಾಗಸಂಪ್ರ ದಾಯದ ಜನ ವಾಸಿಸುತ್ತಿದ್ದಾರೆ. ಈಶಾನ್ಯ ಭಾಗದಲ್ಲಿ ಅಸಾಮ್, ಮಣಿಪುರ, ಚಿತ್ತಗಾಂಗ್, (ಮಹಾಭಾರತದ ಚಿತ್ರಾಂಗದೆಯ ನಾಡು), ನಾಗಾಲ್ಯಾಂಡ್ ಮುಂತಾದವುಗಳಲ್ಲಿ ಅವರು ವಾಸವಾಗಿದ್ದಾರೆ. ದಕ್ಷಿಣ ಭಾರತದಲ್ಲಿ ಕೇರಳವು ಮಾತ್ರ ಪ್ರಧಾನ ನಾಡೆಂದು, ಅಲ್ಲಿ ನಾಗಕನ್ನಿಕೆಯರ ರಾಜ್ಯವೆಂದು ಪರಂಪರೆಯು ಹೇಳುತ್ತದೆ. ಕೇರಳದ 'ನಾಯರ್' ಮೂಲತಃ ನಾಗರೇ. ಬುದ್ಧನ ಪ್ರಭಾವದಿಂದ ಪ್ರಾಚೀನ ಭಾರತದಲ್ಲಿ ನಾಗಸಂಪ್ರದಾಯದಿಂದ ಬೌದ್ಧ ಸಂಪ್ರದಾಯಕ್ಕೆ ಬಹಳಷ್ಟು ಜನ ವಾಲಿದರೆಂದು ಕೆಲ ಇತಿಹಾಸಕಾರರ ಅಭಿಪ್ರಾಯ. ಬರ್ಮಾ, ಸಿಲೋನ್, ಕಾಂಬೋಡಿಯಾ, ಚೀನಾ, ಜಪಾನ, ಜಾವಾ, ಸುಮಾತ್ರ, ಬೋರ್ನಿಯೋವರೆಗೆ ನಾಗಕುಲ ಸಂಪ್ರದಾಯ ಹಬ್ಬಿದೆ ಎಂಬುದು ಇತಿಹಾಸಕಾರರ ಮತ, ಅಲ್ಲಿ ದೊರೆವ ವಾಸ್ತುಶಿಲ್ಪ, ಸಂಪ್ರದಾಯ ಹಾಗೂ ಆಚರಣೆ ಗಳು ಇದನ್ನು ದೃಢೀಕರಿಸುತ್ತವೆ.

ಇನ್ನು ಕರ್ನಾಟಕದ ಸಮೀಕ್ಷೆ ಕೈಕೊಂಡರೆ, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ 'ನಾಗವನ'ಗಳೆಂದು ಪ್ರತಿಯೊಂದು ಊರಿಗೂ ಪ್ರಾಯಶಃ ವನವಿದ್ದು, ನಾಗ ಪಂಚಮಿಯ ದಿನ ಪುರುಷರಿಗೆ ಮಾತ್ರ ಆ ವನಗಳಲ್ಲಿ ನಾಗಪೂಜೆಗಾಗಿ ಪ್ರವೇಶವಿರುತ್ತದೆ. ಪುತ್ರಪ್ರಾಪ್ತಿ ಆಗಲೆಂದು ಅಶ್ವತ್ಥವೃಕ್ಷದಡಿಯಲ್ಲಿ ನಾಗರಕಲ್ಲುಗಳನ್ನು ಮಹಿಳೆಯರು ಪ್ರತಿಷ್ಠಾಪಿಸುವ ರೂಢಿ ಇದೆ. ಹಚ್ಚ ಹಸುರಿನ ಶ್ರಾವಣದಲ್ಲಿ ಹುಲ್ಲಿನಾ ಪೊದೆಯಲ್ಲಿ ಕುಳಿತ ನಾಗನನ್ನು ಸಂಪ್ರೀತಗೊಳಿ ಸುವುದು ಈ ಪೂಜೆಯ ವ್ಯವಹಾರಿಕ ಅರ್ಥವೂ ಆಗಿರ ಬಹುದು. ಹುತ್ತವನ್ನೂ ಪೂಜಿಸುವ ವಾಡಿಕೆ, ನಾಗರಿಗೆ ಹಾಲೆರಿಯುವ ರೂಢಿ, ಮನದಾಳದಲ್ಲಿ ಹುದುಗಿದ ಭಯವನ್ನು ಓಡಿಸಿ, ನಾಗನ ಬಗ್ಗೆ ಆದರ ಗೌರವ ಸಾಮೀಪ್ಯ ಬೆಳೆಸುವ ವಿಧಿ ಇದು.

ಕನ್ನಡ ನೆಲದಲ್ಲಿ ಪ್ರಾಕೃತಿಕ ಮೂರು ಪಟ್ಟಿಗಳು ೫೦೦ ಕ್ರಿಮೀ. ನಂತೆ ದಕ್ಷಿಣೋತ್ತರವಾಗಿ ಹಬ್ಬಿವೆ. ತೀರ ಪಶ್ಚಿಮದಲ್ಲಿ ಕರಾವಳಿ ಪಟ್ಟಿ, ಅದರ ಪೂರ್ವಕ್ಕೆ ಹಚ್ಚಹಸುರಿನ ನಿಬಿಡಾರಣ್ಯದ ಕೊಂಕಣಪಟ್ಟಿ ಹಾಗೂ ಪೂರ್ವದ ಬೆಳವಲ ನಾಡಿನ ಪಟ್ಟಿ, ಈ ಮೂರೂ ಪಟ್ಟಿಗಳಲ್ಲಿ ಕರಾವಳಿ ಹಾಗೂ ಕೊಂಕಣ ಪ್ರದೇಶಗಳಲ್ಲಿ ಅರಣ್ಯ ಪ್ರದೇಶದಲ್ಲಿ ಹಾವುಗಳ ಸಂಖ್ಯೆ ಹೆಚ್ಚು, ಪೂರ್ವದ ಬಯಲು ನಾಡಿನಲ್ಲಿ ಅವು ಕಡಿಮೆ. ಹಸಿರು ಪೊದೆಗಳಲ್ಲಿ ಹಾವುಗಳ ವಾಸ್ತವ್ಯ ಬಯಲಲ್ಲಿ ಅವುಗಳ ಬದುಕು ಕಠಿಣ.

ಹೀಗಾಗಿ, ಕರಾವಳಿ ಹಾಗೂ ಕೊಂಕಣಗಳಲ್ಲಿ ಹಾವುಗಳ ಭಯ ಹೆಚ್ಚು. ಅವುಗಳಿಂದ ಕೃಪೆಗೊಳ್ಳಲು, ಭೀತಿಯನ್ನು ಕಡಿಮೆ ಮಾಡಿಕೊಳ್ಳಲು ಅವುಗಳ ಪೂಜೆ, ಪುನಸ್ಕಾರಗಳೂ ಹೆಚ್ಚು. ಪ್ರತಿ ಊರಿಗೆ 'ನಾಗರ-ಕಟ್ಟೆಗಳು', 'ನಾಗವನಗಳು', 'ನಾಗಬನಗಳು', ಇತ್ಯಾದಿ ವಿಶೇಷವಾಗಿ ಅರಣ್ಯದ ಕಾಯ್ದಿಟ್ಟ ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಇವು ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಬಹಳವಾಗಿ ಇದ್ದುದನ್ನು ಸಮೀಕ್ಷಿಸಲಾಗಿದೆ.

ಕರ್ನಾಟಕದ ಹದಿನೆಂಟು ಸಾವಿರ ಹಳ್ಳಿಗಳಲ್ಲಿ ನಾಗನೂರು, ನಾಗೂರು, ನಾಗಲಾಪುರ, ನಾಗಪುರ, ನಾಗಸಂದ್ರ, ನಾಗಪಟ್ಟಣ, ನಾಗಲಾವಿ, ನಾಗರಕಟ್ಟೆ, ನಾಗಸಂಪಿಗೆ, ನಾಗರಹೊಳೆ, ನಾಗತೀರ್ಥ, ನಾಗಮಂಡಲ ಇತ್ಯಾದಿ ಹೆಸರುಗಳುಳ್ಳ ತಾಣಗಳು ಒಂದು ಸಾವಿರಕ್ಕೆ ಸಮೀಪ ಸಂಖ್ಯೆಯಲ್ಲಿವೆ. ಎಷ್ಟೋ ಬಾವಿಗಳು, ಕೆರೆಗಳು, ತೀರ್ಥಗಳು, ಪುಷ್ಕರಣಿಗಳು 'ನಾಗ'ನ ಹೆಸರಿಂದ ಕರೆಯಲ್ಪಡುತ್ತಿವೆ.

ಕರ್ನಾಟಕದ ಉತ್ತರ ಕನ್ನಡ ದಕ್ಷಿಣ ಕನ್ನಡ, ಶಿವಮೊಗ್ಗ, ಇತ್ಯಾದಿ ಜಿಲ್ಲೆಗಳ ಪ್ರದೇಶವು ಪ್ರಾಚೀನ ಕರ್ನಾಟಕದಲ್ಲಿ 'ನಾಗರಖಂಡ'ವೆಂದೂ, 'ಅಹಿಚ್ಛತ್ರ' (ಅಹಿ= ಹಾವು) ವೆಂದೂ ಕರೆಯಲ್ಪಟ್ಟಿದೆ. ಬನವಾಸಿಯ ಶಾತವಾಹನರ ಕಾಲದ ಶಿವಸ್ಕಂದ ನಾಗಶ್ರೀ (೨೦೦ ಕ್ರಿಶ) ಶಾಸನವು 'ನಾಗ' ಸಂಪ್ರದಾಯವನ್ನು ಎತ್ತಿ ತೋರಿಸುತ್ತದೆ. (ಡಾ॥ ಎಚ್.ಆರ್. ರಘುನಾಥಭಟ್ ಅವರ ಸಂಶೋಧನೆ)

ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯ ಕ್ಷೇತ್ರವು ಬಹಳ ಪ್ರಸಿದ್ಧವಾದ 'ನಾಗ' ಪೂಜೆಯ ತಾಣ'. ಬೆಟ್ಟದ ಮೇಲೆ 'ನಾಗಹುತ್ತಿ'ನ ದೇವಸ್ಥಾನ ನಿರ್ಮಿಸಲಾಗಿದೆ. ಅಲ್ಲಿ ವಲ್ಮಿಕವೇ (ಹುತ್ತ) ಆರಾಧ್ಯಮೂರ್ತಿಯಾಗಿರುವ ಆದಿಸುಬ್ರಹ್ಮಣ್ಯ. ಆದಿಶಂಕರರ ಹಾಗೂ ಮಧ್ವಾಚಾರ್ಯರ ಕಾಲದಷ್ಟು ಹಿಂದೆ ಇದು ಪ್ರಸಿದ್ಧವಾಗಿತ್ತು. ಕುಕ್ಕೆ ಪಟ್ಟಣವೆಂದೂ ಇದಕ್ಕೆ ಹೆಸರು, ಪಕ್ಕದಲ್ಲಿ ಹರಿವ 'ಕುಮಾರಧಾರಾ' ನದಿ, ಸುತ್ತಲಿನ ಹಚ್ಚ ಹಸುರಿನ ಬೆಟ್ಟ ಇದಕ್ಕೆ ಸೃಷ್ಟಿ ಸೌಂದರ್ಯ ತಂದಿವೆ. '(ಚಿತ್ರ ನೋಡಿ).

ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದಲ್ಲಿ 'ನಾಗರ ಓಣಿ' ಎಂಬ ಭಾಗವಿದ್ದು, ಅಲ್ಲಿ ನಾಗರ ದೇವಸ್ಥಾನವೇ ಇದೆ. ಕುಮಟಾ ತಾಲೂಕಿನ ಕತ್ತಗಾಲ, ಅಂತರವಳ್ಳಿ, ಹೊಲನಗದ್ದೆ, ಇತ್ಯಾದಿಗಳಲ್ಲಿ **'ನಾಗರ ಗುತ್ತು'** ನಾಗಶಿಲ್ಪಗಳಿವೆ. ಹೊಲನಗದ್ದೆಯಲ್ಲಿ **'ಕೀಲುನಾಗ'** ಎಂಬ ಹೆಸರಿನ ನಾಗರ ಕಲ್ಲು ಇದ್ದು ಇದನ್ನು **'ಮುಕ್ತಿ'** ಎಂಬ ಕೆಳವರ್ಗದ ಜನಾಂಗದವರು ಪೂಜಿಸುತ್ತಾರೆ. ಆಗ ಉಚ್ಚವರ್ಣೀಯರು ಅವರಿಗೆ ಸುಗ್ರಾಸ ಭೋಜನ ಹಾಕುತ್ತಾರೆ.

ಮೈಸೂರು-ಹುಣಸೂರು ಮಾರ್ಗದಲ್ಲಿ 'ಕಂಳಕಂಬ' ಗ್ರಾಮ ಹಾಗು ಬೆಂಗಳೂರು ಬಳಿ ವಿಶಾಲವಾಗಿ ಹರಡಿದ ಭವ್ಯ ಆಲದ ಮರದ ಕೆಳಗಡೆ ಸಾಕಷ್ಟು ನಾಗಕಲ್ಲುಗಳು ಪೂಜಿಸಲ್ಪಡುತ್ತವೆ.

"ಹುಬ್ಬಳ್ಳಿ ತಾಲೂಕಿನ ಕುಮಾರವ್ಯಾಸನ ಊರು ಕೋಳಿವಾಡ. ಅದರ ಸಮೀಪ 'ಕಿಂದರಿ' ಗುಡ್ಡ, ಇಲ್ಲಿ ನಾಗಪೂಜೆ ವಿಶೇಷ, ನಾಗಪಂಚಮಿಗೆ ದೊಡ್ಡ ಜನಸಂದಣಿ. ಅಲ್ಲಿ ನಾಗಗಳು ಬಹಳ (ಜೀವಂತ), ನಾಗರಕಲ್ಲುಗಳೂ ಇವೆ" (ಡಾ॥ ಮಂದಾಕಿನಿ ಪುರೋಹಿತ)

ಬೆಳವಲ ನಾಡಿನಲ್ಲಿ ಮಹತ್ತರ ಐತಿಹಾಸಿಕ ತಾಣಗಳಲ್ಲಿ ನಾಗಪ್ರತಿಷ್ಠೆಯ ಅಶ್ವತ್ಥಕಟ್ಟೆಗಳು. ಬಾದಾಮಿ, ಐಹೊಳೆ ಕಟಗೇರಿ, ಗದಗ, ಡಂಬಳ, ಲಕ್ಕುಂಡಿ ಇತ್ಯಾದಿ. ಹೀಗೆ ಇನ್ನೂ ಹತ್ತು ಹಲವಾರು ನೂರಾರು ಊರುಗಳು ಶಿಲ್ಪದ ನಾಗನಿಗಾಗಿ ಪ್ರಸಿದ್ಧ. (ಕರ್ನಾಟಕ ಬೇರೆ ಬೇರೆ ಜಿಲ್ಲೆಗಳಿಂದ ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ ವಿದ್ವಾಂಸರು 'ತಾವು ಕಂಡ ನಾಗರ ಕಟ್ಟೆಗಳ ಬಗ್ಗೆ' ಹೆಚ್ಚಾಗಿ ಮಾಹಿತಿ ಕೊಡಲು ವಿನಂತಿಸಲಾಗಿದೆ')

ಕನ್ನಡನಾಡಿನಲ್ಲಿ ಶಿಲೆಯಲ್ಲಿ ಮೂಡಿಬಂದ ನಾಗ ನಡೆದ ದಾರಿ ದೀರ್ಘ; ಪುಟ್ಟ, ಅಶ್ವತ್ಥಕಟ್ಟೆಯ ನಾಗನಿಂದ ಹಿಡಿದು, (೨' ಎತ್ತರ) ವಿಜಯನಗರ- ಹಂಪಿಯ, ಹೆಡೆ ನೆರಳಿನ ಲಕ್ಷ್ಮೀನರಸಿಂಹನವರೆಗೆ (೨೦' ಎತ್ತರ) ಮುಗಿಲೆತ್ತರಕ್ಕೆ ನಾಗ ಬೆಳೆದಿದ್ದಾನೆ. (ಚಿತ್ರ ನೋಡಿ).

ಅದಾಗಿ, ಪಕೃತಿದತ್ತವಾದ ಭೀಷಣ ಭಯಾನಕ ರೌದ್ರ ರೂಪದಿಂದ ನಾಗ ಅನಾದಿಯಿಂದ ಭಾರತೀಯ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗವಾಗಿ ಹೆಮ್ಮೆಯ ಹೆಡೆ ಎತ್ತಿ

ಮೆರೆದಿದೆ. ಇದಕ್ಕೆ ಭಯವೂ ಭಕ್ತಿಯೂ ಕಾರಣವಾಗಿರಲು ಸಾಕು. ಭಾರತೀಯ ಪ್ರಾಚೀನ ಸಾಹಿತ್ಯ ಶಿಲ್ಪ ಹಾಗೂ ಸಾಮಾಜಿಕ ಹರಿಹಬ್ಬಗಳಲ್ಲಿ, ಇಡಿಯಾದ ಬದುಕಿನಲ್ಲಿ, ಸಾಕಷ್ಟು ಪ್ರಭಾವ ಬೀರಿ ನಾಗ ತನ್ನದೇ ಆದ, ಮಹತ್ತರಸ್ಥಾನ ಪಡೆದಿದೆ. ಅದಕ್ಕೆ ಪ್ರತಿಯಾಗಿ, ಅಂಥ ಹಾಲಾಹಲವಿದ್ದ ಪ್ರಾಣಿಯನ್ನು ದೈವವೆಂದು ಪೂಜಿಸುವ ಭಾರತೀಯನ ಹೃದಯ ವೈಶಾಲ್ಯವು ಅವನ ಜೀವನದಷ್ಟೇ ವಿಶಾಲ– ಕಣ್ಣಿಗೆ ಕಾಣುವ ಬೆಟ್ಟ, ಗುಡ್ಡ, ಹರಿವ ನೀರು, ಹಾರುವ ಪಕ್ಷಿ, ಅಲೆದಾಡುವ ಕಾಡು ಮೃಗಗಳು, ದೇವನೆಂದು ದೇವದೂತರೆಂದು ಭಯಭಕ್ತಿಯಿಂದ ನಂಬಿ ಕಣ್ಣಿಗೆ ಕಾಣದ ಹಾಗೂ ಕಾಣುವ ವಸ್ತುವಿನಲ್ಲೂ ಚೈತನ್ಯವಿದೆ ಎಂದು ನಂಬಿ, ಹಾವು, ಗಿಡ, ಮರ, ನೀರು ಗಾಳಿ ಕಲ್ಲು ಸೂರ್ಯ ಚಂದಿರರನ್ನು ಪೂಜಿಸುವ ಭಾರತೀಯ ದೈವಿಕ ಕಲ್ಪನೆಯನ್ನು ಸಾಸಿರ ನಾಲಿಗೆಯ ಆದಿಶೇಷನಿಗೂ ಬಣ್ಣಿಸುವುದು ಅಸಾಧ್ಯ.

(ಚಿತ್ರಗಳು: ಕೃಪೆ: ಭಾರತೀಯ ಪುರಾತತ್ವ ಸರ್ವೇಷಣ, ಹಾಗೂ ವಿದ್ವಾಂಸರುಗಳಾದ ಡಾ॥ ಮಂದಾಕಿನಿ ಪುರೋಹಿತ, ವಿ.ಸಿ. ಚೌಶೆಟ್ಟಿ ಡಾ॥ ಶಾಲಿನಿ ರಘುನಾಥ, ಡಾ॥ ಜಿ.ಆರ್. ಹೆಗಡೆ, ಶ್ರೀಮತಿ, ರಾಧಾ ಬುರುಡೆ, ಡಾ॥ ಚೆನ್ನಕ್ಕ ಪಾವಟೆ, ಡಾ॥ ಎ.ಕೆ. ಶಾಸ್ತ್ರೀ, ಜಿ.ಆರ್. ಹೆಗಡೆ, ಡಾ॥ ಗಣಪತಿ ಭಟ್ ಇವರೊಂದಿಗೆ ಉತ್ತರ ಕನ್ನಡ ಜಿಲ್ಲೆಯ ನಾಗ ಸಂಪ್ರದಾಯದ ಬಗ್ಗೆ ಚರ್ಚೆ, ಇವರುಗಳಿಗೆಲ್ಲ ಈ ಲೇಖಕ ಋಣಿ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Acharya, P.C. : *History of Hindu Architecture.*

೨. Acharya P.K. : *Indian Iconography* (part I &II).

೩. Sivaram Murti, C, : *The Art of India.*

೪. Gopinath Rao, T A, : *The Hindu Iconography* (part I & part II).

೫. Burjess. J : *Report on Ellora Cave Temples,* Brahmanical and Jaina cave temples in Western India.

೬. ರಾಮಚಂದ್ರರಾವ್, ಎಸ್.ಕೆ. : **ಕನ್ನಡ ನಾಡಿನ ಧಾರ್ಮಿಕ ಪರಂಪರೆ.**

೭. ಜೋಶಿ ಎಸ್.ಕೆ : **ನಾಗನೆಲೆ, ಭಕ್ತಸೆಲೆ...**,(ಸಾಪ್ತಾಹಿಕ ಸೌರಭ. ಸಂಯುಕ್ತ ಕರ್ನಾಟಕ).

೮. ರಾಮಚಂದ್ರರಾವ್. ಎಸ್.ಕೆ : **ಭಾರತೀಯ ಪ್ರತಿಮಾ ಶಾಸ್ತ್ರ.**


ಗಾಂಧಾರ ಸಂಸ್ಕೃತಿಯ ಉಗಮ ಕ್ರಿ.ಪೂ. ೨೫೦ರ ಸುಮಾರಿಗೆ ಆಯಿತೆಂದು ಹೇಳಬಹುದು. ಕ್ರಿ.ಪೂ. ೧೬೫ರಿಂದ ೧೦೦ರವರೆಗೆ ಕುಷಾಣರು ಈ ರಾಜ್ಯವನ್ನು ಗೆದ್ದುಕೊಂಡು ಇಲ್ಲಿ ಆಳುತ್ತಿದ್ದಾಗಲೂ ಬ್ಯಾಕ್ಟ್ರಿಮನ್ ಗ್ರೀಕರ ಪ್ರಭಾವ ಮರೆಯಾಗಲಿಲ್ಲ. ಈ ವೇಳೆಗೆ ಜನರೆಲ್ಲ ಹೆಚ್ಚೂ ಕಡಮೆ ಬೌದ್ಧ ಧರ್ಮಾನುಯಾಯಿಗಳೇ ಆಗಿದ್ದರು. ಈ ಅವಧಿಯಲ್ಲಿ ಮೈದಳೆದ ವಾಸ್ತು ಮತ್ತು ಶಿಲ್ಪ ಪ್ರಕಾರಗಳು ಗ್ರೀಕರ ಪ್ರಭಾವವನ್ನು ಅಳವಡಿಸಿಕೊಂಡ ಬೌದ್ಧ ಧರ್ಮದವು. ಈ ಗಾಂಧಾರ ಕಲೆಯನ್ನು ಗ್ರೀಕೋ–ಬೌದ್ಧ ಎಂದು ನಿರ್ದೇಶಿಸುತ್ತಾರೆ. ವಾಯುವ್ಯ ಪ್ರಾಂತ್ರದಲ್ಲಿ ಗಾಂಧಾರ ಕಲೆ ಆರಂಭವಾಗಿ ಬೆಳೆಯುತ್ತಿರುವಾಗಲೇ ಕುಷಾಣ ರಾಜರಾಗಿದ್ದ ಕನಿಷ್ಕ, ಹುವಿಷ್ಕ ಮೊದಲಾವರ ಪ್ರೋತ್ಸಾಹದಿಂದಲೇ ಮಥುರಾ ಕಲೆಯೂ ಮೈದಳೆಯಿತು. ಗಾಂಧಾರ ಕಲೆಯ ಪ್ರಭಾವ ಮಥುರಾ ಪ್ರಕಾರದಲ್ಲಿ ಕೂಡಿಕೊಂಡು ಬಂದಿತು. ಆದರೆ ಗ್ರೀಕರ ಅತಿ ವಾಸ್ತವಿಕತೆಯು ಮಥುರಾ ಶಿಲ್ಪಿಗಳಿಗೆ ಹಿಡಿಸಲಿಲ್ಲ. ಅಂತಾಗಿ ಬುದ್ಧನನ್ನು ಭಾರತೀಯ ಕಲ್ಪನೆಯ ದೇವಮಾನವನಂತೆ ಅಳವಡಿಸಿ ಸಾರನಾಥ, ಅಮರಾವತಿ ಆ ಕಲಾಪ್ರಕಾರದ ನಿದರ್ಶನವಿಟ್ಟರು. ಕಾಲಕ್ರಮೇಣ ಮುಸಲ್ಮಾನರ ಧಾಳಿಗೆ ಮಥುರಾ ನಗರ ತುತ್ತಾಗಿ ಕಲೆಗಾರಿಕೆ ಎಲ್ಲ ನಾಶವಾಯಿತು. ಗಾಂಧಾರ ಪದ್ಧತಿಯ ಮಾನವಾದರ್ಶವನ್ನು ಅರಗಿಸಿಕೊಂಡು ಮಥುರಾ ಪ್ರಕಾರದ ಕಲಾಭಿವ್ಯಕ್ತಿ ಮಾತ್ರ ಸಂಪೂರ್ಣವಾಗಿ ಭಾರತೀಯವೇ ಆಗಿದೆ.

**(ಸಾ.ಕೃ.ರಾ : ಮೂರ್ತಿಶಿಲ್ಪ ನೆಲೆ–ಹಿನ್ನೆಲೆ)**

ಡಾ. ಆರ್.ಎಚ್. ಕುಲಕರ್ಣಿ*
ಡಾ. ಎಂ.ಪಿ. ಮಹದೇವಯ್ಯ**

# ತಿರುಮಕೂಡ್ಲಿನ ಅಪರೂಪದ ಕಾಷ್ಠ ಶಿಲ್ಪ

ತಿರುಮಕೂಡಲು ಅಥವಾ ಟಿ. ನರಸೀಪುರ ಮೈಸೂರು ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಕೇಂದ್ರ ಹಾಗೂ ಇತಿಹಾಸ ಪ್ರಸಿದ್ಧ ಕೇಂದ್ರವೂ ಆಗಿದೆ. ಪ್ರಸ್ತುತ ಪ್ರಬಂಧವು ತಿರುಮಕೂಡ್ಲಿನ ಶ್ರೀ ಅಗಸ್ತೇಶ್ವರ ಮತ್ತು ಶ್ರೀ ಹನುಮಂತೇಶ್ವರ ದೇವಾಲಯಗಳ ಶಿವಲಿಂಗಗಳ ಸ್ಥಾಪನೆಯ ಹಿನ್ನೆಲೆಯಲ್ಲಿರುವ ಸ್ಥಳ ಪುರಾಣ ಕುರಿತಾಗಿದೆ.

ಈ ಎರಡೂ ದೇವಾಲಯಗಳು ಕ್ರಿ.ಶ. ೧೦-೧೧ನೇ ಶತಮಾನದಲ್ಲಿ ನಿರ್ಮಾಣಗೊಂಡಿವೆ.[೨] ಇವುಗಳು ಗಂಗ-ಚೋಳ ವಾಸ್ತುವನ್ನು ಹೊಂದಿದ್ದು, ಅಗಸ್ತೇಶ್ವರ ದೇವಾಲಯವು ವಿಶಾಲವಾಗಿದ್ದು ದ್ರಾವಿಡ ವಾಸ್ತು ವಿನ್ಯಾಸ ಹೊಂದಿದೆ. ಈ ದೇವಾಲಯವು ಪ್ರಾಯಶಃ ಪ್ರಾರಂಭದಲ್ಲಿ ಗಂಗರ ಕಾಲದಲ್ಲಿ ನಿರ್ಮಾಣವಾಗಿ ಚೋಳ-ಹೊಯ್ಸಳರ ಕಾಲದಲ್ಲಿ ಹಲವಾರು ಬದಲಾವಣೆಗಳನ್ನು ಹೊಂದಿದೆ.

ಇಲ್ಲಿನ ಅಗಸ್ತೇಶ್ವರ ಮತ್ತು ಹನುಮಂತೇಶ್ವರ ದೇವಾಲಯಗಳು ಕ್ರಮವಾಗಿ ಅಗಸ್ತ್ಯ ಮಹರ್ಷಿಗಳು ಮತ್ತು ಶ್ರೀರಾಮದೂತ ಹನುಮಂತನ ಹೆಸರಿನಲ್ಲಿವೆ. ಈ ದೇವಾಲಯಗಳಲ್ಲಿರುವ ಶಿವಲಿಂಗಗಳನ್ನು ಅಗಸ್ತ್ಯ ಮತ್ತು ಹನುಮಂತರ ಹೆಸರುಗಳ ಮೇಲೆ ಕರೆಯಲಾಗುತ್ತಿದೆ. ಇವುಗಳ ಸ್ಥಾಪನೆಯ ಹಿಂದೆ ರೋಚಕ ಕಥೆ ಇದೆ. ಈ ಕಥೆಯನ್ನು ಕೆಲವೇ ಕೆಲವು ಆಕೃತಿಗಳಲ್ಲಿ ಚಿತ್ರಿಸುವುದರ ಮೂಲಕ ಕಲಾವಿದನೋರ್ವನು ಕೆತ್ತಿದ ರಥದ ಕೆಳ ಅಡ್ಡಪಟ್ಟಿಕೆಯಲ್ಲಿ ಸ್ಥಳ ಪುರಾಣದ ದೃಶ್ಯಾವಳಿಗಳನ್ನು ತೋರಿಸಲಾಗಿದೆ.

ಈ ಸ್ಥಳದಲ್ಲಿ ಅಗಸ್ತ್ಯ ಮಹರ್ಷಿಗಳು ಒಂದೊಮ್ಮೆ ಬಂದಾಗ ಇಲ್ಲಿನ ಸಂಗಮ ತೀರದಲ್ಲಿ ಅವರು ಶಿವಪೂಜೆ ಮಾಡಬಯಸಿದರು. ಆದರೆ ಶಿವಲಿಂಗವೇ ಇಲ್ಲದ ಈ ಸ್ಥಳದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಲು ಉದ್ದೇಶಿಸಿದರು. ಅದಕ್ಕಾಗಿ ನರ್ಮದಾ ನದಿ ತೀರದಿಂದ ಶಿವಲಿಂಗವನ್ನು ತರಬೇಕಾಗಿತ್ತು. ಅವರು ಪ್ರತಿಷ್ಠಾಪಿಸಲು ಉದ್ದೇಶಿಸಿದ್ದ ಮುಹೂರ್ತವು ಶೀಘ್ರದಲ್ಲೇ ಇದ್ದು, ಸಾಮಾನ್ಯ ಮನುಷ್ಯರು ತರುವುದು ಸಾಧ್ಯವಾಗದ ಕೆಲಸವಾಗಿತ್ತು. ಅದಕ್ಕಾಗಿ ಹನುಮಂತನನ್ನು ನರ್ಮದೆಯ ತೀರಕ್ಕೆ ಕಳಿಸಿ ಸಮಯ ನಿಗದಿಪಡಿಸಿ ಶಿವಲಿಂಗವನ್ನು ತರಲು ಕೋರುತ್ತಾರೆ. ಅವನು ಲಿಂಗವನ್ನು ತಂದಮೇಲೆ ಅದನ್ನೇ ಪ್ರತಿಷ್ಠಾಪಿಸಿ ಪೂಜೆ ಮಾಡುವ ಉದ್ದೇಶ ಅವರದ್ದಾಗಿತ್ತು. ಆದರೆ ಈ ಕಾರ್ಯದಲ್ಲಿ ಸಾಕಷ್ಟು ಕಾಲವು ವ್ಯಯವಾಯಿತು. ಅವರು ನಿಗದಿಪಡಿಸಿದ ಸಮಯವು ಮುಗಿಯುತ್ತಾ ಬಂದಿತ್ತು. ಮುಹೂರ್ತವು ಮುಗಿಯುತ್ತಲಿತ್ತು. ಇದಕ್ಕಾಗಿ ಅಗಸ್ತ್ಯರು ಮರಳಿನ ಶಿವಲಿಂಗ ಮಾಡಿ ಅದನ್ನೇ ಪೂಜೆ ಮಾಡಿ ಪ್ರತಿಷ್ಠಾಪಿಸಿಬಿಟ್ಟರು. ಅಷ್ಟರಲ್ಲೇ ಹನುಮಂತನು ಶಿವಲಿಂಗ ವನ್ನು ನರ್ಮದೆಯ ತೀರದಿಂದ ತೆಗೆದುಕೊಂಡು ಬರುತ್ತಾನೆ. ಆಗಲೇ ಸ್ಥಾಪಿತವಾದ ಶಿವಲಿಂಗವನ್ನು ನೋಡಿ ಕೋಪೋದ್ರಿಕ್ತನಾದ ಹನುಮಂತನು ಅಗಸ್ತ್ಯರು ಸ್ಥಾಪಿಸಿದ್ದ ಮರಳು ಲಿಂಗದ ಮೇಲೆ ಮುಷ್ಠಿ ಪ್ರಹಾರ ಮಾಡುತ್ತಾನೆ. ಅವನ ಈ ಕೆಲಸದಿಂದ ಶಿವಲಿಂಗದ ಮುಖಭಾಗದಲ್ಲಿ ಮೂರು ಕುಳಿಗಳಾಗುತ್ತವೆ ಮತ್ತು ಮಧ್ಯಭಾಗದಲ್ಲಿ ಲಂಬವಾಗಿ ಸೀಳುವಿಕೆಯು ನಾಭಿಯವರೆಗೂ ಆಗುತ್ತದೆ.[೩] ವಿಶೇಷವೆಂದರೆ, ಇಂದಿನ ಅಗಸ್ತ್ಯೇಶ್ವರ ಲಿಂಗದ ಮುಖಭಾಗದಲ್ಲಿ ಕುಳಿಗಳಿವೆ. ಇವುಗಳಲ್ಲಿ ತೀರ್ಥವು ಒಸರುತ್ತದೆ. ಅದರಿಂದ ಸಂಗ್ರಹಿಸಿದ ತೀರ್ಥವನ್ನೇ ಅರ್ಚಕರು ಇಂದಿಗೂ ಭಕ್ತರಿಗೆ ನೀಡುವುದು.

ಆದರೆ ಅಗಸ್ತ್ಯರು ಹನುಮಂತನ ಕೋಪವನ್ನು ಶಮನಗೊಳಿಸಿ ಅವನು ತಂದ ಶಿವಲಿಂಗವನ್ನು ಹನುಮಂತೇಶ್ವರ ಎಂಬ ಹೆಸರಿನಿಂದಲೇ ಪ್ರತಿಷ್ಠಾಪಿಸಿದರು. ಈ ಲಿಂಗವು ಹನುಮಂತೇಶ್ವರ ಶಿವಲಿಂಗವಾಯಿತು. ಅಗಸ್ತ್ಯರು ಸ್ಥಾಪಿಸಿದ ಮರಳು ಲಿಂಗವು ಅಗಸ್ತ್ಯೇಶ್ವರವಾಯಿತು. ಈ ಸನ್ನಿವೇಶದ ಘಟನೆಯೇ ಎರಡೂ ದೇವಾಲಯಗಳ ಹಿನ್ನೆಲೆಯಾಗಿರುವ ಸ್ಥಳ ಪುರಾಣ. ವಿಶೇಷವೆಂದರೆ ಪ್ರಾರಂಭಿಕ ಕಾಲದಲ್ಲಿ ಇದರ ಕುರಿತು ಯಾವುದೇ ಶಾಸನಾಧಾರಗಳಲ್ಲಿ ಅಥವಾ ಪುರಾಣ ಗ್ರಂಥಗಳಲ್ಲಿ ಎಲ್ಲಿಯೂ ವಿವರ ಕಂಡು ಬರುವುದಿಲ್ಲ. ಆದರೆ ಈ ಸ್ಥಳ ಪುರಾಣ ಕ್ರಿ.ಶ. ೧೫ನೇ ಶತಮಾನದಲ್ಲಿ ಪ್ರಾಯಶಃ ಮೊದಲ ಬಾರಿಗೆ ಶಾಸನಗಳಲ್ಲಿ ಕಂಡುಬರುತ್ತದೆ. ಅನಂತರದಲ್ಲಿ ವಿಜಯನಗರ ಮತ್ತು ಒಡೆಯರ ಕಾಲಗಳಲ್ಲಿ ಈ ದೇವಾಲಯಗಳು ಹಲವಾರು ದಾನ ದತ್ತಿಗಳನ್ನು ಪಡೆದು ಪ್ರಮುಖ ದೇವಾಲಯಗಳಾಗಿದ್ದವು.

* ನಂ. ೧೧೧೪-೧, ೩ನೇ ಅಡ್ಡರಸ್ತೆ, ಆಶ್ರಮ ರಸ್ತೆ, ಹಿನಕಲ್, ಮೈಸೂರು - ೫೭೦ ೦೧೭.
** ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ - ೫೭೦ ೦೦೬.



ತಿರುಮಕೂಡ್ಲಿನ ಸ್ಥಳ ಪುರಾಣ ಬಿಂಬಿಸುವ ಅಪರೂಪದ ಕಾಷ್ಟಶಿಲ್ಪ

ಅಗಸ್ತ್ಯೇಶ್ವರ ದೇವಾಲಯದ ರಥವು ಹಲವಾರು ಕಥಾನಕ ಉಬ್ಬುಶಿಲ್ಪಗಳನ್ನು ಹೊಂದಿದೆ. ಬಹುಶಃ ಸುಮಾರು ೨೦೦-೨೫೦ ವರ್ಷಗಳಷ್ಟು ಹಳೆಯದಾಗಿರಬಹುದಾದ ಈ ರಥವು ಇಂದು ಬಹುತೇಕವಾಗಿ ಅವಸಾನದ ಅಂಚಿನಲ್ಲಿದೆ. ರಥದ ಮೇಲ್ಭಾಗವು ಸಂಪೂರ್ಣವಾಗಿ ಹಾಳಾಗಿದೆ. ಕೇವಲ ಕೆಳಭಾಗ ಉಳಿದಿದ್ದು ಅದು ಕೂಡ ಬಿಸಿಲು-ಮಳೆಗೆ ಸಿಕ್ಕಿ ಜೀರ್ಣವಾಗಿದೆ. ರಥದ ಕೆಳಮುಂಭಾಗದ ಮೂರು ಪಟ್ಟಿಕೆಗಳಲ್ಲಿ ಕಥಾನಕ ಉಬ್ಬು ಕೆತ್ತನೆಗಳಿವೆ. ಮೇಲಿನ ಪಟ್ಟಿಕೆಯಲ್ಲಿ ಸ್ಥಳಪುರಾಣಕ್ಕೆ ಸಂಬಂಧಿಸಿದ ನಿರೂಪಣೆ ಇದೆ. ಕೊನೆಯ ಪಟ್ಟಿಕೆಯಲ್ಲಿ ಉಮಾಮಹೇಶ್ವರರ ಆಸನಭಂಗಿಯ ಆಕೃತಿ ಮತ್ತು ಬ್ರಹ್ಮ-ವಿಷ್ಣುಗಳು ಮಧ್ಯದ ಪಟ್ಟಿಕೆಯಲ್ಲಿ ಗಣೇಶನ ಶಿಲ್ಪ ಮತ್ತು ಇನ್ನಿತರ ಆಕೃತಿಗಳಿವೆ.

ಸ್ಥಳ ಪುರಾಣ ನಿರೂಪಿಸುವ ಪಟ್ಟಿಕೆಯಲ್ಲಿ ಮಧ್ಯದಲ್ಲಿ ಶಿವಲಿಂಗವನ್ನು ತೋರಿಸಿದೆ. ಶಿವಲಿಂಗದ ಎಡಭಾಗದಲ್ಲಿ ಅಗಸ್ತ್ಯ ಋಷಿಗಳು ಮೇಲಕ್ಕೆ ಕೈ ಮಾಡಿ ಏನನ್ನೋ ಹೇಳುತ್ತಿರುವಂತೆ ಕುಳಿತಿದ್ದಾರೆ. ಅಗಸ್ತ್ಯರ ಹಿಂಬದಿಯಲ್ಲಿ ಮತ್ತೊಬ್ಬ ಭಕ್ತನು ಸಾಷ್ಟಾಂಗ ನಮಸ್ಕಾರ ಮಾಡುತ್ತಿರುವಂತೆ ತೋರಿಸಲಾಗಿದೆ. ಶಿವಲಿಂಗದ ಬಲಭಾಗದಲ್ಲಿ ಹನುಮಂತನು ತೀವ್ರತರವಾದ ಮುಂಚಾಲನಾ ಭಂಗಿಯಲ್ಲಿದ್ದು ಬಲಗೈಯಲ್ಲಿ ನರ್ಮದೆಯಿಂದ ತಂದ ಶಿವಲಿಂಗವನ್ನು ತೋರಿಸಿದೆ. ಅವನ ಮುಖದ ಭಾವ ಮತ್ತು ಚಾಲನೆಯು ಅವನಿಗೆ ತೀವ್ರವಾಗಿ ಕೋಪ ಬಂದಿರುವುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಅವನ ಈ ಭಂಗಿ ಶಿವಲಿಂಗದ ಮುಖದ ಭಾಗದ ಮೇಲೆ ಮುಷ್ಠಿ ಪ್ರಹಾರ ಮಾಡಲು ಹೊರಟಿರುವಂತೆ ಸೂಚಿಸುತ್ತದೆ. ಹನುಮಂತನ ಹಿಂಭಾಗದಲ್ಲಿ ಇನ್ನೆರಡು ಕುಳಿತ ಆಕೃತಿಗಳನ್ನು ತೋರಿಸಿದ್ದು, ಮಂಗಳಾರತಿ ಮಾಡುತ್ತಿರುವಂತೆ ತೋರಿಸಲಾಗಿದೆ. ಈ ಪಟ್ಟಿಕೆಯ ಸಮಾನವಾಗಿ ರಥದ ಪಾರ್ಶ್ವದ ಪಟ್ಟಿಕೆಯಲ್ಲಿ ಹಲವಾರು ಋಷಿಗಳ ಆಕೃತಿಗಳನ್ನು ವಿವಿಧ ಭಂಗಿಗಳಲ್ಲಿ ಬಿಂಬಿಸಲಾಗಿದೆ. ಹೋಮ ಮಾಡುತ್ತಿರುವಂತೆ, ನಮಸ್ಕಾರ ಮಾಡುತ್ತಿರುವಂತೆ ಹೀಗೆ ವಿಭಿನ್ನ ವಿನ್ಯಾಸಗಳಿವೆ. ಎರಡೂ ಪಾರ್ಶ್ವದ ಆಕೃತಿಗಳು ಮಧ್ಯದ ಶಿವಲಿಂಗದ ಸನ್ನಿವೇಶಕ್ಕೆ ಪೂರಕವಾಗಿ ರಚನೆ ಯಾಗಿವೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಹನುಮಂತನು ಶಿವಲಿಂಗದ ಮೇಲೆ ಶಕ್ತಿಪ್ರಯೋಗ ಮಾಡ ಹೊರಟಿರುವುದು. ಈ ಸನ್ನಿವೇಶವನ್ನು ಕಲಾವಿದ ಬಹು ಸೊಗಸಾಗಿ ಕಾಷ್ಠದಲ್ಲಿ ಉಬ್ಬುಶಿಲ್ಪದ ಕೆತ್ತನೆಯಲ್ಲಿ ತೋರಿಸಿದ್ದಾನೆ. ಇಲ್ಲಿ ಹನುಮಂತ ಮತ್ತು ಶಿವಲಿಂಗದ ಭಾಗಕ್ಕೆ ವಿಶೇಷ ಪ್ರಾಮುಖ್ಯತೆ ನೀಡಲಾಗಿದೆ. ಶಿವಲಿಂಗವನ್ನು ಪಾಣಿಪೀಠದಲ್ಲಿ ತೋರಿಸಲಾಗಿದೆ. ಹೂಗಳ ಮಾಲೆಯಿಂದ ಅಲಂಕೃತವಾದ ರುದ್ರಭಾಗದಲ್ಲಿ ಸಹಜವಾದ ರೀತಿಯಲ್ಲಿ ಕಣ್ಣು, ಮೂಗು ಮತ್ತು ಬಾಯಿಯನ್ನು ತೋರಿಸಲಾಗಿದೆ. ಇದು ಪ್ರಾಚೀನ ಗುಪ್ತ, ಚಾಲುಕ್ಯರ ಕಾಲಗಳ ಮುಖಲಿಂಗಗಳನ್ನು ಜ್ಞಾಪಕಕ್ಕೆ ತರುತ್ತದೆ. ಕಲಾವಿದನು ಸ್ಥಳಪುರಾಣದ ಮುಖ್ಯ ವಸ್ತುವಾದ ಹನುಮಂತನು ಶಿವಲಿಂಗದ ಮೇಲೆ ಮುಷ್ಟಿಪ್ರಹಾರ ಮಾಡುವುದು. ಆ ಸನ್ನಿವೇಶವನ್ನೇ ಇಲ್ಲಿ ಬಿಂಬಿಸಲು ಆಯ್ದುಕೊಂಡಿದ್ದಾನೆ. ಈ ಸನ್ನಿವೇಶ ಕಥಾನಿರೂಪಣೆಯ ಕೇಂದ್ರ ವಸ್ತುವೂ ಆಗಿದೆ. ಹೀಗಾಗಿ ಇದೊಂದು ಅಪರೂಪದ ಕಥಾ ನಿರೂಪಣಾ ಶಿಲ್ಪವೆಂದು ಹೇಳಬಹುದು.



ತಿರುಮಕೂಡ್ಲಿನ ಸ್ಥಳ ಪುರಾಣ ಬಿಂಬಿಸುವ ಅಪರೂಪದ ಕಾಷ್ಟಶಿಲ್ಪ

ಶೈಲಿಯ ದೃಷ್ಟಿಯಿಂದ ಗಮನಿಸಿದಾಗ ವಿಜಯನಗರ ಕಾಲದ ಶಿಲ್ಪ ಕಲೆಯ ಶೈಲಿಯ ಛಾಯೆ ಸ್ಪಷ್ಟವಾಗಿ ಕಾಣುತ್ತದೆ. ಆಕೃತಿಗಳ ಮೈಮಾಟ, ಅವುಗಳನ್ನು ಪಟ್ಟಿಕೆಯ ಸುಮಾರು ೫ ಅಂಗುಲ ಅಗಲದ ಅಳತೆಗೆ ಪೂರಕವಾಗಿ ಸರಿಹೊಂದಿಸುವ ತಂತ್ರಗಾರಿಕೆ, ಹೂ ಬಳ್ಳಿಗಳ ವಿನ್ಯಾಸಗಳನ್ನು ನೋಡಿದಾಗ ಇವುಗಳನ್ನು ಕೆತ್ತಿದ ಕಲಾವಿದ ನುರಿತ ಹಸದವನಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಈ ಮೇಲೆ ಹೇಳಿದಂತೆ ಅವಸಾನದ ಅಂಚಿನಲ್ಲಿರುವ ರಥದ ಅಳಿದುಳಿದ ಭಾಗದ ರಕ್ಷಣೆ ಆಗಬೇಕಾಗಿದೆ. ಇದರಿಂದ ಅಪರೂಪದ ಈ ಕಲಾಕೃತಿಗಳು ಉಳಿಯುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ರಥದ ಶಿಲ್ಪಗಳ ಕುರಿತು ಪ್ರಸ್ತುತ ಪ್ರಬಂಧ ಲೇಖನ ಮೊಟ್ಟ ಮೊದಲನೆಯದಾಗಿದೆ. ದೇವಾಲಯದ ಕುರಿತು **ಎಂ.ಎ.ಆರ್.**ನಲ್ಲಿ ಈ ಹಿಂದೆಯೇ ಕಿರು ಚರ್ಚೆ ಬಂದಿದ್ದರೂ ರಥ ಶಿಲ್ಪದ ಕುರಿತು ಯಾವುದೇ ವಿವರ ಲಭ್ಯವಿಲ್ಲ.

೨. **ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್**-೧೯೩೮, ಪು. ೩೨ರಲ್ಲಿ ಸ್ಥಳಪುರಾಣದ ಸ್ಥೂಲ ವಿವರವಿದೆ. ಎಂ.ಎ.ಆರ್. ೧೯೧೨, ಪುಟ ೧೫ರಲ್ಲಿ ಸಂಕ್ಷಿಪ್ತ ವಿವರವಿದೆ.

೩. **ಎಂ.ಎ.ಆರ್.** ೧೯೩೮, ಪು. ೩೩.

ಪ್ರೊ. ಕೆ.ಸಿ. ಮಲ್ಲಿಗವಾಡ*

# ಬದ್ನಿಗಟ್ಟಿಯ ಬಸವೇಶ್ವರ ದೇವಸ್ಥಾನ ಹಾಗೂ ಪ್ರಾಚ್ಯಾವಶೇಷಗಳು

ಧಾರವಾಡ ಜಿಲ್ಲೆಯ ಭತ್ತದ ಕಣಜವೆಂದೇ ಪ್ರಸಿದ್ಧವಾದ ಕಲಘಟಗಿ ತಾಲೂಕಿನ ಕೊನೆಯ ಗ್ರಾಮವಾಗಿದ್ದ ಬೆಡ್ತಿಹಳ್ಳದ ದಂಡೆ ಮೇಲೆ ದಟ್ಟವಾದ ಅರಣ್ಯದ ಮಡಿಲಲ್ಲಿ ನೆಲೆ ನಿಂತ ಗ್ರಾಮವೇ ಬದ್ನಿಗಟ್ಟಿ. ಕಲಘಟಗಿಯಿಂದ ದಕ್ಷಿಣಕ್ಕೆ ಸುಮಾರು ೧೮ ಕಿ.ಮೀ. ಅಥವಾ ಬಮ್ಮಿಗಟ್ಟಿಯಿಂದ ೫ ಕಿ.ಮೀ. ಅಂತರದಲ್ಲಿದೆ. ಬೇಚಿರಾಕ್ ಗ್ರಾಮವಾಗಿದೆ.

ಇಂದಿಗೆ ಬೇಚಿರಾಕ್ ಆಗಿರುವ ಬದ್ನಿಗಟ್ಟಿ ಗ್ರಾಮದಲ್ಲಿ ಸುಮಾರು ೧೦ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಜನವಸತಿ ಇತ್ತು. ಇದೊಂದು ಐತಿಹಾಸಿಕ ಸ್ಥಳವೂ ಹೌದು. ಹಲವಾರು ಪ್ರಾಚೀನ ಸ್ಮಾರಕಗಳನ್ನು ಇಂದಿಗೂ ಆ ಸ್ಥಳದಲ್ಲಿ ಕಾಣಬಹುದು. ಹಿಂದಿನ ಆಳರಸರು ನಿರ್ಮಿಸಿದ ದೇಗುಲಗಳು, ಅರಮನೆ, ಹುಡೇ, ಕೋಟೆಗೋಡೆ ಮೊದಲಾದವುಗಳು ನಮ್ಮನ್ನು ಸುಮಾರು ೧೧-೧೨ ನೇ ಶತಮಾನದತ್ತ ಕರೆದೊಯ್ಯುತ್ತವೆ. ಅಲ್ಲಿ ವಾಸವಿದ್ದ ಮನೆತನಗಳು ಇಂದು ನೆರೆಯ ಬಮ್ಮಿಗಟ್ಟಿ, ತಾವರೆಗೇರಿ, ಮುಂಡಗೋಡ ತಾ, ಉಣ್ಣಿಕೇರಿ, ಕೆಂಡಲಗೇರಿ, ಅಗಡಿಬಸಾಪುರ, ನೆಲ್ಲಿ ಹರವಿ ಗ್ರಾಮಗಳಿಗೆ ವಲಸೆಗೊಂಡಿವೆ.

ಅಂದು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡದ್ದೆನ್ನಲಾದ ಗ್ರಾಮದ ಬಸವಣ್ಣ ದೇವರ ದೇವಸ್ಥಾನವು ಪ್ರಸಿದ್ಧವಾಗಿದೆ. ಇಲ್ಲಿನ ವೀರಗಲ್ಲುಗಳು, ಮಹಾಸತಿ ಕಲ್ಲುಗಳು, ಗಜಲಕ್ಷ್ಮಿ ವಿಗ್ರಹ, ಅಳಿದುಳಿದ ವಿಗ್ರಹಗಳು ಅಂದಿನ ವೈಭವವನ್ನು ಸಾರಿ ಹೇಳುತ್ತವೆ. ಕ್ರಿ.ಶ. ೧೧ನೇ ಶತಮಾನದಲ್ಲಿ ಅಂದರೆ ಕಲ್ಯಾಣದ ಚಾಲುಕ್ಯರ ಅರಸ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಅಂದರೆ ಕ್ರಿ.ಶ. ೧೦೭೫-೧೧೨೬ರ ಅವಧಿಯಲ್ಲಿ ನಿರ್ಮಾಣ ಗೊಂಡಿರಬಹುದಾದ ಬೃಹದಾಕಾರವಾದ ಬಸವಣ್ಣದೇವರ ದೇಗುಲವು ಈಗ ಭಗ್ನಾವಶೇಷಗಳಿಂದ ಕೂಡಿದ್ದರೂ ಬಮ್ಮಿಗಟ್ಟಿ ಗ್ರಾಮದ ಭಕ್ತ ಜನರಿಂದ ಜೀರ್ಣೋದ್ಧಾರಗೊಂಡಿದೆ.

## ಪ್ರಾಚ್ಯಾವಶೇಷಗಳು

೧. ಬದ್ನಿಗಟ್ಟಿ ಶ್ರೀ ಬಸವಣ್ಣ ದೇವರ ದೇವಸ್ಥಾನ., ೨. ವೀರಗಲ್ಲು ನಾಲ್ಕು ತ್ರುಟಿತಗೊಂಡಿವೆ., ೩. ಮಹಾಸತಿ ಕಲ್ಲುಗಳು ಮೂರು., ೪. ಮಹಾಲಕ್ಷ್ಮಿ ವಿಗ್ರಹ., ೫. ಮಹಾಕಾಳಿ ವಿಗ್ರಹ., ೬. ಗಜಲಕ್ಷ್ಮಿ ವಿಗ್ರಹ., ೭. ಹಾಳಾದ ಬಾವಿ., ೮. ರುದ್ರಭೂಮಿ., ೯. ಹಾಳಾದ ಮನೆಗಳ ಬುನಾದಿ., ೧೦. ಆಡಳಿತ ಕಚೇರಿಗೆ ಅಳವಡಿಸಿದ ಸುಂದರವಾದ ಕಲ್ಲಿನ ತುಕಡಿಗಳು (ಸ್ಟೋನ ಟೈಲ್ಸ್)., ೧೧. ಬೃಹದಾಕಾರವಾದ ಕೆರೆ., ೧೨. ಸಾಲು ಭಂಜಿಕೆಯರ ವಿಗ್ರಹ (ಭಗ್ನ)., ೧೩. ನಂದಿ ವಿಗ್ರಹ., ೧೪. ಗಣಪತಿ (ಭಗ್ನ)., ೧೫. ಶಿವಲಿಂಗ., ೧೬. ಬೀದಿ ಬೀದಿಗಳಲ್ಲಿ ಸಾಲಾಗಿ ನಿಂತ ಹುಣಸೆ ಮರಗಳು., ೧೭. ಸ್ಥಾವರ ಲಿಂಗದ ಬಾಣಗಳು., ೧೮. ಪ್ರತ್ಯೇಕವಾದ ಪೀಠಗಳು., ೧೯. ಕಲ್ಲಿನ ಕೋಟೆಗೋಡೆ., ೨೦. ಅಲ್ಲಲ್ಲಿ ಚದುರಿ ಬಿದ್ದ ಮುರಿದ ತೊಲೆ, ಬೋದುಗೆಗಳು., ೨೧. ಮಹಿಷಾಸುರ ಮರ್ದಿನಿ ವಿಗ್ರಹ.

ಹೀಗೆ ಹಲವಾರು ಪ್ರಾಚ್ಯಾವಶೇಷಗಳು ಅಲ್ಲಿ ಲಭ್ಯವಾಗಿವೆ. ಆದರೆ ಈ ದೇವಾಲಯ ಹಾಗೂ ಗ್ರಾಮದ ಮಾಹಿತಿ ನೀಡುವ ಆಳ್ವಿಕೆ ನಡೆಸಿದ ಅರಸರ ಕಾಲಮಾನಕ್ಕೆ ಸ್ಪಷ್ಟೀಕರಣ ನೀಡುವ ಯಾವುದೇ ಶಿಲಾಶಾಸನಗಳಾಗಲೀ ಅಥವಾ ಕಂಚಿನ ತಾಮ್ರಪಟಗಳಾಗಲಿ ಇಲ್ಲಿ ಕಾಣಬರದು.

**ಬದ್ನಿಗಟ್ಟಿ ಬಸವೇಶ್ವರ ದೇವಾಲಯ:** ಇದೊಂದು ಅಪೂರ್ವ ಸುಂದರ ಕಲಾಕೌಶಲ್ಯದಿಂದ ಕೂಡಿದ ದೇಗುಲ. ಪೂರ್ವಾಭಿಮುಖವಿರುವ ಈ ದೇವಾಲಯ ನಿರ್ಮಾಣದ ಮಾದರಿಯನ್ನು ನೋಡಿದರೆ ಕಲ್ಯಾಣದ ಚಾಲುಕ್ಯರ ಕಾಲದ್ದೆಂದೇ ಹೇಳಲು ಸಾಧ್ಯವಿದೆ.

ದೇವಾಲಯಕ್ಕೆ ಪ್ರವೇಶದ್ವಾರವು ದಕ್ಷಿಣಾಭಿಮುಖವಾಗಿದ್ದು ಒಳಗೆ ಪ್ರವೇಶಿಸಿದರೆ ಸಭಾಮಂಟಪ, ನವರಂಗ, ಮೊಗಸಾಲೆಗಳಿವೆ. ದೇವಾಲಯದ ಒಳಗೆ ಪ್ರವೇಶಿಸಿದರೆ ಬಲಭಾಗದಲ್ಲಿ ನಂದಿ, ಎಡಭಾಗದಲ್ಲಿ ಶಿವಲಿಂಗ ಅಂದರೆ ಪೂರ್ವದಲ್ಲಿ ಬಸವಣ್ಣನ ವಿಗ್ರಹ ಪಶ್ಚಿಮ ಭಾಗದಲ್ಲಿ ಶಿವಲಿಂಗವಿದೆ. ದೇಗುಲ ೨ ಗರ್ಭಗೃಹಗಳನ್ನು ಹೊಂದಿದೆ. ನಂದಿ ವಿಗ್ರಹವಿರುವ ಭಾಗವು ಸಂಪೂರ್ಣ ದುರ್ಬಲವಾಗಿ ೨-೩ ಸಾರೆ ಬಿದ್ದು ಸಿಮೆಂಟ್, ಇಟ್ಟಿಗೆಗಳಿಂದ ಜೀರ್ಣೋದ್ಧಾರವಾಗಿದೆ. ಪಶ್ಚಿಮ ಭಾಗದಲ್ಲಿರುವ ಮೊಗಸಾಲೆ, ಗರ್ಭಗೃಹ

* ಇತಿಹಾಸ ಉಪನ್ಯಾಸಕರು, ಜೆ.ಇ.ಸಿ.ಜಿ.ಕೆ. ಹಿರೇಗೌಡರ ಸ.ಪ.ಪೂ. ಕಾಲೇಜು, ರೊಟ್ಟಿಗವಾಡ, ಕುಂದಗೋಳ ತಾ. ಧಾರವಾಡ ಜಿಲ್ಲೆ.

ಸಂಪೂರ್ಣ ಕಲ್ಲಿನಿಂದ ನಿರ್ಮಾಣಗೊಂಡಿದೆ. ಮಜಬೂತಾದ ೧೦ ಕಂಬಗಳ ಶಿಲಾಮಂಟಪವಿದ್ದು ಇದರ ಸುತ್ತಲೂ ಗಟ್ಟಿಮುಟ್ಟಾದ ಕಲ್ಲುಗಳನ್ನು ಅಳತೆಗೆ ತಕ್ಕಂತೆ ತುಂಡರಿಸಿ ಯಾವುದೇ ಗಚ್ಚು ಹಾರೆಗಳನ್ನು ಬಳಸದೇ ಕಲ್ಲು ತೊಲೆ, ಬೋದುಗೆಗಳನ್ನು ಜೋಡಿಸಿ ದೇವಾಲಯವನ್ನು ನಯನ ಮನೋಹರವಾಗುವಂತೆ ಮಾಡಿದ ಕೀರ್ತಿ ಆ ಕಾಲದಲ್ಲಿದ್ದ ಶಿಲ್ಪಿಗಳಿಗೆ ಸಲ್ಲುತ್ತದೆ. ಇಲ್ಲಿನ ಶಿಲಾಮಂಟಪದ ಸ್ತಂಭಗಳಿಗೆ ಹೆಚ್ಚಾದ ಕೆತ್ತನೆಗಳನ್ನು ಅಳವಡಿಸಿರುವುದಿಲ್ಲ ಆದರೆ ತೊಲೆ, ಬೋದುಗೆಗಳಿಗೆ ಮಾತ್ರ ಮಾಡಿರುವ ನಯನ ಮನೋಹರ ಕಲಾಕುಸುರಿನ ಕೆತ್ತನೆ ಅಂದಿನ ಕಲಾರಾಧಕರಿಗೆ ಸಂದುದಾಗಿದೆ.

ಗರ್ಭಗೃಹದ ಬಾಗಿಲ ಚೌಕಟ್ಟುಗಳು ಕಲ್ಲಿನಿಂದಾದವುಗಳು. ಎಡಬಲಗಳಲ್ಲಿ ಮಕರತೋರಣವಿದೆ. ದ್ವಾರಪಾಲಿಕೆಯರ ವಿಗ್ರಹಗಳಿವೆ. ಬಾಗಿಲು ಚೌಕಟ್ಟುಗಳು ಗುಂಡಿನ ಸಾಲುಗಳಿಂದ ಅಲಂಕೃತಗೊಂಡಿದೆ. ಮೇಲೆ ಹಣೆಪಟ್ಟಿಕೆಯಲ್ಲಿ ಗಜಲಕ್ಷ್ಮಿ ವಿಗ್ರಹವಿದೆ. ಮೇಲ್ಭಾಗದಲ್ಲಿ ಸುಂದರವಾದ ಪಟ್ಟಿಕೆ ಇದ್ದು ಇದರಲ್ಲಿ ನವಿಲಿನಾಕಾರದ ಪಕ್ಷಿಗಳು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಆಸೀನವಾಗಿವೆ. ಗರ್ಭಗೃಹ ಒಳಪ್ರವೇಶಿಸಿದರೆ ಒಳಗೆ ಚಿಕ್ಕ ಮೊಗಸಾಲೆ ಇದ್ದು ಗರ್ಭಗೃಹ ಮಧ್ಯದಲ್ಲಿ ಸುಂದರವಾದ ಶಿವಲಿಂಗವಿದೆ. ಸುಮಾರು ೪.೫ ಅಡಿ ಉದ್ದ ೨.೫ ಅಡಿ ಅಗಲ, ೨ ಅಡಿ ಎತ್ತರವಾಗಿದ್ದು ಜಲಹರಿ ಪೀಠವನ್ನು ಹೊಂದಿದೆ. ಮೇಲ್ಭಾಗದಲ್ಲಿ ಬಾಣವಿದ್ದು ನೋಡಲು ನಯನಮನೋಹರವಾಗಿದೆ. ಗಾಳಿ, ಬೆಳಕಿನ ಯಾವುದೇ ವ್ಯವಸ್ಥೆ ಇದಕ್ಕಿರುವುದಿಲ್ಲ. ಗರ್ಭಗೃಹದ ಪಶ್ಚಿಮ ಭಾಗದಲ್ಲಿ ಚಿಕ್ಕಗೂಡು (ಮಾಡು) ಇದ್ದು ಇದು ಪೂಜಾ ಸಾಮಗ್ರಿಗಳನ್ನು ರಕ್ಷಿಸಿಡಲು ಅನುಕೂಲವಿದೆ. ಇದಕ್ಕೆ ನಾಲ್ಕು ಭೀಮಕಾಯದ ಕಂಬ, ತೊಲೆಗಳ ಶಿಲಾಮಂಟಪವಿದ್ದು ಮೇಲ್ಛತ್ತಿನಲ್ಲಿ ಸುಂದರವಾದ ಕಲಾತ್ಮಕವಾದ ಸಹಸ್ರದಳ ಕಮಲವಿದೆ. ಗರ್ಭಗೃಹದ ಮೇಲ್ಭಾಗವನ್ನು ಚಿಕ್ಕದಾದ ಗೋಪುರವಿದೆ. ದೇವಾಲಯದ ಮೇಲ್ಭಾಗವನ್ನು ಸಂಪೂರ್ಣ ಮಣ್ಣಿನಿಂದ ಮುಚ್ಚಲಾಗಿದೆ. ಇದು ಬಹುತೇಕ ವೈರಿಗಳಿಂದ ರಕ್ಷಣೆ ಪಡೆಯಲು ಹೀಗೆ ಮಾಡಿರಲು ಸಾಧ್ಯ. ಇದಕ್ಕೆ ಸಮಕಾಲೀನ ವಾದ ಕಲ್ಲೇಶ್ವರ ದೇವಾಲಯವು ಇಲ್ಲಿಗೆ ಸಮೀಪದ ಬೀರಹಳ್ಳಿ ಗ್ರಾಮದಲ್ಲಿದೆ. ಹೀಗೆ ಬದ್ನಿಗಟ್ಟಿ ಬಸವಣ್ಣ ದೇವರ ಗುಡಿಯಿದೆ. ಪ್ರವೇಶ ದ್ವಾರದಲ್ಲಿ ಮಾತ್ರ ಜೀರ್ಣೋದ್ಧಾರಗೊಂಡ ಕಟ್ಟೆಗೆಯ ಮಡಿಗೆ ಇದೆ. ಬಸವಣ್ಣ ದೇವರ ಹಾಗೂ ಶಿವಲಿಂಗದ ಮಧ್ಯೆ ಇರುವ ಜಾಗ ಸಂಪೂರ್ಣ ಜಖಂಗೊಂಡಿದೆ. ಆದರೆ ಇದನ್ನು ಈಗ ಕಟ್ಟೆಗೆಗಳಿಂದ ಮಡಿಗೆ ಮಾಡಿ ಮೇಲ್ಭಾಗದಲ್ಲಿ ಕೆಂಪು ಹಂಚಿನ ಹೊದಿಕೆ ಹೊದಿಸಲಾಗಿದೆ.

ಈ ಸ್ಥಳದಲ್ಲಿ ತ್ರುಟಿತ, ಸಾಲಂಕೃತ ಸಪ್ತಮಾತೃಕೆಯರ ವಿಗ್ರಹಗಳಿವೆ. ಎದುರಿನ ಗೋಡೆಗೆ ಆನಿಸಿ ನಿಲ್ಲಿಸಿದ ತ್ರುಟಿತಗೊಂಡಿರುವ ಮಹಿಷಾಸುರಮರ್ದಿನಿ ವಿಗ್ರಹವಿದೆ. ನಂದಿ ಮಂಟವನ್ನು ನವೀಕರಿಸಲಾಗಿದೆ ಇದಕ್ಕೂ ಮೊದಲಿದ್ದ ಗೋಪುರ ಶಿಥಿಲಗೊಂಡು ಬಿದ್ದುದರಿಂದ ಮತ್ತೊಮ್ಮೆ ಅಚ್ಚುಕಟ್ಟಾಗಿ ಗೋಪುರ ನಿರ್ಮಿಸಲಾಗಿದೆ. ಆದರೆ ಈಗ ಬಸವಣ್ಣ ವಿಗ್ರಹಕ್ಕೆ ಯಾವುದೇ ತೊಂದರೆ ಕಂಡುಬರುವುದಿಲ್ಲ.

ಬದ್ನಿಗಟ್ಟಿ ಬಸವಣ್ಣ ದೇವರ ಮೇಲ್ಛತ್ತು ಯಾವುದೇ ಕಲಾಕೃತಿಯನ್ನು ಒಳಗೊಂಡಿಲ್ಲ. ಬಸವಣ್ಣನ ಮೂರ್ತಿಯು ಕಪ್ಪು ಶಿಲೆಯಿಂದ ಮಾಡಲ್ಪಟ್ಟಿದ್ದು ಇದು ಕೂಡಾ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿದ್ದಿರಬಹುದಾದರೂ ತ್ರುಟಿತಗೊಂಡಿದೆ. ನಿಧಿ ಆಸೆಗಾಗಿ ವಿಗ್ರಹವನ್ನು ಭಗ್ನಗೊಳಿಸಿರುವುದು ಗೋಚರಿಸುತ್ತದೆ.

ಇಲ್ಲಿಯ ಪಶ್ಚಿಮ ಮುಖಿ ಬಸವಣ್ಣನ ಮೂರ್ತಿ ನಯನ ಮನೋಹರವಾಗಿದೆ. ಬೃಹದಾಕಾರವಾದ ಮೂರ್ತಿ ಏಕ ಶಿಲೆಯಲ್ಲೇ ನಿರ್ಮಾಣವಾಗಿದ್ದು ಮಲಗಿದ ಭಂಗಿಯಲ್ಲಿದೆ. ಎಡಗಾಲನ್ನು ಮುಂದೆ ಮಾಡಿ ಬಲಗಾಲನ್ನು ಹಾಗೂ ಹಿಂದಿನ ಎರಡೂ ಕಾಲುಗಳನ್ನು ಮಡಚಿ ಮಲಗಿದ್ದಾನೆ. ಎತ್ತರವಾದ ಮುಖ, ಹರವಾದ ಬೆನ್ನು, ಇಳಿಬಿದ್ದ ಗಂಗೆದೊಗಲು, ಬೃಹದಾಕಾರವಾದ ಇಣಿ ಶಿರ, ವಿಶಾಲವಾದ ಕೊರಳು, ನೇರವಾಗಿರುವ ಕೋಡು, ಅಗಲವಾದ ಹಣೆ, ಕಮಲದಂತೆ ಹೊಳೆಯುವ ಕಣ್ಣುಗಳು ತದೇಕ ಚಿತ್ತವಿರುವ ದೃಷ್ಟಿಯನ್ನೊಳಗೊಂಡ ವಿಗ್ರಹವು ೮ ಅಡಿ ಉದ್ದ, ೪ ಅಡಿ ಅಗಲ, ೫ ಅಡಿ ಎತ್ತರವಾಗಿದ್ದು ಮೈತುಂಬಾ ಆಭರಣಗಳಿಂದ ಅಲಂಕೃತಗೊಂಡಿರುವುದು ಕಂಡು ಬರುತ್ತದೆ. ಮುಖವಾಡ, ಹಣೆಪಟ್ಟಿ, ಕೋಡಣಸು, ಹಣೆಯಲ್ಲಿ ಚಿಕ್ಕ ಗೆಜ್ಜೆಸರ, ಹಣೆಕಟ್ಟು, ಕೊರಳಲ್ಲಿ ಹುರಿಗೆಜ್ಜೆ ಸರ, ಗವಳಗಂಟೆ, ಹರಿಗಡ, ಕೊರಳಪಟ್ಟಿ, ಗುಮರಿ ಹಾಗೂ ಕಾಲಲ್ಲಿ ಸರಪಳಿ, ಗೆಜ್ಜೆ, ಬೆನ್ನಿನ ಮೇಲೆ ಜೂಲ(ನೂಲಿನ ಕವಚ), ಇಣಿ ಶಿರಕ್ಕೆ ಹೂಮಾಲೆ, ಕೊರಳು ಇಣಿಗಳಿಗೆ ನೇರವಾಗಿ ದೊಡ್ಡದಾದ ಹಗ್ಗದ ಹರಿಗಡ ಗೆಜ್ಜೆ ಸರಗಳನ್ನು ಹಾಕಲಾಗಿದೆ. ಜೂಲ ಹಾಕಿದ್ದಲ್ಲದೇ ಬೆನ್ನಿನ ಮೇಲೆ ಹಗ್ಗದಿಂದ ಗಂಟುಹಾಕಿ ಅಲಂಕರಿಸಲಾಗಿದೆ. ಎಲ್ಲೆಂದರಲ್ಲಿ ವಿಭೂತಿ ಧರಿಸಿ ಪೂಜೆಗೊಂಡಂತೆ ದೂರದಿಂದ ನೋಡಿದರೆ ಹಾಯಲು ಎದ್ದು ಬರುವಂತೆ ಕಂಗೊಳಿಸುವ ಬಸವಣ್ಣ ಒಂದು ಅಪೂರ್ವ ಕಲಾ ಸೌಂದರ್ಯವನ್ನು ಹೊರಸೂಸುವ ವಿಗ್ರಹವಾಗಿದೆ.

**ವೀರಗಲ್ಲು:** ಇದು ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ಮಹತ್ವಪೂರ್ಣವಾದ ವೀರಗಲ್ಲಾಗಿದೆ. ಇದರಲ್ಲಿ ಆನೆಯ ಮೇಲೆ ಹತ್ತಿ ವೀರನು ವೈರಿಗಳನ್ನು ನಾಶಪಡಿಸು





ತ್ತಿರುವ ದೃಶ್ಯವಿದೆ. ಉಳಿದ ಭಾಗವು ತ್ರುಟಿತಗೊಂಡಂತೆ ಕಂಡು ಬರುತ್ತದೆ. ಕೆಳಭಾಗದಲ್ಲಿ ಸೈನಿಕರು, ವೈರಿಪಡೆಗಳು ಹೋರಾಡುತ್ತಿದ್ದು, ವೈರಿಪಡೆಯನ್ನು ಸಂಹರಿಸಲು ವೀರನ ಹಿಂಬಾಲಕರು ಕುದುರೆಯನ್ನೇರಿ ಕೈಯಲ್ಲಿ ಖಡ್ಗ ಹಿಡಿದು. ಎದೆಗವಚ ಹಾಕಿಕೊಂಡು ಡಾಲು, ಗುರಾಣಿಗಳನ್ನು ಧರಿಸಿ ಹೋರಾಡುವ ಚಿತ್ರಣವಿದೆ. ಮುಖಂಡನಾದ ವೀರ ಆನೆ ಮೇಲೆ ಕಟ್ಟಿದ ಅಂಬಾರಿಯಲ್ಲಿ ಕುಳಿತು ಹೋರಾಡುತ್ತಿದ್ದಾನೆ. ಇವನಿಗೆ ಸಹಾಯಕರಾಗಿ ಇಬ್ಬರು ಯೋಧರು ಹೊಡೆದಾಟದಲ್ಲಿ ತೊಡಗಿದ್ದಾರೆ. ಆನೆಯ ಬೆನ್ನಿಗೆ ಏರಿಸಿದ್ದ ಅಂಬಾರಿಯನ್ನು ಹೊಟ್ಟೆಯ ಕೆಳಭಾಗದಲ್ಲಿ ಹಾಯಿಸಿ ಬಿಗಿಯಾಗಿ ಕಟ್ಟಿದ್ದಾರೆ. ಆನೆಗೆ ಕೊರಳ ಹಾರ, ಹಾಕಿ ಸಿಂಗರಿಸಲಾಗಿದೆ. ಹಿಂಭಾಗದಲ್ಲಿ ಬಾಲವು ಸೆಟೆದು ನಿಂತಿದ್ದು ಆನೆ ಬಲಗಾಲನ್ನು ಎತ್ತಿ ತನ್ನ ಸೊಂಡಿಲಿನಿಂದ ವೈರಿಯೊಬ್ಬನನ್ನು ಎತ್ತಿ ಹಿಡಿದ ದೃಶ್ಯ ಕಂಡುಬರುತ್ತದೆ. ಸುಮಾರು ೬ ಅಡಿ ಎತ್ತರ, ೩ ಅಡಿ ಅಗಲ ಇರುವ ಈ ವೀರಗಲ್ಲು ವಿಶಿಷ್ಟವಾಗಿದೆ. ಚಿತ್ರಗಳೆಲ್ಲವೂ ಉಬ್ಬು ಚಿತ್ರಣದಲ್ಲಿದ್ದು ವೀರಗಲ್ಲಿನ ಅರ್ಧಭಾಗ ತುಂಡಾಗಿದೆ. ಆದರೂ ಇದೊಂದು ಮಹತ್ವದ ವೀರಗಲ್ಲಾಗಿದೆ.

ಈ ಕಲ್ಲು ಬಮ್ಮಿಗಟ್ಟಿಗ್ರಾಮದ ಶ್ರೀ ಶಿವಪ್ಪ ಹೆಗ್ಗಣವರ ಹೊಲದಲ್ಲಿದೆ.

ವಿಷ್ಣುಪೀಠ : ಬದ್ನಿಗಟ್ಟಿಯಲ್ಲಿ ದೊರೆತ ಶ್ರೀ ವಿಷ್ಣುವಿನ ಪೀಠ (ಒಡೆದುಹೋಗಿದೆ) ಎದುರಿಗೆ ಗರುಡ ಇದೆ. ವಿಗ್ರಹ ಬೇರ್ಪಟ್ಟಿದೆ. ಕೇವಲ ಪಾದಗಳು ಮಾತ್ರ ಉಳಿದಿವೆ.

**ಮಹಾಸತಿ ಕಲ್ಲು:** ಈ ಮಹಾಸತಿ ಕಲ್ಲಿನಲ್ಲಿ ೩ ಪಟ್ಟಿಕೆಗಳಿದ್ದು ಕೆಳಗಿನದರಲ್ಲಿ ಮಹಾಸತಿ ಸಹಗಮನದಲ್ಲಿ ತೊಡಗಿ ಚಿತೆಯನ್ನು ಏರುತ್ತಿದ್ದಾಳೆ. ಎಡಬಲದಲ್ಲಿ ಜನರಿದ್ದು ಪಕ್ಕದಲ್ಲಿ ನಂದಿ ವಿಗ್ರಹಗಳಿವೆ. ಇದರ ಮೇಲೆ ಸಣ್ಣಪಟ್ಟಿ ಇದ್ದು ಇದರಲ್ಲಿ ಶಾಸನವಿದ್ದು ಅಸ್ಪಷ್ಟವಾಗಿದೆ. ಮಧ್ಯದಲ್ಲಿರುವ ಪಟ್ಟಿಕೆಯಲ್ಲಿ ಮಹಾಸತಿಯನ್ನು ಸಖಿಯರು ಸ್ವರ್ಗದೆಡೆಗೆ ಕರೆದೊಯ್ಯುತ್ತಿರುವ ಚಿತ್ರಣ ಮನಮೋಹಕವಾಗಿದೆ. ಇಲ್ಲಿ ಚಿತ್ರಗಳು ಸ್ಪಷ್ಟವಾಗಿದ್ದು ಮಹಾಸತಿಯು ಸ್ವರ್ಗಕ್ಕೆ ಹೋಗುವಾಗ ನರ್ತನ ಭಂಗಿಯಲ್ಲಿರುವುದು ಗೋಚರಿಸುತ್ತದೆ. ಎಡಬಲಗಳಲ್ಲಿ ಸಖಿಯರೂ ನೃತ್ಯಭಂಗಿಯಲ್ಲಿದ್ದಾರೆ. ಇದರ ಮೇಲ್ಭಾಗದಲ್ಲಿ ಚಿಕ್ಕ ಪಟ್ಟಿ ಇದ್ದು ಇದರಲ್ಲಿಯೂ ಶಾಸನದ ೨-೩ ಸಾಲುಗಳಿದ್ದು ಅವೆಲ್ಲವುಗಳು ತ್ರುಟಿತಗೊಂಡಿವೆ. ೩ನೇ ಪಟ್ಟಿಕೆಯಲ್ಲಿ ಸ್ವರ್ಗದ ಚಿತ್ರಣವಿದ್ದು ಅದರಲ್ಲಿ ಶಿವ-ಪಾರ್ವತಿಯರಲ್ಲಿ ಮಹಾಸತಿ ಐಕ್ಯವಾಗುವುದರ ಜೊತೆಗೆ ಎಡ ಬಲಗಳಲ್ಲಿ ಸಖಿಯರು ನಿಂತು ಶುಭಕೋರುತ್ತಿರುವ ದೃಶ್ಯ ಮನಮೋಹಕವಾಗಿದೆ. ಇದರಿಂದ ಚಿತೆಯೇರಿದ ಮಹಾಸತಿ ಕೊನೆಗೆ ಸ್ವರ್ಗದಲ್ಲಿ ಮೋಕ್ಷ ಹೊಂದಿದಳೆಂಬುದು ಸ್ಪಷ್ಟವಾಗುತ್ತದೆ.

ಈ ಮಾಸ್ತಿಗಲ್ಲು ಬಮ್ಮಿಗಟ್ಟಿ ಗ್ರಾಮದ ಶ್ರೀ ಶಿವಪ್ಪ ಪಾಗದ ಅವರ ಹೊಲದಲ್ಲಿದೆ. ಮೇಲೆ ಬೃಹದಾಕಾರವಾದ ಮಾವಿನ ಮರವಿದ್ದು ಅದರ ಕೆಳಗೆ ಹಳೇಕಾಲದ ಭಾವಿ ಇದ್ದು ಅದರ ದಂಡೆ ಮೇಲೆ ನಿಲ್ಲಿಸಲಾಗಿದೆ.

**ಸಪ್ತಮಾತೃಕೆಯರ ಕಲ್ಲು:** ಈ ಕಲ್ಲು ಬದ್ನಿಗಟ್ಟಿ ಶ್ರೀ ಬಸವಣ್ಣ ದೇವರ ದೇವಾಲಯದಲ್ಲಿದೆ. ಒಟ್ಟು ೭ ವಿಗ್ರಹಗಳಿದ್ದು ಪ್ರತಿಯೊಂದು ವಿಗ್ರಹಗಳ ಕೆಳಗೆ ಅವರವರ ವಾಹನಗಳನ್ನು ಪ್ರತಿಷ್ಠಾಪಿಸಲಾಗಿದೆ. ಇವೆಲ್ಲವುಗಳು ಕುಳಿತ

ಭಂಗಿಗಳಲ್ಲಿದ್ದು ಆ ವಿಗ್ರಹಗಳಿಗೆ ಪ್ರತ್ಯೇಕವಾದ ಆಸನ ಪ್ರಭಾವಳಿಗಳಿದ್ದು ನಯನ ಮನೋಹರವಾಗಿವೆ. ದೇವಾಲಯದ ಒಳ ಭಾಗದಲ್ಲಿ ಇವುಗಳನ್ನು ಸಂರಕ್ಷಿಸಿಡಲಾಗಿದೆ. ಇಲ್ಲಿರುವ ಪ್ರಮುಖ ದೇವತೆಗಳೆಂದರೆ ಪಾರ್ವತಿ, ಲಕ್ಷ್ಮಿ ಸರಸ್ವತಿ, ಕಾಳಿಕಾದೇವಿ, ದುರ್ಗಾ (ಸಿಂಹವಾಹಿನಿ), ಭೂದೇವಿ, ಭುವನೇಶ್ವರಿ, ಮೊದಲಾದ ವಿಗ್ರಹಗಳದಾಗಿವೆ. ವಿಗ್ರಹಗಳನ್ನು ಅತೀ ಸೂಕ್ಷ್ಮವಾಗಿ ಕೆತ್ತಲ್ಪಟ್ಟಿರುವುದು ಮುಖ ಹಾಗೂ ಅಂಗಾಂಗಗಳನ್ನೂ ಅಳತೆಗೆ ತಕ್ಕಂತೆ ಕೆತ್ತಲ್ಪಟ್ಟಿರುವುದು ತಾಂತ್ರಿಕ ಗುಣವಾಗಿದೆ.

**ಆಸೀನ ಭೈರವ:** ಇದು ತ್ರುಟಿತಗೊಂಡ ವಿಗ್ರಹವಾಗಿದೆ; ಬದ್ನಿಗಟ್ಟಿ ಬಸವಣ್ಣದೇವರ ಗರ್ಭಗೃಹದ ಹೊರಭಾಗದಲ್ಲಿ ಗೋಡೆಗೆ ಆನಿಸಿಡಲಾಗಿದೆ. ಕುಳಿತ ಭಂಗಿಯಲ್ಲಿರುವ ಭೈರವೇಶ್ವರ ಚತುರ್ಭುಜಗಳನ್ನು ಹೊಂದಿದೆ. ಬಲಗೈ ಅಭಯ ಹಸ್ತವಿದ್ದು ಎಡಗೈಯಲ್ಲಿ ಅಮೃತಬಟ್ಟಲು ಹಿಡಿದಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ ಬಲಕ್ಕೆ ತ್ರಿಶೂಲ, ಎಡಕ್ಕೆ ಡಮರುಗ (ಅಸ್ಪಷ್ಟ) ವಿದ್ದು ಮೇಲ್ಭಾಗದಲ್ಲಿ ಸುರಳಿ ಕೆತ್ತನೆಯಿಂದ ಕೂಡಿದೆ ವಿಗ್ರಹದ ಹಿಂಭಾಗದಲ್ಲಿ ಸುಂದರವಾದ ಪ್ರಭಾವಳಿ ಇದ್ದು ಅದರಲ್ಲಿ ಸೂಕ್ಷ್ಮ ಕೆತ್ತನೆ ಮಾಡಲಾಗಿದೆ. ಹರವಾದ ಎದೆ, ದೊಡ್ಡದಾದ ಮುಖ, ಕಿವಿ, ಕಿವಿಯೋಲೆ, ಮೇಲ್ಭಾಗದಲ್ಲಿ ಕಿರೀಟ, ಕಂಠಹಾರ, ಕೊರಳ ಹಾರ, ಉಬ್ಬಿದೆದೆ. ಕಿರಿದಾದ ನಡು, ಯೋಗಮುದ್ರೆಯಲ್ಲಿ ಕುಳಿತ ಕಾಲುಗಳು, ಕೆಳಭಾಗದಲ್ಲಿ ಸೇವಕಿಯರಿದ್ದಾರೆ. ಈ ವಿಗ್ರಹವನ್ನು ಎಲ್ಲಿಯೋ ಪ್ರತಿಷ್ಠಾಪಿಸಿದ್ದು ನಂತರದ ದಿನಗಳಲ್ಲಿ ಸ್ಥಾನ ಪಲ್ಲಟವಾಗಿ ಬಂದಿರುವ ಸಾಧ್ಯತೆಗಳಿವೆ.

**ಷಣ್ಮುಖ (ಕಾರ್ತಿಕೇಯ) ವಿಗ್ರಹ:** ಈ ವಿಗ್ರಹವನ್ನು ದೇವಾಲಯದ ಹೊರಗೋಡೆಗೆ ಒರಗಿ ನಿಲ್ಲಿಸಲಾಗಿದೆ. ಕಾರ್ತಿಕೇಯ ನವಿಲಿನ ಮೇಲೆ ಕುಳಿತು ಸಂಚಾರ ಗೈಯುತ್ತಿರುವ ದೃಶ್ಯವಿದೆ. ಎಡಕೈಯಲ್ಲಿ ಈಟಿ ಹಿಡಿದಿದ್ದು ನವಿಲು ಹಾರುವ ಭಂಗಿಯಲ್ಲಿದೆ. ಮತ್ತು ವಿಗ್ರಹ ತ್ರುಟಿತ ಗೊಂಡಿದ್ದರಿಂದ ಸ್ಪಷ್ಟ ಚಿತ್ರಣ ಕಷ್ಟಸಾಧ್ಯವಾಗಿದೆ.

**ಮಹಿಷಾಸುರ ಮರ್ದಿನಿ:** ಇದು ತ್ರುಟಿತ ವಿಗ್ರಹವಾಗಿದ್ದು ಕೆಳಭಾಗ ಮಾತ್ರ ಲಭ್ಯವಾಗಿದೆ. ಮಹಿಷನ ವಿಗ್ರಹ, ವೀರಾವೇಶದಿಂದ ಹೋರಾಡುತ್ತಿರುವ ಆದಿಶಕ್ತಿಯ ಪಾದ, ಭಚಿರ, ಈಟಿ, ಶುಂಭ–ನಿಶುಂಭರ ದೇಹಗಳು ಮಾತ್ರ ಗೋಚರಿಸುತ್ತವೆ. ಇವೆಲ್ಲವುಗಳ ಆಧಾರದ ಮೇಲಿಂದ ಇದು ಮಹಿಷಾಸುರ ಮರ್ದಿನಿಯ ಅವತಾರದ ವಿಗ್ರಹವೆನಿಸಿ ಅದು ಮುರಿದು ತುಂಡಾಗಿ ಕೆಳಭಾಗ ಮಾತ್ರ ಇಲ್ಲಿ ಲಭ್ಯವಾಗಿದೆ.

**ಕೋಟೆಗೋಡೆ:** ಇದನ್ನು ಆಳರಸರು ತಮ್ಮ ರಕ್ಷಣೆಗೆ ಹಾಗೂ ಗ್ರಾಮ ರಕ್ಷಣೆಗೆ ಅನುಕೂಲವಾಗಲೆಂದು ಬದ್ನಿಗಟ್ಟಿ ಗ್ರಾಮದಿಂದ ೧ ಕಿ.ಮೀ. ದೂರದಲ್ಲಿ ಸುತ್ತಲೂ ಮಟ್ಟಿಗಲ್ಲಿನಿಂದ ನಿರ್ಮಿಸಲಾಗಿದ್ದು ಸುಮಾರು ೫–೬ ಅಡಿ ಎತ್ತರವಾಗಿ ೪–೫ ಅಡಿ ಅಗಲವಾಗಿದ್ದು ೫ ಕಿ.ಮೀ ಸುತ್ತಳತೆಯಲ್ಲಿ ಇಂತಹ ಕೋಟೆ ಗೋಡೆಯನ್ನು ಮಜಬೂತಾಗಿ ಕಟ್ಟಲಾಗಿದೆ. ತಳಭಾಗದಲ್ಲಿ ೩ ಬುನಾದಿ ಇದ್ದು ಮಳೆ ಬಿಸಿಲಿಗೆ, ಸಿಡಿಲಿಗೆ, ಭೂಕಂಪಗಳಿಗೆ ಬಗ್ಗಲಾರದಂತೆ ಅಚ್ಚುಕಟ್ಟಾಗಿ ಕಲ್ಲುಗಳನ್ನು ಜೋಡಿಸಿ ಕೋಟೆಯನ್ನು ನಿರ್ಮಿಸಲಾಗಿದೆ. ಬಹುತೇಕ ಇಂತಹ ಗೋಡೆಗಳು ಮಲೆನಾಡಿನಲ್ಲಿ ಸರ್ವೇಸಾಮಾನ್ಯವಾಗಿ ನಿರ್ಮಿಸಿರುವುದು ತಿಳಿಯುತ್ತದೆ. ಕೆಲವೇಳೆ ಇಂತಹ ಕೋಟೆಗೋಡೆಗಳನ್ನು ಕಾಡು ಪ್ರಾಣಿಗಳಿಂದ ರಕ್ಷಣೆ ಪಡೆಯಲು ನಿರ್ಮಿಸಿರುವ ಸಾಧ್ಯತೆಗಳು ಹೆಚ್ಚಿರುತ್ತದೆ.

**ಹೂಡೆ [ವಾಚ್‌ಟಾವರ್]:** ಸುಮಾರು ೧೦೦ ಅಡಿ ಸುತ್ತಳತೆಯಲ್ಲಿ ಕಲ್ಲು ಮಣ್ಣಿನಿಂದ ವೈರಿಗಳನ್ನು ಪತ್ತೆ ಹಚ್ಚಲು ಹಾಗೂ ವೈರಿಗಳನ್ನು ಒಳಗಿನಿಂದಲೇ ಸಂಹರಿಸಲು ನಿರ್ಮಿಸಿದ ಸ್ಮಾರಕವಾಗಿದೆ. ಇದನ್ನು ವೈರಿಗಳನ್ನು ಪತ್ತೆ ಹಚ್ಚಲೂ, ದೂರದಿಂದ ಬರುವ ಸಂಜ್ಞೆ ತಿಳಿದು ಕೋಟೆ ಬಾಗಿಲನ್ನು ಭದ್ರಪಡಿಸಲು, ಒಳಭಾಗದಲ್ಲಿ ಗುಪ್ತ ಮಾರ್ಗ, ಫಿರಂಗಿ, ಗುಂಡು ಹಾರಿಸಲು, ಕಿಂಡಿ ಮೇಲೇರಲು ಮೆಟ್ಟಿಲುಗಳನ್ನು ನಿರ್ಮಿಸಿ ಗುಪ್ತವಾಗಿ ಅಡಗುದಾಣವಾಗಿದೆ.

(ಬದ್ನಿಗಟ್ಟಿ ಗ್ರಾಮದ ಪ್ರಾಚ್ಯಾವಶೇಷಗಳನ್ನು ಪತ್ತೆ ಹಚ್ಚಿ ಲೇಖನ ಬರೆಯಲು ಸಹಕರಿಸಿದ ಬಮ್ಮಿಗಟ್ಟಿ ಗ್ರಾಮದ ಶ್ರೀ ಶಿವಪ್ಪ ಪಾಗಾದ, ಬಸಪ್ಪಾ ಪಾಗಾದ, ಶ್ರೀಮತಿ ಪಾರ್ವತವ್ವ ಕೋಂ, ಬಸಪ್ಪ ಪಾಗದ, ವಿದ್ಯಾರ್ಥಿಯಾದ ದ್ಯಾಮಣ್ಣ ಬಸಪ್ಪ ಸಾದರ, ಶಿವಪ್ಪ ಹೆಗ್ಗಣ್ಣವರ ಮತ್ತು ತಾವರಗೇರಿ ಗ್ರಾಮದ ಶ್ರೀ ದುಂಡಪ್ಪ ಬಸಪ್ಪ ಮತ್ತಿಗಿ, ಸಹೋದರ ಚನವೀರಪ್ಪ, ಚ. ಮಲ್ಲಿಗವಾಡ, ಬಸಪ್ಪ ಮಹಾದೇವಪ್ಪ ಮಲ್ಲಿಗವಾಡ ಹಾಗೂ ರೊಟ್ಟಿಗವಾಡ ಕಾಲೇಜಿನ ಪ್ರಾಚಾರ್ಯರಾದ ಶ್ರೀ. ಎ.ಎಲ್. ಪೋಲಿಸಪಾಟೀಲ, ಧರ್ಮಪತ್ನಿ ಶ್ರೀಮತಿ ಗಿರಿಜಾ, ಕ.ಮಲ್ಲಿಗವಾಡ ಹಾಗೂ ಡಾ. ಎಸ್.ಎಲ್. ಶಾಂತಕುಮಾರಿ ಇವರೆಲ್ಲರಿಗೂ ಕೃತಜ್ಞತೆ ಸಲ್ಲಿಸದಿರಲಾರೆ.)



ಡಾ. ಎಸ್.ಈ. ಬಸವರಾಜಪ್ಪ*

# ಯಗಟಿಪುರದ ಮಲ್ಲಿಕಾರ್ಜುನ ದೇವಾಲಯ

ಕಡೂರು ತಾಲೂಕು ಹಳೆಯ ಶಿಲಾಯುಗದ ಕಾಲಾವಧಿಯಿಂದಲೂ ಚಾರಿತ್ರಿಕ ಮಹತ್ವ ಪಡೆದ ಸ್ಥಳವಾಗಿದೆ. ಕರ್ನಾಟಕವನ್ನು ಆಳ್ವಿಕೆ ಮಾಡಿದ ಎಲ್ಲ ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟ ಸ್ಥಳವಾಗಿದೆ. ಯಗಟಿಪುರವು ವಿಜಯನಗರ ಕಾಲಾವಧಿಯಲ್ಲಿ **ಯಗಟಿ ಚಾವಡಿ** ಎಂದು ಒಂದು ಆಡಳಿತ ಕೇಂದ್ರವಾಗಿಯೂ ಇತ್ತು. ವಿಜಯನಗರದ ನಂತರ ಚಿತ್ರದುರ್ಗದ ನಾಯಕರು. ತರೀಕೆರೆಯ ನಾಯಕರು ನಂತರ ಟಿಪ್ಪುಸುಲ್ತಾನನ ಆಡಳಿತಕ್ಕೊಳಪಟ್ಟು ಅವನ ಪತನಾನಂತರ ಮೈಸೂರು ಸಂಸ್ಥಾನದಲ್ಲಿ ವಿಲೀನವಾಯಿತು. ಇಲ್ಲಿ ಸಿಗುವ ಐತಿಹ್ಯಗಳು, ಜಾನಪದ ಕಥೆಗಳು ಕರ್ನಾಟಕದ ಇತರ ಭಾಗಗಳಲ್ಲಿ ಕಂಡು ಬರುವ ಐತಿಹ್ಯಗಳಂತೆಯೇ ಪ್ರಾದೇಶಿಕವಾದ ಮಹತ್ವ ನಡೆದಿದೆ.

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ಹೋಬಳಿ ಕೇಂದ್ರವಾದ ಯಗಟಿಪುರದ ಮಲ್ಲಿಕಾರ್ಜುನ ದೇವಾಲಯವು ಬೀರೂರು ಪಟ್ಟಣದಿಂದ ೨೦ ಕಿ.ಮೀ. ಅಂತರದಲ್ಲಿ ಇದೆ. ಈ ದೇವಾಲಯದ ವಿವಿಧ ಮುಖಗಳನ್ನು ಪರಿಶೀಲಿಸಿದಾಗ ಇದೊಂದು ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಅಪೂರ್ವ ಮಾದರಿ ಎನಿಸಿದೆ. ಈ ದೇವಾಲಯವು ವಿಜಯನಗರ ಕಾಲಾವಧಿಯ ದೇವಾಲಯವೆಂಬುದಕ್ಕೆ ಇಲ್ಲಿನ ಶಾಸನಗಳೇ ಸಾಕ್ಷಿ. *(ಶಾಸನ ಸಂಖ್ಯೆ ೨೬; ಚಿಕ್ಕಮಗಳೂರು ಶಾಸನ ಸಂಪುಟದಲ್ಲಿ ಇವೆಲ್ಲ ಪ್ರಕಟವಾಗಿವೆ.)* ಇದೇ ದೇವಾಲಯದ ಗಣಪತಿ ವಿಗ್ರಹದ ಮುಂದಿನ ಕಲ್ಲಿನ ತೊಲೆಯ ಮೇಲಿರುವ ಶಾಸನವು ಕ್ರಿ.ಶ. ೧೫೨೬ರ ದಾಗಿದ್ದು ಶಾಸನದಲ್ಲಿ ಶ್ರೀಮಾನ್ ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಕೃಷ್ಣದೇವರಾಯರ ಅಡಪದಬೈಯ್ಯಪ್ಪ ನಾಯಕರ ತಂದೆ ತಿಮ್ಮಣ್ಣ ನಾಯಕನಿಗೆ ಪುಣ್ಯವಾಗಬೇಕೆಂದು ಅವರ ಹೆಸವಣ್ಣ ಚೆನ್ನಪ್ಪನು ಆಸಂದಿ ಸೀಮೆಯೊಳಗಣ ಕಾರೆಯಹಳ್ಳಿಗೆ ಪ್ರತಿನಾಮ ಮಾಡಿ ಪುರ ಗ್ರಾಮವನ್ನು ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿದ್ದಾಗಿ ಹೇಳುತ್ತದೆ.

ಇದೆ ದೇವಾಲಯದ ಮತ್ತೊಂದು ಶಾಸನ ಕ್ರಿ.ಶ. ೧೫೫೫ರಲ್ಲಿ ಚಿತ್ರದುರ್ಗದ ತಿಮ್ಮಣ್ಣನಾಯಕನ ತಂಗಿ ಕೆಂಪಮ್ಮ ನಾಯಕಿ ಹರೆಯನತೊಳಲು ಗ್ರಾಮವನ್ನು ದಾನ ನೀಡಿದ ವಿವರವಿದೆ. ಈ ಶಾಸನವನ್ನು ಕೆಡಿಸಿದರೆ ಕಾಶಿಯಲ್ಲಿ ತಮ್ಮ ದೇವರು ಗುರುವನ್ನು ಕೊಂದ ಪಾಪಕ್ಕೆ ಹೋಗುತ್ತಾರೆ, ಎಂದಿದೆ. ಹೀಗಾಗಿ ಈ ದೇವಾಲಯದ ವಾಸ್ತು ಶೈಲಿ ವಿನ್ಯಾಸವನ್ನು ಗಮನಿಸಿದರೆ ಇದು ವಿಜಯನಗರ ಕಾಲಾವಧಿಯ ದೇವಾಲಯವೆಂದು ಸ್ಪಷ್ಟವಾಗುತ್ತದೆ.

ಈ ದೇವಾಲಯದ ನಿರ್ಮಾಣವನ್ನು ಕುರಿತಂತೆ ಮೈಸೂರು ಪ್ರದೇಶದ ಕೈಫಿಯತ್ತಿನಲ್ಲಿ ಹೀಗಿದೆ: ವೇದಾವತಿ ನದಿಯ ಉತ್ತರ ದಿಕ್ಕಿನಲ್ಲಿ ಮರಗಳು ಬೆಳೆದು ಅಡವಿ ಅತಿಯಾಗಿದ್ದು ಈ ಸ್ಥಳದಲ್ಲಿ ಪೊದೆಯೊಂದರಲ್ಲಿ ಒಂದು ಹುತ್ತವಿತ್ತು. **ಹರೆಯ ತೊಳಲ** ಗ್ರಾಮದ ಗೌಡ ದಾವಣಗೆರೆ ವೀರಶೆಟ್ಟಿ ಎಂಬುವನ ಮನೆಯಲ್ಲಿ ಕಪಿಲೆ ಎಂಬ ಗೋವು ಇತ್ತು. ಆ ಗೋವು ಮೇಯುವುದಕ್ಕೆ ಬಂದು ಪ್ರತಿದಿನ ಮಧ್ಯಾಹ್ನದಲ್ಲಿ ಹುತ್ತಕ್ಕೆ ಹಾಲು ಕರೆದು ಹಿಂದಿರುಗುತ್ತಿತ್ತು. ಕೆಲ ದಿನಗಳ ನಂತರ ವೀರಶೆಟ್ಟಿಯು ಆ ಗೋವು ಹಾಲು ಕರೆಯುತ್ತಿದ್ದ ಕಾರಣವನ್ನು ತಿಳಿದು ಆ ಹುತ್ತವನ್ನು ಅಗೆಸಲಾಗಿ ಆ ಹುತ್ತದಲ್ಲಿ ಏಳು ಅಡಿಯ ಸರ್ಪವು ಇರುವುದನ್ನು ನೋಡಿ ಗೌಡನು ಆ ಸರ್ಪಕ್ಕೆ ವಿಶೇಷ ಪೂಜೆ ಸಲ್ಲಿಸಿದನು. ಆ ಸರ್ಪವು ಸ್ಥಳಬಿಟ್ಟು ಹೋದನಂತರ, ಅದೇ ಸ್ಥಳದಲ್ಲಿ ಲಿಂಗ ಉದ್ಭವಿಸಿತ್ತು. ವೀರಣ್ಣಶೆಟ್ಟಿಯು ಪ್ರಾರ್ಥನೆ ಮಾಡಿ ತನಗೆ ರಾತ್ರಿ ಸ್ವಪ್ನದಲ್ಲಿಯೂ ದೇವರು ಕಂಡರೆ ಗುಡಿ ಕಟ್ಟಿಸಿ ದೇವರ ಪೂಜೆ ಸಾಂಗವಾಗಿ ಮಾಡಿಸುತ್ತೇನೆ ಎಂದು ಹೇಳಿದ್ದ. ಅದೇ ರಾತ್ರಿ ದೇವರು ಕಂಡು ನಾನು ಯಲ್ಲಾಸುರ ಎಂಬ ರಾಕ್ಷಸನನ್ನು ಸಂಹಾರ ಮಾಡಿ ಇಲ್ಲಿ ಅವತರಿಸಿದ್ದೇನೆ. ಎಂದು ದೇವರ ನುಡಿ ಕೇಳಿದ ಗೌಡನು ದೇವಸ್ಥಾನವನ್ನು ಕಟ್ಟಿಸಿ ಮಲ್ಲೇಶ್ವರ ಸ್ವಾಮಿ ಎಂದು ಹೆಸರಿಟ್ಟನು.

ಇಂತಹ ಐತಿಹ್ಯಗಳು ಕೃಷಿ ಬೆಳವಣಿಗೆಯ ಹಂತದಲ್ಲಿ ಮಹತ್ವವನ್ನು ಪಡೆಯುತ್ತವೆ. ನಮ್ಮ ಭಾರತೀಯ ಸಂಸ್ಕೃತಿಯಲ್ಲಿ

* ಇತಿಹಾಸ ಅಧ್ಯಾಪಕರು, ಶಿಲ್ಪ ಮತ್ತು ವರ್ಣಚಿತ್ರ ಕಲಾ ವಿಭಾಗ, ಬಾದಾಮಿ-ಬನಶಂಕರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಾಗಲಕೋಟೆ ಜಿಲ್ಲೆ.

ಗೋವು ಮತ್ತು ನಾಗಪೂಜೆ ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವುದು ತಿಳಿಯುತ್ತದೆ. ಇದೇ ಕಾಲಾವಧಿಯಲ್ಲಿ ವಿಜಯನಗರದ ಅರಸ ಹರಿಹರನು ದಿಗ್ವಿಜಯಾರ್ಥವಾಗಿ ಈ ಪ್ರದೇಶಕ್ಕೆ ಬಂದಾಗ ವೇದಾವತಿಯ ದಡದಲ್ಲಿರುವ ದೇವಾಲಯವನ್ನು ವಿಸ್ತಾರವಾಗಿ ಕಟ್ಟಿಸಿ **ಹರೆಯನತೊಳಲು** ಎಂಬ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟ ಬಗ್ಗೆ ಐತಿಹ್ಯವಿದೆ. ಇದೆ ರೀತಿ ಮತ್ತೊಂದು ಜಾನಪದ ಕಥೆಯಲ್ಲಿ ಇದೇ ಗ್ರಾಮದ ದೇವರ ಸೇವೆಯನ್ನು ಮಾಡಿಕೊಂಡು ಬಂದಿದ್ದ ಯಗಟಿ ಎಂಬ ಸೂಳೆಯು ಸಂಗೀತ, ಸಾಹಿತ್ಯ, ನಾಟ್ಯಶಾಸ್ತ್ರವನ್ನು ಕಲಿತಿದ್ದು, ಅವಳು ವಿಜಯನಗರದ ಅರಸ ಹರಿಹರನ ಮುಂದೆ ನಾಟ್ಯವಾಡಿದಾಗ ಅವನು ಸಂತೋಷ ಪಟ್ಟು ವೇದಾವತಿ ನದಿ ತೀರದ ದಕ್ಷಿಣ ದಿಕ್ಕಿಗೆ ಒಂದು ಕೋಟೆಯನ್ನು ಕಟ್ಟಿಸಿ, ಆ ಕೋಟೆಗೆ **ವೆಂಗಟಿ** ಎಂಬುದಾಗಿ ಹೆಸರಿಟ್ಟನು. ನಂತರ ಅಲ್ಲಿಯೆ ಒಂದು ಕೆರೆಯನ್ನು ನಿರ್ಮಿಸಿದನು. ಅದೇ ಊರು ಮುಂದೆ ಪುರ ಎಂಬ ಹೆಸರು ಪಡೆಯಿತು, ಎಂದು ಜಾನಪದ ಕಥೆಗಳಲ್ಲಿ ಬರುತ್ತದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕದ ಚರಿತ್ರೆಯಲ್ಲಿ ವೇಶ್ಯೆಯರು ಸಂಗೀತ, ನರ್ತನ, ಗಾಯನ ಈ ಮುಂತಾದ ಅಪೂರ್ವ ಸಾಧನೆಗಳಿಂದಾಗಿ ಅವರಲ್ಲಿಯೂ ಸಹ ಉದಾತ್ತ ಚಾರಿತ್ರ್ಯ, ದೈವಭಕ್ತಿ, ಧರ್ಮಪರತೆ, ದಾನಗಳಿಗೆ ಹೆಸರಾಗಿದ್ದರು, ಎಂಬುದನ್ನು ಕರ್ನಾಟಕದ ಹಲವು ಶಾಸನಗಳು ಸಾರಿ ಹೇಳುತ್ತವೆ. ಇಂತಹ ಅಪರೂಪದ ಉದಾಹರಣೆ ಇಲ್ಲಿನ ಜಾನಪದ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿದಿರುವುದು ಕಂಡುಬರುತ್ತದೆ.

ಮಲ್ಲಿಕಾರ್ಜುನ ದೇವಾಲಯದಲ್ಲಿ ಒಂದು ಗರ್ಭಗೃಹ, ಸುಖನಾಸಿ, ಅಂತರಾಳ, ರಂಗಮಂಟಪ, ಮತ್ತು ಮುಖ ಮಂಟಪಗಳಿವೆ. ದೇವಾಲಯದ ಸುತ್ತಲೂ ವಿಶಾಲವಾದ ಜಾಗವಿದ್ದು, ಸುತ್ತಲೂ ಮಂಟಪದಿಂದ ಆವೃತವಾದ ಆವರಣ ವಿದೆ. ಗರ್ಭಗೃಹದಲ್ಲಿಯೇ ಒಳಭಾಗದಲ್ಲಿ ಪ್ರದಕ್ಷಿಣ ಪಥವನ್ನು ನಿರ್ಮಿಸಲಾಗಿದೆ. ಇದು ಬಾದಾಮಿ ಚಾಲುಕ್ಯ ಮಾದರಿಯಂತೆ ಇದೆ. ಅಂತರಾಳದಲ್ಲಿಯು ಸಹ ೨೧ ಕಂಬಗಳ ವಿಶಾಲವಾದ ಆವರಣವಿದೆ. ಇದರಲ್ಲಿ ಎರಡು ಗರ್ಭಗೃಹಗಳಿವೆ. ಒಂದು ಗರ್ಭಗೃಹದಲ್ಲಿ ವೀರಭದ್ರನ ಶಿಲ್ಪವಿದೆ. ಮತ್ತೊಂದರಲ್ಲಿ ಗಣೇಶನ ಶಿಲ್ಪವಿದೆ. ಇದಕ್ಕೆ ಪ್ರತ್ಯೇಕವಾದ ಒಂದು ಪ್ರವೇಶ ದ್ವಾರವಿದೆ. ಪ್ರವೇಶದ್ವಾರ, ಇತ್ತೀಚಿನ ಗಾರೆಯ ಸುಂದರವಾದ ಗೋಪುರ ಒಳಗೊಂಡಿದೆ.

ದೇವಾಲಯವು ವಿಶಾಲವಾದ ನವರಂಗವನ್ನು ಹೊಂದಿದೆ. ಇದರಲ್ಲಿ ಒಂದು ಸಾಲಿನಲ್ಲಿ ಏಳು ಕಂಬಗಳಂತೆ ಆರು ಸಾಲಿನಲ್ಲಿ ಒಟ್ಟು ೪೨ ಕಂಬಗಳಿವೆ. ಈ ಕಂಬಗಳಲ್ಲಿ ಎಲ್ಲಾ ಒಂದೇ ರೀತಿಯಾದ ಲಕ್ಷಣ ಹೊಂದಿವೆ. ತಳಭಾಗವು ಚೌಕಾಕಾರವಾಗಿವೆ. ಮೇಲಿನ ಭಾಗವು ಪುಷ್ಪಬೋದಿಗೆಯನ್ನು ಹೊಂದಿವೆ. ದೇವಾಲಯಕ್ಕೆ ಅಧಿಷ್ಠಾನ ಭಾಗವೇ ಇಲ್ಲದೆ ಪೂರ್ಣ ಪ್ರಮಾಣದ ನಾಲ್ಕು ಎಕರೆ ವಿಶಾಲವಾದ ಹಾಸು ಬಂಡೆಯ ಮೇಲೆ ನಿರ್ಮಿಸಲಾಗಿದೆ. ಹೀಗಾಗಿ ಛಾವಣಿ ಯನ್ನು ಹಲವು ಭಾಗಗಳಾಗಿ ವಿಭಜಿಸಿದೆ. ಪೂರ್ಣ ದೇವಾ ಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ ಇದು ಶುದ್ಧ ದ್ರಾವಿಡ ಶೈಲಿಯ ದೇವಾಲಯವಾಗಿದೆ. ದೇವಾಲ ಯವು ಒಟ್ಟು ಮೂರು ಪ್ರವೇಶ ದ್ವಾರಗಳು ಸುಂದರವಾದ ಕೆತ್ತನೆಯಿಂದ ಕೂಡಿವೆ. ದಕ್ಷಿಣ ದಿಕ್ಕಿನಲ್ಲಿರುವ ಪ್ರವೇಶ ದ್ವಾರದಲ್ಲಿ ಎರಡು ಸುಂದರವಾದ ಶೈವ ದ್ವಾರಬಾಲಕರ ಶಿಲ್ಪಗಳಿವೆ. ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುವ ಈ ಶಿಲ್ಪಗಳು ವಿಜಯ ನಗರ ಶೈಲಿಯ ಶಿಲ್ಪವನ್ನು ಸ್ಪಷ್ಟವಾಗಿ ಹೋಲುತ್ತವೆ. ಅದೇ ರೀತಿಯಾದ ಉಡುಗೆ-ತೊಡಗೆಯನ್ನು ಕಾಣಬಹುದಾಗಿದೆ.

ಗರ್ಭಗುಡಿಯಲ್ಲಿರುವ ಶಿವಲಿಂಗವು ಕೆತ್ತನೆಯಿಂದ ಕೂಡಿದ್ದಲ್ಲ, ಇದು ಉದ್ಭವಲಿಂಗವೆಂದು ತಿಳಿಯಲಾಗಿದೆ. ಬೇರೆ ಮಾದರಿಯಲ್ಲಿರುವಂತೆ ಶಿವಲಿಂಗಕ್ಕೆ ಪೀಠ, ಮಧ್ಯ ಭಾಗಗಳು ಕಂಡು ಬರುವದಿಲ್ಲ. ಅಂತರಾಳದಲ್ಲಿರುವ ನಂದಿ ವಿಗ್ರಹವು ಅತ್ಯಂತ ಸದೃಢವಾಗಿದೆ. ಮಲಗಿದ ಭಂಗಿಯಲ್ಲಿ ರುವ ಈ ನಂದಿಯ ಕೊರಳಲ್ಲಿ ಗೆಜ್ಜೆ, ಗಂಟೆಯನ್ನು ಧರಿಸ ಲಾಗಿದೆ. ಬಲಗಾಲನ್ನು ಮುಂದೆ ಮಾಡಿದೆ. ಅಂತರಾಳ ದಲ್ಲಿರುವ ಪ್ರತ್ಯೇಕ ಗರ್ಭಗೃಹದಲ್ಲಿ ವೀರಭದ್ರ, ಗಣೇಶ, ಅಂತರಗಟ್ಟೆ ಅಮ್ಮ ಮುಂತಾದ ಶಿಲ್ಪಗಳನ್ನು ನೋಡಬಹುದು. ಈ ಶಿಲ್ಪಗಳಲ್ಲಿ ಗಣೇಶನ ಶಿಲ್ಪ ವಿಶಿಷ್ಟವಾಗಿದೆ. ಈ ಶಿಲ್ಪವು ಸುಮಾರು ಎರಡು ಅಡಿ ಎತ್ತರ, ಒಂದೂವರೆ ಅಡಿ ಅಗಲ ಇದೆ. ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ಇದು ಚತುರ್ಬಾಹುಗಳನ್ನು ಹೊಂದಿದೆ. ಬಲಹಸ್ತವು ಅಭಯ ಹಸ್ತವನ್ನು, ಹಿಂದಿನ ಬಲಹಸ್ತವು ಪಾಶ, ಎಡಹಸ್ತವು ಅಂಕುಶ ವನ್ನು ಹೊಂದಿದೆ. ಶಿಲ್ಪದ ಮೇಲ್ಭಾಗದಲ್ಲಿ ಪ್ರಭಾವಳಿಯನ್ನು ಕೆತ್ತಲಾಗಿದೆ. ಶಿರಭಾಗವು ದುಂಡಾಗಿದೆ. ಕಿರೀಟ ಧರಿಸಲಾಗಿದೆ, ಹೊಟ್ಟೆಯನ್ನು ನಾಗನಿಂದ ಬಂಧಿಸಲಾಗಿದೆ. ಇದು ಸಹ ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ.

ದೇವಾಲಯದ ಆವರಣದಲ್ಲಿ ಎರಡು ದೀಪಸ್ತಂಬ ಗಳಿವೆ. ಉತ್ತರ ದಿಕ್ಕಿನಲ್ಲಿ ಒಂದು, ಮತ್ತೊಂದು ದಕ್ಷಿಣ ದಿಕ್ಕಿನಲ್ಲಿದೆ. ಉತ್ತರದಲ್ಲಿರುವದು ದೊಡ್ಡ ದೀಪಸ್ತಂಭವಾಗಿದೆ. ಸುಮಾರು ೩೦ ಅಡಿ ಎತ್ತರವಾಗಿದೆ. ಅದರ ತಳ ಭಾಗವು ಚೌಕವಾಗಿದ್ದು, ಮಧ್ಯಭಾಗ ಅಷ್ಟಮುಖದಲ್ಲಿದೆ. ತುದಿಯಲ್ಲಿ

ವೃತ್ತಾಕಾರವಾಗಿದೆ. ಮೇಲ್ತುದಿಯಲ್ಲಿ ಒಂದು ಚೌಕವಿದೆ. ಈ ಸ್ತಂಭದಲ್ಲಿ ಒಂದು ಅಪರೂಪದ ಶಿಲ್ಪವಿದೆ. ಸುಮಾರು ೧೦ ಅಡಿ ಎತ್ತರದಲ್ಲಿ ಒಬ್ಬ ಸೈನಿಕನು ಉಡುಗೆ-ತೊಡುಗೆಯನ್ನು ತೊಟ್ಟು, ಕೈಯಲ್ಲಿ ಕತ್ತಿಯನ್ನು ಹಿಡಿದು. ಕುದುರೆ ಸವಾರಿಯನ್ನು ಮಾಡುವಂತೆ ಕೆತ್ತಲಾಗಿದೆ. ಈ ಕುದುರೆ ಯುದ್ಧಕ್ಕೆ ಹೊರಟು ನಿಂತಂತೆ ಕಾಣುತ್ತದೆ. ಸುಮಾರು ೩ ಅಡಿ ಎತ್ತರ ಎರಡೂವರೆ ಅಗಲವಿರುವ ಈ ಶಿಲ್ಪವು ವಿಜಯನಗರದ ಮಹಾನವಮಿ ದಿಬ್ಬದಲ್ಲಿರುವ ಶಿಲ್ಪಗಳನ್ನು ಹೋಲುತ್ತದೆ. ದೇವಾಲಯದ ಪೂರ್ವದ್ವಾರದ ಹತ್ತಿರವೇ ಸುಮಾರು ೨೦ ಅಡಿ ಎತ್ತರದ ತುಲಾಬಾರ ಕಂಬಗಳಿವೆ. ಸಾಮಾನ್ಯವಾಗಿ ವೇದಾವತಿ ನದಿಯ ದಡದಲ್ಲಿರುವ ಈ ದೇವಾಲಯದಲ್ಲಿ ದೇವರ ಪೂಜೆ ಆಚರಣೆಗಳ ಸಂದರ್ಭಗಳಲ್ಲಿ ದೇವರ ತುಲಾಭಾರ ಉತ್ಸವವು ನಡೆಯುತ್ತಿತ್ತು ಎಂದು ಸ್ಥಳೀಯರು ಹೇಳುತ್ತಾರೆ. ಈಗ ಅಂತಹ ಯಾವುದೇ ಆಚರಣೆಗಳು ನಡೆಯುವುದಿಲ್ಲ.

ದೇವಾಲಯದ ಆವರಣದ ಪೂರ್ವದಿಕ್ಕಿನಲ್ಲಿ ಪಶ್ಚಿಮಕ್ಕೆ ಮುಖಮಾಡಿ ನಿಂತಿರುವ ಕಂಬದ ಮೇಲೆ ಒಂದು ಉಬ್ಬು ಶಿಲ್ಪವಿದೆ. ಅದು ಸುಂದರವಾದ ಜಾನಪದ ಶೈಲಿಯಲ್ಲಿದೆ. ಶಿಲ್ಪವು ಒಬ್ಬ ಸ್ತ್ರೀಯದಾಗಿದ್ದು ಸ್ತ್ರೀ ಸಹಜವಾದ ಭಂಗಿಯಲ್ಲಿ ನಿಂತಿದೆ. ನೆರಿಗೆಯುಳ್ಳ ವಸ್ತ್ರವನ್ನು ಧರಿಸಿದೆ. ಕೈಮುಗಿದು ನಿಂತಿರುವ ಈ ಶಿಲ್ಪವು ಭಕ್ತಿ ಪ್ರಧಾನವಾಗಿ ಕಂಡು ಬರುತ್ತದೆ. ಇದು ಇಲ್ಲಿನ ಜಾನಪದ ಕಥೆಗಳಲ್ಲಿ ಬರುವ ನೃತ್ಯ ಮಾಡುತ್ತಿದ್ದ ಯಾಗಟಿ ಎಂಬ ಸೂಳೆಯ ಸ್ತ್ರೀ ಶಿಲ್ಪ ಎಂಬುದಕ್ಕೆ ಪುಷ್ಠಿ ನೀಡುತ್ತದೆ. ಇದೇ ತರಹದ ಶಿಲ್ಪಗಳು ಪೂರ್ವ ಮತ್ತು ಪಶ್ಚಿಮದಲ್ಲಿರುವ ದ್ವಾರಬಾಗಿಲುಗಳ ಮೇಲೆಯೂ ಇವೆ. ಅಂದಿನ ವಿಜಯನಗರದ ಅರಸ ಹರಿಹರನಿಂದ ಬಹುಮಾನಿತಳಾಗಿದ್ದಳು ಎಂಬ ವಿವರಗಳು ಕೈಫಿಯತ್ತಿನಲ್ಲಿಯು ಇದೆ. ಇವಳ ಹೆಸರಿನಿಂದಲೇ ಈ ಗ್ರಾಮಕ್ಕೆ ಯಗಟಿ ಎಂಬ ಹೆಸರು ಬಂದಿರುವ ಸಾಧ್ಯತೆಗಳಿಗೆ.

ಒಟ್ಟಿನಲ್ಲಿ ಈ ದೇವಾಲಯದಲ್ಲಿಯೂ ಬಹು ಹಿಂದಿನಿಂದಲೂ ಪೂಜೆ, ಉತ್ಸವ, ಭಿನ್ನರೀತಿಯ ಆಚರಣೆಗಳು ನಡೆಯುತ್ತಾ ಬಂದಿವೆ. ನಿತ್ಯೋತ್ಸವ, ಮಾಸೋತ್ಸವ, ಪಕ್ಷೋತ್ಸವ, ವಾರ್ಷಿಕ ರಥೋತ್ಸವ ನಡೆಯುತ್ತಿತ್ತು. ಇಲ್ಲಿ ಮುಖ್ಯವಾಗಿ ವಿಜಯನಗರದ ಅರಸರು ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಧರ್ಮ ಸಹಿಷ್ಣುತೆಯ ವಾತಾವರಣವನ್ನು ಅದರ ಅಧೀನ ಮಾಂಡಲೀಕರಲ್ಲಿಯೂ ಇತ್ತು ಎಂಬುದಕ್ಕೆ ಈ ದೇವಾಲಯದ ಅಧ್ಯಯನ ಮಹತ್ವ ಪಡೆಯುತ್ತದೆ. ಈಗಲೂ ಮಧ್ಯ ಕರ್ನಾಟಕದ ಅಸಂಖ್ಯಾತ ಜನರು ಈ ದೇವಾಲಯದೊಂದಿಗೆ ನಿಕಟ ಸಂಪರ್ಕ ಹೊಂದಿರುವದು ತಿಳಿಯುತ್ತದೆ. ಸಾಂಸ್ಕೃತಿಕ ಆಚರಣೆಗಳು ಎಂದಿನಂತೆ ಇಂದಿಗೂ ನಡೆದುಕೊಂಡು ಬಂದಿವೆ. ಸಮಾಜೋಧಾರ್ಮಿಕ ಕೇಂದ್ರವಾಗಿ ಈ ದೇವಾಲಯ ಕಾರ್ಯನಿರ್ವಹಿಸುತ್ತಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಅ.ಲ. ನರಸಿಂಹನ್, ಎನ್. ಮರಿಶಾಮಾಚಾರ್, (ಪ್ರ.ಸಂ), **ಶಿಲ್ಪಕಲಾ ಪ್ರಪಂಚ**, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪.

೨. **ಕರ್ನಾಟಕದ ಕೈಫಿಯತ್‌ಗಳು.**, ೧೯೯೬, ಎಂ.ಎಂ. ಕಲಬುರ್ಗಿ, (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಪಿ.ಎಮ್. ಶಂಕರಪ್ಪ., ೨೦೦೪, **ಶ್ರೀ ಮಲ್ಲಿಕಾರ್ಜುನ ಸ್ವಾಮಿ ಕ್ಷೇತ್ರ ಪರಿಚಯ**, ಯಗಟಿಪುರ, ಕಡೂರು ತಾಲ್ಲೂಕು.

೪. ಕ್ಷೇತ್ರ ಕಾರ್ಯದ ಅನುಭವ (ದೇವಾಲಯಕ್ಕೆ ಸಂಬಂಧಿಸಿದ ಸಮಿತಿಯವರು ಫೋಟೋ ಪ್ರಕಟನೆಗೆ ಅವಕಾಶ ನೀಡದೇ ಇರುವುದರಿಂದ ಫೋಟೋಗಳನ್ನು ಕಳುಹಿಸಲು ಸಾಧ್ಯವಾಗಿಲ್ಲ.)

ಡಾ. ಎಂ.ಜಿ. ಮಂಜುನಾಥ*

# ಹೊಯ್ಸಳರ ರಾಜಲಾಂಛನ ಯಾವುದು? : ಪುನರ್ ಪರಿಶೀಲನೆ

ಕರ್ನಾಟಕದ ಸುಪ್ರಸಿದ್ಧ ರಾಜವಂಶಗಳಲ್ಲಿ ಅತಿ ಪ್ರಮುಖವಾದ ಹೊಯ್ಸಳ ವಂಶದ ರಾಜಲಾಂಛನ ಯಾವುದು? ಎಂಬ ವಿಷಯದ ಬಗ್ಗೆ ಪ್ರಸ್ತುತ ಲೇಖನದಲ್ಲಿ ಆಧಾರಗಳೊಂದಿಗೆ ಪರಿಶೀಲಿಸಲಾಗಿದೆ.

ಹೊಯ್ಸಳರ ದೇವಾಲಯಗಳ ಶಿಖರಗಳ ಶುಕ ನಾಸಿಯ ಮೇಲ್ಭಾಗದಲ್ಲಿ ಸಾಮಾನ್ಯವಾಗಿ ಕಂಡುಬರುವ ಶಿಲ್ಪವನ್ನು 'ಸಳನು ಹುಲಿಯನ್ನು ಕೊಲ್ಲುತ್ತಿರುವ ಶಿಲ್ಪವೆಂದೂ, ಇದು ಹೊಯ್ಸಳರ ರಾಜಲಾಂಛನವೆಂದೂ' ಹಲವಾರು ಮಂದಿ ವಿದ್ವಾಂಸರು ಈ ಹಿಂದೆಯೇ ಗುರುತಿಸಿದ್ದಾರೆ.

ಬಿ.ಎಲ್. ರೈಸ್, ವಿಲಿಯಂ ಕೊಯಿಲೋ, ಜೆ.ಡಿ.ಎಂ. ಡೆರೆಟ್, ಎಸ್. ಶ್ರೀಕಂಠ ಶಾಸ್ತ್ರೀ, ಆರ್.ಎಸ್. ಪಂಚಮುಖಿ, ಪಿ.ಬಿ. ದೇಸಾಯಿ, ಬಾ.ರಾ. ಗೋಪಾಲ್, ಎಸ್. ಶೆಟ್ಟರ್, ಸೂರ್ಯನಾಥ ಕಾಮತ್ ಮುಂತಾದ ವಿದ್ವಾಂಸರು 'ಸಳನು ಹುಲಿಯನ್ನು ಕೊಲ್ಲುತ್ತಿರುವಂತಹ ಶಿಲ್ಪವು ಹೊಯ್ಸಳರ ರಾಜ ಲಾಂಛನ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಆದರೆ ಇದು ಹೊಯ್ಸಳರ ರಾಜಲಾಂಛನವೆಂದು ಹೇಳಲು ಯಾವ ಆಧಾರಗಳೂ ಇಲ್ಲ. ಸಳನು ಕೊಲ್ಲುತ್ತಿರುವ ನೆಂದು ಹೇಳಲಾದ ಶಿಲ್ಪಗಳಲ್ಲಿರುವ ಪ್ರಾಣಿಯ ಶಿಲ್ಪ ಹುಲಿಯಲ್ಲ. ಅದು ಸಿಂಹದ ಶಿಲ್ಪ. ಆ ಪ್ರಾಣಿಯ ಕೊರಳ ಸುತ್ತಲೂ ಇರುವ ಕೇಸರವನ್ನು ಗಮನಿಸಿದರೆ ಅದು ಸಿಂಹವೆಂದು ಗೊತ್ತಾಗುತ್ತದೆ. ಹುಲಿಯಾಗಿದ್ದರೆ ಮೈಮೇಲೆ ಪಟ್ಟೆಗಳಿರುತ್ತಿದ್ದವು. ಕೇಸರ ಇರುತ್ತಿರಲಿಲ್ಲ. ಹೊಯ್ಸಳ ಶಿಲ್ಪಿಗಳು ಸೀರೆಯ ನೆರಿಗೆಗಳನ್ನೂ, ಒಡವೆಗಳ ಸೂಕ್ಷ್ಮ ಕುಸುರಿಯನ್ನೂ ಸಹಾ ಕಂಡರಿಸಬಲ್ಲ ಅದ್ಭುತ ಚಾಕಚಕ್ಯತೆಯನ್ನು ಹೊಂದಿದ ಕಲಾವಿದರು. ಅವರು ಹುಲಿಯ ಮೈಮೇಲಿನ ಪಟ್ಟೆಗಳನ್ನೂ ಸಹಾ ಎದ್ದು ಕಾಣುವಂತೆ ಬಿಡಿಸುತ್ತಿದ್ದರು.

ಸಳನ ಶಿಲ್ಪವೆಂದು ಹೇಳಲಾಗುತ್ತಿರುವ ಶಿಲ್ಪವು ಸಳನ ದ್ದೆಂದು ಹೇಳಲು ಯಾವ ಆಧಾರಗಳೂ ಇಲ್ಲ. ಸಿಂಹದೊಡನೆ ಹೋರಾಡುತ್ತಿರುವ ವ್ಯಕ್ತಿಗೆ ಕೋರೆಹಲ್ಲುಗಳಿರುವುದನ್ನು ಬಳ್ಳಿಗಾವೆ, ನಾಡಕಲಸಿ, ಹಳೇಬೀಡು, ಮೊಸಳೆ, ಕೋರವಂಗಲ ಮುಂತಾದ ಕಡೆಗಳಲ್ಲಿರುವ ಶಿಲ್ಪಗಳಲ್ಲಿ ಗಮನಿಸಬಹುದು.

ಬೇಲೂರಿನಲ್ಲಿರುವ ಇಂತಹ ಆರು ಶಿಲ್ಪಗಳಲ್ಲಿ ಎರಡರಲ್ಲಿ ಆ ವ್ಯಕ್ತಿಯ ತಲೆಯ ಮೇಲೆ ಎರಡೆರಡು ಕೊಂಬು ಗಳಿರುವುದನ್ನು ಗಮನಿಸಬಹುದು. ನಾಡಕಲಸಿ, ಹಳೇಬೀಡು ಮುಂತಾದ ಕಡೆಗಳಲ್ಲಿರುವ ಶಿಲ್ಪಗಳಲ್ಲಿ ಒಬ್ಬ ವ್ಯಕ್ತಿಯ ಬದಲು ಇಬ್ಬರು ವ್ಯಕ್ತಿಗಳು ಸಿಂಹದೊಡನೆ ಹೋರಾಡುತ್ತಿದ್ದಾರೆ. ಈ ಎಲ್ಲಾ ಶಿಲ್ಪಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಿಂಹವೊಂದು ರಾಕ್ಷಸರ ಮೇಲೆ ದಾಳಿಮಾಡುತ್ತಿರುವಂತೆ ಈ ಶಿಲ್ಪಗಳನ್ನು ಕೆತ್ತಲಾಗಿದೆಯೆಂದು ಹೇಳಬಹುದು. 'ಸಳ'ನ ಶಿಲ್ಪವೆಂದು ಹೇಳಲಾದ ಯಾವ ಶಿಲ್ಪದಲ್ಲಿಯೂ ಸೌಮ್ಯವಾದ ಮುಖಭಾವ ಇಲ್ಲವೇ ಇಲ್ಲ. ರಾಕ್ಷಸ ಕಳೆಯೇ ಎದ್ದು ಕಾಣುವಂತಿದೆ.

ಬೇಲೂರಿನ ವಿಜಯನಾರಾಯಣ ದೇವಾಲಯದ ಆವರಣದಲ್ಲಿರುವ ಒಂದು ಶಿಲ್ಪದಲ್ಲಿ ಸಿಂಹದೊಡನೆ ಹೋರಾಡುತ್ತಿರುವ ವ್ಯಕ್ತಿಯೊಬ್ಬನು ತನ್ನ ತಲೆಯನ್ನು ಪಕ್ಕಕ್ಕೆ ತಿರುಗಿಸಿ ಪಲಾಯನ ಮಾಡುವಂತಿದ್ದಾನೆ. ಮತ್ತೊಂದು ಶಿಲ್ಪದಲ್ಲಿ ಆತನು ತನ್ನ ಖಡ್ಗವನ್ನು ಒರೆಯಿಂದ ಹೊರಗೆ ತೆಗೆದೇ ಇಲ್ಲ.

ಒಟ್ಟಾರೆ ಹೊಯ್ಸಳರ ದೇವಾಲಯಗಳ ಬಳಿ ಕಂಡು ಬರುವ ಈ ಶಿಲ್ಪಗಳು ಹೊಯ್ಸಳರ ರಾಜಲಾಂಛನವಲ್ಲ. ಹಾಗಾದರೆ ಹೊಯ್ಸಳರ ರಾಜಲಾಂಛನ ಯಾವುದು? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ಪ್ರಶ್ನೆಗೆ ಶಾಸನಗಳಲ್ಲಿಯೇ ಉತ್ತರವೂ ದೊರೆಯುತ್ತದೆ.

'ಹುಲಿ' ಅಥವಾ 'ಬೆತ್ತದ ಸೆಳೆ'ಯೊಂದಿಗಿರುವ 'ಹುಲಿ' ಹೊಯ್ಸಳರ ರಾಜಲಾಂಛನ ಎಂಬುದು ಹೊಯ್ಸಳರ ಹತ್ತಾರು ಶಾಸನಗಳಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು.

* ರೀಡರ್, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು. ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು – ೫೬೦ ೦೫೬.

ಹಾಸನ ಜಿಲ್ಲೆಯ ಹೊನ್ನಾವರದ ಒಂದು ಶಾಸನದಲ್ಲಿ 'ಪುಲಿಯೆ ವಿಜಯ ಲಾಂಛನ' ಎಂಬ ಉಲ್ಲೇಖ ದೊರೆಯುತ್ತದೆ.[೧] ಹಾಸನ ತಾಲ್ಲೂಕಿನ ಹೆರಗು ಗ್ರಾಮದ ಒಂದು ಶಾಸನದಲ್ಲಿ 'ಶಾರ್ದೂಲ ಕೇತನ' ಎಂಬ ಉಲ್ಲೇಖ ದೊರೆಯುತ್ತದೆ.[೨] ಮತ್ತೊಂದು ಶಾಸನದಲ್ಲಿ 'ಶಾರ್ದೂಲ ಲಾಂಛನ' ಎಂಬ ಉಲ್ಲೇಖ ದೊರೆಯುತ್ತದೆ.[೩] ಹಾಸನ ತಾಲ್ಲೂಕಿನ ಶಾಂತಿಗ್ರಾಮದ ಒಂದು ಶಾಸನದಲ್ಲಿ 'ವ್ಯಾಘ್ರಕೇತನ' ಎಂಬ ಉಲ್ಲೇಖ ದೊರೆಯುತ್ತದೆ.[೪] ಹಾಸನ ಜಿಲ್ಲೆ ಬೇಲೂರು ತಾಲ್ಲೂಕು ಹಳೇಬೀಡಿನ ಸುಪ್ರಸಿದ್ಧವಾದ ಕುವರಲಕ್ಷ್ಮನ ಶಾಸನದಲ್ಲಿ 'ಜಿನಮುನಿಪೋತ್ತಮಂ ಬೆತ್ತದ ಸೆಳೆಯಿನೀ ಪುಲಿಯಂ ಪೊಯ್ಸಳಯೆಂದೊಡಾ ಸಳ ನೃಪಂಗೆ **ಪೊಯಿಸಳಾಭಿದಾನಮಾದುದಾ ಶಾರ್ದೂಳಂ ಪತಾಕಾ ಪ್ರವಿರಾಜಿತ ಚಿತ್ರ ಚಿಹ್ನಮಾದುದು**' ಎಂಬ ಒಕ್ಕಣೆ ದೊರೆಯುತ್ತದೆ.[೫]

ಅರಸೀಕೆರೆ ತಾಲ್ಲೂಕಿನ ಅರಕೆರೆಯ ಒಂದು ಶಾಸನದಲ್ಲಿ 'ಶಾರ್ದೂಳದೊಳ್ಕೂಡಿದ ಸೆಳೆ ಪಿರಿದುಂ ಚಿಹ್ನಮಂ' ಎಂಬ ಉಲ್ಲೇಖ ದೊರೆಯುತ್ತದೆ.[೬] ಚನ್ನರಾಯಪಟ್ಟಣ ತಾಲ್ಲೂಕಿನ ಬಳಗಟ್ಟೆಯ ಒಂದು ಶಾಸನದಲ್ಲಿ 'ಧ್ವಜ ಪಟದೊಳು ಹೊನ್ನೊಳತ್ತಿ ಪುಲಿಯುಂ ಸೆಳೆಯುಂ ನಿಜಲಾಂಛನ ಮಾದುದು[೭]; ಚನ್ನರಾಯಪಟ್ಟಣ ತಾಲ್ಲೂಕಿನ ಬಿದರೆಯ ಶಾಸನವೊಂದರಲ್ಲಿ 'ಪುಲಿಯುಂ ಸೆಳೆಯುಂ ನಿಜಲಾಂಛನ ಮಾದುದು" ಎಂಬ ವಿವರ ದೊರೆಯುತ್ತದೆ.[೮] ಚಿಕ್ಕಮಗಳೂರು ಜಿಲ್ಲೆಯ ಖಾಂಡ್ಯದ ಒಂದು ಶಾಸನದಲ್ಲಿ 'ಪೊಯ್ಸಳ ನೀನೀ ಸೆಳೆಯಿಂದೆನೆ ಮುನೀಂದ್ರನ್ ಅವನು ಆ ಪುಲಿಯಂ ಪೋಸೆಳೆಯೆ ಸೆಳೆಯಿನ್ ಆ ಪುಲಿಯ ಸೆಳೆಯುಂಡಿಗೆಯದಾಯ್ತು ಪೊಯ್ಸಳ ವಂಶಂ'[೯]; ಚಿಕ್ಕಮಗಳೂರು ತಾಲ್ಲೂಕಿನ ಕಳಸಾಪುರದ ಒಂದು ಶಾಸನದಲ್ಲಿ 'ಸಳನಿಂದೆ ಹುಲಿಯ ಸೆಳೆಯುಣ್ಡಿಗೆಯಾದುದು ಚಿಹ್ನಂ'[೧೦] ಎಂಬ ಉಲ್ಲೇಖ ದೊರೆಯುತ್ತದೆ. ಮೇಲೆ ಉಲ್ಲೇಖಿಸಿರುವ ಶಾಸನಗಳನ್ನು ಗಮನಿಸಿದರೆ 'ಹುಲಿ' ಅಥವಾ 'ಬೆತ್ತದ ಸೆಳೆಯಿಂದ ಕೂಡಿರುವ ಹುಲಿ'ಯು ಹೊಯ್ಸಳರ ರಾಜಲಾಂಛನ ಎಂಬ ಅಂಶ ಸ್ಪಷ್ಟವಾಗುತ್ತದೆ. ಈ ಹೇಳಿಕೆಗೆ ಆಧಾರವಾಗಿ ಹುಲಿಯ ಚಿತ್ರವನ್ನು ಲಾಂಛನದಂತೆ ಹೊಂದಿರುವ ಹೊಯ್ಸಳರ ಹಲವು ಶಾಸನಗಳನ್ನು ಉದಾಹರಿಸಬಹುದು.

ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ತಿಪ್ಪೂರು ಗ್ರಾಮದಲ್ಲಿರುವ ವೀರ ಬಲ್ಲಾಳನ ಶಿಲಾಶಾಸನದ ಲಲಾಟದಲ್ಲಿ ಹುಲಿಯ ಉಬ್ಬುಶಿಲ್ಪವಿದೆ.[೧೧] ಮಳವಳ್ಳಿ ತಾಲ್ಲೂಕಿನ ಸುಜ್ಜಲೂರು ಗ್ರಾಮದಲ್ಲಿರುವ ಮೂರನೇ ವೀರಬಲ್ಲಾಳನ ಶಿಲಾ ಶಾಸನದ ಲಲಾಟದಲ್ಲಿಯೂ ಹುಲಿಯ ಉಬ್ಬು ಶಿಲ್ಪವಿದೆ[೧೨] ಕೃಷ್ಣರಾಜಪೇಟೆ ತಾಲ್ಲೂಕಿನ ವರಾಹನಾಥ ಕಲ್ಲಹಳ್ಳಿಯ ಶಿಲಾಶಾಸನದ ಲಲಾಟದಲ್ಲಿಯೂ ಹುಲಿಯ ಉಬ್ಬು ಶಿಲ್ಪವಿದೆ.[೧೩]

ಹೊಯ್ಸಳರ ತಾಮ್ರಶಾಸನಗಳ ಬಳೆಯ ಮೇಲ್ಭಾಗದಲ್ಲಿ ರಾಜಮುದ್ರೆಯ ಭಾಗದಲ್ಲಿಯೂ ಹುಲಿಯ ಮುದ್ರೆ ಇರುವ ಹಲವಾರು ಉದಾಹರಣೆಗಳನ್ನು ಗಮನಿಸಬಹುದು. ಹಾಸನ ಜಿಲ್ಲೆ ಬೇಲೂರು ೧೬೮ ನೆಯ ಸಂಖ್ಯೆಯ ತಾಮ್ರಶಾಸನದಲ್ಲಿ ಹುಲಿಯ ಮುದ್ರೆಯಿದೆ.[೧೪] ಬೇಲೂರಿನ ೧೭೦ನೆಯ ಸಂಖ್ಯೆಯ ತಾಮ್ರಶಾಸನದಲ್ಲಿಯೂ ಹುಲಿಯ ಮುದ್ರೆಯಿದೆ.[೧೫] ಅರಸೀಕೆರೆ ತಾಲ್ಲೂಕಿನ ಮುರುಂಡಿಯ ತಾಮ್ರಶಾಸನದಲ್ಲಿಯೂ ಹುಲಿಯ ಮುದ್ರೆಯಿದೆ.[೧೬] ಬೆಂಗಳೂರು ಮ್ಯೂಸಿಯಂನಲ್ಲಿರುವ ಹೊಯ್ಸಳ ಸೋಮೇಶ್ವರನ ತಾಮ್ರ ಶಾಸನದಲ್ಲಿಯೂ ಹುಲಿಯ ಮುದ್ರೆಯಿದೆ.[೧೭]

ಈ ಎಲ್ಲಾ ಆಧಾರಗಳಿಂದ ಹಾಗೂ ಉದಾಹರಣೆಗಳಿಂದ ಹೊಯ್ಸಳರ ರಾಜಲಾಂಛನ 'ಹುಲಿ' ಅಥವಾ 'ಬೆತ್ತದ ಸೆಳೆಯಿಂದ ಕೂಡಿರುವ ಹುಲಿ' ಎಂಬುದು ಸ್ಪಷ್ಟವಾಗುತ್ತದೆ.

ಹಾಗಾದರೆ ಹೊಯ್ಸಳರ ದೇವಾಲಯಗಳ ಮೇಲ್ಭಾಗದ ವಿಮಾನದಲ್ಲಿ ಅಥವಾ ದೇವಾಲಯಗಳ ಆವರಣದಲ್ಲಿ ಸಿಂಹದೊಡನೆ ಸೆಣಸುತ್ತಿರುವ ವ್ಯಕ್ತಿಯ ಶಿಲ್ಪ ಕಂಡುಬರಲು ಕಾರಣವೇನು? ಎಂಬ ಪ್ರಶ್ನೆ ಉದ್ಭವವಾಗುತ್ತದೆ.

ವಾಸ್ತವವಾಗಿ ಇಂತಹ ಶಿಲ್ಪಗಳು ಮೊದಲಿಗೆ ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿಯೇ ಕಂಡುಬರುತ್ತವೆ. ಗುಲ್ಬರ್ಗಾ ಜಿಲ್ಲೆಯ ಏವೂರಿನಲ್ಲಿರುವ ಈಶ್ವರ ದೇವಾಲಯವು ಕಲ್ಯಾಣ ಚಾಲುಕ್ಯರ ದೇವಾಲಯವಾಗಿದ್ದು ಅಲ್ಲಿ ಇಂತಹ ಶಿಲ್ಪ ಇರುವುದನ್ನು ಗಮನಿಸಬಹುದು.

ಹೊಯ್ಸಳರು ಚಾಮುಂಡೇಶ್ವರಿಯ ಆರಾಧಕರಾಗಿದ್ದರೆಂದು ತೋರುತ್ತದೆ. ಆದ್ದರಿಂದಲೇ ಚಾಮುಂಡೇಶ್ವರಿಯ ವಾಹನವಾದ ಸಿಂಹವು ರಾಕ್ಷಸನ ಮೇಲೆ ದಾಳಿ ಮಾಡುತ್ತಿರುವಂತಹ ಶಿಲ್ಪವನ್ನು ತಮ್ಮ ದೇವಾಲಯಗಳ ಮೇಲೆ ಪ್ರತಿಷ್ಠಾಪಿಸುತ್ತಿದ್ದರೆಂದು ತೋರುತ್ತದೆ.

ಹೊಯ್ಸಳರು ಚಾಮುಂಡೇಶ್ವರಿಯ ಆರಾಧಕರಾಗಿದ್ದರೆಂದು ಹೇಳಲು ಅನೇಕ ಆಧಾರಗಳಿವೆ.[೧] ಹೊಯ್ಸಳರ ಎಲ್ಲಾ ದೇವಾಲಯಗಳಲ್ಲಿ (ಜೈನ ಬಸದಿಗಳನ್ನು ಬಿಟ್ಟು) ಪರಿವಾರ ದೇವತೆಯಂತೆ ಚಾಮುಂಡೇಶ್ವರಿಯ ಶಿಲ್ಪವನ್ನು ಪ್ರತಿಷ್ಠಾಪಿಸಿರುವುದನ್ನು ಗಮನಿಸಬಹುದು.[೨] ಹೊಯ್ಸಳರ ನಾಣ್ಯಗಳ ಮೇಲೆ

ಸಿಂಹವಾಹನೆಯಾದ ದುರ್ಗೆ ಅಥವಾ ಚಾಮುಂಡೇಶ್ವರಿಯ ಚಿತ್ರವನ್ನು ಮುದ್ರಿಸಿರುವುದನ್ನು ಗಮನಿಸಬಹುದು.

ಹೊಯ್ಸಳ ದೊರೆ ವಿಷ್ಣುವರ್ಧನನ ಒಂದು ನಾಣ್ಯದಲ್ಲಿ ಮುಂಭಾಗದಲ್ಲಿ ಸಿಂಹ ಹಿಂಭಾಗದಲ್ಲಿ ತಳಕಾಡುಗೊಂಡ ಎಂಬ ಬರಹವಿದೆ. ಎರಡನೇ ರೀತಿಯ ನಾಣ್ಯದಲ್ಲಿ ಮುಂಭಾಗ ದಲ್ಲಿ ಎರಡು ಸಿಂಹಗಳ ಚಿತ್ರವಿದೆ. ಮೂರನೇ ರೀತಿಯ ನಾಣ್ಯದಲ್ಲಿ ಮುಂಭಾಗದಲ್ಲಿ ಹುಲಿಯ ಚಿತ್ರ, ಹಿಂಭಾಗದಲ್ಲಿ ನೊಣಂಬವಾಡಿಗೊಂಡ ಎಂಬ ಬರಹವಿದೆ. ನಾಲ್ಕನೇ ರೀತಿಯ ನಾಣ್ಯದಲ್ಲಿ ಸಿಂಹವಾಹನೆಯಾದ ದುರ್ಗೆಯ ಚಿತ್ರ, ಹಿಂಭಾಗದಲ್ಲಿ ಮಲಪರೊಳ್ಗಂಡ ಎಂಬ ಬರಹವಿದೆ.

ಒಂದನೇ ನರಸಿಂಹನ ನಾಣ್ಯದ ಮುಂಭಾಗದಲ್ಲಿ ದುರ್ಗೆಯ ಚಿತ್ರ ಹಾಗೂ ಹಿಂಭಾಗದಲ್ಲಿ ಶ್ರೀ ಪ್ರತಾಪ ನಾರಸಿಂಹ ಎಂಬ ಬರಹವಿದೆ. ಇಮ್ಮಡಿ ನರಸಿಂಹನ ನಾಣ್ಯದ ಮುಂಭಾಗದಲ್ಲಿ ಸಿಂಹ ಹಾಗೂ ಹಿಂಭಾಗದಲ್ಲಿ ಪದ್ಮಾಸನದಲ್ಲಿ ಕುಳಿತ ನರಸಿಂಹನ ಚಿತ್ರವಿರುವುದನ್ನು ಗಮನಿಸಬಹುದು.[೧೮]

ಒಟ್ಟಾರೆ ಸಿಂಹದೊಡನೆ ಹೋರಾಡುತ್ತಿರುವ ವ್ಯಕ್ತಿಯ ಶಿಲ್ಪವು ಸಳನ ಶಿಲ್ಪವಲ್ಲ ಹಾಗೂ ಅದು ಹೊಯ್ಸಳರ ರಾಜ ಲಾಂಛನವೂ ಅಲ್ಲ. ಹುಲಿ ಅಥವಾ ಚೆತ್ತದಿಂದ ಕೂಡಿರುವ ಹುಲಿಯ ಚಿತ್ರವು ಹೊಯ್ಸಳರ ರಾಜಲಾಂಛನ ಎಂದು ಒಪ್ಪಬಹುದೆಂದು ತೋರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಕ** ಸಂ.೮, ಹಾಸನ ೯೫. ಹೊನ್ನಾವರ. ಪುಟ. ೩೦೬.

೨. ಎ.ಕ., ಸಂ.೮,ಹಾಸನ ೧೪೪. ಹೆರಗು. ಕ್ರಿ.ಶ. ೧೨೧೭ ಪುಟ. ೩೬೭.

೩. ಎ.ಕ., ಸಂ.೮,ಹಾಸನ ೧೪೫. ಹೆರಗು. ಕ್ರಿ.ಶ. ೧೨೧೮. ಪುಟ. ೩೭೧.

೪. ಎ.ಕ., ಸಂ.೮, ಹಾಸನ. ೧೬೦. ಶಾಂತಿಗ್ರಾಮ. ಕ್ರಿ.ಶ. ೧೨೧೫ ಪುಟ ೩೯೧.

೫. ಎ.ಕ., ಸಂ.೯, ಬೇಲೂರು ೩೦೦. ಹಳೇಬೀಡು. ಕ್ರಿ.ಶ.೧೨೧೬. ಪುಟ. ೨೭೯.

೬ ಎ.ಕ., ಸಂ.೧೦, ಅರಸೀಕೆರೆ. ೩೧೪. ಅರಕೆರೆ. ಕ್ರಿ.ಶ.೧೨೩೩. ಪುಟ. ೩೮೦.

೭. ಎ.ಕ., ಸಂ.೧೦, ಚನ್ನರಾಯಪಟ್ಟಣ. ೭೫. ಬಳಗಟ್ಟೆ ಕ್ರಿ.ಶ.೧೧೭೮. ಪುಟ. ೫೦೩.

೮. ಎ.ಕ., ಸಂ.೧೦, ಚನ್ನರಾಯಪಟ್ಟಣ. ೭೬. ಬಿದರೆ. ಕ್ರಿ.ಶ.೧೧೬೫.ಪುಟ. ೫೦೬.

೯. ಎ.ಕ., ಸಂ.೧೧, ಚಿಕ್ಕಮಗಳೂರು. ೧೮೨. ಖಾಂಡ್ಯ. ಕ್ರಿ.ಶ.೧೧೮೫. ಪುಟ. ೧೧೪.

೧೦. ಎ.ಕ., ಸಂ.೧೧, ಚಿಕ್ಕಮಗಳೂರು. ೨೧೮. ಕಳಸಾಪುರ. ಕ್ರಿ.ಶ.೧೧೭೬. ಪುಟ. ೧೪೫.

೧೧. ಎ.ಕ., ಸಂ.೭, ಮದ್ದೂರು. ೫೨. ತಿಪ್ಪೂರು. ಕ್ರಿ.ಶ. ೧೧೮೦. ಪುಟ. ೨೮೦.

೧೨. ಎ.ಕ., ಸಂ.೭, ಮಳವಳ್ಳಿ ೧೩೬ ಸುಜ್ಜಲೂರು. ಕ್ರಿ.ಶ. ೧೨೯೭. ಪುಟ. ೪೨೭.

೧೩. ಎ.ಕ., ಸಂ.೬, ಕೃಷ್ಣರಾಜಪೇಟೆ. ೧೦೮. ವರಾಹನಾಥ ಕಲ್ಲಹಳ್ಳಿ ಕ್ರಿ.ಶ.೧೩೩೪.ಪುಟ.

೧೪. ಎ.ಕ., ಸಂ.೯, ಬೇಲೂರು. ೧೬೮. ಕ್ರಿ.ಶ. ೧೧೧೭.ಪುಟ. ೧೨೫.

೧೫. ಎ.ಕ., ಸಂ.೯, ಬೇಲೂರು. ೧೭೦. ಕ್ರಿ.ಶ.೧೨೬೧. ಪುಟ. ೧೩೦.

೧೬ ಎ.ಕ., ಸಂ.೧೦, ಅರಸೀಕೆರೆ. ೨೨೭. ಮುರುಂಡಿ. ಕ್ರಿ.ಶ. ೧೧೭೪. ಪುಟ. ೨೭೮.

೧೭. ಎ.ಕ., ಸಂ.೧೦, ಬೆಂಗಳೂರು. ೬. ಕ್ರಿ.ಶ. ೧೨೫೩. ಪುಟ. ೫.

೧೮. ಡಾ. ಎ.ವಿ. ನರಸಿಂಹಮೂರ್ತಿ: **ಕರ್ನಾಟಕನಾಣ್ಯ ಪರಂಪರೆ**. ಪುಟ. ೯೫.

ಡಾ. ಮಲ್ಲಿಕಾರ್ಜುನ ಕುಂಬಾರ*

# ಅತ್ತಿಮಬ್ಬೆಯ ಪೂರ್ವಜರು ರೋಣದವರೇ?

ಗದಗ ಜಿಲ್ಲೆಯ ರೋಣ ನಗರವು ಇಂದು ಪ್ರಾಚೀನ ಅಗ್ರಹಾರವಾಗಿ ರಾಷ್ಟ್ರಕೂಟರ ಕಾಲದಲ್ಲಿ ಒಂದು ಬೃಹತ್ ವಿದ್ಯಾಕೇಂದ್ರವಾಗಿತ್ತು. ಇದರ ಆಡಳಿತವನ್ನು ಈ ಅಗ್ರಹಾರ ದಲ್ಲಿದ್ದ ೧೦೪ ಮಹಾಜನರು ನೋಡಿಕೊಳ್ಳುತ್ತಿದ್ದರು. ರಾಷ್ಟ್ರಕೂಟರ ಖ್ಯಾತಿವೆತ್ತ ಅರಸನಾದ ಅಮೋಘವರ್ಷ ನೃಪತುಂಗನ [೮೧೪-೭೪] ಕಟ್ಟಕಡೆಯ ಆಡಳಿತಾಧಿಕಾರಿಗೆ ಸೇರಿದ್ದ ಬಗ್ಗೆ ಶಾಸನವೊಂದು [ಕ್ರಿ.ಶ. ೮೭೪] ಹಾಗೂ ಈ ನಗರದಿಂದ ಹತ್ತಿರವಿರುವ ಅಂದು ಅಗ್ರಹಾರವಾಗಿದ್ದ ದುರ್ಗಸಿಂಹನ ಸೈಯಡಿ [ಸವಡಿ] ಗ್ರಾಮದಲ್ಲಿ ಇದೇ ರಾಷ್ಟ್ರಕೂಟರ ಅಂತಿಮ ಅರಸನಾದ ಖೊಟ್ಟಿಗನ ಕಾಲಕ್ಕೆ [೯೬೮-೯೭೨] ಸೇರಿದ ಶಾಸನ [೯೭೦]ವೊಂದು ಇದೆ. ರೋಣ ನಗರವು ಅಂದು ಜೈನರ ಪವಿತ್ರ ಸ್ಥಳವಾಗಿತ್ತೆನ್ನಲು ಶಾಸನಗಳು ಹಾಗೂ ಅಳಿದುಳಿದ ಜೈನ ಬಸದಿಗಳೇ ಸಾಕ್ಷಿಯಾಗಿವೆ.

ರತ್ನತ್ರಯರಲ್ಲಿ ಒಬ್ಬನಾದ ಕವಿಚಕ್ರವರ್ತಿ ರನ್ನನಿಂದ ಪೂಜಿತಳಾಗಿ, ಅವನಿಗೆ ಆಶ್ರಯ ನೀಡಿದ ದಾನಚಿಂತಾಮಣಿ ಅತ್ತಿಮಬ್ಬೆಯ ಪೂರ್ವಜರು ಇದೇ ರೋಣದವರು ಆಗಿದ್ದಾರೆ. ಶಾಸನಗಳಿಂದ "ಜೈನ ಶಾಸನ ರಕ್ಷಾಮಣಿ"ಎಂದು ಸ್ತುತಿಭಾಜನಳಾದ ದಾನಚಿಂತಾಮಣಿ ಎನಿಸಿದ ಅತ್ತಿಮಬ್ಬೆಯ ಪೂರ್ವಜರು ಕೂಡಾ ಕನ್ನಡ ನಾಡಿನ ರೋಣದಿಂದ ಪುಂಗನೂರಿನ ಕಡೆಗೆ ವಲಸೆ ಹೋದವರು.

ರೋಣದಲ್ಲಿರುವ ಶಾಸನವೊಂದರ ಪ್ರಕಾರ [೯೪೨] ಬೆಳ್ವಲ-೩೦೦, ಪುಲಿಗೆರೆ-೩೦೦ ಮತ್ತು ಗಂಗವಾಡಿ ೯೬,೦೦೦ ಪ್ರದೇಶಗಳನ್ನು ಆಳುತ್ತಿದ್ದ ಗಂಗರ ಮಹಾ ಮಂಡಲೀಕ ಶ್ರೇಷ್ಠನಾದ ೨ನೇ ಬೂತುಗನು ರಾಷ್ಟ್ರಕೂಟರ ಆಪ್ತಸ್ನೇಹಿತನಾಗಿದ್ದನು. ರಾಷ್ಟ್ರಕೂಟ ಅರಸ ೩ನೇ ಕೃಷ್ಣನ [೯೩೯-೬೭] ಆತ್ಮೀಯತೆಯ ದ್ಯೋತಕವಾಗಿ ಈ ಇಮ್ಮಡಿ ಬೂತುಗನಿಗೆ ಈ ಪ್ರದೇಶವನ್ನು ಆಳ್ವಿಕೆ ಮಾಡಲು ಅನುವು



ರೋಣದ ತಹಶೀಲ್ದಾರ ಕಚೇರಿ ಎದುರಿಗಿರುವ ವೀರಗಲ್ಲು

ಮಾಡಿಕೊಡಲಾಗಿತ್ತು. ಅಷ್ಟೇ ಅಲ್ಲ ೩ನೇ ಕೃಷ್ಣನ ಸೋದರಿ ಯನ್ನು ಈ ಮಾಂಡಲೀಕ ಬೂತುಗನಿಗೆ ಲಗ್ನ ಮಾಡಿಕೊಡ ಲಾಗಿತ್ತು. ರಾಷ್ಟ್ರಕೂಟರ ವೈರಿಗಳಾದ ಕಲ್ಯಾಣದ ಚಾಲುಕ್ಯರ ನಡುವೆ ಆಗಾಗ ಕದನಗಳು ಉಂಟಾಗುತ್ತಿದ್ದವು. ರೋಣದ ಆಡಳಿತವನ್ನು ಹೊಂದಿದ್ದ ಈ ಭೂ ಆರ್ಯ ಪೆರ್ಮಾಡಿ

* "ವಚನ", ರಾಜೂರ - ೫೮೨ ೨೩೦ ತಾ॥ ರೋಣ, ಜಿ॥ ಗದಗ.

ಯಾದ ೨ನೇ ಬೂತುಗನು ಇದೇ ರೋಣದಲ್ಲಿ ನೆಲೆನಿಂತ ಕಲ್ಯಾಣದ ಚಾಲುಕ್ಯರ ೨ನೇ ತೈಲನ ಪರವಾಗಿದ್ದ ವಾಜಿ ಕುಲದ ಕೌಂಡಿನ್ಯ ಗೋತ್ರದ ಜೈನ ಬ್ರಾಹ್ಮಣನಾದ ಪಂಪಯ್ಯ ನನ್ನು ಆಗಾಗ ಪೀಡಿಸುತ್ತಾನೆ, ತೊಂದರೆಕೊಡುತ್ತಾನೆ. ಈ ಹಿನ್ನೆಲೆಯಲ್ಲಿ ಒಮ್ಮೆ ಪಂಪಯ್ಯನು ಈತನಿಗೆ ಒಂದು ಕಾಳು ಅಕ್ಷತೆಯನ್ನು ಕೂಡಾ ನೀಡಲಾರೆನೆಂದು ಪ್ರತಿಭಟಿಸಿ, ವೇಳೆವಾಳಿಯಾದ ಪಂಪಯ್ಯನು ಕಲ್ಯಾಣದ ಚಾಲುಕ್ಯರ ಪರವಾಗಿ ಹೋರಾಡಿ ವೀರಮರಣವನ್ನು ಅಪ್ಪುತ್ತಾನೆ. ಈ ಬಗ್ಗೆ ರೋಣದಲ್ಲಿರುವ ಶಾಸನವೊಂದು [೯೪೨] ವಿವರಣೆ ನೀಡುತ್ತದೆ. ಹಾಗಾದರೆ ಈ ಪಂಪಯ್ಯ ಯಾರು?

ಬಾದಾಮಿ ಚಾಲುಕ್ಯರ ನಂತರ ರಾಷ್ಟ್ರಕೂಟರು ಆಳ್ವಿಕೆಗೆ ಬಂದರೂ ಈ ವಂಶದ ಪ್ರಮುಖ ರಾಜನಾದ ೩ನೇ ಕೃಷ್ಣನ ಕೆಳಗೆ ೨ನೇ ತೈಲನು ತರ್ದವಾಡಿ ೧೦೦೦ ಸಾಮಂತ ರಾಜ ನಾದನು. ಅಹವಮಲ್ಲ ಸತ್ಯಾಶ್ರಯನೆಂದು ಬಿರುದು ಪಡೆದ ಕವಿ ಚಕ್ರವರ್ತಿ ರನ್ನನ ಆಶ್ರಯದಾತನಾದ ೨ನೇ ತೈಲನು ರಾಷ್ಟ್ರಕೂಟರನ್ನು ಅರಸೊತ್ತಿಗೆಯಿಂದ ತಳ್ಳಿ ಪಟ್ಟಕ್ಕೆ ಬಂದನು. ೨ನೇ ತೈಲನು [೯೭೩-೯೭೭] ಗಂಗರಾಜ ಪಾಂಚಾಲ ದೇವನ ಎದುರಾಳಿಯಾಗಿದ್ದನು. ಈ ತೈಲನ ಸೇನಾನಿ ಅತ್ತಿಮಬ್ಬೆಯ ಗಂಡ ನಾಗಿದೇವನು ತನ್ನ ದೊರೆಯ ವೈರಿಯಾದ ಪಾಂಚಾಲದೇವನನ್ನು ಕೊಂದು ಹಾಕಿದನು. ಇದು ಅರಸೊತ್ತಿಗೆಗಳ ಹಿನ್ನೋಟ.

ಲಕ್ಕುಂಡಿ ಶಾಸನದಲ್ಲಿ ಅತ್ತಿಮಬ್ಬೆಯ ಗಂಡನನ್ನು "ವಾಜಿ ಕುಲ ತಿಲಕ" ಎಂದು ವರ್ಣಿಸಲಾಗಿದೆ. ಕವಿ ರನ್ನನು ಬರೆದ ಅಜಿತ ಪುರಾಣದಲ್ಲಿ ಅತ್ತಿಮಬ್ಬೆಯ ಅಜ್ಜ ಪುಂಗನೂರಿನ ನಾಗಮಯ್ಯ, ನಾಗಮಯ್ಯನಿಗೆ ಮಲ್ಲಪಯ್ಯ ಮತ್ತು ಪೊನ್ನಮಯ್ಯ ಎಂಬ ಈರ್ವರು ಮಕ್ಕಳಿದ್ದರು. ಇವರೆಲ್ಲ ವಾಜಿಕುಲದ ಕೌಂಡಿನ್ಯ ಗೋತ್ರದ ಜೈನ ಬ್ರಾಹ್ಮಣರು ಮಲ್ಲಪಯ್ಯನ ಮಗಳೇ ಅತ್ತಿಮಬ್ಬೆ; ನಾಗಮಯ್ಯನ ಹಿಂದಿನ ಪರಂಪರೆಯನ್ನಾಗಲಿ ಅವನ ತಂದೆಯ ಹೆಸರನ್ನಾಗಲಿ ಯಾವ ಆಕರಗಳೂ ನಮಗೆ ನೀಡುತ್ತಿಲ್ಲವಾದರೂ ಇಲ್ಲೊಂದು ಸೂಕ್ಷ್ಮ ಸುಳುಹು ಹೊಳೆಯುತ್ತವೆ. ರೋಣದಲ್ಲಿದ್ದ ಇಮ್ಮಡಿ ಬೂತು ಗನಿಂದ ಮರಣವನ್ನಪ್ಪಿದ ಪಂಪಯ್ಯನೇ ನಾಗಮಯ್ಯನ ತಂದೆಯಾಗಿದ್ದಾನೆ. ಈ ಸಾಧ್ಯತೆಗೆ ಡಾ. ಬಿ.ಆರ್. ಗೋಪಾಲ್ ರಾವ್‌ರವರ ಹೇಳಿಕೆಗಳು ಪುಷ್ಠಿ ನೀಡುತ್ತವೆ. ಇದಕ್ಕೆ ಕಾಲಗಣನೆಯೂ ಕೂಡಾ ಆಧಾರವಾಗಿ ನಿಲ್ಲುತ್ತದೆ. ಈ ಕುಲಕ್ಕೆ ರಾಷ್ಟ್ರಕೂಟರ ದೊರೆಗಳ ಪಾರಂಪರಿಕ ಆಪತ್ತು ಇತ್ತು ಎಂಬುದಕ್ಕೆ ಸಾಕಷ್ಟು ಆಧಾರಗಳು ಇವೆ. ಅಹವಮಲ್ಲನ ರಾಜ್ಯೋನ್ನತಿಗೆ ಅತ್ತಿಮಬ್ಬೆಯ ತಂದೆ ಮಲ್ಲಪಯನು ಕಾರಣನೆಂಬುದನ್ನು ಗಮನಿಸಬೇಕು. ಇಮ್ಮಡಿ ತೈಲನು ತನ್ನ ಒಡೆಯ ರಾಷ್ಟ್ರಕೂಟ ಅರಸನ ವಿರುದ್ಧ ಬಂಡೆದ್ದಾಗ ಅಹವಮಲ್ಲನ ಮುಖ್ಯ ಸಚಿವ "ದಲ್ಲ" ಮತ್ತು 'ಮಲ್ಲಪ'ರಿಬ್ಬರು ತೈಲನ ಜೊತೆಗೂಡಿ ರಾಷ್ಟ್ರ ಕೂಟರನ್ನು ಸಿಂಹಾಸನದಿಂದ ಇಳಿಸಲು ತೈಲನ ಜೊತೆ ಬೆಂಬಲವಾಗಿದ್ದರು.

ರೋಣದ ಇಮ್ಮಡಿ ಬೂತುಗನ ಆಳ್ವಿಕೆಯ ಅವಧಿ ಯಲ್ಲಿ ಪಂಪಯ್ಯನು ಮಡಿದದ್ದು ಹಾಗೂ ಈ ವೀರಮರಣ ವನ್ನು ಅಪ್ಪಿದ ಶಾಸನ ನಿರ್ಮಾಣ ಕಾಲ ೯೪೨. ಈ ದಾಳಿ ಯಿಂದ ಪಂಪಯ್ಯನ ಮಗನಾದ ನಾಗಮಯ್ಯನು ಭೀತಿ ಗೊಂಡು ಪುಂಗನೂರಿನ ಕಡೆ ವಲಸೆ ಹೋಗುತ್ತಾನೆ. ಆ ವಲಸೆ ಹೋಗುವ ಕಾಲದಲ್ಲಿ ಮಗ ಮಲ್ಲಪಯ್ಯನು ಇರಬಹುದು. ಏಕೆಂದರೆ ಈ ಮಲ್ಲಪಯ್ಯ ಮತ್ತು ಅಪ್ಪಕಬ್ಬೆಯ ರಿಗೆ ೯೫೦ರಲ್ಲಿ ಅತ್ತಿಮಬ್ಬೆಯು ಜನ್ಮ ತಾಳುತ್ತಾಳೆ ಎಂಬ ವಿದ್ವಾಂಸರ ಹೇಳಿಕೆ ಇದಕ್ಕೆ ಪುಷ್ಠಿ ನೀಡುತ್ತದೆ. ಒಂದು ವೇಳೆ ಈ ದಾಳಿ ನಡೆಯದೇ ಇದ್ದಿದ್ದರೆ ಅತ್ತಿಮಬ್ಬೆಯು ರೋಣ ದಲ್ಲಿಯೇ ಜನಿಸುತ್ತಿದ್ದಳೇನೋ!?

ಈ ವೀರಮರಣವನ್ನು ಅಪ್ಪಿದ ಪಂಪಯ್ಯನ ಕುಲಗೋತ್ರ ಹಾಗೂ ಅತ್ತಿಮಬ್ಬೆಯ ಕುಲಗೋತ್ರಗಳು ಎಳ್ಳಷ್ಟು ವ್ಯತ್ಯಾಸವಿಲ್ಲದೇ ಒಂದೆ ಆಗಿವೆ. ಇದರೊಂದಿಗೆ ಕಾಲಗಣನೆಯು ಕೂಡಾ ಹೊಂದಾಣಿಕೆ ಆಗುವದರಿಂದ ಅತ್ತಿಮಬ್ಬೆಯ ವಂಶವೃಕ್ಷದ ಮೂಲಪುರುಷ ರೋಣದ ಪಂಪಯ್ಯನೇ ಆಗಿರುವ ಸಾಧ್ಯತೆ ಇದೆ. ಅತ್ತಿಮಬ್ಬೆಯು ತನ್ನ ಪೂರ್ವಜರಿದ್ದ ರೋಣದ ಸಮೀಪದಲ್ಲಿಯೇ ತನ್ನ ಮಗ "ಅಣ್ಣಿಗ" ಲಕ್ಕುಂಡಿಯಲ್ಲಿ ಆಳ್ವಿಕೆ ನಡೆಸಿದರೂ ಅತ್ತಿಮಬ್ಬೆ ಮಾತ್ರ ತನ್ನ ಪೂರ್ವಜರಿಗಾದ ಹಿಂಸೆಯನ್ನು ನೆನೆದು ರೋಣದ ಕಡೆಗೆ ತನ್ನ ದೃಷ್ಟಿಯನ್ನು ಹರಿಸಲಿಲ್ಲವೇನೋ. ಆದರೆ ಲಕ್ಕುಂಡಿ ಸಮೀಪದಲ್ಲಿರುವ ಜಂತ್ಲಿ ಶಿರೂರ ಮತ್ತು ಕೊಪ್ಪಳದ ಪಕ್ಕದಲ್ಲಿರುವ ಗೂಡ್ಲಾ ನೂರುಗಳಲ್ಲಿ ಶಾಸನಗಳು ಲಭ್ಯವಾಗುತ್ತವೆ ವಿನಹ ಆಕೆಯನ್ನು ಕುರಿತು ರೋಣದಲ್ಲಿ ಯಾವದೇ ಶಾಸನ ಲಭ್ಯವಾಗುತ್ತಿಲ್ಲ. ಲಕ್ಕಂಡಿಯಲ್ಲಿದ್ದ ಅತ್ತಿಮಬ್ಬೆಯು ಶ್ರವಣಬೆಳಗೋಳದಲ್ಲಿರುವ ಗೊಮ್ಮಟ ಮೂರ್ತಿಯ ಸ್ಥಾಪನೆ ಕಾಲಕ್ಕೆ ಶ್ರವಣಬೆಳಗೋಳಕ್ಕೆ ಹೋಗಿ ಪುನಃ ಲಕ್ಕುಂಡಿಗೆ ಬರುತ್ತಾಳೆ, ಆದರೆ ಆಕೆಯ ದೃಷ್ಟಿ ಮಾತ್ರ ರೋಣದ ಕಡೆ ಯಾಕೋ ಏನೋ ಹೊರಳುವುದಿಲ್ಲ. ಆದರೆ ಈ ಲಕ್ಕುಂಡಿಯಲ್ಲಿರುವಾಗಿನ ಬಗ್ಗೆ ರನ್ನನ ಕೃತಿಗಳು ಮತ್ತು ಅಲ್ಲಿರುವ ಶಾಸನಗಳು ನಮಗೆ ಆಧಾರವಾಗಿ ನಿಲ್ಲುತ್ತವೆ.

ಲಕ್ಕುಂಡಿಯಲ್ಲಿರುವಾಗ ಈಕೆಗೆ ಪುನಃ ಯಾವದೋ ತೊಂದರೆ ಕಾಣಿಸಿದಂತೆ ಕಂಡುಬರುತ್ತದೆ. ೧೧ನೇ ಶತಮಾನದಲ್ಲಿ ಜೈನ ಧರ್ಮ ಹಿಮ್ಮುಖಗೊಂಡ ವೈಷ್ಣವರು ಮತ್ತು ಕಾಳಾಮುಖ ಶೈವರು ಪ್ರಬಲವಾಗತೊಡಗಿದರು. ತಾನು ಕಟ್ಟಿಸಿದ ಜಿನಾಲಯಕ್ಕೆ 'ಬ್ರಹ್ಮಜಿನಾಲಯ' ವೆಂದು ಹೊಸದಾಗಿ ನಾಮಕರಣ ಮಾಡಿದ ವಿಷಯವು ಇಲ್ಲಿಯ ಒಂದು ಶಾಸನದಲ್ಲಿ ಬರುತ್ತದೆ. ಇದು ಜೈನ ಹಾಗೂ ಬ್ರಾಹ್ಮಣರಲ್ಲಿ ನಡುವಣರಾಜಿಯೆ? ಎಂಬ ಬಗ್ಗೆ ಸಂಶೋಧನೆ ನಡೆಯ ಬೇಕಾಗಿದೆ. ಇಷ್ಟೆಲ್ಲಾ ತೊಂದರೆಯಿಂದ ಅತ್ತಿಮಬ್ಬೆ ತನ್ನ ಕೊನೆಗಾಲವನ್ನು ಈ ಪ್ರದೇಶದಿಂದ ದೂರ ಸರಿದು ನರ್ಮದಾ ನದಿ ತೀರದ ಕುರುಳುಪಾವೆಯಲ್ಲಿ ಸಲ್ಲೇಖನ ವ್ರತದ ಮೂಲಕ ದೇಹತ್ಯಾಗ ಮಾಡಿದಂತೆ ಕಾಣುತ್ತದೆ. ಇದನ್ನು ಲಕ್ಕುಂಡಿ ಶಾಸನವು ತಿಳಿಯಪಡಿಸುತ್ತದೆ.

ಅಂದು ರೋಣವನ್ನು ಆಳುತ್ತಿದ್ದ ಇಮ್ಮಡಿ ಬೂತುಗನ ಹೆಂಡಂದಿರಾದ ದೀವಾಳಾಂಬ [೯೩೮] ಎಂಬಾಕೆಯು ಸೂಡಿಯಲ್ಲಿ ಇನ್ನೊಬ್ಬ ಹೆಂಡತಿ ಪದ್ದಬ್ಬರಸಿಯು ನರೇಗಲ್ಲಿನಲ್ಲಿ [೯೫೧] ಜೈನ ಬಸದಿಗಳನ್ನು ಕಟ್ಟಿಸಿದ ಉಲ್ಲೇಖಗಳಿವೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಗಳು ಅಗತ್ಯವಾಗಿವೆ. ಇಂದಿನ ರೋಣದಲ್ಲಿ ಅಂದಿನ ಜೈನರ ಯಾವದೇ ಪ್ರಾಚೀನ ಕುರುಹು ಗಳಿಲ್ಲ. ಇತ್ತೀಚೆಗೆ ಇಲ್ಲಿನ ಜೈನರು ಸೇರಿ ಪಾರ್ಶ್ವನಾಥನ ಬಸದಿಯನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಅಳಿದುಳಿದ ಜೈನ ಸ್ಮಾರಕಗಳು ಯಾವದೇ ಕುರುಹುಗಳಿಲ್ಲದೇ ಬೇರೆ ಸ್ಮಾರಕಗಳಾಗಿ ಪರಿವರ್ತನೆಗೊಂಡಿವೆ. ಅಂದು ಈ ನಗರಕ್ಕಾಗಿ ತನ್ನ ಪ್ರಾಣವನ್ನು ಬಲಿಕೊಟ್ಟು ವೀರಮರಣವನ್ನಪ್ಪಿದ ಪಂಪಯ್ಯನ ವೀರಗಲ್ಲು ಇಂದು ಅರ್ಧ ತುಂಡಾಗಿ ರೋಣದ ತಹಸೀಲ್ದಾರ ಕಚೇರಿ ಎದುರು ಮೂಕಸಾಕ್ಷಿಯಾಗಿ ನಿಂತಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Chalukya and Kalachurya* [K.U.D], Dr.B.R.Gopal, p. 60.

೨. SII, XI, i, No. 52., ಲಕ್ಕುಂಡಿ ಶಾಸನ.

೩. SII, XI, i, No. 36., ರೋಣ ಶಾಸನ.

೪. **ಬದ್ದವಣ,** ೨೦೦೩, ಪ್ರೊ. ಕಮಲಾ ಹಂಪನಾ., [ಕನ್ನಡ ಪುಸ್ತಕ ಪ್ರಾಧಿಕಾರ].

೫. **ಅಜೀತತೀರ್ಥಂಕರ ಪುರಾಣ.,** ೧೯೮೮, (ಸಂ.) ಬಿ.ಎಸ್. ಸಣ್ಣಯ್ಯ, ರಾಮೇಗೌಡ [ಗೀತಾ ಬುಕ್ ಹೌಸ್ ಮೈಸೂರು].

೬ **ರನ್ನ,** ಜಿ. ಬ್ರಹ್ಮಪ್ಪ., ೧೯೭೪, [ಡಿ.ವಿ.ಕೆ. ಮೂರ್ತಿ ಮೈಸೂರು].

೭. **ಲಕ್ಕುಂಡಿ : ಕಲೆಯ ಬಲೆ,** ೧೯೯೮, ಪ್ರೊ. ಎಂ. ಎಚ್. ಹರಿದಾಸ., [ವಿಕ್ರಮ ಪ್ರಕಾಶನ ಗದಗ].

೮. **ಇತಿಹಾಸ ದರ್ಶನ,** ಸಂಪುಟ ೧೯ ಮತ್ತು ೨೦.

೯. **ಗುಣದಂಕಗಾರ್ತಿ ಅತ್ತಿಮಬ್ಬೆ,** (೧೯೯೪), ಕಮಲಾ ಹಂಪನಾ., ಪುಟ ೧೧.


ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ ।
ಬೌದ್ಧಾಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹಶ್ಚೇತಿಹ ಜೈನಶಾಸನಮಿತಿ ಕರ್ಮೇತಿ ಮೀಮಾಂಸಕಾಃ ।
ಸೋಯಂ ವೋ ವಿದಧಾತು ವಾಂಛಿತ ಫಲಂ ಶ್ರೀ ಕೇಶವೇಶಸ್ಸದಾ ॥

**– ಬೇಲೂರು ಶಾಸನ**

ಡಾ. ಚನ್ನಕ್ಕಪಾವಟೆ*

# ಕಲಬುರ್ಗಿ ಪರಿಸರದಲ್ಲಿ ಚೀಲಾಳ ಪ್ರಸ್ತಾಪ

ವೀರಶೈವ ಲಿಂಗವಂತ ಸಮಾಜದಲ್ಲಿ ಗುರುಪೀಠ ಮತ್ತು ವಿರಕ್ತಪೀಠವೆಂಬ ಎರಡು ಪ್ರತ್ಯೇಕ ಪೀಠಗಳಿರುವಂತೆ, ವಿರಕ್ತಪೀಠರಲ್ಲಿ ಐದು ಸಮಯ ಪರಂಪರೆಗಳಿವೆ. ಇವುಗಳಲ್ಲಿ ಕೆಂಪಿನಸಮಯ, ಸಂಪಾದನಾಸಮಯ, ಜಗದ್ಗುರು ಪ್ರತಿಷ್ಠೆಯ ಮುರುಘಾಸಮಯ, ಕುಮಾರಸಮಯ ಮತ್ತು ಚೀಲಾಳ ಸಮಯಗಳು ಇಂದು ಕನ್ನಡನಾಡಿನ ಒಳ ಹೊರಗಣ ಚಲ್ಲುವರಿದಿದ್ದು ಇವೇ ವಿರಕ್ತ 'ಪೀಠ' 'ಮಠ' ಪರಂಪರೆಗೆ ಮೂಲಬೇರುಗಳಾಗಿವೆ. ಚಿತ್ರದುರ್ಗ ಧಾರವಾಡ ಮುಳುಗುಂದ ಮೊದಲಾದ ಊರುಗಳಲ್ಲಿಯ ಮುರುಘಾ ಸಮಯದ ಮಠಗಳು ಹುಬ್ಬಳ್ಳಿ, ಹಾನಗಲ್ಲು ಮೊದಲಾದ ಊರುಗಳಲ್ಲಿಯ ಕುಮಾರಸಮಯದ ಮಠಗಳು, ಗದಗಿನ ತೋಂಟದಾರ್ಯ ಮಠ, ಇಲಕಲ್ಲಿನ ಚಿತ್ತರಗಿಮಠ, ಕೊಪ್ಪಳದ ಗವಿಮಠ ಉರುವ ಕೊಂಡ ಗವಿಮಠ, ದೂರದ ಕೊಡಗಿನ ದನಗಲ್ಲುಮಠಗಳು ಚೀಲಾಳ ಸಮಯದವು. ಈ ಸಮಯದ ಪ್ರವರ್ತಕ ಚೀಲಾಳ ಸ್ವಾಮಿ ಕಲಬುರ್ಗಿ ಪರಿಸರದ ಕೆಲ್ಲೂರಿನ ಶಾಸನ ಚೀಲಾಳ ಸಮಯದ ಮೂಲ ದಾಖಲೆಗಳಿಗೆ ಸಂಬಂಧಪಟ್ಟಿದಿಯೆ ಎಂಬುದರ ಚಿಂತನೆಯೆ ಇಲ್ಲಿನ ಫಲಿತ.

ಕನ್ನಡನಾಡಿನ ಶಾಸನ, ಕಾವ್ಯಗಳಲ್ಲಿ ಚೀಲಾಳ ಸಮಯದ ಪ್ರಸ್ತಾಪ ಮತ್ತೆ ಮತ್ತೆ ಬಂದಿದೆ. ಇಲ್ಲಿಯವರೆಗೆ ಚೀಲಾಳ ಸಮಯ ೧೬ನೆಯ ಶತಮಾನದಿಂದ ಬೆಳದು ಬಂದಿದೆ ಎಂಬುದು ವಿದ್ವಾಂಸರ ಅಭಿಪ್ರಾಯ; ಇದಕ್ಕೆ ಸಂಬಂಧಪಟ್ಟಂತೆ ವೀರಶೈವಾಮೃತ ಮಹಾಪುರಾಣ ಮಹಾಲಿಂಗೇಂದ್ರವಿಜಯ, ಷಟ್ಥ್ಸಲ ಶಿವಾಯಣ ಎಂಬ ಪ್ರಾಚೀನ ಕೃತಿಗಳು, ಕಲಬುರ್ಗಿ ಜಿಲ್ಲೆಯ ಕೆಲೂರು ಮತ್ತು ಚೌಡದಾನಪುರದ ಶಾಸನಗಳು ಚೀಲಾಳ ಸಮಯ ಪ್ರಸ್ತಾಪ ಇವೆಲ್ಲ ಕ್ರಿ.ಶ. ೧೨ನೆಯ ಶತಮಾನದಿಂದ ೧೬ನೆಯ ಶತಮಾನದ ಮಧ್ಯದಲ್ಲಿ ತೂಗುಯ್ಯಾಲೆಯಾಡುತ್ತಿವೆ. ಈ ಉಲ್ಲೇಖಗಳ ಆಧಾರದ ಮೇಲೆ ಚೀಲಾಳ ಸಮಯದ ಹುಟ್ಟು ಬೆಳವಣಿಗೆಗಳ ಬಗೆಗೆ ಮರುಚಿಂತನ ನಡೆಸಬೇಕಿದೆ.

ಚಿಲ್ಲಾಳ ಹೆಸರಿನ ಪ್ರಸ್ತಾಪವಾಗಿ ಕಲಬುರ್ಗಿ ಜಿಲ್ಲೆಯ ಕೆಲ್ಲೂರಿನಲ್ಲಿ ಕಂಡುಬರುವ ಕ್ರಿ.ಶ. ೧೧೨೫ರ ಶಾಸನ ಪ್ರಮುಖ ದಾಖಲೆಯೆನಿಸಿದೆ. ಕಲಚೂರ್ಯ ಚಕ್ರವರ್ತಿ ರಾಯಮುರಾರಿ ಸೋವಿದೇವ ಮುದೆಗನೂರು ನೆಲೆವೀಡಿನಲ್ಲಿ ಆಳ್ವಿಕೆ ನಡೆಸಿದಾಗ ಆತನ ಮಹಾಪ್ರಧಾನಿ ಬಮ್ಮರಸನೆಂಬವನು ಊರಾಡಳಿತ ಕೈಕೊಂಡಿರುವನು. ಈ ಭಾಗವನ್ನು ಹೈಹಯ ವಂಶದ ಹುಲಿದೇವರಸರು ಮಹಾಮಂಡಲೇಶ್ವರರಾಗಿ ಅಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಂದರ್ಭವದು. ಸರ್ವನಮಸ್ಯದಗ್ರಹಾರ ಕೆಲ್ಲೂರಿನ ಮಹಾಜನರು ಮೂಲಿಗರು ಸೇರಿ ಸಿದ್ಧಸಾತೇಶ್ವರ ದೇವರಿಗೆ ಪೂಜೆ ಪುನಸ್ಕಾರ ಧೂಪ ದೀಪ ನೈವೇದ್ಯ ತಾಂಬೂಲ ಆರ್ಚನೆಗಳಿಗಾಗಿ ಅಲ್ಲಿಯ ಆಚಾರ್ಯ ಚಲ್ಲೆಯರ ಪಾದ ತೊಳೆದು ದತ್ತಿಬಿಟ್ಟ ಪ್ರಸ್ತಾಪ ಕೆಲ್ಲೂರಿನ ಶಾಸನದಲ್ಲಿದೆ.

ಚಿಲ್ಲಾಳರ ದ್ವಿತೀಯ ಉಲ್ಲೇಖ ಕ್ರಿ.ಶ. ೧೨೬೫ರ ಚೌಡದಾನಪುರ ಶಾಸನದಲ್ಲಿದೆ. ತೊರಗಲ್ಲನಾಡಿನ ಕಲ್ಲರಸ ದೇವಗಿರಿ ಯಾದವರ ಅಧಿಕಾರಿ. ಪರಮಶಿವಭಕ್ತಳಾದ ಕಲ್ಲರಸನ ಮಡದಿ ಕನ್ನದೇವಿ. ಲೊಕ್ಕಿಯಲ್ಲಿದ್ದ ಸಿದ್ಧರೇವಣನ ಶಿಶು ಭಕ್ತ್ಯಾಚಾರದ ಚೀಲಾಳನು ತೊರಗಲೆಯ ಕಲ್ಲರಸನ ಅರಸಿ ಕನ್ನದೇವಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿದವನು. ಇವಳು, ಪತಿ ಕಲ್ಲರಸನ ಮರಣಾನಂತರ ಅಗ್ನಿಪ್ರವೇಶಕ್ಕೆ ಸಿದ್ಧಳಾಗಲು ಅವಳ ಮನಸ್ಸನ್ನು ಪರಿವರ್ತಿಸಿ ಧರ್ಮದತ್ತ ಕೇಂದ್ರೀಕರಿಸಿರುವರು. ಅವಳ ಉಜ್ವಲ ವೈರಾಗ್ಯ ಜೀವನ ಚೌಡದಾನಪುರ ಶಾಸನದಲ್ಲಿ ಚಿತ್ರಿತವಾಗಿದೆ. ಸಕಲ ಸಂಪದ ವನ್ನು ಶಿವಗಣಂಗಳಿಗೆ ಸಮರ್ಪಿಸಿದ ಆಕೆ ಗುರು ಚೀಲಾಳ ದೇವನ ಪರಮಶಿಷ್ಯತ್ವವನ್ನು ಸ್ವೀಕರಿಸಿ ಪರಮಶಿಷ್ಯಳೆನಿಸಿದವಳು.

*ಒಡನೆ ಭವಿಗಳು ನೆಗಪಲಾರದ ಹಸುಂಬೆಯಂ*
*ಜಡರೀಕ್ಷಿಸಲ್ಕೆತ್ತಿ ಲೊಕ್ಕಯಂಬೂರೊಳಗೆ ಮರೆದಂ ಚೀಲಾಳದೇವಂ॥*

ಎಂದು ವೀರಶೈವಾಮೃತ ಮಹಾಪುರಾಣ, ಚೀಲಾಳದೇವನ ಪರಿಚಯಿಸಿಕೊಟ್ಟಿದೆ. ಈತ 'ಸಿದ್ಧರೇವಣ್ಣನ ಕಾರುಣ್ಯಶಿಶು',

* ಪ್ರಾಧ್ಯಾಪಕರು, ಕಿತ್ತೂರು ರಾಣಿಚೆನ್ನಮ್ಮ ಸ್ನಾತಕೋತ್ತರ ಕೇಂದ್ರ, ಬೆಳಗಾವಿ.

'ಭಕ್ತ್ಯಾಚಾರದ ಚೀಲಾಳ', 'ಜಂಗಮಸುಖೈಕ ಗುಣಸದ್ಭಾವಂ' ಎಂಬ ಪದಗಳು ಚೀಲಾಳ ವೀರಶೈವ ಲಿಂಗವಂತ ಧರ್ಮದ ಪ್ರವರ್ತಕನೆಂಬುದನ್ನು ಸೂಚಿಸಿವೆ.

ಬಸವಣ್ಣನವರ ದಿವ್ಯ ಪ್ರಭಾವದ ತರುವಾಯ ಅವತಾರ ವೆತ್ತಿದ ಚೌಡದಾನಪುರದ ಶಿವದೇವನದು ಬಹುಮೌಲ್ಯದ ವ್ಯಕ್ತಿತ್ವ. 'ಶಿವದೇವವಿಜಯ' ಕೃತಿಯಲ್ಲಿ ಪ್ರಕಟವಾದ ಏಳು ಶಾಸನಗಳ ಪೈಕಿ ತೊರಗಲ್ಲಿಗೆ ಸಂಬಂಧಿಸಿದ ೩ ಶಾಸನಗಳಲ್ಲಿ ಅವನ ವ್ಯಕ್ತಿತ್ವ ಸ್ಫುಟವಾಗಿ ರೂಪಗೊಂಡಿದೆ. ಯಾದವ ಮಹಾದೇವ ಮೂರನೆಯ ಗುತ್ತರಸನ ಕ್ರಿ.ಶ. ೧೨೬೩ರ ಶಾಸನ ರೇವಣಸಿದ್ಧ, ಭಕ್ತ್ಯಾಚಾರದ ಚೀಲಾಳ ದೇವ ಮತ್ತು ವೀರಕನ್ನದೇವಿಯರ ಉಲ್ಲೇಖ ಮಾಡಿದರೆ ಐದನೆಯ ಶಾಸನದಲ್ಲಿ ತೊರಗಲೆಯ ದೇವರಸ ಹಾಗೂ ಶಿವದೇವರ ಅರ್ಥಪೂರ್ಣ ಸಂಭಾಷಣೆಗೆ ಮಹತ್ವದೊರೆತಿದೆ.

ಗುತ್ತಲದ ಗುತ್ತರಸರ ರಾಜಗುರುವಾಗಿದ್ದ ಶಿವದೇವ ಕನಿಷ್ಠ ಕ್ರಿ.ಶ. ೧೨೬೫ರ ವರೆಗೆ ಬದುಕಿದ್ದು ವೀರಕನ್ನದೇವಿ ಚೀಲಾಳದೇವ ಶಿವದೇವರ ಮಧ್ಯ ಜರುಗಿದ ಒಂದು ಮಹತ್ವದ ಘಟನೆ ಚೌಡದಾನಪುರ ಶಾಸನಸ್ಥವಾಗಿದೆ.

*ಕಾರಣಿಕರನಿತರೊಳು ತಾಂ*
*ಕಾರಣಿಕನೆನಿಪ್ಪ ಸಿದ್ಧರೇವಣದೇವನ*
*ಕಾರುಣ್ಯದ ಶಿಶು ಭಕ್ತ್ಯಾ*
*ಚಾರದ ಚೀಲಾಳದೇವ ಲೊಕ್ಕಿಯೊಳಸರ ॥*

*ಮಿಕ್ಕ ಶಿವಭಕ್ತಿ ಸುಖದಿಂ*
*ದುಕ್ಕಿ ಮಹದೇವ ಭಾವಭಾರದಿಂ ಜಗಮಂ*
*ಲೆಕ್ಕಿಸದೆ ಗಣಸುಖದೊಳಿಹ*
*ಲೊಕ್ಕಿಯ ಚೀಲಾಳದೇವ ತೊರಗಲೆನಾಡೊಳ್*

*ಒದವಿದ ಶಿವಭಕ್ತಿಯ ಸಂ*
*ಪದಮಂ ಕಲ್ಲರಸನರಸಿ ಕನ್ನದೇವಿಗೆ*
*ಮುದದಿಂದವಿತ್ತ ಚೀಲಾ*
*ಳದೇವಂ ಜಂಗಮಸುಖೈಕ ಗುಣಸದ್ಭಾವಂ ॥*

ಪತಿ ಕಲ್ಲರಸನ ಮರಣದ ತರುವಾಯ ಅಗ್ನಿಪ್ರವೇಶಕ್ಕೆ ಸಿದ್ಧಳಾಗಿದ್ದ ಕನ್ನದೇವಿಯ ಮನದಳಲನ್ನು ಪರಿವರ್ತಿಸಿ ಆಕೆಗೆ ಶಿವದೀಕ್ಷೆಗೈಯಲು ವೈರಾಗ್ಯಯುತಳಾದ ಆಕೆ ಮುಕ್ತಿಕ್ಷೇತ್ರ ಚೌಡದಾನಪುರದಲ್ಲಿ ಕಲಿದೇವಾಲಯ ನಿರ್ಮಿಸಿ ಸಕಲ ಸಂಪದವನ್ನು ಶಿವಗಣಂಗಳಿಗೆ ಸಮರ್ಪಿಸಿ ಜೀವನವನ್ನು ಸಾರ್ಥಕಪಡಿಸಿಕೊಂಡಿರುವಳು. ರೇವಣಸಿದ್ಧನ ಆದೇಶದಂತೆ ಕಲಿದೇವೇಶ್ವರಕ್ಕೆ ಶಿವದೇವರ ಪಾದ ತೊಳೆದು ಮೂರನೆಯ ಗುತ್ತರಸನೂ ದತ್ತಿ ನೀಡಿದನು.

ಚೀಲಾಳದೇವನ ಮೂರನೆಯ ಉಲ್ಲೇಖ ಬರುವದು ೧೬ನೆಯ ಶತಮಾನದಲ್ಲಿ. ಎಡೆಯೂರು ತೋಂಟದಾರ್ಯರ ಗುರು ಪರಂಪರೆಯಲ್ಲಿ ಬೋಳಬಸವಾರ್ಯರು, ಗುಮ್ಮಳಾ ಪುರದ ಸಿದ್ಧಲಿಂಗರು ಗೂಳೂರು ಸಿದ್ಧವೀರಣ್ಣ, ಗಗನಸ್ವಾಮಿ, ಕಟ್ಟಿಗೆಹಳ್ಳಿ ಸಿದ್ಧಲಿಂಗರ ತರುವಾಯ ಮುರುಘಾ ಶಾಂತ ವೀರರಿಂದ ಚೀಲಾಳದೇವರು ಹೀಗೆ ಎಡೆವರಿಯರ ಸಂತತಿ, ಪರಂಪರೆ ಬೆಳೆದುಬಂದಿದೆ.

ಮುರುಘಾ ಶಾಂತವೀರಸ್ವಾಮಿ ಚೀಲಾಳ ಸ್ವಾಮಿಗಳ ಸಂಬಂಧದ ಬಗೆಗೆ ಕನ್ನಡ ಅಧ್ಯಯನಪೀಠದ ೨೬೪೯ನೆಯ ನಂಬರಿನ ವೀರಶೈವಾಮೃತ ಮಹಾಪುರಾಣದ ತಾಳೇಪ್ರತಿಯ ಅಂತ್ಯ ಪ್ರಶಸ್ತಿ ಹೀಗಿದೆ.

"ಶ್ರೀಮತು ಸತ್ತುಚಿತ್ತಾನಂದ ನಿತ್ಯಪರಿಪೂರ್ಣಮವಿರಳ ಪರಂಜ್ಯೋತಿ ಪ್ರಕಾಶ ಸ್ವರೂಪಗಳಾದಂಥ ಷಟ್ಸ್ಥಲ ಬ್ರಹ್ಮಿಗಳಾದ ತೋಂಟದ ಸಿದ್ಧಲಿಂಗೇಶ್ವರನ ಸಂಪ್ರದಾಯ ದವರಾದ ಅಡಿಗೆರಗಿ ಬಂದ ಆತ್ಮರುಗಳಿಗೆ ಸುರುಚಿರದ ಪಿಂಡಾದಿಜ್ಞಾನ ಶೂನ್ಯಾಂತವಾಸ ನೂರೊಂದು ಕುಳಸ್ಥಳಂಗಳ ಅರಿವಾಚರಣೆಯನು ಪ್ರತಿಪಾದಿಪ ಮೂರ್ತ್ಯತೀತವಸ್ತು ಪರಬ್ರಹ್ಮ ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರನ ಚಿತ್ಕಮಲೋದಯ ಸುಜ್ಞಾನಪುಂಜಪ್ರದ ಸುದ್ವರ್ಣಲೋಷ್ಟಾದಿ ಲೌಕಿಕ ಭೋಗ ತೃಣೀಕೃತ ಭಕ್ತಿಬಂಧುಜನ ಆಚಾರಾಗ್ರಣಿ ಬಸವಪ್ರಭು ಚೀಲಾಳ ಸ್ವಾಮಿಗಳ ಪಾದಾರವಿಂದಕ್ಕೆ ಈ ವೀರಶೈವಪುರಾಣ ವನ್ನು ಕನ್ನಡದೇಶದ ರನ್ನಗನ್ನಡಿಯಂತೆ ಶೋಭಿಸುತಿರ್ಪ ಕಾನಕಾನ ಹಳ್ಳಿಯ ವಳಿಯದ ತುಂಗಣಿ ಗ್ರಾಮದ ಆರಾಧ್ಯ ದೈವ ಬರಹದ ಬಸವಲಿಂಗದೇವರು ಮಾರಸುಲದ್ರದ ಶರಣ ಯ್ಯಿನ ಗುರುಪಾದಸೆಟ್ಟಿಯ ಭಕ್ತಿಯೆಂದು ವೀರಶೈವಾಮೃತ ಪುರಾಣವ ಸಮರ್ಪಿಸಿದನು. ಗುರುಪಾರಸೆಟ್ಟಿ ಭಕ್ತಿ, ಬಸವ ಲಿಂಗದೇವರ ಬರಹ, ಇಂತೆ ಚೀಲಾಳಸ್ವಾಮಿಗಳೇ ಕರ್ತರು, ಪುನರಪಿ ಈ ಶಾಸ್ತ್ರಮಂ ಚೀಲಾಳೇಶ್ವರನು ತಮ್ಮ ಕರಸ ರಸೀಜಾತ ಕಪಿಲ ಸಿದ್ಧಸ್ವಾಮಿಗಳಿಗೆ ಪಾಲಿಸಿದರು, ಶ್ರೀ.ಶ್ರೀ.ಶ್ರೀ."

ಈ ಪ್ರಶಸ್ತಿ ಗದ್ಯದ ಬರವಣಿಗೆ ಚೀಲಾಳಸ್ವಾಮಿಗಳ ಸಮಕಾಲೀನ ಬರವಣಿಗೆಯಾದ ಪ್ರಶಸ್ತಿ ಗದ್ಯವೇ ವಿಶ್ವಾಸಾರ್ಹ ವೆಂದು ಬೇರೆ ಹೇಳಬೇಕಿಲ್ಲ. ಮುರುಘಾ ಶಾಂತವೀರರೂ ಚೀಲಾಳ ಸ್ವಾಮಿಗಳೂ ಶಿಷ್ಯರಾಗಿರದೇ ಇರ್ವರೂ ಕಟ್ಟಿಗೆಹಳ್ಳಿ ಸಿದ್ಧಲಿಂಗರ ಶಿಷ್ಯರಾಗಿದ್ದು ಸಮಕಾಲೀನರೆಂದು ವಿದ್ವಾಂಸ ಎಂ.ಎಂ. ಕಲಬುರ್ಗಿ ಯವರು ಒಪ್ಪಿಕೊಂಡಿರುವರು ಈ ಗದ್ಯದಿಂದ ಚೀಲಾಳ ಸ್ವಾಮಿಗಳ ಇನ್ನೊಂದು ಹೆಸರು ಬಸವ ಪ್ರಭುವೆಂದು ತಿಳಿದುಬರುತ್ತದೆ. ಈ ಎರಡು ಸಂಗತಿಗಳನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ

'ಷಟ್ಸ್ಥಲ ಶಿವಾಯಣ' ಹೆಸರಿನ ಕೃತಿ ಬೆಂಬಲಿಸಿದೆ. ಬಹುಶಃ ಚೀಲಾಳ ಸ್ವಾಮಿಯ ಬೋಧೆಯನ್ನು ಕಿವಿಯಾರೆ ಕೇಳಿದ ಕವಿ ಸಿದ್ಧಲಿಂಗಾಚಾರ್ಯ ಈ ಕೃತಿ ರಚಿಸಿರುವರು. ಹೀಗಾಗಿ ಈ ಕೃತಿಯು (ಕ್ರಿ.ಶ. ೧೭ನೆಯ ಶತಮಾನ) ಚೀಲಾಳಸ್ವಾಮಿ ಜೀವಂತನಾಗಿರುವಾಗಲೇ ಅವರ ಸಮ್ಮುಖದಲ್ಲಿ ಬರೆಯಲಾಗಿದ್ದು ಚಿತ್ರದುರ್ಗದ ಬೃಹನ್ಮಠ ಪ್ರಕಟಿಸಿದ ಮಹಾಲಿಂಗೇಂದ್ರವಿಜಯ (ಕ್ರಿ.ಶ.೧೮೭೦) ಕಾಲದೃಷ್ಟಿಯಿಂದ ಇದು ೧೭೦ ವರ್ಷಗಳಷ್ಟು ಪ್ರಾಚೀನವಾದುದೆಂದು, ಈ ಕಾರಣಕ್ಕಾಗಿ ಇದರಲ್ಲಿನ ಘಟನೆಗಳು ವಿಶ್ವಾಸಾರ್ಹವಾಗಿದೆ ಎಂದು ಹೇಳಬಹುದು. ಚೀಲಾಳಸ್ವಾಮಿಯನ್ನು ಕುರಿತು ದಾವಣಗೆರೆಯ ಉಮಾಪತಿಯವರು ಅವರ ೧೭೨ ಸ್ವರ ವಚನಗಳ ಸಂಗ್ರಹ ಕೈಕೊಂಡಿರುವರು. ಈ ಪುಸ್ತಕವನ್ನು ಗದಗಿನ ತೋಂಟದಾರ್ಯ ಮಠ ಪ್ರಕಟಿಸಿದೆ.

ಕಾಲದಿಂದ ಕಾಲಕ್ಕೆ ಬರುವ ಚೀಲಾಳ ನಾಮಧೇಯ, ಮುಂದಿನ ಚೀಲಾಳಸ್ವಾಮಿಗಳ ಮೂಲ ಬೇರಾಗಿರಬಹುದೇ! ಇದನ್ನು ಗಮನಿಸಿದರೆ ೧೨ನೆಯ ಶತಮಾನದಿಂದ ಚೀಲಾಳಸ್ವಾಮಿ ಹೆಸರು ಪ್ರಸಿದ್ಧವಾಗಿದ್ದು ಅದೇ ೧೬ನೆಯ ಶತಮಾನದಲ್ಲಿ ಕುಡಿವೊಡೆದು ಉತ್ತರ ಕರ್ನಾಟಕದಲ್ಲಿ ಚಲ್ಲುವರಿದಿರಬಹುದೇ? ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಅಂದಿನ ಲೊಕ್ಕಿ ಇಂದಿನ ಗುಲರ್ಬ್ಗ ಜಿಲ್ಲೆಯ ಕೆಲ್ಲೂರಿಗೂ ಸಮೀಪಕ್ಕು ಅಲ್ಲಿಯ ಚಲ್ಲೆಯಿನ ಹೆಸರು ಮುಂದಿನ ಚೀಲಾಳ ಸಮಯಕ್ಕೆ ಪ್ರೇರಣೆಯಾಗಿರಬಹುದಿದ್ದು ದಾಖಲೆಯಾಗದೇ?



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಎಂ.ಎಂ. ಕಲಬುರ್ಗಿ., **ಮಾರ್ಗ III**, ಪು. ೨೯೨-೨೯೯.

೨. ಸುಗ್ಗಲದೇವಿಯರ ಶಿಲಾಶಾಸನ ತೊರಗಲ್ಲು, **ಶಿವಾನುಭವ**, ಸಂಪುಟ ೩. ಸಂಚಿಕೆ ೨, ಕ್ರಿ.ಶ. ೧೧೮೭.

೩. ಡಾ. ಎಂ.ಎಂ. ಕಲಬುರ್ಗಿ., **ಶಾಸನಗಳಲ್ಲಿ ಶಿವಶರಣರು**, ಪು. ೧೨೦-೧೨೩.

೪. **ಶಿವದೇವ ವಿಜಯ**, ಪೀಠಿಕೆ XXXII.


ಎತ್ತಿಸಿದಂ ಶಿವಗೃಹಮಮಂ । ಸುತ್ತಿಸಿದಂ ಕೀರ್ತಿಂಲತಿಕೆಯಿಂ ದಶದಿಶೆಯಂ ।
ಮತ್ತೆನಿಸದೆ ಪ್ರಜೆಯಂ ಮೆ । ಯ್ವತ್ತಿಸಿದಂ ಸತ್ಯದಿಂದೆ ತಾರಕಗೌಂಡಂ
ನಾಕದಿನಿಟೆತಂದದೊ ಫಣಿ । ಲೋಕದಿನೊಗೆತಂದುದೋ ವಸುಂಧರೆಗೆಂದೀ ।
ಲೋಕಂ ಬಣ್ಣಿಸೆ ತಾರಕ । ಶ್ರೀ ಕಂತಾಲಯಮನೆಸೆವಿನಂ ಮಾಡಿಸಿದಂ

ಸೊರಬ ೨೮೬ (ಕ್ರಿ.ಶ. ೧೧೬೯)

(ಕಳಚೂರ್ಯ ರಾಯಮುರಾರಿ ಸೋವಿದೇವನ ಆಳ್ವಿಕೆಯಲ್ಲಿ ತಾರಕಗೌಡ ಕಟ್ಟಿಸಿದ ಶಿವದೇಗುಲದ ಕುರಿತು.)

ಡಾ. ಎಚ್.ಎಸ್. ಉಷಾರಾಣಿ*

# ವರ್ತಕರು ಮತ್ತು ಅವರ ಸೈನಿಕಪಡೆಯ ಸಾಮಾಜಿಕ ಕಾಳಜಿ

ನಗರಗಳ ಬೆಳವಣಿಗೆಯಲ್ಲಿ ವರ್ತಕರ ಪಾತ್ರ ಮಹತ್ತರವಾದುದು. ನಗರ ಪ್ರಮುಖರಾಗಿ ಕಾರ್ಯ ನಿರ್ವಹಿಸುತ್ತಿದ್ದ ವರ್ತಕರು ಸೈನಿಕ ಪಡೆಯನ್ನು ಹೊಂದಿರುತ್ತಿದ್ದರು. ಹಲವು ಪ್ರಸಂಗಗಳಲ್ಲಿ ವರ್ತಕರು ಹೋರಾಡಿ ವೀರಮರಣವನ್ನಪ್ಪಿದ ಸಂಗತಿಗಳು ದಾಖಲಿಸಲ್ಪಟ್ಟಿವೆ. ವರ್ತಕ ಸಂಘಗಳ ಕೀರ್ತಿ ಹಾಗೂ ವಿಶೇಷತೆಯನ್ನು ಅಂತೂ ಸ್ಥಳೀಯ ಶಾಸನಗಳಲ್ಲಿ ವರ್ಣಿಸಲಾಗಿದೆ. ಪ್ರಸ್ತುತ ಪ್ರಬಂಧ ಅರಸೀಕೆರೆ ತಾಲ್ಲೂಕಿನ ಬಾಣಾವರಸೀಮೆಯ ವರ್ತಕರು ಮತ್ತು ಸೈನಿಕರಿಗ ಸಂಬಂಧಪಟ್ಟದ್ದಾಗಿದೆ.

ಮೈಸೂರಿನ ಎರಡನೇ ಕೃಷ್ಣರಾಜ ಒಡೆಯರ್ ಕಾಲದಲ್ಲಿ (೧೭೩೪-೬೬) ದಳವಾಯಿಗಳ ಪ್ರಾಬಲ್ಯದಿಂದಾಗಿ ಎಲ್ಲೆಲ್ಲೂ ಅರಾಜಕತೆ ತಾಂಡವವಾಡುತ್ತಿತ್ತು. ದಖನಿನಲ್ಲಿ ಬದಲಾಗುತ್ತಿದ್ದ ರಾಜಕೀಯ ಪರಿಸ್ಥಿತಿಗಳಿಂದಾಗಿ ಯುರೋಪಿಯನ್ನರು ಕರ್ನಾಟಕ ಯುದ್ಧದಲ್ಲಿ ತೊಡಗಿಸಿಕೊಳ್ಳುತ್ತಿದ್ದ ಕಾಲವದು. ಆದಾಗ್ಯೂ ಸಾರ್ವಜನಿಕರ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವಲ್ಲಿ ಗಮನ ಹರಿಸುತ್ತಿದ್ದ ವರ್ತಕರ ಮತ್ತು ರಕ್ಷಣಾ ವರ್ಗದವರ ಕಾಳಜಿ ಗಮನ ಸೆಳೆಯುತ್ತದೆ. ಇದಕ್ಕೆ ತಿರುಪತಿ ದೇವಾಲಯ ತಾಮ್ರಶಾಸನಗಳು ನಿದರ್ಶನಗಳಂತಿವೆ.

ಪ್ರಸ್ತುತ ಪ್ರಬಂಧದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ತಿರುಪತಿ ಮಾಲೇಕಲ್ಲು ತಿರುಪತಿ, ಚಿಕ್ಕತಿರುಪತಿ ಎಂದು ಪ್ರಸಿದ್ಧಿಯಲ್ಲಿದೆ. ಅರಸೀಕೆರೆ ತಾಲ್ಲೂಕು ಕೇಂದ್ರ (ಹಾಸನ ಜಿಲ್ಲೆ)ದಿಂದ ೨ ಕಿ.ಮೀ. ದೂರದಲ್ಲಿರುವ ಮಾಲೇಕಲ್ಲು ವೆಂಕಟಾಚಲಸ್ವಾಮಿಯ ಪಡಿತರ ದೀಪಾರಾಧನೆಗೆಂದು ದಾನ ನೀಡಿದ ವಿವರವನ್ನೊಳಗೊಂಡಿರುವ ಶಾಸನಗಳು, ವರ್ತಕರು ಮತ್ತು ಸೈನಿಕ ವರ್ಗದವರ ಹೊಣೆಗಾರಿಕೆಯನ್ನು ತಿಳಿಯಲು ನೆರವಾಗುತ್ತದೆ.

ವರ್ತಕ ಸಂಘಗಳು ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿರುತ್ತಿದ್ದುದಕ್ಕೆ ಸಾಕಷ್ಟು ಪುರಾವೆಗಳಿವೆ. ದೇಶದ ವಿವಿಧ ಭಾಗಗಳಲ್ಲಿ ಸಂಚರಿಸುತ್ತಿದ್ದುದರಿಂದ ವ್ಯಾವಹಾರಿಕ ಜ್ಞಾನವುಳ್ಳವರಾಗಿದ್ದರು. ತಮ್ಮ ವೃತ್ತಿ ಧರ್ಮವನ್ನು ಪಾಲಿಸುತ್ತಿದ್ದರಲ್ಲದೆ. ಸಾಮಾಜಿಕ, ಆರ್ಥಿಕ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರು. 'ಸೆಟ್ಟಿ ಬಿಟ್ಟಲ್ಲೇ ಪಟ್ಟಣ' ಎಂಬಂತೆ ತಾವು ನೆಲೆ ನಿಂತಲ್ಲಿ ನಾಗರಿಕರಿಗೆ ಸಲ್ಲಿಸಬಹುದಾದ ಸೇವೆಯನ್ನು ಸಲ್ಲಿಸುವ ಪ್ರವೃತ್ತಿಯವರಾಗಿರುತ್ತಿದ್ದರು. ಇಂತಹ ಸಾಲಿಗೆ ಸೇರಿದ ವರ್ತಕ ವರ್ಗದವರು ತಿರುಪತಿ ದೇವಾಲಯಕ್ಕೆ ನಗದು ದಾನ ನೀಡಿದ್ದರು. ಅವರನ್ನು ಸಾಂಪ್ರದಾಯಿಕವಾಗಿ ಚಿತ್ರಿಸಿರುವ ಶಾಸನೋಕ್ತ ಸ್ತುತಿ ಹೀಗಿದೆ:-"ಚಪ್ಪನ್ನೈವತ್ತಾರು ದೇಶದಲ್ಲು ಸಂಚರಿಸುವಂತ್ಥಾ ಮಹಾನಾಡಿನ ಬಿರುದುಳ್ಳ ಉದ್ದಂಡ ಕೋಲಾಹಲರಾದ ಅಡವಿಯ ಅಂಗಡಿಯು ಮಾಡಿಸಿಡುವ ಪಟ್ಟಣಂ ಮಾಡಿ ಸಲ್ಲದ ನಾಣ್ಯವನು ಪಲಿಸುವರಾದ ಹಾದಿ ಜಗಳವ ಹಣವಡ್ಡಕೆ ಕೊಂಬವರಾದ ಬೀದಿ ಜಗಳವ ಬೇಳೆಬಡ್ಡಿಗೆ ಕೊಡುವವರಾದ ಶ್ರೀ ಮದ್ಗಣೇಶ್ವರ ಗೌರೀಶ್ವರ ದೇವರ ಪಾದಪಂಕಜರಾದ ಅಭಿನವ ಜಂಬೂದ್ವೀಪ ನಿರೋ ಹರಣ ಘಟೋಪೀತ ಸುವರ್ಣಯಿಂದಿರಾ ಮಂದಿರವಾದ ಧರ್ಮ ಧರ್ಮಕ್ಕೆ ವರಗಲ್ಲರಾದ **ಶ್ರೀ ಚೆನ್ನಬಸವೇಶ್ವರ ದೇವರ ಸಾಂಪ್ರದಾಯಿಕರಾದ** ಮಹಾಮೇರುವಿಗೆ ಸಮಾನರಾದಂತ್ಥಾ ಶ್ರೀ ಶೈಲಕ್ಕೆ ದಕ್ಷಿಣ ದಿಗ್ಭಾಗದಲು ವಪ್ಪುತ್ತಿಹಂಥಾ ಬಾಣಾವರದ ಕಂಠೀರಾಯ ಪೇಟೆ ಸಂಥೆ ಶಾಸನ" ಎಂದು ಸ್ಪಷ್ಟ ಪಡಿಸುತ್ತಾ, "ಸೂರ್ಯವೀದಿ ಸೋಮವೀದಿಚವು ಮಧ್ಯದಲು ವಪ್ಪುತಿಹಂತ್ಥಾ ಶ್ರೀ ಬಸವೇಶ್ವರ ದೇವರ ಮುಖಮಂಟತದಲ್ಲು ವಜ್ರ ಸಿಂಹಾಸನಾರೂಢರಾಗಿ ಕುಳತಿರ್ಚ್ಚಥ್ಥಾ ಸ್ವದೇಶ ಪರದೇಶ ಉಭಯ ನಾನಾದೇಶ ಪೃಥವೇ ಶೆಟ್ಟಿ ರಾಯರ ಮಂತ್ರಿ ಬಾಸ್ಕರಂಣಗಳು ಐಯ್ಯಾವಳಿ ಮುಖ್ಯರಾದ **ಸಾಲುಮೂಲೆ** ಚತುದಿಗಕ್ಕು ಐವತ್ತಾರು ದೇಶದ ಮಹಾನಾಡಿನವರು ಸ್ವಾಮಿಯರ ಪಡಿತರ ದೀಪಾರಾಧನೆಗೆ ಶಿವಾರ್ಪಣವಾಗಿ ವಪ್ಪಿ ಕೊಟ್ಟಂತಾ ದಾನಶಾಸನ" ಎಂಬುದಾಗಿ ತಮ್ಮ ಅಧಿಕ ಸಂಖ್ಯೆಯ ಸಮಾವೇಶವನ್ನು ಹಾಗೂ ಅಂತಹ ಸಮಾವೇಶವನ್ನು ನಿಭಾಯಿಸುತ್ತಿದ್ದ ಸಂಥೆಯ ಮುಖ್ಯಸ್ಥ ಭಾಸ್ಕರಂಣನನ್ನು ಪ್ರಸ್ತಾಪಿಸಲಾಗಿದೆ. ಸಂತೆ ನಡೆಯುತ್ತಿದ್ದ ವಾರದ ದಿನವನ್ನು ಗೊತ್ತುಪಡಿಸಿಲ್ಲ. ರಕ್ತಾಕ್ಷಿ ಸಂವತ್ಸರದ ಪುಷ್ಯಶುದ್ಧ ೭ ಭಾನುವಾರ ಮಕರ ಸಂಕ್ರಮಣ ಪುಣ್ಯ ಕಾಲದಲ್ಲಿ ಈ ಶಾಸನ ರಚಿಸಿರುವುದರಿಂದ

* ೪೩೩ 'ಇ' ಬ್ಲಾಕ್ ಜೆ.ಪಿ.ನಗರ, ಮೈಸೂರು - ೫೭೦ ೦೦೮.

ಾನುವಾರ ಸಂತೆ, ನಡೆಯುತ್ತಿತ್ತೆಂದು ಊಹಿಸಬಹುದು. ಲ್ಲೇಖಿತ ಶಾಸನದಿಂದ ಈ ವರ್ತಕವರ್ಗದವರು ವೀರಶೈವ ರಂಪರೆಗೆ ಸೇರಿದವರೆಂದು ಗೊತ್ತಾಗುತ್ತದೆ.

ಮೇಲಿನ ಶಾಸನಕ್ಕೆ (ದಾನ ಶಾಸನ) ಸಹಿ ಹಾಕಿದ ಡಳಿತ ವರ್ಗದಿಂದ, ಕರ್ನಾಟಕದ ಮೇಲೆ ಮೊಗಲರು ುತ್ತು ಮರಾಠರ ದಾಳಿಗಳ ಪ್ರಭಾವವನ್ನು ಕಾಣಬಹುದು. ಲ್ಲದೆ ಈ ದೇವಾಲಯ ಪ್ರವರ್ಧಮಾನದಲ್ಲಿದ್ದು ಆಡಳಿತ ರ್ಗದವರ ಗಮನ ಸೆಳೆದಿತ್ತೆಂದು ವೇದ್ಯವಾಗುತ್ತದೆ. ುದಾಹರಣೆಗೆ ಉಲ್ಲೇಖಿತ ದಾನಶಾಸನ ಬಾಣಾವರದ ುಬೇದಾರ್ರು ವೆಂಕಟನಾರಾಯಣಪ್ಪ, ಸುಂಕದ ಮಣಿ ಹೂ ಾರ ಶ್ಯಾಮಂಣ, ಪಟ್ಟಣಶೆಟ್ಟಿ ಮಲುಕಂಣ, ನಾಡಿನ ಿಕ್ಕತಂಮಣ್ಣಿ ಮತ್ತು ನಾರಶೀದೇವನವರ ಸಮ್ಮುಖದಲ್ಲಿ ರೆದು ಸಹಿ ಹಾಕಲ್ಪಟ್ಟಿದೆ.

ದೇವಾಲಯಗಳು ಪಟ್ಟಣಗಳ ಬೆಳವಣಿಗೆಯಲ್ಲೂ ಹಕಾರಿಯಾಗಿದ್ದವು. ಅಂತಹ ಪಟ್ಟಣಗಳು ವರ್ತಕರನ್ನು ಕರ್ಷಿಸುತ್ತಿ ದ್ದವು. ಈ ಹಿನ್ನೆಲೆಯಲ್ಲಿ ತಿರುಪತಿ ದೇವಾಲಯ ರ್ತಕರನ್ನು ಆಕರ್ಷಿಸುವ ತಾಣವಾಗಿತ್ತೆಂದು ಅಂದಿನ ದಾನ ಾಸನಕ್ಕೆ[೨] ಸಹಿ ಹಾಕಿದ ಪರಸ್ಥಳದ ವರ್ತಕರಿಂದ ತಿಳಿದು ರುತ್ತದೆ. ಅದರಂತೆ ಸ್ಥಳ ಪರಸ್ಥಳದ ವರ್ತಕರು ಸ್ವಾಮಿಯ ೀವೆಗೆಂದು ೨ ಹಣವಿನ ಲೆಕ್ಕದಲ್ಲಿ (ಅಂಗಡಿವೊಂದಕ್ಕೆ) ಾನ ನೀಡಿದ್ದರು. ಆಡಳಿತ ವರ್ಗದೊಂದಿಗೆ ಸಹಿ ಹಾಕಿದ ರ್ತಕ ವರ್ಗದವರಲ್ಲಿ, ನಾರಾಯಣಪೇಠೆ, ಹೊಸಪೇಠೆ, ಿನ್ನರಾಯಪಟ್ಟಣಪೇಠೆ ಗರುಡಗಿರಿಸೀಮೆ, ಸಿಡಿದುರ್ಗ, ೊಸದುರ್ಗ, ರಾಯದುರ್ಗ, ಪುಂಗನೂರು, ರಾಯಸಂಸ್ಥಾನ, ಳ್ಳಾರಿ, ತಾಡಪತ್ರೆ, ಆದವಾನಿ, ಅಂಣಿಗೆರೆ, ಲಕ್ಷ್ಮೇಶ್ವರ, ಂಗಳೂರು, ತೆಂಕಲ ಕೋಟೆ, ಗುಂಡಮತಿಕಲ್ಲು, ಕಡಪ, ೂದಗುಂಟೆ, ವೆಂಕಟಪತಿ ದೇಶ ಮೊದಲಾದೆಡೆಗಳ ರ್ತಕರನ್ನು ಹೆಸರಿಸಬಹುದು.

ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿ ಕಂಡುಬಂದ ಡಳಿತ ಸುಧಾರಣೆಗಳಿಂದಾಗಿ ಆಡಳಿತ ಘಟಕಗಳನ್ನು ಡಿಗಳೆಂದು ಕರೆಯಲಾಗುತ್ತಿತ್ತು. ಪ್ರತಿಯೊಂದು ಗಡಿ ಅಥವಾ ್ರಾಂತಕ್ಕೆ ಸುಭೇದಾರರನ್ನು ನೇಮಕ ಮಾಡಲಾಗುತಿತ್ತು. ಇದರ ಜೊತೆಗೆ ವಿಜಯನಗರ ಕಾಲದಿಂದಿದ್ದ ರಾಜ್ಯ, ೀಮೆ, ಸ್ಥಳ ಮುಂದುವರಿದಿತ್ತು.) ಜೊತೆಗೆ ಸ್ಥಳೀಯ ೖನಿಕರು, ರಕ್ಷಣಾ ಕಾರ್ಯಕ್ಕಾಗಿ ನೇಮಿಸಲ್ಪಡುತ್ತಿದ್ದರು. ಂತಹವರನ್ನು ಕಂದಾಚಾರದವರೆಂದು ಕರೆಯಲಾಗುತ್ತಿತ್ತು.[೩] ದರಂತೆ ಬಾಣಾವರ, ಜಾವಗಲ್ಲು ಕಂದಾಚಾರದವರಾದ ೀರುಗಾರ್ರು ವಂತಿಗಾರ್ರು ಮತ್ತು ವಾಲೆಕಾರ್ರು ಸ್ವಾಮಿಯ ಡಿತರ ದೀಪಾರಾಧನೆ ಸೇವೆಗೆ ಜನವೊಂದಕ್ಕೆ ಕಂಠೀರಾಯಿ ಹಣ ಒಂದರ ಪ್ರಕಾರ ತಮ್ಮ ಸಂಬಳದಲ್ಲಿ ಪುತ್ರ ಪೌತ್ರ ಪರಂಪರೆಯಾಗಿ ಒಪ್ಪಿ ಶಾಸನ[೪] ಬರೆಸಿದುದರ ಸಾರಾಂಶ ಹೀಗಿದೆ: "ನಾವು ಠಾಣ್ಯೆಮಂದಿ (ಸ್ಯೆನಿಕರು) ಅಠವಣೆ (ಕಂದಾಯ) ಹೋಬಳಿಗೆ ತರಬೇಕಾದ ಕಂದಾಯ ತರುತ್ತೇವೆಂದೂ, ಹೊಸತಾಗಿ ಅಂಗಡಿ, ಮಗ್ಗ ಮುಂತಾಗಿ ಮಾಡಿದಾಗ್ಯೂ ಹಳತನ್ನು ಬಿಟ್ಟಾಗ್ಯೂ ಸ್ವಾಮಿ ಸೇವೆಗೆ ನಮ್ಮ ಸಂಬಳದಲ್ಲಿ ಬಿಟ್ಟುಕೊಟ್ಟಿರುವ ಒಂದು ಹಣಕ್ಕಿಂತ ಹೆಚ್ಚು ಹಣ ಕೊಡುವ ಕಾರಣವಿಲ್ಲ" ಎಂದು ಸ್ಪಷ್ಟ ಪಡಿಸಲಾಗಿದೆ. ಇದಕ್ಕೆ ಕಂದಾಚಾರದ ಶ್ಯಾನಬಾಗ್ ತಿಂಮತ್ಯೆಯ ಮತ್ತು ಸ್ಥಳದ ನಾಡಿಗ ಚಿಕ್ಕ ತಂಮಣ ನಾರಶಿ ದೇವರವರೇ ಸಾಕ್ಷಿಗಳಾಗಿದ್ದರು.

ಇದೇ ಮಾದರಿಯಲ್ಲಿ ಗರುಡಗಿರಿ, ಹಿರಿಕಲ್‌ದುರ್ಗ, ಕಣಿಕಟ್ಟೆ, ಬೆಲುಗೂರ್ರು ಕಬ್ಬಳ ಮುಂತಾದೆಡೆಗಳಲ್ಲಿ ಕಂದಾಚಾರದಲ್ಲಿದ್ದ ವಂತಿಕಾರ್ರು, ವಾಲೆಕಾರ್ರು ಮತ್ತು ಸೇರುಗಾರ್ರು ತಮ್ಮ ಅಠವಣೆ ಹೋಬಳಿಯ ಕಂದಾಯ ತೆರುವುದನ್ನು ತಪ್ಪಿಸದೆ, ಸಂಬಳದಲ್ಲಿ ಸ್ವಾಮಿ ಸೇವೆಗೆ ೧ ಹಣವನ್ನು ಬಿಟ್ಟು ಕೊಟ್ಟಿದ್ದಾರೆ. ಶಾಲಿವಾಹನ ಶಕ ೧೬೬೭ನೇ, ಆದರೆ ಹೆಚ್ಚಿಗೆ ಕೊಡುವ ಕಾರಣವಿಲ್ಲ ಎಂದು ದಾಖಲಿಸಿದ್ದಾರೆ.[೫] ಅದೇ ದಿನ (ಕ್ರೋಧನ ಸಂವತ್ಸರದ ಭಾದ್ರಪದ ಬ೩ಲು–೧೭೪೫ ಸೆಪ್ಟೆಂಬರ್ ೩ರಂದು) ಉಲ್ಲೇಖಿತ ಸೇವೆ ದಾಖಲಿಸಲು ಬಾಣಾವಾರದ ಅಟವಣೆ ಸೇರುಗಾರ್ರು, ಮಣಿಹೂದಾಳುಗಳು ಮತ್ತು ಗರುಡಗಿರಿ ಅಟವಣೆ ಸೇರುಗಾರ್ರು ಜೊತೆಗೂಡಿದ್ದರು.[೬] ಹೀಗೆ ನಾನಾ ಭಾಗಗಳಲ್ಲಿದ್ದ ಸೈನಿಕರು ಜೊತೆಗೂಡಿ ಸೇವಾ ಕಾರ್ಯಕ್ಕೆ ಸ್ಪಂದಿಸಿದ್ದರು. ಆ ದಿನದ ವಿಶೇಷತೆಯನ್ನು ತಿಳಿಸುವಲ್ಲಿ ಶಾಸನಗಳು ಮೌನವಾಗಿವೆ. ಉಲ್ಲೇಖಿತ ಶಾಸನಗಳಲ್ಲಿ ಆಳ್ವಿಕೆಗಾರರ ಹೆಸರನ್ನು ಪ್ರಸ್ತಾಪಿಸಿಲ್ಲ.

ಸಾಮಾಜಿಕ ನೆಮ್ಮದಿಯತ್ತ ಗಮನಹರಿಸಿದ್ದ ವರ್ತಕರಿಗೆ ಬಾಣಾವೂರು ಭದ್ರ ನೆಲೆಯಾಗಿತ್ತೆಂಬುದನ್ನುಅಲ್ಲಿಯ ವರ್ತಕ ಪರಂಪರೆಯಿಂದ ತಿಳಿಯಬಹುದಾಗಿದೆ. ಹೊಯ್ಸಳರ ಕಾಲದಲ್ಲಿ ಪ್ರಾಂತೀಯ ರಾಜಧಾನಿ ಪಟ್ಟಣವಾಗಿದ್ದ ಅರಸೀಕೆರೆ, ಅದರ ಬೆಳವಣಿಗೆಯನ್ನು ವರ್ತಕರ ಕೊಡುಗೆಯನ್ನು ದಾಖಲಿಸಿದೆ. ಅದರಂತೆ. ಕ್ರಿ.ಶ. ೧೧೮೭ರ ಅರಸೀಕೆರೆ ಶಾಸನ,[೭] ಎರಡನೇ ವೀರ ಬಲ್ಲಾಳನ ಆಳ್ವಿಕೆಯಲ್ಲಿ ಕಂಮಟ ಚಟ್ಟಿಸೆಟ್ಟಿ ಎಂಬಾತ ವೀರಬಣಜಿಗ ವರ್ಗಕ್ಕೆ ಸೇರಿದವನೆಂದೂ ಆತ ಕಲಿದೇವ ಮಂಟಪ, ಬಲಿಪೀಠ, ಚಟ್ಟೇಶ್ವರ ಭವನ ತಟಾಕ, ಮಾವಿನಕೆರೆ, ಕಲ್ಲಿನಕೆರೆಗಳನ್ನು ಕಟ್ಟಿಸುವುದರ ಮೂಲಕ ಬಾಣಾವೂರಿನಿ ಬೆಳವಣಿಗೆಯಲ್ಲಿ ಮಹತ್ವದ ಕೊಡುಗೆಯನ್ನಿತ್ತಿದ್ದನೆಂದು ತಿಳಿಸುತ್ತದೆ. ಆತನನ್ನು ಬಾಣಾವೂರಿ ನಲ್ಲಿ ಅಪ್ರತಿಮ ಗುಣಸಂಪನ್ನನೆಂದು ಮನೋಜ್ಞನೆಂದು ಸ್ತುತಿಸಲಾಗಿದೆ. ಮಿಗಿಲಾಗಿ "ಸಮಸ್ತಗುಣ ಸಂಪನ್ನನುಂ ಸಾತ್ವಿಕ ಜನ

ಪ್ರಸನ್ನನುಂ ಭುವನ ವಿಖ್ಯಾತ ಪಂಚಶತ ವೀರ ಶಾಸನ ಲಬ್ದಾನೇಕಗುಣಗಣಾಲಂಕೃತ ಸತ್ಯಶೌಚಾಚಾರ ಚಾರಿತ್ರ ನಯ ವಿನಯ ವಿಜ್ಞಾನ ವೀರಬಣಂಜ ಧರ್ಮ ಪ್ರತಿಪಾಲನುಂ" ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ.

ಅದೇ ರೀತಿ ಕಣಿಕಟ್ಟೆನಾಡು ದೇವಗೃಹಗಳಿಂದ ಶೋಭಿಸುತ್ತಿತ್ತೆಂದು ಜಗತಿಯಕೊತ್ತಳಿ ಜೇಡಗೊತ್ತಳಿಯರ ನೆಲೆಯಾಗಿತ್ತೆಂದು ತಿಳಿದು ಬರುತ್ತದೆ.[೮] ಇವರು ಮಗ್ಗ ನೇಯ್ಗೆ ವೃತ್ತಿಯವರೆಂದು, ಇವರ ಸಂಘಟನೆಯೇ ಜೇಡಗೊತ್ತಳಿ ಯೆಂದು ತಿಳಿಯಬಹುದು. ಕಂಠಿರಾಯಪೇಟೆ ಸಂಥೆ ಶಾಸನ[೯]ದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಮಗ್ಗದವರನ್ನು ಬಿಳಿಮಗ್ಗ ದೇವಾಂಗ ಮಗ್ಗ, ಕುರುಬರ ಮಗ್ಗ, ಕಬ್ಬುಲರ ಮಗ್ಗ ಎಂದು ವರ್ಗೀಕರಿಸಿರುವುದು ಇಲ್ಲಿಯ ನೇಯ್ಗೆ ಪರಂಪರೆಗೆ ಪುಷ್ಠಿ ನೀಡುತ್ತದೆ.

ಹೀಗೆ ಈ ಭೂ ಭಾಗದ ವರ್ತಕರ ಚಟುವಟಿಕೆಗಳ ಬಗ್ಗೆ ಅಧ್ಯಯನಕ್ಕೆ ಸುಳಿವು ನೀಡುವಂತೆ, ಉಲ್ಲೇಖಿತ ದಾಖಲೆಗಳು ಈ ತಿರುಪತಿ ದೇವಾಲಯದ ನಿರ್ಮಾಣ ಎಂದಾ ಯಿತು? ಯಾರಿಂದ? ಎಂಬ ಕುತೂಹಲ ಮೂಡಿಸುತ್ತವೆ. ಕುತೂಹಲ ಹಾಗೂ ತನಿಖೆಯೇ ಇತಿಹಾಸ ರಚನೆಗೆ ಸ್ಫೂರ್ತಿ ನೀಡುತ್ತದೆ. ಈ ನಿಟ್ಟಿನಲ್ಲಿ ಮಾಲೆಕಲ್ಲು ತಿರುಪತಿ ಕ್ಷೇತ್ರಕಾರ್ಯ ಕೈಗೊಂಡು ಸ್ಥಳೀಯರನ್ನು ಸಂಪರ್ಕಿಸಿದಾಗ ಲಭಿಸಿದ ಮಾಹಿತಿ ಅಧ್ಯಯನಕ್ಕೆ ಒತ್ತು ನೀಡುತ್ತದೆ. ಅದರ ಪ್ರಕಾರ, "ಈ ದೇವಾಲಯ ಬಹು ಪ್ರಾಚೀನವಾದುದು. ನೂರಾರು ವರ್ಷಗಳ ಹಿಂದೆ ಬಾಣಾವಾರದ ವೇದಿಕೆ ಬಾವಿಸ್ಥಳದ ಕೃಷ್ಣ ಯೋಗೇಶ್ವರರು ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು. ಸುತ್ತಮುತ್ತಲಿನ ನಿಗದಿತ ಕುಟುಂಬದವರು ಇಂದಿಗೂ ಇಲ್ಲಿಯ ಉತ್ಸವದಲ್ಲಿ ಭಾಗವಹಿಸುತ್ತಾರೆ. ಮೊದಲ ಮರ್ಯಾದೆ ಕೃಷ್ಣಯೋಗೇಶ್ವರರ ಮನೆಯವರಿಗೆ ಸಲ್ಲುತ್ತದೆ. ವೀರಶೈವರು ನಿಷ್ಠೆಯಿಂದ ನಡೆದುಕೊಳ್ಳುತ್ತಾರೆ. ಕೆಲ್ಲಂಗೆರೆ ಶ್ರೀ ತಿಮ್ಮಪ್ಪದಾಸರು 'ಅಮರಗಿರಿ ಮಹಾತ್ಮೆ' ಎಂಬ ಕೃತಿ ರಚಿಸಿದ್ದಾರೆ. ಇಲ್ಲಿ ವೈಖಾನಸ ಆಗಮ ಶಾಸ್ತ್ರ ರೀತಿಯಲ್ಲಿ ಪೂಜಾ ಕೈಂಕರ್ಯಗಳು ನೆರವೇರುತ್ತವೆ" ಎಂದು ತಿಳಿಸಿದ್ದಲ್ಲದೆ ಅಗಸ್ತ್ಯರ ಮೂಲವು ಈ ಸ್ಥಳ ಎಂಬುದಾಗಿ ಇಲ್ಲಿಯ ಪೌರಾಣಿಕ ವಿಶೇಷತೆ ಬಗ್ಗೆ ವಿವರ ನೀಡಿದರು.

ಲಭ್ಯವಿರುವ ಅಮರಗಿರಿ ಮಹಾತ್ಮೆ ಪ್ರಕಾರ, ಮೊದಲ ಹಂತದ ದೇವಾಲಯ ಕ್ರಿ.ಶ. ಒಂದನೆ ಶತಮಾನದಲ್ಲಿದ್ದ ಅಂಕುಶರಾಜನಿಂದ ಪ್ರಾರಂಭವಾಯಿತು. ವಿಜಯನಗರದ ಪತನಾನಂತರ ಅಧಿಕಾರಕ್ಕೆ ಬಂದ ಪಾಳೆಯಗಾರರಲ್ಲಿ ತರೀಕೆರೆ/ಸಂತೆಬೆನ್ನೂರು ಪಾಳೆಯಗಾರರು[೧೦] ದೇವಾಲಯ ವಿಸ್ತರಿಸುವಲ್ಲಿ ಆಸಕ್ತಿ ವಹಿಸಿದರು. ಈ ಪಾಳೆಯಗಾರರಲ್ಲಿ ತಿಮ್ಮಪ್ಪ ನಾಯಕ ಪ್ರಸ್ತುತ ದೇವಾಲಯ ಹಾಗೂ ಸಮೀಪದಲ್ಲೆ ಕೆರೆ ಕಟ್ಟಿಸಿದ. ಈಗಲೂ ಈ ಕೆರೆಯನ್ನು ತಿಮ್ಮಪ್ಪನಾಯಕನ ಕೆರೆ ಎಂದು ಕರೆಯುತ್ತಾರೆ. ಆದರೆ ಮೇಲೆ ಉಲ್ಲೇಖಿಸಿದ ಅಂಕುಶರಾಜ ಯಾವ ಮನೆತನದವನು? ತಿಮ್ಮಪ್ಪನಾಯಕ ಚಿತ್ರದುರ್ಗದವನೇ? ಅಥವಾ ತರೀಕೆರೆಗೆ ಸೇರಿದವನೇ? ಇತ್ಯಾದಿ ವಿಚಾರಗಳು ಸಂಶೋಧಕರಿಗೆ ಆಸಕ್ತಿದಾಯಕವಾಗಿವೆ.

(ಈ ಲೇಖನ ಸಿದ್ಧಪಡಿಸಲು ಸಹಕರಿಸಿದ ಪದ್ದಣ್ಣ ಮತ್ತು ರಾಮಪ್ರಸಾದ್ ಅವರಿಗೆ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎ.ಕ.(ಪರಿಷ್ಕೃತ ಆವೃತ್ತಿ)** ಸಂಪುಟ ೧೦., ಅರಸೀಕೆರೆ ೧೩೪, ಕ್ರಿ.ಶ. ೧೭೪೪.

೨. ಅದೇ.,

೩. ಸಿ. ಹಯವದನ ರಾವ್., **'ಹಿಸ್ಟರಿ ಆಫ್ ಮೈಸೂರು'** (ಕ್ರಿ.ಶ. ೧೩೯೯–೧೭೦೪) ಸಂಪುಟ ೧, ಪುಟ ೩೩೬, ೩೩೭ ಬೆಂಗಳೂರು, ೧೯೪೩.

೪. **ಎ.ಕ. (ಪರಿಷ್ಕೃತ ಆವೃತ್ತಿ)** ಸಂಪುಟ ೧೦., ಅರಸೀಕೆರೆ ೧೩೫, ಕ್ರಿ.ಶ. ೧೭೪೫.

೫. ಅದೇ, ಅರಸೀಕೆರೆ ೧೩೭, ಕ್ರಿ.ಶ. ೧೭೪೫.

೬ ಅದೇ. ಅರಸೀಕೆರೆ ೧೩೬ ಮತ್ತು ೧೩೮ ಕ್ರಿ.ಶ. ೧೭೪೫.

೭. ಅದೇ, ಅರಸೀಕೆರೆ ೫೫.

೮. ಅದೇ. ಅರಸೀಕೆರೆ ೮೮, ಕ್ರಿ.ಶ. ೧೧೮೯.

೯. ಅದೇ ಅರಸೀಕೆರೆ ೧೩೪ ಕ್ರಿ.ಶ. ೧೭೪೪.

೧೦. ಎಸ್. ಆರ್. ರಾಮಾನುಜಯಂಗಾರ್., ೧೯೩೧; **'ಅಮರಗಿರಿ ಮಹಾತ್ಮೆ'** ಶ್ರೀ ಶಾರದಾ ವಿಲಾಸ ಮುದ್ರಣಾಲಯ, ಅರಸೀಕೆರೆ ನೋಡಿ: ಸುಮತೀಂದ್ರ ನಾಡಿಗ್ 'ಸಂತೆಬೆನ್ನೂರು ನಾಯಕರು', **ಮಲೆಕರ್ನಾಟಕದ ಅರಸು ಮನೆತನಗಳು** (ಸಂ.) ರಾಜಾರಾಮ್ ಹೆಗಡೆ, ಅಶೋಕ್‌ಶೆಟ್ಟರ್, ಪುಟ ೨೪೦, ಹಂಪಿ, ೨೦೦೧.

ಡಾ. ಹನುಮನಾಯಕ*

# ಪೂರ್ವ ಮಧ್ಯಯುಗೀನ ಕರ್ನಾಟಕದಲ್ಲಿ ರಾಜತ್ವ ರಚನೆಯ ಪ್ರಕ್ರಿಯೆ : ಹೊಯ್ಸಳರು

ಪೂರ್ವ ಮಧ್ಯಯುಗೀನ ಮತ್ತು ಮಧ್ಯಯುಗೀನ ಕರ್ನಾಟಕದ ರಾಜ್ಯಗಳು ರಾಜಪ್ರಭುತ್ವಗಳಿಂದ ಆಳಲ್ಪಟ್ಟಿದ್ದವು. ಈ ರಾಜಪ್ರಭುತ್ವದ ಸ್ವರೂಪದ ಚರ್ಚೆಗಳನ್ನು ಸಾಮಾನ್ಯವಾಗಿ ಶಾಸನಗಳಲ್ಲಿ ಕಂಡುಬರುವ ರಾಜರ ಪ್ರಶಸ್ತಿಗಳನ್ನು ಆಧಾರ ವಾಗಿಟ್ಟುಕೊಂಡು ಮಾಡಲಾಗಿದೆ. ಕೆಲವು ಇತಿಹಾಸಕಾರರು ಈ ಪ್ರಶಸ್ತಿಗಳನ್ನು ಸರಿಯಾಗಿ ವಿಶ್ಲೇಷಿಸದೇ ಅವುಗಳು ನಿಜವೆಂದು ನಂಬಿ ರಾಜನ ಅಧಿಕಾರ, ದಕ್ಷತೆ ಮತ್ತು ವ್ಯಕ್ತಿತ್ವವನ್ನು ಹೊಗಳಿ ಬರೆದಿದ್ದಾರೆ.[೧] ಆದರೆ ದಕ್ಷಿಣ ಭಾರತದ ಇತರ ಭಾಗಗಳಲ್ಲಿ ರಾಜ್ಯದ ಸ್ವರೂಪವನ್ನು ಅಧ್ಯಯನ ಮಾಡುವಾಗ ಕೆಲವು ಇತಿಹಾಸಕಾರರು ಪ್ರಶಸ್ತಿ ಭಾಗಗಳನ್ನು ಒರೆಗೆ ಹಚ್ಚಿ ಆಳವಾದ ಅಧ್ಯಯನ ಮಾಡಿ ರಾಜತ್ವ ರಚನಾ ಕ್ರಮವನ್ನು ಹೊರತಂದಿದ್ದಾರೆ.[೨] ಇಂತಹ ಕೆಲಸವನ್ನು ಕರ್ನಾಟಕದ ಇತಿಹಾಸದ ರಚನೆಯಲ್ಲಿ ಸಮಂಜಸವಾಗಿ ಮಾಡಿಲ್ಲ. ಸದ್ಯ ಈ ಲೇಖನದಲ್ಲಿ ದಕ್ಷಿಣ ಕರ್ನಾಟಕದ ಬಹುತೇಕ ಭಾಗವನ್ನು ಸುಮಾರು ೩೦೦ ವರ್ಷಗಳ ಕಾಲ ಆಳಿದ ಹೊಯ್ಸಳರು ಹೇಗೆ ಅಧಿಕಾರದ ಚುಕ್ಕಾಣಿ ಹಿಡಿದರು, ಮತ್ತು ಅಧಿಕಾರ ಸ್ಥಾಪಿಸಲು ಅವರು ಅಳವಡಿಸಿಕೊಂಡ ವಿಧಾನಗಳ ಬಗ್ಗೆ ಹೆಚ್ಚು ಒತ್ತು ಕೊಡಲಾಗುವುದು.

ಪರಂಪರೆಯ ಪ್ರಕಾರ ಕ್ಷತ್ರಿಯರು ಮಾತ್ರ ರಾಜ್ಯಗಳನ್ನು ಆಳುವ ಅಧಿಕಾರ ಹೊಂದಿದ್ದರು. ಆದರೆ ದಕ್ಷಿಣ ಕರ್ನಾಟಕ ವನ್ನು ಆಳಿದ ಹೊಯ್ಸಳರು ಬುಡಕಟ್ಟು ಜನಾಂಗಕ್ಕೆ ಸೇರಿದ ಬೇಡರಾಗಿದ್ದು ಯಾವುದೇ ಕ್ಷತ್ರಿಯ ಗುಣಗಳನ್ನು ಹೊಂದಿರ ಲಿಲ್ಲ.[೩] ಆದರೂ ಅವರು ಕಾಲಕ್ರಮೇಣ ಕ್ಷತ್ರಿಯರೆಂದು ಹೇಳಿಕೊಳ್ಳಲಾರಂಭಿಸಿದರು. ಇಂತಹ ಬೆಳವಣಿಗೆಗಳು ಆಗಲು ಅಂದಿನ ಐತಿಹಾಸಿಕ ಬೆಳವಣಿಗೆಗಳೇ ಪ್ರಮುಖ ಕಾರಣ ಗಳಾಗಿವೆ. ಅಂದಿನ ಪ್ರಮುಖ ಐತಿಹಾಸಿಕ ಬೆಳವಣಿಗೆಯೆಂದರೆ ರಾಷ್ಟ್ರಕೂಟರ ರಾಜಕೀಯ ಅವನತಿ. ಇದರಿಂದಾಗಿ ಪ್ರಬಲ ವಾದ ಕೇಂದ್ರೀಕೃತ ಆಡಳಿತ ವ್ಯವಸ್ಥೆ ಕಣ್ಮರೆಯಾಗಿ ಅದರ ಜಾಗದಲ್ಲಿ ಕಲ್ಯಾಣದ ಚಾಲುಕ್ಯರು ಕರ್ನಾಟಕದಲ್ಲಿಯೂ ಹಾಗೂ ಚೋಳರು ತಮಿಳುನಾಡಿನಲ್ಲಿ ಅಧಿಕಾರಕ್ಕೆ ಬಂದರು. ಇವುಗಳ ಜೊತೆಗೆ ಇದೇ ಸಮಯದಲ್ಲಿ ಸಣ್ಣ ಪುಟ್ಟ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಸಾಮಾನ್ಯವಾಗಿ ಇಂತಹ ರಾಜ್ಯಗಳನ್ನು ಸ್ಥಾಪಿಸಿದವರೆಂದರೆ ಸ್ಥಳೀಯ ಮುಖಂಡರು, ಸಾಮಂತರು, ದಂಡನಾಯಕರು ಇತ್ಯಾದಿ. ಇವರು ಯಾವುದೇ ಕ್ಷತ್ರಿಯ ಹಿನ್ನೆಲೆ ಹೊಂದಿದ್ದು ಆಡಳಿತದ ಚುಕ್ಕಾಣಿ ಹಿಡಿದವರಲ್ಲ. ಬದಲಾಗಿ ಅವರ ದೈಹಿಕ ಸಾಮರ್ಥ್ಯ, ವಿನಯ, ನಂಬಿಕೆ ಮತ್ತು ಅವರ ವೈಯಕ್ತಿಕ ಸಂಪತ್ತಿನ ಆಧಾರದ ಮೇಲೆ ಆಳರಸರ ಕಣ್ಣಿಗೆ ಬಿದ್ದು ಅವರ ಕೃಪೆಗೆ ಒಳಗಾದವರು. ಇದಲ್ಲದೇ ಹೊಯ್ಸಳರು ಪಶ್ಚಿಮ ಘಟ್ಟ ಪ್ರದೇಶಕ್ಕೆ ಸೇರಿದ್ದು, ಗೆರಿಲ್ಲಾ ಕಾಳಗಗಳಲ್ಲಿ ನಿಪುಣರಾಗಿದ್ದರಿಂದ ಇವರನ್ನು ಅಂದಿನ ಪ್ರಬಲ ರಾಜ್ಯಗಳು ಇವರ ಕಡೆ ಗಮನ ಹರಿಸಲಿಲ್ಲ. ಚಾಲುಕ್ಯ ಮತ್ತು ಚೋಳರ ನಡುವೆ ನಡೆಯುತ್ತಿದ್ದ ರಾಜಕೀಯ ಘರ್ಷಣೆಗಳಲ್ಲಿ ಶತ್ರುಗಳನ್ನು ಹಿಮ್ಮೆಟ್ಟಿಸುವ ಸಾಧನವಾಗಿ ಚಾಲುಕ್ಯರು ಅವರ ಸೇವೆಯಲ್ಲಿ ನಿಯೋಜಿಸಿಕೊಂಡರು. ಇದರಿಂದಾಗಿ ಇವರು ಘಟ್ಟ ಪ್ರದೇಶವನ್ನು ಬಿಟ್ಟು ಬಯಲು ಪ್ರದೇಶಗಳಲ್ಲಿ ತಮ್ಮ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳುವಂತಾಯಿತು. ಇಂತಹವರು ಅಧಿಕಾರಕ್ಕೆ ಬಂದಾಗ ಅಥವಾ ರಾಜ್ಯ ಕಟ್ಟಿದಾಗ ತಮ್ಮ ಅಧಿಕಾರವನ್ನು ಸಾಬೀತು ಗೊಳಿಸಿಕೊಳ್ಳುವುದು ತುಂಬಾ ಅನಿವಾರ್ಯವಾಗಿತ್ತು. ಇದರಿಂದಾಗಿ ಅವರು ಹಲವಾರು ವಿಧಾನಗಳನ್ನು ಅಳವಡಿಸಿಕೊಳ್ಳಬೇಕಾಗಿತ್ತು. ಅವುಗಳೆಂದರೆ:

**ಪ್ರಶಸ್ತಿಗಳ ಧಾರಣೆ :** ಕ್ರಿ.ಶ. ೫ನೇ ಶತಮಾನದಲ್ಲಿ ವ್ಯಾಪಾರದ ಕುಸಿತದಿಂದಾಗಿ ಹಲವಾರು ನಗರ ಪಟ್ಟಣಗಳು ಕಣ್ಮರೆಯಾಗಿ ಅಲ್ಲಿದ್ದ ಪುರೋಹಿತಶಾಹೀ ವರ್ಗ ಅವುಗಳನ್ನು ತೊರೆದು ಗ್ರಾಮೀಣ ಪ್ರದೇಶಗಳಿಗೆ ವಲಸೆ ಹೋಗಲಾ ರಂಭಿಸಿದರು. ವಲಸೆ ಬಂದ ಪುರೋಹಿತ ಶಾಹೀ ವರ್ಗಕ್ಕೆ ಸಂಸ್ಕೃತ ಭಾಷೆ. ಪಂಚಾಂಗ ಮತ್ತು ನೀರಾವರಿ ತಂತ್ರಜ್ಞಾನದ ಅರಿವು ಇದ್ದುದರಿಂದ ಗ್ರಾಮೀಣ ಪ್ರದೇಶದ ಜನತೆಗೆ ಅವರ ಸಲಹೆ, ಸೂಚನೆಗಳು ಬಹಳ ಪ್ರಯೋಜನ ಕಾರಿಯಾಗಿ ಕಂಡುಬಂದವು. ಇದರಿಂದಾಗಿ ಹೊಸದಾಗಿ ಅಸ್ತಿತ್ವಕ್ಕೆ ಬಂದ

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ – ೫೭೪ ೧೯೯.

ರಾಜ್ಯಗಳು ಇವರ ನೆರವನ್ನು ಪಡೆಯಲು ಹೆಚ್ಚು ಉತ್ಸುಕತೆ ತೋರಲಾರಂಭಿಸಿದವು. ಹೀಗಾಗಿ ಇವರ ನಡುವೆ ಹೊಸ ವ್ಯಾವಹಾರಿಕ ಸಂಬಂಧಗಳು ಹುಟ್ಟಿ ಕೊಂಡವು. ಅವು ಗಳೆಂದರೆ, ಪುರೋಹಿತಶಾಹೀ ವರ್ಗದ ಜೀವಿತಕ್ಕೆ ಮತ್ತು ಅವರ ಭದ್ರತೆಗಾಗಿ ಆಳುವ ವರ್ಗ ದಾನ, ಧರ್ಮದ ರೂಪದಲ್ಲಿ ಭೂಮಿ, ಹಳ್ಳಿಗಳು, ಮನೆಗಳು, ಮನೆ ನಿವೇಶನಗಳು, ದನಕರುಗಳು ಮತ್ತು ಹಣವನ್ನು ಹೆಚ್ಚು ಪ್ರಮಾಣದಲ್ಲಿ ಕೊಡಲಾರಂಭಿಸಿತು. ಇದಕ್ಕೆ ಪ್ರತಿಯಾಗಿ ಪುರೋಹಿತಶಾಹೀ ವರ್ಗವು ಆಳುವ ವರ್ಗದವರ ಸ್ಥಾನಮಾನಗಳನ್ನು ಮಾನ್ಯ ಗೊಳಿಸುವುದಾಗಿತ್ತು. ಈ ರೀತಿ ಮಾಡಲು ಅವರು ರಾಜರ ಪ್ರಶಸ್ತಿಗಳನ್ನು ರಚಿಸಿ ಅವುಗಳ ಮುಖಾಂತರ ತಮ್ಮ ಆಶ್ರಯ ದಾತರ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಲಾ ರಂಭಿಸಿದರು. ಇಂತಹ ಬೆಳವಣಿಗೆಗಳು ಕದಂಬ-ಗಂಗರ ಕಾಲದಲ್ಲಿ ಪ್ರಾರಂಭಗೊಂಡು ಹೊಯ್ಸಳರ ಕಾಲದಲ್ಲಿಯೂ ಮುಂದುವರಿದವು.

**ಪುರಾಣಗಳು ಮತ್ತು ದಂತಕಥೆಗಳ ಮೂಲಕ ವಂಶಾವಳಿ ರಚನೆ :** ಸಂಪ್ರದಾಯಗಳ ಪ್ರಕಾರ ಹೊಯ್ಸಳರು ಯಾದವ ಸಂತತಿಗೆ ಮತ್ತು ಚಂದ್ರವಂಶಕ್ಕೆ ಸೇರಿದವರು. ಈ ರೀತಿ ಚಂದ್ರವಂಶಕ್ಕೆ ಸೇರಿದವರೆಂದು ಹೇಳಿಕೊಳ್ಳುವುದು ಸಾಮಾಜಿಕ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಚಿಹ್ನೆಯಾಗಿತ್ತು. ವಿಷ್ಣು ಪುರಾಣವು ಚಂದ್ರವಂಶದ ವಂಶಾವಳಿಯನ್ನು ತಿಳಿಸುತ್ತದೆ.[೪] ಅದರ ಪ್ರಕಾರ ಬ್ರಹ್ಮನ ಮಗ ಅತ್ರಿ, ಅವನ ಮಗ ಸೋಮ (ಚಂದ್ರ), ಅವನಿಂದ ಬುಧ-ಪುರೂರವ-ಅಯೂಸ್, ಅವನ ಮಗ ನಹೂಸ-ಯಯಾತಿ. ಇವನ ಹಿರಿಯ ಮಗನೇ ಯದು. ಯಾದವರ ಮೂಲ ಪುರುಷನೇ ಯದು. ಅವರಲ್ಲಿ ಕೃಷ್ಣ ಪ್ರಮುಖ ನಾದವನು. ಇವನು ದ್ವಾರಕಾದಲ್ಲಿ ಪಟ್ಟಣವನ್ನು ಕಟ್ಟಿ ಅಲ್ಲಿಂದ ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದನು. ದೇವಗಿರಿಯ ಯಾದವರು ಮತ್ತು ದೋರಸಮುದ್ರದ ಹೊಯ್ಸಳರು ತಮ್ಮ ವಂಶಸ್ಥರನ್ನು ಕೃಷ್ಣನ ಸಂತತಿಯವರೆಂದು ಗುರುತಿಸಿಕೊಂಡಿ ದ್ದಾರೆ. ಹೊಯ್ಸಳ ವಂಶದ ಮೂಲಪುರುಷ ಸಳನೆಂದು ನಂಬಲಾಗಿದೆ. ಇವನು ಸುದಾತ್ತಮುನಿಯ ಆದೇಶದ ಮೇರೆಗೆ ಹುಲಿಯನ್ನು ಕೊಂದಿದ್ದರಿಂದ ಪೊಯ್ಸಳನಾಗಿ ನಂತರ ಅವನ ವಂಶದವರು ಪೊಯ್ಸಳರು ಅಥವಾ ಹೊಯ್ಸಳರು ಆದರು. ಹೊಯ್ಸಳರು ರಾಜಕೀಯ ವಾಗಿ ಸಬಲರಾದಾಗ ಅವರ ಮೂಲಪುರುಷನಾದ ಸಳನನ್ನು ಚಂದ್ರವಂಶಕ್ಕೆ ಹೇಳಿಕೊಳ್ಳಲಾರಂಭಿಸಿದರು. ಇದಕ್ಕೆ ಸಂಬಂಧಿಸಿದಂತೆ ಬೇಲೂರಿನ ಶಾಸನವು ಹೆಚ್ಚಿನ ಮಾಹಿತಿ ನೀಡುತ್ತದೆ.[೫]

ಹೊಯ್ಸಳರು ಸ್ಥಳೀಯರಾದರೂ ಸಹ ಅವರ ಮೂಲ ಪುರುಷನಾದ ಸಳನು ಉತ್ತರ ಭಾರತದ ಯದುವಂಶಕ್ಕೆ ಸೇರಿದ್ದು ವಾಸಂತಿಕಾದೇವಿಯ ಅನುಗ್ರಹದಿಂದ ಮತ್ತು ಸುದಾತ್ತಮುನಿಯ ನೆರವಿನಿಂದ ರಾಜ್ಯ ಕಟ್ಟಿದವನೆಂದು ಹೇಳಿಕೊಂಡಿದ್ದಾರೆ. ಇಂತಹ ವಿಧಾನಗಳನ್ನು ಅಳವಡಿಸಿ ಕೊಂಡಿರುವುದು ಹೊಯ್ಸಳರಿಗೇ ಸೀಮಿತವಾಗಿರಲಿಲ್ಲ. ಇವರಿಗಿಂತ ಮೊದಲು ಕರ್ನಾಟಕವನ್ನು ಆಳಿದ ಕದಂಬರು ತಮ್ಮ ಮೂಲಪುರುಷನನ್ನು ಮುಕ್ಕಣ್ಣ ಕದಂಬ (ಶಿವ)ನಿಗೂ ಮತ್ತು ಗಂಗರ ಮೂಲ ಪುರುಷನು ಗಂಗಾನದಿಯಲ್ಲಿ ಜನಿಸಿದ್ದು, ಅವನನ್ನು ಉತ್ತರ ಭಾರತದ ಸೂರ್ಯ ವಂಶದೊಂದಿಗೆ ಗುರುತಿಸಿಕೊಂಡಿದ್ದಾರೆ. ಹೊಯ್ಸಳರು ತಮ್ಮ ಮೂಲವನ್ನು ತಮ್ಮ ಆರಂಭದ ಕಾಲದಲ್ಲಿ ಪೌರಾಣಿಕ ವಂಶಗಳೊಂದಿಗಾಗಲಿ ಅಥವಾ ದಂತಕಥೆಗಳ ಮೂಲಕ ವಾಗಲಿ ಗುರುತಿಸಿಕೊಂಡಿಲ್ಲ. ಇಂತಹ ಪ್ರಯತ್ನಗಳನ್ನು ಮಾಡಿರುವುದು ವಿನಯಾದಿತ್ಯ ಮತ್ತು ಅವನ ಮಗ ಎರೆಯಂಗನ ಕಾಲದಲ್ಲಿ.[೬] ಅಂದರೆ ೧೧-೧೨ ನೇ ಶತಮಾನದಿಂದೀಚೆಗೆ ಅವರ ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳು ಉತ್ತಮಗೊಂಡಂದಿನಿಂದ ಸಾಮಾಜಿಕ ಸ್ಥಾನ ಮಾನಗಳನ್ನು ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಇಂತಹ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಶಾಸನಗಳು ಕ್ರಿ.ಶ. ೧೧೯೩ ರಿಂದೀಚೆಗೆ ಹೆಚ್ಚು ಬೆಳಕು ಚೆಲ್ಲುತ್ತವೆ.[೭] ಇದಕ್ಕೆ ಮುಖ್ಯ ಕಾರಣವೆಂದರೆ, ಅದುವರೆಗೂ ಹೊಯ್ಸಳರು ಯಾವುದೇ ಪ್ರಬಲ ರಾಜ್ಯವನ್ನಾಗಲಿ ಅಥವಾ ಶತ್ರುವನ್ನಾಗಲಿ ಎದುರಿಸಿ ಸೋಲಿಸಿರಲಿಲ್ಲ. ಅವರಿಗೆ ಈ ಅವಕಾಶ ಸಿಕ್ಕಿದ್ದು ತಲಕಾಡಿನಲ್ಲಿ. ಕ್ರಿ.ಶ. ೧೧೧೬-೧೭ ರಲ್ಲಿ ಚೋಳರನ್ನು ಸೋಲಿಸಿ ಅವರಿಂದ ತಲಕಾಡನ್ನು ವಶಪಡಿಸಿ ಕೊಂಡನಂತರ ಅವರು ಸಹ ತಾವು ಅಂದಿನ ಆಳರಸರಿಗೆ ಯಾವುದೇ ರೀತಿಯಲ್ಲಿ ಕಡಿಮೆಯಿಲ್ಲವೆಂದು ತಿಳಿದು ರಾಜತ್ವವನ್ನು ಸ್ಥಾಪಿಸಲು ಹಾಗೂ ರಾಜರಿಗೆ ಸಿಗಬೇಕಾದ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಪ್ರಾರಂಭಿಸಿದರು. ಅಂದಿನಿಂದ ಅವರು ದೇವಾಲಯಗಳನ್ನು ಕಟ್ಟಿಸುವುದು, ಪುರೋಹಿತ ಶಾಹೀ ವರ್ಗದವರೊಡನೆ ವಿನೂತನ ಸಂಬಂಧ ಬೆಳೆಸಿ ಅವರಿಂದ ತಮ್ಮ ಪೂರ್ವಜರ/ವಂಶಸ್ಥರ ವಂಶಾವಳಿ ಯನ್ನು ರಚಿಸಿ ಅವರನ್ನು ಪೌರಾಣಿಕ ವ್ಯಕ್ತಿಗಳೊಂದಿಗೆ ಸಮೀಕರಿಸುವುದು ಮತ್ತಿತರ ಪ್ರಯತ್ನಗಳನ್ನು ಮಾಡಲಾ ರಂಭಿಸಿದರು.

ಹೊಯ್ಸಳರು ಕ್ರಿ.ಶ. ೧೧೧೭ ಕ್ಕಿಂತ ಮುಂಚೆ ಇಂತಹ ಸಾಹಸಗಳನ್ನು ಮಾಡಿರಲಿಲ್ಲ. ಇದಕ್ಕೆ ಸಂಬಂಧಿಸಿದಂತೆ ಶಾಸನಗಳು ಸ್ಪಷ್ಟ ಚಿತ್ರಣ ನೀಡುತ್ತವೆ. ಉದಾ: ಕ್ರಿ.ಶ.

೯-೧೦ನೇ ಶತಮಾನದ ಮರಲೆ ಶಾಸನವು ಹೊಯ್ಸಳರ ಪೂರ್ವಜರಲ್ಲಿ ಮೊದಲನೆಯವನೆನ್ನಲಾದ ಅರಕೆಲ್ಲನನ್ನು ಯಾವುದೇ ಬಿರುದುಗಳಿಂದ ಉಲ್ಲೇಖಿಸದೇ ಕೇವಲ ಶ್ರೀ ಅರಕೆಲ್ಲನೆಂದು ತಿಳಿಸಿದೆ.[೮] ಅವನ ಮಗ (ಮಮ್ಮ)ನನ್ನು ಪೊಯ್ಸಳ ಮಾರುಗನಿಗೂ ಸಹ ಯಾವುದೇ ಬಿರುದುಗಳಿಲ್ಲದಿದ್ದುದನ್ನು ೧೦ನೇ ಶತಮಾನದ ಹೊಸಹಳ್ಳಿ ಮತ್ತು ಕೆಸವೊಳಲು ಶಾಸನಗಳು ತಿಳಿಸುತ್ತವೆ.[೯] ಉಗ್ಗಿಹಳ್ಳಿಯ ೧೧ನೇ ಶತಮಾನದ ಶಾಸನವು ಕಾಮಪೊಯ್ಸಳ (ನೃಪಕಾಮ)ನಿಗೆ ರಾಚಮಲ್ಲ ಪೆರ್ಮಾಡಿ ಎಂಬ ಬಿರುದು ಇದ್ದುದನ್ನು ತಿಳಿಸುತ್ತದೆ.[೧೦] ಇದುವರೆಗೂ ಹೊಯ್ಸಳರು ಯಾರ ಪರವಾಗಿ ಕಾರ್ಯ ನಿರ್ವಹಿಸುತ್ತಿದ್ದರು ಅಥವಾ ಹೋರಾಡುತ್ತಿದ್ದರು ಎಂಬುದು ತಿಳಿದುಬರುವುದಿಲ್ಲ. ಆದರೆ ಈ ಶಾಸನದಿಂದ ಸ್ಪಷ್ಟವಾಗಿ ಹೊಯ್ಸಳರು ಗಂಗರ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿದ್ದುದ್ದಲ್ಲದೇ ಅವರು ಗಂಗರ ಹತ್ತಿರದವರು/ ಸಂಬಂಧಿಗಳು ಎಂಬುದನ್ನು ಸಹ ತಿಳಿಯಬಹುದು.[೧೧] ರಾಜೇಂದ್ರಪುರದ ೧೦೨೭ರ ಶಾಸನವು ನೃಪಕಾಮನನ್ನು ಮೊದಲ ಬಾರಿಗೆ ಮಹಾರಾಜ ಎಂದು ಉಲ್ಲೇಖಿಸಿದೆ.[೧೨] ಕಣಚೂರಿನ ೧೦೪೭ರ ಶಾಸನವು ಹೊಯ್ಸಳನ ಅಧ್ಯಕ್ಷತೆಯಲ್ಲಿ/ ಸಮಕ್ಷಮದಲ್ಲಿ ದಾನ ಮಾಡಿರುವುದನ್ನು ತಿಳಿಸುತ್ತದೆ.[೧೩] ಇಲ್ಲಿಯೂ ಸಹ ಹೊಯ್ಸಳ ದೊರೆಯನ್ನು ಯಾವುದೇ ಬಿರುದುಗಳಿಂದ ಅಥವಾ ವ್ಯಕ್ತಿಯ ಹೆಸರಿನಿಂದ ಸಂಬೋಧಿಸದೇ ಕೇವಲ ವಂಶದ ಹೆಸರಿನಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಅಂಗಡಿಯ (ಶಶಕಪುರ) ೧೦೫೪ ರ ಶಾಸನವು ಕೇವಲ ವಿನಯಾದಿತ್ಯ ಪೊಯ್ಸಳನೆಂದು ಉಲ್ಲೇಖಿಸುತ್ತದೆ.[೧೪] ಆದರೆ ಪ್ರಪ್ರಥಮ ಬಾರಿಗೆ ೧೦೬೧ರ ಹಿರೇಮಗಳೂರು ಶಾಸನವು ವಿನಯಾದಿತ್ಯನಿಗೆ ತ್ರೈಲೋಕ್ಯ ಮಲ್ಲ ಎಂಬ ಬಿರುದು ಇದ್ದುದನ್ನು ತಿಳಿಸುತ್ತದೆ.[೧೫] ಇದರಿಂದ ಈ ಸಮಯಕ್ಕೆ ಹೊಯ್ಸಳರು ಕರ್ನಾಟಕದ ಸಾರ್ವಭೌಮರಾದ ಕಲ್ಯಾಣಿ ಚಾಲುಕ್ಯರ ನಿಕಟವರ್ತಿಗಳಾಗಿದ್ದುದು ತಿಳಿದುಬರುತ್ತದೆ. ಅಂಗಡಿಯ ೧೦೬೩ ರ ಶಾಸನವು ವಿನಯಾದಿತ್ಯನಿಗೆ ಮಲೆಪರೊಳ್ಗಂಡ ಮತ್ತು ರಕ್ಕಸ ಪೊಯ್ಸಳ ಎಂಬ ಬಿರುದುಗಳಿದ್ದುದನ್ನು ತಿಳಿಸುತ್ತದೆ.[೧೬] ಈ ಸಮಯದಲ್ಲಿ ವಿನಯಾದಿತ್ಯನು ಮಲೆನಾಡಿನ ಪ್ರಾಂತ್ಯದಲ್ಲಿ ತನ್ನ ಅಧಿಪತ್ಯವನ್ನು ಸ್ಥಾಪಿಸಿರುವುದನ್ನು ಕಾಣಬಹುದು.

ಉಪ್ಪವಳ್ಳಿಯ ೧೦೭೨-೭೩ ರ ಶಾಸನವು ವಿನಯಾದಿತ್ಯನಿಗೆ ತ್ರಿಭುವನಮಲ್ಲ ಎಂಬ ಬಿರುದು ಇದ್ದುದನ್ನು ತಿಳಿಸುತ್ತದೆ.[೧೭] ಈ ಬಿರುದು ಕಲ್ಯಾಣಿ ಚಾಲುಕ್ಯರದಾಗಿದ್ದು, ಬಹುಶಃ ಇದು ಹೊಯ್ಸಳರಿಗೂ ಮತ್ತು ಚಾಲುಕ್ಯರ ನಡುವೆ ಇದ್ದ ಸಂಬಂಧವನ್ನೋ ಅಥವಾ ವಿನಯಾದಿತ್ಯನು ಕ್ರಮೇಣವಾಗಿ ತನ್ನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಿದ್ದರ ಸೂಚಕವಾಗಿರಬಹುದು. ಬಸವನಹಳ್ಳಿ (೧೦೭೪),[೧೮] ಮತ್ತಾವರ (೧೦೭೭)[೧೯] ಮತ್ತು ದೇವಿಹಳ್ಳಿ (೧೦೯೩)[೨೦] ಯ ಶಾಸನಗಳು ವಿನಯಾದಿತ್ಯನಿಗೆ ತ್ರೈಲೋಕ್ಯಮಲ್ಲ ಎಂಬ ಬಿರುದಿನ ಜೊತೆಗೆ ಇನ್ನೂ ಹಲವಾರು ಬಿರುದುಗಳಾದ ಮಹಾಮಂಡಳೇಶ್ವರ, ಸಮಧಿಗತ ಪಂಚಮಹಾಶಬ್ದ, ದ್ವಾರಾವತಿ ಪುರವರೇಶ್ವರ, ಯಾದವ ಕುಳಂಬರಾದ್ಯುಮಣಿ, ಸಮ್ಯಕ್ತ ಚೂಡಾಮಣಿ ಎಂಬ ಬಿರುದುಗಳಿದ್ದುದನ್ನು ತಿಳಿಸುತ್ತವೆ. ಈ ಬಿರುದುಗಳಿಂದ ವಿನಯಾದಿತ್ಯನು ಪ್ರಥಮ ಬಾರಿಗೆ ತನ್ನನ್ನು ಪೌರಾಣಿಕ ವಂಶವಾದ ಯಾದವ ಕುಲದವರೊಡನೆ ಹೋಲಿಸಿಕೊಂಡಿರುವುದು ಕಂಡುಬರುತ್ತದೆ. ಸಿಂಧಗಿರಿಯ ೧೧೦೩ ರ ಶಾಸನವು ವಿನಯಾದಿತ್ಯನನ್ನು ಹಲವು ಬಿರುದುಗಳಿಂದ ಬಣ್ಣಿಸಿರುವುದರ ಜೊತೆಗೆ ಅವನ ಪ್ರಭುಗಳಾದ ಚಾಲುಕ್ಯರೊಂದಿಗೆ ಸಮೀಕರಿಸಿರುವುದು ಸಹ ತಿಳಿದುಬರುತ್ತದೆ.[೨೧]

ವಿನಯಾದಿತ್ಯನ ನಂತರದ ಪ್ರಮುಖ ದೊರೆಯಾದ ಬಿಟ್ಟಿದೇವ (ವಿಷ್ಣುವರ್ಧನ)ನನ್ನು ಸಹ ೧೧೧೫ರ ಪಟದೂರು ಶಾಸನವು ಮಹಾಮಂಡಳೇಶ್ವರ ತ್ರಿಭುವನಮಲ್ಲ ಬಿಟ್ಟಿದೇವ ಎಂದು ಉಲ್ಲೇಖಿಸಿದೆ.[೨೨] ತಲಕಾಡಿನಲ್ಲಿ ೧೧೧೬-೧೭ ರಲ್ಲಿ ಚೋಳರೊಡನೆ ಹೋರಾಡಿ ಗೆದ್ದನಂತರ ತಳಕಾಡುಗೊಂಡ, ಕೊಂಗು, ನಂಗಲಿ, ಬನವಾಸೆ, ಹಲಸಗೆ, ಹಾನಂಗಲ್ಲುಗೊಂಡ, ಭುಜಬಳ ವೀರಗಂಗ, ಗಂಗವಾಡಿ ೯೬,೦೦೦ ವನ್ನು ಏಕಛತ್ರದಿಂದ ಆಳುತ್ತಿದ್ದುದನ್ನು ೧೧೧೬ರ ಆಲ್ದೂರು ಶಾಸನಗಳು ತಿಳಿಸುತ್ತವೆ.[೨೩] ಈ ಎಲ್ಲಾ ಬಿರುದುಗಳ ಜೊತೆಗೆ ಬಿಟ್ಟಿದೇವನನ್ನು ಯಾದವ ಕುಲದವನೆಂದು ೧೧೧೭ ರ ಅಂಗಡಿ ಶಾಸನವು ತಿಳಿಸುತ್ತದೆ.[೨೪] ಇವೆಲ್ಲವುಗಳಿಗೆ ಹೊರತಾಗಿ ೧೧೧೭ ರ ಬೇಲೂರು[೨೫] ಮತ್ತು ಬಸ್ತಿಹಳ್ಳಿಯ[೨೬] ೧೧೩೩ರ ಶಾಸನಗಳು ಬಿಟ್ಟಿದೇವನ ಪೂರ್ವಜರು ಯದು ವಂಶಕ್ಕೆ ಸೇರಿದವರೆಂದು ತಿಳಿಸುತ್ತದೆ. ಅದೇ ಶಾಸನವು ಬಿಟ್ಟಿದೇವನು ವಾಸಂತಿಕಾದೇವಿಯ ಕರುಣೆಗೆ ಪಾತ್ರನಾದವನೆಂದು ಸಹ ತಿಳಿಸುತ್ತದೆ. ಚೋಳರೊಡನೆ ಕಾದಿ ಗೆದ್ದ ನಂತರವೂ ಸಹ ಬಿಟ್ಟಿದೇವನಿಗೆ ಮಹಾಮಂಡಳೇಶ್ವರ ಮತ್ತು ತ್ರಿಭುವನಮಲ್ಲ ಎಂಬ ಬಿರುದುಗಳಿದ್ದುದನ್ನು ೧೧೧೭ರ ಕೋಡವಳ್ಳಿ ಶಾಸನವು ತಿಳಿಸುತ್ತದೆ.[೨೭]

**ವೀರಯೋಧರಾಗಿ ಸೈನಿಕ ಸಾಧನೆಗಳ ಪ್ರಚಾರ:** ಹೊಯ್ಸಳರು ಸಹ ಇತರ ಆಳರಸರಂತೆ ತಮ್ಮ ಹಿರಿಮೆಯನ್ನು ಹೆಚ್ಚಿಸಿಕೊಳ್ಳಲು ತಾವು ಗೆಲ್ಲದಿದ್ದ ಪ್ರದೇಶಗಳನ್ನು ಸಹ

ತಮ್ಮದೆಂದು ಹೇಳಿಕೊಳ್ಳಲಾರಂಭಿಸಿದರು. ಆಕ್ರಮಣಶಾಲಿ, ಶತ್ರುಗಳನ್ನು ಸದೆಬಡಿದವನು, ಅರಿಕೇಸರಿ, ಆಹವಮಲ್ಲ, ತ್ರೈಲೋಕ್ಯಮಲ್ಲ ಮುಂತಾದ ಪ್ರಶಸ್ತಿಗಳನ್ನು ಹೊಂದಿದ್ದು, ರಾಜರುಗಳು ಯಾವಾಗಲೂ ವಿಜಯಿಗಳಾಗಿದ್ದು, ಸೋಲನ್ನು ಅನುಭವಿಸಿದಂತೆ ಕಂಡುಬರುವುದಿಲ್ಲ. ಹೊಯ್ಸಳರ ಕೆಲವು ರಾಜರು ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಸಹ 'ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರೆ' ಎಂದು ಹಾಗೂ ಪಶ್ಚಿಮದಲ್ಲಿ ಆಳ್ವಖೇಡದಿಂದ ಪೂರ್ವದಲ್ಲಿ ರಾಮೇಶ್ವರದವರೆಗೂ (ಸೇತು) ರಾಜ್ಯವಾಳುತ್ತಿದ್ದರೆಂದು ಹೇಳಿಕೊಂಡಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ೧೧೪೫–೪೬ರ ಪಂಡಿತನಹಳ್ಳಿಯ ಶಾಸನವು ವಿಷ್ಣುವರ್ಧನನ್ನು ಕೊಂಗು, ನಂಗಲಿ, ಗಂಗವಾಡಿ, ನೊಳಂಬವಾಡಿ, ಬನವಾಸೆ, ಹಾನಂಗಲ್ಲು,[೨೭] ಬೆಳ್ವೊಲಗೊಂಡ ಎಂದು ಹೊಗಳಿದೆ.[೨೮] ಅಂಗಡಿಯ ೧೧೬೪ ರ ಶಾಸನವು ಹೊಯ್ಸಳ ನರಸಿಂಹನನ್ನು ಮಲೆರಾಜರಾಜ, ಮಲೆಪರೊಳುಗಂಡ, ಗಂಡಭೇರುಂಡ, ಕದನ ಪ್ರಚಂಡ, ಅಸಹಾಯಶೂರ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ, ಚಲದಂಕರಾಮ ಇತ್ಯಾದಿಯಾಗಿ ಹೊಗಳಿದೆ.[೨೯] ಆದರೆ ಇವನು ಹೊಯ್ಸಳ ದೊರೆಗಳಲ್ಲಿಯೇ ಅತ್ಯಂತ ದುರ್ಬಲ ದೊರೆಯಾಗಿದ್ದನು. ಹಾಗಿದ್ದರೂ ಇವನು ಶತ್ರುಗಳಿಗೆ ಸಿಂಹಸ್ವಪ್ನನಾಗಿದ್ದನೆಂದು ಕ್ರಿ.ಶ. ೧೧೬೨ ರ ಧರ್ಮಾಪುರದ ಮತ್ತು ೧೧೬೯ ರ ಬ್ರಹ್ಮಸಮುದ್ರ ಶಾಸನಗಳು ತಿಳಿಸುತ್ತವೆ.[೩೦] ಅವನ ಶಯನಾಗಾರದಲ್ಲಿ ಸುಮಾರು ೩೮೪ ಸ್ತ್ರೀಯರಿದ್ದರೆಂದು ಹುಲಿಕೆರೆ ಶಾಸನವೊಂದು ತಿಳಿಸುತ್ತದೆ.[೩೧] ಕ್ರಿ.ಶ. ೧೧೭೩ ರ ಹಳೇಬಿಡು[೩೨] ಮತ್ತು ೧೧೭೯–೮೦ ಬೇಲೂರು[೩೩] ಶಾಸನಗಳು ಇಮ್ಮಡಿ ಬಲ್ಲಾಳನನ್ನು ಕದನ ಪ್ರಚಂಡ ಶನಿವಾರಸಿದ್ದಿ, ಗಿರಿದುರ್ಗಮಲ್ಲ, ಚಲದಂಕರಾಮ ಎಂದು ಬಣ್ಣಿಸಿದೆ. ಕೂಸಾವರದ ೧೨೩೪ರ ಶಾಸನವು ಇಮ್ಮಡಿ ನರಸಿಂಹನನ್ನು ಮಗರರಾಜ್ಯ ನಿರ್ಮೂಲನ, ಚೋಳ ಪ್ರತಿಪಾಳಕನೆಂದು ವರ್ಣಿಸಿದೆ.[೩೪] ಚಟಚಟಹಳ್ಳಿಯ ೧೨೨೧ರ ಶಾಸನವು ವೀರನರಸಿಂಹನನ್ನು ಸಮಸ್ತ ಪ್ರಶಸ್ತಿ ಹೊಂದಿದವನೆಂದು ತಿಳಿಸಿದೆ.[೩೫] ಕ್ರಿ.ಶ. ೧೨೪೪ರ ಚಿಕ್ಕೋಲೆಯ ಶಾಸನವು ಹೊಯ್ಸಳ ಸೋಮೇಶ್ವರನನ್ನು ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ, ಗಂಡಭೇರುಂಡ, ಚೋಳ ರಾಜ್ಯ ಪ್ರತಿಷ್ಠಾಚಾರ್ಯ, ಪ್ರತಾಪ ಚಕ್ರವರ್ತಿಯೆಂದು ಉಲ್ಲೇಖಿಸಿದೆ.[೩೬] ಬೇಲೂರಿನ ೧೨೭೯ರ ಶಾಸನವು ಮೂರನೇ ನರಸಿಂಹನನ್ನು ಗಂಡಭೇರುಂಡ, ಕದನ ಪ್ರಚಂಡ, ಅಸಹಾಯಶೂರ, ಏಕಾಂಗವೀರ, ಶನಿವಾರಸಿದ್ದಿ, ಗಿರಿದುರ್ಗಮಲ್ಲ ಚಲದಂಕರಾಮ, ವೈರೀಭಕಂಠೀರವ, ಮಗರರಾಜ್ಯ ನಿರ್ಮೂಲನ, ಚೋಳ ರಾಜ್ಯ ಸಮುದ್ಧರಣ, ನಿಸ್ಸಂಕ ಪ್ರತಾಪ ಚಕ್ರವರ್ತಿ ಎಂದು ಬಣ್ಣಿಸಿದೆ.[೩೭] ಇದೇ ಪ್ರಶಸ್ತಿಗಳು ಮುಮ್ಮಡಿ ಬಲ್ಲಾಳನಿಗೂ ಇದ್ದುದನ್ನು ಬೇಲೂರು ಶಾಸನವು ತಿಳಿಸುತ್ತದೆ.[೩೮] ಇಂತಹ ಹೇಳಿಕೆಗಳು ಕೇವಲ ರಾಜನನ್ನು ತಾನೇ ಹೊಗಳಿಕೊಂಡು ತನ್ನ ರಾಜಕೀಯ/ಪ್ರಭುತ್ವದ ಅಸ್ತಿತ್ವವನ್ನು ಉಳಿಸಿಕೊಳ್ಳುವುದರ ಜೊತೆಗೆ ಮುಂದಿನ ತಲೆಮಾರಿನವರೆಗೂ ಅವುಗಳು ಉಳಿಯುವಂತೆ ಮಾಡುತ್ತಿದ್ದರು.

**ಕಲೆ ಮತ್ತು ಸಂಸ್ಕೃತಿಗೆ ಪ್ರೋತ್ಸಾಹ:** ತಲಕಾಡಿನಲ್ಲಿ ಚೋಳರೊಂದಿಗೆ ಸಾಧಿಸಿದ ವಿಜಯದನಂತರ ವಿಷ್ಣುವರ್ಧನನು ಐದು ವೈಷ್ಣವ ದೇವಾಲಯಗಳನ್ನು–ತಲಕಾಡಿನಲ್ಲಿ ಕೀರ್ತಿನಾರಾಯಣ, ತೊಣ್ಣೂರಿನಲ್ಲಿ ಲಕ್ಷ್ಮಿ–ನಾರಾಯಣ, ಮೇಲುಕೋಟೆಯಲ್ಲಿ ಚೆಲುವನಾರಾಯಣ, ಬೇಲೂರಿನಲ್ಲಿ ವಿಜಯನಾರಾಯಣ ಮತ್ತು ಗದಗಿನಲ್ಲಿ ವೀರನಾರಾಯಣ ದೇವಾಲಯಗಳನ್ನು ಕಟ್ಟಿಸಿದನು.[೩೯] ಈ ದೇವಾಲಯಗಳು ವೈಷ್ಣವ ಧರ್ಮದ ಪ್ರತೀಕದ ಜೊತೆಗೆ ಹೊಯ್ಸಳ ಶೈಲಿಯ ಕಲೆ ಮತ್ತು ವಾಸ್ತುಶಿಲ್ಪದ ಪ್ರಮುಖ ಕುರುಹುಗಳಾಗಿವೆ. ಇದರೊಂದಿಗೆ ವಿಷ್ಣುವರ್ಧನನು ವೈಷ್ಣವ ಧರ್ಮದ ಸಂರಕ್ಷನಾಗಿಯೂ ಮತ್ತು ಹೊಯ್ಸಳ ಶೈಲಿಯ ಕಲೆ ಮತ್ತು ವಾಸ್ತುಶಿಲ್ಪದ ಮೂಲಕರ್ತನಾಗಿ ಕಂಡು ಬರುತ್ತಾನೆ. ಇದಲ್ಲದೇ ಇವರು ಶಾಸ್ತ್ರ–ಕಾವ್ಯ–ನಾಟಕ, ವರ್ಣಾಶ್ರಮ ಧರ್ಮದ ಸಂರಕ್ಷಕರಾಗಿದ್ದುದನ್ನು ಶಾಸನಗಳು ತಿಳಿಸುತ್ತವೆ. ಉದಾ: ಪಂಡಿತನಹಳ್ಳಿಯ ೧೧೪೫–೪೬ ರ ಶಾಸನವು ವಿಷ್ಣುವರ್ಧನನ್ನು ಕವಿಜನ ಕಲ್ಪಕುಜಂ ಎಂದು ಬಣ್ಣಿಸಿದೆ.[೪೦] ಮತ್ತೊಂದು ಶಾಸನವು ಹೊಯ್ಸಳ ರಾಜರು ವಿದ್ವಾಂಸರೊಡನೆ ಮತ್ತು ಕವಿಗಳೊಡನೆ ಕಾವ್ಯ ನಾಟಕಗಳ ವಿಚಾರವನ್ನು ಚರ್ಚಿಸುತ್ತಿದ್ದರೆಂದು ತಿಳಿಸುತ್ತದೆ.[೪೧] ರಾಜನ ಕರ್ತವ್ಯಗಳು ನಾಲ್ಕು–ಅವುಗಳೆಂದರೆ: ದುಷ್ಟರನ್ನು ಶಿಕ್ಷಿಸುವುದು, ಸದ್ವ್ಯಕ್ತಿಗಳನ್ನು ಕಾಪಾಡುವುದು, ತನ್ನನ್ನು ತಾನು ರಕ್ಷಿಸಿಕೊಳ್ಳುವುದು, ಮತ್ತು ಧರ್ಮಕ್ಕೆ ಸಂಬಂಧಿಸಿದ ದಾನ, ದೇವಸ್ಥಾನ ನಿರ್ಮಾಣ ಮುಂತಾದವುಗಳನ್ನು ಮಾಡುವುದಾಗಿತ್ತು.[೪೨] ರಾಜರ ವಿಶೇಷಣಗಳನ್ನು ನೋಡಿದರೆ ಅವರಲ್ಲಿ ಬಹುಪಾಲು ದೊಡ್ಡ ವಿದ್ಯಾವಂತರೂ, ಶೂರರೂ ಆಗಿದ್ದರೆಂದು ಊಹಿಸಬಹುದೆಂದು ಚಿದಾನಂದಮೂರ್ತಿಯುವರು ಅಭಿಪ್ರಾಯಪಟ್ಟಿದ್ದಾರೆ.[೪೩] ಆದರೆ ಈ ಹೇಳಿಕೆ ಹೊಯ್ಸಳರ ಎಲ್ಲಾ ರಾಜರಿಗೂ ಅನ್ವಯಿಸುವುದಿಲ್ಲ.

**ರಾಜವಂಶಕ್ಕೆ ಸಂಬಂಧಿಸಿದ ಪದ್ದತಿಗಳ ಆಚರಣೆ:** ತಲಕಾಡು ಯುದ್ಧದನಂತರ ವಿಷ್ಣುವರ್ಧನನು ಹಿರಣ್ಯಗರ್ಭ,

ತುಲಾಭಾರ, ಅಶ್ವಮೇಧ ಮತ್ತು ಗೋಸ ಹಸ್ರ ಮುಂತಾದ ಆಚರಣೆಗಳನ್ನು ಮಾಡುವುದರೊಂದಿಗೆ ಹೊಯ್ಸಳ ವಂಶದಲ್ಲಿ ಹೊಸದೊಂದು ಪದ್ಧತಿಯನ್ನು ಹುಟ್ಟಿಹಾಕಿ ತನ್ನ ಅಧಿಕಾರ ವನ್ನು ಹೆಚ್ಚು ಮಾನ್ಯತೆಗೊಳಿಸಿ ಕೊಳ್ಳಲಾರಂಭಿಸಿದನು.[೪೪] ಇಂತಹ ಆಚರಣೆಗಳನ್ನು ಬ್ರಾಹ್ಮಣರ ಸಮ್ಮುಖದಲ್ಲಿ ಮತ್ತು ಅವರಿಂದಲೇ ಮಾಡಿಸಿ ಅವರಿಗೆ ಅಪಾರ ಪ್ರಮಾಣದ ದಾನಧರ್ಮಗಳನ್ನು ಮಾಡುವುದರ ಮೂಲಕ ಸಮಾಜದಲ್ಲಿ ತಮ್ಮ ಪ್ರತಿಷ್ಠೆಯನ್ನು ಹೊಯ್ಸಳರಾಜರು ಮತ್ತಷ್ಟು ಹೆಚ್ಚಿಸಿ ಕೊಳ್ಳತೊಡಗಿದರು.

**ಚಕ್ರವರ್ತಿ ನಾಮಾರೋಪ :** ಚಕ್ರವರ್ತಿಯೆಂದರೆ ವಿಶ್ವದ ಮಾದರಿ ದೊರೆಯಾಗಿದ್ದು, ಸಾರ್ವಭೌಮ, ರಾಜಾಧಿರಾಜ, ಮುಂತಾದ ಬಿರುದುಗಳನ್ನು ಹೊಂದಿರುತ್ತಿದ್ದನು. ರನ್ನನು ತನ್ನ ಗದಾಯುದ್ಧ ಕಾವ್ಯದಲ್ಲಿ ಸಾಮಂತ–ಮಂಡಳೇಶ್ವರ ಮತ್ತು ಚಕ್ರವರ್ತಿಯ ಪರಂಪರೆಯನ್ನು ಆರೋಹಣ ಕ್ರಮದಲ್ಲಿ ಪರೋಕ್ಷವಾಗಿ ತಿಳಿಸಿದ್ದಾನೆ.[೪೫] ಅಪರಾಜಿತ ಪೃಚ್ಛಾಗ್ರಂಥವು ಮೂರು ವರ್ಗದ ರಾಜರುಗಳನ್ನು ತಿಳಿಸುತ್ತದೆ.[೪೬] ಅವರೆಂದರೆ ಚಕ್ರವರ್ತಿ, ಅರ್ಧಪತಿ, ಮತ್ತು ಮಹೀಪತಿ. ಸಮಸ್ತ ಭೂ ಮಂಡಳವನ್ನು ಆಳುವವನು ಚಕ್ರವರ್ತಿ. ಅವನ ಆಸ್ಥಾನದಲ್ಲಿ ೪ ಜನ ಮಂಡಳೇಶ್ವರರು, ೧೨ ಮಂದಿ ಮಂಡಲೀಕರು, ೧೬ ಮಂದಿ ಮಹಾ ಸಾಮಂತರು, ೩೨ ಮಂದಿ ಸಾಮಂತರು ಗಳಿಗೆ ಅವಕಾಶ ಕಲ್ಪಿಸಿದೆ. ಅರ್ಧಭಾಗವನ್ನು ಆಳುವವ ಅಧಿಪತಿ (ಅರ್ಧಪತಿ) ಮತ್ತು ಮೂರನೇ ಒಂದು ಭಾಗವನ್ನು ಆಳುವವನು ಮಹೀಪತಿ. ಹೊಯ್ಸಳರ ಕಾಲದಲ್ಲಿ ಚಕ್ರವರ್ತಿ, ಮಂಡಳೇಶ್ವರ ಎಂಬ ಬಿರುದುಗಳಿದ್ದುದನ್ನು ಸಾಕಷ್ಟು ಸಂಖ್ಯೆಯಲ್ಲಿ ಕಾಣಬಹುದು. ಉದಾ: ಹೊಯ್ಸಳ ವೀರ ಬಲ್ಲಾಳನಿಗೆ ಶ್ರೀ ಪೃಥ್ವೀವಲ್ಲಭ, ತೆಂಕಣ ಚಕ್ರವರ್ತಿ, ದಕ್ಷಿಣಾ ಪಥೇಶ್ವರ ಮಹಾರಾಜಾಧಿರಾಜ, ಪರಮೇಶ್ವರ ಎಂಬ ಬಿರುದು ಗಳಿದ್ದುದನ್ನು ಶಾಸನವೊಂದು ತಿಳಿಸುತ್ತದೆ.[೪೭] ಈ ರೀತಿಯ ಬಿರುದುಗಳು ಬಲ್ಲಾಳನ ಮುಂದಿನ ತಲೆಮಾರಿ ನವರು ಸಹ ಹೊಂದಿದ್ದನ್ನು ಕಾಣಬಹುದು.

**ಸರ್ವ ಧರ್ಮಗಳ ಸಂರಕ್ಷಣೆ:** ರಾಜನ ಕರ್ತವ್ಯವು ಕೇವಲ ಯುದ್ಧಗಳನ್ನು ಕೈಗೊಂಡು ರಾಜ್ಯ ವಿಸ್ತರಿಸುವುದು ಮತ್ತು ತನ್ನ ಸ್ವಹಿತವನ್ನು ಸಂರಕ್ಷಿಸುವುದಾಗಿರದೇ ಇಡೀ ಸಾಮಾಜಿಕ ವ್ಯವಸ್ಥೆಯನ್ನು (ಶ್ರೇಣೀಕೃತ ಸಮಾಜ) ಮತ್ತು ವರ್ಣಾಶ್ರಮ ಧರ್ಮವನ್ನು ಕಾಪಾಡುವುದಾಗಿತ್ತು. ಒಂದನೇ ನರಸಿಂಹನನ್ನು ಚತುಸ್ಸಮಯ ಸಮುದ್ಧರಣ [೪೮] ಮತ್ತು ಸಕಲ ಸಮಯ ರಕ್ಷಾಮಣಿ[೪೯] ಎಂದು ಶಾಸನಗಳು ತಿಳಿಸುತ್ತವೆ. ಈ ರೀತಿಯ ಹೇಳಿಕೆಗಳಿಂದ ಪುರೋಹಿತಶಾಹೀ ವರ್ಗದಿಂದ ಲೌಕಿಕ ಅಧಿಕಾರವನ್ನು ಮಾನ್ಯತೆ ಮಾಡಿಸಿಕೊಳ್ಳುತ್ತಿದ್ದರು. ಪುರೋಹಿತ ವರ್ಗವು ರಾಜನನ್ನು ದಂಡ ಬಳಸುವುದಕ್ಕೆ ಅನುವು ಮಾಡಿಕೊಟ್ಟಿದ್ದು ಅದು ರಾಜತ್ವದ ಅಧಿಕಾರವನ್ನು ಹೆಚ್ಚಿಸುವ ಪ್ರಮುಖ ಅಸ್ತ್ರವಾಗಿತ್ತು.

**ಉದಾರ ದಾನಿಯ ಪ್ರತೀಕರು :** ರಾಜರು ಬಹಳ ಉದಾರವಾಗಿ ದಾನ ಮಾಡುವವರು ಹಾಗೂ ಅವರು ಬ್ರಾಹ್ಮಣರಿಗೆ ತಮ್ಮ ಸರ್ವಸ್ವವನ್ನು ಕೊಟ್ಟು ಅವರು ಗೆದ್ದುಕೊಂಡ ಪ್ರದೇಶಗಳಿಂದ ಬರುತ್ತಿದ್ದ ಆದಾಯದಿಂದ ಬದುಕುತ್ತಿದ್ದರೆಂದು ಹೇಳಿಕೊಂಡಿದ್ದಾರೆ. ಉದಾ: ವಿಷ್ಣುವರ್ಧ ನನು ತನ್ನ ರಾಜ್ಯವನ್ನು ಬ್ರಾಹ್ಮಣರಿಗೆ ಮತ್ತು ದೇವತೆಗಳಿಗೆ ದಾನ ಮಾಡಿ ತಾನು ಗೆದ್ದ ರಾಜ್ಯಗಳ ಮೇಲೆ ತನ್ನ ಅಧಿಕಾರ ಹೊಂದಿದ್ದನು.[೫೦] ರಾಜರು ಹೆಚ್ಚಾಗಿ ಪುರೋಹಿತಶಾಹೀ ವರ್ಗಕ್ಕೆ ಮತ್ತು ತಮಗೆ ಯಾರಿಂದ ಹೆಚ್ಚು ಲಾಭವಾಗುತ್ತಿತ್ತೋ ಅಂತಹವರಿಗೆ ಮಾತ್ರ ದಾನಗಳನ್ನು ಮಾಡಿದ್ದಾರೆಯೇ ಹೊರತು ಅವಶ್ಯಕತೆಯಿದ್ದ ಬಡಬಗ್ಗರಿಗೆ ಅವರು ಎಂದೂ ಮಾಡಿಲ್ಲ. ಈ ರೀತಿಯ ದಾನ ಮಾಡುವುದರಿಂದ ಪ್ರತಿಷ್ಠಿತ ಸಾಮಾಜಿಕ ಗುಂಪುಗಳ ಮನಸ್ಸಂತೋಷಪಡಿಸಿ ತಮ್ಮ ರಾಜಕೀಯ ಅಧಿಕಾರವನ್ನು ಮಾನ್ಯತೆ ಮಾಡಿಸಿಕೊಳ್ಳುತ್ತಿದ್ದರು. ಇದಕ್ಕೆ ಬದಲಾಗಿ ಪುರೋಹಿತಶಾಹಿ ವರ್ಗವು ಅಪಾರ ಪ್ರಮಾಣದಲ್ಲಿ ದಾನ ಧರ್ಮದ ರೂಪದಲ್ಲಿ ಭೂಮಿ, ಹಣ, ದನಕರುಗಳು, ಮನೆ ನಿವೇಶನಗಳು ಮತ್ತು ಮನೆಗಳನ್ನು ಪಡೆದು ಅಂದಿನ ಸಮಾಜದಲ್ಲಿ ಅತ್ಯಂತ ಪ್ರಭಾವಶಾಲಿ ಸಾಮಾಜಿಕ ವರ್ಗವಾಗಿ ಬೆಳೆದು ಅದು ಇಡೀ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಗಿತ್ತು.

ಈ ಮೇಲಿನ ವಿವರಣೆಗಳಿಂದ ಪೂರ್ವ ಮಧ್ಯ ಯುಗೀನ ಕಾಲದ ಕರ್ನಾಟಕದಲ್ಲಿ ರಾಜತ್ವವನ್ನು ರಚಿಸಲು ಹಲವಾರು ವಿಧಾನಗಳನ್ನು ಅಳವಡಿಸಿಕೊಂಡಿರುವುದು ತಿಳಿದು ಬರುತ್ತದೆ. ಈ ಪ್ರಕ್ರಿಯೆಯಲ್ಲಿ ತಮ್ಮದಲ್ಲದ್ದನ್ನು ತಮ್ಮದಾಗಿಸಿ ಕೊಂಡಿದ್ದಲ್ಲದೇ ಅದನ್ನು ಮುಂದಿನ ತಲೆಮಾರಿನವರಿಗೆ ಬಳುವಳಿಯಾಗಿ ನೀಡಿರುವುದು ಕಂಡುಬರುತ್ತದೆ. ಆಳರಸರು ಇಂತಹ ಹೆಚ್ಚಿನ ಹಕ್ಕುಬಾಧ್ಯತೆ ಗಳನ್ನು ಪಡೆದಿರುವುದು ಇತಿಹಾಸಕಾರರಲ್ಲಿ ಕೆಲವು ಪ್ರಶ್ನೆಗಳನ್ನು ಸ್ವಾಭಾವಿಕವಾಗಿಯೇ ಮೂಡಿಸುತ್ತದೆ. ಏಕೆಂದರೆ ವಾಸ್ತವಿಕತೆಗೂ ಮತ್ತು ಅವಾಸ್ತವಿಕತೆಗೂ ಅಜಗಜಾಂತರ ವ್ಯತ್ಯಾಸವಿದೆ. ಆಸ್ಥಾನ ಕವಿಗಳು ಸಣ್ಣದೊಂದು ಘಟನೆಯನ್ನು ವೈಭವೀಕರಿಸಿ ಅದನ್ನು ದೊಡ್ಡ ಯುದ್ಧಗಳಿಗೆ ಹೋಲಿಸಿರು ವುದು ಮತ್ತು ಚಿಕ್ಕ ಪುಟ್ಟ ಪ್ರದೇಶಗಳನ್ನು ಆಳುತ್ತಿದ್ದವರನ್ನು ಮೂರು ಲೋಕದ

ಗಂಡ, ಚಕ್ರವರ್ತಿ, ದಕ್ಷಿಣಾಪಥೇಶ್ವರ ಮತ್ತು ಸಾರ್ವಭೌಮ ಎಂದೆಲ್ಲ ವರ್ಣಿಸಿರುವುದು ನೈಜತೆಯನ್ನು ಮುಚ್ಚಿಡುವ ಪ್ರಯತ್ನವಾಗಿ ಕಂಡುಬರುತ್ತದೆ. ಆದ್ದರಿಂದ ಇತಿಹಾಸಕಾರರು ಆಸ್ಥಾನ ಕವಿಗಳು ರಚಿಸಿದ ವಂಶಾವಳಿಗಳನ್ನಾಗಲಿ, ಬಿರುದು ಗಳನ್ನಾಗಲಿ ಮತ್ತು ಪ್ರಶಸ್ತಿಗಳನ್ನಾಗಲಿ ನಿಜವೆಂದು ನಂಬದೇ ಅವುಗಳನ್ನು ಒರೆಗೆ ಹಚ್ಚಿ. ಸಾಧ್ಯವಾದರೆ ಅವುಗಳಿಂದ ಹೊರಗೆ ಹೋಗಿ ರಾಜ್ಯ/ರಾಜತ್ವದ ನೈಜತೆಯನ್ನು ಕಂಡು ಹಿಡಿಯುವುದು ಅತಿ ಸೂಕ್ತ. ಇಂತಹ ಪ್ರಕ್ರಿಯೆಗಳು ಪ್ರಸ್ತುತ ಭಾರತದ ರಾಜಕೀಯ ಬೆಳವಣಿಗೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಹಕಾರಿಯಾಗುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ದೇಸಾಯಿ, ಪಿ.ಬಿ., **ಎ ಹಿಸ್ಟರಿ ಆಫ್ ಕರ್ನಾಟಕ,** (ಧಾರವಾಡ, ೧೯೭೦), ಪುಟ.೨೮೪, ದಿವಾಕರ್, ಆರ್.ಆರ್. **ಕರ್ನಾಟಕ ಥ್ರೂ ದಿ ಏಜಸ್,** (ಮೈಸೂರು, ೧೯೬೮), ಪುಟಗಳು, ೫೧೮-೫೨೨.

೨. ಕೇಶವನ್ ವೆಳುತ್ತಾಟ್, **ದಿ ಪೊಲಿಟಿಕಲ್ ಸ್ಟ್ರಕ್ಚರ್ ಆಫ್ ಅರ್ಲಿ ಮೆಡಿವಲ್ ಸೌಥ್ ಇಂಡಿಯಾ,** (ನವದೆಹಲಿ, ೧೯೯೩), ಪುಟಗಳು. ೨೯-೬೧.

೩. ಡೆರೆಟ್ ಪ್ರಕಾರ ಹೊಯ್ಸಳರು ಗುಡ್ಡಗಾಡಿನ ನಿವಾಸಿಗಳಾಗಿದ್ದು ಅವರನ್ನು ಮಲೆಪರು ಎಂದು ಕರೆಯಲಾಗಿತ್ತು. ಅವರು ಮೂಲತ: ಬೇಡ ಜನಾಂಗದವರಾಗಿದ್ದು, ಕಾಡುಪ್ರಾಣಿಗಳನ್ನು ಬೇಟೆಯಾಡುವುದು, ಗಂಧದ ಮರ ಮತ್ತಿತರ ಬೆಲೆ ಬಾಳುವ ಕಾಡಿನ ಉತ್ಪನ್ನಗಳನ್ನು ವರ್ತಕರಿಗೆ ಮಾರಾಟ ಮಾಡುವುದು, ಪಶ್ಚಿಮ ಘಟ್ಟಕ್ಕೆ ಹತ್ತಿರವಿದ್ದ ಹಳ್ಳಿಗಳ ಮೇಲೆ ದಾಳಿ ಮಾಡಿ ಹೆಂಗಸರು, ದನಕರುಗಳನ್ನು ಕದ್ದೊಯ್ದು ಜೀವನ ನಡೆಸುತ್ತಿದ್ದರು. ಹೊಯ್ಸಳರ ಪ್ರಾರಂಭದ ಜೀವನದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ನೋಡಿ, ಡೆರೆಟ್, ಜೆ.ಡಿ.ಎಮ್., **ದಿ ಹೊಯ್ಸಳಾಸ್: ಎ ಮೆಡಿವಲ್ ಇಂಡಿಯನ್ ರಾಯಲ್ ಫ್ಯಾಮಿಲಿ,** (ಮದ್ರಾಸ್, ೧೯೫೭), ಪುಟಗಳು. ೭-೯.

೪. ಹೆಚ್ಚಿನ ಮಾಹಿತಿಗಾಗಿ ನೋಡಿ, ವಿಲಿಯಂ ಕೊಯಿಲ್ಹೋ, **ದಿ ಹೊಯ್ಸಳ ವಂಶ,** (ಬಾಂಬೆ, ೧೯೫೦), ಪುಟ. ೨-೩.

೫. **ಎಪಿಗ್ರಾಫಿಯಾ ಕರ್ನಾಟಿಕಾ,** ಸಂಪುಟ, ೯ (ಹೊಸತು), ಬೇಲೂರು ೪೭೩. (ಇನ್ನು ಮುಂದೆ ಎ.ಕ).

೬ ಹತ್ತನೇ ಶತಮಾನದಲ್ಲಿ ದಕ್ಷಿಣ ಭಾರತದ ಎಲ್ಲಾ ರಾಜವಂಶಗಳು ತಮ್ಮ ಮೂಲ ಮತ್ತು ವಂಶಾವಳಿಗಳನ್ನು ಹೆಚ್ಚು ಆಕರ್ಷಕವಾಗಿ ಕಟ್ಟಲು ಹವಣಿಸುತ್ತಿದ್ದರೆಂದು ಜಾನ್.ಎಫ್. ಫ್ಲೀಟರು ತಮ್ಮ ಪುಸ್ತಕ **ದಿ ಹೊಯ್ಸಳ ವಂಶ**ದಲ್ಲಿ ತಿಳಿಸಿದ್ದಾರೆ. (ಪುಟ. ೩೪೨). ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ಸಹ ದೊಡ್ಡಪ್ರಮಾಣದ ವಂಶಾವಳಿಗಳನ್ನು ರಚಿಸುವುದು ೧೧ ನೇ ಶತಮಾನದ ಆಳರಸರ ಪ್ರಮುಖ ಹವ್ಯಾಸವಾಗಿತ್ತೆಂದು ಅಭಿಪ್ರಾಯ ಪಟ್ಟಿದ್ದಾರೆ. (**ಏನ್ಷಿಯಂಟ್ ಇಂಡಿಯಾ,** ಪುಟ. ೯೧). ವಿಲಿಯಂ ಕೊಯಿಲ್ಹೋರವರು ಸಹ ಸುಮಾರು ೧೦-೧೧ ನೇ ಶತಮಾನದಲ್ಲಿ ಎಲ್ಲಾ ರಾಜವಂಶಗಳು ಪೌರಾಣಿಕ ವಂಶಾವಳಿಗಳನ್ನು ಕಟ್ಟಲಾರಂಭಿಸಿದರು ಎಂದು ಅಭಿಪ್ರಾಯಪಟ್ಟಿದ್ದಾರೆ. (ಪೂರ್ವೋಕ್ತ., ಪುಟ. ೮).

೭. **ಎ.ಕ.,** ಸಂಪುಟ. ೧೧ (ಹೊಸತು), ಚಿಕ್ಕಮಗಳೂರು ೧೦೬.

೮. ಅದೇ., ೪೭ ಮತ್ತು ಸಂಪುಟ. ೧೨ (ಹೊಸತು), ಮೂಡಿಗೆರೆ ೧೧೨.

೯. ಅದೇ., ಮೂಡಿಗೆರೆ ೧೬.

೧೦. **ರೈಸ್.ಬಿ.ಎಲ್., ಮೈಸೂರ್ ಅಂಡ್ ಕೂರ್ಗ್ ಫ್ರಮ್ ದಿ ಇನ್ಸ್ಕ್ರಿಪ್ಷನ್ಸ್,** (ನವದೆಹಲಿ, ೧೯೮೬), ಪುಟ. ೯೭.

೧೧. **ಎ.ಕ. ಸಂಪುಟ.** ೯ (ಹೊಸತು), ಸಕಲೇಶಪುರ ೩೫.

೧೨. ಅದೇ., ಸಂಪುಟ. ೧೧, ಮೂಡಿಗೆರೆ ೧೭.

೧೩. ಅದೇ., ಮೂಡಿಗೆರೆ ೨೧.

೧೪. ಅದೇ., ಚಿಕ್ಕಮಗಳೂರು ೭೧.

೧೫. ಅದೇ., ಮೂಡಿಗೆರೆ ೨೫.

೧೬. ಅದೇ., ಚಿಕ್ಕಮಗಳೂರು ೩೪.

೧೭. ಅದೇ., ೧೪.

೧೮. ಅದೇ., ೨೧.

೧೯. ಅದೇ., ಸಂಪುಟ. ೯, ಬೇಲೂರು ೪೭೩.

೨೦. ಅದೇ., ಸಂಪುಟ. ೧೧, ಚಿಕ್ಕಮಗಳೂರು ೨೧೦.

೨೧. ಅದೇ., ಮೂಡಿಗೆರೆ ೩೮.

೨೨. ಅದೇ., ಚಿಕ್ಕಮಗಳೂರು ೧೬೧ ಮತ್ತು ೧೬೨.

೨೩. ಅದೇ., ಮೂಡಿಗೆರೆ ೨೯.

೨೪. ಅದೇ., ಸಂಪುಟ ೯. ಬೇಲೂರು ೧೬.

೨೫. ಅದೇ., ೩೮೬. ಬಸ್ತಿಹಳ್ಳಿ ಮತ್ತು ಬೇಲೂರು ಶಾಸನಗಳು ಹೊಯ್ಸಳರ ಮೂಲಪುರುಷನಾದ ಸಳನು ಯದು ವಂಶಕ್ಕೆ ಸೇರಿದವನೆಂದು ತಿಳಿಸುತ್ತವೆ. ಅದರ ಪ್ರಕಾರ ಬ್ರಹ್ಮನಿಂದ ಅತ್ರಿ, ಅತ್ರಿಯಿಂದ ಚಂದ್ರ, ಅವನ ಮಗ ಬುಧ, ಅವನ ಮಗ ಪುರೂರವ, ಅವನ ಮಗ ಅಯು, ಅವನ ಮಗ ನಹುಷ, ನಹುಷನಿಂದ ಯಯಾತಿ, ಅವನ ಮಗ ಯದು. ಯದುವಂಶದಲ್ಲಿ ಅನೇಕ ರಾಜರು ಹುಟ್ಟಿದರು. ಅವರಲ್ಲಿ ಸಳನು ಸಹ ಒಬ್ಬನಾಗಿದ್ದು, ಅವನು ಸುದಾತ್ತ ಮುನಿಯ ಆದೇಶದಂತೆ ಹುಲಿಯನ್ನು ಕೊಂದದ್ದರಿಂದ ಪೊಯ್ಸಳ ಎಂದು ಕರೆಯಲಾಯಿತು. ವಿನಯಾದಿತ್ಯನು ಸಳನ ವಂಶಕ್ಕೆ ಸೇರಿದವನು).

೨೬. ಅದೇ., ಸಂಪುಟ. ೧೧, (ಹೊಸತು), ಚಿಕ್ಕಮಗಳೂರು ೧೪೦.

೨೭. ಅದೇ., ಸಂಪುಟ. ೯, ಬೇಲೂರು ೪೫೮.

೨೮. ಅದೇ., ಸಂಪುಟ. ೧೧, ಮೂಡಿಗೆರೆ ೨೬.

೨೯. ಅದೇ., ಸಂಪುಟ. ೧೨, ಕಡೂರು ೧೫೦, ಮತ್ತು ಸಂಪುಟ. ೪, ಹುಣಸೂರು ೨೪.

೩೦. ಅದೇ., ಸಂಪುಟ. ೯, ಬೇಲೂರು ೪೧೦.

೩೧. ಅದೇ., ಬೇಲೂರು ೩೨೯.

೩೨. ಅದೇ., ೧೬೧.

೩೩. ಅದೇ., ೫೨೭.

೩೪. ಅದೇ., ೨೫೬.

೩೫. ಅದೇ., ೫೦೧.

೩೬. ಅದೇ., ೧೮೧.

೩೭. ಅದೇ., ೯೯.

೩೮. ವಿಷ್ಣುವರ್ಧನನು ಕ್ರಿ.ಶ. ೧೧೧೬-೧೭ ರಿಂದೀಚೆಗೆ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ವಿದ್ವಾಂಸರ ಪ್ರಕಾರ ಜೈನನಾಗಿದ್ದ ಬಿಟ್ಟಿದೇವನು ರಾಮಾನುಜಾಚಾರ್ಯರ ಭೇಟಿಯ ನಂತರ ವೈಷ್ಣವ ಧರ್ಮಕ್ಕೆ ಮತಾಂತರಗೊಂಡಾಗ ಆ ಧರ್ಮದ ಅಭಿವೃದ್ಧಿಗಾಗಿ ಐದು ವೈಷ್ಣವ ದೇವಾಲಯಗಳನ್ನು ಕಟ್ಟಿಸಿದನು. ಇನ್ನೂ ಕೆಲವು ವಿದ್ವಾಂಸರ ಪ್ರಕಾರ ವಿಷ್ಣುವರ್ಧನನು ತಲಕಾಡಿನಲ್ಲಿ ಚೋಳರನ್ನು ಪ್ರಪ್ರಥಮ ಬಾರಿಗೆ ಎದುರಿಸಿ ಸೋಲಿಸಿ ತಲಕಾಡನ್ನು ವಶಪಡಿಸಿಕೊಂಡ ವಿಜಯೋತ್ಸಕ್ಕಾಗಿ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದನು.

೩೯. ಅದೇ., ೪೫೮.

೪೦. ಅದೇ., ಸಂಪುಟ. ೯, ಬೇಲೂರು ೪೫೮.

೪೧. **ಸೌಥ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್,** ೯ (೧), ೨೨೦.

೪೨. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** (ಮೈಸೂರು, ೧೯೬೬), ಪುಟ ೩೨೩.

೪೩. ಎ.ಕ. ಸಂಪುಟ. ೧೬.

೪೪. ವಿಲಿಯಂ ಕೊಹಿಲ್ಹೋ., **ದಿ ಹೊಯ್ಸಳ ವಂಶ,** (ಬಾಂಬೆ. ೧೯೫೦). ಪುಟ. ೨೬೬.

೪೫. **ರನ್ನಕವಿ ಗದಾಯುದ್ಧ ಸಂಗ್ರಹಂ,** ತೀ.ನಂ. ಶ್ರೀಕಂಠಯ್ಯ (ಸಂ.), (ಮೈಸೂರು, ೧೯೭೨), ಪುಟಗಳು ೨-೩.

೪೬. **ಅಪರಾಜಿತಪೃಜ್ಞಾ,** ಅಧ್ಯಾಯ, ೭೮, ಮಂಕಡ್. ಪಿ.ವಿ. (ಸಂ), (ಬರೋಡಾ. ೧೯೫೦), ಪುಟ. ೧೯೬.

೪೭. **ಎ.ಕ. ಸಂಪುಟ. ೮** (ಹೊಸತು), ಹಾಸನ ೩೮, ಮತ್ತು ಸಂಪುಟ. ೮. ಸೊರಬ ೧೪೦.

೪೮. ಅದೇ., ಸಂಪುಟ. ೧೦, (ಹೊಸತು), ಅರಸೀಕರೆ ೧೬೪. ೨೯

೪೯. ಅದೇ., ಅರಸೀಕೆರೆ ೫೯, ೨೩, ೩೩, ಸಂಪುಟ. ೯, ಬೇಲೂರು ೧೬, ಸಂಪುಟ. ೮, ಹಾಸನ ೭೬.

೫೦. ಅದೇ., ಸಂಪುಟ, ೮, ಹಾಸನ ೯೭.

ಡಾ. ಕೆ.ಜಿ. ಗೋಪಾಲಕೃಷ್ಣರಾವ್*

# ವಿಜಯನಗರದ ವೀರನರಸಿಂಹನ ಅಂತ್ಯಕಾಲ : ಮರುಪರಿಶೀಲನೆ

ಒಂದೆರಡು ಅಪವಾದಗಳನ್ನು ಬಿಟ್ಟರೆ ಬಹುತೇಕ ವಿಜಯನಗರದ ಅರಸರ ಪಟ್ಟಾಭಿಷೇಕ ಕಾಲವಾಗಲಿ ಅಂತ್ಯ ಕಾಲವಾಗಲಿ ಸ್ಪಷ್ಟವಿಲ್ಲ. ವೀರನರಸಿಂಹನೇನೂ ಇದಕ್ಕೆ ಹೊರತಲ್ಲ. ಕ್ರಿ.ಶ. ೧೫೦೫ ಅವನ ಪಟ್ಟಾಭಿಷೇಕ ಕಾಲವೆಂದೂ ಕ್ರಿ.ಶ. ೧೫೦೯ ಅವನ ಮರಣಕಾಲವೆಂದೂ ಕರ್ನಾಟಕದ ಇತಿಹಾಸಕಾರರ ಅಭಿಪ್ರಾಯ. ಉದಾಹರಣೆಗೆ ಹೆಚ್. ಕೃಷ್ಣ ಶಾಸ್ತ್ರಿಗಳು ಇಸವಿಯ ಎ.ಎಸ್.ಐ. ವರದಿಯಲ್ಲಿ ವೀರನರ ಸಿಂಹನು ಕ್ರಿ.ಶ. ೧೫೦೯ರಲ್ಲಿ ಮರಣಿಸಿದ ಎಂದು ಬರೆದಿದ್ದಾರೆ.

ಎಂ.ವಿ. ಕೃಷ್ಣರಾಯರು ತಮ್ಮ **ಕರ್ನಾಟಕ ಇತಿಹಾಸ ದರ್ಶನ** ಗ್ರಂಥದ ೩೧೭ನೇ ಪುಟದಲ್ಲಿ 'ವೀರನರಸಿಂಹನು ಕ್ರಿ.ಶ. ೧೫೦೯ರಲ್ಲಿ ನೆಮ್ಮದಿಯಿಂದ ಕಣ್ಮುಚ್ಚಿದ' ಎಂದು ಬರೆದಿದ್ದಾರೆ. ಡಾ॥ ಸೂರ್ಯನಾಥ್ ಕಾಮತ್ ಅವರೂ ಕೂಡ ೧೯೯೭ರಲ್ಲಿ ಪ್ರಕಟವಾದ ತಮ್ಮ **'ಎ ಕನ್ಸೈಸ್ ಹಿಸ್ಟರಿ ಆಫ್ ಕರ್ನಾಟಕ**ದಲ್ಲಿ ವೀರನರಸಿಂಹನ ಮರಣ ಕ್ರಿ.ಶ. ೧೫೦೯ರಲ್ಲಿ ಆಯಿತೆಂದು ಬರೆದಿದ್ದಾರೆ. ಕೃಷ್ಣರಾಯನ ಪಟ್ಟಾಭಿಷೇಕವು ಕ್ರಿ.ಶ. ೧೫೦೯ರಲ್ಲಿ ಆದದ್ದರಿಂದ ಆ ವೇಳೆಗೆ ವೀರನರಸಿಂಹನ ಮರಣವಾಗಿರಬೇಕು ಎಂಬ ಊಹೆಯನ್ನು ಬಿಟ್ಟರೆ ಈ ತೇದಿಗೆ ಬೇರೆ ಯಾವ ಆಧಾರವೂ ಇದ್ದಂತಿಲ್ಲ. ಈ ಬಗ್ಗೆ ಹೆಚ್ಚು ಜಿಜ್ಞಾಸೆಯಿರದ್ದರಿಂದ ಯಾರೂ ಇತ್ತೀಚಿನ ವರೆಗೂ ಇದರ ಬಗ್ಗೆ ಗಮನ ಹರಿಸಿರಲಿಲ್ಲ. ಈ ಬಗ್ಗೆ ಮೊದಲ ಬಾರಿಗೆ ಗಮನ ಹರಿಸಿದವರೆಂದರೆ ಪ್ರೊ. ದೀಕ್ಷಿತ್ ಅವರು. ೧೯೯೭ರಲ್ಲಿ ಪ್ರಕಟವಾದ ಅವರ 'ಕೃಷ್ಣದೇವ ರಾಯನ ಜೀವನ, ಸಾಧನೆ' ಗ್ರಂಥದಲ್ಲಿ[೧] ವೀರನರಸಿಂಹನ ಅಂತ್ಯ ಕಾಲವನ್ನು ನಿರ್ಧರಿಸುವ ತೀವ್ರ ಪ್ರಯತ್ನ ಮಾಡಿ ಕಾಳಹಸ್ತಿಯ ಶಾಸನವೊಂದರ ಆಧಾರದಿಂದ ವೀರನರ ಸಿಂಹನ ಮರಣವು ಕ್ರಿ.ಶ. ೧೫೧೩ರ ಶ್ರೀಮುಖ ಸಂವತ್ಸರ ದಲ್ಲಿ ಆಗಿರಬೇಕೆಂದು ನಿರ್ಧರಿಸಿದರು.

ಕೃಷ್ಣರಾಯನ ಕಾಳಹಸ್ತಿಯ ಈ ದಾನ ಶಾಸನದಲ್ಲಿ[೨] ಪೂರ್ವಜರಾದ ತಿಮ್ಮ, ಈಶ್ವರ, ನರಸನಾಯಕರ ದಿಗ್ವಿಜಯಗಳ, ತೀರ್ಥಯಾತ್ರೆಗಳ, ಮಹಾದಾನಗಳ ವರ್ಣನೆ ಆದ ಮೇಲೆ ವೀರನರಸಿಂಹನ ವಿವರಗಳು ಬರುತ್ತವೆ. ವೀರನರ ಸಿಂಹನ ಮಹಾದಾನಗಳ, ವಿಜಯಗಳ ವಿವರಣೆಯ ನಂತರ ಸಾಲು ೨೧ರಲ್ಲಿ 'ತಸ್ಮಿಂಗುಣೆ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೆ' ಎನ್ನುವ ವಾಕ್ಯ ಬರುತ್ತದೆ. ಈ ವಾಕ್ಯ ಅವನ ಮರಣವನ್ನು ಖಚಿತವಾಗಿ ನಿರ್ದೇಶಿಸುವುದರಿಂದ ವೀರ ನರಸಿಂಹನ ಮರಣ ಕ್ರಿ.ಶ. ೧೫೧೩ರ ಶ್ರೀಮುಖದಲ್ಲಿ ಆಯಿತು ಎಂದು ಪ್ರೊ॥ ದೀಕ್ಷಿತ್ ಅವರು ನಿರ್ಧರಿಸಿದರು. ಪೂರಕವಾಗಿ ವೀರನರಸಿಂಹನನ್ನು ಉಲ್ಲೇಖಿಸುವ ಕ್ರಿ.ಶ. ೧೫೧೨ ಮತ್ತು ಕ್ರಿ.ಶ. ೧೫೧೧ರ ಎರಡು ಶಾಸನಗಳನ್ನು ಉದ್ಧರಿಸಿ ಕ್ರಿ.ಶ. ೧೫೧೩ರ ತನಕವೂ ವೀರನರಸಿಂಹ ಬದುಕಿದ್ದ ಎಂದು ತೀರ್ಮಾನಿಸಿದರು. ಹಾಗೂ ಕ್ರಿ.ಶ. ೧೫೧೩ರ ಶ್ರೀಮುಖದಲ್ಲಿ ಕೃಷ್ಣರಾಯನು ಹಿಂದೆಂದೂ ನೀಡದಷ್ಟು ದಾನಗಳನ್ನು ಕೊಟ್ಟಿರುವುದರಿಂದ ಆ ವರ್ಷ ವೀರನರಸಿಂಹನು ಮರಣಿಸಿ ಕೃಷ್ಣರಾಯನ ಎರಡನೆಯ ಪಟ್ಟಾಭಿಷೇಕವೂ ನಡೆದಿರಬೇಕೆಂದು ತರ್ಕಿಸಿದರು.

ನನ್ನ ಗಮನಕ್ಕೆ ಬಂದ ಕೆಲವು ಶಾಸನಗಳು ಈ ಅಭಿಪ್ರಾಯವನ್ನು ಪುನರ್ವಿಮರ್ಶಿಸಬೇಕಾದ ಅಗತ್ಯವನ್ನು ತೋರಿಸಿವೆ.

ಮೊದಲೆರಡು ಶಾಸನಗಳು ಒಂದರ ಪ್ರತಿ ಇನ್ನೊಂದ ರಂತೆ ಇರುವುದರಿಂದ ಅವೆರಡನ್ನೂ ಮೊದಲು ಗಮನಿಸ ಬೇಕು. ಮೊದಲನೆಯದು ಹಿರೇಜಟ್ಟಿಗದ ತಾಮ್ರಶಾಸನ, ನಾಗಮಂಗಲ ತಾಲೂಕಿನದು.[೩] ಇನ್ನೊಂದು ಹಾಸನಜಿಲ್ಲೆಯ ಬೇಲೂರಿನ ತಾಮ್ರ ಶಾಸನ.[೪] ಇವೆರಡೂ ಕೃಷ್ಣರಾಯನು ಶಿವಗಂಗೆಯ ಗಂಗಾಧರೇಶ್ವರನ ಸನ್ನಿಧಿಯಲ್ಲಿ ಬ್ರಾಹ್ಮಣನಿಗೆ ಕೊಟ್ಟದಾನ ಶಾಸನಗಳು, ತುಳುವಂಶದ ದೀರ್ಘವರ್ಣನೆಯಲ್ಲಿ ತಿಮ್ಮ, ಈಶ್ವರ, ನರಸನಾಯಕರ ನಂತರ ವೀರನರಸಿಂಹನ ವಿವರಗಳು ಬಂದಿವೆ. ಅವನ ಜೈತ್ರಯಾತ್ರೆಗಳು, ಮಹಾ ದಾನಗಳ ನಂತರ ಸಾಲು ೩೨ ರಲ್ಲಿ 'ತಸ್ಮಿನ್‌ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೇ' ಎನ್ನುವ ಒಕ್ಕಣೆ ಬಂದಿದೆ.

* ೨೬೩/೧, ೪೪ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ೫ನೇ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೪೧.

ಹಾಗಾಗಿ ಈ ಶಾಸನಗಳ ಕಾಲಕ್ಕೆ ವೀರನರಸಿಂಹ ಮರಣಿಸಿದ್ದ ವಿಷಯವಿದೆ. ಈ ಎರಡೂ ಶಾಸನಗಳ ತೇದಿ ಶಕ ೧೪೩೪, ಆಂಗೀರಸ ಸಂವತ್ಸರ, ಆಶ್ವಯುಜ, ಶುದ್ಧ ೧೫, ಸೋಮವಾರ, ಚಂದ್ರಗ್ರಹಣ, ಈ ವಿವರಗಳು ವಾರವೊಂದನ್ನು ಬಿಟ್ಟು ಸೆಪ್ಟೆಂಬರ್ ೨೫, ಕ್ರಿ.ಶ. ೧೫೧೨ ನೇ ಇಸವಿಗೆ ಸರಿ ಹೊಂದುತ್ತವೆ. ಆದ್ದರಿಂದ ಈ ಶಾಸನಗಳು ವೀರನರಸಿಂಹನ ಮರಣ ಕಾಲವನ್ನು ಕಾಳಹಸ್ತಿ ಶಾಸನದ ಕಾಲವಾದ ೧೫೧೩ ಕ್ಕಿಂತ ೯ ತಿಂಗಳು ಹಿಂದಕ್ಕೆ ಹಾಕುತ್ತದೆ.

ಮೂರನೆಯ ಶಾಸನ[೩] ಕೃಷ್ಣರಾಯನು ಬ್ರಾಹ್ಮಣನಿಗೆ ವಿಜಯನಗರದಲ್ಲಿ ಕೊಟ್ಟ ದಾನಶಾಸನ. ಈ ಶಾಸನದಲ್ಲೂ ತುಳುವಂಶದ ವರ್ಣನೆ, ಪೂರ್ವಜರ ಪ್ರಶಂಸೆ ಬಂದ ನಂತರ ವೀರ ನರಸಿಂಹನ ಭಾಗದಲ್ಲಿ ಸಾಲು ೪೨ರಲ್ಲಿ 'ತಸ್ಮಿನ್‌ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೇ' ಎನ್ನುವ ಉಲ್ಲೇಖ ಬಂದಿದೆ. ಆದ್ದರಿಂದ ಈ ಶಾಸನದ ವೇಳೆಗೆ ವೀರನರಸಿಂಹ ಮೃತವಾಗಿದ್ದ. ಈ ಶಾಸನದ ಕಾಲ ಶಕವರ್ಷ ೧೪೩೩, ಪ್ರಜಾಪತಿ ಸಂವತ್ಸರ, ಪುಷ್ಯಮಾಸದ ಭಾನುವಾರ. ಅಂದರೆ ಕ್ರಿ.ಶ. ೧೫೧೧ ನೇ ಇಸವಿ ಡಿಸೆಂಬರ್ ತಿಂಗಳ ಒಂದು ಭಾನುವಾರ. ತಿಥಿಯ ಉಲ್ಲೇಖವಿಲ್ಲ. ಈ ಶಾಸನ ವೀರ ನರಸಿಂಹನ ಮರಣದ ಕಾಲವನ್ನು ಕಾಳಹಸ್ತಿ ಶಾಸನಕ್ಕಿಂತ ೧೮ ತಿಂಗಳು ಹಿಂದಕ್ಕೆ ಹಾಕುತ್ತದೆ.

ನಾಲ್ಕನೆಯ ಶಾಸನ[೪] ಅತಿಮುಖ್ಯವಾದದ್ದು. ಕಡಪಾ ಜಿಲ್ಲೆಯ ಶಾಸನ. ಕೃಷ್ಣರಾಯನು ಈ ಭಾಗದ ಮದುವೆ ಸುಂಕವನ್ನು ಹಂಪೆಯಲ್ಲಿ ಧಾರಾಪೂರ್ವಕವಾಗಿ ಬಿಟ್ಟುಕೊಟ್ಟದ್ದು. ಇತರೆ ಶಾಸನಗಳಂತೆ ಇಲ್ಲೂ ತುಳುವಂಶದ ವರ್ಣನೆಯ ಕೊನೆಯಲ್ಲಿ ವೀರನರಸಿಂಹನ ದಿಗ್ವಿಜಯಗಳ ವರ್ಣನೆ ಇದೆ. ಸಾಲು ೨೭ ರಲ್ಲಿ' ಯ ಮಹಾಪತಿ: ತಯೋ: ವೀರನರಸಿಂಹೇಂದ್ರೇ, ರತ್ನ ಸಿಂಹಾಸನೇಶ್ವರೇ, ಪ್ರಾಜ್ಯ ಪ್ರಶಾಸ್ಯ ನಿರ್ವಿಘ್ನಂ ರಾಜ್ಯ ದಿವಮುಪಸ್ಥಿತೆ' ಎಂಬ ಒಕ್ಕಣೆಯಿದೆ. ನಿಸ್ಸಂಶಯವಾಗಿ ಈ ಸಾಲು ವೀರನರಸಿಂಹನ ಮರಣವನ್ನು ದಾಖಲಿಸುತ್ತದೆ. ಈ ಶಾಸನದ ತೇದಿ ಶಕವರ್ಷ ೧೪೩೨, ಪ್ರಮೋದ, ಆಶ್ವಯುಜ ಶುದ್ಧ ದ್ವಾದಶಿ. ಈ ವಿವರಗಳು ಖಚಿತವಾಗಿ ಸೆಪ್ಟೆಂಬರ್ ೧೫, ಕ್ರಿ.ಶ. ೧೫೧೦ನೇ ಇಸವಿಗೆ ಸರಿಹೊಂದುತ್ತವೆ. ಈ ಶಾಸನ ವೀರನರಸಿಂಹನ ಮರಣವನ್ನು ಕಾಳಹಸ್ತಿ ಶಾಸನಕ್ಕಿಂತ ೨ವರ್ಷ ೮ತಿಂಗಳು ಹಿಂದಕ್ಕೆ ಹಾಕಿದೆ.

ಈ ನಾಲ್ಕು ಶಾಸನಗಳ ಆಧಾರದಿಂದ ವೀರನರ ಸಿಂಹನ ಮರಣ ಕ್ರಿ.ಶ. ೧೫೧೦ನೇ ಇಸವಿ ಸೆಪ್ಟೆಂಬರ್ ತಿಂಗಳ ೧೫ನೇ ತಾರೀಖಿಗಿಂತ ಮುಂಚೆಯೇ ಆಯಿತೆಂದು ಹೇಳಬಹುದು.

ಈಗ ಮತ್ತೊಂದು ಪ್ರಮುಖ ಶಾಸನವನ್ನು[೫] ಪರಿಶೀಲಿ ಸೋಣ, ಇದು ಹಂಪೆಯ ವಿರೂಪಾಕ್ಷದೇವಸ್ಥಾನದ ಮಹಾ ರಂಗಮಂಟಪದ ಎದುರಿನಲ್ಲಿರುವ ಪ್ರಸಿದ್ಧವಾದ ಕೃಷ್ಣರಾಯನ ಪಟ್ಟಾಭಿಷೇಕದ ದಾನಶಾಸನ. ಶಾಸನದ ತೇದಿ ಕೃಷ್ಣರಾಯನ ಪಟ್ಟವಾದ ಜನವರಿ ೨೪, ಕ್ರಿ.ಶ. ೧೫೧೦. ಈ ಶಾಸನದ ೨೬ನೇ ಸಾಲಿನಲ್ಲಿ 'ತಸ್ಮಿನ್ ಗುಣೇ ವಿಖ್ಯಾತೇ ಕ್ಷಿತೇರಿಂದ್ರೇ ದಿವಂಗತೇ' ಎಂಬ ಉಲ್ಲೇಖವಿದೆ. ಹಾಗಾದರೆ ವೀರ ನರಸಿಂಹನು ಶಾಸನದ ತೇದಿಯಾದ ಜನವರಿ ೨೪, ಕ್ರಿ.ಶ. ೧೫೧೦ ಕ್ಕಿಂತ ಮುಂಚೆಯೇ ಕಾಲವಾಗಿದ್ದನೆ?

ಆದರೆ ಈ ಶಾಸನದಲ್ಲಿ ತೇದಿ ಜನವರಿ ೨೪, ೧೫೧೦ ಎಂದು ಸ್ಪಷ್ಟವಾಗಿ ಕಂಡರಿಸಿದ್ದರೂ ಶಾಸನವನ್ನು ಹಾಕಿಸಿದ ಕಾಲದ ಬಗ್ಗೆ ಗೊಂದಲವಿದೆ. ಈ ಶಾಸನದ ಬಗ್ಗೆ ಬರೆದಿರುವ ಸಿವೆಲ್ ಸಾಹೇಬರೇ "ಆದರೂ ಸಹ ಈ ಉತ್ಸವ ಪಟ್ಟಾಭಿಷೇಕದಂದೇ (ಜ ೨೪, ೧೫೧೦) ಜರುಗಿತೋ ಅಥವಾ ಆ ಘಟನೆಯ ವಾರ್ಷಿಕದಂದೋ ಎನ್ನುವುದು ಖಚಿತವಿಲ್ಲ.[೮] ಎನ್ನುತ್ತಾರೆ. ಎ.ಇ ಯ ಮೊದಲನೆಯ ಸಂಪುಟ ದಲ್ಲಿ ಈ ಶಾಸನವನ್ನು ದೀರ್ಘವಾಗಿ ಚರ್ಚಿಸಿರುವ ಹುಲ್ಷ್ ಸಾಹೇಬರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಶಾಸನದಲ್ಲೇ ಇದು ಉಲ್ಲೇಖಿತ ತಾರೀಖಿನ (ಜ ೨೪, ೧೫೧೦) ನಂತರ ಹಾಕಿರಬಹುದೆಂಬುದನ್ನು ಸೂಚಿಸುವ ಆಂತರಿಕ ಸೂಚನೆಗಳಿವೆ.

ಮೊದಲನೆಯದು ಶಾಸನದ ೫೪-೫೫ನೇ ಸಾಲಿನಲ್ಲಿ ಬರುವ ಒಕ್ಕಣೆ-" ಪಟ್ಟಾಭಿಷೇಕೋತ್ಸವ ಕಾಲದಲು ದೇವರ ಸಂಮುಖದ ಮಹಾರಂಗಮಂಟಪವನೂ ಆ ಮುಂದಣ ಗೋಪುರವನೂ ಕಟ್ಟಿಸಿ ಹಿರಿಗೋಪುರವನು ಜೀರ್ಣೋದ್ಧಾರವ ಮಾಡಿಸಿ" ಎಂಬುದು. ಪಟ್ಟವಾದ ದಿನದಂದೇ ಈ ಎಲ್ಲ ಕೆಲಸಗಳನ್ನೂ ಪ್ರಾರಂಭಮಾಡಿ ಒಂದೇ ದಿವಸದಲ್ಲಿ ಮುಗಿಸಲು ಸಾಧ್ಯವಿಲ್ಲ. ಪಟ್ಟವಾದಂದು ಈ ಕೆಲಸಗಳನ್ನು ಪ್ರಾರಂಭ ಮಾಡಿ ಹಲವು ತಿಂಗಳ ನಂತರ ಕಟ್ಟಡಕಾರ್ಯ ಪೂರ್ಣವಾದ ಮೇಲೆ ವಿರೂಪಾಕ್ಷನಿಗೆ ಸಮರ್ಪಿಸಿ ಈ ಶಾಸನವನ್ನು ಹಾಕಿಸಿರಬೇಕು. ಹೀಗಾಗಿ ಶಾಸನೋಲ್ಲೇಖಿತ ತೇದಿಯ ಕೆಲವು ತಿಂಗಳ ನಂತರ ಈ ಶಾಸನ ಹಾಕಿಸಿರ ಬೇಕು.

ಸಾಲು ೩೯ರಲ್ಲಿ ಕೃಷ್ಣರಾಯನ ಪ್ರಶಸ್ತಿಗಳನ್ನು ಹೇಳುತ್ತಾ" ಅಂಗವಂಗ ಕಳಿಂಗಾದ್ಯ ರಾಜಭಿ: ಸೇವ್ಯತೇ...' ಎಂದೂ ಸಾಲು ೪೧ರಲ್ಲಿ ಹೇ ಮಾಚಲಾಂತಾದಾ ಸೇಕೋರರ್ಥಿ ಸಾರ್ಥ ಶ್ರಿಯ ಮಿಹ' ಎಂಬ ಉಲ್ಲೇಖ ಬಂದಿದೆ. ಪಟ್ಟವಾದ ಕೆಲವು ತಿಂಗಳಲ್ಲೇ ಹೇಳುವ ಈ ಪ್ರಶಸ್ತಿಗಳನ್ನು ಕೇವಲ

ಸಾಂಪ್ರದಾಯಿಕ ಎಂದಷ್ಟೇ ಭಾವಿಸಬೇಕಲ್ಲದೆ ಅವಕ್ಕೆ ಬೆಲೆ ಕೊಡಲಾಗದು. ಅದರೆ ಈ ಸಾಂಪ್ರದಾಯಿಕ, ಅಸಾಧ್ಯ ಪ್ರಶಸ್ತಿಗಳಿಂದ ಬೇರೆಯೇ ಆಗಿ ಬೇರೆಯ ಸಾಲಿನಲ್ಲಿ (೪೪) ಬರುವ ಎರಡು ಅತಿಮುಖ್ಯ ಪ್ರಶಸ್ತಿಗಳು ನಮ್ಮ ಕುತೂಹಲ ಕೆರಳಿಸುತ್ತವೆ.

ಅವು 'ಪರಿಭೂತ ಸುರತ್ರಾಣೇನ' ಮತ್ತು 'ಗಜಪತಿ ಗಜಕೂಟ ಪಾಲಿಲೇನ' ಎಂಬ ಹೇಳಿಕೆ. ಇವು ಕೇವಲ ಸಾಂಪ್ರದಾಯಿಕ ಪ್ರಶಸ್ತಿಗಳಾಗಿರದೆ ನಿಜವಾದ ದಂಡಯಾತ್ರೆಗಳನ್ನೇ ಸೂಚಿಸುತ್ತವೆಂಬುದನ್ನು ನೋಡೋಣ.

ಕೃಷ್ಣರಾಯನ ಪಟ್ಟವಾದ ಕ್ರಿ.ಶ. ೧೫೧೦ರಲ್ಲಿ ಅವನ ದಂಡಯಾತ್ರೆಗಳನ್ನು ಪಟ್ಟಿಮಾಡಿದರೆ ಫೆಬ್ರುವರಿ–ಮಾರ್ಚ್ ತಿಂಗಳಲ್ಲಿ ಮೊದಲನೆಯ ಉಮ್ಮತ್ತೂರು ದಂಡಯಾತ್ರೆಯೂ, ಅಕ್ಟೋಬರ್ ತಿಂಗಳಲ್ಲಿ ರಾಯಚೂರು ಆಕ್ರಮಣವೂ, ಅದೇ ಅಕ್ಟೋಬರ್ ಕೊನೆಗೆ ಮೂವರು ಶಾಹೀಸುಲ್ತಾನರುಗಳ ಮೇಲೆ ಆಕ್ರಮಣವೂ ಕೊನೆಗೆ ಎರಡನೆಯ ಉಮ್ಮತೂರು, ಆಕ್ರಮಣವೂ ನಡೆಯಿತೆನ್ನಬಹುದು.[೯] 'ಗಜಪತಿಗಜ ಕೂಟ ಪಾಕಲೇನ' ಎಂಬ ಪ್ರಶಸ್ತಿಯು ಗಜಪತಿಯೊಡನೆ ನಡೆದ ಒಂದು ಯುದ್ಧವನ್ನು ಈ ಕಾಲದಲ್ಲೇ ಸೂಚಿಸುತ್ತದೆಯೆ? ಎಂಬುದನ್ನು ಈಗ ನೋಡೋಣ.

ಪ್ರೊ|| ಕೃಷ್ಣ ಚಂದ್ರ ಪಾಣಿಗ್ರಾಹಿ ಅವರು ತಮ್ಮ 'ಹಿಸ್ಟರಿ ಆಫ್ ಒರಿಸ್ಸಾ' ಗ್ರಂಥದ ೨೨ನೇ ಪುಟದಲ್ಲಿ ಪ್ರತಾಪರುದ್ರ ಗಜಪತಿಯು ೧೫೦೯ರ ನಂತರ ಮತ್ತು ೧೫೧೦ ಅಕ್ಟೋಬರ್ ಒಳಗೆ ವಿಜಯನಗರದ ಮೇಲೆ ಆಕ್ರಮಣ ಮಾಡಿ ಅಷ್ಟೇನೂ ಸಾಧಿಸದೆ ಹಿಂದಿರುಗಿದನೆಂದು ಹೇಳುತ್ತಾರೆ.

ನೆಲ್ಲೂರು ಜಿಲ್ಲೆಯ ಅಕ್ಟೋಬರ್ ೧೫೧೦ನೇ ಇಸವಿಯ ಶಾಸನವೊಂದರಲ್ಲಿ[೧೦] ಸ್ಥಳೀಯ ಅಧಿಕಾರಿಯೊಬ್ಬನು ಕೃಷ್ಣರಾಯನ ಕಾಲದಲ್ಲಿ ಮಹಾಪ್ರಧಾನ ತಿಮ್ಮರಸನಿಗೆ ಧರ್ಮವಾಗಲಿ ಎಂದು ಹಾಕಿಸಿದ ಶಾಸನವಿದೆ. ಅದೇ ಜಿಲ್ಲೆಯ ಅಕ್ಟೋಬರ್ ೧೫೧೦ರ ಇಂದ್ರಕೊಂಡ ಶಾಸನದಲ್ಲಿ[೧೧] ಪ್ರತಾಪರುದ್ರ ಗಜಪತಿಯು ಬ್ರಾಹ್ಮಣನೊಬ್ಬನಿಗೆ ದಾನಕೊಟ್ಟ ಮಾಹಿತಿಯಿದೆ. ಒಂದೇ ಕಾಲದ ಒಂದೇ ಜಿಲ್ಲೆಯ ಶತ್ರು ನಾಯಕರಿಬ್ಬರ ಈ ಶಾಸನಗಳಿಂದ ಸುಮಾರು ಆಗಸ್ಟ್–ಸೆಪ್ಟೆಂಬರ್ ೧೫೧೦ ರ ವೇಳೆ ಗಜಪತಿ ಮತ್ತು ಕೃಷ್ಣರಾಯ ಅಥವಾ ಅವನ ಸೈನ್ಯದ ನಡುವೆ ಒಂದು ಅಷ್ಟೇನೂ ಮುಖ್ಯವಲ್ಲದ ಮುಖಾಮುಖಿ ನಡೆದಿತ್ತೆಂದು ಊಹಿಸಬಹುದು. ಹೀಗಾಗಿ ಕೃಷ್ಣರಾಯನ ಪ್ರಶಸ್ತಿ 'ಗಜಪತಿ ಗಜಕೂಟ ಪಾಕಲೇನ' ಅರ್ಥಪೂರ್ಣವೂ ಸತ್ಯವೂ ಎನಿಸುತ್ತದೆ.

೪೪ನೇ ಸಾಲಿನ 'ಪರಿಭೂತ ಸುರತ್ರಾಣೇನ' ಎನ್ನುವುದು ವಿಶ್ಲೇಷಿಸಬೇಕಾದ ಇನ್ನೊಂದು ಪ್ರಶಸ್ತಿ ಪದ. ಪರಿಭವ ಎಂದರೆ ಅವಮಾನ, ಅನಾದರಣೆ ಎಂದೂ ಸೋಲೂ ಎಂದು ಅರ್ಥಗಳಿವೆ. ಕೃಷ್ಣರಾಯನು 'ಸುರತ್ರಾಣ' ಅಥವಾ ಸುಲ್ತಾನನನ್ನು ಎಂದು ಸೋಲಿಸಿದ ಎಂಬುದನ್ನೂ, ಈ ಸೋಲಿನ ಕಾಲವು ಹಂಪೆಯ ಶಾಸನದ ಕಾಲ ಮಿತಿಯೊಳಗೆ ಬಂದೀತೆ ಎಂಬುದನ್ನೂ ಈಗ ನೋಡೋಣ.

ಈ 'ಸುರತ್ರಾಣ'ನು ಮುಸ್ಲಿಂ ಸುಲ್ತಾನ ಎನ್ನುವುದು ನಿರ್ವಿವಾದ. ಕ್ರಿ.ಶ. ೧೫೧೦ರ ಸುಮಾರಿನಲ್ಲಿ ಬಹುಮನಿ ಅರಸನಾಗಿದ್ದ ಶಹಾಬುದ್ದೀನ್ ಮೆಹಮೂದನು ಅಧಿಕಾರ ಹೀನನಾಗಿ ದುಸ್ಥಿತಿಯಲ್ಲಿದ್ದ. ಒಡೆದು ಸ್ವತಂತ್ರವಾಗುತ್ತಲಿದ್ದ ಈ ಶಾಹೀ ರಾಜ್ಯಗಳಲ್ಲಿ ಅತ್ಯಂತ ಬಲಿಷ್ಠವಾದುದೂ ಕೃಷ್ಣರಾಯನನ್ನು ಎದುರಿಸುವ ಸಾಮರ್ಥ್ಯವಿದ್ದುದೂ ಮತ್ತು ವಿಜಯನಗರದೊಂದಿಗೆ ದೀರ್ಘವಾದ ಗಡಿಯನ್ನು ಹೊಂದಿದ್ದುದೂ ನಿರ್ವಿವಾದವಾಗಿ ವಿಜಾಪುರ ಮಾತ್ರ. ಆದ್ದರಿಂದ ಈ ಸುರತ್ರಾಣನನ್ನು ವಿಜಾಪುರದ ಸುಲ್ತಾನ ಯೂಸುಫ್ ಆದಿಲ್ ಶಹ ಎಂದು ಭಾವಿಸುವುದಕ್ಕೆ ಅಡ್ಡಿಯಿಲ್ಲ.

'ಆಮುಕ್ತಮಾಲ್ಯದಾ' ಅವತಾರಿಕಾ ಸಂಧಿಯ ೪೨ನೇ ಪದ್ಯದಲ್ಲಿ ಕೃಷ್ಣರಾಯನು ಸ್ಪಷ್ಟವಾಗಿ ಯೂಸುಫ್ ಅದಿಲ್ ಶಾಹನನ್ನು ಕೊಂದದ್ದರ ಸೂಚನೆಯನ್ನು ಕೊಡುತ್ತಾನೆ. ಹಾಗೆಯೇ ಮಾರೀಚೀ ಪರಿಣಯದ ಅವತಾರಿಕೆಯ ೮೩ನೇ ಪದ್ಯದಲ್ಲಿಯೂ ಇದೇ ಮಾಹಿತಿ ಸ್ಪಷ್ಟವಾಗಿ ವ್ಯಂಗ್ಯೋಕ್ತಿಯೊಡನೆ ಲಭ್ಯವಿದೆ. ಹುಸೇನ್ ಆದಿಲ್ ಶಾಹನು ಕೃಷ್ಣರಾಯನ ನಂತರ ಮರಣಿಸಿದ್ದುದರಿಂದ (ಕ್ರಿ.ಶ. ೧೫೩೪) ಕೃಷ್ಣರಾಯನಿಂದ ಹತನಾದ 'ಎದುಲಶಾಹ' ಹುಸೇನನ ತಂದೆ ಯೂಸುಫ್ ಅದಿಲ್ ಶಾಹನೇ ಇರಬೇಕು. ಈತನ ಮರಣಕಾಲದ ಬಗ್ಗೆ ಮುಸ್ಲಿಂ ಚರಿತ್ರಕಾರರಲ್ಲಿ ಒಮ್ಮತವಿಲ್ಲದೆ ಅನೇಕ ಕಾಲಗಳನ್ನು ಸೂಚಿಸುವುದೂ ಮತ್ತು ಮರಣದ ಕಾರಣವನ್ನು 'ಜಲೋದರ ರೋಗ' ವೆಂದು ಹೇಳುವುದು ಮುಸ್ಲಿಂ ಚರಿತ್ರಕಾರರ ಪಕ್ಷಪಾತ ನೀತಿಯೇ. ಆದರೆ "ಹುಸೇ ಆದಿಲ್‌ಶಾಹನು ನವೆಂಬರ್ ೧೫೧೦ರಲ್ಲಿ ತನ್ನ ಪಟ್ಟಾಭಿಷೇಕೋತ್ಸವ ಸಂಭ್ರಮದಲ್ಲಿದ್ದಾಗ ಗೋವೆಯನ್ನು ತಾವು ಪುನಃ ಆಕ್ರಮಿಸಿಕೊಂಡುದಾಗಿ ಪೋರ್ಚುಗೀಸ್ ಮೂಲಗಳು ಸ್ಪಷ್ಟವಾಗಿ ಹೇಳುವುದರಿಂದ ಯೂಸುಫ್ ಆದಿಲ್‌ಶಾಹನು ಸುಮಾರು ಆಗಸ್ಟ್, ಸೆಪ್ಟೆಂಬರ್ ೧೫೧೦ರಲ್ಲಿ ಕೃಷ್ಣರಾಯನೊಡನೆ ನಡೆದ ಯುದ್ಧದಲ್ಲಿ ಮೃತನಾಗಿರಬೇಕು. ಹೀಗಾಗಿ ಈ 'ಸುರತ್ರಾಣದ ಪರಿಭವ'ದ ಕಾಲವು ಸೆಪ್ಟೆಂಬರ್ ೧೫೧೦ರ ಸುಮಾರಿನದ್ದಿರಬೇಕು. ಹೀಗಾಗಿ 'ಈ ಪರಿಭೂತ ಸುರ

ತ್ರಾಣೀನ' ಎಂಬ ಪ್ರಶಸ್ತಿಯೂ ಅರ್ಥಪೂರ್ಣವೂ, ನೈಜವೂ ಆಗುತ್ತದೆ.

ಈ ಆಧಾರಗಳಿಂದ ಕೃಷ್ಣರಾಯನು ಸುಮಾರು ಸೆಪ್ಟೆಂಬರ್/ಅಕ್ಟೋಬರ್ ೧೫೧೦ರ ವೇಳೆಗೆ ಬಿಜಾಪುರದ ಯೂಸುಫ್ ಆದಿಲ್‌ಖಾನ್ ಸುರತ್ರಾಣನೊಡನೆಯೂ, ಪ್ರತಾಪರುದ್ರ ಗಜಪತಿಯೊಡನೆ ಅದಕ್ಕಿಂತ ಸ್ವಲ್ಪ ಮುಂಚೆಯೂ ಯುದ್ಧ ಮಾಡಿರುವ ಸಾಧ್ಯತೆಗಳು ಪ್ರಬಲವಾಗಿರುವುದರಿಂದ ಈ ಹಂಪೆಯ ಜನವರಿ ೧೫೧೦ರ ತೇದಿಯುಳ್ಳ ಶಾಸನವು ಸೆಪ್ಟೆಂಬರ್/ಅಕ್ಟೋಬರ್ ೧೫೧೦ರಲ್ಲಿ ಹಾಕಿರಬಹುದಾದ ಸಾಧ್ಯತೆಗಳೇ ಹೆಚ್ಚಾಗಿವೆ. ಈ ಶಾಸನದಲ್ಲಿಯೂ ವೀರ ನರಸಿಂಹನ ಮರಣದ ಉಲ್ಲೇಖ ಬಂದಿರುವುದರಿಂದ ಈತನ ಮರಣವು ಸೆಪ್ಟೆಂಬರ್ ೧೫೧೦ಕ್ಕೆ ಮುಂಚೆಯೇ ಸಂಭವಿಸಿರ ಬೇಕೆಂದು ಹೇಳಬಹುದು.

'ಕೃಷ್ಣದೇವರಾಯನ ದಿನಚರಿ' ಗ್ರಂಥದಲ್ಲಿ ಕೃಷ್ಣರಾಯನ ಪಟ್ಟಾಭಿಷೇಕದ ದೀರ್ಘ ವಿವರಗಳು ಬರುತ್ತವೆ. ೬ನೇ ಪುಟದಲ್ಲಿ 'ಸಿಂಹಾಸನದ ಮೇಲೆ ಚಿತ್ತೈಸಿ, ಸಕಲವಾದಂಥ ವರು ಓಲಗವನು ಕೊಟ್ಟು...' ಎಂದೂ ನಂತರ ವೀರನೃ ಸಿಂಹರಾಯರ ತೋರಿಸಿ....' ಎಂದಿದೆ. ತಮ್ಮನ ಪಟ್ಟಾಭಿಷೇ ಕದ ಕಾಲದಲ್ಲಿ ವೀರನರಸಿಂಹನು ಅಸ್ವಸ್ಥನಾದ್ದರಿಂದ ನಂತರ ಕೃಷ್ಣರಾಯನನ್ನು ಅಣ್ಣನಿದ್ದಲ್ಲಿಗೇ ಕರೆದೊಯ್ದು ಆಶೀರ್ವಾದ ಪಡೆದಿರಬೇಕು, ಎಂದರೆ ಪಟ್ಟಾಭಿಷೇಕವಾದ ಜನವರಿ ೨೪, ೧೫೧೦ರಲ್ಲಿ ವೀರನರಸಿಂಹ ಜೀವಂತವಿದ್ದ. ವೀರ ನರಸಿಂಹನ ಜನವರಿ ೧೪, ೧೫೧೦ರ ಶಾಸನವೇ ಇರುವುದ ರಿಂದ ಇದು ಸಂಪೂರ್ಣವಾಗಿ ನಂಬಲರ್ಹವಾಗಿದೆ.

ಈಗ ಪ್ರೊ॥ ದೀಕ್ಷಿತ್ ಅವರು ಉಲ್ಲೇಖಿಸಿರುವ ವೀರನರಸಿಂಹನನ್ನು ಉಕ್ತಮಾಡಿರುವ ಕ್ರಿಶ. ೧೫೧೧ ಮತ್ತು ಕ್ರಿಶ ೧೫೧೨ರ ಎರಡು ಶಾಸನಗಳನ್ನು ನೋಡೋಣ.[೧೩] ಮೊದಲನೆಯ ಶಾಸನ ಕಾನಕಾನಹಳ್ಳಿ ತಾಲ್ಲೂಕಿನ ಹಲಸೂರು ಗ್ರಾಮದ್ದು.

"ಶ್ರೀ ಮೊಖ ಸಂವತ್ಸರದ ಜಯಿಷ್ಟ ಶು೧೧ ಶ್ರೀ ಮನುಮಹಾಮಂಡಳೇಶ್ವರಂ ಅರಿರಾಯವಿಬಾಡ, ಬಾಸೆಗೆ ತಪ್ಪುವ ರಾಯರಗಂಡ ಶ್ರೀವೀರನಾರಸೋಮವೊಡೇರು ಪ್ರಿತಿವೀರಾಜ್ಯಂಗೆಯ್ಯುತ್ತ ಇರಲು ದೇವರವೊಡೆಯನಾಯ್ಕರು ಬೆಟ್ಟದ ವಿಯ್ತೆ ಹಲ್ಸೂರು ಕೊಟ್ಟಿದ್ದಲ್ಲಿ ದುಗ್ಗಬೊಮ್ಮವ ನಾಯ್ಕರು ಹಾರುವದ್ಯ..." ಎಂದು ಸಾಗುತ್ತದೆ. ವ್ಯಾಕರಣ ದೋಷಗಳು, ಅಕ್ಷರ ಸ್ಖಾಲಿತ್ಯಗಳು ಮತ್ತು ವೀರನರಸಿಂಹನನ್ನು 'ವೀರನಾರಸೋಮ ವೊಡೇರು' ಎಂದಿರುವುದು ಈ ಶಾಸನ ವನ್ನು ವೀರನಾರಸಿಂಹನಿಗೆ ಆರೋಪಿಸುವುದಕ್ಕೆ ಹಿಂಜರಿಯು ವಂತೆ ಮಾಡುತ್ತದೆ.

ಇನ್ನೊಂದು ಶಾಸನ ಯಳಂದೂರು ತಾಲ್ಲೂಕಿನದು. ಈ ಶಾಸನದಲ್ಲಿ ಸಂವತ್ಸರ, ಶಕವರ್ಷಗಳು. ಸರಿಯಾಗಿದ್ದರೂ ಆಳರಸನ ಹೆಸರಿರುವ ಭಾಗ ಅಳಿಸಿಹೋಗಿ ಕೇವಲ ಭುಜ ಬಲರಾಯ ಎಂದಷ್ಟೇ ಇದೆ. ಯಾವ ಪ್ರಶಸ್ತಿಗಳೂ ಇಲ್ಲ. ಹೀಗಾಗಿ ನನ್ನ ಅಭಿಪ್ರಾಯದಲ್ಲಿ ಈ ಶಾಸನವನ್ನು ವೀರ ನರಸಿಂಹನಿಗೆ ಆರೋಪಿಸುವುದು ಸರಿಯಲ್ಲ.

ಇವೆಲ್ಲವನ್ನೂ ಮೀರಿದ ಮತ್ತೊಂದು ಸಂಗತಿಯಿದೆ. ವಿಜಯನಗರದ ಚರಿತ್ರೆಯಲ್ಲಿ ಪ್ರತಿಯೊಬ್ಬ ಚಕ್ರವರ್ತಿಯ ಮರಣದ ನಂತರವೂ ಅವನ ಹೆಸರಿನಲ್ಲಿ ಶಾಸನಗಳು ಹಾಕಿಸಲ್ಪಟ್ಟಿವೆ. ಮೃತರಾಜನ ಮೇಲಿನ ಗೌರವದಿಂದ ಅವನ ಅಧಿಕಾರಿಗಳು ಹೀಗೆ ಮರಣೋತ್ತರ ಶಾಸನಗಳನ್ನು ಹಾಕಿಸು ತ್ತಿದ್ದಿರಬಹುದು. ಉದಾಹರಣೆಗೆ:

೧) ಮರಣಿಸಿ ಎರಡು ವರ್ಷವಾದ ಮೇಲೆ ಕೃಷ್ಣರಾಯನ ಹೆಸರಿನಲ್ಲಿ ಹಾಕಿಸಲಾದ ಕ್ರಿ.ಶ. ೧೫೩೧ ನೇ ಇಸವಿಯ ಶ್ರೀಶೈಲದ ಶಾಸನ[೧೪] ; ೨) ಇವೇ ಇಸವಿಯ ಕೃಷ್ಣರಾಯನ ಹೆಸರಿನ ಉಮ್ಮತ್ತೂರಿನ ಶಾಸನ.[೧೫]; ೩) ಕ್ರಿ.ಶ. ೧೫೨೪ ರಲ್ಲಿ ಮೃತನಾದ ತಿರುಮಲರಾಯ ಮಹರಾಯನ ಕ್ರಿ.ಶ. ೧೫೨೬ನೇ ಇಸವಿಯ ಶಾಸನ[೧೬]; ೪) ವೀರನರಸಿಂಹನ ಹೆಸರಿನಲ್ಲೇ ಹಾಕಿಸಿರುವ ಕ್ರಿ.ಶ. ೧೫೧೫ರ ದೇವಕೀಪುರದ ಶಾಸನ.[೧೭]

ಈ ದೃಷ್ಟಿಯಿಂದ ನೋಡಿದಾಗ ನಾವು ವೀರನರ ಸಿಂಹನ ಕ್ರಿ.ಶ. ೧೫೧೧, ೧೫೧೨ ನೇ ಇಸವಿಯ ಶಾಸನ ಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ.

ಇನ್ನು ಕ್ರಿ.ಶ. ೧೫೧೩ರ ಶ್ರೀಮುಖ ಸಂವತ್ಸರದಲ್ಲಿ ಕೃಷ್ಣರಾಯನು ಕೊಟ್ಟ ಅಪಾರ ಸಂಖ್ಯೆಯ ದಾನಗಳು ಕ್ರಿ.ಶ. ೧೫೧೩ರಲ್ಲಿ ಕೃಷ್ಣರಾಯನು ಆಂತರಿಕ ದಂಗೆಗಳನ್ನು ಅಡಗಿಸಿ ಒರಿಸ್ಸಾ ದಂಡಯಾತ್ರೆಯನ್ನು ಪ್ರಾರಂಭಿಸಿದ್ದರಿಂದ ವಿಜಗೀಷು ವಾಗಿ ಜೈತ್ರಯಾತ್ರೆ ಯಶಸ್ವಿಯಾಗಲೆಂದು ಈ ಅಪಾರ ಸಂಖ್ಯೆಯ ದಾನಗಳನ್ನು ಕೊಟ್ಟಿರುವ ಸಾಧ್ಯತೆ ಇದೆ.

ಈ ಎಲ್ಲ ಆಧಾರಗಳಿಂದ ವೀರನರಸಿಂಹನು ಕ್ರಿ.ಶ. ೧೫೧೦ನೆಯ ಜನವರಿಯಿಂದ ಕ್ರಿ.ಶ. ೧೫೧೦ನೆಯ ಸೆಪ್ಟೆಂಬರ್ ಒಳಗೆ ಮರಣಿಸಿದನೆಂದು ಹೇಳಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಜಿ.ಎಸ್. ದೀಕ್ಷಿತ್ ಮತ್ತು ಇತರರು: **ಶ್ರೀಕೃಷ್ಣದೇವರಾಯ ಜೀವನ–ಸಾಧನೆಗಳು**. ಪುಟ. ೨೦.

೨. *S.I.I.* ಸಂಪುಟ IX. Part II. No.489. 44ನೇ ಸಾಲು.

೩. *EC.* ೭. (ಹೊಸತು)., ೧೯೭೦, ಮೈ.ವಿ.ವಿ. ೧೩೪ (ದೊಡ್ಡಜಟಕ, ಕ್ರಿ.ಶ. ೧೫೧೨) ನಾಗಮಂಗಲ ೧೩೪.

೪. *EC.* ೯, (ಹೊಸತು), ೧೯೯೦, ಮೈ.ವಿ.ವಿ. ೧೭೨ (ತಸ್ಮಿನ್ನುಗ್ಹೇನ ವಿಖ್ಯಾತೇ ಕ್ಷೇತೇರಿಂದ್ರೇ ದಿವಂಗತೇ') ಬೇಲೂರು ೧೭೨.

೫. *EC. II.* ಹೊಳಲ್ಕೆರೆ *94.*

೬ *S.I.I.* ಸಂಪುಟ *XVI* ನಂ. *47.*

೭. *S.I.I.* ಸಂಪುಟ *IV* ನಂ. *259.*

೮. ರಾಬರ್ಟ್ ಸಿವೆಲ್: **ಮರೆತು ಹೋದ ಸಾಮ್ರಾಜ್ಯ**. ಪುಟ. *131.*

೯. ಡಾ. ಜಿ.ಎಸ್. ದೀಕ್ಷಿತ್: ಪೂರ್ವೋಕ್ತ. ಪುಟ. *110.*

೧೦. Butter, Worth: *Nellore District Inscriptions.* Vol. II. Page 389. ನೆಲ್ಲೂರು ಜಿಲ್ಲೆ ಬಂಗೊಳೆ ತಾಲ್ಲೂಕಿನ ಗೋಣುಗುಂಟಿ ಗ್ರಾಮದ ಶಾಸನ.

೧೧. *A.R.I.E. A.* 12/1920-21.

೧೨. **ಆಮುಕ್ತ ಮಾಲ್ಯದಾ** ಪೀಠಿಕಾ ಪ್ರಕರಣ ಪದ್ಯ ೪೨.

೧೩. *EC.* ೪ (ಹೊಸತು)., ೧೯೭೫ ಮೈ.ವಿ.ವಿ. ಯಳಂದೂರು ೨೦೨ (ಯೆರಗಂಬಳ್ಳಿ ಕ್ರಿ.ಶ. ೧೫೧೨–೧೩) ಮತ್ತು ಎ.ಕ. ೯ (ರೈಸ್ ಆವೃತ್ತಿ) ಬೆಂ. ಜಿಲ್ಲೆ, ಕಾನಕಾನಹಳ್ಳಿ ೫೬ (ಹಲಸೂರು ಕ್ರಿ.ಶ. ೧೫೧೩?)

೧೪. *S.I.I.* Vol. No.87.

೧೫. *EC.* ೪. (ಹೊಸತು) ಅದೇ., ಚಾಮರಾಜನಗರ ೯೮.

೧೬. *ARIE. B.* 650/1929-30.

೧೭. *ARIE.* 390/1912.




ಅಳವಿಯೊಳೆಟ್ಟು ಪಾಯ್ವ ಪುಲಿಯಂ ಮುನಿ ಹೊಯ್‌ಸಳ ಎಂದ ತತ್‌ಕ್ಷಣಂ ।
ಸೆಳೆಯೊಳಡುರ್ತು ಪೊಯ್ದು ಸೆಳೆಯಂ ನೆಗಪಲ್ಕತಿಚಿತ್ರಮಾದುದಾ ॥
ಸಳೆಗೊನೆಯಲ್ಲಿ ನೇಲ್ವ ಪುಲಿಯೆತ್ತಿದ ಸಿಂದವೆನಲ್ಕೆ ಕೀರ್ತಿಯಂ ।
ತಳೆದ ಸಳಂಗೆ ಹೊಯ್ಸಳವೆಸರ್ ಪ್ರಕಟೀಕೃತಮಾಯ್ತು ಲೋಕದೊಳ್ ॥

– ಹೊಯ್ಸಳ ೩ನೆಯ ನರಸಿಂಹನ ಕಾಲದ ಬೇಲೂರು ಶಾಸನ (ಕ್ರಿ.ಶ. ೧೨೩೯)



ಡಾ. ಸಿ.ಎಸ್. ವಾಸುದೇವನ್*

# ಮಧ್ಯಕಾಲೀನ ಉತ್ತರ ಕರ್ನಾಟಕದ ಕೆಲವು ಸಾಮಾಜಿಕ ಕಟ್ಟುಪಾಡುಗಳು

ಶಾಸನಗಳು ಪ್ರಾಚೀನ ಕಾಲದ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ದಾಖಲಿಸುತ್ತವೆ. ರಾಜಕೀಯ, ಧಾರ್ಮಿಕ ವಿಷಯಗಳು ಹಾಗೂ ಆರ್ಥಿಕ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಶಾಸನಗಳು ಒಳಗು ಮಾಡಿಕೊಂಡಿರುತ್ತವೆಯಾದರೂ, ಸಾಮಾಜಿಕ ವಿಷಯಗಳನ್ನು ಅದರಲ್ಲಿಯೂ ಪ್ರಮುಖವಾಗಿ ಸಾಮಾಜಿಕ ಕಟ್ಟುಪಾಡುಗಳನ್ನು ಕುರಿತ ವಿಷಯಗಳನ್ನು ನೀಡಬಲ್ಲ ಶಾಸನಗಳು ಬೆರಳೆಣಿಕೆಯಷ್ಟು ಮಾತ್ರವೇ ನಮಗೆ ದೊರಕಿವೆ. ಇಂತಹ ಶಾಸನಗಳನ್ನು ಕುರಿತು ಚರ್ಚಿಸುವುದು ಈ ಲೇಖನದ ಉದ್ದೇಶವಾಗಿದೆ.

ಮಾನವನು ಎಂದಿನಿಂದ ಸಮಾಜದ ಕಟ್ಟುಪಾಡುಗಳಿಗೆ ಒಳಗಾಗಿ ಒಂದು ವ್ಯವಸ್ಥೆಯಲ್ಲಿ ಜೀವಿಸಲು ಪ್ರಾರಂಭಿಸಿದನೋ, ಅವನು ಮತೀಯವಾಗಿಯೋ, ಜನಾಂಗೀಯವಾಗಿಯೋ ಅಥವಾ ಇಡೀ ಗ್ರಾಮವು ಒಳಗಾಗುವಂತೆ ತನ್ನ ಸುತ್ತ ಅನೇಕಾನೇಕ ಕಟ್ಟುಪಾಡುಗಳನ್ನು, ರೂಪಿಸಿಕೊಂಡು ತನ್ನ ಜೀವನವನ್ನು ನಡೆಸಲು ಪ್ರಾರಂಭಿಸಿದನು. ಇಂತಹ ಕಟ್ಟುಪಾಡುಗಳು ಜನಾಂಗೀಯ ಕಟ್ಟುಪಾಡಾಗಿ ಅಥವಾ ಒಂದು ಕುಲಕ್ಕೆ ಸೀಮಿತವಾಗಿರುವುದನ್ನು ನಾವು ಕಾಣಬಹುದು. ಈ ಕಟ್ಟುಪಾಡುಗಳನ್ನು, ಆತನು ಪ್ರಜ್ಞಾಪೂರ್ವಕವಾಗಿ ಅಥವಾ ಅವನ ಅರಿವಿಲ್ಲದೇ ಮೀರಿದಾಗ ಹಲವಾರು ಸಂಕಷ್ಟಗಳಿಗೆ ಒಳಗಾಗುತ್ತಿದ್ದ. ಇದು ಅವನ ಪರಿಸರ ಹಾಗೂ ಸಮಾಜದ ಮೇಲೆಯೂ ಗಂಭೀರ ಪರಿಣಾಮಗಳನ್ನು ಉಂಟುಮಾಡುತ್ತಿದ್ದವು. ಕಲಹ, ಘರ್ಷಣೆ, ಗಲಭೆಗಳು ಮುಂತಾದ ಹಲವಾರು ಕಾರಣಗಳಿಂದ ಸಮಾಜದಲ್ಲಿ ಸ್ಥಿರತೆ ಹಾಗೂ ನೆಮ್ಮದಿಗಳು ಕದಡಿ ಸಾಮಾಜಿಕ ಜೀವನದಲ್ಲಿ ಏರುಪೇರುಗಳಾಗುತ್ತಿತ್ತು. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಮತೀಯ ಗಲಭೆಗಳು, ಭಿನ್ನ ಮತಗಳು ಮತ್ತು ಭಿನ್ನ ಕುಲಗಳ ಮಧ್ಯೆ ನಡೆದ ಜಗಳ, ಭಿನ್ನಾಭಿಪ್ರಾಯಗಳು, ಮೌರ್ಯರ ಕಾಲದಿಂದಲೂ ಪ್ರಕಟಗೊಳ್ಳುತ್ತಲೇ ಬಂದಿದೆ. ಅಂದಿನಿಂದ ಇಂದಿನವರೆಗೆ ಅದು ಸತತವಾಗಿ ನಡೆಯುತ್ತಿದ್ದು, ಕ್ರಿಯಾಶೀಲವಾಗಿ, ಒಂದಲ್ಲ ಒಂದು ರೂಪದಲ್ಲಿ ಆದಿ ಇತಿಹಾಸ ಕಾಲ, ಮಧ್ಯಕಾಲೀನ ಯುಗ ಮತ್ತು ನಂತರದ ಕಾಲಘಟ್ಟಗಳಲ್ಲಿಯೂ ನಡೆದು ಬಂದಿರುವುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಮತೀಯ ಜಗಳಗಳನ್ನು ಕುರಿತು ಉಲ್ಲೇಖಿಸುವುದಾದರೆ, ಶ್ರವಣಬೆಳಗೊಳದ ಬುಕ್ಕರಾಯನ ಶಾಸನವನ್ನು ಎಲ್ಲರೂ ಉದಾಹರಿಸುತ್ತಾರೆ. ದೇವರಕೊಂಡಾ ರೆಡ್ಡಿಯವರು ಈ ಶಾಸನವನ್ನು ಪರಿಗಣಿಸಿ ಉಲ್ಲೇಖಿತವಾಗಿರುವ ಗಲಭೆಯ ಸಂಗತಿಯನ್ನು ಧಾರ್ಮಿಕ ಘರ್ಷಣೆ ಎನ್ನುವುದಕ್ಕಿಂತ ಕುಲಾಚಾರದ ಕಟ್ಟಳೆ ಅಥವಾ ಜಗಳ ಎನ್ನುವುದು ಸೂಕ್ತ ಎಂದು ಅಭಿಪ್ರಾಯಪಡುತ್ತಾರೆ[1]. ಶ್ರೀವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾಗಿ ಹಲವಾರು ಜೈನ ಕುಟುಂಬಗಳು ದೀಕ್ಷೆಯನ್ನು ಪಡೆದವು. ಇಂತಹ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ಮತ್ತು ಧಾರ್ಮಿಕ ಅಸಮತೋಲನವು ಊರಿನ ಕಲಹಕ್ಕೆ ಕಾರಣಜನಕವಾಗಿದ್ದು, (ಬಹುಶಃ ಕಲ್ಯದಲ್ಲಿ) ರಾಜ ಅನಿವಾರ್ಯವಾಗಿ ಮಧ್ಯೆ ಪ್ರವೇಶಿಸಿ, ವಾತಾವರಣ ತಿಳಿಗೊಳಿಸಲು ನಡೆಸಿದ ವಿಷಯವನ್ನು ಶಾಸನ ದಾಖಲಿಸಿದೆ. ಎರಡು ಮತಗಳಿಗೆ ಭೇದವಿಲ್ಲ ಹಾಗೂ ಜೈನರಿಗೆ ಪಂಚಮಹಾವಾದ್ಯ ಮತ್ತು ಕಲಶ ಸಲ್ಲುತ್ತದೆ ಎಂಬ ತೀರ್ಪನ್ನು ಬುಕ್ಕರಾಯನು ನೀಡಿದನೆಂದು ಶ್ರವಣಬೆಳಗೊಳದ ಶಾಸನ ತಿಳಿಸುತ್ತದೆ. ಈ ಮಂಗಳ ಸೂಚಕಗಳು ತಮ್ಮ ಧಾರ್ಮಿಕ ಆಚರಣೆಗಳಲ್ಲಿ ಜೈನರು ಬಳಸಿಕೊಳ್ಳುತ್ತಿದ್ದರು ಎಂದು ತಿಳಿದು ಬರುತ್ತದೆ. ಈ ಶಾಸನವು ಧಾರ್ಮಿಕ ವಿಷಯಗಳನ್ನು ಮುಖ್ಯವಸ್ತುವಾಗಿರಿಸಿಕೊಂಡಿದೆ. ಪ್ರಾಚೀನ ಪುಲಿಗೆರೆ ಎಂದು ಪ್ರಸಿದ್ಧ ಪಡೆದ ಇಂದಿನ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದಲ್ಲಿಯೂ ಜೈನ ಮತ್ತು ಶೈವರ ನಡುವೆ ಸಂಘರ್ಷವಾಗಿತ್ತೆಂದು ಒಂದು ಶಾಸನದಿಂದ ತಿಳಿಯಬಹುದು[2]. ಲಕ್ಷ್ಮೇಶ್ವರದ ಹಳೆಯ ತಾಲೂಕು ಕಛೇರಿಯ ಹಿಂದಿರುವ ಶಾಸನವು ಅಲ್ಲಿಯ ಶಂಖ ಬಸದಿಯ ಜೈನರಿಗೂ ಮತ್ತು

* ಮುಖ್ಯಸ್ಥರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬.

ಸೋಮನಾಥ ದೇವಾಲಯದ ಶೈವರ ನಡುವಿನ ವ್ಯಾಜ್ಯವನ್ನು ಜೈನರ ಪರವಾಗಿ ನಿರ್ಣಯಿಸಿರುವುದನ್ನು ಶಾಸನ ತಿಳಿಸುತ್ತದೆ. ಸದರಿ ಶಾಸನದ ತೇದಿಯು ಕ್ರಿ.ಶ. ೧೫೩೮ ಆಗಿದ್ದು ವಿಜಯನಗರ ಅರಸರ ಕಾಲಕ್ಕೆ ಸೇರಿದುದಾಗಿದೆ.

ಉತ್ತರ ಕರ್ನಾಟಕದ ಕೆಲವು ಶಾಸನಗಳು ಮಹತ್ವದ ಸಾಮಾಜಿಕ ಕಟ್ಟುಪಾಡುಗಳು, ಊರ ಕಟ್ಟುಪಾಡುಗಳು ಮತ್ತು ಜನಾಂಗಕ್ಕೆ/ಕುಲಕ್ಕೆ ಸೇರಿದ ಆಚರಣೆಗಳನ್ನು ಕುರಿತು ದಾಖಲಿಸಿವೆ. ಇವುಗಳು ಮೇಲುನೋಟಕ್ಕೆ ಒಂದು ಜನಾಂಗದ ಕುಲಕಟ್ಟಳೆ ಯಂತೆ ಕಂಡುಬಂದರೂ, ಆ ಕಟ್ಟಳೆಗಳು ಇಡೀ ಸಮಾಜದ ಮೇಲೆ ಯಾವ ರೀತಿ ಪ್ರಭಾವ ಬೀರಿತು ಎಂಬುದನ್ನು ಅರಿಯಬಹುದು. ಕುಲಸಂಬಂಧೀ ಕಟ್ಟುಪಾಡು ಮತ್ತು ಆಚರಣೆಗಳನ್ನು ಎರಡು ಹಂತಗಳಲ್ಲಿ ಗುರುತಿಸ ಬಹುದು. ಮೊದಲ ಹಂತದಲ್ಲಿ ಕಟ್ಟುಪಾಡುಗಳು ಒಂದು ನಿರ್ದಿಷ್ಟ ಕುಲದ ಆಚರಣೆಯಾಗಿ ಕಾಣಸಿಗುತ್ತವೆ. ಎರಡನೆಯ ಹಂತದಲ್ಲಿ ಒಂದು ನಿರ್ದಿಷ್ಟ ಕುಲಕ್ಕೆ ಸೇರಿದವರ ಕಟ್ಟು ಪಾಡುಗಳು ಊರ ಕಟ್ಟುಪಾಡಾಗಿ, ಅವುಗಳ ಕೆಲ ಅಂಶಗಳನ್ನು ಬೇರೆ ಕುಲದವರು ಅಳವಡಿಸಿಕೊಳ್ಳುತ್ತಿದ್ದರು. ಇದು ಊರ ಸಾಮಾಜಿಕ ಕಟ್ಟುಪಾಡುಗಳಾಗಿ ಏರ್ಪಡುತ್ತಿದ್ದವು. ಇದರ ಮೂಲಕ ಸಾಮಾಜಿಕ ಜೀವನವನ್ನೇ ನಿಯಂತ್ರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಇದನ್ನೇ ಇನ್ನೂ ವಿಶದೀಕರಿಸುವು ದಾದರೆ, ಒಂದು ಕುಲ ಅಥವಾ ಜನಾಂಗದವರು ತಮ್ಮ ಕುಲ ಅಥವಾ ಜನಾಂಗಕ್ಕೆ ಎಂದು ಕೆಲವು ಕಟ್ಟುಪಾಡುಗಳನ್ನು ವಿಧಿಸಿ ಆಚರಣೆಯ ಮೂಲಕ ತಮ್ಮನ್ನು ನಿಯಂತ್ರಿಸಿಕೊಂಡು ನಂತರ ಇಂತಹ ಕಟ್ಟುಪಾಡುಗಳನ್ನು ಸಮಾಜದ ಇತರೆ ಜನರಿಗೂ ವಿಧಿಸಿ ಸಮಾಜವನ್ನು ಸಹ ತಕ್ಕಮಟ್ಟಿಗೆ ನಿಯಂತ್ರಿಸುತ್ತಿದ್ದರು.

ಮಧ್ಯಕಾಲೀನ ಯುಗದಲ್ಲಿ ಊರಿನ ಅಥವಾ ಗ್ರಾಮದ ಬೀದಿಗಳಲ್ಲಿ ನಡೆದಾಡುವ ಮತ್ತು ಮೆರವಣಿಗೆ ಒಯ್ಯುವ ಜನವರ್ಗದವರಿಗೆ ವಿಧಿಸಲಾಗುತ್ತಿದ್ದ ಕಟ್ಟುಪಾಡುಗಳನ್ನು ಕುರಿತು ಕೆಲವು ಶಾಸನಗಳು ಉಲ್ಲೇಖಿಸುತ್ತವೆ. ನಿರ್ದಿಷ್ಟ ಕುಲಗಳಿಗೆ ಸೇರಿದವರು ಗ್ರಾಮದ ಬೀದಿಗಳಲ್ಲಿ ನಡೆದಾಡು ವುದು ಮತ್ತು ಮೆರವಣಿಗೆಯಲ್ಲಿ ತೆರಳುವುದಕ್ಕೆ ಕಟ್ಟುಪಾಡು ಗಳಿದ್ದವು. ಇಂತಹ ಕಟ್ಟುಪಾಡುಗಳನ್ನು ಮೀರಿದರೆ ಶಿಕ್ಷೆಗೆ ಒಳಪಡಿಸಲಾಗುತ್ತಿತ್ತು. ಇದರೊಂದಿಗೆ ಸಾಕು ಪ್ರಾಣಿಗಳು ಮತ್ತು ಅವುಗಳ ಕಳೇಬರವನ್ನು ಮೆರವಣಿಗೆಯ ಮೂಲಕ ಸಾಗಿಸಿ ಸಂಸ್ಕಾರಗಳನ್ನು ನೆರವೇರಿಸಲಾಗುತ್ತಿತ್ತು. ಇನ್ನೊಂದು ನಿದರ್ಶನದಲ್ಲಿ ಊರ ಜನರು ಬೀದಿಯಲ್ಲಿ ಮೆರವಣಿಗೆ ಒಯ್ಯುವ ಹಕ್ಕನ್ನು ನಿರ್ದಿಷ್ಟ ಜನವರ್ಗಕ್ಕೆ ನೀಡಿದ ಉದಾಹರಣೆಗಳು ಸಹ ದೊರಕಿವೆ. ಇವೆಲ್ಲಾ ಶಾಸನಗಳು ರಾಯಚೂರು ಜಿಲ್ಲೆಗೆ ಸೇರಿದ ತಾಲೂಕಿನ ಕೆಲವು ಗ್ರಾಮ ಗಳಲ್ಲಿ ದೊರೆತಿವೆ. ಈ ಶಾಸನಗಳು ಸಾಮಾಜಿಕ ಕಟ್ಟುಪಾಡು ಗಳನ್ನು ಕುರಿತ ಅನೇಕ ಮಹತ್ವದ ವಿಚಾರಗಳನ್ನು ತಿಳಿಸುತ್ತವೆ.

ಲಿಂಗಸುಗೂರು ತಾಲ್ಲೂಕಿನ ಲಿಂಗಸುಗೂರು ಊರಿಗೆ ಹೊಂದಿಕೊಂಡಿರುವಂತಹ ಕರಡುಕಲ್ಲು ಗ್ರಾಮದ ಶಾಸನವು ಈ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ನೀಡುತ್ತದೆ. ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ ಈ ಶಾಸನವು[೩] ಕರಡು ಕಲ್ಲು ಗ್ರಾಮದಲ್ಲಿರುವ ಗುಳ್ಳಮ್ಮ ದೇವಾಲಯದ ಗೋಡೆಗೆ ಸೇರಿಸಿರುವ ಕಂಬದಲ್ಲಿದೆ. ಪ್ರಸ್ತುತ ಶಾಸನವು ಎರಡು ಭಾಗಗಳಲ್ಲಿದ್ದು, ಮೊದಲ ಭಾಗದಲ್ಲಿ ನಿಖರವಾದ ತೇದಿಯಿರು ವುದಿಲ್ಲ. ಚಾಲುಕ್ಯವಿಕ್ರಮ ಸಂವತ್ಸರವೆಂದು ಉಲ್ಲೇಖಿಸುತ್ತದೆ. ಆ ತೇದಿಯು ಕ್ರಿ.ಶ. ೧೮.೬.೧೦೭೯ಕ್ಕೆ ಸರಿಹೊಂದುತ್ತದೆ ಎಂದು ನಿರ್ಧರಿಸಲಾಗಿದೆ. ಶಾಸನದ ಎರಡನೆಯ ಭಾಗದಲ್ಲಿ ಶಕವರ್ಷ ೯೫೦ನೆಯ ವಿಭವ ಸಂವತ್ಸರ, ಶ್ರಾವಣ, ಬ.೮, ಬೃಹಸ್ಪತಿವಾರ ಎಂದಿದ್ದು, ಇದು ಕ್ರಿ.ಶ. ೧೬.೮.೧೦೨೮ಕ್ಕೆ ಸಮನಾಗುತ್ತದೆ.

ಕೆಲವು ಕಟ್ಟಳೆಗಳನ್ನು ಕೆಲವು ಜನವರ್ಗದವರಿಗೆ ವಿಧಿಸಿರುವುದನ್ನು ಶಾಸನದ ಮೊದಲ ಹದಿಮೂರು ಸಾಲುಗಳಲ್ಲಿ ಗಮನಿಸಬಹುದು. ಹೆಗ್ಗಡೆ ಸೂಕ್ಷ್ಮಶಿವಭಟಾರ ಮತ್ತು ಪ್ರಮುಖ ತಪೋಧನರು ಸೇರಿಕೊಂಡು ದಾಸಿಸೆಟ್ಟಿಗೆ ಮತ್ತು ನಕರಕ್ಕೆ ವ್ಯಾಪಾರಿಗಳಿಗೆ ಕೆಲವು ಕಟ್ಟಳೆಗಳನ್ನು ಮಾಡಿ ಶಾಸನ ನೀಡುತ್ತಾರೆ. ಸಮಾಜದಲ್ಲಿರುವ ರೂಢಿ ಅಥವಾ ನಡೆಮುಡಿಗೆ ಸಂಬಂಧಪಟ್ಟಂತೆ ಇರುವ ಈ ಶಾಸನದಲ್ಲಿ ಕೀಳು ಕುಲದವರು ತಮ್ಮ ಮದುವೆಯ ಬಂಡಿಯನ್ನು ಅಂಗಡಿ ಬೀದಿಯೊಳಗೆ ತರಬಾರದೆಂದೂ, ಹಾಗೇನಾದರೂ ಬಂದರೆ ಹನ್ನೆರಡು ಗದ್ಯಾಣ ಹೊನ್ನನ್ನು ದಂಡವಾಗಿ ಕೊಡಬೇಕೆಂದು ಕಟ್ಟಳೆ ವಿಧಿಸಲಾಗಿದೆ. "(ಯಾರಾದೊಡವಂಗಡಿ ಬೀದಿ ಯೊಳಗೆ ಮದುವೆಯಲು ಬಂಡ್ಡಿಯನ್ನೇಱ ಬರಸಲ್ಲದು ಬಂದನಪ್ಪಡೆ ಪಂನ್ನೆರಡು ಗದ್ಯಾಣ ಪೊನ್ನಂ ದಂಡ್ಡಮಂ ತಿಱುವರಂನ್ತಾಪ್ಪುದಕೆ ಶ್ರೀ ಬಲ್ಲವರಸರಾಣೆ ಶ್ರೀಮದ್ರಾಜ ಗುರುದೇವರಾಣೆ) ಪ್ರಾಯಶಃ ವ್ಯಾಪಾರಿಗಳಿರುವ ಅಂಗಡಿ ಬೀದಿಯೊಳಗೆ ಪ್ರವೇಶವನ್ನು ನಿಷೇಧಿಸಿದ್ದರು. ಇದರೊಂದಿಗೆ ಶಾಸನದ ಪ್ರಾರಂಭದಲ್ಲಿ, ಅತಿಕ್ರಮಿಸಿದವರು ಸತ್ತರೆ, ಅವರ ಶವ, ಹಂದಿ ಮತ್ತು ನಾಯಿ ಸತ್ತಾಗ ಅವುಗಳ ಶವಗಳನ್ನು ಸಹ ಅಂಗಡಿ ಬೀದಿಯೊಳಗೆ (ಕಟ್ಟಾಯ) ಕಡ್ಡಾಯವಾಗಿ ತರಬಾರದೆಂದು ನಡೆಮುಡಿಗೆ "(ಶಾಸನಯೆಂ ತೆಂದಡಿಕ್ಕೆನ್ನಡ ಮುಡಿಗೆಯು ಮಟ್ಟನ್ನದ (ಕ)ಟ್ಟಾಯ ಮುಮೆಱದು

ಕೊಳ್ಳೆನ್ನದೆಱುವೆಱದಿನಿತು ಮನತಿ ಕ್ರಮಿಸಿದನಪ್ಪ ದಾತನ ಸಾಯೆ ಪಂದಿ ಸತ್ತುದು ನಾಯಿಸತ್ತುದಂತ್ಯ ಜಾತಿ....)" ಸಂಬಂಧಿಸಿದಂತೆ ನಿರ್ದಿಷ್ಟವಾಗಿ ಶಾಸನ ವಿವರಿಸಿರುವುದು ಗಮನಾರ್ಹ. ಬಲ್ಲವರಸ ಎಂದು ಉಲ್ಲೇಖಿತವಾಗಿರುವ ವ್ಯಕ್ತಿಯು ಪ್ರಾಯಶಃ ಮಾಂಡಳಿಕ ಅರಸನಾಗಿರಬಹುದು ಅಥವಾ ಆ ಪ್ರಾಂತ್ಯದ ಅಧಿಕಾರಿಯಾಗಿರಬಹುದು. ಅದರಂತೆಯೇ ಗುರುದೇವರಾಣೆ ಎಂದು ಉಲ್ಲೇಖಿತವಾಗಿರುವ ವ್ಯಕ್ತಿಯು ರಾಜಗುರು ಇರಬಹುದು ಎಂದು ಇಲ್ಲಿ ಸೂಚಿಸಿದರೆ ತಪ್ಪಾಗಲಾರದು.

ಜಿಲ್ಲೆಯ ಮಾನ್ವಿ ತಾಲೂಕು ಕೆಲ್ಲೂರು ಗ್ರಾಮದಲ್ಲಿರುವ ಹನುಮಂತನ ಗುಡಿಯ ಗೋಡೆಗೆ ಸೇರಿಸಿರುವ ಶಿಲಾ ಶಾಸನದ" ಕಾಲವು ಕ್ರಿ.ಶ. ೩೦.೧೧.೧೫೪೪ ಆಗಿದೆ. ಶ್ರೀಶೈಲದ ಹಿರಿಯರ ನಿರೂಪದಂತೆ, ಬಯನಿ ಲಕ್ಷಹ ಒಡೆಯರಿಗೆ ರಾಜ್ಯ ಸ್ಥಿರವಾಗಿರಬೇಕೆಂದು ಕಲ್ಲೂರು ಗ್ರಾಮಕ್ಕೆ ಕಟ್ಟಳೆಯನ್ನು ಮಾಡುತ್ತಾರೆ. ಕಾರಹುಣ್ಣಿಮೆಯ ದಿನ ಎತ್ತುಗಳನ್ನು ಓಡಿಸಿ ಕಟಬಾಯಲ್ಲಿ ಉಣ್ಣಿಸಬೇಕು. ಎತ್ತು ಸತ್ತರೆ ಬಂಡಿಯ ಮೇಲೆ ಒಯ್ಯಬೇಕು ಎಂಬ ಹಲವಾರು ಕಟ್ಟಳೆಗಳನ್ನು ಶಾಸನದಲ್ಲಿ ದಾಖಲಿಸಿರುವುದು ಕುತೂಹಲಕಾರಿಯಾದ ಸಂಗತಿ.

ಶಾಸನದ ನಾಲ್ಕು-ಐದನೆಯ ಸಾಲಿನಲ್ಲಿ ಈ ಕೆಳಕಂಡಂತೆ ವಿಷಯವನ್ನು ಪ್ರಸ್ತಾಪಿಸಲಾಗಿದೆ: "ಕಲ್ಲೂರ ಗ್ರಾಮಕ್ಕೆ ಮಾಡಿದ ಕಟ್ಟಳೆ ಕಾರಹುಂಣಮೆ ದಿನದಲು ಯೆತ್ತುಗಳನು ವೋಡಿಸಿ ಆ [ಗಿ] ಖರಿಯ[ರಿಯ]ಲು ಯೆತ್ತುಗಳು ಕಟುಬಾಯಲಿ ಉಣುಸುವುದು ಯೆತ್ತುಗಳು ಅಮವಾಸೆ ದಿನ ದಿನ ಹೋದಲಿ ಲಉ [ಆರಡಯ ?] ಯ ದಿನದಲು ಮಂಣಯರ ಮಾಡಲಾಗದು, ದೀಪಾವಳಿ ಪಾಡ್ಯದ ದಿವಸ....ಯ ವೊತವಿಲ ಹೊಲದೊಳಗೆ ಸಮಗವಯಾಳು ಮಗ ಬಸವಣಂನ ಉಣುಸೋದು ಯೆತ್ತು ಸತರೆ ಭಂಡಿ ಮೇಲೆ ಹಾಕಿ ವೊಯಬೇಕು ವಿಧಿಯದಿಯಲು ನಂದಿ ಮುಳಿವಾಗಿ ಮತು ಆಲು ಯೆಂಮೆಗಳಿಗೆ ಉಣಸೋದು ಯೆತ್ತು ಸತ್ತರೆ ಅಸ್ತಿಯ ನಿಕ್ಷಿಸುವುದು ಯಿ ಮರಿಯಾದೆಯ ಕಾದಿ... ನಡೆದರೆ ಮಳೆ ಬೆಳೆ ಸಂಪದಿಪನ ಗ್ರಾಮಕ್ಕೆ ಜಯ ಯಿದೆರೆ....ಉಪೇಕ್ಷೆ ಮಾಡುವರು ಅವರೇ ಅಂನ್ಯಾಯಿಗಳು...."

ಅಮಾವಾಸ್ಯೆ ದಿನದಲ್ಲಿ ಎತ್ತು ಸತ್ತರೆ ಮಣ್ಣು ಮಾಡಲು ಸಾಧ್ಯವಿಲ್ಲವೆಂದು, ದೀಪಾವಳಿ ಪಾಡ್ಯದ ದಿನದಂದು ಸತ್ತರೆ ಹೊಲದೊಳಗೆ ಮಣ್ಣು ಮಾಡಬೇಕೆಂದು ಶಾಸನವು ಕಟ್ಟಳೆ ವಿಧಿಸಿದೆ. ಶಾಸನ ಮುಂದುವರೆದು ಎತ್ತು ಸತ್ತರೆ ಬಂಡಿಯಲ್ಲಿ ಒಯ್ದು, ಶವಸಂಸ್ಕಾರ ವಿಧಿಗಳೊಂದಿಗೆ ಮಣ್ಣು ಮಾಡಬೇಕು ಎಂದು ಉಲ್ಲೇಖಿಸಿರುವುದು ಗಮನಾರ್ಹ. ಆಚರಣೆಯ ಅಂಗವಾಗಿ 'ನಂದಿಮುಳಿವಾಗಿ ಮತು ಆದ್ಯ ಎಮ್ಮೆಗಳ ಉಣಸೋದು ಎಂದು ಉಲ್ಲೇಖವಿದ್ದರೂ, ಅದನ್ನು ಅರ್ಥೈಸುವುದು ಕಷ್ಟಸಾಧ್ಯವಾಗಿದೆ. ಆವು (ಆಲು) ಎಂಬ ಪದವು ತೆಲುಗು ಮೂಲದ್ದಾಗಿದ್ದು, ಹಸುವನ್ನು ಆ ಭಾಷೆಯಲ್ಲಿ ಸೂಚಿಸುತ್ತದೆ. ಎತ್ತು ಸತ್ತರೆ ಅದರ ಅಸ್ಥಿಯನ್ನು (ನಿಕ್ಷಿಸುವುದು) ಸಂಗ್ರಹಿಸಿ ಶವಸಂಸ್ಕಾರಗಳನ್ನು ಪೂರೈಸಬೇಕೆಂಬ ಕಟ್ಟಳೆಯನ್ನು ಈ ಶಾಸನ ದಾಖಲಿಸಿದೆ. ಇದು ಕಲ್ಲೂರು ಗ್ರಾಮಕ್ಕೆ ಸೀಮಿತವಾಗಿರುತ್ತದೆ ಎಂಬುದನ್ನು ಪ್ರಾರಂಭದಲ್ಲಿ ಪ್ರಸ್ತಾಪಿಸಲಾಗಿದೆ. ತಮ್ಮ ಸಾಕು ಪ್ರಾಣಿಗಳು, ಅದರಲ್ಲಿಯೂ ಮುಖ್ಯವಾಗಿ ಕೃಷಿಕ ಮತ್ತು ಪಶುಸಂಗೋಪರ ಬೆನ್ನಲುಬಾದ ಎತ್ತು ಮತ್ತು ಎಮ್ಮೆಗಳ ಬಗೆಗೆ ಅಂದಿನ ಸಮಾಜದ ಜನರು ವಹಿಸಿದ ಅಕ್ಕರೆ, ಆಸಕ್ತಿ ಮತ್ತು ಕಾಳಜಿಯನ್ನು ಈ ಶಾಸನ ತೋರುತ್ತದೆ. ಸಾಕುಪ್ರಾಣಿಗಳು ಅಥವಾ ಎತ್ತು ಮತ್ತು ಎಮ್ಮೆಗಳ ಶವಸಂಸ್ಕಾರ ವಿಧಿಗಳನ್ನು ವಿವರಿಸಿರುವುದು ಈ ಶಾಸನದ ಮಹತ್ವವಾಗಿದೆ. ದೇಹಾಂತವಾದ ಎತ್ತನ್ನು ಬಂಡಿಯ ಮೂಲಕವೇ ಸಾಗಿಸಬೇಕು ಹಾಗೂ ನಿರ್ದಿಷ್ಟ ಸ್ಥಳ ಮತ್ತು ದಿನಗಳಲ್ಲಿ ಶವಸಂಸ್ಕಾರ ಮಾಡಬೇಕು ಎಂದು ಶಾಸನ ವಿವರಿಸಿದೆ. ಇದು ಮಧ್ಯಕಾಲೀನ ಯುಗದ ಆಚರಣೆಯಲ್ಲಿದ್ದ ಸಮಾಜದ ಮತ್ತು ಒಂದು ಗ್ರಾಮದ ಕಟ್ಟಳೆಯನ್ನು ಸೂಕ್ಷ್ಮವಾಗಿ ವಿವರಿಸಿರುವುದು ನಿಜಕ್ಕೂ ಪ್ರಶಂಸಾರ್ಹವೇ ಸರಿ.

ಇದೇ ಜಿಲ್ಲೆಗೆ ಸೇರಿದ ಸಿಂಧನೂರು ತಾಲೂಕಿನ ಮುಕ್ಕುಂದಿ ಗ್ರಾಮದ ವಿರೇಶಪ್ಪನವರ ಹೊಲದಲ್ಲಿನ ಬಂಡೆಯ ಮೇಲಿನ ಶಾಸನದ ತೇದಿಯು ಶಕ ೧೫೫೦೭, ಪಾರ್ಥಿವ, ಜೇಷ್ಠ, ಶು. ೨೧ ಎಂದ್ದಿದ್ದು, ಅದು ಕ್ರಿ.ಶ. ೨೧.೫.೧೫೮೫ಕ್ಕೆ ಸರಿ ಹೊಂದುತ್ತದೆ". ಶಾಸನವು ಭರಿಗೆ ಬೆಳಗಾವಿ ನಾಯಕನ ಮಗ ಪರುದಪ, ಹಟಗಾರಪನವರು, ವಿರುಪಣಗೌಡ, ಯಿಂದ್ರಯ, ನಿರುಗಪಗೌಡ, ಮುಂತಾದ ಹಟಗಾರರಿಗೆ ರವುಢಕುಂದಿಯ ಸೀಮೆಗೆ ಸೇರಿದ ಮುಕ್ಕುಂದಿಯ ಸಂಥೆಯನ್ನು ಶಾಸನ ಬದ್ಧವಾಗಿ ಬರೆಯಿಸಿಕೊಡುತ್ತಾರೆ. ರವುಡಕುಂದಿಯಗೌಡ, ಸೇನಬೋವ ಮುಂತಾದವರ ಬಿನ್ನಹದ ಮೇರೆಗೆ ಮೇಲೆ ಹೆಸರಿಸಿದ ಹಟಗಾರರು ಮುಕ್ಕುಂದಿಯ ಪೇಟೆಯನು ಹೊಸದಾಗಿ ಮಾಡಿಸಿ ಮಳಿಗೆ ಮನೆಗಳನ್ನು ಕಟ್ಟಿಸುತ್ತಾರೆ. ಇದಕ್ಕೆ ಸೋಮಬೀದಿಯ ಮೆರವಣಿಗೆಯ ಹಕ್ಕನ್ನು ಅವರಿಗೆ ನೀಡುತ್ತಾರೆ. ಶುಭಕಾರ್ಯಗಳಲ್ಲಿ ಮತ್ತು ಮದುವೆಯಲ್ಲಿ ಮಂಗಳ ಕಳಸ ಸಮೇತ ಈ ಬೀದಿಯಲ್ಲಿ ಮೆರವಣಿಗೆ ಬರಬಹುದಾಗಿತ್ತು ಎಂದು ಶಾಸನ ತಿಳಿಸುತ್ತದೆ.

ಶಾಸನದಲ್ಲಿ ಪಟಣಸೆಟಿ ರವುಡಕುಂದಿಯ (ಅಉಡ ಕುಂದಿ) ಗಉಡ (ಗೌಡ), ಸೇನಬೋವ, ಪಟ್ಟಣಸೆಟಿಗಳು, ತಳವಾರರು, ಜಾತಿಕರಾಳು, ಸಾಲುಗುಂದಿ, ಕಾರಟಗೆ, ಸಿದ್ಧಾಪುರ, ಮುಂಕುಂದಿ ಮುಂತಾದ ಗ್ರಾಮಾನುಗ್ರಾಮಗಳ ಗೌಡ, ಸೇನಭೋಗರು ಬಿನ್ನಹ ಮಾಡಿ, ದೇವರವರು ಹಟಗಾರರಿಗೆ ಕೊಟ್ಟಂತಹ ತೆರಿಗಳನ್ನು ಒಪ್ಪಿ, ಕವುಲೆ ಕೊಟ್ಟ ವಿವರಗಳು ಶಾಸನದಲ್ಲಿದೆ. ಅದರಂತೆ ಮುಕುಂದೆಯ ಪೇಟೆಯನು ಹೊಸದಾಗಿ ಮಾಡಿ, ಅದರಲ್ಲಿ ಮಳಿಗೆ ಮನೆಗಳನ್ನು ಕಟ್ಟಿಸಿ, ಪೇಟೆಯನ್ನು ನಡೆಸಿಕೊಂಡು ಬರುವುದಕ್ಕೆ ಪ್ರತಿಫಲವಾಗಿ ಸೋಮಬೀದಿಯ ಅಂದರೆ ಹೊಸದಾಗಿ ನಿರ್ಮಿಸಿದ ಪೇಟೆಯ ಬೀದಿಯಲ್ಲಿ ಮೆರವಣಿಗೆಯನ್ನು ಮಾಡಲಿಕ್ಕೆ ಅವರಿಗೆ ಅನುಮತಿಯನ್ನು ನೀಡುತ್ತಾರೆ. ಇದರೊಂದಿಗೆ ಅವರ ಜನಾಂಗದ (ನಿಂಮ) ಶುಭಕಾರ್ಯ ಗಳಲ್ಲಿ ಮತ್ತು ಮದುವೆಯನು ಮಾಡುವಾಗ, ಮಂಗಳ, ಕಳಸ ಮುಂತಾದವುಗಳನ್ನು ಒಯ್ಯುವದಕ್ಕೆ ಮತ್ತು ಅಶುಭಗಳಲ್ಲಿಯೂ ಈ ಪೇಟೆ ಬೀದಿಯನ್ನು ಬಳಸುವುದಕ್ಕೆ ಅನುಮತಿಯನ್ನು ನೀಡಿರುವುದು ಗಮನಾರ್ಹ.

ಜಿಲ್ಲೆಯ ಲಿಂಗಸೂಗೂರು ತಾಲೂಕು ಗುರಗುಂಟ ಗ್ರಾಮದ ಬಸವಣ್ಣ ದೇವಾಲಯದಲ್ಲಿರುವ ಎರಡು ಶಾಸನಗಳು ಕಟ್ಟಳೆಗಳ ಬಗೆಗೆ ನೇರವಾಗಿ ಉಲ್ಲೇಖಿಸದಿದ್ದರೂ ಪರೋಕ್ಷವಾಗಿ ಕೆಲವು ವಿಷಯಗಳನ್ನು ತಿಳಿಸುತ್ತವೆ. ಮೊದಲ ಶಾಸನದಂತೆ, ಈ ಊರಿನ ಚಾವಡಿಯಲ್ಲಿ ದೇವತಾಕಾರ್ಯ (ಉತ್ಸವ,) ನಿಂತುಹೋಗಿದ್ದು, ಅದು ಮೊದಲಿನಂತೆ ನಡೆಯ ಬೇಕೆಂದು ತೀರ್ಮಾನಿಸಿದ ವಿಷಯವಿದೆ. ದೇವರ ಮೆರವಣಿಗೆ ಗಾಗಿ ಚಾವಡಿ ಮುಂದಿನ ಜಾಗದಲ್ಲಿ ದಾರಿಯನ್ನು ಬಿಟ್ಟು ಕೊಟ್ಟು, ಆ ಸ್ಥಳದಲ್ಲಿ ಎಂದರೆ ಚಾವಡಿಯ ಜಾಗದಲ್ಲಿ, ಮೊದಲಿನಂತೆ ದೇವರಕಾರ್ಯ ನಡೆಸಬೇಕೆಂದು ತೀರ್ಮಾ ನಿಸಿದ ವಿಷಯವನ್ನು ಎರಡನೆಯ ಶಾಸನವು ತಿಳಿಸುತ್ತದೆ. ಎರಡೂ ಶಾಸನಗಳ ಲಿಪಿಯ ಆಧಾರದಿಂದ ಇದರ ಕಾಲ ೧೬ನೆಯ ಶತಮಾನದ್ದೆಂದು ನಿರ್ಧರಿಸಲಾಗಿದೆ.

ಗ್ರಾಮದ ಬೀದಿಗಳಲ್ಲಿ ಜನ ಸಾಮಾನ್ಯರು ಸಂಚರಿಸುವು ದಕ್ಕೆ ಇದ್ದಂತಹ ಸಾಮಾಜಿಕ ಕಟ್ಟುಪಾಡುಗಳನ್ನು ಕುರಿತು ಮೇಲಿನ ಶಾಸನಗಳು ತಿಳಿಸುತ್ತವೆ. ಮಧ್ಯಕಾಲೀನ ಕರ್ನಾಟಕ ದಲ್ಲಿ ಆರ್ಥಿಕವಾಗಿ ಸಬಲರಾಗಿದ್ದವರು ಊರ ಕಟ್ಟುಪಾಡು ಗಳನ್ನು ರೂಪಿಸುತ್ತಿದ್ದರೆಂಬುದಕ್ಕೆ ಶಾಸನಗಳೇ ಸಾಕ್ಷಿಯಾಗಿವೆ. ಇಂಥಹ ಕಟ್ಟುಪಾಡುಗಳು ಕ್ರಿ.ಶ. ೧೧ನೇ ಶತಮಾನದಿಂದ ಕ್ರಿ.ಶ. ೧೬ನೇ ಶತಮಾನದವರೆಗೆ ಅಂದರೆ ಸುಮಾರು ೫೦೦ ವರ್ಷಗಳ ಕಾಲ ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿತ್ತು. ಉತ್ತರ ಕರ್ನಾಟಕದ ಎಲ್ಲಾ ಶಾಸನಗಳನ್ನು ಕೂಲಂಕಷ ಅಧ್ಯಯನಕ್ಕೆ ಒಳಪಡಿಸಿದರೆ ಇಂಥ ಹಲವಾರು ಸಾಮಾಜಿಕ ಮಹತ್ವವನ್ನು ಪಡೆದ ವಿಷಯಗಳು ಬೆಳಕಿಗೆ ಬರುತ್ತದೆ ಎಂಬುದರಲ್ಲಿ ಸಂಶಯವಿಲ್ಲ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ದೇವರಕೊಂಡಾರೆಡ್ಡಿ, 'ಶ್ರವಣಬೆಳಗೊಳ ಶಾಸನದ ಹಿನ್ನೆಲೆಯಲ್ಲಿ ಕುಲಸಂಬಂಧಿ ಕಟ್ಟಳೆಗಳು–ಕಲಹಗಳು', **ಇತಿಹಾಸ ದರ್ಶನ**, ಸಂ. ೧೮ ಪು. ೧೯೮–೨೦೦.

೨. **ಎಸ್.ಐ.ಐ**, ಸಂ. ೨೦ ಸಂಖ್ಯೆ ೩೨೧; **ಧಾರವಾಡ ಜಿಲ್ಲಾ ಶಾಸನಸೂಚಿ**. ಸಂ. ಸಿ. ೭೯.

೩. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭**, ಸಂ. ಲಿಂ. ೬ (ಇನ್ನು ಮುಂದೆ ಕವಿಶಾ).

೪. **ಕವಿಶಾ ಸಂ.** ೭ ಸಂ. ಮಾ. ೬೨; **ಎ.ಆರ್.** ೧೯೬೧–೬೨ ಬಿ.೫೬೨; **ಐ.ಕೆ.** ಸಂಖ್ಯೆ ೩೦೩.

೫. ಅದೇ, ಸಂ. ಸಿಂ. ೭.

೬ ಅದೇ ಸಂ. ಲಿಂ ೧೮–೧೯.

ಸಿದ್ಧಲಿಂಗಮ್ಮ ಬಿ.ಜಿ.*

# ಮಧ್ಯಕಾಲೀನ ಕರ್ನಾಟಕದಲ್ಲಿ ತೆಲ್ಲಿಗರು

ಗಾಣದಿಂದ ಎಣ್ಣೆತೆಗೆದು ಅದನ್ನು ಮಾರಿ ತಮ್ಮ ಜೀವನ ನಿರ್ವಹಣೆ ಮಾಡುವ ಸಮುದಾಯಕ್ಕೆ ಗಾಣಿಗರು ಅಥವಾ ತೆಲ್ಲಿಗರು ಎಂದು ಕರೆಯುತ್ತಾರೆ[೧] ಎಣ್ಣೆ ತೆಗೆಯುವುದು ಮಧ್ಯಕಾಲದಲ್ಲಿ ಅತ್ಯಗತ್ಯ ಕೈಗಾರಿಕೆಗಳಲ್ಲಿ ಒಂದಾಗಿತ್ತು. ಈ ಕೈಗಾರಿಕೆ ಬಹು ವ್ಯಾಪಕವಾಗಿ ಹರಡಿರುವುದು ವಿಪುಲ ಶಾಸನಗಳ ಉಲ್ಲೇಖಗಳಿಂದಲೇ ಸ್ಪಷ್ಟವಿದೆ. ಈ ವೃತ್ತಿಯು ಪ್ರಾಚೀನ ಕಾಲದಿಂದಲೂ ನಡೆದು ಬಂದಿದ್ದರೂ ಮಧ್ಯ ಕಾಲೀನ ಕರ್ನಾಟಕದಲ್ಲಿ, ಚಾಲುಕ್ಯ ಹಾಗೂ ಹೊಯ್ಸಳರ ಅನೇಕ ಶಾಸನಗಳಿಂದ ಈ ಕೈಗಾರಿಕೆ ಬಹು ವ್ಯಾಪಕವಾಗಿ ಹರಡಿತ್ತೆಂಬುದು ಸ್ಪಷ್ಟ. ಇದರ ಕುರಿತಾಗಿ ವಚನ ಸಾಹಿತ್ಯದ ಮೂಲಕವೂ ವಿಪುಲ ಮಾಹಿತಿಯನ್ನು ಸಂಗ್ರಹಿಸಬಹುದು.

**ಗಾಣಗಳು:** ಶಾಸನ ಆಧಾರಗಳ ಮೂಲಕ ನಾವು ಮೂರು ರೀತಿಯ ಗಾಣಗಳನ್ನು ಗುರುತಿಸಬಹುದು. ೧. ಕೈಗಾಣ, ೨. ಎತ್ತುಗಾಣ ಮತ್ತು ೩. ಮೆಟ್ಟುಗಾಣ.

**ಕೈಗಾಣ:** ಈ ಗಾಣವನ್ನು ಗಾಣಿಗರೇ ಕೈಯಿಂದ ತಿರುಗಿಸುತ್ತಿದ್ದುದು ಸ್ಪಷ್ಟ. ಕ್ರಿ.ಶ. ೧೧೮೪ರ ಎರಡನೇ ವೀರಬಲ್ಲಾಳನ ಅರಸೀಕೆರೆಯ ಶಾಸನಗಳೆರಡು[೨] ಕೈಗಾಣದ ಬಗ್ಗೆ ತಿಳಿಸುತ್ತವೆ. ಇದರಲ್ಲಿಯೇ ಕಲ್ಲಿನ ಕೈಗಾಣವಿದ್ದುದರ ಬಗ್ಗೆ ಕ್ರಿ.ಶ. ೧೧೬೫ರ ನಾಗಮಂಗಲದ ಲಾಲನಕೆರೆ ಶಾಸನ[೩] 'ದೇವರ ನಂದಾ ದೀವಿಗೆಗೆ ಬಿಟ್ಟ ಕಲ್ಲ ಕೈಗಾಣ' ಎಂದು ತಿಳಿಸುತ್ತದೆ. ಇದರಿಂದ ಕೈಗಾಣಗಳಲ್ಲಿ ಕಲ್ಲಕೈಗಾಣವಿದ್ದುದು ಸ್ಪಷ್ಟ.

**ಎತ್ತುಗಾಣ:** ಎತ್ತನ್ನು ಗಾಣಕ್ಕೆ ಹೂಡಿ ತಿರುಗಿಸುತ್ತಿದ್ದ ಗಾಣ. ಕ್ರಿ.ಶ. ೧೧೭೫ ರ ಮೈಸೂರಿನ ಶಾಸನ,[೪] ಕ್ರಿ.ಶ. ೧೧೦೧ ರ ವಿಷ್ಣುವರ್ಧನನ ಅರಸೀಕೆರೆಯ ಶಾಸನ[೫], ಕ್ರಿ.ಶ. ೧೧೭೩ ರ ಬಲ್ಲಾಳನ ಅರಸೀಕೆರೆಯ ಶಾಸನ[೬] ಹೀಗೆ ಅನೇಕ ಶಾಸನಗಳು ಎತ್ತುಗಾಣಗಳಿದ್ದುದರ ಬಗ್ಗೆ ತಿಳಿಸುತ್ತವೆ. ಕೇವಲ ಶಾಸನಾಧಾರಗಳಲ್ಲದೆ ವಚನ ಸಾಹಿತ್ಯದ



ಮೂಲಕವು ಎತ್ತುಗಾಣವಿದ್ದುದರ ಬಗ್ಗೆ ತಿಳಿಯಬಹುದು. ಬಸವಣ್ಣನವರ 'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ'[೭] ಎಂಬ ವಚನ, 'ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ'[೮] ಎಂಬಂತಹ ವಚನಗಳು ಎತ್ತುಗಾಣದ ಬಗ್ಗೆ ತಿಳಿಸುತವೆ.

ಈ ಎತ್ತುಗಾಣದಲ್ಲಿ ಒಂದೆತ್ತು ಗಾಣ ಹಾಗೂ ಒಂದಕ್ಕಿಂತ ಹೆಚ್ಚು ಎತ್ತುಗಳನ್ನು ಗಾಣಕ್ಕೆ ಹೂಡಿ ಎಣ್ಣೆಯನ್ನು ಉತ್ಪಾದಿಸುತ್ತಿದ್ದುದನ್ನು ತಿಳಿಯಬಹುದು. ಕ್ರಿ.ಶ. ೧೧೭೪ರ ಎರಡನೇ ಬಲ್ಲಾಳನ ಪಾಂಡವಪುರದ ತೊಣ್ಣೂರು ಶಾಸನವು[೯] 'ದೇವರ ಮಜ್ಜನದ ಪಡಿಯ ಕೈಯಿದೀವಿಗೆಗೆ ವೊಂದೆತ್ತು ಗಾಣದ ಸು[೦]ಕ್ಕದ' ಎಂದು ತಿಳಿಸುವುದರಿಂದ ಒಂದೆತ್ತು ಗಾಣವಿದ್ದುದು ಸ್ಪಷ್ಟ.

ಗಾಣಿಗರು ಗಾಣದ ಕಂಬವನ್ನು 'ಸ್ಥಾಣು' ಎನ್ನುತ್ತಿದ್ದರು[೧೦]. ಕನ್ನಡದಲ್ಲಿ ಇದಕ್ಕೆ 'ಅರಳೆ' ಎಂಬ ಹೆಸರಿತ್ತು[೧೧]. ಎಣ್ಣೆಯ ಬೀಜಗಳನ್ನು ಅರೆಯುವುದಕ್ಕಾಗಿ ಹಾಕುವ ಭಾಗವೇ 'ಗಾಣದ ಬಾಯಿ', ಅದನ್ನರೆಯುವ ಸಾಧನವೇ 'ಕೊಂತ'. ಇದನ್ನು ಎತ್ತಿಗೆ ಕಟ್ಟಿ ಅದು ಗಾಣದ ಸುತ್ತಲೂ ಸುತ್ತುವಾಗ ಇದೂ ಸುತ್ತಿ ಬೀಜಗಳನ್ನು ಅರೆಯುತ್ತಿತ್ತು. ಎತ್ತುಗಳನ್ನು

* ಸಂಶೋಧನ ವಿದ್ಯಾರ್ಥಿನಿ, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ-೫೭೭೪೫೧. ಶಿವಮೊಗ್ಗ

ಕಟ್ಟಿ ಗಾಣವಾಡಿಸುವಾಗ ಗಾಣಿಗನು ಗಾಣದ ಕತ್ತರಿಯ ಮೇಲೆ ಕುಳಿತುಕೊಳ್ಳುತ್ತಿದ್ದ. ಇಂತಹದ್ದೇ ಒಂದು ಚಿತ್ರಣವನ್ನು ಲಕ್ಷ್ಮೇಶ್ವರದ ಶಾಸನವೊಂದು ನಮಗೆ ತಿಳಿಸುವುದು. ಈ ಲಕ್ಷ್ಮೇಶ್ವರ ಶಾಸನದ[೧೨] ಮೇಲ್ಭಾಗದ ಬಲಬದಿಯಲ್ಲಿ ಆಕಳು–ಕರುವಿನ ಚಿತ್ರ, ಶಿವನ ಚಿತ್ರ, ಸೂರ್ಯ ಚಂದ್ರರ ಚಿತ್ರಗಳಿದ್ದು, ಎಡ ಬದಿಯಲ್ಲಿ ಎತ್ತುಗಾಣದ ಚಿತ್ರವಿದೆ. ಇದರಲ್ಲಿ ಐದು ಎತ್ತುಗಳನ್ನು ನೊಗಕ್ಕೆ ಹೂಡಿ, ಮತ್ತೊಂದು ಬದಿಗೆ ಗಾಣಿಗನು ಕತ್ತರಿಯ ಮೇಲೆ ಕುಳಿತುಕೊಂಡಿರುವ ಚಿತ್ರ ತುಂಬಾ ಚೆನ್ನಾಗಿದೆ.

ಬಹುಶಃ ಎತ್ತುಗಳ ಸಂಖ್ಯೆ ಹೆಚ್ಚಾದಂತೆ ಉತ್ಪಾದಿಸುತ್ತಿದ್ದ ಎಣ್ಣೆ ಪ್ರಮಾಣವೂ ಅಧಿಕವಾಗಿ ಉತ್ಪಾದನೆಯಾಗುತ್ತಿರಬಹುದೆಂದು ತಿಳಿಯಬಹುದು.

**ಮೆಟ್ಟುಗಾಣ:** ಈ ಗಾಣವು ಬಹುಶಃ ತುಳಿತದ ಮೂಲಕ ಕಾರ್ಯ ನಿರ್ವಹಿಸುವ ಗಾಣವೆಂದು ಅದರ ಹೆಸರಿನಿಂದ ಊಹಿಸಬಹುದಾಗಿದೆ. ಈ ಗಾಣದ ಬಗ್ಗೆ ಕೆಲವೇ ಶಾಸನಗಳು ತಿಳಿಸುತ್ತವೆ. ಅವುಗಳಲ್ಲಿ ಕ್ರಿ.ಶ. ೧೧೭೩ರ ಹೊಯ್ಸಳ ಮೊದಲನೇ ನರಸಿಂಹನ ಹಳೇಬಿಡು ಶಾಸನ[೧೩] 'ಮೆಟ್ಟುಗಾಣದೊಕ್ಕಲೈವತ್ತು' ಎಂದು ತಿಳಿಸುತ್ತದೆ. ಅಂದರೆ ಈ ಮೆಟ್ಟುಗಾಣದ ತೆಲ್ಲಿಗರ ಐವತ್ತು ಒಕ್ಕಲುಗಳಿದ್ದುದು ಸ್ಪಷ್ಟ. ಹೀಗೆ ಕೆಲವೇ ಶಾಸನಗಳು ಮೆಟ್ಟುಗಾಣದ ಬಗ್ಗೆ ತಿಳಿಸುತ್ತವೆ.

ಒಟ್ಟಿನಲ್ಲಿ ಶಾಸನ ಹಾಗೂ ಸಾಹಿತ್ಯಾಧಾರಗಳ ಹಿನ್ನೆಲೆಯಲ್ಲಿ ಈ ಮೂರು ರೀತಿಯ ಗಾಣಗಳಲ್ಲಿ ಎತ್ತುಗಾಣಗಳೇ ಅಧಿಕವಾಗಿದ್ದವೆಂಬುದನ್ನು ನಿಸ್ಸಂಶಯವಾಗಿ ಹೇಳಬಹುದು.

**ಎಣ್ಣೆ ಕಾಳುಗಳು:** ಎತ್ತಿನ ಗಾಣದಲ್ಲಿ ಎಳ್ಳಿನಿಂದ ಎಣ್ಣೆ ತೆಗೆಯುತ್ತಿದ್ದುದರ ಸ್ಪಷ್ಟ ಉಲ್ಲೇಖವೊಂದು ವಚನದಲ್ಲಿದೆ.[೧೪] ತೆಂಗಿನ ಕಾಯಿಯಿಂದ ಎಣ್ಣೆ ತಯಾರುಮಾಡುತ್ತಿದ್ದ ಬಗ್ಗೆ ಬೇಲೂರಿನ ಶಾಸನ ತಿಳಿಸುತ್ತದೆ.[೧೫] ಅಲ್ಲದೆ ಸಾಸಿವೆ, ಕುಸುಬಿ, ಔಡಲ ಮೊದಲಾದ ಎಣ್ಣೆ ಬೀಜಗಳಿಂದಲೂ ಎಣ್ಣೆಯನ್ನು ತೆಗೆಯುತ್ತಿದ್ದರು.[೧೬] ಹರಳಿನ ಬೀಜಗಳಿಂದ ಎಣ್ಣೆ ತಯಾರು ಮಾಡುತ್ತಿದ್ದ ಬಗ್ಗೆ ಮೈಸೂರಿನ ಶಾಸನವೊಂದು ತಿಳಿಸುತ್ತದೆ.[೧೭] ಹೀಗೆ ಎಣ್ಣೆಯ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆಯನ್ನು ಹಿಂಡಿಕೊಟ್ಟು ಜೀವಿಸುತ್ತಿದ್ದರು. ಇವರು ಕೇವಲ ಜನರು ತಂದ ಎಣ್ಣೆ ಕಾಳುಗಳನ್ನು ಉಪಯೋಗಿಸಿ ಎಣ್ಣೆ ಮಾಡುತ್ತಿದ್ದುದಲ್ಲದೆ, ತಾವೇ ಸ್ವತಃ ಕಾಳುಗಳನ್ನು ಖರೀದಿಸಿ ಎಣ್ಣೆಯನ್ನು ಮಾಡಿಕೊಂಡು ಹೊರಗೆ ಹೋಗಿ ಮಾರಾಟ ಮಾಡುತ್ತಾ ಇದ್ದರೆಂಬುದನ್ನು ಕ್ರಿ.ಶ. ೧೧೨೦ ರ ಬೇಲೂರಿನ ಶಾಸನವೊಂದು,[೧೮] 'ತೆಲ್ಲಿಗರಲ್ಲಿ ಎಣ್ಣೆ ಹೊಱಗೆ ಬಂದು ಮಾರುವವ' ಎಂದು ಉಲ್ಲೇಖಿಸುತ್ತದೆ. ಅಂದರೆ ಈ ತೈಲಿಕರು ವರ್ತಕರಾಗಿಯೂ ಇದ್ದರೆಂಬುದು ಇದರಿಂದ ತಿಳಿಯುವುದು. ತೈಲಿಕರಲ್ಲಿ 'ಸೆಟ್ಟಿ'ಗಳೂ ಇದ್ದರು.

**ತೆರಿಗೆ ಪದ್ಧತಿ:** ಗಾಣದಿಂದ ಎಣ್ಣೆ ತೆಗೆಯುತ್ತಿದ್ದ ಕೈಗಾರಿಕೆಗಳ ಮೇಲೆ ತೆರಿಗೆಯನ್ನು ಹಾಕಲಾಗುತ್ತಿತ್ತು. ಆಯಾ ಸುಂಕದ ಅಧಿಕಾರಿಗಳು ಆಯಾ ಅಧಿಕಾರಿಯ ಒಪ್ಪಿಗೆಯ ಮೇರೆಗೆ ಸುಂಕ ಸಂಗ್ರಹಿಸುತ್ತಿದ್ದರು. ಅದು ಹಣದ ರೂಪದಲ್ಲಿರಬಹುದು. ಅಥವಾ ವಸ್ತುವಿನ ರೂಪದಲ್ಲಿಯೂ ಕೊಡುತ್ತಿದ್ದ ಸಾಧ್ಯತೆ ಇರಬಹುದು. ನಂದಾದೀವಿಗೆಗೆ ಕೊಟ್ಟ ಗಾಣದ ಮೇಲೆಯೂ ಸುಂಕಹಾಕಲಾಗುತ್ತಿತ್ತೆಂದು ಹುಣಸೂರು ಶಾಸನವು[೧೯] ತಿಳಿಸುತ್ತದೆ. ಕೈಗಾಣದ ಮೇಲೆ ಸುಂಕವನ್ನು ಹಾಕುತ್ತಿದ್ದರೆಂಬುದನ್ನು ಹಾಸನದ ಶಾಸನವು ತಿಳಿಸುತ್ತದೆ.[೨೦] ಎತ್ತುಗಾಣದ ಮೇಲೆಯೂ ಸುಂಕವನ್ನು ಹಾಕುತ್ತಿದ್ದರೆಂಬುದನ್ನು ಮೈಸೂರಿನ ಶಾಸನ ತಿಳಿಸುತ್ತದೆ.[೨೧] ಗಾಣದೆರೆ[೨೨]ಯು ಇದ್ದುದರ ಬಗ್ಗೆ ಅನೇಕ ಶಾಸನಗಳು ತಿಳಿಸುತ್ತವೆ.

ಎಣ್ಣೆಯನ್ನು ಅಡಿಗೆಗೆ ಮತ್ತು ದೀಪಗಳಿಗೆ ಉಪಯೋಗಿಸಲಾಗುತ್ತಿತ್ತು.[೨೩] ದೇವಾಲಯದ ಪಕ್ಕದಲ್ಲಿ ಗಾಣವೊಂದನ್ನು ಸಾರ್ವಜನಿಕರ ಉಪಯೋಗಕ್ಕಾಗಿ ನಿರ್ಮಿಸಲಾಗಿದ್ದು ಉಪಯೋಗಿಸಿದವರು ಸ್ವಲ್ಪ ಭಾಗ ಎಣ್ಣೆಯನ್ನು ಬಾಡಿಗೆ ರೂಪದಲ್ಲಿ ಕೊಡಬೇಕಾಗಿತ್ತು. ಆ ಎಣ್ಣೆಯಿಂದ ಊರ ದೇವರ ಗುಡಿಯಲ್ಲಿ ದೀಪವನ್ನು ಹಚ್ಚಲು ಉಪಯೋಗಿಸಲಾಗುತ್ತಿತ್ತೆಂದು ಮೈಸೂರಿನ ಶಾಸನವೊಂದು ತಿಳಿಸುತ್ತದೆ.[೨೪] ದೇವರ ನಂದಾದೀವಿಗೆಗೆ ಅಥವಾ ಸೊಡರೆಣ್ಣೆಗೆ ನೀಡಿದ ದತ್ತಿಗಳೂ ಬಹಳಷ್ಟಿವೆ. ದಾನಿಗಳು ದಾನ ನೀಡಿದ ಹಲವಾರು ಸಂದರ್ಭಗಳಲ್ಲಿ ಗಾಣವೂ ಸೇರಿದೆ.[೨೫]

ಎಣ್ಣೆ ತೆಗೆಯುವವರನ್ನು ವಿಜ್ಞಾನೇಶ್ವರ 'ಚಕ್ರೀ', 'ಚಾಕ್ರಿಕ' ಎಂದು ಕರೆದಿದ್ದಾನೆಂದು ಗುರುರಾಜಾಚಾರ್ ರವರು ತಿಳಿಸುತ್ತಾರೆ.[೨೬] ಶಾಸನಗಳು ಅವರನ್ನು ತೈಲಿಕರು, ತೆಲ್ಲಿಗರು (ಸಂ.ತೈಲಿಕ) ಎಂದು ಕರೆದಿವೆ.

**ವಸತಿ ವ್ಯವಸ್ಥೆ:** ಬೇಲೂರು ತಾಲ್ಲೂಕಿನ ಒಂದು ಶಾಸನದಲ್ಲಿ[೨೭] 'ಹಿರಿಯ ತೆಲ್ಲಿಗಗೇರಿ' ಮತ್ತು 'ಕಿರಿಯ ತೆಲ್ಲಿಗಗೇರಿ'ಗಳೆಂಬ ಉಲ್ಲೇಖ ಬರುತ್ತದೆ. ಬಹುತೇಕ ಈ ಕೇರಿಗಳು ಆಯಾ ವರ್ಗದ ತೆಲ್ಲಿಗರು ವಾಸಿಸುವ ಕೇರಿಗಳನ್ನು ಸೂಚಿಸುತ್ತಿರಬಹುದು. 'ಹಿರಿಯ ತೆಲ್ಲಿಗಗೇರಿ' ಎಂಬುದು ಎತ್ತುಗಾಣದ ತೆಲ್ಲಿಗರ ಕೇರಿಯಾಗಿರಬಹುದು, 'ಕಿರಿಯ ತೆಲ್ಲಿಗಗೇರಿ' ಎಂಬುದು ಉಳಿದ ಕೈಗಾಣ ಅಥವಾ ಮೆಟ್ಟುಗಾಣದ ತೆಲ್ಲಿಗರ ಕೇರಿಯಾಗಿರಬಹುದೆಂದು ಊಹಿಸಬಹುದು.

ಡಂಬಳದ ಐವತ್ತು ಒಕ್ಕಲಿನ ತೈಲಿಗರನ್ನು ಒಂದು ಶಾಸನವು 'ಬುಧ ಬಾಂಧವ'ರೆಂದೂ, 'ಸಾಕ್ಷರಿಕ'ರೆಂದೂ

ರ್ಣಿಸುತ್ತದೆ. ತೈಲಿಗರಲ್ಲಿ ಕೆಲವರಾದರೂ ವಿದ್ಯಾವಂತರಿದ್ದ ಂದು ಇದರಿಂದ ಊಹಿಸಬಹುದು ಎಂದು ಡಾ. ಎಂ. ಿದಾನಂದಮೂರ್ತಿಯವರು[೨೮] ಅಭಿಪ್ರಾಯಪಡುತ್ತಾರೆ.

ಇವರ ಶ್ರೇಣಿಗಳನ್ನು ತೆಲಿಗಕೊತ್ತಳಿ,[೨೯] ತೇಲಿಗರ ಕ್ಕಲು,[೩೦] ಗಾಣದೊಕ್ಕಲು,[೩೧] ತೆಲ್ಲಿಗರಯ್ವತ್ತೊಕ್ಕಲು[೩೨] ಎಂದು ರುತಿಸಿರುವುದುಂಟು. ಹಲವಾರು ಶಾಸನಗಳು ಇವರನ್ನು ಯ್ವತ್ತೊಕ್ಕಲು ಎಂದು ಕರೆದಿಫ್ವೆ. ಆದರೆ ಕ್ರಿ.ಶ. ೧೨೧೮ರ ಡತಿನಿಯ ಶಾಸನವೊಂದು[೩೩] 'ಗಾಣದೆಱುವತೊಕ್ಕಲು' ಂದು ಉಲ್ಲೇಖಿಸಿದೆ. ಅಲ್ಲದೇ ಕ್ರಿಶ. ೧೧೭೩ ರ ಬೇಲೂರು ಾಸನವೊಂದು[೩೪] 'ಸಾಯಿರೊಕ್ಕಲು' ಎಂದು ತಿಳಿಸಿದೆ. ಂದರೆ ಸಾವಿರದಷ್ಟು ಒಕ್ಕಲುಗಳು ಇವರಲ್ಲಿ ಇದ್ದವೆಂಬುದು ದರಿಂದ ಸ್ಪಷ್ಟವಾಗುತ್ತದೆ.

ಇವರು ಶಿವನ ಆರಾಧಕರಾಗಿದ್ದರೆಂಬುದು ನಮಗೆ ಾಸನಗಳ ಮೂಲಕ ತಿಳಿಯುವುದು. ಈ ತೆಲ್ಲಿಗರೈವತ್ತೊಕ್ಕಲು ಳವರೇ ಸೇರಿ ದೇವಾಲಯವನ್ನು ಕಟ್ಟಿಸಿ ತೆಲಿಗೇಶ್ವರ ೇವರನ್ನು ಪ್ರತಿಷ್ಠಾಪಿಸಿದುದರ ಉಲ್ಲೇಖ ಬಳ್ಳಿಗಾವೆ ಾಸನದಿಂದ[೩೫] ತಿಳಿಯುತ್ತದೆ. ಇವರು ವೈಯಕ್ತಿಕವಾಗಿಯೂ, ಸಾಮೂಹಿಕವಾಗಿಯೂ ಅನೇಕ ಧರ್ಮ ಕಾರ್ಯಗಳನ್ನು ಮಾಡಿರುವುದುಂಟು. ಪ್ರತಿನಿತ್ಯ ದೇವಾಲಯದ ನಂದಾ ದೀವಿಗೆಗೆ ೧ ಸೊಟ್ಟಿಗೆ ಎಣ್ಣೆ, ೨ ಸೊಟ್ಟಿಗೆ ಎಣ್ಣೆ ಕೊಡುತ್ತಿದ್ದರು.

ಸಂಗವಸೆಟ್ಟಿಯರು ಮಾಡಿಸಿದ ಬೌದ್ಧ ವಿಹಾರಕ್ಕೆ ಒಂದೊಂದು ಗಾಣದಲ್ಲೂ ಒಂದೊಂದು ಸೊಂಟಿಗೆ ಎಣ್ಣೆಯ ಪ್ರಕಾರ ದಾನವನ್ನು ಮಾಡುತ್ತಿದ್ದರೆಂದು ಶಾಸನವೊಂದು ತಿಳಿಸುವುದೆಂದು ಡಾ. ಚಿದಾನಂದಮೂರ್ತಿ ಅವರು ತಮ್ಮ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಅಂದರೆ ಇವರು ಬೌದ್ಧ ವಿಹಾರಗಳಿಗೆ, ಶೈವ ದೇವಾಲಯಗಳಿಗೆ ಎಣ್ಣೆದಾನ ಮಾಡಿದ ಉಲ್ಲೇಖಗಳು ಬರುತ್ತವೆ.

ಒಟ್ಟಿನಲ್ಲಿ ತೈಲಿಕರ ಬಗ್ಗೆ ವಿಪುಲವಾದ ಮಾಹಿತಿಯನ್ನು ನಾವು ಶಾಸನಗಳ ಮೂಲಕ ಪಡೆದುಕೊಳ್ಳಬಹುದು.

(ಈ ಸಂಶೋಧನ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಿದ ನನ್ನ ಮಾರ್ಗದರ್ಶಕರಾದ ಡಾ. ರಾಜಾರಾಮ್ ಹೆಗಡೆ, ಮುಖ್ಯಸ್ಥರು, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ, ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


ಅಂಗಡಿ. ಎಸ್.ಎಸ್., ಸಂಕೀರ್ಣ ವೃತ್ತಿ ಪದಕೋಶ.

ಎ.ಕ.೧೦., ಅಕೆ ೩೯, ಕ್ರಿ.ಶ. ೧೧೮೪, ಪು.೫೩.

ಎ.ಕ.೧೦., ಅಕೆ ೨೩, ಕ್ರಿ.ಶ. ೧೧೭೩, ಪು. ೩೦.

ಎ.ಕ.೭., ನಾಮ ೬೩, ಕ್ರಿ.ಶ. ೧೧೬೫, ಪು. ೪೪.

ಎ.ಕ ೫., ಮೈ ೨೧೫, ಕ್ರಿ.ಶ. ೧೧೭೫, ಪು.೩೧೭.

ಎ.ಕ.೧೦., ಅಕೆ ೫೭, ಕ್ರಿ.ಶ. ೧೧೦೧, ಪು.೮೩.

ಎ.ಕ.೧೦., ಅಕೆ ೨೩, ಕ್ರಿ.ಶ. ೧೧೭೩, ಪು.೩೦.

ಬಸವಣ್ಣನವರ ವಚನ ಸಂಪುಟ., ಪು. ೯೨, ವಚನ ೩೮೪.

ಬಸವಣ್ಣನವರ ವಚನ ಸಂಪುಟ., ಪು.೧೪೪, ವಚನ ೫೭೯.

ಎ.ಕ.೬, ಪಾಪು ೬೩., ಕ್ರಿ.ಶ. ೧೧೭೪, ಪು. ೧೪೦.

೧೦. ಶಿವಶರಣೆಯರ ವಚನ., ಸಂಪುಟ, ಪು.೩೩೬ (ಮೋಳಿಗೆ ಮಹಾದೇವಿ– ವ.೧).

೧೧. ಬಸವಣ್ಣನವರ ವಚನ ಸಂಪುಟ, ಪು.೧೪೪, ವಚನ ೫೭೯.

೧೨. ಫೋಟೋವನ್ನು ಲಗತ್ತಿಸಲಾಗಿದೆ (ಪ್ರಸ್ತುತ ಈ ಶಾಸನವು ಸೋಮೇಶ್ವರ ದೇವಾಲಯದ ಮುಂಭಾಗದಲ್ಲಿದೆ).

೧೩. ಎ.ಕ. ೯., ಬೇ ೩೧೭, ಕ್ರಿ.ಶ. ೧೧೭೩, ಪು. ೨೯೪.

೧೪. ಬಸವಣ್ಣನವರ ವಚನ ಸಂಪುಟ, ಪು, ೯೨, ವಚನ ೩೮೪.

೧೪ಅ. ಸಂಕೀರ್ಣ ವಚನ ಸಂಪುಟ ೩ (ಮೋಳಿಗೆ ಮಾರಯ್ಯ, ವ.೩೦೧, ಪು. ೩೬೫).

೧೫. ಎ.ಕ. ೯, ಬೇ ೫೬೨, ಕ್ರಿ.ಶ. ೧೨೮೦, ಪು. ೪೯೧.

೧೬. A. Appadorai, *Economic Conditions in Southern India.*

೧೭. ಎ.ಕ. ೫., ಮೈ ೨೧೬, ಕ್ರಿ.ಶ. ೧೧೯೫-೬, ಪು. ೩೧೮.

೧೮. ಎ.ಕ. ೯., ಬೇ ೨೬೧, ಕ್ರಿ.ಶ. ೧೧೨೦, ಪು. ೨೪೮.

೧೯. ಎ.ಕ.೪., ಹುಸೂ ೧೦೮, ೧೪ ನೇ.ಶ., ಪು. ೫೫೯.

೨೦. ಎ.ಕ.೮., ಹಾಸನ ೧೧೩, ಕ್ರಿ.ಶ. ೧೧೫೬-೫೭, ಪು. ೩೨೫.

೨೧. ಎ.ಕ.೫., ಮೈ ೨೧೬, ಕ್ರಿ.ಶ. ೧೧೯೫-೯೬, ಪು.೩೧೮.

೨೨. ಎ.ಕ.೪., ಹುಸೂ ೨೪, ಕ್ರಿ.ಶ. ೧೧೬೨, ಪು. ೪೯೯.

೨೩. S. Gururajachar., *Some aspects of Economic and Social Life in Karnataka.*

೨೪. ***MAR** 1932, p.237.*

೨೫. ಸಕಲೇಶ ಮ., ***ಹೊಯ್ಸಳೋದಯ ಸಂಶೋಧನ.***

೨೬ S.Gururajachar, opp.cit.,

೨೭. ಎ.ಕ. ೯., ಬೇ ೫೫೪, ಕ್ರಿ.ಶ.೧೧೯೦, ಪು. ೪೮೩.

೨೮. ಚಿದಾನಂದಮೂರ್ತಿ ಎಂ., ***ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.***

೨೯. ಎ.ಕ.೬., ಪಾಪು ೨೫, ಕ್ರಿ.ಶ. ೧೧೯೩, ಪು. ೧೨೭.

೩೦. ಎ.ಕ.೮, ಹಾಸನ ೨೭, ೧೨-೧೩ನೇ ಶ., ಪು. ೨೫೮.

೩೧. ಸೌ.ಇ.ಇ. ೯, ನಂ. ೧೮೪, ಕ್ರಿ.ಶ. ೧೧೧೧, ಪು. ೧೭೮.

೩೨. ಸೌ.ಇ.ಇ. ೨೦, ನಂ.೪೪, ಕ್ರಿ.ಶ. ೧೦೬೯, ಪು. ೪೯.

೩೨ಅ. ಸೌ.ಇ.ಇ.೯, ನಂ. ೧೧೮, ಕ್ರಿ.ಶ. ೧೦೫೭, ಪು.೯೭.

೩೩. ಸೌ.ಇ.ಇ.೯, ನಂ.೩೩೬, ಕ್ರಿ.ಶ. ೧೨೧೮, ಪು.೩೫೭.

೩೪. ಎ.ಕ.೯., ಬೇ ೩೧೭, ಕ್ರಿ.ಶ. ೧೧೭೩, ಪು. ೨೯೪.

೩೫. ಎ.ಕ. VIII, ಶಿಕಾ ೩೩೪, ಕ್ರಿ.ಶ. ೧೧೪೪.

ಭಾರತದ ವೇದಗಳು ಗಹನವಾದ ಅಂತಸ್ಸತ್ವಗಳಿಂದ ಕೂಡಿವೆ. ಇವುಗಳಲ್ಲಿರುವ ರಹಸ್ಯವಾದ ಅರ್ಥಗಳನ್ನು ಜನರಿಗೆ ತಿಳಿಯಪಡಿಸುವ ಉದ್ದೇಶದಿಂದ ಪ್ರಾಚೀನರೇ ಆರು ಬಗೆಯ ಸಾಧನಗಳನ್ನು ಉಪಯೋಗಿಸಿದರು. ಇವಕ್ಕೆ ಷಡಂಗಗಳೆಂದು ಹೆಸರು. ಶಿಕ್ಷಾ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ, ಕಲ್ಪ ಮತ್ತು ನಿರುಕ್ತ ಎಂಬುವೇ ಆ ಅಂಗಗಳು. ಶಿಕ್ಷಾ ಶಾಸ್ತ್ರವು ವೇದಗಳ ಸ್ವರವ್ಯಂಜನಗಳನ್ನು ಅಭಿವ್ಯಕ್ತಪಡಿಸುವ ತಿಳಿವಳಿಕೆಯನ್ನು ನೀಡುತ್ತದೆ. ಸ್ವರಾದಿಗಳ ಉಚ್ಚಾರಣೆಯ ಪ್ರಾಧಾನ್ಯವನ್ನು ಸ್ಪಷ್ಟಪಡಿಸುತ್ತದೆ. ವ್ಯಾಕರಣವು ನಾಮಪದಗಳಿಗೆ ವಿಭಕ್ತಿ ಪ್ರತ್ಯಯಗಳ ಶುದ್ಧವಾದ ಪ್ರಯೋಗ ಕ್ರಮವನ್ನು ನಿರೂಪಿಸುತ್ತದೆ. ಛಂದಸ್ಸು ಆಯಾ ಮಂತ್ರಗಳ ಅಕ್ಷರ, ಕೋಶ, ಪಾದ ವ್ಯವಸ್ಥೆ ಮುಂತಾದುವನ್ನು ತಿಳಿಸಿ ಆಯಾ ಋಷಿಗಳ ಹೆಸರುಗಳನ್ನು ಪರಿಚಯ ಮಾಡಿಕೊಡುತ್ತದೆ. ಕಲ್ಪವೆಂಬುದು ಯಂತ್ರಗಳ ವಿನಿಯೋಗ ಕ್ರಮವನ್ನು ವಿಧಿಸುತ್ತದೆ. ಜ್ಯೋತಿಷ್ಯವು ವಿವಿಧ ಕರ್ಮಗಳಿಗೆ ಸೂಕ್ತವೂ, ಶುಭವೂ ಆದ ಕಾಲವನ್ನು ನಿರ್ಣಯಿಸಿಕೊಡುತ್ತದೆ. ನಿರುಕ್ತವು ವೇದಗಳ ಅರ್ಥ ನಿರ್ಧಾರಕ್ಕಾಗಿಯೇ ನಿರ್ಮಾಣವಾದ ವೇದಾಂಗ. ಇದರ ಪ್ರಾಮುಖ್ಯವನ್ನು ಎಷ್ಟು ಒತ್ತಿ ಹೇಳಿದರೂ ಸಾಲದು.

– **ಪ್ರೊ. ಜಿ. ವೆಂಕಟಸುಬ್ಬಯ್ಯ, ಕನ್ನಡ ನಿಘಂಟು ಶಾಸ್ತ್ರ ಪರಿಚಯ**

ಡಾ|| ಜ್ಯೋತ್ಸ್ನಾಕಾಮತ್*

# ಕನ್ನಡಿಗರ ಆಹಾರ ಸಂಸ್ಕೃತಿ

ಹಲವಾರು ದುಷ್ಟಶಕ್ತಿಗಳು ನಮ್ಮ ದೇಶವನ್ನು ಛಿದ್ರಗೊಳಿಸುತ್ತಿವೆ! ಎಂಬ ದೂರು ಕೇಳಿಬರುತ್ತಿದೆ. ಭಾವೈಕ್ಯತೆಯನ್ನು ಸಾಧಿಸಲು ಸೂತ್ರಗಳಾವವು? ಅವನ್ನು ಹೇಗೆ ಆಚರಣೆಯಲ್ಲಿ ತರಬೇಕು? ಎಂದು ದೇಶಪ್ರೇಮಿಗಳು, ವಿದ್ವಾಂಸರು, ರಾಜಕಾರಣಿಗಳು ಶಿಕ್ಷಣತಜ್ಞರು ತಲೆಕೆಡಿಸಿಕೊಳ್ಳುತ್ತಿದ್ದಾರೆ. ಆದರೆ ಅನ್ನ ಸೂತ್ರವೆಂಬುದು ಈ ಭರತಖಂಡವನ್ನು ಬೆಸೆಯುತ್ತ ಬಂದಿದೆ! ಎಂಬ ಸಾದಾ ಸರಳ ಸೂಚನೆಯನ್ನು ಅವರೆಲ್ಲ ಗಮನಿಸಿದಂತೆ ಇಲ್ಲ. ರಾಜ್ಯ–ರಾಜ್ಯಗಳ ಭಾಷಾ ವಿವಾದ ಗಡಿ ಸಮಸ್ಯೆ, ನೀರಿನ ತಂಟೆಗಳನ್ನು ಮೀರಿ ಬೆಳೆದ ಮಮತೆ, ಪರಸ್ಪರ ಪ್ರದೇಶಗಳ ತಿಂಡಿ–ತಿನಸುಗಳದು! ಬಂಗಾಲಿಗಳ ರಸಗುಲ್ಲ, ಗುಜರಾಥಿಗಳ ಢೋಕಳಾ, ಮಹಾರಾಷ್ಟ್ರದ ಬೊಂಬೆಬೊಂಡಾ, ಶ್ರೀಖಂಡ, ಪಂಜಾಬಿಗಳ ತಂದೂರಿ, ಕಾಶ್ಮೀರದ ಕಬಾಬ್, ದಕ್ಷಿಣದ ಇಡ್ಲಿ–ದೋಸೆಗಳು ಸೀಮಾತೀತವಾಗಿ ಹರಡಿ ಭಾರತೀಯತೆಯನ್ನು ಎತ್ತಿಹಿಡಿದಿವೆ. ಕೇವಲ ಕಾಲು ಶತಮಾನದಲ್ಲಿ 'ಥಾಲಿ' ಅಥವಾ ಪ್ಲೇಟ್ ಮೀಲ್ಸ್‌ನ ಅವತಾರವಾಗಿ, ಶ್ರೀನಗರದಿಂದ ಕನ್ಯಾಕುಮಾರಿ, ಮುಂಬೈಯಿಂದ ಕಲಕತ್ತಾವರೆಗೆ ಲಭ್ಯವಾಗಿ, ಚಪಾತಿ+ಅನ್ನ ಮೇಳವಿಸಿಕೊಂಡು, ಮೆರೆಯುತ್ತಿದೆ. ಜಿಹ್ವಾರುಚಿ ನಮ್ಮೆಲ್ಲರನ್ನು ಬೆಸೆದಿದೆ, ಎನ್ನುವದು ಸತ್ಯ!

ಕನ್ನಡಿಗರು ಜಿಲ್ಲಾಭೇದವಿಲ್ಲದೇ 'ಭೋಜನ ಸುಖರತರು'. ಈ ಬಿರುದು ದಯಪಾಲಿಸಿದವರು, ಪ್ರಸಿದ್ಧ ಸ್ವಾತಂತ್ರ್ಯಯೋಧರು, ಕನ್ನಡ–ಮರಾಠಿಗಳಲ್ಲಿ ಒಳ್ಳೆಯ ಲೇಖಕರು ಹಾಗೂ ಕರ್ನಾಟಕದ ಏಕೀಕರಣ ಚಳವಳಿಯಲ್ಲಿ ಮಹತ್ವದ ಪಾತ್ರವಹಿಸಿದ ದಿವಂಗತ ಕೌಜಲಗಿ ಹನುಮಂತ ರಾಯರು[೧] ಈಗಿನ ಕರ್ನಾಟಕವೆಂಬುದು ಮುಂಬೈ ಮದರಾಸು, ಪ್ರಾಂತಗಳು, ಮೈಸೂರು, ನಿಜಾಮನ ಸಂಸ್ಥಾನಗಳು ಹಾಗೂ ಕೊಡಗಿನಲ್ಲಿ ಪ್ರತ್ಯೇಕವಾಗಿ ಹರಿದು ಹಂಚಿಹೋಗಿದ್ದಾಗ, ನಮ್ಮ ನಾಡಿನ ತಿಂಡಿ–ತಿನಸುಗಳ ವೈಭವದ ಕುರಿತು ತುಂಬಿದ ಮನಸ್ಸಿನಿಂದ ಹಾಡಿದ್ದರು.

*ಭೋಜನ ಸುಖರತ ಈ ನಾಡು । ಎನ್ನದು ಈ ಕನ್ನಡನಾಡು ॥*
*ಮಂಗಳೂರಿನ ಮತ್ಸ್ಯಾಹಾರ । ಕೊಡಗಿನ ಕಟು ಕಾಫಿ ನೀರ ॥*
*ಮೈಸೂರಿನ ಇಡ್ಡಲಿ ದ್ವಾಸಿ । ಬಳ್ಳಾರಿಯ ಅನ್ನದ ರಾಶಿ ॥*
*ಧಾರವಾಡದ ಅವಲಕ್ಕಿ । ಕಾರವಾರದ ತಾಳಿಯ ಚಕ್ಕಿ ॥*
*ಬೆಳಗಾವಿಯಲಿ ಬುರಬುರಿ । ಕಲಬುರ್ಗಿಯಲಿ ತಂದೂರಿ ।*
*ಬಿಜಾಪುರದ ಒಣಒಣರೊಟ್ಟಿ । ನೆನಪಾದರಲುರೀತದ ಹೊಟ್ಟೆ!*
*ಅಂಬೋಡಿ, ಉಪ್ಪಿಟ್ಟಿನ ದೇಶಾ । ನಾನಾವಿಧ ತಿಂಡಿಯ ಕೋಶಾ।*
*ಕನ್ನಡಿಗರ ಮೋಹದ ಪಾಶಾ ।...... ಹೆರೆತುಪ್ಪ ಕಡುಬಿನ ಬೀಡು ।*
*ಎನ್ನದು ಈ ಕನ್ನಡ ನಾಡು ॥*

ಇಡ್ಲಿಯ ಉಲ್ಲೇಖ, ವಡ್ಡಾರಾಧನೆಯಲ್ಲಿ[೧ಅ] (ಕ್ರಿ.ಶ. ೯೨೦) ಬಂದರೆ, ಪಂಪನು (ಕ್ರಿ.ಶ. ೯೫೦) ವೆಜಿಟೇಬಲ್ ಬೋಂಡ ಅಥವಾ ಶಾಕವಟಕವನ್ನು[೨] ಹೆಸರಿಸಿದ್ದಾನೆ. ಅತ್ಯಾಧುನಿಕ ಸಾಮಿಷ ಪ್ರಕಾರಗಳೆಂದು ಹೆಸರು ಪಡೆದ ಸ್ಟೇಕ್ಸ್, ಸೀ ಕಬಾಬ್, ಕೋಫ್ತಾ (ಶುಂಠಕ, ಶೂಲಪ್ರೋತ, ಮಾಂಸ, ವಟಿಕ)ಗಳು ೧೨ನೆ ಶತಮಾನದ ಮಾನಸೋಲ್ಲಾಸದಲ್ಲಿ, ವರ್ಣಿತವಾಗಿವೆ.[೩]

ಆಹಾರವನ್ನು ಶಾಸ್ತ್ರೀಯವಾಗಿ ಅಭ್ಯಸಿಸಿದವರು ಅದನ್ನು ಸೂಪಶಾಸ್ತ್ರವೆಂದು ಕರೆದರು. ಚಾವುಂಡರಾಯನ **ಲೋಕೋಪಕಾರಂ** (೧೦ನೇ ಶತಮಾನ)[೪] ಎಂಬ ಕನ್ನಡ ಕೋಶದಲ್ಲಿ ಚಾಲುಕ್ಯ ಮುಮ್ಮಡಿ ಸೋಮೇಶ್ವರನ **ಮಾನಸೋಲ್ಲಾಸ**ದಲ್ಲಿ ಅಲ್ಲದೇ ಕೆಳದಿಯ ಬಸವಪ್ಪನಾಯಕನ **ಶಿವತತ್ವರತ್ನಾಕರ** (೧೭ನೇ ಶತಮಾನ)[೫]ದಲ್ಲಿ ಸೂಪಶಾಸ್ತ್ರದ ಅಧ್ಯಾಯಗಳಿವೆ. ಕ್ರಿ.ಶ. ೧೫೦೯ರ ಸುಮಾರಿಗೆ ರಚಿತವಾದ ಮೂರನೆಯ ಮಂಗರಸನ '**ಸೂಪಶಾಸ್ತ್ರ**[೬]' ಅಪೂರ್ವ ಪಾಕಶಾಸ್ತ್ರದ ಕೃತಿಯಾಗಿದೆ. ಇವುಗಳೆಲ್ಲ ಹಿಂದೆ ಕರ್ನಾಟಕದಲ್ಲಿ ಪ್ರಚಲಿತವಿದ್ದ ಆಹಾರ ಪ್ರಕಾರಗಳು, ಅವನ್ನು ಅಡುವ ಕ್ರಮ, ಮತ್ತು ಈಗ ಕಣ್ಮರೆಯಾಗಿ ಹೋದ ಹಲವು ಪಾಕವೈವಿಧ್ಯಗಳನ್ನು, ಪಾನೀಯಗಳನ್ನು ಬಣ್ಣಿಸುತ್ತವೆ. ಶಿಲಾಶಾಸನಗಳು, ಕಾವ್ಯಗಳು ಭತ್ತದ ಹೊಲಗಳ ವರ್ಣನೆಯಿಂದ ತುಂಬಿವೆ. ಅಕ್ಕಿಯಲ್ಲದೆ

* ಶಶಿಕಿರಣ, ಮಲ್ಲೇಶ್ವರಂ, ಬೆಂಗಳೂರು.

ಜೋಳ, ಸಜ್ಜೆ, ರಾಗಿ, ಗೋದಿ, ನವಣೆಗಳೂ ಮುಖ್ಯ ಆಹಾರವಾಗಿದ್ದವು. ಸರ್ವಜ್ಞನು, **ಜೋಳವನು ತಿಂಬುವನು ತೋಳದಂತಾಗು ವನು, ಅಕ್ಕಿಯನು ಎಂಬುವನು ಹಕ್ಕಿಯಂತಾ ಗುವನು, ನವಣೆಯನು ತಿಂಬುವನು ಹವಣಾಗಿ ಇರುತಿಹನು, ರಾಗಿ ಯನು ನುಂಗುವನು ನಿರೋಗಿಯಂದೆನಿಸುವನು!** ಎಂದು ಕರ್ನಾಟಕದ ಆಹಾರ ಪದ್ಧತಿಯ ಮೇಲೆ ತನ್ನ ತೀರ್ಪನ್ನು ಕೊಟ್ಟೇ ಇರುವ. ದಲಿತರ ಧಾನ್ಯವೆನಿಸಿಕೊಂಡ ರಾಗಿಯ ಬಗ್ಗೆ ಕನಕದಾಸರು, '**ರಾಮಧಾನ್ಯಚರಿತವೆಂಬ** ಕಿರುಗಬ್ಬವನ್ನೇ ಬರೆದರು. ರಾಘವನಿಗೆ ಪ್ರಿಯವಾದದ್ದು ರಾಗಿಯಾಯಿತು.

ಅನ್ನಮಾಡುವ ಎರಡು ವಿಧಾನಗಳಿದ್ದವು. ಬಸಿದು ಮಾಡುವದು ಮತ್ತು ನೀರನ್ನು ಇಂಗಿಸಿ ಮಾಡುವದು. ಮಣ್ಣಿನ, ಕಬ್ಬಿಣದ, ತಾಮ್ರದ ಪಾತ್ರೆಗಳಲ್ಲಿ ಬೇಯಿಸಿದ ಅನ್ನ ಆರೋಗ್ಯ ಕಾರಿಯಾಗಿತ್ತು. ಮಂಗರಸನು ಕಟ್ಟೋಗರಗಳು ಅಥವಾ ಭಾತುಗಳ ಹದಿನೈದು ಪ್ರಕಾರಗಳನ್ನು ವಿವರಿಸಿದ್ದಾನೆ.[೬] ತೊಗರಿಬೇಳೆ ಬಿಟ್ಟು ಬಗೆ ಬಗೆಯ ದ್ವಿದಳ ಧಾನ್ಯಗಳ ಮೇಲೋಗರಗಳು ಬಳಕೆಯಲ್ಲಿದ್ದವು.

**ವ್ಯಂಜನಗಳು.** ಅನ್ನ ಬಸಿದ ತಿಳಿಯನ್ನು ಚೆಲ್ಲುತ್ತಿರಲಿಲ್ಲ. ಅದಕ್ಕೆ ಸಂಬಾರ ಪದಾರ್ಥಗಳನ್ನು ಮಜ್ಜಿಗೆ, ಒಗ್ಗರಣೆ ಸೇರಿಸಿ ಸಾರು ಮಾಡುತ್ತಿದ್ದರು. ಅದೆಷ್ಟೊ ಸೊಪ್ಪು, ಗಡ್ಡೆಗಳು, ಕುಂಬಳ–ಬಾಳೆಹೂಗಳು, ಹಲಸಿನಕಾಯಿ, ಬಾಳೆಕಾಯಿ, ಬದನೆ ಕಾಯಿಗಳ ೪೦ಕ್ಕೂ ಮಿಕ್ಕಿದ ಪಲ್ಯದ ಪ್ರಕಾರಗಳನ್ನು ಮಂಗರಸನು ವರ್ಣಿಸಿದ್ದಾನೆ. 'ರಂಭಾಕುಸುಮಪಾಕ' ಎಂಬ ಸುಂದರ ಹೆಸರು ಪಡೆದ ಬಾಳೆ ಹೂವಿನ ಕೋಸಂಬರಿಯ ಎಂಟು ಪ್ರಕಾರಗಳಿದ್ದವು. ಈಗ ವಿಟ್ಯಾಮಿನ್ 'ಸಿ' ವಿಪುಲ ವಾಗಿದೆಯೆಂದು ಗುರುತಿಸಲ್ಪಟ್ಟ ನೆಲ್ಲಿಕಾಯಿಯ ಹತ್ತಾರು ವ್ಯಂಜನಗಳು ಇದ್ದವು.

**ತಿಂಡಿಗಳು:** ಉತ್ತಮಗೋದಿ, ಹಾಲು–ಹೈನು, ಹಣ್ಣು ಗಳು ವಿಪುಲವಾಗಿದ್ದ ಕಾಲದಲ್ಲಿ ಪಕ್ವಾನ್ನಗಳ ವೈವಿಧ್ಯ ಇಷ್ಟೆ! ಎಂದು ಹೇಳಲಿಕ್ಕುಂಟೆ? ನೀರ್ವತ್ತಿಗೆ, ಘತಪೂರ, ಹಾಲು ಗಾರಿಗೆ, ಸವಡುರೊಟ್ಟಿ, ಸಮುದ್ರಫೇನ, ಬಾಬರ, ಚಂದ್ರ ಮಂಡಲ ಸುಧಾಪಿಂಡ, ಗುಜ್ಜರಿವೇಣಿ[೭] ಮುಂತಾದವು ಗತವೈಭವದ ಕುರುಹಾಗಿ ನಿಂತಿವೆ!' ಫೇಣಿ, ಪಾಯಸ, ಕಡುಬುಗಳ ಅದೆಷ್ಟೋ ಪ್ರಕಾರಗಳಿವೆ. ಈಗಿನ ಜಾಂಗೀರು, ಹಿಂದಿನವರಿಗೆ 'ಅಮೃತವಲ್ಲರಿ'ಯಾಗಿತ್ತು. ದೂದ್‌ಪೇಡ, ಪೀಯೂಷಪಿಂಡವಾಗಿತ್ತು. ಒಟ್ಟಿನಲ್ಲಿ ೬೫ ತಿಂಡಿಗಳ ತಯಾರಿಕೆ ಹೇಳಲಾಗಿದೆ.[೮]

**ಅಂಗಡಿ–ಧಾಮಗಳು:** ಮನೆಯ ತಿಂಡಿಯಿಂದ ತೃಪ್ತರಾಗದವರಿಗೆ ಮಿಠಾಯಿ ಅಂಗಡಿಗಳಿದ್ದವು. ಅಣ್ಣಾಜಿ ಕವಿ (ಕ್ರಿ.ಶ. ೧೬೦೦) ಇಂಥ ಮಿಠಾಯಿ ಅಂಗಡಿಯಲ್ಲಿಯ ಬೆಡಗಿನ ತಿಂಡಿಗಳನ್ನು ಬಣ್ಣಿಸಿರುವ

**ಕರಜಿಗೆಯ ಕಾಯತಿರಸವುದ್ದಿನೊಡೆಯು**
**ಹಿಮಕರನಂತೆ ರಾಜಿಸುವ ಇಡ್ಡಲಿಗೆ ಎಳ್ಳುಂಡೆ**
**ತರಣಿಮಂಡಲದಂತೆಸೆವ ಒಬ್ಬಟ್ಟು, ಗಾರಗೆ ಚಕ್ಕಲಿ ಸೇವಿಗೆ**
**ಹೊರೆಯ ಫೇಣಿಯು ಮನೋಹರದುಂಡೆ,**
**ಅರಗು, ಸಕ್ಕರೆ ಬುರುಡೆ ಹಾಲುಂಡಲಿಗೆಯು,**
**ಸ್ವಾದಿಸಲಮೃತ ಸರಳಿನಿಂ ನಿರ್ಮಿಸಿದ**
**ಲತೆಯಂತೆ ಜಿಲ್ಲಬಿಯ ಅಂಗಡಿಗಳೆಸೆದವು.**[೯]

ಚಾಲುಕ್ಯ ಮುಮ್ಮಡಿ ಸೋಮೇಶ್ವರನ (ಕ್ರಿ.ಶ. ೧೧೨೬–೧೧೩೮) '**ವಿಕ್ರಮಾಂಕಾಭ್ಯುದಯಂ**' ಎಂಬ ಅಪೂರ್ಣ ಸಂಸ್ಕೃತ ಚಂಪೂ ಕೃತಿಯಲ್ಲಿ ಆತನ ರಾಜಧಾನಿ ಕಲ್ಯಾಣ ನಗರಿಯ ಮುಖ್ಯ ಮಾರ್ಗಗಳಲ್ಲಿ ಕಂಗೊಳಿಸುತ್ತಿದ್ದ, ಈಗಿನ ಪಂಚತಾರಾ ಹೊಟೆಲಗಳನ್ನು ಹೋಲುವ '**ಅಧಿಷ್ಠಿತ ಧಾಮ**'ಗಳಲ್ಲಿ ಲಭ್ಯವಿದ್ದ ಪಕ್ವಾನ್ನಗಳ ವರ್ಣನೆಯಿದೆ. ಜೊತೆಗೆ ಪಾಕ ಪ್ರವೀಣರ ಕೈಚಳಕದ ಉಲ್ಲೇಖವೂ ಇದೆ.[೧೦] ಗ್ರಾಹಕರು ಇಷ್ಟ ಪಡುವ ತಿಂಡಿ–ಊಟ–ಪಾನೀಯಗಳನ್ನು ಆಗಿಂದಾಗ್ಗೆ ತಯಾರಿಸಿ ಪೂರೈಸುವ ವ್ಯವಸ್ಥೆ ಇತ್ತು.

**ಹಣ್ಣುಗಳು:** ಹಣ್ಣುಗಳ ರಾಜನಾದ ಮಾವಿನ ಹಣ್ಣಿನ ಕುರಿತ ಪಂಪನ ಉದ್ಗಾರಗಳು ಕನ್ನಡಿಗರಿಗೆ ಚಿರಪರಿಚಿತ! ಕಸಿ ಮಾಡಿ ಮಾವಿನ ಹಣ್ಣಿನ ಅನೇಕ ಪ್ರಕಾರಗಳನ್ನು ಪಡೆಯುತ್ತಿದ್ದರು. ಪೇರಲ (ಸೀಬೆ) ನೇರಿಳೆ, ಹಲಸು ದಾಳಿಂಬೆ ದ್ರಾಕ್ಷಿ, ಬಾಳೆ, ಕಿತ್ತಳೆ ಹಣ್ಣುಗಳ ಹಲವಾರು ಜಾತಿಗಳಿದ್ದವು. 'ಪಣ್‌ಪಸರ' ಅಥವಾ ಫ್ರುಟ್ ಸ್ಟಾಲ್‌ಗಳು ಪಟ್ಟಣದಲ್ಲಿ ಕಂಡುಬರುತ್ತಿದ್ದವು. ಒತ್ತದೇ ತಳಿತ ಸಮಸ್ತ ಹಣ್ಣುಗಳ ರಾಶಿ ಎರಡೂ ಕಡೆ ಇರುತ್ತಿದ್ದವು[೧೧].

**ಪಾನೀಯಗಳು:** ನೀರನ್ನು ಸೋಸಿ, ಅವಶ್ಯವಿದ್ದಲ್ಲಿ ಕಾಯಿಸಿ ಶೈತ್ಯೀಕರಿಸಿ ಇಡುವ ಪದ್ಧತಿ ಇತ್ತು. ಮಣ್ಣಿನ ಮಡಕೆಗಳಲ್ಲಿ, ನೆಲ ಮಾಳಿಗೆಯಲ್ಲಿ ಗಾಳಿ ಬೀಸಿ ತಣ್ಣಗಿರುವಲ್ಲಿ ಅದನ್ನು ಶೇಖರಿಸಿ ಬಳಸುತ್ತಿದ್ದರು. ಮಾವು, ದಾಳಿಂಬೆ, ಖರ್ಜೂರ, ಬೇಲ ಮುಂತಾದವುಗಳ ತಿರುಳಿನ ರಸ ತೆಗೆದು 'ಜ್ಯೂಸ್' ಕಾಯ್ದಿರಿಸುವ ವಿಧಾನ 'ಲೋಕೋಪಕಾರಂ' ದಲ್ಲಿದೆ. ಹೂವುಗಳ 'ಎಸೆನ್ಸ್' ಸೇರಿಸಿದ ಹಲಬಗೆಯ ಪಾನಕಗಳು ಇದ್ದಂತೆ, ಮಜ್ಜಿಗೆ ಮಾವಿನ ಕಾಯಿಯ ಚೂರ್ಣ, ಸೊಪ್ಪು ಬೇಯಿಸಿದ ನೀರು, ಅಕ್ಕಿ ತೊಳೆದ ನೀರುಗಳಿಂದಲೂ ಸಿಹಿ ಯಿಲ್ಲದೇ ಪೇಯಗಳನ್ನು ತಯಾರಿಸುತ್ತಿದ್ದುದು ವಿಶೇಷ.[೧೨]

**ಕಾಯ್ದಿರಿಸಿದ ಹಾಗೂ ಕೃತ್ರಿಮ ಆಹಾರ**

ತುಳಸಿ, ಮಾದಳದ ಎಲೆ ಹಾಕಿದ ನೀರಲ್ಲಿ ಅನ್ನಮಾಡಿ ಹಲವು ದಿನ ಕಾಯ್ದಿರಿಸಿದಂತೆ, ಪಾಯಸವನ್ನು ಕೆಡದಂತೆ ಇಡುವ ರೂಢಿ ಇತ್ತು. ಕೃತ್ರಿಮ ಹಾಲು, ಮೊಸರುಗಳನ್ನು, ಹಾಲಿನಪುಡಿ, ಮೊಸರಿನ ಪುಡಿಗಳನ್ನು ಕೃತ್ರಿಮ ತುಪ್ಪವನ್ನು ಪಡೆಯುವ ವಿಧಾನಗಳು ಲೋಕೋಪಕಾರಂ'ದಲ್ಲಿ ವಿವರಿಸಲ್ಪಟ್ಟಿವೆ.[೧೩]

**ಊಟದ ಪದ್ಧತಿ:** ಕನ್ನಡಿಗರ ಸೌಂದರ್ಯದೃಷ್ಟಿ, ಅಚ್ಚುಕಟ್ಟುತನಗಳು, ಭೋಜನ ಸಮಯಕ್ಕೂ ಹೊರತಾಗಿರಲಿಲ್ಲ! ಭೋಜನಶಾಲೆಯಲ್ಲಿ ರಂಗವಲ್ಲಿ ಇಕ್ಕಿ ಓರಣವಾಗಿ ಜೋಡಿಸಿದ ಬಾಳೆಲೆ, ದೊನ್ನೆ, ಪತ್ರಾವಳಿಗಳು, ಬಣ್ಣದ ಮಣಿಗಳು, ಎಲೆಯ ತುದಿಯಲ್ಲಿ ಉಪ್ಪು, ಉಪ್ಪಿನ ಕಾಯಿ, ಹಳದಿ, ಹಸಿರು, ಬಿಳೀ ಕೇಸರಿ, ಕೆಂಪು ಬಣ್ಣದ ನಾನಾ ವ್ಯಂಜನಗಳು ರಾರಾಜಿಸುತ್ತಿದ್ದವು. ಮಲ್ಲಿಗೆ ಹೂವಿನಂಥ ಅನ್ನ ಮಧ್ಯದಲ್ಲಿ ಬಳಿಕ ನಾನಾ ಸಿಹಿಭಕ್ಷ್ಯಗಳು. ಮನೆಯ ಯಜಮಾನಿ ತುಪ್ಪ ಬಡಿಸುವದು, ಯಜಮಾನ (ವಿಶೇಷ ಸಂದರ್ಭಗಳಲ್ಲಿ) ಆಗಾಗ ಬಂದು ಉಪಚರಿಸುವದು ಸಾಮಾನ್ಯವಾಗಿತ್ತು. ನಡುನಡುವೆ ಕುಡಿಯಲು ರಸಪಾನಕ ವಿಘ್ನರಾಜನ ಹೊಸ ಬಳಗದಂತೆ, ಬ್ರಾಹ್ಮಣರು ಭೋಜನಕ್ಕೆ ನ್ಯಾಯ ಒದಗಿಸುತ್ತಿದ್ದ ವಿನೋಧ ಸಂದರ್ಭ ಕನಕದಾಸರ ಮೋಹನ ತರಂಗಿಣಿಯಲ್ಲಿ ಬರುತ್ತದೆ.[೧೪]

ಕ್ಷತ್ರಿಯರಲ್ಲಿ ಗದ್ದಿಗೆ, ಅಡ್ಡಣಿಗೆ, ಚಿಕ್ಕ ಟೇಬಲ್‌ಗಳು ಬಿಳಿಯ ನ್ಯಾಪ್‌ಕಿನ್‌ಗಳು ಬಳಕೆಯಲ್ಲಿದ್ದವು. ಮೊದಲು ತುಪ್ಪ-ತೊವ್ವೆ ಅನ್ನ ನಡುವೆ ವಿವಿಧ ಭಕ್ಷ್ಯಗಳು, ಸಾಮಿಷವ್ಯಂಜನಗಳು ಕೊನೆಯಲ್ಲಿ ಮಜ್ಜಿಗೆ ಅನ್ನದ ರೂಢಿ ಸಾಮಾನ್ಯವಾಗಿತ್ತು. ೧೨೩೨-೩೬ರ ಸುಮಾರಿಗೆ ಕರ್ನಾಟಕವನ್ನು ಸಂದರ್ಶಿಸಿದ ಅರಬ್ ಪ್ರವಾಸಿ ಇಬ್ನ್ ಬತೂತ, ಇಂಥ ಊಟದ ವರ್ಣನೆ ಮಾಡಿದ್ದರಿಂದ ಕರಾವಳಿಯ ಮುಸ್ಲಿಂರಲ್ಲೂ ಇದೇ ರೂಢಿಯಿತ್ತೆಂದು ಹೇಳಬಹುದು.

ಊಟದ ಹೊತ್ತಿಗೆ ಕಚಪಚ ಸದ್ದು ಮಾಡುವದು, ಜೋರಾಗಿ ಸದ್ದು ಮಾಡಿ ಸುರಿಯುವದು, 'ಟೇಬಲ್ ಮ್ಯಾನರ್ಸ್' ಅಲ್ಲ! ಎಂದು ಕೆಲವು ಆಧುನಿಕರು ನಂಬುವದುಂಟು. ಆದರೆ ಸಾಮೂಹಿಕ ಭೋಜನ ಸಂದರ್ಭದಲ್ಲಿ ಈ ಸದ್ದಿಗೂ ಗತಿ-ವಿಧಾನ ರೂಪಿಸಿದ ಕವಿಗಳು ಇದ್ದರು!

**ಕರುಗಾದ ಮುಚ್ಚೋರೆಯ, ಚಕ್ಕುಲಿಗಳ ನೆರನೆರಕೆನುತ**
**ಮುರಿದು ಬಾಯೊಳಗಿಟ್ಟು ಗರಿಗರಿಗರಿಸುವ ಸ್ವರ ತುಂಬಿತಾಗೃಹದಲ್ಲಿ**
**ಸರಪರ ಸುರುಸುರು, ಸೊರಕ್! ಎಂದು ನಾರೀರು**
**ಸುರುವತಿರಲು ಪಾಯಸವ .....**

**ತಂದೂರ್ ಹಾಗೂ ಓವನ್‌ಗಳ ಪ್ರಯೋಗ:** ಈಗ ಜನಪ್ರಿಯವಾಗುತ್ತಿರುವ ತಂದೂರ್ ಅಡಿಗೆ ಉತ್ತರ ಭಾರತದ್ದು! ಎಂದು ಜನಸಾಮಾನ್ಯರ ನಂಬಿಗೆ. ಆದರೆ ತಂದೂರ್ ಒಲೆಯ ಉಲ್ಲೇಖ ಮಂಗರಸನ ಕೃತಿಯಲ್ಲಿದೆ. ಬೃಹದಾಕಾರಾದ ಕುಂಬಳದಲ್ಲಿ ಬಗೆಬಗೆಯ ಸಂಭಾರ ಜೀನಸುಳಗಳ ಪುಡಿ ತುಂಬಿ, ಮಂದಾಗ್ನಿಯ ಮೇಲೆ ಬೇಯಿಸಿದ ತಂದೂರ್ ವ್ಯಂಜನ ಬಾಳಿಕೆ ಬರುತ್ತಿತ್ತು. ಅದರಂತೆ ಮಣ್ಣಿನ ಮಡಕೆಗೆ ಹೊರಗಿನಿಂದ ಹಸಿಮಣ್ಣು ಮೆತ್ತಿ, ಅದರೊಳಗೆ ಹದಗೊಳಿಸಿದ ಕಣಕ, ತುಪ್ಪ, ಸಕ್ಕರೆ, ವಿವಿಧ ಹಣ್ಣುಗಳಿಂದ ಸಿದ್ಧವಾದ ಮಿಶ್ರಣದ ಪಾತ್ರೆಯನ್ನಿಟ್ಟು ಹದವಾದ ಉರಿಯ ಮೇಲೆ 'ಬೇಕ್' ಮಾಡಿದ 'ಘೃತಪೂರ' ಎಂಬ ತಿಂಡಿಯನ್ನು ಹಲವಾರು ಕಾವ್ಯಗಳು ಹೆಸರಿಸುತ್ತವೆ. ಘೃತಪೂರದ ಪ್ರಕಾರಗಳ ತಯಾರಿಕೆಯನ್ನು ಚಾವುಂಡರಾಯ ಹಾಗೂ ಮಂಗರಸರು ವಿವರಿಸಿದ್ದಾರೆ.[೧೫] ಈ ದೇಶೀ ಓವನ್, ಆ ಬಳಿಕವೂ ಅಲ್ಲಲ್ಲಿ ಬಳಸುತ್ತಿದ್ದಿರಲು ಸಾಕು.

**ಜನಸಾಮಾನ್ಯರ ಆಹಾರ:** ಹಿಂದಿನ ಜನರೆಲ್ಲರೂ ಬಗೆಬಗೆಯ ರುಚಿಕಟ್ಟಾದ ಆಹಾರವನ್ನು ಮೂರೂ ಹೊತ್ತು ಸೇವಿಸಿ ಸುಖವಾಗಿ ಬದುಕುತ್ತಿದ್ದರು, ಎಂದು ನಂಬುವ ಕಾರಣವಿಲ್ಲ. ಸಮಾಜದ ಸಾಕಷ್ಟು ದೊಡ್ಡವರ್ಗ, ಬಡತನದ ಅಂಚಿನಲ್ಲಿ ಕಾಲಕಳೆಯುತ್ತಿತ್ತು. ಜೋಳ, ರಾಗಿ, ಸಜ್ಜೆಗಳ ರೊಟ್ಟಿ ಅಥವಾ ಅಂಬಲಿ, ನುಚ್ಚು, ಗುಗ್ಗರಿ, ಸೊಪ್ಪು, ಎಣ್ಣೆಯ ತೊಟ್ಟುಗಳಿಂದ ಹೊಟ್ಟೆಯನ್ನು ತುಂಬಿಸಿಕೊಳ್ಳುವವರು ಇದ್ದರು. ರಾಘವನಿಗೆ ಪ್ರಿಯವಾದ, ರಾಗಿಯ ಬಗ್ಗೆ ಕನಕದಾಸರು ಮಮತೆ ತಳೆದರು. ಗಂಜಿಯ, ಅಂಬಲಿಯ, ತೌಡು, ನುರುಗು, ಅವಲು, ಅಕ್ಕಚ್ಚು, ಹಾಡದೆಣ್ಣೆಯ ಹೊಟ್ಟು, ನುಚ್ಚುಗಳ ಉಲ್ಲೇಖ ಪ್ರಭುಲಿಂಗ ಲೀಲೆಯಲ್ಲಿ ಬರುತ್ತದೆ.[೧೬] ಎಣ್ಣೆಯ ಹೊಟ್ಟು, ತೌಡು, ನುಚ್ಚುಗಳಿಂದ ಬಡವರಿಗೆ ಭೂರಿ ಭೋಜನವಾಗುತ್ತಿತ್ತು. ಗಂಜಿ, ಗೊಡ್ಡು ಹುಳಿ, ಎಣ್ಣೆ, ಉಪ್ಪಿನ ಕಾಯಿಗಳಿಂದ ದಿನಗಳೆಯುತ್ತಿರುವವರನ್ನು ಕಂಡ ಪುರದಂದರ ದಾಸರು, 'ಕಾಸು ಕಟ್ಟಿಟ್ಟು ಕೇಸಕ್ಕಿ ಉಂಬುವ' ಹಾಗೂ 'ಹುಗ್ಗಿ-ತುಪ್ಪ ಮನೆಯಲ್ಲಿದ್ದಾಗ, ಗುಗ್ಗರಿ-ಅನ್ನ ತಿಂದ' ಕೃಪಣನನ್ನು ಕಂಡು ಮರುಗಿದ್ದರು.

ಹಾಲು, ಹಾಲಕೆನೆ, ಸಕ್ಕರೆ, ಕಿಚ್ಚಡಿಗಳ ವ್ರತ ಕೈಕೊಂಡವರಿದ್ದರೂ 'ಅಂಬಲಿಯ ನೇಮದವರನು ಆರನೂ ಕಾಣೆ!' ಎಂದು ಅಂಥ ಆಷಾಢಭೂತಿಗಳನ್ನು ಬಸವಣ್ಣನವರು ಗೇಲಿ ಮಾಡಿದರು. ಬಿದಿರಅಕ್ಕಿ, ಗಡ್ಡೆಗೆಣಸು, ಹಕ್ಕಿ-ಪಿಕ್ಕಿ, ಕೆಂಚಳಿಲು ಮೂಷಕಾದಿಗಳನ್ನು ತಿಂದು ಬದುಕುವ ಜನ ಅಂದೂ ಇದ್ದರು. ಅಂದೂ-ಇಂದೂ ಅಂತರವಿಷ್ಟೆ, ಅಂದು, ಅನ್ನ

ದೇವರ ಕುರಿತು ಗೌರವ ತೋರುವ ಜನ ಇದ್ದು, ಅಗೀಗ ಅನ್ನ ಸಂತರ್ಪಣೆ ಏರ್ಪಡಿಸಿ, ದೀನದಲಿತರಿಗೆ ಉಣಬಡಿಸುವ ಜನ ಸಾಕಷ್ಟು ಇದ್ದರು. ಶಾಶ್ವತ ಅನ್ನದಾನದ, ಕುಡಿಯುವ ನೀರಿನ ವ್ಯವಸ್ಥೆ ಮಾಡಿದವರು ಇದ್ದರು. ಅದೆಷ್ಟೋ ಶಾಸನಗಳು ಇಂಥ ದಾನಿಗಳನ್ನು ಹೆಸರಿಸುತ್ತವೆ. ಹೊನ್ನಾವರ-ಕೇರಳ ದಾರಿಯಲ್ಲಿ ಅನ್ನ ಛತ್ರಗಳು ಇದ್ದು, ಮ್ಲೇಂಛರಾದಿಯಾಗಿ ಎಲ್ಲ ದಾರಿ ಹೋಕರಿಗೆ ಅನ್ನ-ವ್ಯಂಜನಗಳನ್ನು ಎಲೆಯ ಮೇಲೆ ಇಕ್ಕುತ್ತಿದ್ದರೆಂದು ಇಬ್ನ ಬತೂತನು ಬರೆದಿದ್ದಾನೆ.

ಸಹಸ್ರಾರು ವರ್ಷಗಳಿಂದ ಕ್ರಮವಾಗಿ ಬೆಳೆಸಿಕೊಂಡು ಬಂದ ನಮ್ಮ ಎಷ್ಟೋ ಸಾಂಸ್ಕೃತಿಕ ಪ್ರಕಾರಗಳು ಮಾಯ ಆಗಿವೆ. ಆಹಾರ-ಸಂಸ್ಕೃತಿಯ ಹತ್ತು ಹಲ ಅಂಶಗಳೂ ಕಣ್ಮರೆಯಾಗಿದ್ದರೆ ಆಶ್ಚರ್ಯವಿಲ್ಲ. ಇತ್ತೀಚೆಗೆ ವೈದ್ಯರು ಒತ್ತಿ ಹೇಳುವ ಸತ್ವಯುತ ಆಹಾರ, ಸಮತೋಲ ಆಹಾರ ಹಾಗೂ ಆಧುನಿಕವೆನಿಸುವ ಪಾಕ-ಪ್ರಕಾರಗಳನ್ನು ನಮ್ಮ ಹಿರಿಯರು ಶತಶತಮಾನಗಳ ಹಿಂದೆ ರೂಢಿಸಿಕೊಂಡಿದ್ದರು. ಈ ಕೆಲ ಇಣುಕು ನೋಟಗಳು ಕನ್ನಡಿಗರ ಗತವೈಭವದ ಕಲ್ಪನೆ ಕೊಡುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಗೋವಿಂದಮೂರ್ತಿ ದೇಸಾಯಿ., ೧೯೯೧. **ಹೀಗಿದ್ದರು ಹಣಮಂತರಾಯರು**, ಬೆಂಗಳೂರು. ಪು. ೧೧೩.

೧ಅ. **ವಡ್ಡಾರಾಧನೆ** (ಸಂ: ಡಿ.ಎಲ್. ನರಸಿಂಹಾಚಾರ್) ೫ನೇ ಮುದ್ರಣ., ೧೯೭೨, ಮೈಸೂರು. (ಭದ್ರಬಾಹುಭಟಾರರ ಕತೆ, ಪು. ೭೮.)

೨. **ಪಂಪನ ಆದಿಪುರಾಣಂ**: ಕನ್ನಡ ಸಾಹಿತ್ಯ ಪರಿಷತ್., ೧೯೭೭, ಬೆಂಗಳೂರು. ಅಧ್ಯಾಯ-೯, ಪದ್ಯಗಳು-೧೦೪-೧೨೬.

೩. ಸೋಮೇಶ್ವರ ವಿರಚಿತ **ಮಾನಸೋಲ್ಲಾಸ.**, ೧೯೫೯, (ಸಂ) ಜಿ.ಕೆ. ಶ್ರೀಗೊಂಡೇಕರ, ಬಡೋದಾ, (ಭಾಗ II) ಪದ್ಯಗಳು ೧೪೨೦-೧೪೬೫.

೪. ಚಾವುಂಡರಾಯ ವಿರಚಿತ **ಲೋಕೋಪಕಾರಂ** (ಸಂ). ಎಚ್. ಶೇಷ ಅಯ್ಯಂಗರ್, ಮದ್ರಾಸ ೧೯೫೦, ಅಧ್ಯಾಯ ೮ ಪುಟ ೧೨೦-೧೩೪ (ಲೋಕ).

೫. ಕೆಳದಿ ಬಸವಭೂಪಾಲ ವಿರಚಿತ **ಶಿವತತ್ವರತ್ನಾಕರ:** (ಸಂಸ್ಕೃತ) ಸಂಪುಟ೧- ಕಲ್ಲೋಲ ೬. ಅಧ್ಯಾಯಗಳು (ತರಂಗ ೧೮-೧೯-೨೦).

೬. ಮಂಗರಸ ವಿರಚಿತ ಸೂಪಶಾಸ್ತ್ರ (ಸಂಪಾದಕರು. ಎಸ್.ಎನ್. ಕೃಷ್ಣಜೋಯಿಸ್) ಮೈಸೂರು, ೧೯೬೯: ಕಳಮಾನ್ನಾದಿ ಅಧ್ಯಾಯ: ಪದ್ಯ - ೧-೩೩ (ಸೂಪ).

೭. ಅದೇ: ಅಧ್ಯಾಯ ೪: ೫: ೬. ಪುಟ ೧೩೨-೨೫೨.

೮. ಅದೇ: ಅಧ್ಯಾಯ ೧ ಪಿಷ್ಟಪಾಕಾಧ್ಯಾಯ ಪುಟ ೬-೫೨.

೯. **ಕರ್ಣಾಟಕ ಕವಿ ಚರಿತೆ** (ಸಂಪಾದಕರು: ಆರ್.ನರಸಿಂಹಾಚಾರ್ಯ) ದ್ವಿತೀಯ ಮುದ್ರಣ, ದ್ವಿತೀಯ ಸಂಪುಟ, ಬೆಂಗಳೂರು, ೧೯೭೩. ಪುಟ- ೨೮೭.

೧೦. **ವಿಕ್ರಮಾಂಕಾಭ್ಯುದಯಂ,** ಶ್ರೀ ಸೋಮೇಶ್ವರದೇವ ವಿರಚಿತ (ಸಂಸ್ಕೃತ): ಸಂಪಾದಕರು: ಮುರಾರಿಲಾಲ್ ನಾಗರ್ ಬರೋಡಾ, ೧೯೬೬-ಪುಟ ೧೪.

೧೧. ಕನಕದಾಸರ **ಮೋಹನತರಂಗಿಣಿ:** (ಸಂಪಾದಕರು. ಆರ್.ಸಿ. ಹಿರೇಮಠ) ಧಾರವಾಡ ೧೯೭೩ ಅಧ್ಯಾಯ ೨. ದ್ವಾರಕಾಪುರ ವರ್ಣನೆ; ಪದ್ಯ= ೨೦ (ಮೋಹನ).

೧೨. **ಸೂಪ:** ಪಾನಕಾಧ್ಯಾಯ ಪುಟಗಳು ೫೩-೯೭.

೧೩. **ಲೋಕ:** ಅಧ್ಯಾಯ ೮, ಪದ್ಯ ೪೨, ೪೫, ೪೬.

೧೪. **ಮೋಹನ:** ಪದ್ಯ ೫೭, ಪುಟ ೩೩.

೧೫. The Rehla of Ibn Battuta (Ed. Mahdi Hussain) Baroda 1953, p. 180-181.

೧೬. **ಲೋಕ:** ಅಧ್ಯಾಯ, ೮- ಪದ್ಯ- ೭, ೮, ಪುಟ ೧೨೧.

೧೭. **ಸೂಪ:** ಅನುಬಂಧ ಪುಟ ೨೬೧, ಪದ್ಯ-೨೭.

ಡಾ. ಬಿ.ವ್ಹಿ. ಶಿರೂರ*

# ಹಸ್ತಪ್ರತಿ ಪ್ರಶಸ್ತಿಗಳಲ್ಲಿ ವೀರಶೈವ ಧರ್ಮ

ಮುದ್ರಣ ಸೌಲಭ್ಯವು ಇಲ್ಲದೆ ಇದ್ದ ಕಾಲದಲ್ಲಿ ಒಂದು ಕೃತಿಯನ್ನು ಕೈಯಿಂದ ಬರೆದು (ಹಸ್ತಗಳಿಂದ ಪ್ರತಿಮಾಡಿ) ಕೊಳ್ಳುವ ಪದ್ಧತಿ ಇದ್ದಿತು. ಹಾಗೆ ಪ್ರತಿ ಮಾಡಿಕೊಳ್ಳುವಾಗ ಪ್ರತಿ ಮಾಡುವವರು, ಪ್ರತಿ ಮಾಡಲು ತೊಡಗಿದ ಮತ್ತು ಪ್ರತಿ ಮಾಡಿ ಮುಗಿಸಿದ ಕಾಲ, ತಮ್ಮ ಊರು, ತಂದೆ-ತಾಯಿ, ಪ್ರತಿ ಮಾಡಿಸಿದವರು, ಅವರ ವಂಶಾವಳಿ, ಪ್ರತಿ ಮಾಡಲು ಒದಗಿದ ಕಾರಣ, ಪ್ರತಿ ಮಾಡಿದ ಸ್ಥಳ, ಪ್ರತಿ ಮಾಡಲು ತಗೆದುಕೊಂಡ ಕಾಣಿಕೆ ಇವೇ ಮೊದಲಾದವುಗಳ ವಿವರವನ್ನು ಆ ಹಸ್ತಪ್ರತಿಯ ಆರಂಭದಲ್ಲಿ ಕೆಲಮಟ್ಟಿಗೆ, ಆ ಹಸ್ತಪ್ರತಿಯ ಕೊನೆಯಲ್ಲಿ ಹೆಚ್ಚಿನ ಮಟ್ಟಿಗೆ ಕೊಡುವದುಂಟು. ಅವುಗಳಿಂದ ಅಂದಿನ ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಜೀವನದ ಮೇಲೆ ವಿಶೇಷವಾದ ಬೆಳಕು ಬೀಳುತ್ತಿದೆ. ಸುಮಾರು ೨೦೦-೩೦೦ ವರ್ಷಗಳ ಸಾಮಾನ್ಯರ ಬದುಕಿನ ಈ ವಿವರಣೆ ಶಾಸನಗಳಿಂದಾಗಲಿ, ಕಾವ್ಯಗಳಿಂದಾಗಲಿ, ಇತರ ದಾಖಲೆಗಳಿಂದಾಗಲಿ ತಿಳಿದುಬರುವುದು ಅಸಾಧ್ಯ. ಆದ್ದರಿಂದ ಇವುಗಳಿಗೆ ವಿಶೇಷವಾದ ಪ್ರಾಮುಖ್ಯತೆ. ಇವುಗಳಿಂದ ಆ ಕಾಲದ ಇತಿಹಾಸದಲ್ಲಿ ಕಳಚಿ ಹೋಗಿರಬಹುದಾದ ಕೊಂಡಿಗಳನ್ನು ಬೆಸೆಯಬಹುದಾಗಿದೆ. ಆ ಪ್ರಯತ್ನದ ಒಂದು ಪ್ರಯೋಗ ವೆಂಬಂತೆ ಈ ಹಸ್ತಪ್ರತಿ ಪ್ರಶಸ್ತಿಗಳು ಉಲ್ಲೇಖಿಸುವ ವೀರಶೈವ ಧರ್ಮವನ್ನು ಈಗ ಅವಲೋಕಿಸಬಹುದಾಗಿದೆ.

ವೀರಶೈವ ಧರ್ಮದ ಪೀಠಾಧಿಪತಿಗಳಲ್ಲಿ **ಗುರುವರ್ಗ, ವಿರಕ್ತವರ್ಗ** ಎಂಬ ಎರಡು ವಿಭಾಗಗಳಿದ್ದು ಅವುಗಳಲ್ಲಿ ಗುರುವರ್ಗದ ಪಂಚಪೀಠಗಳಿಗೆ-ಐದು ಗೋತ್ರ, ಐದು ಸೂತ್ರ, ಈ ಒಂದೊಂದು ಸೂತ್ರಕ್ಕೆ ಹನ್ನೆರಡು ಉಪಸೂತ್ರಗಳನ್ನು ಹೇಳಲಾಗುತ್ತಿದೆ. ಅವು ಹೀಗಿವೆ :

೧. **ರಂಭಾಪುರಿ ಸಿಂಹಾಸನ** : ವೀರಗೋತ್ರ, ಪಡ್ವಿಡಿ ಮಹಾಸೂತ್ರ, (ಪಡ್ವಿಡಿ ಬಗಿ), ಪಚ್ಚಕಂಥಾ, ಷಡಂಗ, ಮಹಿಷಿ ಮೊದಲಾದ ೧೨ ಉಪಸೂತ್ರಗಳು.

೨. **ಉಜ್ಜಯನಿ ಸಿಂಹಾಸನ** : ನಂದಿಗೋತ್ರ, ವೃಷ್ಟಿಮಹಾ ಸೂತ್ರ (ಮಳಿ ಬಗಿ), ಲೋಹ ಕಂಥಾ, ಶೃಗಿ, ಮಸಣಿ ಮೊದಲಾದ ಉಪ ಸೂತ್ರಗಳು.

೩. **ಕೇದಾರ ಸಿಂಹಾಸನ** : ಭೃಂಗಿಗೋತ್ರ, ಲಂಬನಮಹಾ ಸೂತ್ರ (ಉದ್ದಾನಬಗಿ), ಗೋಣಿಕಂಥಾ, ದಂತಿ, ಭಗಿನಿ ಮೊದಲಾದ ಉಪಸೂತ್ರಗಳು.

೪. **ಶ್ರೀ ಶೈಲ ಸಿಂಹಾಸನ** : ವೃಷಭಗೋತ್ರ, ಮುಕ್ತಾಗುಚ್ಛ ಮಹಾಸೂತ್ರ (ಮುತ್ತಿನ ಪೆಂಡಿ ಬಗಿ). ಬಸ್ಮೀ, ಶಿಖರಿ, ಮೃತ್ಕಂಥಾ ಮೊದಲಾದ ಉಪಸೂತ್ರಗಳು.

೫. **ಕಾಶೀ ಸಿಂಹಾಸನ** : ಸ್ಕಂದಗೋತ್ರ, ಪಂಚವರ್ಣ ಮಹಾ ಸೂತ್ರ (ಪಂಚವಣ್ಣಿಗಿ ಬಗಿ), ಪಂಚವರ್ಣ, ಕಂಬಾಲ, ವೃಷಭ ಮೊದಲಾದ ಹನ್ನೆರಡು ಉಪಸೂತ್ರಗಳು.

ಇವುಗಳಲ್ಲಿ ಕೆಲವನ್ನು ಹಸ್ತಪ್ರತಿ ಪ್ರಶಸ್ತಿಗಳು ಈ ರೀತಿ ಪ್ರಸ್ತಾಪಿಸುತ್ತಿವೆ.

"ಶ್ರೀಮದ್ರಂಭಾಪುರಿ ವೀರಸಿಂಹಾಸನದ ಸೂತ್ರಾನುವರ್ತಿಗಳಾದ ಹೊನ್ನವಳ್ಳಿಮಠಕ್ಕೆ ಕಾರಣಕರ್ತರಾದ ಪಟ್ಟದ ಗುರುಪಾದಸ್ವಾಮಿಗಳವರ ಪಾದಕ್ಕೆ ಅವರ ಶಿಷ್ಯನಾದ ಕೊಲ್ಲೂರು ಶ್ರೀ ಮಠದ ಹುತ್ತಯ್ಯನ ಮಗ ಸಿದ್ಧಲಿಂಗಯ್ಯನು ಬರದು ವಪ್ಪಿಸಿದ ವಾತುಲಾಗಮ ಪರಿಸಮಾಪ್ತ" (ಬಸವ ಪಥ-? ಪು. ೭೩).

ಶ್ರೀಮದ್ದುಜಯನಿ ಸದ್ಧರ್ಮ ಸಿಂಹಾಸನಾಧೀಶ್ವರ ಗುರುಸಿದ್ಧ ದೇಶಿಕೇಂದ್ರ ಮಹಾಸ್ವಾಮಿನಾಂ ಚರಣಾರವಿಂದಗಳಿಗೆ ಭಕ್ತಿಪೂರ್ವಕವಾಗಿ ಬರದುಕೊಟ್ಟಂಥದು ಕೊಟ್ಟರುವೊ॥ ಗಂಗಮ್ಮನಹಳ್ಳಿ ಮಠದ ಬಸವಲಿಂಗಪ್ಪ ಶುಭಸ್ತ ಬಗಹ (ಕ.ಭಾ.೧೯೮೩, ಕೈವಲ್ಯಸಾರ ಟೀಕು. ನಂ. ೧೩೩).

ಹೀಗೆ ಇಲ್ಲಿ ರಂಭಾಪುರಿ ಮತ್ತು ಉಜ್ಜಯಿನಿ ಪೀಠಗಳು ಉಲ್ಲೇಖಗೊಂಡಿವೆ.

* ನಂ.೧೩, ಮಂಜುನಾಥನಗರ, ಹುಬ್ಬಳ್ಳಿ.

ಈ ಪ್ರತಿಯೊಂದು ಪೀಠಕ್ಕೂ ವಂಶದ ಮೂಲಪುರುಷ ಎಂಬಂತೆ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಐದು ಜನ ಶಿವಗಣರನ್ನು ಕಲ್ಪಿಸಿರುವರು. ಶ್ರೀ ತೊರಗಲ್ಲ ಗಚ್ಚಿನ ಹಿರೇಮಠದಲ್ಲಿ ಪಟ್ಟದಾರ್ಯರ ಶಿಷ್ಯೋತ್ತಮರಾದ ನಿಡುಮಾಮಿಡಿ ಕರಿಬಸವಸ್ವಾಮಿಯವರ ಅಂಶೋದ್ಭವರಾದ ಬಸವಪ್ಪನವರ ಆತ್ಮಜರಾದ ಶಂಕ್ರಪ್ಪನವರ ಗರ್ಭವಾರುಧಿ ಚಂದ್ರ ಪಡ್ವಿಡಿ ಸೂತ್ರದ ವೀರೇಶಗೋತ್ರದ ಶ್ರೀ ರೇವಣ ಸಿದ್ಧೇಶ್ವರ ಸಂಪ್ರದಾಯಕರಾದ ಬೈಲಹೊಂಗಲ ಮಠದ ಬಾಲಕನಾದ ಷಣ್ಮುಖಯ್ಯನು ಬರೆಕೊಟ್ಟದ್ದು (ಚನ್ನಬಸವೇಶ್ವರ ದೇವರ ಪುರಾಣ– ಶ್ರೀ ಜ. ಮೂರುಸಾವಿರಮಠ ಹಸ್ತಪ್ರತಿ ಸೂಚಿ. ಹುಬ್ಬಳ್ಳಿ–ಪು. ೮೬).

* "ರೇಣುಕಗೋತ್ರ ಸಂಭೂತರಾದ ತೋಟದ್ಯವರ ಕೈಲಿಂದಾಗ್ರಂಥ ಲಿಖಿತಮಕ್ಕುಂ (ವಿವೇಕ ಚಿಂತಾಮಣಿ. ಕ. ಅ. ಪೀಠ. ೪೦೧೮).

ಈ ಪ್ರತಿಯೊಂದು ಪೀಠಕ್ಕೂ ಧರ್ಮದ ವಿಧಿ–ವಿಧಾನಗಳನ್ನು ಸಂಕ್ಷಿಪ್ತವಾಗಿ ಹೇಳುವ ಸೂತ್ರ ಅಥವಾ ಬಗಿಗಳಿವೆ (ಪಡ್ವಿಡಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ ಹಾಗೂ ಪಂಚವರ್ಣ). ಅವುಗಳನ್ನು ಈ ಪ್ರಶಸ್ತಿಗಳು ಪ್ರಸ್ತಾಪಿಸುತ್ತಿವೆ.

* "ಸುರಪುರದ ತೆಳಗಣಗ್ರಾಮದ ಪಾತವಡಗೇರಿ ಬುಜುರುಕಮಠದ ಮಳಿಬಗಿಲತೀತ ಹಾವಿನಾಳ ಕಲ್ಲಪ್ಪ ದೇವರು ಸ್ವದಸ್ತೂರ (ಬಸವಣ್ಣನವರ ಟೀಕಾವಚನ ಗಳು–ಗು.ವಿ.ವಿ.ನಂ.೨೬೭).
* "ನಿಡುಮಾಮಿಡಿ ಕರಿಬಸವಸ್ವಾಮಿಯವರ ವಂಶ ಪಾರಂಪರಿಯಲ್ಲಿ ಜನಿಸಿದ ಶ್ರೀರೇವಣಸಿದ್ಧೇಶ್ವರರ ಸಂಪ್ರದಾಯಕರಾದ ಪಡ್ವಿಡಿಸೂತ್ರದ ವೀರಶೈವ ಗೋತ್ರದ ಕಿತ್ತೂರದೇಶದ ಬೈಲಹೊಂಗಲಮಠದ ಶಂಕ್ರಪ್ಪನವರ ಆತ್ಮಜರಾದ ಷಣ್ಮುಖಯ್ಯನಿಂದ ಬರೆಯ ಲ್ಪಟ್ಟಿತು. (ಬಸವ ಪುರಾಣ ಮೈ.ವಿ.ವಿ.ಹಸ್ತ ಪ್ರತಿಸೂಚಿ. ೧೦೨೬).

ಈ ಪ್ರತಿಯೊಂದು ಸೂತ್ರಕ್ಕೆ ೧೨ ಉಪಸೂತ್ರಗಳನ್ನು ಕಲ್ಪಿಸಿದ್ದು, ಅವುಗಳ ಉಲ್ಲೇಖವೂ ಕೆಲವು ಪ್ರಶಸ್ತಿಗಳಲ್ಲಿ ಬರುತ್ತಿವೆ.

* "ಬರೆದವರಾರೆಂದರೆ ನರೇಗಲ್ಲ ಕಲ್ಲಮಠದ ಬಗಿ ಹುಲಿಕಂತಿಪರಾಮರಿ ಘನಲಿಂಗ ಚರಮೂರ್ತಿಗಳಾದ ಸಿದ್ರಾಮಪ್ಪನವರ ಶ್ರೀಪಾದಕಮಲಕ್ಕೆ ಭ್ರಮ ರೋಪ ಮಾನರಾದ ಚನ್ನಮಲ್ಲಮುರಿಯ" (ಪ್ರಭುಲಿಂಗ ಲೀಲೆ ಗು.ವಿ.ವಿ.ನಂ.೨೦೭).
* "ಮುಳ್ಳಕೆರೆ ಮಠದ ಕಂಬಿಣಕಂತೆ ಚರಮೂರ್ತಿಗಳು ಕೆಂಪಿನ ನಂಜೇಸ್ವಾಮಿಯವರ ಶಿಷ್ಯ ಸಿದ್ಧನಂಜಪ್ಪ" (ಹಿರಿಯಮಂತ್ರಗೋಪ್ಯ–ಕ. ಅ. ಪೀಠ, ೨೭೨೧/ ೭೨).
* "ಮರಕತಕಂಥಿ ಶ್ರೀ ಗುರುದೇಶಿಕೇಂದ್ರರ ಕರಕಮಲದಲ್ಲಿ ಸಂಜನಿತವಾದ ವೃಷಭಲಿಂಗದೇವರು" (ಬಸವೇಶ್ವರ ದೇವರ ಪುರಾಣ. ಕ. ಅ. ಪೀಠ. ೩೧೪೩).

ಈ ಪೀಠ ಪರಂಪರೆಯ ಮಠಗಳು ಊರೂರಿಗೆ ಇರುತ್ತಿದ್ದವು. ಅವನ್ನು ಹಿರೇಮಠ, ಜುಕ್ತಿಮಠ; ಮುತ್ತಿನ ಪೆಂಡಿಮಠ, ಮುಂತಾಗಿ ಕರೆಯುತ್ತಿದ್ದರು. ಈ ಮಠಗಳಿಗೆ ಊರಲ್ಲಿಯೇ ನೆಲೆನಿಂತು ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದವರು, ಸ್ಥಿರಪಟ್ಟಾಧ್ಯಕ್ಷರು. ಊರೂರು ಅಲೆದು ಧಾರ್ಮಿಕ ಜಾಗ್ರತಿಯನ್ನುಂಟುಮಾಡುತ್ತಿದ್ದವರು, ಚರ ಪಟ್ಟಾಧ್ಯಕ್ಷರು. ಮೇಲಿನ ಹಿರಿಯ ಮಂತ್ರಗೋಪ್ಯದಲ್ಲಿ ಚರಮೂರ್ತಿಗಳು ಕೆಂಪಿನ ನಂಜೇಸ್ವಾಮಿಯವರ ಪ್ರಸ್ತಾಪ ಬಂದಿದೆ. ಕೆಲವು ಮಠಗಳು ಶಿಷ್ಯ ಪರಂಪರೆಯವಿದ್ದರೆ ಇನ್ನು ಕೆಲವು ಪುತ್ರ ಪರಂಪರೆಯವಿದ್ದವು.

**ಶಿಷ್ಯ ಪರಂಪರೆಯ ಮಠಕ್ಕೆ ಉದಾಹರಣೆ :**

* "ಮರಕತಕಂಥಿ ಶ್ರೀ ಗುರುಸಿದ್ಧದೇಶಿಕೇಂದ್ರರ ಕರ ಕಮಲ ದಲ್ಲಿ ಸಂಜನಿತವಾದ ವೃಷಭಲಿಂಗದೇವರು" (ಬಸವೇಶ್ವರ ಪುರಾಣ. ಕ.ಅ.ಪೀ.ನಂ.೩೧೪೩).

**ಪುತ್ರಪರಂಪರೆಯ ಮಠಕ್ಕೆ ಉದಾಹರಣೆ :**

* "ಪೂಜೆ ಹಿರೇಬಾದವಾಡಿಯ ಮಠಾಧಿಕಾರಿಗಳಾದ ಸಂಗಪ್ಪಯ್ಯನವರ ಪುತ್ರನಾದ ಶಿವಯ್ಯನು" (ಸಿದ್ಧ ರಾಮೇಶ್ವರನ ಕಾವ್ಯ, ಕ.ಅ.ಪೀಠ.ನಂ.೨೯೮೧).

ವಿರಕ್ತಪೀಠ ಪರಂಪರೆಯ ಹಲವು ಶರಣರೂ ಹಲವು ಪ್ರಶಸ್ತಿಗಳಲ್ಲಿ ಪ್ರಸ್ತಾಪಗೊಂಡಿದ್ದಾರೆ. ಅವರಲ್ಲಿ ಅಲ್ಲಮ ಬಸವೇಶ್ವರ, ಚೆನ್ನಬಸವಣ್ಣ, ಕಿನ್ನರಿಬ್ರಹ್ಮಯ್ಯ, ದೇವರದಾಸಯ್ಯ ತೋಂಟದ ಸಿದ್ಧೇಶ್ವರ ಮೊದಲಾದವರನ್ನು ಹಲವು ಹಸ್ತ ಪ್ರತಿ ಲಿಪಿಕಾರರು ನೆನೆದಿದ್ದಾರೆ.

* "ಶ್ರೀ ಮದಲ್ಲಮಪ್ರಭುವಿನ ಸಂಪ್ರದಾಯ ವಿಡಿದೊಪ್ಪುವ ಸುತೀಗಾವಿ ಶಿವಾನುಭವ ಚರವರ್ಯ ಭಕ್ತಿಜ್ಞಾನ ವೈರಾಗ್ಯವಿಡಿದಾಚರಿಸುವಂಥಾ ಶಾಂತವೀರಸ್ವಾಮಿಗಳ ಪಾದ ಕಮಲಕ್ಕೆ (ವಿಶೇಷಾನುಭವ ಷಟ್ಸ್ಥಲ ಬೆಂಗಳೂರು ವಿಶ್ವವಿದ್ಯಾಲಯ ಸೂ.ಸಂ. ೧.೩೦೬).
* "ಶ್ರೀ ಬಸವೇಶ್ವರ ದೇವರ ಸಾಂಪ್ರದಾಯಿಕರಾದಂಥ ರಾಜ್ಯಮಾನ್ಯರಾ ಮರಿಯಾಣ ಬುಳ್ಳನಗೌಡರು (ಸೋ. ಶ.ದ. ಟೀಕೆ. ಕ.ಅ.ಪೀಠ ೩೬೨೮/೧)

* "ಚೆನ್ನಬಸವೇಶ್ವರ ಸಾಂಪ್ರದಾಯಿಕರಾದ ಸೊಡ್ಡಳಸ್ವಾಮಿಯವರ ಪಾದಕ್ಕೆ ಶ್ರೀಮತು ರಾಜಶ್ರೀ ರಾಜಮಾನ್ಯರಾದ ಷಡಾಕ್ಷರೆಯ್ಯನವರ ಪುಣ್ಯಸ್ತ್ರೀ ಮಲ್ಲವ್ವನ ಭಕ್ತಿ. (ಹಿರಿಯ ಮಂತ್ರಗೋಪ್ಯ-ಶ್ರೀ ಮಂಜುನಾಥೇಶ್ವರ ಸಂಸ್ಥಾನ ಪ್ರತಿಷ್ಠಾನ, ಧರ್ಮಸ್ಥಳ ೧೫೭/೭)
* "ದೇವರ ದಾಸ್ಯೆಯ್ಯನ ಸಾಂಪ್ರದಾಯಿಕ ಚಿತ್ತಾಪುರದ ಅಮಾತಪ್ಪನವರಿಗೆ (ಕನ್ನಡ ಹಸ್ತಪ್ರತಿಗಳು-ಒಂದು ಅಧ್ಯಯನ ಪು.೧೨೩).
* "ಕಲ್ಯಾಣದ ಕಲಬುರ್ಗಿಯ ನಡುಮಧ್ಯದ ಗ್ರಾಮವಾದ ಗೌಡನಹಳ್ಳಿ ಕಿಂನರಿ ಬ್ರಹ್ಮಯ್ಯನ ಸಾಂಪ್ರದಾಯಕರಾದ ಮಲ್ಲಪ್ಪನವರ ಪುತ್ರನಾದ ಬಸವಪ್ಪನು ಬರೆದ ಭೈರವೇಶ್ವರ ಕಾವ್ಯದ ಕಥಾರತ್ನಾಸೂತ್ರಕರ. (ಮೈ.ವಿ. ಸಂ.೭.ನಂ.೩೭೯).
* "ತೋಂಟದ ಸಿದ್ಧೇಶ್ವರದ ಸಾಂಪ್ರದಾಯಿಕರಾದ ಚರ ಮೂರ್ತಿ ಮಹೇಶ್ವರರಾದ ಶಾಂತಮಲ್ಲಸ್ವಾಮಿಯವರ ಕರಕಮಲೋದ್ಭವರಾದ ಚೆನ್ನವೀರಸ್ವಾಮಿಯವರ (ಸಕಲ ಪುರಾತನರ ವಚನಗಳು. ಕ.ಅ.ಪೀ.೨೬೪೫/೪).
* "ಚಿತ್ತರಗಿ ಹಿರೇಮಠದ ಮುಪ್ಪಿನಸ್ವಾಮಿಗಳ ಶಿಷ್ಯ ಶ್ರೀಮತು ಸಜ್ಜನಶುದ್ಧ ಶ್ರೀ ಬಸವೇಶ್ವರ ಸಾಂಪ್ರದಾಯಿಕ ಶಿವಭಕ್ತ ಶಿರೋಮಣಿ ಗುರುಲಿಂಗ ಜಂಗಮ ಪ್ರೇಮಿ ಬೆಪ್ಪರಡ್ಡಿಸಂಗನ ಬಸಪ್ಪನು ತನ್ನ ಸುಹಸ್ತದಿಂದ ತನ್ನ ಮನೋಪ್ರೀತಿಯಲ್ಲಿ ವೋದಿ ಹೇಳಬೇಕೆಂದು ಬರದನು (ಕ.ಭಾ.೧೯೮೩. ಅ.ನ.ಪು.-೬೭).

ಇವರಿರುತ್ತಿದ್ದ ಮಠಗಳನ್ನು ಸಾಮಾನ್ಯವಾಗಿ ವಿರಕ್ತಮಠಗಳೆಂದೆ ಕರೆಯುತ್ತಿದ್ದರು. ವಿಭ್ರಾಮಪುರದ ವಿರಕ್ತ ಗುರು ನಂಜೇದೇವರ ಮಠದಲ್ಲಿ (ಲಿಂಗಲೀಲಾವಿಲಾಸ ಚಾರಿತ್ರ ಕ.ಅ.ಪೀಠ ಸಂ.೭.೨೦೫). ಕಂದಗಲ್ಲ ವಿರಕ್ತಮಠದಲ್ಲಿ ಮುಕ್ತಾಯವಾಯಿತು. (ಷಟ್ಸ್ಥಲ ಜ್ಞಾನಸಾರಾಮೃತ. ಕ.ಅ.ಪೀ.೨೬೩೭/೯).

ಈ ಮಠದ ಸ್ವಾಮಿಗಳ ಶಕ್ತಿ ಸಾಮರ್ಥ್ಯ, ಗುಣ ಸ್ವಭಾವಗಳನ್ನು ಕೆಲವು ಪ್ರಶಸ್ತಿಗಳು ಹೇಳುತ್ತಿವೆ. "ಶ್ರೀಮಧೇಸಿಬಾ ವೀರಶೈವ ಸಿದ್ಧಾಂತ ಸ್ಥಾಪನಾಚಾರ್ಯ ಷಟುಸ್ಥಲ ಚಕ್ರವರ್ತಿ ಮಾಯಾಕೋಳಾಹಳ ವಿರಕ್ತಶಿಖಾಮಣಿ ಶ್ರೀಮನ್ಮುರಿಗಿ ವಿರೂಪಾಕ್ಷಸ್ವಾಮಿಗಳ ಅಂಗೋದ್ಭವರಾದ ಮದ್ಗುರುವರೇಣ್ಯರಾದ ಶತ್ರುಜನಮರ್ದಿನಿಗಳಾದ ಲಿಂಗ ಪೂಜಾಧುರಂಧರರಾದಂತ ಸೊಂನಲಾಪುರ ಮಟಕ್ಕೆ ಕಾರಣ ಕರ್ತ್ರುಗಳಾದ ಜ್ವಲತ್ಕಂಠ ದೇಸಿಕೇಂದ್ರ ಚೆನ್ನಬಸಪ್ಪನವರು" ನೂರೊಂದು ಸ್ಥಲ(ಗು.ವಿ.ವಿ.೬೫).

"ಶ್ರೀ ಮದ್ಗುರು ಕುಲವಂಷಾಬ್ಧಿಪೂರ್ಣ ಚಂದ್ರಾನ್ವಯ ದೀಕ್ಷೀತಾರೂಢ ಕಾಶಿ ಪೊಂಪಾಕ್ಷೇತ್ರ ಗೌತುಮಾಶ್ರಮ ಅಗ್ಗಳೆ ಅಂತರವಳ್ಳಿ ತ್ರಿತಯರತ್ನರತ್ನ ಪ್ರಥಮಾರೂಢಾಚಾರ್ಯ ಚಿಕ್ಕೇಶ್ವರ ಮುನಿವರೇಣ್ಯ ಅಸ್ತಂಗತ."

ಮಠಕ್ಕೆ ಅಧಿಪತಿಯಾಗುವ ಪೂರ್ವದ ಅವಸ್ಥೆಯನ್ನು ದೇವರು, ಮರಿ ಎಂದು ಕರೆಯುತ್ತಿದ್ದರು. ಉದಾ. ರುದ್ರ ದೇವರು, ಮುತ್ತಿನಪೆಂಡಿದೇವರು ಇತ್ಯಾದಿ. ಇವರು ಅನುಷ್ಠಾನದ ಜೊತೆಗೆ ವಿದ್ಯಾಭ್ಯಾಸವನ್ನು ಮಾಡುತ್ತಿದ್ದರು. ಹೀಗಾಗಿ ಇವರು ಪ್ರತಿ ಮಾಡಿರುವ ಕೃತಿಗಳೇ ನಮಗೆ ಹೆಚ್ಚಿಗೆ ದೊರೆಯುತ್ತಿವೆ.

ಹೀಗೆ ಸುಮಾರು ಮೂರುನೂರು ವರ್ಷಗಳ ಕಾಲ ದಿಂದಲೂ ಪ್ರಚಲಿತದಲ್ಲಿದ್ದ ಆ ಹಿಂದಿನ ವೀರಶೈವ ವ್ಯವಸ್ಥೆಯ ಮೇಲೆ ಈ ಪ್ರಶಸ್ತಿಗಳು ಬೆಳಕು ಚೆಲ್ಲುತ್ತಿರುವುದು ಇದರಿಂದ ವಿದಿತವಾಗುತ್ತದೆ.



*The old needs the company of the young so that they renew their contact with life*

**- Indira Gandhi**



*The darkness of centuries is disposed as soon as a light is brought into a room. The accumalated sins of countless lives vanish by a single glance of God.*

**- Sri Ramakrishna Paramahamsa**

ಜಯದೇವಪ್ಪ ಜೈನಕೇರಿ*

# ಕೆಳದಿ ಅರಸರ ನಾಗರಿ ಲಿಪಿಯ ಎರಡು ಅಪ್ರಕಟಿತ ನಿರೂಪಗಳು

ಕೆಳದಿ ಇತಿಹಾಸಕ್ಕೆ ಸಂಬಂಧಿಸಿದಂತೆ ಇದುವರೆಗೆ ಸುಮಾರು ಏಳುನೂರಕ್ಕೂ ಹೆಚ್ಚು ಶಾಸನಗಳು, ನಿರೂಪಗಳು ಪ್ರಕಟವಾಗಿವೆ. ಅದರೂ ಅಪ್ರಕಟಿತವಾಗಿರುವ ಸಾಕಷ್ಟು ನಿರೂಪಗಳು ಇನ್ನೂ ಅಲ್ಲಲ್ಲಿ ದೊರಕುತ್ತಿವೆ. ಈಚೆಗೆ ಹೊಸನಗರ ತಾಲ್ಲೂಕಿನ ನಿಟ್ಟೂರು ಎಂಬಲ್ಲಿ ದೊರೆತ ತಾಳೆಯೋಲೆ ಹಸ್ತಪ್ರತಿಯಲ್ಲಿ ಸಾಕಷ್ಟು ನಿರೂಪಗಳು ಇರುವುದಾಗಿಯೂ ಅವು ಅಪ್ರಕಟಿತವೆಂದು ತಿಳಿದುಬರುತ್ತದೆ. (ಡಾ. ಕೆಳದಿ ವೆಂಕಟೇಶ ಸಂಗ್ರಹಿಸಿ ಸಂಪಾದಿಸಿದ್ದಾರೆ) ಅಂತಹವುಗಳಲ್ಲಿ

(೧) ತೀರ್ಥಮತ್ತೂರು ಸ್ವಾಮಿಗಳಿಂದ ಬಂದ ನಿರೂಪ ಮತ್ತು

(೨) ಹಳವೆ ಸ್ವಾಸ್ಥೆ ವಕ್ಕಲು ಬರಕೊಟ್ಟ ಚೀಟು ವಾಲೆ ಗಮನ ಸೆಳೆಯುತ್ತವೆ.

**ಮೊದಲ ನಿರೂಪ :** ಇದು ತೀರ್ಥಮತ್ತೂರು ಸ್ವಾಮಿಗಳಿಂದ ಬಂದದ್ದಾಗಿದೆ. ನಾಗರಿ ಲಿಪಿಯಲ್ಲಿರುವ ಈ ನಿರೂಪ ಕನ್ನಡ ಭಾಷೆಯಲ್ಲಿದೆ. ಈ ನಿರೂಪದ ಕಾಲ ಶಾ.ಶ. ೧೬೦೯ ಅಂದರೆ ಕ್ರಿ.ಶ. ೧೬೮೭ ಅಕ್ಷಯ ಸಂವತ್ಸರದ ಮಾಘ ಶು ೧೫. ಈ ನಿರೂಪವನ್ನು ತೀರ್ಥಮತ್ತೂರು ನರಸಿಂಹಭಾರತಿ ಸ್ವಾಮಿಗಳು ಬೊಕ್ಕಸದ ಶ್ರೀನಿವಾಸಯಗೆ ಅವರು ತುಂಗಭದ್ರಾ ತೀರದಲ್ಲಿ ಕಟ್ಟಿಸುವ ಚೆನ್ನ ಮುಂಬಾಪುರದ ಚನ್ನಸೋಮೇಶ್ವರ ದೇವರ ಅಮೃತಪಡಿ, ನಂದಾದೀಪದ ಬಗ್ಗೆ ತೀರ್ಥರಾಜಪುರ ಮಠದಿಂದ ಕಾಲ ಕಾಲಕ್ಕೆ ಶಿವಾರ್ಪಿತವಾಗಿ ನಡಸಲು ಗದ್ಯಾಣ ೪ ವರಹವನ್ನು ನೆಡಸಿಕೊಂಡು ಬಂದಿರುವುದಾಗಿ ಬರಕೊಟ್ಟ ನಿರೂಪವಾಗಿದೆ.

**ಎರಡನೆಯ ನಿರೂಪ :** ಬೊಕ್ಕಸದ ವೆಂಕಟಪತಿ ಅಯ್ಯನವರಿಗೆ ಹೆಗ್ಗದ್ದೆ ಶ್ರೀಧರ ಪರಮೇಶ್ವರ ಹೆಗ್ಗಡೆಯು ಕೊಟ್ಟ ನಿರೂಪದ ಪ್ರತಿಯಾಗಿದೆ. ನಂಮ ಅರಸುಗಳು ಅಂದರೆ ಕೆಳದಿ ಅರಸು ತಿಂಮಣಾಚಾರ್ಯರಿಗೆ ಗೋಧರ್ಮಸ್ವವಾಗಿ ಕೊಟ್ಟ ಹೆಗ್ಗದ್ದೆ ಗ್ರಾಮದ ಒಳಗಿನ ಹಿತ್ತಲು ಕೈಯ ಭೂಮಿಯನು ತಾನು ಅನುಭವಿಸಿಕೊಂಡು ಬರುತ್ತಿದ್ದುದಾಗಿಯೂ ಅದನ್ನು ಆಳ ಬೀಲು ಹಾರ ಹಗುರವ ಮಾಡಿ ಕೊಡುವಂತೆ ಕೇಳಿದ್ದರಿಂದ ಅರಮನೆಯಲ್ಲಿ ಒಡಂಬಡಿಕೆ ಮಾಡಿಕೊಟ್ಟ ರೀತಿ ನಡೆದು ಬರುವಂತೆ ಬರದು ಕೊಟ್ಟ ನಿರೂಪ.

ಮೇಲಿನ ಎರಡೂ ನಿರೂಪಗಳು ಕೆಳದಿ ಅರಸರ ಕಾಲಕ್ಕೆ ಸೇರಿದ್ದು ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲಲು ಸಹಕಾರಿಯಾಗಿದೆ.

*ಗರಿ ೯೦ ಮುಂಭಾಗ :*

- ತೀರ್ಥಮತ್ತೂರು ಸ್ವಾಮಿಗಳಿಂದ ಬಂದ ಗ ೪ ವರಹದ ಸ್ವಾಸ್ಥೆ ಪಟ್ಟಿ ಪ್ರತಿ

*ಹಿಂಭಾಗ :*

- ತೀರ್ಥಮತ್ತೂರು ಸ್ವಾಮಿಗಳಿಂದ ಬಂದ ೪ ವರಹಾನ ಸ್ವಾಸ್ಥೆ ಕನ್ನಡ ಬರಹದ ಪಟ್ಟಿ ಪ್ರತಿ ಯಡಮಾನಿ
- ಶುಭಮಸ್ತು ಶ್ರೀ॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೂಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ಸಾ ೧೬೦೯ ಸಾವಿರದ ಆರು
- ನೂರ ಒಂಭತ್ತನೆಯ ಅಕ್ಷಯ ಸಂವತ್ಸರದ ಮಾಘ ಶು ೧೫ ಯಲು ಶ್ರೀಮತು ತೀರ್ಥಮತ್ತೂರ ನರಸಿಂಹ ಭಾರತಿ ಸ್ವಾಮಿಗಳು ಬೊಕಸದ ಶ್ರೀನಿವಾಸಯಗೆ ಕೊಟ್ಟ ಪಟ್ಟಿ ಕ್ರಮವೆಂತೆಂದರೆ ನೀವು ತುಂಗಭದ್ರಾ ತೀರದಲ್ಲಿ ಕಟ್ಟಿಸುವ ಚನ್ನಮುಂಬಾಪುರದ ಚನ್ನಸೋಮೇಶ್ವರ ದೇವರ ಅಮೃತಪಡಿ ನಂದಾದೀಪ ಬಗ್ಗೆ ನಂಮ ಮಠದ ದರ್ಮದಿಂದ ಕಾಲಕಾಲಂ ಪ್ರತಿಯಲು ಶಿವಾರ್ಪಿತವಾಗಿ ನಡಸಿ ಬಾಹದು
- ಗ ೪ ನಾಲ್ಕು ವರಹ। ನ್ನು ನಡಸಿಕೊಂಡು ಬಂದೇವು ಯಂದು ಬರಕೊಟ್ಟ ಪಟ್ಟಿ ಇದಕ್ಕೆ ಸಾಕ್ಷಿಗಳು। ಮುತ್ತುವಳ್ಳಿ

* ೮೭, ಶಾಂತಲ, ಕುವೆಂಪು ರಸ್ತೆ, ಜಿಲ್ಲಾ ಪಂಚಾಯತ್ ಎದುರು ಶಿವಮೊಗ್ಗ – ೫೭೭ ೨೦೧.

ಹರಿಭಟ್ಟರು। ತೀರ್ಥಮತ್ತೂರು ಶಂಕರನಾರಾಯಣ ಪುರಾಣಿಕರು। ಕತ್ರುವಿನ ವಪ್ಪಿತ।

- ತುಳು ಬರಹದಲ್ಲಿ ಶ್ರೀ ನರಶಿಂಹ ಭಾರತಿಗಳು ಯೆಂದು ಬರಹವ ಹಾಕಿ ಅದೆ। ಸಾಕ್ಷಿಗಳು। ಮುತ್ತುವಳ್ಳಿ ಹರಿಭಟ್ಟನ ಸಾಕ್ಷಿ ಶಂಕರನಾರಯಣ ಪುರಾ।
- ಣಿಕನ ಸಾಕ್ಷಿ ಯಿ ಪಟ್ಟಿಯ ಬರದಾತ ಮಠದ ಪರಮೇಶ್ವರಭಟ್ಟರ ಮಗ ಶಂಕರನಾರಯಣ ಭಟ್ಟರ ಮಗ ರಮೇಶ್ವರ ಭಟ್ಟ.

*ಗರಿ ೧೨೮ ನಾಗರಿ*

ಹಳವೆ ಸ್ವಾಸ್ಥೆ ವಕ್ಕಲು ಬರಕೊಟ್ಟ ಚೀಟು ವಾಲೆ ಪ್ರತಿ ಬಳ್ಳಿ

- ಕ್ರೋಧನ ಸಂವತ್ಸರದ ಮಾರ್ಗಶಿರ ಭ ೧೩ ಯಲ್ಲು ಶ್ರೀಮತು ಬೊಕಸದ ವೆಂಕಟಾಪತಿ ಅಯ್ಯನವರಿಗೆ ಹೆಗ್ಗದ್ದೆ ಶ್ರೀಧರನ ಪರಮೇಶ್ವರ ಹೆಗ್ಗಡೆಯು ಕೊಟ್ಟ ವಾಲೆ
- ಕ್ರಮವೆಂತೆಂದರೆ ನಂಮ ಅರಸುಗಳು ನಿಂಮ ತಿಂಮಣಾಚಾರ್ಯರಿಗೆ ಗೋಧರ್ಮಸ್ವವಾಗಿ ಕೊಟ್ಟ ಹೆಗ್ಗದೆ ಗ್ರಾಮದ ವಳಗಣ ಹಿತ್ತಲ ಕೈಯ ಭೂಮಿನು ನಾನು ಆಳಿ ಅನುಭವಿಸಿ
- ಕೊಡು ತೆರುತಿತ್ತು ಬರುತಿದ್ದಲ್ಲಿ ಆಳ ಬೀಳು ನನಗೆ ಹಾರ ಹಗುರವ ಮಾಡಿ ಕೊಡಬೇಕೆಂದು ಕೇಳಿಕೊಂಡ ಸಂಬಂಧ ನೀವು ಮಾಡಿಕೊಟ್ಟ ವಡಂಬಡಿಕೆ ಅರಮನೆ ಯಲ್ಲಿ ಬರಕೊ
- ಟ್ಟ ಪ್ರಮಾಣೂ ತೆರು ಗ ೨೪ ಕ್ಕೆ ಮಾಡಿಕೊಟ್ಟ ಅಳವೇತ ಸಂವತ್ಸರಕ್ಕೆ ಕೊಡುವುದು ಗ ೧೫ ಆ ಮುಂದೆ ಜಯ ಸಂವತ್ಸರಕ್ಕೆ ಅಳವೆ ೧ ಕ್ಕೆ ಗ ೧ ಆ ಮುಂದೆ ಪ್ರಭ
- ವ ಸಂವತ್ಸರದ ಯರಡರಲ್ಲು ವರ್ಷ ೪ ಗೆ ಗ ೮ ಉಭಯಂ ಅಳವೆ ೫ ಕೆ ಗ ೯ ಉಭಯಂ ಸಿಸ್ತು ಗ ೨೪ ಇಪ್ಪತ್ತು ನಾಲ್ಕು ವರಹನ ಭೂಮಿಯಂನು ಕಾಲವಂದಕೆ ಮಾನೆಂದು ಅರ್ಧಾಯ ಭೂಮಿಗೆ ಸಸಿ ಬಾಳೆ ನೆಟ್ಟು ಅಗತೆ ಮಾಡುವಲು ನೆತ್ತಿ ಕಟ್ಟು ಮುಂತಾಗಿ ಯೆನು ಉಂಟಾದ ಕೆಲಸವನು
- ಕಾಲಕಾಲಂ ಪ್ರತಿಯಲು ಗೈದು ನೆತ್ತಿರೂಪ ಮಾಡಿ ಕೊಂಡು ಬರದು ಅಳವೆ ಪ್ರಮಾಣಿನ ತೆರನು ನಷ್ಟ ಕಷ್ಟವೆನ್ನದೆ ಕಾಲಕಾಲಂ ಪ್ರತಿಯಲ್ಲು ತೆತ್ತು
- ಬಾಹೆನು ಯೆಂದುಕೊಟ್ಟ ವಾಲೆರನ ಬರಹ

(ಈ ನಿರೂಪಗಳು ಡಾ. ಕೆಳದಿ ವೆಂಕಟೇಶ ಅವರ ಸಂಗ್ರಹದಲ್ಲಿದ್ದು, ಅಪ್ರಕಟಿತವಾಗಿರುವ ಈ ನಿರೂಪಗಳನ್ನು ಸಮ್ಮೇಳನದಲ್ಲಿ ಪ್ರಕಟಿಸಲು ಅವಕಾಶ ನೀಡಿದ ಡಾ. ಕೆಳದಿ ವೆಂಕಟೇಶ ಅವರಿಗೆ ಕೃತಜ್ಞತೆಗಳು.)



ವ್ಯಾಕರಣದ ದೃಷ್ಟಿಯಿಂದ ಶಬ್ದಗಳು ಯಾವ ಯಾವ ರೂಪಗಳನ್ನು ಪಡೆಯುತ್ತವೆ ಎಂಬ ಅಭ್ಯಾಸ ತುಂಬ ಪ್ರಯೋಜನಕಾರಿ. ಕೆಲವು ಶಬ್ದಗಳು ವ್ಯಾಕರಣ ಸೂತ್ರಗಳಿಗೆ ಅನುಸಾರವಾಗಿ ಹೊಸ ರೂಪಗಳನ್ನು ಪಡೆಯುತ್ತವೆ. ಮತ್ತೆ ಕೆಲವು ಸೂತ್ರಗಳ ಅಧಿಕಾರವನ್ನು ಲಕ್ಷಿಸುವುದಿಲ್ಲ. ಈ ಅವಿಧೇಯ ಶಬ್ದಗಳ ಸ್ವಭಾವವೆಂಥದು, ಅದರ ಅವಿಧೇಯತೆಗೆ ಕಾರಣವೇನು ಎಂಬುದನ್ನು ಅನ್ವೇಷಿಸುವ ಅಗತ್ಯವಿದೆ.

ಒಂದು ಶಬ್ದದ ನಾನಾರ್ಥಗಳು ಬೆಳೆದು ಬಂದ ಬಗೆ ಯಾವುದು? ಇದಕ್ಕೆ ಕಾರಣಗಳೇನು? ಆ ಭಿನ್ನ ಭಿನ್ನ ಅರ್ಥಗಳಿಗೆ ಯಾವುದಾದರೂ ಸಂಬಂಧ ಸೂತ್ರವಿದೆಯೆ? ಇವುಗಳ ಹಿಂದೆ ಇರುವ ತರ್ಕ ಎಂಥದು? ನಿಘಂಟು ರಚನೆಯಲ್ಲಿ ಈ ಎಲ್ಲ ಶಬ್ದಾರ್ಥಗಳ ಸಕಲ ವಿವರಗಳನ್ನು ಸೇರಿಸಬೇಕಾದ ಅಗತ್ಯವನ್ನು ನಿಘಂಟು ಶಾಸ್ತ್ರ ನಿರೂಪಿಸುತ್ತದೆ.

– ಕನ್ನಡ ನಿಘಂಟು ಶಾಸ್ತ್ರ ಪರಿಚಯ

ಡಾ. ದುರುಗಪ್ಪ ಎಂ.ಕೆ.*

# ಹೇಮಗುಡ್ಡ : ಚಾರಿತ್ರಿಕ ನೋಟ

ಹೇಮಗಿರಿ, ಎಮ್ಮಿಗುಡ್ಡ, ಹೇಮಗುಡ್ಡ ಎಂದು ಕರೆಯುವ ಈ ಸ್ಥಳವು ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ಐತಿಹಾಸಿಕ ಸ್ಥಳಗಳಲ್ಲೊಂದು. ಗಂಡುಗಲಿ ಕುಮಾರರಾಮನ ರಾಜಧಾನಿ ಕುಮ್ಮಟದುರ್ಗದ ಉತ್ತರಭಾಗದ ಪ್ರದೇಶವೇ ಏಳುಗುಡ್ಡ; ಈ ಏಳುಗುಡ್ಡಗಳಲ್ಲಿ ಬರುವ ಈ ಹೇಮಗುಡ್ಡ ಒಂದು ಗಿರಿದುರ್ಗ ಪ್ರದೇಶವಾಗಿದೆ. ಕನಕಗಿರಿ ನಾಯಕರ ಎರಡನೇ ರಾಜಧಾನಿಯಾಗಿದ್ದ ಈ ಸ್ಥಳದಲ್ಲಿ ಅನೇಕ ಕಲಾ ಸ್ಮಾರಕಗಳಿವೆ.

**ಹೇಮಗುಡ್ಡ ಕೋಟೆ :** ಹೇಮಗುಡ್ಡ ಕೋಟೆಯ ಬಹುತೇಕ ಗುಡ್ಡಗಳಿಂದ ಆವೃತವಾಗಿದೆ. ಈ ಕೋಟೆಯ ಪೂರ್ವ ಭಾಗವನ್ನು ಚೌಕಾಕಾರ, ಆಯಾತಾಕಾರದ ತುಂಡು ಕಲ್ಲುಗಳಿಂದ ಕಟ್ಟಲಾಗಿದೆ. ಉತ್ತರ ಮತ್ತು ದಕ್ಷಿಣ ಹಾಗೂ ಪೂರ್ವಭಾಗದಲ್ಲಿ ಗುಡ್ಡಗಳೇ ಕೋಟೆಯಂತಿವೆ. ಕನಕಗಿರಿಯ ನಾಯಕ ನವಾಬ ಉಡಿಚನಾಯಕನು ಈ ಕೋಟೆಯನ್ನು ಕಟ್ಟಿಸಿದನು. ಸದ್ಯ ಕೋಟೆಯ ಪ್ರವೇಶ ದ್ವಾರ ೧೨ ಅಡಿ ಅಗಲ ೨೬ ಅಡಿ ಎತ್ತರವಿದೆ. ಕೋಟೆಯಲ್ಲಿ ಎಡಭಾಗದಲ್ಲಿ ಮೂರು ಮತ್ತು ಬಲಭಾಗದಲ್ಲಿ ಮೂರು ಬುರುಜುಗಳಿವೆ. ಒಂದು ಬುರುಜುನಿಂದ ಇನ್ನೊಂದು ಬುರುಜುಗೆ ೩೧೭ ಅಡಿ ಅಂತರವಿದೆ. ಈ ಬುರುಜುಗಳು ೨೬ರಿಂದ ೩೦ ಅಡಿ ಎತ್ತರವಿರಬಹುದು. ಉತ್ತರದ ಗುಡ್ಡದ ಮೇಲೆ ಉಚ್ಚಂಗಿ ದುರ್ಗ ಎಂದು ಕರೆಯುವ ಕಾವಲು ಗೋಪುರವಿದೆ. ಈ ಕೋಟೆಯು ಇಂದಿಗೂ ಸುರಕ್ಷಿತವಾಗಿದ್ದರೂ ಅಲ್ಲಲ್ಲಿ ಸ್ವಲ್ಪ ಹಾಳಾಗಿದೆ. ಕೋಟೆಯ ಪ್ರವೇಶದ ಎಡಭಾಗದಲ್ಲಿ ಬಾವಿ ಇತ್ತು, ಈಗ ಇಲ್ಲ. ಪಶ್ಚಿಮದ ಭಾಗದಲ್ಲಿರುವ ಗುಡ್ಡಗಳ ಮೇಲುತುದಿಯ ಭಾಗದಲ್ಲಿ ಚಿಕ್ಕದಾದ ಕೋಟೆಯ ಪ್ರವೇಶ ದ್ವಾರವಿದೆ. ಈ ಪ್ರವೇಶ ದಾಟಿ ಹೊರಭಾಗಕ್ಕೆ ಹೋದಾಗ ಮೇಗಳ ಪೇಟೆ ಸಿಗುತ್ತದೆ. ಅಲ್ಲಿ ಜನರು ನೆಲೆಸಿದ್ದುದಕ್ಕೆ ಕೆಲವು ಕುರುಹುಗಳು ಇವೆ. ಉತ್ತರಭಾಗದಲ್ಲಿ ಎರಡು ಗುಡ್ಡಗಳ ನಡುವಿನ ಸಂದು ಸ್ಥಳದಲ್ಲಿ ಕೆರೆಯನ್ನು ಕಟ್ಟಲಾಗಿದೆ. ವೈರಿಗಳಿಗೆ ಸರಳವಾಗಿ ವಶವಾಗದಂತೆ ಈ ಕೋಟೆಯನ್ನೂ ಕಟ್ಟಲಾಗಿದೆ. ಕನಕಗಿರಿ ನಾಯಕರು ಕೂಟಯುದ್ಧಕ್ಕೆ ಈ ಕೋಟೆಯನ್ನು ಆಯ್ದುಕೊಳ್ಳುತ್ತಿದ್ದರು. ಮತ್ತು ಈ ಸ್ಥಳದ ಉತ್ತರಭಾಗದಲ್ಲಿರುವ ಹಂಪಸದುರ್ಗವೂ ಕನಕಗಿರಿ ನಾಯಕರ ಯುದ್ಧದ ಆಯಕಟ್ಟಿನ ಸ್ಥಳವಾಗಿತ್ತು. ಸುರಪುರದ ಪಿತಾಂಬರಿ ಬಹರಿಪಿಡ್ಡನಾಯಕನು ಔರಂಗ ಜೇಬನ ದಾಳಿಗೆ ಅಂಜಿ ಕನಕಗಿರಿ ನಾಯಕರ ಆಶ್ರಯ ಕೋರಿ ಬಂದಾಗ ಈ ನಾಯಕನನ್ನು ಹೇಮಗುಡ್ಡಕೋಟೆ ಯಲ್ಲಿ ಸುರಕ್ಷಿತವಾಗಿಟ್ಟು ಕಾಪಾಡಿದರು. ನಿರ್ಭಯವಾಗಿ ಸುರಪುರದ ದೊರೆ ಒಂದು ವರ್ಷದವರೆಗೆ ಈ ಕೋಟೆಯಲ್ಲಿದ್ದನು. ರಾಜಕೀಯ ಬದಲಾವಣೆಗಳಿಂದ ಮುಂದೆ ಕನಕಗಿರಿ ಹಿರೇ ನಾಯಕನನ್ನು ಸೆರೆಹಿಡಿಯಲು ಬಂದ ಸುರಪುರದ ರಾಮನಾಯಕನು ಈ ಕೋಟೆಯಲ್ಲಿ ಅಡಗಿ ಕುಳಿತ ಹಿರೇನಾಯಕನನ್ನು ಹಿಡಿಯ ಲಾಗಲಿಲ್ಲ, ಹಿರೇನಾಯಕನು ನಡೆಸುತ್ತಿದ್ದ ದಾಳಿಯಿಂದ ತತ್ತರಿಸಿಹೋದನು. ೯ ದಿನಗಳ ಕಾಲ ನಿರಂತರವಾಗಿ ಯುದ್ಧ ಮಾಡುತ್ತಾ ಹೋದರೂ ಈ ಕೋಟೆಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಲಾಗಲಿಲ್ಲ. ಮೂರು ತಿಂಗಳ ಕಾಲ ಇವರ ನಡುವೆ ಯುದ್ಧ ಮುಂದುವರೆದರೂ ಈ ಕೋಟೆಯು ವೈರಿಗಳ ವಶವಾಗಲಿಲ್ಲ. ಕೊನೆಗೆ ಹಿರೇ ನಾಯಕನನ್ನು ಮೋಸದಿಂದ ಸೆರೆಹಿಡಿದು ಹೈದ್ರಾಬಾದಿನ ನಿಜಾಮನಿಗೆ ಒಪ್ಪಿಸಿದನೆಂದು ಹೇಳುತ್ತಾರೆ. ಕನಕಗಿರಿಗೆ ಯಾವುದೇ ಪ್ರಕೃತಿ ಗುಡ್ಡ ಬೆಟ್ಟಗಳ ಆಶ್ರಯ ಇಲ್ಲದೇ ಇದ್ದುದರಿಂದ ಕನಕಗಿರಿ ನಾಯಕರು ಹೇಮಗುಡ್ಡ ಮತ್ತು ಹಂಪಸದುರ್ಗದಂಥ ನೈಸರ್ಗಿಕ ಕೋಟೆಯಂತಹ ಗುಡ್ಡಗಳನ್ನು ಆಯ್ದುಕೊಂಡಿರ ಲೇಬೇಕು.

ದುರ್ಗಾದೇವಾಲಯವು ಕೋಟೆಯ ಮುಖ್ಯ ಪ್ರವೇಶದ ಎಡಭಾಗದಲ್ಲಿದೆ. ಗರ್ಭಗೃಹ, ಅಂತರಾಳ ಮತ್ತು ಸುತ್ತಲೂ ಪ್ರಾಕಾರ ಹೊಂದಿರುವ ಈ ದೇವಾಲಯವು ಇತ್ತೀಚೆಗೆ ಶೇ

* ಇತಿಹಾಸ ಉಪನ್ಯಾಸಕರು, ಸ.ಪ.ಪೂ. ಕಾಲೇಜ್, ಕನಕಗಿರಿ, ಗಂಗಾವತಿ(ತಾ), ಕೊಪ್ಪಳ(ಜಿ) – ೫೮೩ ೧೧೯.


ಹೇಮಗುಡ್ಡಕೋಟೆ ಬಲಭಾಗ


ಹೇಮಗುಡ್ಡ ಕನಕಾಚಲಾ ದೇವಾಲಯ ಮುಂದಿನ ನೋಟ


ಅರಮನೆ ಕಟ್ಟಡ – ಪೂರ್ವಭಾಗ – ಹೇಮಗುಡ್ಡ


ಕನಕಾಚಲಾ ದೇವಾಲಯದ ಕದಂಬ – ನಾಗರ
ಶೈಲಿ ಶಿಖರ – ಹೇಮಗುಡ್ಡ


ಕನಕಾಚಲಾ ದೇವಾಲಯದ ಗರ್ಭಗೃಹದಲ್ಲಿನ
ಭಗ್ನ ಲಕ್ಷ್ಮಿನರಸಿಂಹ ವಿಗ್ರಹ – ಹೇಮಗುಡ್ಡ


ಈಶ್ವರ ದೇವಾಲಯ – ದಕ್ಷಿಣಭಾಗದಿಂದ ಒಂದು ನೋಟ
ಹೇಮಗುಡ್ಡ

೯೦ ರಷ್ಟು ಪುನರ್ ನಿರ್ಮಾಣಗೊಂಡಿದೆ. ಗರ್ಭಗೃಹದಲ್ಲಿರುವ ದುರ್ಗಾವಿಗ್ರಹ ಮತ್ತು ಗರ್ಭಗೃಹ ಮಾತ್ರ ಮೊದಲಿನ ವಾಸ್ತು ಶೈಲಿಯಲ್ಲಿದೆ. ಈ ದೇವಾಲಯದ ಎದುರುಗಡೆಯೇ ಶ್ರೀ ಆಂಜನೇಯ ದೇವಾಲಯವಿದೆ. ಗರ್ಭಗೃಹದಲ್ಲಿ ಆಂಜನೇಯ ವಿಗ್ರಹವಿದೆ. ಸಾಧಾರಣ ಕೆತ್ತನೆಯ ಕಂಬಗಳು ಇಲ್ಲಿವೆ.

ಈ ಕೋಟೆಯೊಳಗೆ ಅರಮನೆ ಕಟ್ಟಡ, ಕನಕಾಚಲ ದೇವಾಲಯ, ಈಶ್ವರ ದೇವಾಲಯಗಳು ಇವೆ.

**ಕನಕಾಚಲದೇವಾಲಯ :** ಕೋಟೆಯ ಒಳಭಾಗ ದಲ್ಲಿರುವ ಕನಕಾಚಲ ದೇವಾಲಯವು ಕಲೆ ಮತ್ತು ವಾಸ್ತು ದೃಷ್ಟಿಯಿಂದ ನೋಡುಗರ ಗಮನ ಸೆಳೆಯುತ್ತದೆ. ಅರಮನೆಯ ಎಡಭಾಗದಲ್ಲಿರುವ ಈ ದೇವಾಲಯವು ಗುಡ್ಡಕ್ಕೆ ತಾಗಿ ಕೊಂಡಿದ್ದು ಮೆಟ್ಟಿಲುಗಳನ್ನೇರಿ ದೇವಾಲಯ ಪ್ರವೇಶಿಸಬೇಕು. ಕನಕಗಿರಿನಾಯಕ ನವಾಬ ಉಡಿಚನಾಯಕನು ಈ ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯವು ಕಂಪಿಲ ರಾಯನು ಹಂಪಿ ಹೇಮಕೂಟದ ಮೇಲೆ ಕಟ್ಟಿಸಿದ ತ್ರಿಕೂಟ ದೇವಾಲಯವನ್ನೂ, ಮತ್ತು ಕುಮ್ಮಟ ದುರ್ಗದ ಮಲ್ಲಿಕಾರ್ಜುನ (ಈಶ್ವರ) ದೇವಾಲಯದ ಶಿಖರವನ್ನು ಹೋಲುತ್ತದೆ. ೨೬ ಮೆಟ್ಟಿಲುಗಳನ್ನು ಪಶ್ಚಿಮಾಭಿಮುಖವಾಗಿ ಏರಿದ ನಂತರ ಪ್ರವೇಶದ್ವಾರ ಬರುತ್ತದೆ. ಈ ದ್ವಾರವು ವಿಜಯನಗರ ಶೈಲಿ ಯಲ್ಲಿದೆ. ಆದರೆ ಈ ದ್ವಾರದ ಮೇಲೆ ಯಾವುದೇ ಶಿಖರವಿಲ್ಲ. ಈ ದ್ವಾರದ ಎಡ ಮತ್ತು ಬಲಬದಿಯ ಏಕಶಿಲಾ ಕಂಬ, ಮತ್ತು ಅದರ ಬೋದುಗೆಗಳು ಆಕರ್ಷಕವಾಗಿವೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹ, ರಂಗಮಂಟಪ ಮತ್ತು ಸುತ್ತಲೂ ಪ್ರಾಕಾರ ಹೊಂದಿದ್ದು ಗರ್ಭಗೃಹದಲ್ಲಿ ಭಗ್ನಗೊಂಡ ಲಕ್ಷ್ಮಿನರಸಿಂಹ ವಿಗ್ರಹವಿದೆ. ದೇವಾಲಯದ ಮುಂಭಾಗದಲ್ಲಿ ಗರುಡನ ಗುಡಿ, ಗರುಡ ಗಂಬ ಇದ್ದುದರ ಕುರುಹುಗಳು ಕಾಣಿಸುತ್ತವೆ. ಈ ದೇವಾಲಯದ ವಿಶಿಷ್ಟ ಆಕರ್ಷಣೆ ಎಂದರೆ ಶಿಖರ. ಈ ಶಿಖರವು ಕದಂಬ–ನಾಗರ (ಕಳಿಂಗ) ಶೈಲಿಯಲ್ಲಿದ್ದು; ಶಿಖರ ನಿರ್ಮಾಣದಲ್ಲಿ ಗಾರೆಯನ್ನು ಬಳಸಿಲ್ಲದಿರುವುದು ವಿಶಿಷ್ಟ. ಪಿರಮಿಡ್ಡಿನಾಕೃತಿಯಲ್ಲಿ ಕಿರಿದಾಗುತ್ತಾ ಹೋದ ಈ ಶಿಖರಕ್ಕೆ ಎರಡು ಹಂತಗಳ ಮೆಟ್ಟಿಲುಗಳ ಆಕಾರದ ಕಪೋತ ದಿಂಡುಗಳಿವೆ. ಇವುಗಳ ಮಧ್ಯ ಕಂಠದಿಂಡುಗಳಿಲ್ಲದ ಇವುಗಳ ಮಧ್ಯದಲ್ಲಿ ಎತ್ತರದ ಫಲಕವಿದೆ. ಇದರಲ್ಲಿ ಕೂಡು–ಕೀರ್ತಿ ಮುಖಗಳಿವೆ. ಕೂಡುಗಳಲ್ಲಿ ಹೂಗಳಿವೆ. ದೇವಾಲಯದ ಶಿಖರ ಮುಂಭಾಗದ ಬದಿಗಳಲ್ಲಿ ಗಾರೆ ಶಿಲ್ಪಗಳಿವೆ. ಇಂದು ಕಲ್ಲುಂಚಿಮರ ಈ ಶಿಖರದ ಮೇಲೆ ಬೆಳೆದು ಶಿಖರಕ್ಕೆ ಹಾನಿಯಂಟುಮಾಡಿದೆ. ಈ ದೇವಾಲಯದ ಹೊರಭಾಗದಲ್ಲಿ (ಕೆಳಭಾಗದ ಬಲಕ್ಕೆ) ಹನುಮಂತ ದೇವಾಲಯವಿತ್ತು. ಈಗ ದೇವಾಲಯ ಸಂಪೂರ್ಣ ಹಾಳಾಗಿದೆ. ದೇವಾಲಯದ ಗರ್ಭಗೃಹದಲ್ಲಿದ್ದ ಹನುಮಂತನ ವಿಗ್ರಹವನ್ನು ಅಲ್ಲಿಯೇ ಆಲದ ಮರವೊಂದರ ಕೆಳಗೆ ಪ್ರತಿಷ್ಠಾಪನೆ ಮಾಡಲಾಗಿದೆ.

**ಈಶ್ವರ ದೇವಾಲಯ :** ವಿಜಯನಗರ ಅರಸರ ಕಾಲದಲ್ಲಿ ಕನಕಗಿರಿನಾಯಕರು ಈ ದೇವಾಲಯವನ್ನು ನಿರ್ಮಿಸಿದರು. ಈ ದೇವಾಲಯದಂತೆ ಅನೇಕ ದೇವಾಲಯಗಳನ್ನು ಕನಕಗಿರಿಯಲ್ಲಿ ಕಾಣಬಹುದು. ಕೆರೆಯ ಏರಿಯ ಮೇಲೆ ಈ ದೇವಾಲಯವಿದ್ದು ಗರ್ಭಗೃಹದಲ್ಲಿರುವ ಶಿವಲಿಂಗ ಛಿದ್ರಗೊಂಡಿದೆ. ವೇದಿಕೆ ಅಷ್ಟೇ ಉಳಿದಿದೆ. ನವರಂಗ ಸಾಧಾರಣ ವಿನ್ಯಾಸ ಹೊಂದಿದೆ. ನಂದಿಗಾಗಿ ಕಟ್ಟಿಸಲಾದ ಪುಟ್ಟಗುಡಿಯು ಈ ದೇವಾಲಯದ ಮುಂಭಾಗದಲ್ಲಿ ಇಲ್ಲ, ಕುರುಹು ಮಾತ್ರ ಸ್ಪಷ್ಟ. ದ್ರಾವಿಡ ಶೈಲಿ ಶಿಖರ ಉತ್ತಮ ಸ್ಥಿತಿಯಲ್ಲಿದೆ. ಗಾರೆಶಿಲ್ಪಗಳೂ ಗಮನಸೆಳೆಯುತ್ತವೆ.

**ಅರಮನೆ :** ಕನಕಾಚಲ ದೇವಾಲಯದ ಎಡ ಭಾಗದಲ್ಲಿ ಗುಡ್ಡಕ್ಕೆ ತಾಗಿಕೊಂಡಿರುವ ಕಟ್ಟಡವೇ ಕನಕಗಿರಿನಾಯಕರ ಕಾಲದ ಅರಮನೆ ಕಟ್ಟಡವೆಂದು ಹೇಳುತ್ತಾರೆ. ಕಿರಿದಾದ ಪ್ರವೇಶದ್ವಾರ ಕಟ್ಟಡದ ಪೂರ್ವಭಾಗದ ಮಧ್ಯದಲ್ಲಿ ಇತ್ತು ಎಂಬುದು ಸ್ಪಷ್ಟವಾಗುತ್ತದೆ ಆದರೆ ಅದು ಇಟ್ಟಿಗೆಯಿಂದ ಮುಚ್ಚಲ್ಪಟ್ಟಿದೆ. ಈ ಕಟ್ಟಡವು ಮೆಲ್ನೋಟದಲ್ಲಿ ಎರಡು ಅಂತಸ್ತು ಹೊಂದಿತ್ತು ಎಂದು ಕಂಡು ಬರುತ್ತದೆ. ಮೇಲು ಅಂತಸ್ತುಗಳಿಗೆ ಹೋಗುವ ಕಿರಿದಾದ ಕಿಂಡಿದಾರಿಗಳಿವೆ. ಮತ್ತು ಬಂದೂಕ ಕಿಂಡಿಗಳೂ ಇವೆ. ಪೂರ್ವದ ಕಟ್ಟಡವು ನೋಡಲು ಅಂದ ವಾಗಿದೆ. ಅಲ್ಲಿನ ಒಂಬತ್ತು (೯) ಕಮಾನುಗಳು ಸೈನಿಕರ ಕಾವಲು ಕೋಣೆಯಂತೆ ಕಂಡರೂ; ಅವು ಅಲ್ಲ. ಚೌಕಾಕಾರದ ಈ ಕಟ್ಟಡದ ನಾಲ್ಕು ಮೂಲೆಯಲ್ಲಿ ಕಾವಲು ಗೋಪುರದಂತಹ ಕಲ್ಲುವೃತ್ತಗಳಿವೆ. ಉತ್ತರಭಾಗದಲ್ಲಿ ಕಿರಿದಾದ ದಾರಿ ಇದೆ. ಅಡಗು ತಾಣಕ್ಕಾಗಿ ಮಾಡಲಾದಂತಹ ಚಿಕ್ಕ ಚಿಕ್ಕ ಕೋಣೆಗಳಿವೆ. ಸಂಪೂರ್ಣ ಹಾಳಾಗಿ ಗಿಡಗಂಟಿಗಳಿಂದ ಆವೃತವಾದ ಈ ಕಟ್ಟಡವನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟವಾಗಿದೆ. ಏಕೆಂದರೆ ಉಗ್ರಾಣದಂತಹ ರಕ್ಷಣಾತ್ಮಕ ವಾಸ್ತುವನ್ನು ಇದು ಹೊಂದಿದೆ. ಕನಕಗಿರಿ ನಾಯಕರು ತಮ್ಮ ಸಂಪತ್ತನ್ನೂ, ಮದ್ದುಗುಂಡು ಗಳನ್ನೂ ಇಲ್ಲಿಯೇ ಸಂಗ್ರಹಿಸಿದ್ದರು. ರಾಜಪರಿವಾರ ಇಲ್ಲಿ ಕಾಲ ಕಳೆಯುತ್ತಿತ್ತು. ಕನಕಗಿರಿನಾಯಕರ ಮೂಲ ನೆಲೆ ಈ ಹೇಮಗುಡ್ಡವೇ ಆಗಿತ್ತು. ಕುಮ್ಮಟದುರ್ಗದ ಸಂಬಂಧಿಗಳಾಗಿ ಅವರು ಈ ಭಾಗದಲ್ಲಿ ಪ್ರಸಿದ್ಧಿಗೆ ಬಂದಿದ್ದರು ಎಂದು ಹೇಳಲಾಗುತ್ತದೆ.

ಕೋಟೆ, ಮೇಗಳ ಪ್ಯಾಟಿ ಮತ್ತು ಕೆಳಗಿನ ಪ್ಯಾಟಿ ಎಂದು ಈಗಲೂ ಜನರು ಹೇಮಗುಡ್ಡವನ್ನು ಗುರುತಿಸುತ್ತಾರೆ. ಕೋಟೆಯ ಪ್ರದೇಶವೇ ಈಗ ಜನಸಂದರ್ಶನಕ್ಕೆ ಪೂರಕವಾಗಿದೆ. ಈ ಕೋಟೆ ಒಳಭಾಗದಲ್ಲಿ ಇತ್ತೀಚಿಗೆ ಸ್ಥಳೀಯ ಲೋಕಸಭಾ ಸದಸ್ಯರೊಬ್ಬರು ಪುರಾಣಮಂಟಪ, ಸಮುದಾಯಭವನ, ಊಟದ ಕೋಣೆ, ಅಡುಗೆಕೋಣೆ ವಸತಿಗೃಹಗಳು, ಗೋದಾಮು, ಮುಂತಾದ ಕಟ್ಟಡಗಳನ್ನು ಕಟ್ಟಿಸಿದ್ದಾರೆ. ದಿನಾಲು ದೇವಿಯ ಆರಾಧನೆ ಖರ್ಚು ವೆಚ್ಚಗಳನ್ನು ಅವರೇ ಭರಿಸುತ್ತಾರೆ. ವರ್ಷಕ್ಕೊಮ್ಮೆ ಮೈಸೂರು ದಸರಾ ಮಾದರಿಯಲ್ಲಿ ಇಲ್ಲಿಯೂ ದಸರಾ ಹಬ್ಬವನ್ನು ಸುತ್ತಮುತ್ತಲ ಹಳ್ಳಿಯವರನ್ನು ಸೇರಿಸಿ ಅವರ ಮನೆತನದವರು ನಡೆಸುತ್ತಾ ಬಂದಿದ್ದಾರೆ, ಕಲ್ಯಾಣ ಮಂಟಪದ ಹಿಂಭಾಗದ ಗುಂಡಿನ ಮೇಲೆ "ಅಚ್ಯುತಾಪುರದ ಸುಲಿಪ ಬಸವಣ್ಣನಮಾನ್ಯ" ಎಂಬ ಒಂದು ಸಾಲಿನ ಶಿಲಾಶಾಸನವಿದೆ. ಈ ಪ್ರದೇಶ ಸೈನಿಕರ ನೆಲೆ ಆಗಿತ್ತು ಎಂದು, ಸೈನಿಕರ ಮನೆಗಳ ಕುರುಹುಗಳು ಇಲ್ಲಿದ್ದವೆಂದು ಸ್ಥಳೀಯರು ಹೇಳುತ್ತಾರೆ. ಮೇಗಳ ಪ್ಯಾಟಿಯು ಜನರ ವಸತಿಯಿಂದ ಕೂಡಿತ್ತೆಂದು ಅಲ್ಲಿ ಜನರು ಬಳಸಿದ ವಸ್ತುಗಳು, ಮನೆಗಳ ಕುರುಹುಗಳು, ನೀರಿನ ಹೊಂಡಗಳು ಇವೆ ಎಂದು ಹೇಳುವರು. ಗುಡ್ಡದ ಮೇಲಿನಿಂದ ಕೋಟೆಯನ್ನು ಪ್ರವೇಶಿಸುವ ವೈರಿಗಳನ್ನು ತಡೆಯುವ ಕಾಯಕ ಆ ಜನರದ್ದು ಆಗಿತ್ತು. ಇನ್ನೂ ಕೆಳಗಿನ ಪ್ಯಾಟಿಯು ಕೋಟೆಯ ಮುಂಭಾಗದಲ್ಲಿತ್ತು. ಈಗ ಕೃಷಿಕರ ಹೊಲಗಳಿವೆ. ಆಂಜನೇಯ ಮತ್ತು ಬಸವಣ್ಣ ಗುಡಿಗಳು ಅಲ್ಲಿದ್ದರೂ ಹಾಳಾಗಿವೆ. ಹೀಗೆ ಹೇಮಗುಡ್ಡ ಪರಿಸರ ಒಂದು ಚಾರಿತ್ರಿಕ ಸ್ಥಳವಾಗಿದ್ದು, ಈ ಸ್ಥಳದ ಸುತ್ತಮುತ್ತ ಇರುವ ಗುಡ್ಡಗಳಾವೃತ ಪ್ರದೇಶ ಪ್ರಾಗೈತಿಸಿಕ ನೆಲೆಗಳಾಗಿದ್ದವು ಎಂದು ಈಗಾಗಲೇ ಸಂಶೋಧಕರು ಗುರುತಿಸಿದ್ದಾರೆ.

(ಈ ಪ್ರಬಂಧ ಮಾಡಿಸಲು ಸಲಹೆ ನೀಡಿದ ಬಿ. ರಾಜಶೇಖರಪ್ಪ ಅವರಿಗೂ, ಗುರುಗಳಾದ ಪ್ರೊ. ಲಕ್ಷ್ಮಣ್ ತೆಲಗಾವಿ ಅವರಿಗೂ ಮತ್ತು ಮಾಹಿತಿ ನೀಡಿ ಸ್ಥಳ ದರ್ಶನ ಮಾಡಿಸಿದ ದುರ್ಗಾದಾಸಯಾದವ್, ಕನಕಗಿರಿ ಅವರಿಗೂ ಧನ್ಯವಾದಗಳು)



ಕೃತವಿದ್ಯರ್ ಸಮಚಿತ್ತರಾಗಿ ಪದಪಿಂದಾರಯ್ಯೆ ಕರ್ಣಾಟ ಸಂ
ಸ್ಕೃತ ಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟು ವಿದ್ವಚ್ಚಮ
ತ್ಕೃತಿಯಪ್ಪಂತಿರೆ ನಾಗಚಂದ್ರ ವಿಬುಧಂ ಪೇಟ್ದಿಂದದಿಂದಾದ್ಯರ
ದ್ಯತನಂ ಪೇಟ್ದಭಿರಾಮ ರಾಮಕಥೆಯಂ ಸೈಪಿಂಗಡರ್ಪಾಗನೇ

– ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ'

ಬವರ ಸವೆಯದೆ ತೇಜಿಗಳ ಬಲು । ಜವವು ಜಾರದೆ ಬಿಡುವ ತಿವಿದರೆ
ಸವಗವುಚ್ಚಳಿಸುವವು ಕವಿದರೆ ಕಾಲಯಮನಂತೆ
ಕವಿವರವಗಡಿಸಿದರೆ ಹಿಮ್ಮೆ । ಟ್ಟುವರು ಭೂಮಾನದೊಳುಪಾಯದ
ಬವರದೋಜೆಯೊಳೊದಗಿದರು ಕರ್ಣಾಟ ರಾವುತರು

– ಕರ್ಣಾಟ ಭಾರತ ಕಥಾಮಂಜರಿ ಭೀಷ್ಮಪರ್ವ, ಸಂ. ೪ ಪ. ೬೯

ಡಾ.ಶಾ. ಶ್ಯಾಮಲಾರತ್ನಕುಮಾರಿ*

# ತುಮಕೂರಿನ ಬಟವಾಡೆ ಗ್ರಾಮದ ಐತಿಹಾಸಿಕ ಪರಂಪರೆ

ಬೆಂಗಳೂರು–ತುಮಕೂರು (ರಾಷ್ಟ್ರೀಯ ಹೆದ್ದಾರಿ ೪) ಮತ್ತು ಬೆಂಗಳೂರು–ಹೊನ್ನಾವರ (ರಾಷ್ಟ್ರೀಯ ಹೆದ್ದಾರಿ ೨೦೬) ಈ ರಸ್ತೆಗಳಿಗೆ ಹೊಂದಿಕೊಂಡಂತೆ ಇರುವ ಪ್ರದೇಶವೇ ಶಾಸನೋಕ್ತವಾಗಿ ಐತಿಹಾಸಿಕತೆ ಪಡೆದಿರುವ ಗ್ರಾಮ ಬಟವಾಡೆ. ಸ್ಥಳೀಯರ ಹೇಳಿಕೆಯಂತೆ ವಿಜಯ ನಗರದ ಕಾಲದಿಂದ ಬ್ರಿಟಿಷರ ಕಾಲದವರೆಗೂ ಈ ಪ್ರದೇಶದಲ್ಲಿ ಇಂದಿನ ರಾಷ್ಟ್ರೀಯ ಹೆದ್ದಾರಿ ೪ ಮತ್ತು ೨೦೬ ಕವಲೊಡೆ ಯುವ ಸ್ಥಳದಲ್ಲಿರುವ ಬಸರಿ ಮರದ ಕೆಳಗೆ ಸೈನಿಕರಿಗೆ ಮತ್ತು ಇಟ್ಟಿಗೆಕಾರರಿಗೆ ಹಾಗೂ ಕೂಲಿಯಾಳುಗಳಿಗೆ ಕೂಲಿ, ಸಂಬಳದ ಬಟವಾಡೆಯು (ವಿತರಣೆ) ನಡೆಯುತ್ತಿದ್ದುದರಿಂದ ಈ ಪ್ರದೇಶಕ್ಕೆ ಬಟವಾಡೆ ಎಂಬ ಹೆಸರು ಬಂದಿತು. ಈ ಪ್ರದೇಶವು ತುಮಕೂರು–೪ ಎಂದಾಗಿದ್ದು ಇಂದಿನ ವಾಲ್ಮೀಕಿ ನಗರ, ಚೇತನ ಬಡಾವಣೆ, ಮಹಾಲಕ್ಷ್ಮಿ ಬಡಾವಣೆ, ಗೋಕುಲ ಬಡಾವಣೆ, ಹೆಚ್.ಎಂ.ಟಿ. ಕಾಲೋನಿ, ಎ.ಪಿ.ಎಂ.ಸಿ. (ಅಗ್ರಿಕಲ್ಚರಲ್ ಪ್ರಾಡಕ್ಟ್ಸ್ ಮಾರ್ಕೆಟಿಂಗ್ ಕಾರ್ಪೊರೇಷನ್) ಯಾರ್ಡ್, ದೇವರಾಯ ಪಟ್ಟಣ, ಅಕ್ಕತಂಗಿ ಕೆರೆಗಳನ್ನು ಒಳಗೊಂಡು ಅತ್ಯಂತ ದೊಡ್ಡದಾಗಿರುವ ವಿಭಾಗವಾಗಿದೆ.

ಬಟವಾಡೆಯ ವಾಲ್ಮೀಕಿನಗರದಲ್ಲಿರುವ ದೇವಾಂಗ ಸಮುದಾಯದ ಕುಲದೇವತೆಯಾದ ಚೌಡೇಶ್ವರಿ ದೇವಾಲಯದ ದುರಸ್ತಿ ಕಾರ್ಯವನ್ನು ಎರಡು ವರ್ಷಗಳ ಹಿಂದೆ ಕೈಗೊಂಡ ಸಂದರ್ಭದಲ್ಲಿ ನೆಲಕ್ಕೆ ಹಾಸಿದ್ದ ಚಪ್ಪಡಿ ಕಲ್ಲಿನ ಮೇಲೆ ಶಾಸನದ ಬರಹವನ್ನು ಕಂಡು ಅದನ್ನು ದೇವಾಲಯದ ಮುಂದೆ ಎಡಪಾರ್ಶ್ವದಲ್ಲಿ ನಿಲ್ಲಿಸಲಾಗಿದೆ. ಈ ಶಾಸನದ ಕಲ್ಲು ೧೬೪ ಸೆಂ.ಮೀ. ಉದ್ದವಾಗಿಯೂ ೫೭ ಸೆಂ.ಮೀ. ಅಗಲವಾಗಿಯೂ ಇದೆ. ಹದಿಮೂರು ಸಾಲುಗಳಲ್ಲಿ ಕನ್ನಡ ಲಿಪಿಯಲ್ಲಿರುವ ಶಾಸನ ಬರಹವಿದೆ.

ಈ ಶಾಸನವನ್ನು ಓದಿದಾಗ ತಿಳಿದುಬರುವ ಐತಿಹಾಸಿಕ ವಿಷಯವೆಂದರೆ ಶಕವರ್ಷ ೧೪೩೫ ಅಂದರೆ ಕ್ರಿ.ಶ. ೧೫೧೩ ರಲ್ಲಿ ವಿಜಯನಗರದ ಸಾಮ್ರಾಟ ಕೃಷ್ಣದೇವ ರಾಯನ ಆಳ್ವಿಕೆಯಲ್ಲಿ ಮಹಾಮಂಡಲೇಶ್ವರ ದೇವರಾಯ ಪಟ್ಟಣದ



ಬಟವಾಡಿ ಚೌಡೇಶ್ವರಿ ದೇವಾಲಯದ ಮುಂಭಾಗದ ಸ್ತಂಭಕ್ಕೆ ಆನಿಸಿ ನೆಟ್ಟಿರುವ ಶಾಸನ

ತಿಂಮಣನಾಯ್ಕರ ಮಗ ಕೆಂಚಸೋಮಣ್ಣ ನಾಯ ಕರು ತಮ್ಮ ತಾಯ್ತಂದೆಗಳಿಗೆ ಪುಣ್ಯವಾಗಲೆಂದು ಸಮೀಪದ ಯಿಳಕಲ್ಲು ಬೆಟ್ಟದ ರಾಮೇಶ್ವರದೇವರ ಅಂಗರಂಗಭೋಗ ಕ್ಕಾಗಿ ಬಟವಾಡೆ ಎಂಬ ಹೆಸರಿನ ಈ ಗ್ರಾಮವನ್ನು ಪುರದಗ್ರ–ಪುರಧರ್ಮ ಕೊಟ್ಟರೆಂದು ತಿಳಿದುಬರುತ್ತದೆ.

* 'ವಿಶಾಲಾಕ್ಷಿ ಕೃಪ', ಪರಮಹಂಸ ರಸ್ತೆ, ತ್ಯಾಗರಾಜನಗರ ೨ನೇ ಬ್ಲಾಕ್, ಬೆಂಗಳೂರು – ೫೬೦ ೦೨೮.



ಬಟವಾಡಿ ಚೌಡೇಶ್ವರಿ ದೇವಾಲಯದ ಪಾರ್ಶ್ವ ನೋಟ



ಬಟವಾಡಿ ಚೌಡೇಶ್ವರಿ ದೇವಾಲಯದ ಮುಂದಿರುವ ಸ್ತಂಭದ ಪೀಠಭಾಗದಲ್ಲಿರುವ ಸ್ತ್ರೀರುಂಡ ಶಿಲ್ಪ

**ಶಾಸನದ ಪಾಠ**

೧ ಸ್ವಸ್ತಿ ವಿಜಯಾಭ್ಯುದಯ ಶಾಲಿವಾಹನ ಶ

೨ ಕ ವರುಷ ೧೪೩೫ನೇ ಶ್ರೀಮುಖ ಸಂವತ್ಸರದ

೩ ಬಹುಳ ದಶಮಿ ಶ್ರೀಮನ್ಮಹಾಮಂಡಳೇಶ್ವರ

೪ ರ ಮಹಾಸಾಮ್ರಾಟ ಶ್ರೀಕೃಷ್ಣರಾಯರು ಭುಜಬಲ

೫ ಪ್ರತಾಪ ದೇವರಾಯ ಪಟ್ಟಣದ ತಿಂಮಣ ನಾಯ್ಕರ ಮ

೬ ಗ ಕೆಂಚಸೋಮಣನಾಯ್ಕರು ತಂಮ ತಂದೆಯ ಮತ್ತು ತಾಯಿ

೭ ಯ ಪುಣ್ಯಮನೊಂದು ಯಿಪತ್ತೊಂದು ಮಣ ಬಿತ್ತುಗ

೮ ಡ್ಡೆ ಕೃತಾರ್ಥರಾಗಬೇಕು ಯಂದು ಯಿಳಕಲ್ಲ ಬೆಟ್ಟದ ರಾ

೯ ಮೇಶ್ವರ ದೇವರ ಅಂಗರಂಗ ವೈಭೋಗಕ್ಕೆ ಸಲ್ಲಬೇಕು ಯಂ

೧೦ ದು ಬಟವಾಡೆಯ ಗ್ರಾಮವನ್ನು ಪುರದಗ್ರವಾಗಿ ಬಿ

೧೧ ಟ್ಟನು ಸ್ಥಾನವಾನ್ಯ ಐವತ್ತೊಂಭತ್ತು ಕೆಯ್ಯ ಕೊಂಡವರು

೧೨ ವಾರಾಣಾಸಿಯಲು ತಂಮ ತಂದೆ ತಾಯಿ ಕೊಂದ

೧೩ ಮಹಾಪಾತಕರು

ಬಟವಾಡೆ ಗ್ರಾಮದ ದೇವತೆ ಚೌಡೇಶ್ವರಿ, ಚೌಡೇಶ್ವರಿ ದೇವಾಲಯವು ಬೆಂಗಳೂರಿಂದ ತುಮಕೂರಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿ ೪ರ ಬಲಬದಿಗೆ ಇಂದು ವಾಲ್ಮೀಕಿ ನಗರವೆಂದು ಕರೆಯಲ್ಪಡುವ ಗ್ರಾಮದ ಕೇಂದ್ರಭಾಗದಲ್ಲಿದೆ. ಗರ್ಭಗುಡಿ, ಅಂತರಾಳ ಮತ್ತು ಮುಖಮಂಟಪ ಮತ್ತು ಚಿಕ್ಕದಾದ ಗೋಪುರವಿದೆ. ಹೊರ ಭಿತ್ತಿಗಳು ಯಾವ ಕೆತ್ತನೆಯನ್ನೂ ಹೊಂದಿಲ್ಲ. ಪ್ರಸ್ತರದ ಮೇಲ್ಭಾಗದಲ್ಲಿ ಎರಡು ಕಡೆಗಳಲ್ಲಿ ಸಿಂಹ ಮುಖದಂತಹ ಕೆತ್ತನೆ ಕಂಡುಬರುತ್ತದೆ. ಪಾರ್ಶ್ವ ಗೋಡೆಗಳಲ್ಲಿ ಮೂರು ಕಡೆಗಳಲ್ಲಿ ಇತ್ತೀಚೆಗೆ ಇಟ್ಟಿಗೆಗಳಿಂದ ಆಧಾರಗೋಡೆಗಳನ್ನು ನಿರ್ಮಿಸಲಾಗಿದೆ. ವಿಮಾನ ಗೋಪುರದಲ್ಲಿ ಎರಡಂತಸ್ತುಗಳಲ್ಲಿ ಕುಡ್ಯ ಸ್ತಂಭಗಳ ಕೆತ್ತನೆಯಿದ್ದು ಅದರ ಮೇಲೆ ಚೌಕಾಕಾರದ ಮೂರು ಮೆಟ್ಟಲಿನ ಹಂತಗಳಿದ್ದ ಅದರ ಮಧ್ಯಭಾಗದಲ್ಲಿ ಅರಳಿದ ಕಮಲದಳಗಳ ಸುತ್ತಿನ ಮಧ್ಯದಿಂದ ಬಂದ ಕಮಲಮೊಗ್ಗಿನ ರೀತಿಯಲ್ಲಿ ಗೋಪುರ ಮತ್ತು ಕಲಶದ ಭಾಗವು ಕಾಣಬರುತ್ತದೆ. ಅಧಿಷ್ಠಾನದಲ್ಲಿ ಪಾದ ಮತ್ತು ಉಪಾನದ ಭಾಗಗಳನ್ನು ಕಾಣಬಹುದಾಗಿದೆ. ದೇವಾಲಯದ ಮುಂದೆ ಸುಮಾರು ಹದಿನಾರು ಅಡಿ ಎತ್ತರದ ದೀಪಸ್ತಂಭವಿದೆ. ದೇವಾಲಯದ

ಗರ್ಭಗುಡಿಗೆ ಅಭಿಮುಖವಾಗಿರುವ ಸ್ತಂಭದ ಬುಡದ ಮೇಲ್ಮುಖದಲ್ಲಿ ಸ್ತ್ರೀ ರುಂಡದ ಕೆತ್ತನೆಯಿದೆ. ಇನ್ನೊಂದು ಮುಖದಲ್ಲಿ ಕಲಶ ಮತ್ತು ಪತ್ರರೇಖೆಯ ಕೆತ್ತನೆ ಇವೆ. ಇದೇ ಸ್ತಂಭಕ್ಕೆ ಶಾಸನದ ಕಲ್ಲನ್ನು ಒರಗಿಸಲಾಗಿದೆ. ಸ್ತಂಭದ ಮೇಲ್ಭಾಗದಲ್ಲಿ ದುಂಡಗಿನ ಬೋದುಗೆಯೂ ಅದರ ಮೇಲೆ ಚೌಕಾಕಾರದ ಮುಚ್ಚುಶಿಲಾ ಫಲಕವೂ ಅದರ ಮೇಲೆ ದೀಪ ಹಚ್ಚಲು ಚೌಕಾಕಾರದ ತೊಟ್ಟಿಯ ಭಾಗವೂ ಕಂಡು ಬರುತ್ತದೆ.

ಗರ್ಭಗುಡಿಯೊಳಗೆ ಸು. ಮೂರು ಅಡಿ ಎತ್ತರದ ಚೌಡೇಶ್ವರಿಯ ಆಸೀನ ಮೂರ್ತಿಯಿದೆ. ಮಂದಸ್ಮಿತ ಮುಖ ಭಾವದಿಂದ ಕೂಡಿರುವ ದೇವಿಯ ಮೂರ್ತಿಯು ಸುಂದರ ವಾಗಿದೆ. ನವರಂಗದ ಛತ್ತಿನಲ್ಲಿ ಷೋಡಶ ದಳಗಳಿಂದ ಕೂಡಿರುವ ಅರಳಿದ ಪದ್ಮದ ಕೆತ್ತನೆಯಿದೆ. ಗಜಲಕ್ಷ್ಮಿಯ ಲಲಾಟ ಬಿಂಬ, ದ್ವಾರಪಾಲಕ ಬಿಂಬಗಳು, ಬೋದಿಗೆಗಳಲ್ಲಿ ಸಿಂಹ ಮತ್ತು ಗಜಗಳ ಕೆತ್ತನೆಯೂ ಸುಂದರವಾಗಿ ಮೂಡಿಬಂದಿದೆ. ದೇವಾಂಗ ಸಮುದಾಯಕ್ಕೆ ಸೇರಿದವರೇ ಚೌಡೇಶ್ವರಿ ದೇವಿಯ ಅರ್ಚಕರಾಗಿದ್ದಾರೆ. ಈ ದೇವಾಲಯ ವನ್ನು ದೇವಾಂಗ ಸಂಘದ ಧರ್ಮದರ್ಶಿ ಮಂಡಲಿ ನೋಡಿಕೊಳ್ಳುತ್ತಿದೆ.

ಚೌಡೇಶ್ವರಿ ದೇವಾಲಯದ ಬಲ ಪಾರ್ಶ್ವದಲ್ಲಿ ಉತ್ತರ ದಿಕ್ಕಿನಲ್ಲಿ ಒಂದು ದೀಪಸ್ತಂಭವಿದೆ. ಇದು ಚೌಡೇಶ್ವರಿ ದೇವಾ ಲಯದ ಮುಂದೆ ಇರುವ ದೀಪಸ್ತಂಭವನ್ನೇ ಎತ್ತರದಲ್ಲಿ ಮತ್ತು ವಿನ್ಯಾಸದಲ್ಲಿ ಹೋಲುತ್ತದೆ. ಈ ಭಾಗದಲ್ಲಿಯೂ ದೇವಾಲಯವೊಂದು ಇದ್ದಿರಬಹುದೆಂದು ಅಲ್ಲಿ ಬಿದ್ದಿರುವ ಕಲ್ಲುಗಳ ಅವಶೇಷಗಳಿಂದ ಊಹಿಸಬಹುದು.

ಚೌಡೇಶ್ವರಿ ದೇವಾಲಯದ ಅಭಿಮುಖವಾಗಿ ಪೂರ್ವ ದಿಕ್ಕಿನಲ್ಲಿ ಒಂದು ಅರಳೀಮರ, ಕಟ್ಟೆ-ಅರಳೀಕಟ್ಟೆಯ ಎಡಪಾರ್ಶ್ವದಲ್ಲಿ ಒಂದು ಚಿಕ್ಕ ಆಂಜನೇಯನ ಗುಡಿಯೂ ಇದೆ. ಆಂಜನೇಯನು ವೀರಭಾವದಿಂದ ಪೂರ್ವ ದಿಕ್ಕಿಗೆ ಮುಖ ತಿರುಗಿಸಿ ನಿಂತಿದ್ದಾನೆ. ಅರಳೀಕಟ್ಟೆಯ ಹಿಂಭಾಗದಲ್ಲಿ ಗ್ರಾಮದ ಶಾಲೆ ಇದೆ.

ಇಲ್ಲಿರುವ ಈ ಎಲ್ಲ ಅವಶೇಷಗಳ ಮತ್ತು ಪರಿಸರದ ಸಮೀಕ್ಷೆಯಿಂದ ಬಟವಾಡೆ ಗ್ರಾಮವು ವಿಜಯನಗರ ಕಾಲ ಮತ್ತು ಆನಂತರದ ದೇವರಾಯಪಟ್ಟಣದ ಪಾಳೆಯಗಾರರ ಕಾಲದಲ್ಲಿ ಐತಿಹಾಸಿಕ ಪ್ರಾಮುಖ್ಯತೆಯನ್ನು ಪಡೆದಿತ್ತೆಂದು ಹೇಳಬಹುದಾಗಿದೆ. ಈಗಲೂ ತುಮಕೂರು-೪ ಎಂಬ ವಿಭಾಗಕ್ಕೆ ಸೇರಿದ್ದು ಹೆದ್ದಾರಿಯ ಪಕ್ಕದಲ್ಲೇ ಇರುವುದರಿಂದ ತನ್ನ ಐತಿಹಾಸಿಕ ಪ್ರಾಮುಖ್ಯತೆಯನ್ನೂ ಸ್ವಲ್ಪಮಟ್ಟಿಗೆ ಉಳಿಸಿ ಕೊಂಡಿದೆ ಎಂತಲೂ ಹೇಳಬಹುದಾಗಿದೆ.

(ಬಟವಾಡೆ ಗ್ರಾಮದ ಈ ಹೊಸ ಶಾಸನದ ಬಗ್ಗೆ ನನಗೆ ಸುದ್ದಿ ನೀಡಿದ ಹಾಗೂ ಕ್ಷೇತ್ರಕಾರ್ಯದಲ್ಲಿ ಪ್ರಥಮ ಬಾರಿಗೆ ಸಹಕರಿಸಿದ ಆತ್ಮೀಯ ಗೆಳತಿ ತುಂಕೂರು ಸುನಂದಾ ಅವರಿಗೂ, ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಇದ್ದು ಸಹಾಯ ನೀಡಿದ ಹಿರಿಯಕ್ಕನಂತಿರುವ ಡಾ. ಶಾಮಲಾ ಸಿ.ಆರ್. ಮತ್ತು ನನ್ನ ಸಂಶೋಧನಾ ವಿದ್ಯಾರ್ಥಿ ಶ್ರೀ ಚನ್ನಬಸಪ್ಪ, ಬಿ. ಇವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.)



ವಿಗ್ರಹಾರಾಧನೆ ಒಂದು ನಿಶ್ಚಿತ ನೆಲೆ ಮುಟ್ಟಿದ ಮೇಲೆ ಪ್ರಾಯಶಃ ದೇವಾಲಯದ ರೂಪ ಸ್ಪಷ್ಟವಾಗಿರಬಹುದು. ಆದರೆ ವಿಗ್ರಹ ರಚನೆಗಿಂತ ಮೊದಲೇ ಚಿತ್ರರೂಪದಲ್ಲಿ ದೈವತ್ವದ ಕಲ್ಪನೆ ಬಂದಂತಿದೆ. ಇತಿಹಾಸ ಪೂರ್ವದ ಆದಿಮಾನವನ ಗುಹಾಚಿತ್ರಗಳಲ್ಲಿ ಗುಹೆಯ ಅಥವಾ ಶಿಲಾಶ್ರಯದ ಒಂದು ಎಡೆಯಲ್ಲಿ ಮಾತ್ರ ಮೇಲಿಂದ ಮೇಲೆ ಚಿತ್ರಿಸಿರುವ ಹಲವಾರು ಉದಾಹರಣೆಗಳು ಪ್ರಪಂಚದಾದ್ಯಂತ ದೊರೆಯುತ್ತವೆ. ಚಿತ್ರಗಳು ಒಂದು ಆಚರಣೆಯ ಉದ್ದೇಶದಿಂದ ಬಂದುದು ಎಂದುಕೊಂಡರೆ ಇಂದಿನ ಮನೆಗಳಲ್ಲಿ ದೇವರಿಗಾಗಿ ಒಂದು ಪ್ರತ್ಯೇಕ ಗೂಡು ಅಥವಾ ಮನೆ (ಕೊಠಡಿ) ಇರುವಂತೆ ಗುಹೆಯಲ್ಲಿ ಮತ್ತೆ ಮತ್ತೆ ಚಿತ್ರಿತವಾಗುತ್ತಿದ್ದ ಸ್ಥಳವೂ ಆ ಗುಹೆಯಲ್ಲಿ ವಾಸಿಸುತ್ತಿದ್ದ ಮಾನವನಿಗೂ ಒಂದು ಪವಿತ್ರವಾದ ಸ್ಥಳವಾಗಿದ್ದಿರಬಹುದೆಂದು ಊಹಿಸಬಹುದು.

– 'ಆಲೇಖ್ಯ'ದಿಂದ

ಡಾ. ರು.ಮ ಷಡಕ್ಷರಯ್ಯ*

# ಗುಲಬರ್ಗಾ ಜಿಲ್ಲೆಯ ಮಳಖೇಡವೇ ರಾಷ್ಟ್ರಕೂಟರ ರಾಜಧಾನಿ

ಗುಲಬರ್ಗಾ ಜಿಲ್ಲೆಯಲ್ಲಿ ಎರಡು ಪ್ರಮುಖ ಅರಸು ಮನೆತನಗಳು ತಮ್ಮ ರಾಜಧಾನಿಗಳನ್ನು ಕಟ್ಟಿದವು. ಅವುಗಳು ಮಳಖೇಡ ಮತ್ತು ಗುಲಬರ್ಗಾ. ಮೊದಲನೆಯದು ರಾಷ್ಟ್ರಕೂಟರಿಗೆ, ಎರಡನೆಯದು ಬಹಮನಿಗೆ ರಾಜಧಾನಿಗಳಾಗಿದ್ದವು. ದಕ್ಷಿಣ ಭಾರತದ ಚರಿತ್ರೆಯಲ್ಲಿ ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರನ್ನು ಸುಮಾರು ಕ್ರಿ.ಶ. ೭೫೫ರಲ್ಲಿ ಸೋಲಿಸಿ ಸುಮಾರು ಕ್ರಿ.ಶ. ೯೭೫ರವರೆಗೆ ಆಳ್ವಿಕೆ ನಡೆಸಿದರು. ದೊರೆ ದಂತಿಗನು ಚಾಲುಕ್ಯ ಅರಸ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ ಎಲಿಚಪುರ (ಇಂದಿನ ಎಲ್ಲೋರ) ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದನು. ಅದು ಮುಂದೆ ಇಮ್ಮಡಿಗೋವಿಂದನ ಆಳ್ವಿಕೆಯ ಕಾಲದವರೆಗೂ ರಾಜಧಾನಿಯಾಗಿತ್ತು. ತದನಂತರ ಅವರ ಎರಡನೆಯ ರಾಜಧಾನಿ ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಮಾನ್ಯಖೇಟ, ಅಂದರೆ ಈಗಿನ ಮಳಖೇಡ ಆಗಿದ್ದಿತು. ಮುಮ್ಮಡಿ ಗೋವಿಂದನ ಆಳ್ವಿಕೆಯ ಕಾಲದಲ್ಲಿ (ಅಂದರೆ ಸು. ಕ್ರಿ.ಶ. ೭೯೩-೮೧೪) ದಕ್ಷಿಣದಲ್ಲಿ ತನ್ನ ಸಾಮ್ರಾಜ್ಯ ವನ್ನು ವಿಸ್ತರಿಸಿದ ನಂತರ ಆಡಳಿತ ಅನುಕೂಲಕ್ಕಾಗಿ ಇಲ್ಲೊಂದು ರಾಜಧಾನಿ ಯನ್ನು ಸ್ಥಾಪಿಸಲು ಯೋಚಿಸಿ ಮಾನ್ಯಖೇಟವನ್ನು (ಕ್ರಿ.ಶ. ೮೧೪) ಆರಿಸಿಕೊಂಡ. ಆತನ ಉತ್ತರಾಧಿಕಾರಿಯಾಗಿದ್ದ ಅಮೋಘವರ್ಷನು ಸು. ಕ್ರಿ.ಶ. ೮೧೪ರಲ್ಲಿ ಮಾನ್ಯಖೇಟವನ್ನು ರಾಜಧಾನಿ ನಗರವನ್ನಾಗಿ ನಿರ್ಮಿಸಿಕೊಂಡನು. **ಮಯೂರ ಖಂಡ** ಅಂದರೆ ನೆರೆಯ ಈಗಿನ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮೊರಖಂಡಿ ಹಾಗೂ ಲಾತ್ತಲ್ಲೂರು ಅಂದರೆ ನೆರೆಯ ಮಹಾರಾಷ್ಟ್ರದ ಲಾತೂರ ಅವರ ಇನ್ನಿತರ ರಾಜಧಾನಿ ಪಟ್ಟಣಗಳಾಗಿದ್ದವು.

ಶಾಸನಗಳಲ್ಲಾಗಲಿ ಮತ್ತು ಸಾಹಿತ್ಯಕ ಕೃತಿಗಳಲ್ಲಾಗಲೀ ರಾಷ್ಟ್ರಕೂಟರ ರಾಜಧಾನಿಯಾಗಿದ್ದ 'ಮಾನ್ಯಖೇಟ" ಅಥವಾ "ಮಾನ್ಯಪುರ" ವು ಗುಲಬರ್ಗಾ ಜಿಲ್ಲೆಯದ್ದಾಗಿ ನದಿಯ ದಂಡೆಯ ಮೇಲಿರುವ ಮಳಖೇಡವೆಂದು ಹೇಳಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಮಳಖೇಡವು ರಾಷ್ಟ್ರಕೂಟರಿಗೆ ರಾಜಧಾನಿ ಆಗಿರಲಿಲ್ಲವೆಂಬ ಅಭಿಪ್ರಾಯ ಅನೇಕರಲ್ಲಿದೆ. ಈ ಅಭಿಪ್ರಾಯ ತಪ್ಪೆಂದು ತಿಳಿಸಲು ಕೆಲವು ಐತಿಹಾಸಿಕ ಸಂಗತಿಗಳನ್ನು ಇಲ್ಲಿ ಪರಾಮರ್ಶಿಸಲಾಗಿದೆ. ಅವುಗಳಲ್ಲಿ ಆಕರಸಾಮಗ್ರಿಗಳು ಒಂದು, ಎರಡು ರಾಜಕೀಯ ಚರಿತ್ರೆ ಮತ್ತು ಮೂರು ಈ ಕಾಲದ ವಾಸ್ತುಶಿಲ್ಪಕಲೆಯ ನೆಲೆಗಳು ಮುಖ್ಯವಾಗಿವೆ.

**ಆಕರಗಳು :** ಪೂರ್ವಪುರಾಣ, ಆದಿಪುರಾಣ ಮತ್ತು ವಡ್ಡಾರಾಧನೆ ಕೃತಿಗಳಲ್ಲಿರುವ ಜನಪದದ ಅಂಶಗಳಲ್ಲಿ 'ಖೇಟಾ' ರಾಜಧಾನಿಯು 'ಕಾಣಿ' ಅಥವಾ 'ಕಾತುರವೇಣಿ' ತಟಾಕದಲ್ಲಿರುವುದೆಂದು ಉಕ್ತವಾಗಿದೆ. ರಾಷ್ಟ್ರಕೂಟದೊರೆ ಮೊದಲನೇ ಕೃಷ್ಣನ ಆಳ್ವಿಕೆಯ ಕಾಲದ ಕೃತಿಯಲ್ಲಿ ಸುಂದರವಾದ ಮಾನ್ಯಖೇಟದಲ್ಲಿ ಸುಭೋಲಿಂಗನೆಂಬ ಬಲಿಷ್ಠ ಅರಸನಿದ್ದನೆಂದು ಹೇಳಿರುವುದು ಗಮನೀಯ ಸಂಗತಿ.

ರಾಷ್ಟ್ರಕೂಟ ಮನೆತನದಲ್ಲಿ ಪ್ರಸಿದ್ಧಿಯನ್ನು ಪಡೆದ ಅರಸ ಅಮೋಘವರ್ಷ (ಕ್ರಿ.ಶ. ೮೧೪-೮೭೮). ಈ ಅಮೋಘವರ್ಷ ನೃಪತುಂಗ ಕಲೆ ಮತ್ತು ಸಾಹಿತ್ಯ ಪೋಷಕನೂ ಆಗಿದ್ದನು. ಆತನ ಆಸ್ಥಾನದಲ್ಲಿ ಅನೇಕ ಉತ್ಕೃಷ್ಟ ಮತ್ತು ಪ್ರಖ್ಯಾತಿ ಪಡೆದ ಕವಿಗಳ ದಂಡೇ ಇತ್ತು. ಸ್ವತಃ ಅರಸ ಕೂಡ ಕವಿಯಾಗಿ "ಪ್ರಶ್ನೋತ್ತರಮಾಲಿಕೆ" ಎಂಬ ಕೃತಿಯನ್ನು ರಚಿಸಿದ. ಶ್ರೀವಿಜಯ ಅಮೋಘವರ್ಷನ ಆಸ್ಥಾನದಲ್ಲಿದ್ದು "ಕವಿರಾಜಮಾರ್ಗ" ಎಂಬ ಕಾವ್ಯಗ್ರಂಥವನ್ನು ರಚಿಸಿದ. ಕೆಲವರು ಈ ಕೃತಿಯ ಕರ್ತೃ ಸ್ವತಃ ಅಮೋಘವರ್ಷನೆಂದು ವಾದಿಸುವರು. ಈತನ ಆಸ್ಥಾನದ ಪ್ರಮುಖ ಆಚಾರ್ಯ ಜೀನಸೇನ "ಆದಿಪುರಾಣ" ಎಂಬ ಕಾವ್ಯವನ್ನು ರಚಿಸಿದ. ಹಾಗೆಯೇ ಮಹಾವೀರಾಚಾರ್ಯ "ಗಣಿತಸಾರಸಂಗ್ರಹ" ವನ್ನು "ಶಕ್ತಾಯನನ", ಶಬ್ದಾನುಶಾಸನ; ಮತ್ತು ಅಮೋಘವ್ರತಿ ಕೃತಿಗಳೆರಡು ಈತನ ಕಾಲದಲ್ಲಿ ರಚಿಸಲ್ಪಟ್ಟವು. ಜೈನಕವಿ ಪುಷ್ಪದಂತ 'ಜೈನ ಮಹಾಪುರಾಣ'ವನ್ನು ರಚಿಸಿದ. ಆತ ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನ ಸಮಕಾಲೀನ. ಆತ ಮಾನ್ಯಖೇಟ ನಗರವನ್ನು ವರ್ಣಿಸುತ್ತ ಅದು ದೀನ ಮತ್ತು ಅನಾಥರ ತಾಣವಾಗಿತ್ತು. ಯಾವಾಗಲೂ ಅರಳಿದ ಕಮಲದ ಹೂಗಳಿಂದ ಕೂಡಿದ ಉದ್ಯಾನವನಗಳು ಅಲ್ಲಿದ್ದವೆಂದು

* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩.

ಬಣ್ಣಿಸಲಾಗಿದೆ. ಇಮ್ಮಡಿಕರ್ಕನ ಕ್ರಿ.ಶ. ೮೧೬ರ ತಾಮ್ರಪಟ ಶಾಸನದಲ್ಲಿ ಅಮೋಘವರ್ಷನ ಮಾನ್ಯಖೇಟನಗರವನ್ನು ಇಂದ್ರನ ರಾಜಧಾನಿ ಅಮರಾವತಿಯಂತೆ ಅಮೋಘವಾಗಿದ್ದಿತೆಂದು ವರ್ಣಿಸಲಾಗಿದೆ.

ಅಮೋಘವರ್ಷನ ಬಗೆಗೆ ಅರಬ್ ಇತಿಹಾಸತಜ್ಞ ಸುಲೇಮಾನನು ವಲ್ಲಭನಾದ ಅಮೋಘವರ್ಷನಷ್ಟು ಪ್ರಖ್ಯಾತಿ ಪಡೆದ ಅರಸನೊಡನೆ ಚೀನಾ, ಬಾಗ್ದಾದ್, ಮತ್ತು ಕಾನ್‌ಸ್ಟಾಂಟಿನೋಪಲ್ ರಾಜರುಗಳನ್ನು ಸಹಪಂಕ್ತಿಯಲ್ಲಿ ಹೋಲಿಸಿದ್ದಾನೆ. ಈತನ ಆಳ್ವಿಕೆಯ ಕಾಲದಲ್ಲಿ ಜೈನಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಜೈನ ಧರ್ಮದ ಜೊತೆಗೆ ಇನ್ನಿತರ ಧರ್ಮಗಳಿಗೂ ಕೂಡ ಆತ ಮಹತ್ವವನ್ನು ನೀಡಿದ್ದ. ಮಾನ್ಯಖೇಟವನ್ನು ಅತ್ಯಂತ ಸುಂದರಗೊಳಿಸಿದನೆಂತಲೂ, ಅಲ್ಲಿ ಎತ್ತರ ಬೆಟ್ಟ ಪ್ರದೇಶ ಮತ್ತು ನದಿ ದಂಡೆಯ, ಮೇಲೆ ಈ ನಗರ ಸುಂದರವಾಗಿತ್ತೆಂದು ಹೇಳಿದ್ದಾನೆ.

**ರಾಜಕೀಯ ಇತಿಹಾಸ:** ರಾಷ್ಟ್ರಕೂಟರ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದಾಗ ಅವರ ರಾಜಧಾನಿಯ ಬಗ್ಗೆ ಕೆಲ ಮಹತ್ವದ ಸಂಗತಿಗಳು ತಿಳಿದುಬರುತ್ತವೆ. "ಮಾನ್ಯಖೇಟ"ವು ಅಮೋಘವರ್ಷನ ಮಗನಾದ ಇಮ್ಮಡಿ ಕೃಷ್ಣನ ಆಳ್ವಿಕೆಗೆ ಬರುವವರೆಗೂ ಅಂದರೆ ಕ್ರಿ.ಶ. ೮೭೮ರ ವರೆಗೂ ರಾಜಧಾನಿಯಾಗಿ ಮುಂದುವರೆಯಿತು. ಇಮ್ಮಡಿ ಕೃಷ್ಣನ ಆಳ್ವಿಕೆ ಗುಲ್ಬರ್ಗಾ ಪ್ರದೇಶದಲ್ಲಿ ಇದ್ದುದರ ಬಗೆಗೆ ಇಲ್ಲಿಯವರೆಗಿನ ಆಧಾರಗಳು ಮೌನತಾಳಿವೆ. ಮುಂದೆ ಬಂದ ಅರಸರು ಮಾನ್ಯಖೇಟ [ಮಳಖೇಡ] ದಿಂದ ಆಡಳಿತ ನಡೆಸಿರುವುದರ ಕುರಿತು ಆಧಾರಗಳು ಲಭ್ಯವಾಗಿಲ್ಲ.

ರಾಷ್ಟ್ರಕೂಟ ದೊರೆ ಮುಮ್ಮಡಿಕೃಷ್ಣನ ಮೂರು ಶಾಸನಗಳು ಮಾತ್ರ ಗುಲ್ಬರ್ಗ ಜಿಲ್ಲೆಯಲ್ಲಿ ಬೆಳಕಿಗೆ ಬಂದಿವೆ. ಅವುಗಳು ನಿಡಗುಂದಿ (ಚಿಂಚೋಳ್ಳಿ), ಶಿರವಾಳ (ಶಹಾಪೂರ ತಾಲೂಕು) ಮತ್ತು ಅಂದೋಲ (ಜೇವರ್ಗಿ ತಾಲೂಕ). ಶಿರವಾಳದ ಕ್ರಿ.ಶ. ೯೫೯ರ ಶಾಸನ ಅಕಾಲವರ್ಷನ ಆಳ್ವಿಕೆಯದಾಗಿದೆ. ಅದರಲ್ಲಿ ಸಗರನಾಡಿನ ಉಲ್ಲೇಖವೂ ಇದೆ. ನಿಡಗುಂದಿಯ ಅಕಾಲವರ್ಷನ ಅಪೂರ್ಣಶಾಸನದಲ್ಲಿ ಶಕ ವರುಷ ೮೭೬ ಇತ್ಯಾದಿ ವಿವರಗಳಿವೆ. ಅಂದರೆ ಈ ಶಾಸನದ ಕಾಲ ಕ್ರಿ.ಶ. ೯೫೯. ಮುಮ್ಮುಡಿ ಕೃಷ್ಣನ ಆಳ್ವಿಕೆಯನ್ನು ಸೂಚಿಸುತ್ತದೆ. ಅಂದೋಲದ ಕ್ರಿ.ಶ. ೯೫೮ರ ಶಾಸನವೂ ಮುಮ್ಮಡಿ ಕೃಷ್ಣನ ಆಳ್ವಿಕೆಯನ್ನು ತಿಳಿಸುತ್ತದೆ. ಇದಲ್ಲದೆ ಅಲ್ಲಿಯ ಮನೆವೆರ್ಗ್ಗಡೆ, ಆಂದೋಲದ ಹೆಗ್ಗಡೆಗಳು, ಕೇಶಿಮಯ್ಯ ಅಧಿಕಾರಿ ಇತ್ಯಾದಿ ವಿವರಗಳಿವೆ. ಈ ವಿವರಗಳಿಂದ ಮಾನ್ಯಖೇಟವು ಅಮೋಘವರ್ಷನಿಂದ ಹಿಡಿದು ಮುಮ್ಮುಡಿ ಕೃಷ್ಣನವರೆಗೂ ರಾಜಧಾನಿಯಾಗಿದ್ದಿತೆಂದು ತಿಳಿದುಬರುತ್ತದೆ.

ಮುಮ್ಮುಡಿಕೃಷ್ಣನ ಆಳ್ವಿಕೆಯ ತರುವಾಯ ರಾಷ್ಟ್ರಕೂಟ ಸಾಮ್ರಾಜ್ಯ ಕ್ರಮೇಣ ಪತನದ ಹಾದಿಯನ್ನು ಹಿಡಿಯಿತು. ಕ್ರಿ.ಶ. ೯೭೨ರಲ್ಲಿ ಪರಮಾರ ಅರಸ ಸಿಯುತಹರ್ಷ ಕಟಚೂರಿ ಮತ್ತು ಚೋಳರ ಸೈನ್ಯದ ಬಲದಿಂದ ದಾಳಿನಡೆಸಿ ಮಾನ್ಯಖೇಟನಗರವನ್ನು ಸೂರೆಮಾಡಿದ. ಆ ಸಂದರ್ಭದಲ್ಲಿ ರಾಷ್ಟ್ರಕೂಟರ ಸಾಮಂತನೂ ಮತ್ತು ಸಂಬಂಧಿಯಾಗಿದ್ದ ಗಂಗ ಮನೆತನದ ಇಮ್ಮಡಿ ಮಾರಸಿಂಹ ಬಲವಾದ ಸೈನ್ಯದೊಂದಿಗೆ ಅಲ್ಲಿಗೆ ಧಾವಿಸಿ ಶತ್ರುಗಳನ್ನು ಅಲ್ಲಿಂದ ಹೊರಗಟ್ಟಿದವನು. ಈ ಯುದ್ಧದ ಪರಿಣಾಮದಿಂದ ರಾಜಧಾನಿ ನಗರ ಮತ್ತು ದೇಶ ತತ್ತರಿಸಿತು. ಭಯಗ್ರಸ್ತ ಸನ್ನಿವೇಶ ನಿರ್ಮಾಣವಾಯಿತು. ಅಧಿಕಾರಿಗಳು ಸ್ವತಂತ್ರರಂತೆ ವರ್ತಿಸತೊಡಗಿದರು. ಆಳುವ ಅರಸನ ಬಲಹೀನತೆ ಹೆಚ್ಚಾಗತೊಡಗಿತು. ಇಂಥಹ ದುಃಸ್ಥಿತಿಯಲ್ಲಿ ಬಲಹೀನ ದೊರೆ ಖೊಟ್ಟಿಗನು ಮರಣ ಹೊಂದಿದನು, ಈ ಯುದ್ಧನಡೆದಾಗ ರಾಜಧಾನಿ ನಗರದ ಕೋಟೆಯನ್ನು ವೈರಿಗಳು ಸುಟ್ಟುಹಾಕಿದರು. ಈ ಮಾಹಿತಿಯು ಶ್ರವಣಬೆಳಗೊಳದ ಶಾಸನದಿಂದ ತಿಳಿದುಬರುತ್ತದೆ. ಈ ರೀತಿಯ ಸನ್ನಿವೇಶದಲ್ಲಿ ಒಬ್ಬ ದಂಡನಾಯಕನಾಗಿದ್ದ ಬೊಮ್ಮಹನು ತನ್ನ ಮಗಳನ್ನು ರಾಷ್ಟ್ರಕೂಟರ ಒಬ್ಬ ಸಾಮಂತನಾಗಿದ್ದ ಇಮ್ಮಡಿ ತೈಲಪನಿಗೆ ಕೊಟ್ಟು ಲಗ್ನಮಾಡಿದ. ಆಗ ತೈಲನು ತರ್ದವಾಡಿನಾಡನ್ನು ಆಳುತ್ತಿದ್ದನು. ಈ ತೈಲನು ಬಾದಾಮಿ ಚಾಲುಕ್ಯ ವಂಶಸ್ಥನೂ ಆಗಿದ್ದನು. ಆತನ ತಾಯಿ ಭೊಂತಲಾದೇವಿ ಕಟಚುರಿ ಮನೆತನದವಳಾಗಿದ್ದಳು. ಹೀಗೆ ತನ್ನ ಆಂತರಿಕ ಮತ್ತು ಬಾಹ್ಯ ರಕ್ತಸಂಬಂಧಗಳು ಅವನಿಗೆ ಹೆಚ್ಚಿನ ಸೈನ್ಯ ಶಕ್ತಿ ದೊರೆಯಲು ಕಾರಣವಾಯಿತು. ಆತನು ಅವರ ಸಹಾಯದಿಂದ ರಾಷ್ಟ್ರಕೂಟರನ್ನು ಸೋಲಿಸಿ ರಾಜಧಾನಿ ಮಾನ್ಯಖೇಟವನ್ನು ತನ್ನ ಕೈವಶ ಮಾಡಿಕೊಂಡನು. ಆ ಕ್ಲಿಷ್ಟ ಸಂದರ್ಭದಲ್ಲಿ ಮೊಟ್ಟಮೊದಲು ಆತನ ಅರಸೊತ್ತಿಗೆಯನ್ನು ಒಪ್ಪಿಕೊಂಡು ಕಪ್ಪಕಾಣಿಕೆ ಸಲ್ಲಿಸಿದವರು ಸೌಂದತ್ತಿಯ ರಟ್ಟರಾಗಿದ್ದಾರೆ. ಆದರೆ ಬಾಹ್ಯದಲ್ಲಿದ್ದ ಅವರ ವೈರಿಗಳಾಗಿದ್ದ ಚೋಳರು ಮತ್ತು ಪರಮಾರರು ಈ ತೈಲನನ್ನು ಸೋಲಿಸಲು ಆತನ ಮೇಲೆ ಪದೇ ಪದೇ ದಾಳಿಮಾಡುತ್ತಿದ್ದರು. ಮೇರುತುಂಗನ **ಪ್ರಬಂಧ ಚಿಂತಾಮಣಿಯಲ್ಲಿ** ಪರಮಾರ ಅರಸ ಮುಂಜನು ತೈಲನ ಮೇಲೆ ಸುಮಾರು ೩೫ ಸಲ ಯುದ್ಧಮಾಡಿದ, ಆದರೆ ೨೫ ನೆಯ ಕೊನೆಯ ಯುದ್ಧದಲ್ಲಿ ಮುಂಜನು ಸೋಲನ್ನು ಪಡೆದು ತೈಲಪನಿಗೆ ಸೆರೆಯಾದನೆನ್ನಲಾಗಿದೆ. ಸೆರೆಮನೆಯಲ್ಲಿದ್ದ ಮುಂಜನಿಗೆ ಆತಿಥ್ಯಮಾಡಲು ತೈಲ ತನ್ನ ಸಹೋದರಿಯಾದ ಮೃಣಾಲವತಿಗೆ ವಹಿಸಿದನು. ಆಕೆಯನ್ನು ಮುಂಜ ಪ್ರೀತಿಸಿ ಅಲ್ಲಿಂದ ತಪ್ಪಿಸಿಕೊಳ್ಳಲು ಒಂದು ಸಂಚನ್ನು ಹೂಡಿದ. ಸೆರೆಮನೆಯಿಂದ ತಪ್ಪಿಸಿಕೊಳ್ಳಲು ತನ್ನ ರಾಜಭಟರ ಸಹಾಯದಿಂದ ಒಂದು ಗುಪ್ತ ನೆಲಮಾರ್ಗವನ್ನು ತೋಡಿಸಿದ. ಅದು ಮುಗಿಯಲು ಒಂದು ದಿವಸ ಉಳಿದಾಗ ಮುಂಜನು ಮೃಣಾಲವತಿಗೆ ಅಲ್ಲಿಂದ ಆಕೆಯ ಜೊತೆಯಲ್ಲಿ ತಪ್ಪಿಸಿಕೊಂಡು ತನ್ನ ದೇಶಕ್ಕೆ ಪಾರಾಗಿ ಹೋದ ಬಳಿಕ ಲಗ್ನವಾಗುವುದಾಗಿ ಭರವಸೆ ನೀಡಿದ. ಈ ವಿಚಾರವನ್ನು ಆಕೆಯು ತಕ್ಷಣ ತನ್ನ ಸಹೋದರ ತೈಲನಲ್ಲಿ ಬಹಿರಂಗ ಪಡಿಸಿದಳು. ಸಿಟ್ಟಿಗೆದ್ದ ತೈಲನು ಮರುದಿನವೇ ಮುಂಜನನ್ನು

ಕಬ್ಬಿಣದ ಸರಪಳಿಗಳಿಂದ ಮೈಕೈಗಳನ್ನು ಕಟ್ಟಿಸಿ ಮಾನ್ಯಖೇಟದ ನಗರದ ರಾಜಬೀದಿಗಳಲ್ಲಿ ಭಿಕ್ಷೆಬೇಡಿಸುತ್ತ ಮೆರವಣಿಗೆ ಮಾಡಿ ಆತನನ್ನು ಕೊಂದನೆಂದು ವರ್ಣಿಸಲಾಗಿದೆ. ಈ ಕಥೆಯಿಂದ ಸಮಕಾಲೀನ ಅರಸರ ಮತ್ತು ಮಾನ್ಯಖೇಟದ ರಾಜಧಾನಿ, ಅಲ್ಲಿಯ ಸೆರೆಮನೆ ಮುಂತಾದ ವಿಷಯಗಳು ಪ್ರಾಪ್ತವಾಗುತ್ತವೆ. ದಕ್ಷಿಣದಿಂದ ಚೋಳರು ತೈಲ ಮತ್ತು ಆತನ ವಂಶಸ್ಥರ ಮೇಲೆ ಪದೇ ಪದೇ ದಾಳಿಮಾಡುತ್ತಿದ್ದರಿಂದ ಮಾನ್ಯಖೇಟ ನಗರವು ಹೆಚ್ಚು ಧಕ್ಕೆ ಹೊಂದಲು ಕಾರಣವಾಯಿತು. ಸುರಕ್ಷತೆಯ ಸಲುವಾಗಿ ಆತನು ತನ್ನ ರಾಜಧಾನಿ ಪಟ್ಟಣವನ್ನು ಅಲ್ಲಿಂದ ನೆರೆಯ ಏತಗಿರಿ ಅಂದರೆ ಇಂದಿನ ಯಾದಗಿರಿಗೆ ವರ್ಗಾಯಿಸಿದನು. ಅಲ್ಲಿಗೂ ಶತ್ರುಗಳಿಂದ ಕಾಟ ಬರುವುದನ್ನು ಗಮನಿಸಿರಬೇಕು. ತದನಂತರ ಈ ಚಾಲುಕ್ಯ ಮನೆತನದ ಇಮ್ಮಡಿ ಜಯಸಿಂಹನ ಕಾಲದಲ್ಲಿ ಅವರ ರಾಜಧಾನಿ ಪೊಟ್ಟಳಕೆರೆಯಾಗಿದ್ದುದು ಕಾಣುವುದು. ಇದರಿಂದ ಚೋಳರು ಚಾಲುಕ್ಯರಿಗೆ ಹುಟ್ಟು ವೈರಿಗಳೆನಿಸಿದರು. ಮುಂದೆ ಮೊದಲನೆಯ ಸೋಮೇಶ್ವರನು ಜಿಲ್ಲೆಯ ಇಂದಿನ ಬಸವ ಕಲ್ಯಾಣಕ್ಕೆ ಸು. ಕ್ರಿ.ಶ. ೧೦೪೪ರಲ್ಲಿ ವರ್ಗಾಯಿಸಿದನು. ಕಲ್ಯಾಣಪುರ ಚಾಲುಕ್ಯರಿಗೆ ರಾಜಧಾನಿಯಾದ ತಕ್ಷಣ ಚೋಳರು ಸುಮಾರು ಎರಡು ಅಥವಾ ಮೂರುಸಲ ಅದರ ಮೇಲೆ ದಾಳಿ ಮಾಡಿದರು. ಕಲ್ಯಾಣದ ಕೋಟೆಯನ್ನು ಸುಟ್ಟು ಹಾಕಿದರು. ಮುಂದೆ ಆರನೇ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಿಂದ ಕಲ್ಯಾಣದ ಮೇಲೆ ದಾಳಿಗಳು ಸಂಭವಿಸಲಿಲ್ಲ. ಹೀಗಾಗಿ ಕಲ್ಯಾಣವು ಸುಮಾರು ಒಂದು ಶತಮಾನ ಕಾಲ ಚಾಲುಕ್ಯರ ರಾಜಧಾನಿಯಾಗಿ ವೈಭವದಿಂದ ಮೆರೆಯಿತು. ಹೀಗಾಗಿ ಈ ಚಾಲುಕ್ಯರನ್ನು ಕಲ್ಯಾಣ ಚಾಲುಕ್ಯರೆಂದು ಕರೆಯುವರು. ರಾಷ್ಟ್ರಕೂಟರು ಅವರ ಪೂರ್ವಜರ ಬಾದಾಮಿ ಚಾಲುಕ್ಯರನ್ನು ಸೋಲಿಸಿದ ಕಾರಣ ಈ ಮನೆತನದವರನ್ನು ಸೋಲಿಸಲು ಕಾರಣವಾಯಿತೆಂಬ ವಿಷಯಗಳನ್ನು ಈ ಕಾಲದ ಅನೇಕ ಶಾಸನಗಳು ತಿಳಿಸುತ್ತವೆ. ಜೊತೆಯಲ್ಲಿ ಬಾದಾಮಿ ಚಾಲುಕ್ಯರ ಮನೆತನದಿಂದ ಕಲ್ಯಾಣಚಾಲುಕ್ಯರ ಮನೆತನದವರೆಗೆ ಬಹುತೇಕವಾಗಿ ಅಯ್ಯಣ ಕಾಲ ಅಥವಾ ಆರನೇ ವಿಕ್ರಮಾದಿತ್ಯನ ಕಾಲದವರೆಗೆ ಅವರ ವಂಶಾವಳಿಯೂ ಶಾಸನ ಮತ್ತು ಸಾಹಿತ್ಯ ಕೃತಿಗಳಿಂದ ತಿಳಿದು ಬರುವುದು. ಈ ಐತಿಹಾಸಿಕ ಘಟನೆಗಳನ್ನು ಅವಲೋಕಿಸಿದಾಗ ರಾಜಕೀಯ ಸ್ಥಿತ್ಯಂತರದಲ್ಲಿ ರಾಜಧಾನಿ ಪಟ್ಟಣ (ನಗರ)ಗಳ ಸ್ಥಳಾಂತರದ ವಿಷಯವನ್ನು ಇಲ್ಲಿ ಪರಾಮರ್ಶಿಸಲಾಗಿದೆ.

ಮಹಾರಾಷ್ಟ್ರದ ಎಲಿಚಪುರ ಅವರ ಮೊದಲ ರಾಜಧಾನಿ; ಅವರ ಮತ್ತೊಂದು ರಾಜಧಾನಿ ಮಾನ್ಯಖೇಟ. ಇನ್ನುಳಿದವುಗಳು ಮಯೂರಬಂಡಿ ಮತ್ತು ಲತ್ತಲೂರುಗಳು ಬೀದರ್ ಜಿಲ್ಲೆಯ ಅಕ್ಕಪಕ್ಕದಲ್ಲಿವೆ. ಮಯೂರಬಂಡಿ ಬಸವಕಲ್ಯಾಣ ತಾಲೂಕಿನ ಮೊರಖಂಡಿಯಾದರೆ ಲತ್ತಲೂರು ನೆರೆಯ ಮಹಾರಾಷ್ಟ್ರದ ಲಾತೂರುಗಳಾಗಿವೆ. ಈ ಮೊರಖಂಡಿ ದಕ್ಷಿಣದ ನೆರೆಯಲ್ಲಿ ಇರುವ ಸ್ಥಳವೆಂದರೆ ಗುಲಬರ್ಗಾ ಜಿಲ್ಲೆಯ ಇಂದಿನ ಸೇಡಂ ತಾಲೂಕಿನ ಮತ್ತು ಕಾಗಿಣನದಿ ದಂಡೆ ಮೇಲಿನ ಮಳಖೇಡವಾಗಿದೆ (ಅಂದಿನ ಮಾನ್ಯಖೇಟ). ಆದರೆ ಕೆಲವರ ಅಭಿಪ್ರಾಯದಲ್ಲಿ ಈ ಮಾನ್ಯಖೇಟ ದಕ್ಷಿಣ ಕರ್ನಾಟಕದಲ್ಲಿನ ಮಾನ್ಯಪುರವೆಂದು ಅಭಿಪ್ರಾಯಪಟ್ಟಿರುವ ಈ ಸ್ಥಳವು ಮಯೂರಖಂಡಿಗಾಗಲಿ, ಲತ್ತಲೂರಿಗಾಗಲಿ, ಕಲ್ಯಾಣಪುರ ಕ್ಕಾಗಲಿ ಅತೀ ದೂರದಲ್ಲಿದೆ. ಇದನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಈ ಮಾನ್ಯಖೇಟ ನಗರವು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲು ಸುರಕ್ಷಿತವಲ್ಲದ ಕಾರಣ ಆದರೆ ನೆರೆಯಲ್ಲಿರುವ ಎತ್ತರ ಬೆಟ್ಟವುಳ್ಳ ಏತಗಿರಿ ಅಂದರೆ ಈಗಿನ ಯಾದಗಿರಿಯನ್ನು ರಾಜಧಾನಿಯನ್ನಾಗಿ ಬದಲಾಯಿಸಿದ್ದು ಈ ಮೇಲೆ ತಿಳಿಸಲಾಗಿದೆ. ಅಷ್ಟೇ ಅಲ್ಲ ಅಲ್ಲಿಂದ ನೆರೆಯ ಸ್ಥಳವಾದ ಪೊಟ್ಟಳಕೆರೆಯು (ಆಂಧ್ರಪ್ರದೇಶ) ಮುಂದೆ ಮತ್ತೊಂದು ರಾಜಧಾನಿಯಾಗಿದ್ದಿತು. ಆ ನಂತರ ಆ ಪ್ರದೇಶಕ್ಕೆ ಹತ್ತಿರವಾದ ಮತ್ತೊಂದು ರಾಜಧಾನಿ ಸ್ಥಳ ಕಲ್ಯಾಣವು ಇಂದಿನ ಬಸವಕಲ್ಯಾಣವಾಗಿದೆ. ಹೀಗಾಗಿ ಒಟ್ಟಾರೆ ಈ ಎಲ್ಲ ರಾಜಧಾನಿ ಪಟ್ಟಗಳು ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಬೀದರ-ಗುಲ್ಬರ್ಗಾ ಪ್ರದೇಶಗಳಲ್ಲಿ ಮತ್ತು ಅದರ ನೆರೆಹೊರೆಗಳಲ್ಲಿರುವುದು ಸ್ಪಷ್ಟವಾಗಿ ಕಾಣುತ್ತದೆ. ಹೀಗಾಗಿ ಮಳಖೇಡವೇ ರಾಷ್ಟ್ರಕೂಟರ ರಾಜಧಾನಿ ಆಗಿತ್ತೆಂಬುದು ಇನ್ನು ಸ್ಪಷ್ಟವಾಗುವುದು.

**ವಾಸ್ತುಶಿಲ್ಪ :** ರಾಷ್ಟ್ರಕೂಟರ ಕಾಲದ ಅನೇಕ ದೇವಾಲಯ ಶಿಲ್ಪ ಶಾಸನ ಇತ್ಯಾದಿ ಸ್ಮಾರಕಗಳು ಈಗ ಗುಲಬರ್ಗಾ ಜಿಲ್ಲೆಯ ಶಿರಿವಾಳ, ಜೇವರ್ಗಿ, ಭೀಮರಾಯನಗುಡಿ, ಶಹಾಪೂರ, ಮುದನೂರು, ನಿಡಗುಂದಿ, ದಿಗ್ಗಾವಿ, ಇಂಗಳಗಿ, ರಾವೂರ, ಕುಳಗೇರಿ, ಕಾಳಗಿ, ಕೇಶ್ವಾರ, ಉಡಗಿ, ಸೇಡಂ, ಮಳಖೇಡ, ಗಂವ್ಹಾರ, ಕೊಲ್ಲೂರು, ಸನ್ನತಿ, ತಡಕಲ್ಲು, ದೋರನಹಳ್ಳಿ, ಮಾಗಣಗೇರಿ ಮುಂತಾದ ಸ್ಥಳಗಳಲ್ಲಿ ಕಂಡುಬಂದಿವೆ. ಈ ಸ್ಥಳಗಳಲ್ಲಿ ಇರುವ ಸ್ಮಾರಕ ಶಿಲ್ಪಕಲೆಯು ಈ ಕಾಲದ ವಾಸ್ತು ಶಿಲ್ಪಕಲೆಯ ಅಧ್ಯಯನಕ್ಕೆ ಇನ್ನೂ ಹೆಚ್ಚಿನ ಮಾಹಿತಿಯನ್ನು ನೀಡುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪಿ.ಬಿ. ದೇಸಾಯಿ ಮತ್ತು ಇನ್ನಿತರರು: ***ಎ ಹಿಸ್ಟ್ರಿ ಆಫ್ ಕರ್ನಾಟಕ***, ಕ.ವಿ.ವಿ ಧಾರವಾಡ.
೨. ***ಎಪಿಜಿಎಎಸ್: ಎಪಿಗ್ರಾಫಿಯ ಕರ್ನಾಟಕ*** ಮತ್ತು ಇನ್ನಿತರ ಶಾಸನ ಸಂಪುಟಗಳು.
೩. ಬಿ.ಆರ್ ಗೋಪಾಲ್: ***ಚಾಲುಕ್ಯಸ್ ಆಫ್ ಕಲ್ಯಾಣ ಅಂಡ್ ಕಳಚೂರಿಸ್***, ಕ.ವಿ.ವಿ, ಧಾರವಾಡ.
೪. ಮೇರುತುಂಗನ ***ಪ್ರಬಂಧ ಚಿಂತಾಮಣಿ***.

ಡಿ.ಜಿ. ಕುಲಕರ್ಣಿ*

# ಹೊನ್ನತ್ತಿ ಗ್ರಾಮನಾಮ

ಸಾಂಸ್ಕೃತಿಕ ಅಧ್ಯಯನ ಪ್ರಕ್ರಿಯೆಯಲ್ಲಿ ನಾಮ ವಿಜ್ಞಾನವು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತಿದೆ. ಪ್ರತಿಯೊಂದು ವಸ್ತುವಿಗೂ ಹೆಸರಿರುತ್ತದೆ. ಹೆಸರು ಆ ವಸ್ತುವಿನ ಗುಣ ಸ್ವರೂಪವನ್ನು ಪ್ರತಿನಿಧಿಸುತ್ತದೆ. ಇಂಥದೇ ಇನ್ನೊಂದು ವಸ್ತುವಿಗಿಂತ ಇದು ಹೇಗೆ ಭಿನ್ನ ಎಂಬುದನ್ನು ಈ ಹೆಸರು ವ್ಯಕ್ತಪಡಿಸುತ್ತದೆ. ಎಷ್ಟೆಷ್ಟು ಈ ಗುರುತಿಸುವ ಕೆಲಸವನ್ನು ಈ ಹೆಸರು ಪರಿಪೂರ್ಣವಾಗಿ, ಪರಿಣಾಮಕಾರಿಯಾಗಿ, ನಿರ್ವಹಿಸ ಬಲ್ಲದೋ ಅಷ್ಟಷ್ಟು ಆ ಹೆಸರು ಸುಂದರ, ಸಾರ್ಥಕ. ಈ ಗುರುತಿಸುವ ಕೆಲಸದ ಸಾರ್ಥಕತೆಯೇ ಈ ಹೆಸರುಗಳ ಜೀವಂತಿಕೆ ಮತ್ತು ನಿರಂತರತೆಗೆ ಕಾರಣೀಭೂತವಾಗಿದೆ.[೧] ವ್ಯಕ್ತಿಗಳು ಇಂದು ಇದ್ದು ನಾಳೆ ಇಲ್ಲದೆ ಹೋಗಬಹುದು. ಆದರೆ ಒಂದು ನಿರ್ದಿಷ್ಟ ಸ್ಥಳ ಬಹುಮಟ್ಟಿಗೆ ತನ್ನ ಭೂ ವೈಶಿಷ್ಟ್ಯಗಳನ್ನು ಕಳೆದುಕೊಳ್ಳದೆ ಸಹಸ್ರಾರು ವರ್ಷ ಹಾಗೇ ಉಳಿಯುತ್ತದೆ. ಆದ್ದರಿಂದ ಸ್ಥಳಗಳಿಗೆ ಹೆಸರಿಡುವುದು ಅತ್ಯಾವಶ್ಯಕವಾಗಿ ತೋರಿತು. ಅದು ಸ್ವಾಭಾವಿಕವೂ ಆಗಿದೆ.

ದೇಶದ ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಗ್ರಾಮಗಳ ಪಾತ್ರ ಬಹು ದೊಡ್ಡದು. ವಿಶೇಷ ಘಟನಾತ್ಮಕ ಹಿನ್ನೆಲೆಯಲ್ಲಿ ರಚನೆಗೊಂಡ ಪ್ರತಿ ಗ್ರಾಮವೂ ಇತಿಹಾಸ ರಚನೆಯಲ್ಲಿ ಪಾತ್ರಗೊಳ್ಳುತ್ತದೆ. ಈ ಕಾರಣದಿಂದ ಗ್ರಾಮನಾಮಗಳ ಅಧ್ಯಯನ ಬಹು ಅವಶ್ಯವಾಗಿದೆ. ಈ ಅಧ್ಯಯನ ಪ್ರಸಂಗದಲ್ಲಿ ಗ್ರಾಮನಾಮ ನಿಷ್ಪತ್ತಿನಿರ್ಣಯ ಪ್ರಥಮ ಮತ್ತು ಪ್ರಮುಖ ಅಂಶವಾಗಿದೆ. ಆದರೆ ನಿಷ್ಪತ್ತಿ ನಿರ್ಣಯ ಅಷ್ಟು ಸುಲಭದ ಮಾತಲ್ಲ.[೨]

ಸಾವಿರಾರು ಪುಟಗಳುಳ್ಳ ದೊಡ್ಡ ಗ್ರಂಥದ ಸಾರ ಅದರ ಹತ್ತಾರು ಅಕ್ಷರಗಳ ಶಿರೋನಾಮದಲ್ಲಿ ಅಡಗಿರುವಂತೆ, ಒಂದು ಗ್ರಾಮದ ವಿಶೇಷತೆಯನ್ನು ಗ್ರಾಮಕ್ಕೊಂದು ಹೆಸರಿಡು ವುದರ ಮುಖಾಂತರ ಆ ವಿಶೇಷತೆಯನ್ನು ಅನಾವರಣ ಗೊಳಿಸುವ ಪ್ರಯತ್ನವನ್ನು ಇಲ್ಲಿ ಕಾಣುತ್ತೇವೆ. ಆ ಗ್ರಾಮದ ವಿಶೇಷತೆ ನಿಸರ್ಗವಾಗಿರಬಹುದು, ಜನಾಂಗವಾಗಿರಬಹುದು ಅಥವಾ ಒಬ್ಬ ವ್ಯಕ್ತಿಯದೂ ಆಗಿರಬಹುದು. ಸ್ಥಳನಾಮ ಅಧ್ಯಯನದಲ್ಲಿ ಪ್ರಾಕೃತಿಕ ಹಾಗೂ ಭೌಗೋಲಿಕ ಅಂಶಗಳು ಬಹಳಷ್ಟು ಪ್ರಭಾವ ಬೀರಿರುವುದನ್ನು ಗಮನಿಸುತ್ತೇವೆ. ಹಾಗೆಯೇ ಒಂದು ಪ್ರದೇಶದ ಆರ್ಥಿಕ ಸ್ಥಿತಿಯನ್ನು, ಅಲ್ಲಿಯ ಸಿರಿ, ಸಂಪತ್ತನ್ನು ಗಮನದಲ್ಲಿಟ್ಟುಕೊಂಡು ಆ ಹಿನ್ನೆಲೆಯಲ್ಲಿ ರೂಪಗೊಂಡ ಸ್ಥಳನಾಮಗಳಲ್ಲಿ ಹೊನ್ನತ್ತಿ ಗ್ರಾಮನಾಮವೂ ಒಂದು. ಶಾಸನಗಳಲ್ಲಿ ರಾಷ್ಟ್ರಕೂಟರ ಕಾಲದಿಂದಲೇ ಕಂಡು ಕೊಳ್ಳುವ ಹೊನ್ನತ್ತಿ ಗ್ರಾಮದ ಸ್ಥಳನಾಮದ ಬಗ್ಗೆ ಕೆಲವು ಮಾಹಿತಿಗಳನ್ನು ಈ ಲೇಖನದಲ್ಲಿ ಕೊಡಲಾಗಿದೆ.

ಹೊನ್ನತ್ತಿಯು ಹಾವೇರಿ ಜಿಲ್ಲೆಯ ರಾಣಿಬೆನ್ನೂರಿನಿಂದ ಉತ್ತರಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಪ್ರಾಚೀನ ಸ್ಮಾರಕಗಳನ್ನು ಸಮೃದ್ಧವಾಗಿ ಹೊಂದಿರುವ ಈ ಗ್ರಾಮವು ೧೦-೧೧ನೆಯ ಶತಮಾನದಲ್ಲಿ ಪ್ರಮುಖ ಪಟ್ಟಣವಾಗಿತ್ತು ಎಂದು ಶಾಸನಾ ಧಾರಗಳಿಂದ ತಿಳಿದುಬರುತ್ತದೆ. ರಾಷ್ಟ್ರಕೂಟರ ಎರಡನೇ ಕೃಷ್ಣನ ಕಾಲದಲ್ಲಿ ಬನವಾಸಿ-೧೨೦೦೦ದ ಒಂದು ಆಡಳಿತ ವಿಭಾಗವಾಗಿ 'ಪುನ್ನವನ್ತಿ ಪನ್ನೆರಡು' ಎಂದು ಗುರುತಿಸಿ ಕೊಂಡಿದೆ.[೩] ಚಲ್ಲಕೇತನ ವಂಶದ ಲೋಕಟೆಯು ಬನವಾಸಿ-೧೨೦೦೦ವನ್ನು ಆಳುತ್ತಿರುವಾಗ ಅವನ ಮಗನಾದ ಕಲಿವಿಟ್ಟನು 'ಪುನ್ನವನ್ತಿ ಪನ್ನೆರಡು' ವಿಭಾಗದ ಆಡಳಿತವನ್ನು ನಡೆಸುತ್ತಿದ್ದನೆಂದು ಶಾಸನದ ಉಲ್ಲೇಖವಿದೆ. ಕಲ್ಯಾಣ ಚಾಲುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಕ್ರಿ.ಶ. ೧೧೨೪ರ ಶಾಸನ[೪] ದಿಂದ ಹೊನ್ನತ್ತಿಯು ಚಾಲುಕ್ಯ ಸಾಮಂತರಾದ ಗುತ್ತಲದ ಗುತ್ತರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿಯುತ್ತದೆ. ಗುತ್ತರಸ ಮಲ್ಲಿದೇವನ ಸಹೋದರನಾದ ಜೋಯಿ ದೇವನ ಪ್ರಧಾನ ರಾದ ದೇಕಣ್ಣ ಮತ್ತು ನಾಕಣ್ಣರಿಂದ ಪ್ರತಿಷ್ಠಾಪಿಸಲ್ಪಟ್ಟ ಚಾಮೇಶ್ವರ ದೇವರಿಗೆ ಬಿಟ್ಟ ದಾನವನ್ನು ಉಲ್ಲೇಖಿಸುವ ಶಾಸನವು ಹೊನ್ನತ್ತಿ ಊರನ್ನು ಬಹುವಾಗಿ ವರ್ಣಿಸಿದೆ.

"ಕುಂತಳ ವಿಷಯ ವಧೂಟೀಕಾಂತಿಸಮೇತಾನನಕ್ಕೆ ಮೂಗಿನವೊಲೆ ಚಲ್ವಂ ತಳೆದು ತೋರ್ಪುದಖಿಳಾಸಾನ್ತಾವೃತ ಕೀರ್ತಿ ಪೊನ್ನವರ್ತಿಗ್ರಾಮ ॥ ಸುರಪುರಮಂ ಪಳಂಚಲೆದು

* ಇತಿಹಾಸ ಅಧ್ಯಾಪಕರು, ಎಸ್.ಆರ್. ನರಸಾಪುರ ಕಲಾ ಹಾಗೂ ಎಂ.ಬಿ. ಶಿರೂರ ವಾಣಿಜ್ಯ ಮಹಾವಿದ್ಯಾಲಯ, ಬಾಗಲಕೋಟೆ.

ಭೋಗವತೀಪುರಮಂ ತಗುಳ್ದುಧಿಕ್ಕರಿಸಿ ಕುಬೇರನಿಕ್ಕೆಯ ಯಳಕಾಪುರಮಂ ಪಳಿದೆಯ್ದೆ ತನ್ನ ಬಿತ್ತರಮನೆ ಲೋಕ ದೊಳ್ಮೆರೆದು ರಂಜಿಸುವಗ್ಗದ ಪೊನ್ನವರ್ತಿಯಂ...."

ಕುಂತಳ ದೇಶವು ವಧುವಾದರೆ ಪೊನ್ನವರ್ತಿ ಗ್ರಾಮವು ಅವಳ ಮೂಗಿನ ಓಲೆಯಾಗಿತ್ತು. ಕುಬೇರನ ಸುರಪುರ, ಭೋಗವತಿಪುರವನ್ನು ನಾಚಿಸುವಷ್ಟು ಸಂಪತ್ತಿನಿಂದ ಕೂಡಿತ್ತು. ಊರುಗಳ ಚಕ್ರವರ್ತಿ ಇದೆಂದು ಶಾಸನವು ಬಣ್ಣಿಸಿದೆ. ಅಲ್ಲದೆ ಇಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ ದೇವಾಲಯ ಗಳನ್ನು ನಿರ್ಮಿಸಲಾಗಿತ್ತು. ಸರ್ವಧರ್ಮಗಳ ಸಾಮರಸ್ಯ ಇಲ್ಲಿ ಇತ್ತೆಂದೂ ಶಾಸನ ತಿಳಿಸುತ್ತದೆ. 'ಶ್ರೀಮದನಾದಿಯ ಗ್ರಹಾರಂ ಪೊನ್ನವರ್ತಿಯೂರೊಡೆಯ ಪ್ರಮುಖ ಮಹಾ ಜನ ವಿನ್ನೂರ್ವ್ವ'ರನ್ನು ಯಜ[ನ]ಯಾಜನ ಅಧ್ಯಯನಾಧ್ಯಾಪ ನದಾನ ಪ್ರತಿಗ್ರಹ ಷಟ್ಕರ್ಮ ನಿರತರೆಂದೂ ವರ್ಣಿಸಿದೆ. ಅದರಂತೆ ಹೊಲ, ಗದ್ದೆ, ತೋಟ, ಉದ್ಯಾನವನ, ತಟಾಕ ಗಳಿಂದ ಕೂಡಿದ ರಮಣೀಯ ಸ್ಥಳವೆಂದೂ ವಿವರಿಸಿದೆ.

ಕ್ರಿ.ಶ. ೧೧೮೭ರ ಗುತ್ತರಸ ಎರಡನೆ ಜೋಯಿದೇವನ ಕಾಲದ ಶಾಸನವು[೫] ಹೊನ್ನತ್ತಿಯನ್ನು 'ಹೊನವತಿ' ಎಂದು ಉಲ್ಲೇಖಿಸಿದೆ. ಇಲ್ಲಿ ಸರ್ವಪ್ರಧಾನ ತಿಪ್ಪರಸರು 'ಹೊನವತಿಯ ಚಾಮೇಶ್ವರದೇವರ ಸಮೀಪದಲು ರಾಜೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿ ದಾನಬಿಟ್ಟ ವಿಷಯವನ್ನು ದಾಖಲಿಸಿದೆ. ಕ್ರಿ.ಶ. ೧೧೯೭ರಲ್ಲಿ ಹೊನ್ನತ್ತಿಯು ಹೊಯ್ಸಳರ ಅಧಿಕಾರಕ್ಕೆ ಒಳಪಟ್ಟಿತು.[೬] ಎರಡನೇ ವೀರಬಲ್ಲಾಳನ ಕಾಲದ ಶಾಸನದಲ್ಲಿ ರಾಜಾಧ್ಯಕ್ಷ ದಾವಣ್ಣ ಹೊಂನವತಿಯ ಶ್ರೀಕೇಶವದೇವರ್ಗೆ ನಂದಾದೀವಿಗೆಗಾಗಿ ಎಣ್ಣೆಗಾಣ ಹಾಗು ನಿವೇಶನವನ್ನು ದಾನ ಕೊಟ್ಟಿರುವನು. ಹೀಗೆ ಹೊನ್ನತ್ತಿಗೆ ಸಂಬಂಧಪಟ್ಟ ಶಾಸನ ಗಳನ್ನು ಗಮನಿಸಿದಾಗ ಹೊನ್ನತ್ತಿ ಸ್ಥಳನಾಮವು ಶಾಸನದಿಂದ ಶಾಸನಕ್ಕೆ ತುಸು ಬದಲಾವಣೆಯನ್ನು ಹೊಂದುತ್ತ ಬಂದಿರು ವುದು ಕಂಡುಬರುತ್ತದೆ. ರಾಷ್ಟ್ರಕೂಟ ಎರಡನೆ ಕೃಷ್ಣನ ಕಾಲದಲ್ಲಿ 'ಪುನ್ನವನ್ತಿ' ಎಂದು ಉಲ್ಲೇಖಗೊಂಡು ಮುಂದೆ 'ಪೊನ್ನವರ್ತಿ', 'ಹೊಂನವತ್ತಿ', 'ಹೊನವತಿ', ಎಂದು ಬದಲಾವಣೆಗೊಳ್ಳುತ್ತ ಈಗ 'ಹೊನ್ನತ್ತಿ' ಎಂದು ಕರೆಯಲ್ಪಡುತ್ತದೆ.

ಈ ಸ್ಥಳನಾಮದ ಪೂರ್ವಪದವು ಪುನ್ನ>ಪೊನ್ನ> ಹೊಂನ>ಹೊನ್ನ ಎಂದು ಬದಲಾಗಿದೆ. ಇವೆಲ್ಲವೂ ಬಂಗಾರ ಎಂಬ ಅರ್ಥವನ್ನು ಕೊಡುತ್ತವೆ. ಈ ಸ್ಥಳನಾಮದ ಉತ್ತರ ಪದವು ವನ್ತಿ>ವತ್ತಿ>ವರ್ತಿ>ವತಿ ಎಂದು ಬದಲಾವಣೆ ಗೊಂಡಿದೆ. ವನ್ತಿ>ವತ್ತಿ, 'ವತಿ' ಎಂಬ ಪದಕ್ಕೆ 'ಕಡೆ', 'ಪಕ್ಷ' ಎಂಬ ಅರ್ಥವಿದೆ.[೭] ಪುನ್ನ+ವನ್ತಿ>ವತಿ–'ಹೊನ್ನಿನಪಕ್ಷ' ಎಂದರೆ ಇದು ಶ್ರೀಮಂತಿಕೆಯ ಸಂಕೇತವಾಗಿದೆ. 'ವರ್ತಿ' ಎಂಬ ಪದಕ್ಕೆ 'ಸೆರಗಿನತುದಿ' ಎಂಬ ಅರ್ಥವಿದೆ.[೮] ಪೊನ್ನ+ ವರ್ತಿ ಎಂಬುದಕ್ಕೆ ಹೊನ್ನಿನ ಸೆರಗು ಎಂಬ ಅರ್ಥವನ್ನೂ ಕೊಡ ಬಹುದು. ಇದು ಕೂಡ ಇಲ್ಲಿಯ ಸಿರಿ ಸಂಪತ್ತನ್ನು ಸೂಚಿಸುವ ಪದವಾಗಿದೆ.

'ವರ್ತಿ' ಎಂಬ ಪದವು 'ಒರೆತ' ಎಂಬ ಆರ್ಥವನ್ನೂ ಕೊಡುತ್ತದೆ.[೧೦] ಒರತೆ, ಚಿಲುಮೆ, ನೀರು ಜಿನುಗುವ ಸ್ಥಳ ಎಂದಾಗುತ್ತದೆ. ಹೊನ್ನವರ್ತಿ ಎಂಬ ಪದಕ್ಕೆ ಹೊನ್ನಿನ ಚಿಲುಮೆ, ಹೊನ್ನಿನ ಒರತೆ ಎಂದೂ ಅರ್ಥೈಸಬಹುದು. ಇದು ಕೂಡ ಸಿರಿ ಸಮೃದ್ಧಿಯನ್ನು ಸೂಚಿಸುವ ಪದವಾಗಿದೆ. ಇಲ್ಲಿಯ ಫಲವತ್ತಾದ ಭೂಮಿಯಿಂದ ಮತ್ತು ತಟಾಕ, ಕೆರೆಗಳಿಂದ ನೀರಿನ ಸೌಕರ್ಯವನ್ನು ಹೊಂದಿದ್ದರಿಂದ ಕೃಷಿಯೂ ಸಮೃದ್ಧವಾಗಿತ್ತು ಮತ್ತು 'ಊರುಗಳ ಚಕ್ರವರ್ತಿ' ಎನಿಸಿಕೊಂಡಿದ್ದ ಹೊನ್ನತ್ತಿಯು ಆರಳರಸರ ಪ್ರಧಾನ ಪಟ್ಟಣವಾಗಿದ್ದರಿಂದ ಸಿರಿ ಸಮೃದ್ಧಿಯಿಂದ ಕೂಡಿತ್ತು ಎಂದು ಸ್ಪಷ್ಟವಾಗುತ್ತದೆ. ಇಲ್ಲಿಯ ಉತ್ತಮವಾದ ಆರ್ಥಿಕ ಸ್ಥಿತಿಯನ್ನು ಬಿಂಬಿಸುವ ಈ ಗ್ರಾಮದ ಸ್ಥಳನಾಮವು ಸೂಕ್ತವಾಗಿದ್ದು ಗಮನ ಸೆಳೆಯುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಮಣಿಪಾಲ ಆರ್.ಕೆ. : **ಮಹಾಮಾರ್ಗ**; ನಾಮವಿಜ್ಞಾನ, ಸದಾನಂದ ಕನವಳ್ಳಿ, ವೀರಣ್ಣ ರಾಜೂರ (ಸಂ) ಪುಟ. ೧೫೦.(ಸಂ)

೨. ಕಲಬುರ್ಗಿ ಎಂ.ಎಂ., **ಮಾರ್ಗ-೩**, ಲೇ : **ಧಾರವಾಡ ಗ್ರಾಮನಾಮ ವಿವೇಚನೆ**, ಪು. ೪೭೧.

೩. **ಸೌ.ಇಂ.ಇನ್.**, ಸಂ. XVIII ನಂ. ೧೭.

೪. ಅದೇ, ನಂ. ೧೨೪., ೫. ಅದೇ, ನಂ. ೧೯೪

೬ ಅದೇ, ನಂ. ೩೦೨.

೭. **ಸಂಕ್ಷಿಪ್ತ ಕನ್ನಡ ನಿಘಂಟು** (ಕನ್ನಡ-ಕನ್ನಡ)., ವೆಂಕಟಸುಬ್ಬಯ್ಯ ಜಿ. (ಸಂ), ಪು. ೭೫೦.

೮. ಅದೇ, ಪು. ೭೫೫.

೯. **ಧಾರವಾಡ ಜಿಲ್ಲಾ ಗ್ಯಾಜೆಟಿಯರ್.**, ಪು. ೧೦೫೦.

ಕೆ. ಸತೀಶ್*

# ಹಂಪಸಾಗರ ಗ್ರಾಮನಾಮ ವಿವೇಚನೆ

ಬಳ್ಳಾರಿ ಜಿಲ್ಲೆಯ ಅನೇಕ ಐತಿಹಾಸಿಕ ಕುರುಹುಗಳನ್ನು ತನ್ನ ಮಡಿಲಲ್ಲಿರಿಸಿಕೊಂಡಿದೆ. ಈ ಜಿಲ್ಲೆಯಲ್ಲಿ ಪ್ರಾಚೀನ ಶಿಲಾಸಂಸ್ಕೃತಿಗೆ ಸೇರಿದ ಹಲವಾರು ಗ್ರಾಮಗಳಿವೆ.

ವಿಜಯನಗರ ಸಾಮ್ರಾಜ್ಯದ ಪತನ ಹೊಂದಿದ ನಂತರದಲ್ಲಿ ಅನೇಕ ಪಾಳೇಗಾರರು ಈ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದರು. ಈ ಜಿಲ್ಲೆಯಲ್ಲಿರುವ ಅನೇಕ ಗ್ರಾಮನಾಮಗಳು ಇದರ ಐತಿಹಾಸಿಕತೆಗೆ ಸಾಕ್ಷಿಗಳನ್ನೊದಗಿಸುತ್ತವೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕು ನದಿ, ಹಳ್ಳ, ಕೊಳ್ಳ, ತಗ್ಗು, ದಿಬ್ಬದ ಪ್ರದೇಶಗಳಿಂದ ಕೂಡಿದ್ದು ಪ್ರಕೃತಿದತ್ತ ಜಲಮೂಲಗಳ ಹತ್ತಿರ ವಿಶಾಲವಾದ ಬಯಲು ಪ್ರದೇಶಗಳ ಸುತ್ತಲೂ ಚಿಕ್ಕ ಬೆಟ್ಟಗುಡ್ಡಗಳಿರುವ ಸ್ಥಳದಲ್ಲಿ ಚಿಕ್ಕ ಅರಣ್ಯಗಳ ಸಮೀಪದಲ್ಲಿಯೂ ಗ್ರಾಮಗಳಿವೆ. ಈ ತಾಲ್ಲೂಕಿನ ಹಲವಾರು ಗ್ರಾಮಗಳು ತುಂಗಭದ್ರ ಅಣೆಕಟ್ಟಿನ ಹಿನ್ನೀರಿನಲ್ಲಿ ಮುಳುಗಡೆಯಾಗಿದ್ದು ಅವುಗಳ ಐತಿಹಾಸಿಕತೆಯನ್ನೂ ಗ್ರಾಮನಾಮವನ್ನು ವಿವೇಚಿಸುವುದು ಒಂದು ಸವಾಲಾಗಿ ಪರಿಣಮಿಸಿದೆ. ಇಂಥ ಪ್ರಕೃತಿಯನ್ನು ಹೊಂದಿರುವ ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೆ ಸೇರಿದ ಗ್ರಾಮವೇ ಹಂಪಸಾಗರ. ಇದು ತುಂಗಭದ್ರ ಹಿನ್ನೀರಿನಲ್ಲಿ ಮುಳುಗಡೆಯಾದ ಗ್ರಾಮವಾಗಿದ್ದು ಇಂದು ಹಂಪಸಾಗರ–೧ ಹಂಪಸಾಗರ–೨ ಮತ್ತು ಹಂಪಸಾಗರ–೩ ಎಂದು ಮೂರು ಗ್ರಾಮಗಳಾಗಿ ವಿಭಾಗವಾಗಿದೆ.

ಹಂಪಸಾಗರ ಎಂಬ ಹೆಸರಿನ ಮೂಲವನ್ನು ಎರಡು ರೀತಿಯಿಂದ ವಿವೇಚಿಸಬಹುದು. ಜಲಸೂಚಿ ಮತ್ತು ವ್ಯಕ್ತಿಸೂಚಿ–ಈ ಎರಡೂ ಮೂಲಗಳಿಂದ ಈ ಗ್ರಾಮನಾಮವನ್ನು ವಿವೇಚಿಸಬಹುದು. ಜಲಸೂಚಿ ಎಂದರೆ ಇದಕ್ಕೆ ಪೂರಕವಾಗಿ ದೊರೆಯುವ ಆಧಾರಗಳು ಜನಪದೀಯ ಆಧಾರಗಳಾಗಿವೆ. ತುಂಗಭದ್ರ ನದಿಯನ್ನು ಈ ಭಾಗದ ಜನರು ಪ್ರಾಚೀನ ಕಾಲದಿಂದಲೂ "ಹಂಪಿಹೊಳೆ" ಎಂದು ಕರೆಯುವುದು ರೂಢಿಗತವಾಗಿದೆ. ಹಂಪಿ ವಿಶ್ವವಿದ್ಯಾಲಯದ ಶಾಸನ ಸಂಪುಟದಲ್ಲಿ ಈ ನದಿಯನ್ನು ಹಂಪಿಹೊಳೆ ಎಂದು ಕರೆಯುತ್ತಿದ್ದರು ಎಂಬುದನ್ನು ಉಲ್ಲೇಖಿಸಲಾಗಿದೆ. ಅಲ್ಲದೆ ಹಂಪಸಾಗರದ ಪಕ್ಕದ ಗ್ರಾಮವಾದ ಯೇಣಿಗಿಬಸಾಪುರದ ಮಾದರ ಜಾತಿಯ ಜನರು ಹಾಡಿರುವ "ಕಾಗೆ ಹೊಡೆದವರಿಗೆ ಮಗಳು" ಎಂಬ ಜನಪದ ಕಾವ್ಯದಲ್ಲಿನ ಕೊನೆಯ ಸಾಲುಗಳು.

**ಮುಂದೆ ಮುಂದೆ ರಾಮಣ್ಣ ಹಿಂದೆ ಹಿಂದೆ ಲಕ್ಷ್ಮಣಾ.**
**ನೆಟ್ಟಾ ನಡಿವೀಲೇ ಸೀತಾಮ್ಮಾರು ಮೂವರು.**
**"ಹಂಪಿಯ ಹೊಳೆಯಲ್ಲಿ" ನೆಡೆದಾರಲ್ಲ**

ಎಂಬ ಉಲ್ಲೇಖವಿದೆ. ಹಾಡಿನ ಕೊನೆಯಲ್ಲಿ

ಬರುವ' ಹಂಪಿಹೊಳೆ"ಯು ತುಂಗಭದ್ರ ನದಿಯೇ ಆಗಿದೆ ಎಂಬುದು ಸ್ಪಷ್ಟವಾಗಿದೆ.[೧]

ಹಂಪಿಯಲ್ಲಿ ದೊರೆಯುವ ಜನಪದ ತ್ರಿಪದಿಗಳಲ್ಲೂ ಹಂಪಿಯ ಹೊಳೆಯ ಉಲ್ಲೇಖವಿದೆ.

**"ಹಂಪಿಯ ಹೊಳೆಚಂದ" ಪಂಪನ ಗುಡಿ ಚಂದ**
**ಹೇಮಾದ್ರಿ ಚಂದ ಪರಿಸಿಗೆ: ಆನೆಗೊಂದಿ**
**ರಾಜರಿಗೆ ಚಂದ ಪ್ರಜೆಗಳು॥**

**ದೀರಣ್ಣ ರಾಮ ನೀಲ ತೇಜನೇರಿ**
**ನೀರ್ಲಾಣೆ ಮೈಯ ತೊಳಿವಾಗ : ಹಂಪಿಯ**
**ಹೊಳೆಯಾಗ ಆಟ ಆಡ್ಯಾನೆ.**

**ಕುದುರೆ ಕುಣಿದಾವ ಹಂಪಿ ಹೊಳೆಯ ಮ್ಯಾಲೆ**
**ನೀರು ಕುಣಿದಾತು ಹೊಳೆಯಲ್ಲಿ: ರಾಮಯ್ಯನ**
**ಕತ್ತಿ ಕುಣಿದಾತು ರಣದಲ್ಲಿ–**[೨]

ಹಂಪಾದೇವಿಯಿಂದ "ಹಂಪೆ" ಎಂಬ ಹೆಸರು ಬಂದಿದ್ದು ನಂತರದಲ್ಲಿ ಅದು ತುಂಗಭದ್ರ ನದಿಗೂ "ಹಂಪಿ ಹೊಳೆ" ಎಂದು ಜನತೆಯ ಬಾಯಿಯಲ್ಲಿ ಉಳಿದು ಹೋಗಿದೆ.

ಹಂಪಸಾಗರ ಪೂರ್ವಪದವಾದ "ಹಂಪ" ಇದು ಹಂಪೆಯೊಂದಿಗೆ ತಳುಕು ಹಾಕಿಕೊಂಡಿರುವುದೆಂದು ಮೇಲು ನೋಟಕ್ಕೆ ಗೋಚರವಾಗುತ್ತದೆ. ಏಕೆಂದರೆ ಈ ಭಾಗದ

* ಮಿಲ್ಟ್ರಿಬಯಲು, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ (ಜಿಲ್ಲಾ) – ೫೮೩ ೨೧೨.

ಹಲವಾರು ಗ್ರಾಮನಾಮಗಳು ಹಂಪೆಯ ಹೆಸರಿನೊಂದಿಗೆ ಸಂಬಂಧ ಹೊಂದಿವೆ. ಅವುಗಳಲ್ಲಿ ಹಂಪಾಪಟ್ಟಣ ಹಂಪಾ ದೇವಿಯ ತವರು ಮನೆಯಂತೆ. ಹೂವಿನ ಹಡಗಲಿಯಿಂದ ಹಂಪೆಗೆ ಹೂವುಗಳನ್ನು ಕಳುಹಿಸುತ್ತಿದ್ದರಿಂದ "ಹೂವಿನ ಹಡಗಲಿ" ಎಂಬ ಹೆಸರು ಬಂದಿದೆ ಎಂದು ಈ ಭಾಗದಲ್ಲಿ ಐತಿಹ್ಯಗಳಿವೆ. ಇನ್ನು ಉತ್ತರಪದವಾದ "ಸಮುದ್ರ" ಎಂಬುದು ಜಲವಾಚಿ ಸ್ಥಳವನ್ನು ಸೂಚಿಸುತ್ತದೆ. ಎನ್ನಬಹುದು. ಉದಾಹರಣೆಗೆ ಅಂಕಸಮುದ್ರ, ಹಳಸಾಗರ, ಸೋಮಸಮುದ್ರ ಮುಂತಾದ ಊರುಗಳು; ಬಳ್ಳಾರಿ ಜಿಲ್ಲೆಯಲ್ಲಿವೆ "ಸಮುದ್ರ" ಎಂಬ ಪದವು ಆ ಗ್ರಾಮದ ಪಕ್ಕದಲ್ಲಿರುವ ಕೆರೆಯನ್ನು ಚಿಕ್ಕ ಅಣೆಕಟ್ಟನ್ನು ಸೂಚಿಸುತ್ತದೆ. ಹೀಗಾಗಿ ಹಂಪಸಾಗರವೆಂಬುದು ಹಂಪೆಹೊಳೆಗೆ "ಹಂಪ ನಾಯಕ" ಎಂಬುವನು ವಿಜಯ ನಗರ ಕಾಲದಲ್ಲಿ ಸಣ್ಣ ಆಣೆಕಟ್ಟನ್ನೊ ಕಟ್ಟಿದ್ದರಿಂದ ಈ ಹೆಸರು ಬಂದಿದೆ ಎಂಬ ಪ್ರತೀತಿ ಈ ಭಾಗದಲ್ಲಿದೆ. ಆದರೆ ಹಂಪ ಸಾಗರದ ಸುತ್ತಮುತ್ತ ಕೆರೆ ಇಲ್ಲದಿದ್ದರಿಂದ. ಹಂಪಿಹೊಳೆಗೆ ಆಣೆಕಟ್ಟು ಕಟ್ಟಿದ್ದರಿಂದ ಈ ಹೆಸರು ಬಂದಿದೆ ಎಂದು ಹೇಳ ಬಹುದಾದರೂ "ಹಂಪನಾಯಕ" ಎಂಬ ಹೆಸರಿನ ವ್ಯಕ್ತಿ ವಿಜಯನಗರ ಕಾಲದಲ್ಲೇ ಇದ್ದನೆಂದು ಹೇಳಬೇಕೆಂದರೆ ಈ ಭಾಗದ ಐತಿಹಾಸಿಕ ಆಧಾರಗಳ ಕೊರತೆ ಇದೆ.

ಆದರೆ ಹಂಪಸಾಗರಕ್ಕೆ ನಾಲ್ಕು ಕಿಲೋಮೀಟರ್ ದೂರದಲ್ಲಿರುವ ಯೇಣಿಗಿ ಎಂಬ ಗ್ರಾಮದಲ್ಲಿ ದೊರೆಯುವ ಕ್ರಿ.ಶ. ೧೨೫೪ರ ಶಾಸನದಲ್ಲಿ ದೇವಗಿರಿಯ ಯಾದವ ವಂಶದ ಅರಸನಾದ ಕಂಧರರಾಯನು ನೊಳಂಬವಾಡಿ-ಮುವತ್ತೆರಡು ಸಾಸಿರದ ವಿಭಾಗವಾದ ಕೋಗಳಿ-ಐದುನೂರು ನಾಡಿಗೆ ಸೇರಿದ ಪೂವಿನ ಪಡಂಗಲಿಯ ನೂರಿಪತ್ತು ಮಹಾಜನರು ಯೇಣಿಗಿಯ "ತುಸ್ಮನಾಥ ದೇವರಿಗೆ" ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಭೂದಾನ ನೀಡುತ್ತಾರೆ. ದಾನ ನೀಡಿದ ಭೂಮಿಯ ಚಕ್ಕುಬಂದಿಯನ್ನು ಹೇಳುವಾಗ "ಹಂಪನ ಕೆಜುಗೆ ಹೋಗುವ" ಎಂಬ ಹೆಸರು ಉಲ್ಲೇಖಗೊಂಡಿದೆ.[3] ಹಾಗಾಗಿ ಈ "ಹಂಪನ ಕೆಜ಼ುಯೇ" ಮುಂದೆ ಹಂಪ ಸಾಗರವಾಗಿರ ಬಹುದಾಗಿದೆ.

ಈ ಶಾಸನದಲ್ಲಿ "ಹಂಪನಕೆಜು" ಎಂದು ನಮೂದಾಗಿ ರುವುದರಿಂದ ಪೂರ್ವಪದವು "ಹಂಪನ" ಎಂದಿದೆ ಆದ್ದರಿಂದ ಸ್ಪಷ್ಟವಾಗಿ ಇದು ವ್ಯಕ್ತಿನಾಮ ಸೂಚಕವಾಗಿದೆ ಎಂದು ಆಧಾರ ದೊರೆತಂತಾಗುತ್ತದೆ ನಂತರದ ಪದವಾದ "ಕೆಜು" ಎಂಬ ಶಬ್ದವು ಕಾಲಾನಂತರದಲ್ಲಿ ಸಮುದ್ರ ಎಂಬ ಹೆಸರನ್ನು ಪಡೆದುಕೊಂಡಿತು. ಈ ಶಾಸನದ ಆಧಾರದಿಂದ ಹಂಪಸಾಗರ ಎಂಬ ಗ್ರಾಮನಾಮ ವಿಜಯನಗರ ಕಾಲದಲ್ಲಿ ಹುಟ್ಟಿದ್ದಾಗಿರದೆ ಅದಕ್ಕಿಂತಲೂ ಪ್ರಾಚೀನ ಕಾಲದಿಂದಲೂ ಈ ಗ್ರಾಮವು ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಶಾಸನ ಸ್ಪಷ್ಟ ಆಧಾರ ಒದಗಿಸುತ್ತದೆ.

ಅಂದರೆ ಹಂಪಾದೇವಿಯ ಪೌರಾಣಿಕ ಹೆಸರು ಹಂಪೆ ಯಂಬ ಗ್ರಾಮನಾಮಕ್ಕೆ ಕಾರಣವಾಯಿತು; ಇದು ಮುಂದೆ ಈ ಭಾಗದಲ್ಲಿ ತುಂಗ-ಭದ್ರಾನದಿಗೂ "ಹಂಪಿಹೊಳೆ" ಎಂಬ ಹೆಸರು ಬರಲು ಕಾರಣವಾಯಿತು. ಅಲ್ಲದೆ ಈ ಭಾಗದಲ್ಲಿ ಕೇಳಿಬರುವ "ಹಂಪ" ಎಂಬುವ ವ್ಯಕ್ತಿನಾಮದ ಹುಟ್ಟಿಗೂ ಕಾರಣವಾಗಿದ್ದನ್ನು ಗುರುತಿಸಬಹುದಾಗಿದೆ.

ಹಂಪ ಎನ್ನುವ ವ್ಯಕ್ತಿಯು ೧೨೫೪ರಕ್ಕಿಂತಲೂ ಪೂರ್ವದಲ್ಲಿ ಕೆರೆಯನ್ನು ಕಟ್ಟಿದ್ದರಿಂದ ಹಂಪಸಾಗರಕ್ಕೆ ಹಂಪನಕೆರೆ ಎಂಬ ಹೆಸರು ಬಂದಿರಬೇಕು. ನಂತರದಲ್ಲಿ ಅಂದರೆ ವಿಜಯನಗರ ಕಾಲದಲ್ಲಿ ಆ ಕೆರೆಯನ್ನು ಪಾಳೇ ಗಾರನೋ ಅಧಿಕಾರಿಯೋ ದುರಸ್ತಿಗೊಳಿಸಿದ್ದರಿಂದಲೋ ಅಥವಾ ಹಂಪಿಹೊಳೆಗೆ ಚಿಕ್ಕ ಅಣೆಕಟ್ಟನ್ನು ಕಟ್ಟಿದ್ದರಿಂದ ನೀರಿನ ಶೇಖರಣೆ ಹೆಚ್ಚುಗೊಂಡಿರಬೇಕು. ಆಗ "ಹಂಪನ ಕೆರೆ" ಎಂದಿದ್ದ ಗ್ರಾಮದ ಹೆಸರು "ಹಂಪಸಾಗರ" ಎಂಬ ಹೆಸರು ಬರಲು ಕಾರಣವಾಗಿದೆ ಎಂದು ಹೇಳಬಹುದು.

ಹೀಗೆ ಹಂಪಸಾಗರ ವೆಂಬುದು ಪೂರ್ವದಲ್ಲಿ ಹಂಪನ ಕೆರೆಯಾದದ್ದು ವಿಜಯನಗರ ಕಾಲಕ್ಕೆ ಹಂಪಸಾಗರ ಎಂಬ ಹೆಸರು ಬಂದಿದೆ ಎಂದು ಹೇಳಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪುರುಷೋತ್ತಮ ಬಿಳಿಮಲೆ., ೧೯೯೬, **ಹಂಪಿ ಜಾನಪದ** ; ಪ್ರಸಾರಾಂಗ ; ಕ.ವಿ.ವಿ. ಪುಟ. ೨೯.

೨. ಅದೇ., ಪುಟ. ೫೬.

೩. **ಕವಿಶಾಸಂ** ಹಗರಿಬೊಮ್ಮನಹಳ್ಳಿ, ३೭ ಕ್ರಿ.ಶ. ೧೨೫೪.

ಗುರುಮೂರ್ತಿ ಪೆಂಡಕೂರು*

# ಹಗರಿಬೊಮ್ಮನಹಳ್ಳಿಯಲ್ಲಿ ಮನೆತನದ ಹೆಸರುಗಳು

ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕು ಕೇಂದ್ರ ನಮ್ಮೂರು ಹಗರಿಬೊಮ್ಮನಹಳ್ಳಿ. ೧೯೪೦ರ ವರೆಗೆ ಹತ್ತಾರು ಮನೆಗಳ ಪುಟ್ಟ ಹಳ್ಳಿಯಾಗಿತ್ತು. ಹೊಸಪೇಟೆ ಮತ್ತು ಗದುಗಿನ ಕೆಲ ಉದ್ಯಮದಾರರು ೧೯೪೨ರ ಸುಮಾರಿಗೆ ಕರ್ನಾಟಕ ವೆಜಿಟಬಲ್ ಆಯಿಲ್ಸ್ ಅಂಡ್ ರಿಫೈನರೀಸ್ ಎಂಬ ಕಂಪೆನಿಯನ್ನು ಸ್ಥಾಪಿಸಿದ ಮೇಲೆ ಗುತ್ತಿಗೆದಾರರು, ಕಟ್ಟಡಕೆಲಸದವರು, ಕೂಲಿಕಾರರು, ದಲ್ಲಾಳಿಗಳು ಅಧಿಕಾರಿಗಳು ಮುಂತಾದವರು ವಲಸೆ ಬಂದರು. ತುಂಗಭದ್ರಾ ಅಣೆಕಟ್ಟೆಯ ನಿರ್ಮಾಣದಲ್ಲಿ ಕೆಲಸ ಮಾಡುತ್ತಿದ್ದ ತಮಿಳುನಾಡಿನ ತಿರುವಣ್ಣಾಮಲ್ಯೆ, ತಿರುಚಿನಾಪಳ್ಳಿ ಪ್ರಾಂತದ ಕೊಂಗುನಾಡಿನ ಜನರು ಇಲ್ಲಿಗೆ ಬಂದರು.

೧೯೫೨ರಲ್ಲಿ ತುಂಗಭದ್ರಾ ಜಲಾಶಯದಲ್ಲಿ ಮುಳುಗಡೆಯಾದ ೧. ನಾರಾಯಣದೇವರಕೆರೆ, ೨. ಅರಳಿಹಳ್ಳಿ, ೩. ಕುರುದಗಡ್ಡಿ, ೪. ವಲ್ಲಭಾಪುರ, ೫. ಮುತ್ಕೂರು, ೬. ಬಲ್ಲಾಹುಣಿಸಿ ಮುಂತಾದ ಗ್ರಾಮಗಳ ಜನರ ಮರುವಸತಿಗಾಗಿ ಆಗಿನ ಮದ್ರಾಸ್ ಸರಕಾರದವರು ಕಾಲನಿಗಳನ್ನು ನಿರ್ಮಿಸಿದಾಗ ಅವರೆಲ್ಲಾ ಇಲ್ಲಿಗೆ ಸ್ಥಳಾಂತರಗೊಂಡರು, ನಾರಾಯಣದೇವರ ಕೆರೆಯ ವಣಿಕರೂ, ಉದ್ಯಮಪತಿಗಳೂ ಆದ ವೈಶ್ಯ ಜನಾಂಗದವರು ಇಲ್ಲಿ ಹತ್ತಾರು ಸೇಂಗಾ ಗಿರಣಿ, ಆಯಿಲ್ ಮಿಲ್ ಕಟ್ಟಿದರು. ಸಮರ್ಥ ರೈತರು ತಮಗೆ ಸರಕಾರ ನೀಡಿದ ಕುರುಚಲು ಕಾಡನ್ನು ಕಡಿದು ಹೊಲಗಳನ್ನು ಮಾಡಿ ಬೆಳೆತೆಗೆದರು.

ಸುಮಾರು ಐವತ್ತು ವರ್ಷಗಳ ಹಿಂದೆ ಪ್ರಾರಂಭವಾದ ನಾನಾ ತರಹದ ಜನ ವಲಸೆಯ ಪ್ರವಾಹ ಇಂದಿಗೂ ನಮ್ಮೂರ ಕಡೆಗೆ ಪ್ರವಹಿಸುತ್ತಲೇ ಇದೆ. ಈ ರೀತಿಯ ಜನಪ್ರವಾಹದ ಸಂಗಮದಿಂದ ನಮ್ಮೂರ ಜನಾಂಗೀಯ ಲಕ್ಷಣಗಳು ವಿಶೇಷ ಅಧ್ಯಯನಕ್ಕೆ ಯೋಗ್ಯವಾಗಿವೆ. ಹೊಸದಾಗಿ ಯೋಜಿಸಲ್ಪಟ್ಟ ಊರಾದ ಕಾರಣ ಸರಿಯಾದ ರಸ್ತೆಗಳ ವ್ಯವಸ್ಥೆ ಮತ್ತು ನಾನಾವಿಧವಾದ ಪೌರ ಸೌಕರ್ಯಗಳು ಇರುವುದರಿಂದ ನಾನಾ ರೀತಿಯ ವ್ಯಾಪಾರಿಗಳು. ನಿವೃತ್ತ ಅಧಿಕಾರಿಗಳು, ಕುಶಲಕರ್ಮಿಗಳು, ಮಾರವಾಡಿಗಳು ಮತ್ತು ವರ್ಕ್‌ಷಾಪಿನ ನಿಪುಣರಾದ ಮುಸಲ್ಮಾನರು ಇಲ್ಲಿಗೆ ಬರುತ್ತಿದ್ದಾರೆ. ಹೀಗಾಗಿ ಬೇರೆ ಎಲ್ಲಿಯೂ ಕಾಣದ ಅಪರೂಪದ ವರ್ಣಮಯ ಜನಾಂಗೀಯ ನೆಲೆ ಇಲ್ಲಿದೆ. ಇಲ್ಲಿಯ ಮನೆತನದ ಹೆಸರುಗಳೇ ಅತ್ಯಂತ ಕುತೂಹಲ ಕಾರಕವಾಗಿವೆ.

ಮನೆತನ ಅಥವಾ ಕುಟುಂಬದ ಹೆಸರೆಂದರೆ-ಅದು ಇಡೀ ಊರಿನ ಜನ ಸಮೂಹದಲ್ಲಿ ಅವರನ್ನು ಪ್ರತ್ಯೇಕವಾಗಿ ಗುರುತಿಸಲು ಒಂದು ಸಾಧನ. ಅದು ಆ ವ್ಯಕ್ತಿಯ ಕುಟುಂಬದ ಮೂಲ ಮಹಾಶಯರ ಅಥವಾ ಪೂರ್ವಜರ ನೆಲೆ. ಕಸಬು, ಮತ್ತೇನಾದರೂ ವಿಶೇಷ ವಿಷಯವಾಗಿರಬಹುದು. ಕೆಲವೆಡೆ ಇದನ್ನು ಅಡ್ಡ ಹೆಸರೆಂದು ಕರೆಯುತ್ತಾರೆ. ಒಮ್ಮೊಮ್ಮೆ ಅಡ್ಡ ಹೆಸರು ವ್ಯಕ್ತಿಯ ಅನ್ವರ್ಥನಾಮವೂ ಆದೀತು. ಆದರೆ ಮನೆತನದ-ಕುಟುಂಬದ ಹೆಸರು ಬೇರೇನೂ ಆಗಲು ಸಾಧ್ಯವಿಲ್ಲ. ಈ ಮನೆತನದ ಹೆಸರು ವ್ಯಕ್ತಿ ವ್ಯಕ್ತಿಗಳ ಸಂಬಂಧವನ್ನು ಗಟ್ಟಿಗೊಳಿಸುತ್ತದೆ ಮತ್ತು ಅದೊಂದು ಅಭಿಮಾನದ ಗೌರವದ ಗುರುತೂ ಆಗುತ್ತದೆ.

ಈ ಮನೆತನದ ಹೆಸರುಗಳನ್ನು ಮುಖ್ಯವಾಗಿ ನಾಲ್ಕು ರೀತಿಯಲ್ಲಿ ವಿಂಗಡಿಸಬಹುದು.

೧. ಮನೆತನದ ಮೂಲಸ್ಥಾನ-ಊರು
೨. ಅವರು ಮಾಡುವ ಕೆಲಸ-ವೃತ್ತಿ
೩. ಅವರು ತಯಾರು ಮಾಡುವ/ಮಾರಾಟ ಮಾಡುವ ವಸ್ತು.
೪. ಅವರ ಮನೆತನದ ಪ್ರಸಿದ್ಧ ವ್ಯಕ್ತಿ ಅವರ ಸಾಮರ್ಥ್ಯ ಇತ್ಯಾದಿ.

ಇಲ್ಲಿಯ ಜನರ ಪೂರ್ವನೆಲೆಯ ವಿಚಾರದಿಂದ ನೋಡಿದಾಗ ಈ ಜನರು ಅದರಲ್ಲು ಮುಖ್ಯವಾಗಿ ಬ್ರಾಹ್ಮಣ. ವೈಶ್ಯ ಮತ್ತು ವೀರಶೈವರು ದೂರದೂರದ ಊರುಗಳಿಂದ ಈ ಕಡೆಗೆ ಬಂದಿದ್ದಾರೆ. ಪ್ರಮುಖವಾಗಿ ಬ್ರಾಹ್ಮಣ ಮತ್ತು ವೈಶ್ಯರು ಹೈದರಾಬಾದು ಕರ್ನಾಟಕ (ಕಲ್ಯಾಣ ಕರ್ನಾಟಕ)

* ರಾಮನಗರ-ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ.

ಭಾಗದಿಂದ–ಅಂದರೆ–ಗಂಗಾವತಿ, ಮುದಗಲ್, ಚಿದ್ರಿ, ಸನ್ನುತಿ, ಪೆಂಡಕೂರು, ಜಂತಲಿ ಮುಂತಾದ ಕಡೆಗಳಿಂದ ಬಂದಿದ್ದಾರೆ. ಪ್ರಾಯಃ ವಿಜಯನಗರ ಸಾಮ್ರಾಜ್ಯವು ಪ್ರವರ್ಧಮಾನಕ್ಕೆ ಬರುತ್ತಿರುವ ಕಾಲದಲ್ಲಿ ಧರ್ಮ ಪ್ರಾಣಗಳ ರಕ್ಷಣೆಗಾಗಿಯೂ, ಸುಭದ್ರ ವ್ಯಾಪಾರಕ್ಕಾಗಿಯೂ ಈ ಜನರು ಈ ಕಡೆ ವಲಸೆ ಬಂದವರು. ಒಂದೊಂದು ಮನೆತನದ ಇತಿಹಾಸವನ್ನು ಕೆದಕಿ ನೋಡಿದಾಗ ಕಂಡದ್ದೆಂದರೆ–ಇವರೆಲ್ಲಾ ಮೊದಲು ಆ ಕಡೆಯಿಂದ ತುಂಗಭದ್ರೆಯನ್ನು ದಾಟಿ ಈ ಕಡೆ ಬಂದು ವಿಜಯನಗರದ ವಿಸ್ತರಣೆಗಳಾಗಿದ್ದ ಚಿತ್ತವಾಡಿಗಿ, ನಾಗಲಾಪುರ ಮತ್ತು ತಿರುಮಲದೇವಿ ಪಟ್ಟಣಗಳಲ್ಲಿ ನೆಲೆಸಿದರು. ವಿಜಯ ನಗರದ ಪತನಾನಂತರ ಅಲ್ಲಿಂದ ಹೊರಟು ಪಶ್ಚಿಮ ದಲ್ಲಿದ್ದ ಕಣಿವೆಯ ಕೆಳಗಿನ ಸಮೃದ್ಧ ಊರಾಗಿದ್ದ ನಾರಾಯಣ ದೇವರಕೆರೆಯನ್ನು ಸೇರಿದರು. ತುಂಗಭದ್ರೆಗೆ ರಾಯರು ನಿರ್ಮಿಸಿದ್ದ ವಲ್ಲಭಾಪುರ ಮುಂತಾದ ದಿಡುಗುಗಳಿಂದ ಈ ಪ್ರದೇಶದ ಕೃಷಿಯು ಅಭಿವೃದ್ಧಿಯಾಗಿತ್ತು. ತುಂಗಭದ್ರೆಯ ದಡದ ಮಾಗಣಿಯಲ್ಲಿ ಭತ್ತ ಬೆಲ್ಲಗಳ ನಿರಂತರ ಸುಗ್ಗಿಯೇ ಇತ್ತು. ವಣಿಕರನ್ನು ಅನುಸರಿಸಿ ಹೊರಟ ಬ್ರಾಹ್ಮಣರು ಮತ್ತು ಜಂಗಮರು ಈ ಊರುಗಳಲ್ಲಿ ನೆಲೆಸಿದರು.

ಉಳಿದ ಜನಾಂಗದ ಮನೆತನದ ಹೆಸರುಗಳು ವೃತ್ತಿ ನಾಮವಾಚಿಗಳಾಗಿವೆ. ಬಡಿಗೇರ, ಅಕ್ಕಸಾಲಿ, ಪಾತ್ರದವರು, ಹೂಗಾರರು ಮತ್ತು ಎಲಿಗಾರರ ಹೆಸರುಗಳನ್ನು ಕಾಣಬಹು ದಾಗಿದೆ. ಅನೇಕ ಮನೆತನಗಳು ವಸ್ತುನಾಮವಾಚಿಯಾಗಿಯೂ ಇವೆ. ನಾಯಕರ ಮತ್ತು ಕುರುಬರ ಮನೆತನಗಳ ಹೆಸರುಗಳು ಆ ಮನೆತನದ ಪ್ರಸಿದ್ಧ ವ್ಯಕ್ತಿಯ ಹೆಸರನ್ನು ಪಡೆದಿವೆ. ಉದಾ:– ದಾದಮ್ಮನವರ, ರಾಚಣ್ಣನವರ ಮುಂತಾದವು. ಈ ಪರಂಪರೆಯು ಕರ್ನಾಟಕದಲ್ಲಿ ಸಾವಿರಾರು ವರ್ಷಗಳಿಂದ ನಡೆದು ಬಂದಿದೆ.

ನಮ್ಮೂರಿನ ವಿಶೇಷವೆಂದರೆ–ಹಳೆಯ ಊರಿನಲ್ಲಿದ್ದ ಯಾವುದೋ ಒಂದು ವಿಷಯದಿಂದ ಅವರಿಗೆ ಬಂದ ಮನೆತನದ ಹೆಸರು ಇಲ್ಲಿಲ್ಲ. ಉದಾಹರಣೆಗೆ–ಅಲ್ಲಿದ್ದ ಕಟ್ಟೆಯಿಂದ ಕಟ್ಟೀಮನಿ ಎನಿಸಿಕೊಂಡ ಮನೆತನಕ್ಕೆ ಹೊಸ ಊರಿನಲ್ಲಿ ಕಟ್ಟೆಯೇ ಇಲ್ಲ. ಮಹಡಿಮನೆ ಇದ್ದವರಿಗೆ ಇಲ್ಲಿ ಸಾದಾಮನೆಯಿದೆ. ಹೂಗಾರರಾದವರು, ಮಿಠಾಯಿ ಅಂಗಡಿ ಯವರು, ವಡೆ ಅಂಗಡಿಯವರು ಹೊಸ ಊರಿನಲ್ಲಿ ಹೊಸ ವೃತ್ತಿಗೆ ಹೊಂದಿಕೊಂಡ ಕಾರಣ ಆ ಹೆಸರುಗಳು ಅರ್ಥ ಕಳೆದುಕೊಂಡಿವೆ. ಆದರೆ ಅವರನ್ನು ಜನರು ಗುರುತಿಸು ವುದು ಮೊದಲಿನ ಹೆಸರಿನಿಂದ ಮಾತ್ರ, ಆದರೆ ಒಮ್ಮೊಮ್ಮೆ ವಿಚಿತ್ರವಾದ ಹೊಸ ಹೆಸರು ಬಂದು ಹಳೆಯದನ್ನು ಓಡಿಸುತ್ತದೆ. ಉದಾ:– ನಮ್ಮಲ್ಲಿ ಒಬ್ಬರಿಗೆ ಕರ್ನಾಟಕ ಲಾಟರಿ ಯಲ್ಲಿ ಐದು ಲಕ್ಷ ರೂಪಾಯಿಯ ಪ್ರಥಮ ಬಹುಮಾನ ಬಂದಿತು. ಅಂದಿನಿಂದ ಅವರು ಐದು ಲಕ್ಷದ ಪಂಚಪ್ಪ ಎಂದೇ ಪ್ರಸಿದ್ಧರಾಗಿದ್ದಾರೆ. ಬಿರುಸಿನಿಂದ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಕುಂಬಾರರು, ಬಡಿಗೇರರು, ಕಮ್ಮಾರರು ತಮ್ಮ ವೃತ್ತಿಗಳನ್ನು ಬದಲಾಯಿಸುತ್ತಿದ್ದಾರೆ. ಅವರೇನೇ ಆದರೂ ಅವರನ್ನು ಕುಂಬಾರ, ಬಡಿಗೇರ, ಕಮ್ಮಾರ ಎಂದೇ ಗುರುತಿಸುತ್ತಾರೆ.

ಹೂಗಾರರು ತೋಟದ ಕೆಲಸ ಬಿಟ್ಟಿದ್ದಾರೆ. ಆದರೆ ನಮ್ಮ ಭಾಗದ ಅನೇಕ ಕೃಷಿಕರು ಮಲ್ಲಿಗೆ ಹೂ ಬೆಳೆದು ಮಾರುತ್ತಾರೆ. ಅನೇಕ ರೈತರು ಹಣ್ಣುಗಳ ಕೃಷಿಯಲ್ಲಿ ತೊಡಗಿದ್ದಾರೆ. ಆದರೆ ಕೆಲಸೇರು, ಕಟುಗರು, ಕಬ್ಬೇರು ಮುಂತಾದ ಅನೇಕ ಗ್ರಾಮೀಣ ಸೇವೆಗಳಲ್ಲಿ ತೊಡಗಿದ ಜನಾಂಗಗಳು ಅವರವರ ವೃತ್ತಿಗೇ ಅಂಟಿರುವುದರಿಂದ ಅವರ ವೃತ್ತಿನಾಮಗಳು ಅನ್ವರ್ಥವಾಗಿವೆ.

ರಾಜರು ಹೋದಮೇಲೆ ರಾಜ ಪುರೋಹಿತರು ಬೀದಿ ಪಾಲಾಗಿದ್ದಾರೆ. ಪುರಾಣ ಕೇಳುವ ಜನರಿಲ್ಲದ ಕಾರಣ ಪುರಾಣಿಕರು ಸಂಗೀತಕ್ಕೆ ಶರಣಾಗಿದ್ದಾರೆ. ಜಂಗಮರಂತೂ ಶಾಲಾ ಉಪಾಧ್ಯಾಯರಾಗಿದ್ದಾರೆ. ನಾಯಕರು–ಪಾಳೇಗಾರರು ಹೋದ ಮೇಲೆ ಅವರ ಕೋಶಾಧಿಕಾರಿಗಳೆನಿಸಿದ್ದ ಕೊಟ್ಟಿಗೆ ಯವರು ಬೇಸಾಯಗಾರರಾಗಿದ್ದಾರೆ. ಎತ್ತಿನಗಾಣಗಳನ್ನು ನಡೆಸುತ್ತಿದ್ದ ಗಾಣಿಗರು ಎಕ್ಸಪೆಲರ್‌ಗಳ ದಾಳಿಗೆ ಸಿಕ್ಕುಗಾಣ ಗಳನ್ನು ನಿಲ್ಲಿಸಿದ ಗಾಣಿಗರಾಗಿದ್ದಾರೆ.

ನದಿಯ ದಡದಲ್ಲಿದ್ದ ಊರಾದ ನಾರಾಯಣದೇವರ ಕೆರೆಯಲ್ಲಿ ಅಂಬಿಗರು, ಜಾಲಗಾರರು ಇದ್ದರು. ಆಲೆಮನೆಗಳಿದ್ದ ಕಾರಣ ಬೆಲ್ಲ ಮಾಡುವವರಿದ್ದರು. ಈಗ ಆಲೆಮನೆ ಇಲ್ಲವಾದ ಕಾರಣ ಅವರು ಬೇರೆಬೇರೆ ಉಪಜೀವನಕ್ಕೆ ಹೊಂದಿಕೊಂಡಿ ದ್ದಾರೆ. ಆದರೆ ಅವರ ವೃತ್ತಿ ಈಗ ಅವರ ಜಾತಿಯಾಗಿದೆ.

ಸಂಪೂರ್ಣ ವಲಸೆ ಬಂದ ಜನರಿಂದ ತುಂಬಿದ ಹಗರಿಬೊಮ್ಮನಹಳ್ಳಿಯಲ್ಲಿ ಜಾತಿ ಸಂಬಂಧ ಕೇರಿಗಳಿಲ್ಲ. ಬೀದಿಗಳಿಲ್ಲ (ಉದಾ:– ಬ್ರಾಹ್ಮಣರ ಬೀದಿ, ಅಂಗಡಿಪೇಟೆ). ಎಲ್ಲ ಕಡೆ ಎಲ್ಲ ರೀತಿಯ ಜನರು ಕಲೆತು ಮಲೆತು ಜೀವಿಸುತ್ತಿ ದ್ದಾರೆ. ಅವರು ಮೊದಲು ನೆಲೆಸಿದ್ದ ಪರಿಸರ ಮತ್ತು ಪರಿಸ್ಥಿತಿ ಗಳು ಬದಲಾದ ಕಾರಣ ವೃತ್ತಿ, ಪ್ರವೃತ್ತಿಗಳಿಗೆ ಅನುಸರಿಸಿ ಅವರವರ ಜೀವನ ನಿರ್ವಹಣೆ ನಡೆದಿದೆ. ಆದರೆ ಐತಿಹಾಸಿಕ ವಾಗಿ ಮತ್ತು ಆರ್ಥಿಕವಾಗಿ ಕಾಲವಾಹಿನಿಯಲ್ಲಿ ನಡೆದದ್ದನ್ನು ಗಮನಿಸಲು, ಅರ್ಥೈಸಲು ನಮ್ಮೂರ ಮನೆತನಗಳ ಹೆಸರುಗಳ ಅಧ್ಯಯನವು ಹೊಸ ನೋಟಗಳನ್ನು ಒದಗಿಸುತ್ತದೆ.

## ನಮ್ಮೂರಿನ ಮನೆತನದ ಹೆಸರುಗಳು

### ಅ) ಜಂಗಮರು

೧. ಸೊಪ್ಪಿನಮಠ ೨. ಹಿರೇಮಠ ೩. ಜಂಗಿನಮಠ ೪. ಕಬ್ಬಿಣ ಕಂತಿಮಠ
೫. ಓದಿಸೋಮಠ ೬ ಮಠದ ೭. ಸೊನ್ನದ ಮಠ ೮. ಯಾರ್ಲಕಟ್ಟಿಮಠ
೯. ವಸ್ತ್ರದವರು ೧೦. ಗಂಟ್ಟಿಯವರು ೧೧. ಸಮಾಳದವರು ೧೨. ಅಮರಗೋಳಮಠ
೧೩. ಬೆಣ್ಣಿಮಠ, ಬೃಹನ್‌ಮಠ, ಬೂದಿಮಠ ೧೪. ಭಾನಾಪುರದ ಹಿರೇಮಠ
೧೫. ಮಾನಿಹಳ್ಳಿ ಪುರವರ್ಗಮಠ ೧೬. ತೆಲಿಗಿ ಗುಳೇವಡಿಮಠ ೧೭. ತೆಲಿಗಿ ಹಿರೇಮಠ
೧೮. ಯಲ್ಲಾಪುರ ಮಠ ೧೯. ತೆಗ್ಗಿನಮಠ ೨೦. ಕಲ್ಲುಮಠ ೨೧. ಮಿರಾಳು ಫಡಮಠ

### ಆ) ಬ್ರಾಹ್ಮಣರು

| | | | |
|---|---|---|---|
| ೧. ರಾಜಪುರೋಹಿತ | ೨. ಮೂಲಿಮನೆ | ೩. ಕಟ್ಟಿ | ೪. ಶಾಸ್ತ್ರಿ |
| ೫. ಜೋಯಿಸರು | ೬ ಕರಣಂ | ೭ ಶಾನುಭೋಗ | |
| ೮. ಕಡ್ಲಬಾಳು | ೯. ಹಿಂದೂಪುರ | ೧೦. ರಾಯಸಂ | ೧೧. ಜೋಶಿ |
| ೧೨. ಆರ್ಷಿ | ೧೩. ತಟ್ಟಿ | ೧೪. ಪದಕಿ | ೧೫. ಹುಲಿಗಿ |
| ೧೬. ಪ್ಯಾಟಿ | ೧೭. ಪುರಾಣದ | ೧೮. ಮೈದೂರು | ೧೯. ಹೊಸೂರು |
| ೨೦. ಮುಕ್ಕುಂದಿ | ೨೧. ಮುದ್ಲಾಪುರ | ೨೨. ಷರಾಫ್ | ೨೩. ಬೂದಿಹಾಳು |
| ೨೪. ಸಗರಂ | ೨೫. ಬಿಟೇಶ ಭಟ್ಟರ | ೨೬. ಕಾಖಂಡಕಿ | ೨೭. ಹವಲ್ದಾರ್ |
| ೨೮. ಶಿರಹಟ್ಟಿ | ೨೯. ಕರ್ಕಿಹಳ್ಳಿ | | |

### ಇ) ಆರ್ಯವೈಶ್ಯರು

**I**

| | | | |
|---|---|---|---|
| ೧. ಪೆಂಡಕೂರು | ೨. ಮುದುಗಲ್ | ೩. ಗಂಗಾವತಿ | ೪. ಚೆದ್ರಿ |
| ೫. ಸನ್ನುತಿ | ೬ ಡಣಾಪುರ | ೭ ಜಂತಲಿ | ೮. ಬಸಾಪುರ |
| ೯. ಆನಿವೇರಿ | ೧೦. ಮೈದೂರು | ೧೧. ಮಂಗನಹಳ್ಳಿ | ೧೨. ಪೂಲಕುಂಟ |
| ೧೩. ನಂದಿಬಂಡಿ | ೧೪. ಅಂಕಸಮುದ್ರ | ೧೫. ನಾಣ್ಯಾಪುರ | ೧೬. ಜೋಗದ |
| ೧೭. ಅರಳಿಹಳ್ಳಿ | ೧೮. ಕುಪ್ಪ | ೧೯. ಪತ್ತಿ | ೨೦. ರೊದ್ದ |
| ೨೧. ಪತ್ತಿಕೊಂಡ | ೨೨. ತುಂಬಳಂ | ೨೩. ಮೆದೆಹಾಳು | ೨೪. ಬಂಡ್ರಿ |
| ೨೫. ಬೆಲ್ಲಂಕೊಂಡ | ೨೬. ಕಾಕುಬಾಳು | ೨೭. ಬಳ್ಳಾರಿ | ೨೮. ಇಲ್ಲೂರು |
| ೨೯. ಆದವಾನಿ | ೩೦. ಕೋರಗಲ್ | ೩೧. ಹುಬ್ಬಳ್ಳಿ | ೩೨. ತಲ್ಲಂ |
| ೩೩. ಬನ್ನಿಕಲ್ಲು | ೩೪. ಮುತ್ತಗಿ | ೩೫. ಬಾಗೇವಾಡಿ | ೩೬. ಮುಳ್ಳೂರು |
| ೩೭. ರಾಚಮಡುಗು | ೩೮. ಬಂಕಾಪುರ | ೩೯. ಇಲ್ಕೂರು | ೪೦. ಮೋಕಾ |
| ೪೧. ಇನ್ನಮೂರಿ | ೪೨. ಸೌದ್ರಿ | ೪೪. ಸಿಂಗಾಪುರ | ೪೩. ವೇಮುಲ |
| ೪೫. ಚಾಗಿ | ೪೬. ಗುಳೇದಾಳು | ೪೭. ಸೋರುಪ್ಪ | |

**II**

| | | | |
|---|---|---|---|
| ೧. ರೊಕ್ಕಪ್ಪನವರ | ೨. ಗ್ಯಾನಪ್ಪನವರ | ೩. ಕಟ್ಟೆಪ್ಪನವರ | ೪. ಭರಮಸೆಟ್ಟೆಪ್ಪನವರು |
| ೫. ಕಾರಂಸೆಟ್ಟಿ | ೬ ಜವಳಿ | ೭ ಖರೀದಿ | ೮. ದೇವರಂಗಡಿ |
| ೧. ಶೂರಸೆಟ್ಟಿ | ೨. ಸಿದ್ದಂ ಸೆಟ್ಟಿ | ೩. ಪುಣ್ಯಮೂರ್ತಿ | ೪. ಭೂಪಾಳ |
| ೫. ವಿಟ್ಪಾ | ೬ ಪೋಲಾ | ೧. ತುಪ್ಪದ | ೨. ಚೆನ್ನಿ |
| ೩. ಜನಾದ್ರಿ | ೧. ದೊಡ್ಡಮನಿ | ೨. ಮಹಡಿಮನಿ | ೩. ವಂಕದಾರಿ |

**ಈ) ಬೇಡ-ನಾಯಕರು**

| | | | | | | | |
|---|---|---|---|---|---|---|---|
| ೧. | ದಾದಮ್ಮನವರ | ೨. | ರಾಚಣ್ಣನವರ | ೩. | ಮುಗಲಿ | ೪. | ಮಟ್ಟಿ |
| ೫. | ಮರಡಿ | ೬ | ಬಂಟರ | ೭ | ಹುಗ್ಗಿ | ೮. | ಕಟಗಿ ಬ್ಯಾಡರ |
| ೯. | ಮಲ್ಲು | ೧೦. | ಅಂಬಾಡಿ | ೧೧. | ಸರ್ದಾರ | ೧೨. | ಕುದುರಿ |
| ೧೩. | ಚಣ್ಣದ | ೧೪. | ಸೇರೆಗಾರ | ೧೫. | ಗುಜ್ಜಲ | ೧೬. | ಬಂಗಾರಿ |
| ೧೭. | ಜಾಣ | ೧೮. | ಸಂಕ್ಲಾಪುರ | ೧೯. | ಗೊಂಡಬಾಳು | ೨೦. | ಹಕ್ಕಂಡಿ |
| ೨೧. | ಪೂಜಾರ | ೨೨. | ಪೋತುಗುಳಿ | ೨೩. | ಪ್ಯಾಟಿ | ೨೪. | ನೇವಾರು |
| ೨೫. | ನಾಣಿಕೇರಿ | ೨೬. | ಅಂಬಿಗಾರು | ೨೭. | ತಳವಾರ | | |

**ಉ) ಕುರುಬರು**

| | | | | | |
|---|---|---|---|---|---|
| ೧. | ಗೌಡರು | ೨. | ಅಯ್ಯಾಳಿ | ೩. | ಪೋಲಪ್ಪನವರ |
| ೪. | ಮೇಟಿ | ೫. | ತಂಬ್ರಹಳ್ಳಿ | ೬ | ಶಿಶುವಿನಹಳ್ಳಿ |

**ಊ) ಮುಸಲ್ಮಾನರು**

| | | | | | | | |
|---|---|---|---|---|---|---|---|
| ೧. | ನಾಗರಕಟ್ಟಿ | ೨. | ತೆಲಗಿ | ೩. | ಹಳ್ಳಿ | ೪. | ಬಾವಿಹಳ್ಳಿ |
| ೫. | ಬಿಸನಹಳ್ಳಿ | ೬ | ಮಣ್ಣೂರು | ೭ | ಹೊಸೂರು | ೮. | ನಾಲುಬಂದಿ |
| ೯. | ಚಿಕ್ಕಲಗಾರ | ೧೦. | ಎಣ್ಣೆ | ೧೧. | ಮುಜಾವರ್ | | |

**ಋ) ಲಿಂಗಾಯತರು**

| | | | | | | | |
|---|---|---|---|---|---|---|---|
| ೧. | ಗೌಡರು | ೨. | ರೆಡ್ಡಿ | ೩. | ರೊಟ್ಟಿ | ೪. | ಕೊಟಗಿ |
| ೫. | ದೇವರಮನಿ | ೬ | ತಿಗರಿ | ೭ | ಭದ್ರವಾಡಿ | ೮ | ಉಲವತ್ತಿ ಶೆಟ್ರ |
| ೯. | ಹುರಕಡ್ಲಿ | ೧೦. | ಮೇಟಿ | ೧೧. | ಮುಲ್ಲಂಗಿ | ೧೨. | ಉಳ್ಳಾಗಡ್ಡಿ |
| ೧೩. | ಬೆಲ್ಲದ | ೧೪. | ಹಾಲ್ದಾಳ್ | ೧೫. | ಜೋಳದ | ೧೬. | ಗೊಂಗಡಿ ಸೆಟ್ಟಿ |
| ೧೭. | ಪಟ್ಟೇದ | ೧೮. | ಕುಬುಸದ | ೧೯. | ವಂಟಿಗೋಡಿ | | |
| ೨೦. | ಅಗಸಿಬಾಗಲು-ಅಗಸಿಮುಂದಿನ | | | ೨೧. | ಭದ್ರಸೆಟಿ | ೨೨. | ತೂಲಹಳ್ಳಿ ಸೆಟ್ಟರು |
| ೨೩. | ಕರಣಂ | ೨೪. | ಬಳ್ಳಾರಿ | ೨೫. | ಬಾದಾಮಿ | | |

**ೠ) ಇತರರು**

| | | | | | | | |
|---|---|---|---|---|---|---|---|
| ೧. | ಗೌಳೇರು | ೨. | ಮಡಿವಾಳರು-ಅಗಸರು | ೩. | ಕಮ್ಮಾರ | ೪. | ಕುಂಬಾರ |
| ೫. | ಕೆಲಸೇರು | ೬ | ಅಕ್ಕಸಾಲಿ | ೭ | ಚಿತ್ರಗಾರ | ೮. | ರಂಗಾರಿ |
| ೯. | ನೇಕಾರ | ೧೦. | ಬಯಲು-ಅಕ್ಕಸಾಲಿ | ೧೧. | ಮೇದಾರ | ೧೨. | ವಡ್ಡ |
| ೧೩. | ಬಂಡಿವಡ್ಡ | ೧೪. | ಉಪ್ಪಾರ | ೧೫. | ಪೂಜಾರಿ | ೧೬. | ಕಟುಗ |
| ೧೭. | ಸುಣಗಾರ | ೧೮. | ಮಚ್ಚಿಗೆ | ೧೯. | ಬಣಗಾರ | ೨೦. | ತಳವಾರ |
| ೨೧. | ನೀರಗಂಟಿ | ೨೨. | ಹೂಗಾರ | ೨೩. | ವಾಲೀಕಾರ | ೨೪. | ಬಡಿಗೇರ |
| ೨೫. | ಬುಕ್ಕಿಟ್ಟಗಾರ | ೨೬. | ಭಜಂತ್ರಿ | ೨೭. | ಕಾಳೇರ | ೨೮. | ಪತ್ತಾರ |
| ೨೯. | ತೋಟಿ | ೩೦. | ಗುಡಿಸೇವಕ | ೩೧. | ಆಗಮದವರು | ೩೨. | ಕಾಮವಡ್ಡರು |

**ಎ) ವಿಶಿಷ್ಟ**

| | |
|---|---|
| ೧. | ಐದು ಲಕ್ಷದವರು |



ಕಲ್ಲನಗೌಡ ತಿ. ಪಾಟೀಲ್*

# ಪುರಾತನ ಚಾವಡಿಗಳು – ಅಧಿಕಾರಿಗಳು

ಚಾವಡಿ ಎಂದರೆ ಹಿರಿಯರು, ಊರ ಅಧಿಕಾರಿಗಳು ಸಭೆ ಮಾಡತಕ್ಕ ಸ್ಥಳ ಎಂದು ಕರೆಯುತ್ತಾರೆ. ಈ ಚಾವಡಿಗಳು ಹಳ್ಳಿ ಶಹರಗಳಲ್ಲಿ ಉಂಟು. ಈಗಿನ ಕಾಲದಲ್ಲಿ ಇವುಗಳ ಅವಶೇಷಗಳು ಮಾತ್ರ ಉಳಿದಿವೆ. ಚಾವಡಿಗಳ ಇತಿಹಾಸ ವಿಜಯನಗರದ ಕಾಲದಿಂದಲೂ ಬೆಳೆದಿದೆ. ಊರಿನ ಭೂ ಕಂದಾಯವನ್ನು ವಸೂಲಿ ಮಾಡಲು ಕೆಲವು ಅಧಿಕಾರಿಗಳನ್ನು ನೇಮಿಸಲಾಗಿತ್ತು. ಆ ಅಧಿಕಾರಿಗಳ ವಿವರ ಹೀಗಿದೆ:

(೧) ಶಾನಭೋಗರು (೨) ಮುಲ್ಕಿಗೌಡರು (೩) ಪೊಲೀಸ್‌ಗೌಡರು (೪) ವಾಲಿಕಾರರು (೫) ಕೊತ್ವಾಲರು (೬) ಹಳಬರು (೭) ಸೇವಕರು (೮) ತಲವಾರರು. ಈ ಪ್ರಕಾರವಾಗಿ ಸಿಬ್ಬಂದಿಗಳು ಆಯಾ ಕೆಲಸದಲ್ಲಿ ಇದ್ದರು. ಇವರ ಕೆಲಸಗಳಿವು : **ಶಾನಭೋಗ** (ಕಲಕರ್ಣಿ) – ಇವರು ಊರಿನ ಭೂಕಂದಾಯದ ಲೆಕ್ಕ ಪತ್ರ ಹಾಗೂ ಕಂದಾಯ ವಸೂಲಿ ಮಾಡಿ ಮೇಲಿನ ಅಧಿಕಾರಿಗಳಿಗೆ ಕಳಿಸಿಕೊಡುವ ಜವಾಬ್ದಾರಿ ಇವರದಾಗಿತ್ತು ಹಾಗೂ ಭೂಮಿಯ ಅಳತೆ ಪಾಣಿ ತಯಾರ ಮಾಡುವದು ಚಕ್ಕುಬಂದಿ ಕಾಗದ ಪತ್ರ ಹಾಗು ಬಂದ ಹಪ್ತಾ ರಕಂನ್ನು ಖಜಾನೆಗೆ ರವಾನಿಸುವುದು ಇವರ ಕೆಲಸವಾಗಿತ್ತು. ಇದು ಒಂದು ನ್ಯಾಯಾಲಯವಾಗಿತ್ತು. ಇನ್ನು **ಮುಲ್ಕಿಗೌಡರು** – ಇವರು ಶಾನಭೋಗರಿಗೆ ಚಾವಡಿ ಸಹಾಯಕರಾಗಿ ಕಂದಾಯ ವಸೂಲಿ ಕಾಲಕ್ಕೆ ಇವರು ಹಪ್ತಾದುಡ್ಡಿನ ಜವಾಬ್ದಾರರಾಗಿ ಊರಿನ ಭೂತಂಟೆ ವಗ್ಯೆರೆ ಚಿಕ್ಕ ಜಗಳ ಬಗೆಹರಿಸಿ ರಾಜಿ ಮಾಡುವ ಊರಿನ ಹಿರಿಯರಾಗಿ ಜನರನ್ನು ಒಳ್ಳೆ ಮಾರ್ಗದಲ್ಲಿ ನಡೆಯುವ ಹಾಗೆ ಮಾಡುವದು. **ಪೊಲೀಸಗೌಡರು** – ಮನೆ ಮನೆಗಳಲ್ಲಿ, ಊರಿನ ಜನರಲ್ಲಿ ಏನೋ ಜಗಳತಂಟೆ ವಗ್ಯೆರೆ, ಬಡಿದಾಟ, ಖೂನಿ, ಕಳ್ಳರು ಊರಲ್ಲಿ ಕಳವು ಮಾಡಿದರೆ, ಊರಿನಲ್ಲಿ ರಾತ್ರಿಯಲ್ಲಿ ಗಸ್ತಿ ತಿರುಗುವದು. ಕೊತ್ವಾಲರಿಗೆ ಮೇಲಿಕರಾಗಿ ಊರಲ್ಲಿ ಕಾಡುಪ್ರಾಣಿ ಬಂದರೆ, ಅವಗಳನ್ನು ಬರದ ಹಾಗೆ ಸೇವಕರನ್ನು ನೇಮಿಸುವದು, ಊರಲ್ಲಿ ಪರದೇಶಿ ಸತ್ತರೆ ಅವನನ್ನು ದಪನ ಮಾಡಿಸುವದು ಇನ್ನೂ ಅನೇಕ ಕೆಲಸ ಇವರದಾಗಿತ್ತು.

**ವಾಲಿಕಾರ** – ಇವರ ಕೆಲಸ ಮುಲ್ಕಿಗೌಡ ಹಾಗು ಶಾನಭೋಗರಿಗೆ ಸಹಾಯಕನಾಗಿ ಬಂದ ಕಂದಾಯವನ್ನು ಖಜಾನಿಗೆ ರವಾನಿಸುವದು, ಕುಲಕರ್ಣಿಯವರನ್ನು ಜಮೀನಲ್ಲಿ ಕರೆದುಕೊಂಡು ಹೋಗಿ ಪೀಕುಪಾಣಿ ಮಾಡುವ ಕಾಲಕ್ಕೆ ಸಹಾಯಕನಾಗಿ ಕೆಲಸ ಮಾಡುವದು, ಊರಿನಲ್ಲಿ ಬಡಿದಾಟ, ಖೂನಿ, ಆತ್ಮಹತ್ಯೆ, ಅಪರಿಚಯ ವ್ಯಕ್ತಿ ಸತ್ತರೆ ಹೆಣಗಳನ್ನು ಪಂಚನಾಮೆ ಮಾಡುವ ಕಾಲಕ್ಕೆ ಇದ್ದು ಮೇಲಿನ ಅಧಿಕಾರಿಗಳಿಗೆ ಸಹಾಯಕನಾಗಿ ಕೆಲಸ ಮಾಡುವದು ಇವನದಾಗಿತ್ತು.

**ಕೊತ್ವಾಲರು** – ಇವರ ಕೆಲಸ ಊರಿನ ಕೋಟೆ ಹಾಗೂ ಅಗಸಿಬಾಗಿಲ ಭದ್ರಪಡಿಸುವದು. ಕಳ್ಳರು ಬಂದಾಗ ಊರಿನ ಜನರನ್ನು ಎಚ್ಚರಗೊಳಿಸಿ, ಪಾಳಿಪ್ರಕಾರವಾಗಿ ಊರಲ್ಲಿ ಗಸ್ತಿ ತಿರುಗುತ್ತಿದ್ದ, ಇವರು ಕೈಯಲ್ಲಿ ಕತ್ತಿ ಡೊಣ್ಣೆಬಡಿಗೆ ಕವಣಿ ಕಲ್ಲುಗಳನ್ನು ಸದಾ ಉಡಿಕಟ್ಟಿ ನಿಲ್ಲುತ್ತಿದ್ದರು. ಕ್ರೂರಪ್ರಾಣಿ ಊರ ಪ್ರವೇಶ ಮಾಡದಂತೆ ನೋಡುವದು. ಇವರು ಬಿಲ್ಲು ಬಾಣಗಳನ್ನು ಹೊಂದಿದ್ದರು. ಹಬ್ಬ ಹರಿ ದಿನ ಜಾತ್ರೆ ಉತ್ಸವ ಮಾಜು ಮಜಲಿನಲ್ಲಿ ಇವರ ಸೇವೆ ಬಲವಾಗಿತ್ತು.

**ಹಳಬರು** – ಊರನ್ನು ಸ್ವಚ್ಛವನ್ನಾಗಿ ಮಾಡಲು ಸದಾ ಇವರ ಸೇವೆ ಅಪಾರವಾಗಿತ್ತು. ಅಪರಿಚಿತ ಹೆಣ ಊರಿನಲ್ಲಿ ಇದ್ದರೆ ಅದನ್ನು ಸುಡುವದು, ಹುಚ್ಚು ನಾಯಿಗಳನ್ನು ಊರಿನಲ್ಲಿ ಬರದ ಹಾಗೆ ಅವುಗಳನ್ನು ಕೊಂದು ಹಾಕುವ ಕೆಲಸ ಇವರದಾಗಿತ್ತು. ಊರಲ್ಲಿ ಡಂಗೂರ ಸಾರುವದು, ರಾತ್ರಿ ವೇಳೆಯಲ್ಲಿ ಪಂಜು ಹಿಡಿಯುವುದು.

ಇನ್ನು **ಸೇವಕರು** – ಇವರು ಊರಿನ ಗುಡಿ ಮಠ ಚತ್ರದಲ್ಲಿ ಸೇವೆಯನ್ನು ಮದುವೆ ದಿಬ್ಬಣಗಳಲ್ಲಿ ನಿಂತು ಅಲ್ಲಿ ಕೆಲಸವನ್ನು ಸಾಂಗವಾಗಿಮಾಡಿ ತಮ್ಮ ಸೇವೆಯನ್ನು ಸದಾಕಾಲ ಮಾಡುತ್ತಿದ್ದರು.

**ತಲವಾರ** (ಟಪಾಲದಾರ) – ಈತನು ಊರಿನ ಭೂ ಕಂದಾಯವನ್ನು ಮೇಲಿನ ಅಧಿಕಾರಿಯ ಆದೇಶದಂತೆ ಅಲ್ಲಿ ಅಲ್ಲಿಗೆ ಮುಟ್ಟಿಸಿ ಬರುವ ಕೆಲಸ ಅಲ್ಲದೆ ಸುದ್ದಿ

* ಸಾ॥ ಬೆಳಧಡಿ ತಾ॥ ಗದಗ ಜಿಲ್ಲಾ.

ಸಮಾಚಾರಗಳನ್ನು ಪತ್ರ ವ್ಯವಹಾರವನ್ನು ಈತನೆ ಮಾಡುತ್ತಿದ್ದನು. ಈತನ ಕೈಯಲ್ಲಿ ಖಡ್ಗ ಸದಾ ಕಾಲ ಇರುತ್ತಿತ್ತು.

ದಾರಿಯಲ್ಲಿ ಯಾರೇ ಕಳ್ಳರು ಅವನ ಮೇಲೆ ದಾಳಿ ಮಾಡಿದರೆ ಈತನು ಅವರನ್ನು ತಕ್ಷಣವೇ ಶಿರಚ್ಛೇದನ ಮಾಡಲು ಮೇಲಿನ ಅಧಿಕಾರಿಗಳ ಹುಕುಂ ಇತ್ತು. ಊರಲ್ಲಿ ಕಳ್ಳರ ದರೋಡೆಯಾದರೆ ಇವನೇ ಮುಖ್ಯಸ್ಥನಾಗಿ ಊರಿನ ಜನರನ್ನು ಹುಷಾರ್ ಎಂದು ಜನರನ್ನು ಎಚ್ಚರಗೊಳಿಸುವದು ಇವನ ಕೆಲಸವಾಗಿತ್ತು.

ಊರಲ್ಲಿ ಯಾರೇ ಮರಣವಾದರೆ ಅದನ್ನು ದಾಖಲಾತಿ ಮಾಡುವುದು ಗೌಡರು ಓಲೆಕಾರ ಇವರ ಜವಾಬ್ದಾರಿಯಾಗಿತ್ತು ಅದಕ್ಕಾಗಿ ಊರಿನ ಚಾವಡಿಗಳು ಅಗಸಿ ಬಾಗಿಲದ ಹತ್ತಿರ ಇರವದುಂಟು. ಯಾಕೆಂದರೆ. ಶವಸಂಸ್ಕಾರ ಊರ ಅಗಸಿ ಮಾರ್ಗವಾಗಿ ಸಾಗುತ್ತಿದ್ದವು. ಇದು ಒಂದು ವಿಶೇಷವಾಗಿತ್ತು. ಇನ್ನೂ ಇಂಥ ಅನೇಕ ಪುರಾತನ ಚಾವಡಿಗಳೇ ಮುಖ್ಯ ನ್ಯಾಯಲಯಗಳಾಗಿದ್ದವೆಂದು ಹೇಳಬಹುದು-ಇದೇ ಚಾವಡಿಗಳ ಇತಿಹಾಸ.



ಶ್ರೀ ಮದ್ಗಂಗಾತರಂಗೋಚ್ಚಳಿತ ಜಳಕಣ ಶ್ರೇಣಿಪುಃಪಾಳಿ ಶೋಭಾ
ಧಾಮಂ ಚಂಚಜ್ಜಟಾಪಲ್ಲವಮಮೃತಕರೋದ್ಯತ್ಫಳಂ ಬಾಹು ಶಾಖಾ
ರಾಮಂ ಗೌರೀ ಲತಾಲಂಗಿತಮಮರನುತಂ ಶಂಭುಕಲ್ಪದ್ರುವಾದಂ
ರಾಮಂಗೀಗತ್ಥಿಯಿಂವಾಚ್ಛಿತ ಫಳಚಯಮಂ ಸಂತತೋತ್ಸಾಹದಿಂ

– ಅಬ್ಬಲೂರು ಶಾಸನ



*God is present before you in the form of all living beings. Where are you seeking God, forsaking all these? one who loves all creatures serves God, indeed.*

**- Swami Vivekananda**

ಡಾ. ಎಫ್.ಟಿ. ಹಳ್ಳಿಕೇರಿ*

# ಅಮೋಘಸಿದ್ಧ ಪರಂಪರೆಯ ಹಾಲುಮತ ಮಠಗಳು

ಹಾಲುಮತ ಗುರುಪರಂಪರೆಯಲ್ಲಿ ಮುಖ್ಯವಾಗಿ ಮೂರು ಸಂಪ್ರದಾಯಗಳಿವೆ.. ಒಂದು ರೇವಣಸಿದ್ಧ ಸಂಪ್ರದಾಯ,[೧] ಇನ್ನೊಂದು ಸಿದ್ಧರಾಮ ಸಂಪ್ರದಾಯ, ಮತ್ತೊಂದು ಅಮೋಘಸಿದ್ಧ ಸಂಪ್ರದಾಯ. ಈ ಮೂರು ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಕರ್ನಾಟಕದಾದ್ಯಂತ ಹಾಲುಮತ ಮಠಗಳು ಇಂದಿಗೂ ಅಸ್ತಿತ್ವದಲ್ಲಿರುವುದು ಗಮನಾರ್ಹ ಸಂಗತಿ.[೨] ಅಮೋಘಸಿದ್ಧನ ಇತಿವೃತ್ತ ವಿಚಾರ, ಈತನ ಪರಂಪರೆಯ ಹಾಲುಮತ ಮಠಗಳ ಭೌಗೋಳಿಕ ವ್ಯಾಪ್ತಿ, ಮಠಾಧಿಪತಿಗಳ ಆಚರಣೆಗಳು, ನಂಬಿಕೆಗಳು, ಅಮೋಘಸಿದ್ಧ ಪರಂಪರೆಯ ಒಡೆಯರಿಗೂ ರೇವಣಸಿದ್ಧ ಪರಂಪರೆಯ ಒಡೆಯರಿಗೂ ಇರುವ ಮೂಲಭೂತ ವ್ಯತ್ಯಾಸಗಳು, ಸಾಮಾಜಿಕ, ಶೈಕ್ಷಣಿಕ ಸೇವೆ ಇತ್ಯಾದಿ ಸಾಂಸ್ಕೃತಿಕ ಸಂಗತಿಗಳನ್ನು ಕುರಿತು ಪ್ರಸ್ತುತ ಸಂಪ್ರಬಂಧದಲ್ಲಿ ವಿವೇಚಿಸಲಾಗುವುದು.

### ಅಮೋಘಸಿದ್ಧನ ಇತಿವೃತ್ತ ವಿಚಾರ

ಸಿದ್ಧಪರಂಪರೆಯಲ್ಲಿ ಪ್ರಸಿದ್ಧನಾದ ಅಮೋಘಸಿದ್ಧನನ್ನು ಕಾವ್ಯ ಶಾಸನಗಳಲ್ಲಿ ಅಮುಗಿದೇವ, ಅಮಾಕಸಿದ್ಧ, ಅಮ್ಮೊಗಸಿದ್ಧ, ಅಮೋಘಸಿದ್ಧೇಶ್ವರ ಹೀಗೆ ನಾನಾ ರೀತಿಯಾಗಿ ಕರೆಯಲಾಗುತ್ತಿದೆ. ಮೌಖಿಕ ಆಕರಗಳಲ್ಲಿಯಂತೂ ಈತನ ಬಗ್ಗೆ ಸಮೃದ್ಧವಾದ ಮಾಹಿತಿಗಳು ದೊರೆಯುತ್ತವೆ. ಈತ ಕುರುಬರ ಗುರುಗಳಾದ ಒಡೆಯರ ಮೂಲಪುರುಷ. ಮೇಲಾಗಿ ಒಬ್ಬ ಶಿವಭಕ್ತ. ಅಮೋಘವಾದ ತನ್ನ ಶಿವಭಕ್ತಿಯನ್ನು ಪ್ರಕಟ ಮಾಡಿದ ಕಾರಣವಾಗಿ ಈತನಿಗೆ ಅಮೋಘಸಿದ್ಧ ಎಂಬ ಹೆಸರು ಬಂದಿರಬೇಕೆಂದು ಊಹಿಸಲಾಗುತ್ತದೆ. ಸ್ಪಷ್ಟವಾದ ಆಧಾರಗಳಿಲ್ಲದ್ದರಿಂದ ಕೇವಲ ಮೌಖಿಕವಾಗಿ ಹೇಳಿಕೊಂಡು ಬರುವ ಕಥೆಯನ್ನಾಧರಿಸಿ ಅಮೋಘಸಿದ್ಧನ ಇತಿವೃತ್ತವನ್ನು ಹೇಳುತ್ತ ಬರಲಾಗಿದೆ. ಅದೇನೆ ಇದ್ದರೂ "ಈತನ ಕಥೆ ಪುರಾಣದ ನೆಲೆಯಿಂದ ಉಗಮವಾಗಿ, ಕಲ್ಯಾಣದ ಶರಣರು, ಸೊನ್ನಲಿಗೆ ಸಿದ್ಧರಾಮಯ್ಯಗಳ ಕಥೆಯೊಂದಿಗೆ ತಳುಕುಹಾಕಿಕೊಂಡು, ಮುಸ್ಲಿಂ ದೊರೆಗಳಾದ ಸುಲ್ತಾನ ಶಾಹಿಗಳ ಮೇಲೆ ಪ್ರಭಾವ


ಮುಮ್ಮಟಗಿಯಲ್ಲಿರುವ ಅಮೋಘಸಿದ್ಧನ ದೇವಾಲಯ

ಬೀರಿ, ಪಾಳೆಗಾರರಾದ ನಾಡಗೌಡ, ಸರನಾಡಗೌಡರನ್ನು ಹರಸುವಲ್ಲಿ ಮುಕ್ತಾಯ ವಾಗುತ್ತದೆ. ಹೀಗಾಗಿ ಅಮೋಘಸಿದ್ಧನ ಚರಿತ್ರೆ ಕಟ್ಟುವುದು ಕಷ್ಟದಾಯಕವಾಗುತ್ತದೆ. ಇಲ್ಲಿ ನಮಗೆ ಅಮೋಘಸಿದ್ಧನ ಚರಿತ್ರೆಗಿಂತ ಆತನ ಪರಂಪರೆಯು ತುಂಬಾ ಕುತೂಹಲ ಮೂಡಿಸುವಂಥದ್ದಾಗಿದೆ."[೩] ಈ ಹಿನ್ನೆಲೆಯಲ್ಲಿ ಲಭ್ಯ ಆಕರಗಳ ಸಹಾಯದಿಂದ ಈತನ ಇತಿವೃತ್ತವನ್ನು ಹೀಗೆ ರೂಪಿಸಬಹುದು.

ಶಿವನಿಂದ ವರಪಡೆದ ಈತ ಕೈಲಾಸದಿಂದ ತನ್ನ ಗುರು ಸೋಮಲಿಂಗನೊಡನೆ ನೇರವಾಗಿ ಭೂಲೋಕಕ್ಕೆ ಬರುತ್ತಾನೆ. ಹೀಗೆ ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಅಪ್ಪಿತಪ್ಪಿಯೂ ಹಿಂದಿರುಗಿ ನೋಡಕೂಡದೆಂದು ಗುರು ಸೋಮಲಿಂಗ ಕರಾರು ಹಾಕಿರುತ್ತಾನೆ. ಆದರೆ ಅಮೋಘಸಿದ್ಧ ಹಾಕಿದ ಕರಾರನ್ನು ಮುರಿದು ಹಿಂದಿರುಗಿ ನೋಡುತ್ತಾನೆ. ಇದರಿಂದ ಕೋಪಗೊಂಡ ಗುರು ಸೋಮಲಿಂಗ ಅಲ್ಲಿಂದ ಮಾಯವಾಗುತ್ತಾನೆ. ಆಗ ಅಮೋಘಸಿದ್ಧನು ಅಲ್ಲಿಯೇ ನೆಲೆನಿಲ್ಲುತ್ತಾನೆ. ಹೀಗೆ ನೆಲೆನಿಂತ ಸ್ಥಳವೇ ಮುಮ್ಮಟಗಿರಿ. ಇದು ವಿಜಾಪುರದಿಂದ ವಾಯುವ್ಯಕ್ಕೆ ಸುಮಾರು ಹದಿನೈದು ಕಿಲೋಮೀಟರಗಳ ಅಂತರದಲ್ಲಿದೆ. ಎತ್ತರವಾದ ಪ್ರದೇಶವನ್ನು ಹೊಂದಿರುವ ಈ ಮುಮ್ಮಟಗಿರಿಯಿಂದ ಐದಾರು ಕಿಲೋ

* ಮುಖ್ಯಸ್ಥರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬.

ಮೀಟರಗಳ ಅಂತರದಲ್ಲಿ ಅರಕೇರಿ, ಜಾಲಗೇರಿ ಮತ್ತು ಸಿದ್ಧಾಪುರ ಎಂಬ ಮೂರು ಗ್ರಾಮಗಳಿವೆ. ಈ ಮೂರು ಗ್ರಾಮಗಳ ಸೀಮೆಗಳು ಕೂಡುವ ಸ್ಥಳವೇ ಮುಮ್ಮಟ ಗಿರಿ(ಮೂರುಮಡ್ಡಿ>ಮುಮ್ಮಟ) ಎಂದು ಕರೆಯಲಾಗುತ್ತಿದೆ. ಈ ಗಿರಿಯಲ್ಲಿ ಭವ್ಯವಾದ ಒಂದು ದೇವಾಲಯವಿದೆ. ಈ ದೇವಾಲಯದ ಆರಾಧ್ಯ ದೈವವೇ ಅಮೋಘಸಿದ್ಧ.

ಅಮೋಘಸಿದ್ಧನಿಗೆ ಪದ್ಮಾವತಿ ಹೆಸರಿನ ಹೆಂಡತಿಯಿದ್ದಳು. ಈತನಿಗೆ ಮಾಸಿದ್ಧ, ಮಂಗರಾಯ ಮತ್ತು ಮಲಕಾರಿ ಸಿದ್ಧರೆಂಬ ಮೂವರು ಪುಣ್ಯದ ಮಕ್ಕಳು(ಪಡೆದ ಮಕ್ಕಳು). ಇನ್ನು ನಾಲ್ವರು ಧರ್ಮದ ಮಕ್ಕಳು(ಹಡೆದ ಮಕ್ಕಳು) ಇದ್ದರು. ಅವರೆಂದರೆ ೧. ಅವಧುಸಿದ್ಧ, ೨. ಬಿಳಿಯಾನಿಸಿದ್ಧ, ೩. ಸೋಮಣ್ಣಮುತ್ತ್ಯಾ, ೪. ಕನ್ನಮುತ್ತ್ಯಾ. ಜೊತೆಗೆ ರೆಬ್ಬವ್ವೆ ಎಂಬ ಮಗಳೂ ಇದ್ದಳು. ಇವಳನ್ನು ತನ್ನ ಗುರುವಿನ ಊರಾದ ಮಕಣಾಪುರದ ಹೊನ್ನಪ್ಪ ಎಂಬವನಿಗೆ ಮದುವೆ ಮಾಡಿಕೊಟ್ಟಿರುತ್ತದೆ. ಅಲ್ಲದೇ ಅಮೋಘಸಿದ್ಧನಿಗೆ ಭೂತಾಳ ಸಿದ್ಧನೆಂಬ ಶಿಷ್ಯನಿದ್ದನು. ಒಟ್ಟಿನಲ್ಲಿ ಈತನ ಸಂತತಿಯ ವಿವರ ಹೀಗಿದೆ :

ಹೀಗೆ ಮಕ್ಕಳು ಮೊಮ್ಮಕ್ಕಳು, ಶಿಷ್ಯರು ಪ್ರಶಿಷ್ಯರಾಗಿ ಬೆಳೆದ ಈತನ ಸಂತತಿಯಿಂದ ಮತ್ತೆ ನೂರೊಂದು, ಸಾವಿರ ದೊಂದು, ಸಾವಿರದಾ ಏಳುನೂರು ಹಾಗೂ ನವಕೋಟಿ

ಅಮೋಘಸಿದ್ಧ

| ಅವಧುಸಿದ್ಧ | ಬಿಳಿಯಾನಿಸಿದ್ಧ | ಸೋಮಣ್ಣಮುತ್ತ್ಯಾ | ಕನ್ನಮುತ್ತ್ಯಾ |
|---|---|---|---|
| ೧. ಸಾಲಸಿದ್ಧ | ೧. ಬಳ್ಳೋಗಿಸಿದ್ಧ | ೧. ಹಿರಿಯಮಲ್ಲಪ್ಪ ಒಡೆಯ | ೧. ಕರಿಯೋಗಿಸಿದ್ಧ |
| ೨. ಮಳಿಗಾಲಸಿದ್ಧ | ೨. ಯೋಗಸಿದ್ಧ | ೨. ಚಿಕ್ಕಮಲ್ಲಪ್ಪ ಒಡೆಯ | ೨. ಮಲಕಾರಿಸಿದ್ಧ |
| ೩. ಓಗಪ್ಪ ಒಡೆಯ | ೩. ಪದ್ಮೋಗಸಿದ್ಧ | ೩. ಮುತ್ತೈಯಪ್ಪ ಒಡೆಯ | ೩. ಮಾದಣ್ಣಸಿದ್ಧ |
| ೪. ನಾಗಪ್ಪ ಒಡೆಯ | ೪. ಪೂಜಾದಗೌಡ | ೪. ಮಲಕಾರಿಸಿದ್ಧ | |
| ೫. ಕೆಂಚಸೋಮಯ್ಯ | ೫. ಶೀಲಸಿದ್ಧ | ೫. ಓಗಣ್ಣಮುತ್ತ್ಯಾ | |

ಸಿದ್ಧ ಒಡೆಯರು ಹುಟ್ಟಿ ದೊಡ್ಡ ಸಂತತಿ ಬೆಳೆದು ಬಂದಿರುವುದಾಗಿ ಹೇಳಲಾಗುತ್ತಿದೆ.[೪] ಈ ಸಂತತಿಯಿಂದ ಬಂದವರನ್ನು 'ಒಡೆಯರು' ಎಂದು ಕರೆಯುತ್ತಾರೆ. ಇವರಲ್ಲಿ ಕೆಲವರು ಗುರುಪಟ್ಟವನ್ನೇರಿ, ಬ್ರಹ್ಮಚರ್ಯವನ್ನಾ ಚರಿಸುತ್ತ ಯೋಗಮಾರ್ಗದಲ್ಲಿದ್ದುಕೊಂಡು ಜನಕಲ್ಯಾಣ ಮಾಡುತ್ತ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆನಿಂತಿದ್ದಾರೆ. ಇದಕ್ಕೆ ನಿದರ್ಶನ ವೆಂಬಂತೆ ಈ ಪ್ರದೇಶಗಳಲ್ಲಿ ಅಮೋಘಸಿದ್ಧ ಮತ್ತವನ ಸಂತತಿಯ ಹೆಸರಿನ ನೂರಾರು ಮಠಗಳು ದೇವಾಲಯ ಗಳಿವೆ.[೫]

## ಮಠಗಳ ಭೌಗೋಳಿಕ ವ್ಯಾಪ್ತಿ

ಅಮೋಘಸಿದ್ಧ ಪರಂಪರೆಯ ಮಠಗಳ ಭೌಗೋಳಿಕ ವ್ಯಾಪ್ತಿ ತುಂಬ ವಿಸ್ತಾರವಾದುದು. ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿಭಾಗದ ಬೆಳಗಾವಿ, ವಿಜಾಪುರ, ಕೊಪ್ಪಳ, ಗುಲಬರ್ಗಾ ಜಿಲ್ಲೆ ಹಾಗೂ ಮಹಾರಾಷ್ಟ್ರದ ಸಾಂಗಲಿ, ಸಾತಾರಾ, ಸೊಲ್ಲಾಪುರ ಜಿಲ್ಲೆಗಳಲ್ಲಿ ಈ ಪರಂಪರೆಯ ಮಠಗಳು ಅಧಿಕ ಪ್ರಮಾಣದಲ್ಲಿವೆ. ಅಷ್ಟೇ ಏಕೆ ಭೀಮಾನದಿಯ ಪರಿಸರದಲ್ಲಿರುವ ಗ್ರಾಮಗಳಲ್ಲಿ ಅಮೋಘಸಿದ್ಧ ಪರಂಪರೆಯ ಮಠಗಳಿರುವುದು ಇನ್ನೂ ವಿಶೇಷವೆಂದೇ ಹೇಳಬೇಕು. ಹೀಗಾಗಿ ಈ ಪ್ರದೇಶದಲ್ಲಿ ಈತನ ಹೆಸರಿನ ಮಠಗಳು ಮತ್ತು ದೇವಾಲಯಗಳು ಸಹಜವಾಗಿ ಅಧಿಕ ಸಂಖ್ಯೆಯಲ್ಲಿವೆ. ಈ ಪರಂಪರೆಯ ಮಠಗಳ ಜಿಲ್ಲಾವಾರು ಕೆಲವು ಊರುಗಳ ಹೆಸರುಗಳು ಹೀಗಿವೆ.

| | | |
|---|---|---|
| **ಗದಗ ಜಿಲ್ಲೆ** | : | ಶಿರಹಟ್ಟಿ ತಾಲ್ಲೂಕಿನ ಹುಲ್ಲೂರು. |
| **ಕೊಪ್ಪಳ ಜಿಲ್ಲೆ** | : | ಕುಕನೂರು, ಕೊರಡಕೇರಿ, ಬಿಸರಳ್ಳಿ. |
| **ಬಿಜಾಪುರ ಜಿಲ್ಲೆ** | : | ಅರಕೇರಿ, ಅಬ್ಬಿಹಾಳ್, ಮಕಣಾಪುರ, ನಾಗವಾಡ, ಅಂಕಲಿ, ಹೀರೇಪಡಸಲಗಿ,ಬಬಲೇಶ್ವರ, ಶಿವಣಗಿ, ಸಂಬ, ಮೊರಬ,ಬೋರಗಿ, ಡವಳಾರ, ಸುಂಗ ಠಾಣ,ಅನಂತಪುರ, ಶಿರನಾಳ, ಸುಸಲಾದ, ಬಬಲಾದ,ಸಿಂದಗಿ, ಕರಜಗಿ, ಮೈಲಾರಹಟ್ಟಿ |
| **ಗುಲಬರ್ಗಾಜಿಲ್ಲೆ** | : | ಸಿರವಾಳ, ಕಲ್ಲೂರ, ಮುರಗಾನೂರ. |
| **ಜತ್ತ ತಾಲ್ಲೂಕು** | : | ಭೀವರಗಿ, |
| **ದಕ್ಷಿಣ ಸೊಲ್ಲಾಪುರ** | : | ಸೊಲ್ಲಾಪುರ,ಅಚ್ಚೆಗಾವ, ಚಂದ್ರಾಳ,ಕಾತ್ರಾಳ,ಕರಜಗಿ |
| **ಬೆಳಗಾವಿ ಜಿಲ್ಲೆ** | : | ಗೋಕಾಕ, ಅಥಣಿ, ಐನಾಪುರ, ಸೌದತ್ತಿ, ಉಗರಗೊಳ, ಹಿರೇಕುಂಬಿ |
| **ಶಿವಮೊಗ್ಗ ಜಿಲ್ಲೆ** | : | ನ್ಯಾಮತಿ |
| **ಶ್ರೀಶೈಲ** | : | ಕಂಬಳಿಮಠ (ಕಮರಿಮಠ) |

ಹೀಗೆ ಮೇಲಿನ ಊರುಗಳನ್ನು ಗಮನಿಸಿದಾಗ ಗಡಿ ಭಾಗದ ಜಿಲ್ಲೆಗಳಲ್ಲಿ ಅಮೋಘಸಿದ್ಧನ ಮಠಗಳು ಹಾಗೂ ದೇವಾಲಯಗಳು ಅಧಿಕ ಪ್ರಮಾಣದಲ್ಲಿರುವುದು ಸ್ಪಷ್ಟವಾಗುತ್ತದೆ. ಈಗಾಗಲೇ ಹೇಳಿದಂತೆ ಬಿಜಾಪುರ ಜಿಲ್ಲೆಯ ಅರಕೇರಿ ಅಮೋಘಸಿದ್ಧನ ಮೂಲ ಮಠದ ನೆಲೆ. ಸಾಮಾನ್ಯವಾಗಿ ಚಟ್ಟಿ ಅಮವಾಸ್ಯೆಯ ದಿನ ಇಲ್ಲಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಮಹಾರಾಷ್ಟ್ರ ಕರ್ನಾಟಕ ಗಡಿಭಾಗದ ಲಕ್ಷಾಂತರ ಭಕ್ತರು ಬರುತ್ತಾರೆ. ಈ ಭಕ್ತರಲ್ಲಿ ನೂರಕ್ಕೆ ಎಪ್ಪತ್ತೈದರಷ್ಟು ಭಕ್ತರು ಹಾಲುಮತದವರೆಂಬುದು ವಿಶೇಷ. ಇವರಲ್ಲಿ ಪೂಜಾರಿಗಳು, ಒಡೆಯರು, ಡೊಳ್ಳುಕುಣಿತದವರಿರುತ್ತಾರೆ. ಅಂದು ಇಡೀ ರಾತ್ರಿ ಅಮೋಘಸಿದ್ಧನ ಪವಾಡಮಯ ಜೀವನ ಮತ್ತು ಸಾಧನೆಗಳನ್ನು ಡೊಳ್ಳಿನ ಹಾಡುಗಳ ಮೂಲಕ, ಕತೆಗಳ ಮೂಲಕ ಸೇರಿದ ಭಕ್ತರಿಗೆ ಹೇಳುತ್ತಾರೆ. ಒಂದು ಡೊಳ್ಳಿನ ಹಾಡನ್ನು ಇಲ್ಲಿ ಗಮನಿಸಬಹುದು.

*ಅರಕೇರಿ ಗುಡ್ಡದ ತುದಿಯಾಗ*
*ಅಮೋಗಸಿದ್ಧಾ ನೆಲೆಸ್ಯಾನ*
*ಅಮೋಗಸಿದ್ಧ ನೆಲಿಸ್ಯಾನೇಳಯ್ಯ*
*ನಮ್ಮ ನೆಲ್ಲಾ ಸಲುವ್ಯಾನೋ ॥ ಪಲ್ಲವಿ*

*ಅರಕೇರಿ ಅಂಬುದು ಆರ‍್ಯಾಣೋ*
*ಸಿದ್ಧಯ್ಯ ಬಂದು ನೆಲಿಸ್ಯಾನೋ*
*ಸಿದ್ಧಯ್ಯ ಬಂದು ನೆಲೆಸ್ಯಾನೇಳಯ್ಯ*
*ಭಕತರನೆಲ್ಲಾ ಸಲುವ್ಯಾನೋ ॥ ೧*

*ಬಿಜ್ಜರಗಿ ಭೂತಾಳಿ ಉಮದಿಯ ಮಲಿಕಾರಿ*
*ಕುದುರೆಯನೇರಿ ಬಂದಾರೇಳಯ್ಯ*
*ಕುದುರೆಯನೇರಿ ಬಂದಾರೇಳಯ್ಯ*
*ಭೂತಗಳೆಲ್ಲಾ ಓಡ್ಯಾವೋ.......॥ ೨*

*ಸಿದ್ಧರೆಲ್ಲಾ ಕೂಡ್ಯಾರ ಗಿರಿಯಾಗ*
*ಕಂಬಳಿ ಮ್ಯಾಗ ಕುಂತಾರೋ*
*ಕಂಬಳಿ ಮ್ಯಾಗ ಕುಂತಾರೇಳಯ್ಯ*
*ಧೋ ಎಂದು ಮಳೆಯ ಸುರಿಸ್ಯಾರೋ ॥ ೩*

ಅಮೋಘಸಿದ್ಧ ಮತ್ತವನ ಶಿಷ್ಯ ಪರಂಪರೆಯವರಾದ ಅವಧುಸಿದ್ಧ, ಬಿಳಿಯಾನಿಸಿದ್ಧ, ಸೋಮಣ್ಣ ಮುತ್ತ್ಯಾ, ಕನ್ನಮುತ್ತ್ಯಾ ಮುಂತಾದ ಒಡೆಯರು ಸಿದ್ಧರು ಕಂಬಳಿ ಬೀಸಿದರೆ ಸಾಕು ಮಳೆ ಬರುತ್ತದೆ ಎಂಬುದನ್ನು ಈ ಹಾಡುಗಳು ತಿಳಿಸುತ್ತವೆ. ಹೀಗೆ ನೂರಾರು ಡೊಳ್ಳಿನ ಹಾಡುಗಳ ಮೂಲಕ ಅಮೋಘಸಿದ್ಧನ ಪವಾಡಗಳನ್ನು ಜನರಿಗೆ ತಿಳಿಹೇಳುವ ಪರಂಪರೆ ಅನೇಕ ವರ್ಷಗಳಿಂದ ನಡೆದುಕೊಂಡು ಬಂದಿರುವುದನ್ನು ಇಲ್ಲಿ ಕಾಣಬಹುದು. ಇಂಥ ಡೊಳ್ಳಿನ ಮೇಳಗಳಲ್ಲಿ ಕೆಲವು ಸಂದರ್ಭದಲ್ಲಿ ಸ್ಪರ್ಧೆ ಏರ್ಪಡುತ್ತದೆ. ಈ ಸ್ಪರ್ಧೆಯನ್ನು ನೋಡಲಿಕ್ಕಾಗಿಯೇ ಸುತ್ತಮುತ್ತ ಲಿನ ಗ್ರಾಮದ ಜನರು ಬಂದಿರುತ್ತಾರೆ. ಇದನ್ನು ನೋಡುವುದೇ ಒಂದು ಸೊಗಸು. ಜೊತೆಗೆ ಒಡೆಯರಿಂದ ಹೇಳಿಕೆಗಳಾ ಗುತ್ತವೆ. ಈ ಹೇಳಿಕೆ ಮೇಲೆಯೇ ರೈತರು ಬರುವ ದಿನಮಾನಗಳನ್ನು ಒಳ್ಳೆಯದೆಂದು ಕೆಟ್ಟದ್ದೆಂದು ಗುರುತಿಸುತ್ತಾರೆ.

ಗದಗ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಹುಲ್ಲೂರಿನಲ್ಲಿ ಅತ್ಯಂತ ಪ್ರಾಚೀನವಾದ ಹಾಲುಮತ ಮಠವಿದೆ. ಇದು ಅಮೋಘಸಿದ್ಧ ಪರಂಪರೆಯ ಮತ್ತೊಂದು ಮಹತ್ವದ ಮಠ. ಈ ಮಠ ಯಾವಾಗ ಸ್ಥಾಪನೆಗೊಂಡಿತು? ಇದರ ಸ್ಥಾಪಕರು ಯಾರು? ಎಂಬುದರ ಬಗ್ಗೆ ನಮಗೆ ಯಾವುದೇ ಅಧಿಕೃತ ಪುರಾವೆಗಳಿಲ್ಲ. ಬಹುಶಃ ಸಿದ್ಧಕುಲಾನ್ವಯಾರ್ಣವ ಪ್ರವರ್ಧಮಾನ ಸುಧಾಕರರೆಂದು ಪ್ರಸಿದ್ಧಿಯನ್ನು ಹೊಂದಿದ್ದ ಅಮೋಘಸಿದ್ಧ ಸಂತತಿಯ ಅಸಂಖ್ಯಾತ ಸಿದ್ಧಪುರುಷರಲ್ಲಿ ಯಾರಾದರೊಬ್ಬರು ಈ ಮಠವನ್ನು ಸ್ಥಾಪಿಸಿರಬಹುದೆಂದು ಜನವದಂತಿಗಳಿವೆ. ಶ್ರೀ ಅಮೋಘ ಸಿಂಹಾಸನ ಪೀಠಾಧ್ಯಕ್ಷರು, ಹಾಲುಮತ ಆಚಾರ ವಿಚಾರಕ್ಕೆ ಕಾರಣಕರ್ತೃಗಳು; ಶ್ರೀ ಹುಲ್ಲೂರು ಅಮೋಗಿ ಸಂಸ್ಥಾನ ಪೀಠಾಧೀಶ್ವರರೂ ಆದ ವೇದಮೂರ್ತಿಗಳಾಗಿದ್ದ ಶ್ರೀ ರಾಯಪ್ಪಯ್ಯ ಸ್ವಾಮಿಗಳು ಈ ಮಠದ ಸ್ಥಾಪಕರೆಂದು ಸದ್ಯಕ್ಕೆ ಹೇಳಬಹುದು. ವಿಶೇಷವಾಗಿ ಈ ಹೆಸರಿನ ಬಿರುದನ್ನು ಹೊಂದಿರುವ ಈ ಮಠದ ಒಡೆಯರು ಸುತ್ತಮುತ್ತಲಿನ ನೂರಾಮೂವತ್ತು ಹಳ್ಳಿಗಳ ಹಾಲುಮತದವರಿಗೆ ಕುಲಗುರುಗಳಾಗಿದ್ದಾರೆ.

**ಮಠಾಧಿಪತಿಗಳ ಆಚರಣೆ ಮತ್ತು ನಂಬಿಕೆಗಳು**

ಈ ಪರಂಪರೆಯ ಮಠಾಧಿಪತಿಗಳಿಗೂ ಒಡೆಯರು, ಗುರುವಿನವರು, ಸ್ವಾಮಿಗಳು, ಮಹಾರಾಯ, ಗುರುಸ್ವಾಮಿ



ಶ್ರೀ ಓಘಸಿದ್ಧ ದೇವಸ್ಥಾನ ಮೂಳೆ ತಾ. ಅಥಣಿ, ಜಿ. ಬೆಳಗಾಂವ

ಎಂದು ಅನೇಕ ಬಗೆಯಾಗಿ ಕರೆಯುತ್ತಾರೆ. ಆದರೂ ಸಹಿತ ಒಡೆಯರೆಂದೆ ಸಂಬೋಧಿಸುವುದು ಹೆಚ್ಚಾಗಿ ಕಾಣುತ್ತೇವೆ. ಹೋಮದ ಕಂಬಳಿ, ನೇಮದ ಬೆತ್ತ, ಭಂಡಾರ ಭರಣಿ, ಶಿರಕಮಲ ಧರಿಸಿ, ಸುಖದ ಕೊಳಲು, ದುಃಖದ ಕೊಳಲು ಇವು ಅಮೋಘಸಿದ್ಧ ಪರಂಪರೆಯ ಒಡೆಯರ ವೇಷಭೂಷಣ ಗಳು. ಇವರಿಗೆ ೩೩ ಹಳ್ಳಿಗಳ ಕುರುಬರು ಶಿಷ್ಯರಾಗಿರುತ್ತಾರೆ. ಪ್ರತಿ ವರ್ಷ ಒಡೆಯರು ಶಿಷ್ಯರ ಮನೆಗೆ ಹೋಗಿ ಪೂಜೆ ನೆರವೇರಿಸಿ ಪ್ರಸಾದ ಸ್ವೀಕರಿಸುವ ಪದ್ಧತಿ ಇಂದಿಗೂ ಅಸ್ತಿತ್ವ ದಲ್ಲಿದೆ. ಶಿಷ್ಯರು ತಾವು ಬೆಳೆದ ದವಸಧಾನ್ಯ, ಹಣ, ವಸ್ತ್ರ, ಒಡವೆಗಳನ್ನು ಗುರುಗಳಾದಂಥ ಒಡೆಯರಿಗೆ ಅರ್ಪಿಸುತ್ತಾರೆ. ಅಲ್ಲದೇ ಜನನ, ನಾಮಕರಣ, ಮದುವೆ, ಮರಣ ಮುಂತಾದ ಸಾಮಾಜಿಕ ಕಾರ್ಯಗಳಿಗೆ ಒಡೆಯರು ಅವಶ್ಯವಾಗಿ ಇರಬೇಕು. ಈ ಪರಂಪರೆಯಲ್ಲಿ ಬರುವ ಒಡೆಯರ ಕೆಲವು ಆಚರಣೆಗಳನ್ನು ಹೀಗೆ ಕ್ರೋಢೀಕರಿಸಿ ಹೇಳಬಹುದು: ಮೂರು ಹಾಗೂ ಒಂದು ಸಣ್ಣ ಎಳೆ ಹಾಕಿದ ಕಂಬಳಿಯನ್ನು ಅಮೋಘಸಿದ್ಧ ಒಡೆಯರು ಹೊರುತ್ತಾರೆ. ಎರಡು ಎಳಿ ಹಾಗೂ ಒಂದು ಸಣ್ಣ ಎಳಿ ಒಂದನ್ನು ಹಾಕಿದ ಕಂಬಳಿಯನ್ನು ಪೂಜಾರಿಯವರು ಹೊರುತ್ತಾರೆ. ಒಡೆಯರು ಅಥವಾ ಗುರುಗಳು ಭಕ್ತರಲ್ಲಿ ಭಿಕ್ಷೆಗೆ ಊರಿಗೆ ಹೋದರೆ ಮೊದಲು ಕುರುಬರ ಮುಖ್ಯಸ್ಥನ ಮನೆಗೆ ಹೋಗಬೇಕು. ಆ ಮುಖ್ಯಸ್ಥ ನಿಗೆ ಹಿರೇಕುರುಬ ಎಂದು ಕರೆಯುತ್ತಾರೆ. ಊರಲ್ಲಿ ಭಕ್ತರ ಮನೆಗೆ ಒಡೆಯರು ಹೋಗುವಾಗ ಈ ಮುಖ್ಯಸ್ಥನ ಜತೆ ಹೋಗಬೇಕು. ಒಂದೊಂದು ಊರಲ್ಲಿ ಗುರುಗಳು ಸಿಗದೇ ಇದ್ದಾಗ ಹಿರೇಕುರುಬನು ಗುರುಗಳ ಅನುಮತಿ ಪಡೆದು ಮಂಗಳ ಕಾರ್ಯಗಳನ್ನು ಪೂರೈಸುತ್ತಾನೆ. ಗುರುಗಳಿಗೆ ಕೊಡಬೇಕಾದ ಕಾಣಿಕೆ ವಸ್ತುಗಳನ್ನು ಅವರಿದ್ದಲ್ಲಿಗೆ ಹೋಗಿ ತಲುಪಿಸುವುದು ಅಥವಾ ಅವರು ಬಂದಾಗ ತಲುಪಿಸುವುದು ಹಿರೇಕುರುಬನ ಜವಾಬ್ದಾರಿ. ಒಡೆಯರು ಶುದ್ಧ ಸಸ್ಯಾಹಾರಿ ಗಳು. ಲಿಂಗಪೂಜೆ, ಸಂಧ್ಯಾವಂದನೆ ತಪ್ಪದೇ ಮಾಡುತ್ತಾರೆ. ಮದುವೆಯಾಗುವ ಮುನ್ನ ಪಟ್ಟಗಟ್ಟಿ ದೇವರಕಾರ್ಯ ನಡೆಸಿಕೊಡುತ್ತಾರೆ. ಮದುವೆಗೆ ಒಂದು ದಿನ ಮುಂಚಿತವಾಗಿ ಮದುಮಕ್ಕಳನ್ನು ಕರೆಸಿಕೊಂಡು ದೇವತಾಕಾರ್ಯಕ್ಕೆ ಅಣಿ ಯಾಗುತ್ತಾರೆ. ಅಂದು ವಿಶೇಷವಾಗಿ ಬಂದ ಎಲ್ಲ ಭಕ್ತರಿಗೆ, ಬಂಧುಬಾಂಧವರಿಗೆ ಕಟಾಂಬಲಿ ಪ್ರಸಾದವಿರುತ್ತದೆ. ಇಡೀ ರಾತ್ರಿ ದೇವರ ಸ್ತೋತ್ರ, ಡೊಳ್ಳಿನ ಹಾಡುಗಳ ಕಾರ್ಯಕ್ರಮ ವಿರುತ್ತದೆ. ಸರಿಯಾಗಿ ನಸುಕಿನ ನಾಲ್ಕು ಗಂಟೆಗೆ ದೇವರ ಉತ್ಸವ ಪ್ರಾರಂಭವಾಗುತ್ತದೆ. ಮುತ್ತೈದೆಯರು ಕಳಸಾರತಿ ಹಿಡಿದು ಬಂದು ದೇವರ ಪಲ್ಲಕ್ಕಿಯನ್ನು, ಗುಡಿ ಅಥವಾ ಮಠದ ಕಳಸವನ್ನು ತೆಗೆದುಕೊಂಡು ಡೊಳ್ಳಿನ ಮೇಳ ಹಾಗೂ



ಮಕಣಾಪುರದ ಸೋಮಲಿಂಗನಮೂರ್ತಿ

ಇನ್ನಿತರ ವಾದ್ಯ ಗಳೊಂದಿಗೆ ಗಂಗಾಸ್ನಾನಕ್ಕೆ ಹೋಗುತ್ತಾರೆ. ಹೋಗುವಾಗ ವೀರಗಾರರು ವೀರಾವೇಶದಿಂದ ತಮ್ಮ ಸೇವೆ ಸಲ್ಲಿಸುತ್ತಾರೆ. ಹೇಳಿಕೆಯು ನಡೆಯುತ್ತದೆ. ಮರಳಿ ಬಂದ ನಂತರ ಗುಡಿಯ ಕಳಸಾ ಏರಿಸಿ ಪಟ್ಟಗಟ್ಟುವ ಕಾರ್ಯ ಆರಂಭವಾಗುತ್ತದೆ. ಸುರಿಗೆ ಹಾಗೂ ಪಂಚಕಲಶ ಹೂಡಿ ನೂಲುಸುತ್ತಿ ಪಟ್ಟದವರನ್ನು ಕೂಡ್ರಿಸಿ ಸ್ನಾನ ಮಾಡಿಸುತ್ತಾರೆ. ಎಲ್ಲ ಕಾರ್ಯ ಮುಗಿದ ನಂತರ ಪಟ್ಟದ ಒಡೆಯರು ದೇವರ ಮುಖವನ್ನು ಕಟ್ಟಿಕೊಂಡು ಡೊಳ್ಳಿನ ವಾಲಗದಲ್ಲಿ ಆಡಿಸುತ್ತಾರೆ. ನಂತರ ಸೂರ್ಯ ಹೊರಡುವ ಮುನ್ನ ದೇವರ ಗವಿಯ ಹೊಗುವ ಪದ್ಧತಿ ಇದೆ. ನಂತರ ಮರುದಿನ ಮದುವೆ ಕಾರ್ಯ ಮಾಡುತ್ತಾರೆ. ಒಡೆಯರ ಪತ್ನಿಯನ್ನು 'ಗುರುತಾಯಿ' ಎಂದು ಕರೆಯುತ್ತಾರೆ. ಒಡೆಯರಿಲ್ಲದ ಸಂದರ್ಭದಲ್ಲಿ ಈಕೆಯೂ ಕೂಡ ಮದುವೆ ಮುಂತಾದ ಕಾರ್ಯಗಳನ್ನು ನೆರವೇರಿಸಿ ಕೊಡುತ್ತಾಳೆ. ಗಂಡ ಲಿಂಗೈಕ್ಯರಾದರೆ ಗುರು ತಾಯಿಯು ಮುತ್ತೈದೆಯ ಸಂಕೇತಗಳಾದ ಬಳೆ, ಕುಂಕುಮ, ತಾಳಿ, ಕರಿಮಣಿ ಸರ ಇತ್ಯಾದಿಗಳನ್ನು ತೆಗೆಯದೆ ಮೊದಲಿ ನಂತೆಯೇ ಇರುತ್ತಾಳೆ. ಒಡೆಯರ ಮನೆಗೆ ಹೆಣ್ಣುಮಕ್ಕಳನ್ನು ತೆಗೆದುಕೊಳ್ಳುವಾಗ ಮದುವೆಯ ಪೂರ್ವದಲ್ಲಿ ಅವರಿಗೆ ಲಿಂಗದೀಕ್ಷೆ ಕೊಡುತ್ತಾರೆ. ಒಡೆಯರ ಹೆಣ್ಣುಮಕ್ಕಳನ್ನು ಒಡೆಯರ ಮನೆತನ ಸಿಗದಿದ್ದಾಗ ಸಿದ್ಧಸಂಪ್ರದಾಯದ ಸಂಬಂಧಿಗಳಿಗೆ, ಕುರುಬ ಮನೆತನಗಳಿಗೆ ಮದುವೆ ಮಾಡಿ ಕೊಡುತ್ತಾರೆ. ರೇವಣಸಿದ್ದೇಶ್ವರ ಪೂಜಾರಿಗಳಾದ ಗುರುವಿನ ಹಾಗೂ ಪೂಜಾರಿ ಇವರು ಅಮೋಘಸಿದ್ಧ ಒಡೆಯರ

ಸಂಬಂಧಿಗಳಾಗಿದ್ದಾರೆ. ಒಡೆಯರನ್ನು ಅವರು ಮಾಡಿದ ಕೆಲಸ ಅಥವಾ ಪವಾಡಗಳನ್ನು ಯಾರು ಹೊಗಳಬಾರದು. ಒಂದು ವೇಳೆ ಹೊಗಳಿದರೆ ಅವರ ವಂಶ ನಾಶವಾಗುತ್ತದೆ ಎಂಬ ಪ್ರತೀತಿಯಿದೆ. ಹೀಗಾಗಿ ಅಮೋಘಸಿದ್ಧ ಪರಂಪರೆಯ ಒಡೆಯರಿಗೆ ಹೆಳವರು ಇರುವುದಿಲ್ಲ. ಒಡೆಯರು ಲಿಂಗೈಕ್ಯ ರಾದರೆ ಅವರದೇ ಆದ ಪ್ರತ್ಯೇಕ ರುದ್ರಭೂಮಿ ಇರುವದು. ಅಲ್ಲಿ ಅಮೋಘಸಿದ್ಧನ ದೇವಾಲಯ ಅಥವಾ ಮಠವಿರುತ್ತದೆ."[೬]

ಕಂಬಳಿ, ಕುರುಬರ ಒಂದು ಮಂಗಲಕರವಾದ ವಸ್ತ್ರ. ಪ್ರತಿಯೊಂದು ಶುಭಕಾರ್ಯಕ್ಕೆ ಕಂಬಳಿ ಅತ್ಯಂತ ಅವಶ್ಯ ವಾದದ್ದೆಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ಇಂಥ ಮಂಗಲಕರವಾದ ಕಂಬಳಿಯನ್ನು ಹೊದ್ದುಕೊಂಡು ಒಡೆಯರು ಹಬ್ಬ ಹರಿದಿನಗಳಂದು ಮಳೆಬೆಳೆ, ಸಂತಾನಾಭಿ ವೃದ್ಧಿ ಮುಂತಾದವುಗಳ ಕುರಿತು ಡೊಳ್ಳಿನ ಮೇಲೆ ನಿಂತು ಹೇಳಿಕೆ ಮಾಡುವರು. ಸಾಮಾನ್ಯವಾಗಿ ದೀಪಾವಳಿ, ಉಗಾದಿ ಮೊದಲಾದ ಹಬ್ಬಗಳಂದು ಅತ್ಯಂತ ವಿಜೃಂಭಣೆಯಿಂದ ಒಡೆಯರು ತಮ್ಮ ಯೋಗಸಾಧನೆಯ ಮೂಲಕ ಈ ಹೇಳಿಕೆ ಮಾಡುವರು. ಎಂ.ಎಂ. ಪಡಶೆಟ್ಟಿ ಅವರು ಹೇಳುವಂತೆ "ನಿಸರ್ಗದ ಸೂಕ್ಷ್ಮ ನಿರೀಕ್ಷಣೆ, ಆಕಾಶದಲ್ಲಾಗುವ ವ್ಯತ್ಯಾಸ, ಮೋಡಗಳ ಚಲನವಲನ, ಪ್ರಾಣಿ ಪಕ್ಷಿಗಳ ಕ್ರಿಯೆ ಇತ್ಯಾದಿ ಗಳನ್ನು ಗಮನಿಸಿ ಮಳೆಯ ಕುರಿತಾಗಿ ಒಂದು ತೀರ್ಮಾನಕ್ಕೆ ಬಂದು ಹೇಳಿಕೆ ಕೊಡುವುದರಲ್ಲಿ ಕುರುಬ ಜನಾಂಗಕ್ಕೆ ಹೆಚ್ಚಿನ ಪಾಲು ಸಲ್ಲುತ್ತದೆ." ನಿದರ್ಶನಕ್ಕಾಗಿ ಕೆಲವು ಹೇಳಿಕೆಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

೧. **ಅರಕೇರಿ ಅಮೋಘಸಿದ್ಧನ ಗುರುಮನಿ ಮ್ಯಾಗ ಮಕಣಾಪುರ ಸಿಂಹಾಸನ ಗದ್ಗಿ ಯಾಂವ ಕೇಳಾಂವ ತುದಿಗೈ ಹಿಡ್ದು ಕೇಳ ಬ್ಯಾಡ ಮುಂಗೈ ಹಿಡ್ದು ಕೇಳು ನನ್ನಂತೆ ನಡದ್ರ ಬಗ್ಗತೀನಿ ನನ್ನಂತ ನಡಿದಿದ್ರ ಬಗ್ಗಿಸಿ ಹುಡೆ ಉರಿಳಿದಂಗ ಉಳ್ಸಿನಿ.**

೨. **ಮುತ್ತು ಹವಳ ಉಡಿಕಟ್ಟಿ ಬಿತ್ತೂದ್ರಾಗ ಇದಿಮಾಯಿ ರಂಡಿ ಇದ್ರಿಗೆ ಬಂದ್ಮ್ಯ ಭೂತ್ಯಾನ ಹಚ್ಚಿ ಬೈಲು ಮಾಡೂದ್ರಾಗ ಐದ ದಿನ ಹಿಂದಕ್ಕ ಬಿತ್ತು.**

೩. **ಆನಿಗಡತರ ಮೋಡ, ಒಂಟಿಗಡತರ ಹುಲ್ಲು ಆಡಮರಿ ಕುಡಿಯಲಿಕ್ಕೆ ನೀರಿಲ್ಲ.**

೪. **ವಿಜಾಪುರ ಅಗಸಿ ಮ್ಯಾಲ ಹಂಗ ಕುಂತು**
**ಕಲಬುರ್ಗಿ ಅಗಸಿ ಮ್ಯಾಲ ಕಾಗಿ ಕುಂತು**
**ಹಂಗಿನ ಬಾಯಂದು ಹವಳ ಬಿತ್ತು**
**ಕಾಗಿ ಬಾಯಂದು ರಗುತ ಬಿತ್ತು.**

ಅಮೋಘಸಿದ್ಧ ಮತ್ತವನ ಪರಿವಾರದ ಮಠ ಮಂದಿರ ಗಳಲ್ಲಿ ನಿರ್ದಿಷ್ಟ ಸಂದರ್ಭಗಳಲ್ಲಿ ಒಡೆಯರಿಂದ ಇಂಥ ಅನೇಕ ಹೇಳಿಕೆಗಳಾಗುತ್ತವೆ. ಈ ಸಾಂಕೇತಿಕವಾದ ಹೇಳಿಕೆ ಗಳಿಂದ ಸಮಕಾಲೀನ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಮುಂತಾದ ಸಾಂಸ್ಕೃತಿಕ ಸಂಗತಿಗಳು ಗೊತ್ತಾಗುತ್ತವೆ ಎಂಬುದು ಜನರ ಬಲವಾದ ನಂಬಿಕೆ.[೭]

ಪ್ರತಿ ಅಮವಾಸ್ಯೆಯ ದಿನ ಭೂತಪಿಶಾಚಿಗಳಿಂದ ಪೀಡಿತರಾದ ನೂರಾರು ಜನರು ನಿವಾರಣೆಗಾಗಿ ಇಂಥ ಮಠಮಂದಿರಗಳಿಗೆ ತಪ್ಪದೇ ಬರುತ್ತಾರೆ. ಬಂದಾಗ ಅಮೋಘ ಸಿದ್ಧನ ಪ್ರಸಾದವಾದ ಭಂಡಾರವನ್ನು ಲೇಪನ ಮಾಡಿಕೊಂಡರೆ ಭೂತಪಿಶಾಚಿಗಳು ಅಲ್ಲಿಂದ ಹೋಗುತ್ತವೆ ಎಂಬ ನಂಬಿಕೆ ಭಕ್ತರಲ್ಲಿದೆ. ಅಲ್ಲದೆ

**ಮಕ್ಕಳ ಬೇಡವರು ಪಟ್ಟಣಕ ಹೋಗರಿ**
**ಪಟ್ಟಣದ ಕೆಳಗ ಅರಕೇರ್‍ಯೋ**
**ಪಟ್ಟಣದ ಕೆಳಗ ಅರಕೇರಿ ಅಮೋಗಸಿದ್ಧ**
**ತೊಟ್ಟೀಲು ಹೊಸರೀ ಖಳುವ್ಯಾನೋ**

ಅಂದರೆ ಮಕ್ಕಳಾಗದವರು ಅಮೋಘಸಿದ್ಧನ ದರ್ಶನ ತೆಗೆದುಕೊಂಡರೆ ಮಕ್ಕಳಾಗುತ್ತವೆ ಎಂಬ ನಂಬಿಕೆ ದಟ್ಟವಾಗಿ ಇಲ್ಲಿ ಪ್ರಚಲಿತವಿದೆ. ಹೀಗಾಗಿ ಪ್ರತಿ ಅಮವಾಸ್ಯೆಯ ದಿನ ಸಾವಿರಾರು ಜನರು ಆಗಮಿಸುತ್ತಾರೆ. ಇಂಥ ಅನೇಕ ದೋಷಗಳ ಪರಿಹಾರಕ್ಕಾಗಿ ಅಮೋಘಸಿದ್ಧನ ಮಠಕ್ಕೆ ಬಂದು ಹರಕೆ ತೀರಿಸುವುದು, ಸೇವೆ ಸಲ್ಲಿಸುವುದನ್ನು ಈಗಲೂ ನಾವು ಕಾಣಬಹುದು.

### ಮಠಾಧಿಪತಿಗಳ ಸಾಮಾಜಿಕ ಸೇವೆ

ಈ ಪರಂಪರೆಯ ಒಡೆಯರು ಸಾಮಾಜಿಕ ರಂಗದಲ್ಲಿ ಸಾಕಷ್ಟು ಸೇವೆ ಸಲ್ಲಿಸುತ್ತ ಬಂದಿರುವುದನ್ನು ನಾವು ಗುರುತಿಸ ಬಹುದು. ಕಳೆದ ಶತಮಾನದ ಪೂರ್ವಾರ್ಧದಲ್ಲಿ ಹಾಲುಮತ ಸಮಾಜದ ಸಮಗ್ರ ಏಳ್ಗೆಗಾಗಿ ಹಗಲಿರುಳು ದುಡಿದ ಒಡೆಯ ರಿದ್ದಾರೆ. ಅಂಥವರಲ್ಲಿ ಹುಲ್ಲೂರು(ಗದಗ ಜಿಲ್ಲೆಯ ಶಿರಹಟ್ಟಿ ತಾಲ್ಲೂಕು) ಅಮೋಗಿ ಮಠದ ಸಿದ್ಧಪ್ಪಯ್ಯ ಒಡೆಯರ (೧೭೭೯–೧೮೪೩) ಅವರು ಪ್ರಸಿದ್ಧ ಮಠಾಧಿಪತಿಗಳಾಗಿ ದ್ದವರು. ಕಳೆದ ಶತಮಾನದ ಆರಂಭದಲ್ಲಿ ಸಮಾಜಕ್ಕಾಗಿ ಹಾಸ್ಟೆಲ್ ಸ್ಥಾಪನೆ, ಹಾಲುಮತ ಧಾರ್ಮಿಕ ಸಭೆ, ಸಾಮೂಹಿಕ ಮದುವೆ, ಕುರುಬರ ಸಮ್ಮೇಳನ ಇತ್ಯಾದಿ ಜಾಗೃತಿ ಕಾರ್ಯ ಕ್ರಮಗಳನ್ನು ನಡೆಸಿದ್ದಾರೆ. ಹಾಲುಮತದವರನ್ನು ಸದಾಚಾರಿ ಗಳನ್ನಾಗಿ ಮಾಡುವುದೇ ನನ್ನ ಮೊದಲ ಕರ್ತವ್ಯ. ದೀನ ದಲಿತರ ಏಳ್ಗೆಯೇ ನನ್ನ ಬಾಳಿನ ಗುರಿ ಎಂದು ಪದೇ ಪದೇ ಹೇಳುತ್ತಿದ್ದರು. ಶಿರಹಟ್ಟಿ ತಾಲ್ಲೂಕು ಬಟ್ಟೂರು ಗ್ರಾಮ ದಲ್ಲಿ ೧೯೪೭ರಲ್ಲಿ 'ಕುರುಬರ ವಿದ್ಯಾರ್ಥಿಗಳ ಧರ್ಮಾರ್ಥ ಬೋರ್ಡಿಂಗ' ಸ್ಥಾಪಿಸಿ ಮಹದುಪಕಾರವನ್ನು ಮಾಡಿದ್ದಾರೆ. ಈ ಬೋರ್ಡಿಂಗನಲ್ಲಿ ವಿದ್ಯಾರ್ಥಿಗಳಿಗೆ ಊಟ, ವಸತಿ, ಔಷಧೋಪಚಾರಗಳ ಜೊತೆಗೆ ಉಪನ್ಯಾಸಗಳನ್ನು ಏರ್ಪಡಿಸಿ ರುವುದು, ಕುರುಬರೇತರ ಹಿಂದುಳಿದ ವಿದ್ಯಾರ್ಥಿಗಳಿಗೂ

ಅವಕಾಶಮಾಡಿಕೊಟ್ಟಿರುವುದು ಸಿದ್ಧಪ್ಪಯ್ಯನವರ ಶೈಕ್ಷಣಿಕ ಪ್ರೀತಿಗೆ ನಿದರ್ಶನವಾಗಿದೆ.[೮]

ಸಿದ್ಧಪ್ಪಯ್ಯನವರ ತಮ್ಮಂದಿರಾದ ರಾಯಪ್ಪಯ್ಯ ಒಡೆಯರ ಅವರೂ ಸಹಿತ ಹಾಲುಮತ ಸಮಾಜಕ್ಕೆ ಮಹತ್ತರ ವಾದ ಸೇವೆಯನ್ನು ಸಲ್ಲಿಸಿದ್ದಾರೆ. ಸಮಾಜದ ಜನರಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳು ತಲೆದೋರಿ ಮನಸ್ತಾಪ, ಜಗಳ ಗಳಾದಾಗ ಗುರುಗಳಾದವರು ಮಧ್ಯಪ್ರವೇಶಿಸಿ ತಿಳಿಹೇಳು ತ್ತಿದ್ದರು. ಅಂಥ ಒಂದು ಪ್ರಸಂಗವನ್ನು ಭಕ್ತನೊಬ್ಬನು ರಾಯಪ್ಪಯ್ಯ ಸ್ವಾಮಿಗಳಿಗೆ ಪತ್ರದ ಮೂಲಕ ಮನವಿ ಮಾಡಿಕೊಂಡಿದ್ದಾನೆ. ಆ ಪತ್ರದ ಒಕ್ಕಣಿಕೆಯನ್ನು ಯಥಾವತ್ತಾಗಿ ಇಲ್ಲಿ ಕೊಡಲಾಗಿದೆ:

*"ಶ್ರೀ ಅಮೋಗಿ ಸಿಂಹಾಸನಪತಿಗಳಾದ ಹಾಲುಮಥಕ್ಕೆ ಮೂಲಪೀಠ ಸಿಂಹಾಸನದೇಶೆ ಚತುರಾಷ್ಟ್ರ ಪೃಥ್ವಿಗೆ ಕಾರಣ ಕರ್ತೃವ್ಯರಾದ ಆಚಾರ ವಿಚ್ಯಾರಕ್ಕೆ ಅಧಿಪತಿಗಳಾದ ರಾಜ್ಯಾಧಿ ರಾಜೆ ಪೂಜಿತರಾದ ರಾಜೆಮಾಂನ್ಯ ರಾಜೆ ಶ್ರೀ ರಾಯಪ್ಪಸ್ವಾಮಿ ಗಳಾದ ಅಮೋಗಿಮಠ ಮುಕ್ಕಾಮ ಹುಲ್ಲುರು ಹಾಲಿವಸ್ತಿ ಸುಗ್ನಹಳ್ಳಿ ಯಿವರ ಚರಣ ಸಂನ್ನಿಧಿಗೆ ನಿಂಮ ಕಾರುಂಣ್ಯ ಭಕ್ತರಾದ ಸುಗ್ನಹಳ್ಳಿಯಲ್ಲಿ ಇರುವ ಹಾಲುಮಥದ ಸರ್ವೆ ಸಮಸ್ತು ದೈವದವರು ಮಾಡುವ ಸಿರಸಾಷ್ಟಾಂಗ ನಮಸ್ಕಾರ ಬಿಂನಹ ತರುವಾಯ ಇಗ ತಂಮ ಪಾದಸಂನ್ನಿಧಿಗೆ ಅರಿಕೆ ಮಾಡಿಕೊಳ್ಳುವದೇನೆಂದರೆ। ನಂಮ ಗ್ರಾಮದಲ್ಲಿ ಇರುವ ಫಕೀರಪ್ಪಾ ಕಬ್ಸಳಿ ಇತನು ನಂಮ ಕುಲಾಚ್ಯಾರದಲ್ಲಿ ತಪ್ಪಾವಿಲ್। ಮಾಡಿದ ಬಗ್ಗೆ ಸರ್ವೆಸಮಸ್ತು ದೈವದವರು। ಕರಿಸಿ ವಿಚ್ಯಾರ ಮಾಡಲಾಗಿ ಸದರಿ ಫಕೀರಪ್ಪನ ಕಡಿಗೇ ತಪ್ಪಾವಿಲ್ ಕಂಡ ಬಗ್ಗೆ ಸದರಿ ಮನುಷ್ಯನು ತಪ್ಪು ತೀರಿಸಿಕೊಳ್ಳಲಿಕ್ಕೆ ಬಾಧ್ದನಾಗಿ ಇಗ ನಂನ ಕಡಿಗೆ ಯೇನು ಅಪರಾಧವಿಲ್ಲದೆಲೆ ತಪ್ಪು ತೀರಿಸಿಕೊಳ್ಳುವದಿಲ್ಲಂತ ತಕರಾರು ಮಾಡುತ್ತಾನೆ. ಆ ಬಗ್ಗೆ ತಂಮ ಕಡಿಗೆ ತಿಳಿಸಿರುತ್ತೇವೆ. ತಾವು ಮುದ್ದಾಮ ಬಂದು ವೆವಸ್ಥಾ ಮಾಡಬೇಕು ಮತ್ತು ತಮ್ಮ ಹುಕುಮು ಯಾವ ಪ್ರಕಾರ ಆಗುತ್ತದೋ ಆ ಪ್ರಕಾರ ನಾವು ನಡಕೊಳ್ಳುತ್ತೇವೆ. ಬಹಳ ಬಲ್ಲಂಥ ಸುಜ್ಞರಿಗೆ ಹೆಚ್ಚಿಗಿ ಬರಕೊಳ್ಳಲಿಕ್ಕೆ ಶಕ್ತರಲ್ಲವು ಇಂತಿ ಬಿನ್ನಹ।*

ದ। ನ। ನೀಲೊಂಜಪ್ಪ ಆಡಿನದ ॥ಖು॥

ಇ ಬಲ ಹೆಬ್ಬಟ್ಟಿನ ಗುರ್ತಾ। ನಿಂಗಪ್ಪಾ ಬಳ್ಳಾರಿ ಇತಂದು ಅದೆ॥"[೯]

ಈ ಪತ್ರವನ್ನು ಗಮನಿಸಿದಾಗ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಒಡೆಯರ ಪಾತ್ರ ಎಂಥದ್ದಿತ್ತು ಎಂಬುದು ನಮಗೆ ಮನವರಿಕೆಯಾಗುತ್ತದೆ.

ಚಿಕ್ಕಸಿಂದೋಗಿ(ಕೊಪ್ಪಳ ಜಿಲ್ಲೆ)ಯ ಅಮೋಘಸಿದ್ಧ ಮಠ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಾಕಷ್ಟು ಸಾಧನೆಗೈದಿದೆ. ಈ ಮಠದ ಒಡೆಯರಾಗಿದ್ದ ಮರಿಸ್ವಾಮಿಗಳು ಸತತ ಐವತ್ತು ವರ್ಷಗಳ ಕಾಲ ಖಾಸಗಿ ಶಾಲೆಯೊಂದನ್ನು ನಡೆಸಿ ಅನೇಕರನ್ನು ಸಾಕ್ಷರರನ್ನಾಗಿ ಮಾಡಿದ್ದಾರೆ. ಅವರ ಪರಂಪರೆಯಲ್ಲಿ ಬಂದ ಸಿದ್ದಣ್ಣ ಅವರೂ ಸಹ ಸಾಮಾಜಿಕ ಸೇವೆಯಲ್ಲಿ ನಿರಂತರವಾಗಿ ದುಡಿದ ಒಡೆಯರಲ್ಲಿ ಪ್ರಮುಖರು. ಪ್ರತಿವರ್ಷ ಅಮೋಘಸಿದ್ಧನ ಪುರಾಣ ಪ್ರವಚನ ಮಾಡಿಸಿ ಜನರಲ್ಲಿ ಧಾರ್ಮಿಕ ಭಾವನೆಯನ್ನು ಮೂಡಿಸಲು ಕಾರಣ ರಾಗಿದ್ದಾರೆ. ರೋಗರುಜಿನಗಳಿಗೆ ಔಷಧೋಪಚಾರ, ಮಠಕ್ಕೆ ಬಂದ ಭಕ್ತರಿಗೆ ದಾಸೋಹ ಏರ್ಪಡಿಸುವುದು, ಪವಾಡಗಳ ಮೂಲಕ ಮಳೆ ಬರಿಸಿದ್ದು, ಕಾಲರಾ ಹಾವಳಿಯನ್ನು ತಡೆಗಟ್ಟಿದ್ದು, ಸಾಮೂಹಿಕ ಉಚಿತ ಮದುವೆಗಳನ್ನು ಏರ್ಪಡಿಸಿದ್ದನ್ನು ನೋಡಿದ ಅನೇಕ ಹಿರಿಯರು ಇಂದಿಗೂ ನೆನಪಿಸಿಕೊಳ್ಳುತ್ತಾರೆ.[೧೦]

### ಒಡೆಯರು–ತೌಲನಿಕ ವಿವೇಚನೆ

ಅಮೋಘಸಿದ್ಧ ಪರಂಪರೆಯ ಒಡೆಯರಿಗೂ ರೇವಣ ಸಿದ್ಧ ಪರಂಪರೆಯ ಒಡೆಯರಿಗೂ ವೇಷಭೂಷಣ, ಆಚರಣೆ ಸಂಪ್ರದಾಯಗಳಲ್ಲಿ ಮೂಲಭೂತವಾದ ಕೆಲವು ವ್ಯತ್ಯಾಸಗಳಿವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

### ಮಠಾಧಿಪತಿಗಳ ಇಂದಿನ ಸ್ಥಿತಿ–ಮುಂದಿನ ಭವಿಷ್ಯ

ಅಮೋಘಸಿದ್ಧ ಪರಂಪರೆಯ ಮಠಾಧಿಪತಿಗಳ ಸ್ಥಿತಿ ಇಂದು ಅಷ್ಟೇನೂ ಅನುಕೂಲಕರವಿಲ್ಲ. ಇದಕ್ಕೆ ಮುಖ್ಯ ಕಾರಣಗಳು ಹೀಗಿವೆ: ೧. ಕಳೆದ ಶತಮಾನದ ಕೊನೆಯ ದಶಕದಲ್ಲಿ ಕುರುಬ ಸಮಾಜವು ಕನಕದಾಸರ ಹೆಸರಿನಲ್ಲಿ ಗುರುಪೀಠವನ್ನು ಸ್ಥಾಪಿಸಿದ್ದು. ೨. ಆಧುನಿಕ ಜೀವನ ಪದ್ಧತಿ ಯಿಂದಾಗಿ ಒಡೆಯರ ಮಕ್ಕಳು, ಮರಿಮೊಮ್ಮಕ್ಕಳು ಗುರು ಪರಂಪರೆಯನ್ನು ಮುಂದುವರಿಸದಿರುವುದು. ೩. ಒಡೆಯ ಒಡೆಯರಲ್ಲಿ ನಾ ಹೆಚ್ಚು ನೀ ಹೆಚ್ಚು ಎಂಬ ತಾರತಮ್ಯಗಳನ್ನು ಮಾಡಿಕೊಂಡಿರುವುದು. ಹಾಲುಮತಕ್ಕೆ ಯಾರು ಗುರುಗಳೆಂಬ ವಿಚಾರದಲ್ಲಿ ಅನೇಕ ಒಡೆಯರು ಜಗಳಾಡಿ ಮನಸ್ತಾಪ ಮಾಡಿಕೊಂಡಿರುವುದು. ಈ ಮನಸ್ತಾಪವನ್ನು ಹೋಗಲಾಡಿ ಸಲು ಯಾವ ಯಾವ ಊರಿನ ಕುರುಬರಿಗೆ ಯಾವ ಯಾವ ಒಡೆಯರು ಗುರುಗಳು ಎಂಬುದನ್ನು ಹಿರಿಯರ ಮಧ್ಯಸ್ಥಿಕೆಯಲ್ಲಿ ಬಗೆಹರಿಸಿದ ಉದಾಹರಣೆಗಳಿವೆ. ಇದಕ್ಕೆ ನಾಡಿನಾದ್ಯಂತ ಒಡೆಯರಲ್ಲಿರುವ ಕಂಚಿನ ಪತ್ರಗಳು, ಕಾಗದ ಪತ್ರಗಳು ಸಾಕ್ಷಿಯಾಗಿವೆ. ನನಗೆ ದೊರೆತ ಸುರುಳಿಯಾಕಾರದ ಒಂದು ಕಾಗದದ ನಕಲು ಪ್ರತಿಯಲ್ಲಿರುವ ಪಠ್ಯವನ್ನು ಇಲ್ಲಿ ಕೊಡಲಾಗಿದೆ.

ಪುಟ ೧। *ಶ್ರೀಗುರು ಸೂರ್ಯ ಚಂದ್ರರು ಮುಣುಗುವವರಿಗೆ। ನಡಿಯಬೇಕು ಯಿವನ ಹೊರ್ತು ಗುರುಯಿಲ್ಲಾ। ಕಲ್ಯಾಣ ಬಸವಾದಿ*

| | ಅಮೋಘಸಿದ್ಧ ಪರಂಪರೆ | ರೇವಣಸಿದ್ಧ ಪರಂಪರೆ |
|---|---|---|
| ೧. ಸಂಕೇತ | : ಭಂಡಾರ | ವಿಭೂತಿ |
| ೨. ಮಠ ದೇವಾಲಯಗಳು | : ದೇವಾಲಯಗಳು ಅಧಿಕ | ಮಠಗಳು ಅಧಿಕ |
| ೩. ಭೌಗೋಳಿಕ ವ್ಯಾಪ್ತಿ | : ಮಹಾರಾಷ್ಟ್ರ ಕರ್ನಾಟಕದ ಗಡಿಭಾಗ | ದಕ್ಷಿಣ ಕರ್ನಾಟಕ, ಮಧ್ಯಕರ್ನಾಟಕ |
| ೪. ಹೇಳಿಕೆಗಳು | : ಡೊಳ್ಳಿನ ಮೇಲೆ ನಿಂತು ಹೇಳಿಕೆ ಮಾಡುವುದು | ಮುಳ್ಳು ಮೇಲೆ ನಿಂತು ಹೇಳಿಕೆ ಮಾಡುವುದು |
| ೫. ವಾಸ್ತವ್ಯ | : ಗುಡ್ಡಗಾಡುಗಳಲ್ಲಿಯೂ ವಾಸ್ತವ್ಯ | ಮನೆಮಠಗಳಲ್ಲಿ ಮಾತ್ರ ವಾಸ್ತವ್ಯ |
| ೬ ಪವಾಡಗಳು | : ಪವಾಡಗಳು ಅಧಿಕ | ಪವಾಡಗಳು ಕಡಿಮೆ |
| ೭. ಆಹಾರ | : ಸಸ್ಯಾಹಾರ | ಸಸ್ಯಹಾರ |
| ೮. ಶಿಷ್ಯ ಪ್ರಶಿಷ್ಯರು | : ನೂರಾರು ಶಿಷ್ಯ ಪ್ರಶಿಷ್ಯರಿದ್ದಾರೆ | ಬೆರಳೆಣಿಕೆಯ ಶಿಷ್ಯರಿದ್ದಾರೆ |
| ೯. ಉದ್ಯೋಗ | : ಕುರಿಕಾಯಕ, ಕಂಬಳಿ ತಯಾರಿಕೆ | ಮಠಗಳ ಮೇಲುಸ್ತುವಾರಿ, ಕಂಬಳಿ ತಯಾರಿಕೆ |

ಇನ್ನು ಇಂಥ ಕೆಲವು ಭಿನ್ನತೆಗಳಿದ್ದರೂ ಎರಡೂ ಪರಂಪರೆಯ ಒಡೆಯರಲ್ಲಿ ಸಾಮ್ಯತೆಗಳೇ ಹೆಚ್ಚಿರುವುದು ಗಮನಿಸಬೇಕಾದ ಸಂಗತಿಯಾಗಿದೆ.

*ಪ್ರಮತಗನಂಗಳ ಮುಂದೆ ಆದ ಮಾಂಜರ । ವಿಕ್ರಮಂಕನ ಶಕೆ ೧೪೯೦ ಸರ್ವಜಿತು ನಾಮ ಸವತ್ಸರ ಮಿತಿ ಭಾದ್ರಪದ ಮಾಸ ಶ್ರೀಗುರು ಶಿದ್ಧಮತತೀರ್ತಪ್ರಸಾದ ಮೂರ್ತಿ ಏಕವಾಕ್ಯ ಸಂತೃಪ್ತ ಆದಂತ ಶಿವಧರ್ಮದಲ್ಲಿ ಮಂದಾಲಗಿರಿ ಶಿವಸ್ತಾನದ ಪತಿ* ***ಅರಕೇರಿ ಮಕಣಾಪೂರದ ಅಮ್ಮೊಗಿಸಿದ್ಧನ ಪಟ್ಟದ ವಡಿಯರು । ಸೋಮಯದೇವರು ಕುರುಬಯೆಂಬ ಕುಲಾಚಾರಕ್ಕೆ ಕರ್ತರು*** *ಗುರುಸ್ವಾಮಿಗಳು ಹಾಲುಮತ ಕ್ಷೀರಸಾಗರಕ್ಕೆ ಕರ್ತರು ಸರ್ವಸಾಯಿ । ಮುತ್ತ್ಯಾ ಮಾಂಕನು ಕುರುಬಯೆಂಬುವ ಕುಲಾಚಾರಕ್ಕೆ ಗುರು । ತಾನೆಯೆಂದು ಆಡಿದನು ಅರಕೇರಿ ಮಕಣಾಪುರದ ಪಟ್ಟದ । ಸೋಮಯ್ಯಾ ವಡಿಯರು ಆ ಸರ್ವರ ಮಾಂಕನು ಮಕಣಾಪೂರ। ದಿಂದಾ ಕಲ್ಯಾಣದ ಕುರುಬಗೌಡ ಮಾಳಗೂಂಡನ ಬಳಿಗೆ ಹೋಗಿರಿ । ಯಂದು ಕಳುವಿದ್ದರು । ಯಿಬ್ಬರು ಕುಲಾಚ್ಯಾರದ ಮಾತಿಗೆ ನ್ಯಾಯ । ದ ಮುಖದಿಂದ ಕಲ್ಯಾಣಕ ಬಂದು ಮಾಳಗೊಂಡನ ಬಳಿಯಲ್ಲಿ । ವಾಕ್ಯ ವಾದ ಹಾಕಿದರು ಆ ಮಹಾನಾಡ ದೈವಯಿತ್ತಂಡ ಮಾತು । ಕೇಳಿದ ಕಲ್ಯಾಣದ ಮಾಳಗೊಂಡಗೌಡನು ತಮ್ಮ ಹುಲಜಂತಿ । ಮಾಳಿಂಗರಾಯನ ಮಗಾ ಬರಿಗಾಲ ಮಾಳಪ್ಪನ ಕರಿಸಿಕೊಂಡು । ನಿರ್ನಯ ಮಾಡಿರಿಯಂದು ಕಲ್ಯಾಣದ ಮಾಳಗೊಂಡಗೌಡಾ । ವುಜಲಿ ಸೋಮಗೊಂಡಗೌಡ ಮಂಠಣದ ಪರಮಗೊಂಡಾ (ಒಟ್ಟು ೨೧ ಸಾಲುಗಳಲ್ಲಿ)*

***ಪುಟ ೨*** *ಕಲಬುರಗಿ ಯಿರಗೊಂಡಗೌಡಾ ಅಲ್ದಿ ಮಾಳಗೊಂಡಾ ಅಲ್ಲಾ। ಪೂರದ ತೊರ್ವಿ ಮುತ್ತಾಗೊಂಡಗೌಡಾ ಮಾತಿನ ಮುದಗೊಂಡಗೌಡ । ಶೋಭಾನದ ಜಕ್ಕಗೊಂಡಗೌಡಾ ಕಡತಿನ ಬೀರಗೊಂಡ ಯಿಂಬ್ರಾ । ಪೂರದ ಬಿರಗೊಂಡ ಮುರಗೊಂಡ ಯಿಷ್ಟು ಸಮಸ್ತ ಮಹಾನಾಡ । ಪ್ರಜೆ ಕುರುಬಗೌಡರು ಕಲ್ಯಾಣದಲ್ಲಿ ಕೂಡಿ ಧರ್ಮ ವಿಚಾರದಿಂ । ದ ಕೇಳಿ ನಿರ್ನಯ ಮಾಡಿರಿಯಂದು ಬಸವಾದಿ ಪ್ರಮತಗಣದ । ಮುಂದೆ ನುಡಿದ ಉತ್ರವು ಕಲ್ಯಾಣದ ಮಾಳಗೊಂಡನು ಮಾತು । ನುಡಿದನು ನಿಮ್ಮ ಶುಕ್ರತ ಮುಂತಾಗಿ ನುಡಿಯಿರಿ ಯಂದು । ಆಡಿದ ವಿವರವು ಮಹಾನಾಡುಗಣಂಗಳು ವಾಕ್ಯಾದಲ್ಲಿ । ನುಡಿದರು ಮಂಕನೆಂಬವ ಗುರು ಅಲ್ಲಾ ನಮ್ಮ ಕುರುಬಯಂಬು । ಕುಲದೋಳು ಮಂಕನೆಂಬವ ದೇವರಲ್ಲಾ ನಮ್ಮ* ***ಕುರುಬಯಂಬು। ಕುಲದೊಳಗ ಅರಕೇರಿ ಮಕಣಾಪುರದ ಅಮ್ಮೊಗಿ ಶಿದ್ಧನ ವಡಿಯರು ಗುರುಮುಖ್ಯ*** *ಪೂರ್ವತ ಹಾಲುಮತ ಕ್ಷೀರಸಾಗರಕ್ಕೆ ತಿರ್ತ ಪ್ರಸಾದ ಮುಖ್ಯನಾಯಕರು ನಮ್ಮ ಕುಲದೊಳು ಸರ್ವಸಾಯಿ । ಮುತ್ತ್ಯಾ ಜಗಮುತ್ತ್ಯಾ ನಮ್ಮ ಹಾಲುಮತಕ್ಕೆ ಸಂಬಂಧ ಅಲ್ಲಾ ಅವರು । ರೇವಣಸಿದ್ಧನ ಗುಂಡಗೊಪ್ಪರಾಗಿ ಮತ್ತೊಜಾಂಗಟಿ ತಗೊಂಡು ಮನಿಮನಿ । ಬೇಡಿಕೊಂಬುವರು ಮತ್ತೆ ನಮ್ಮ ಜ್ಯಾತಿಗೆ ಸಂಮಂಧ ಅಲ್ಲಾ ನಮ್ಮ ಹಾಲು । ಮತು ಆ ಸರ್ವರ ಮಂಕನ ಪೂಜೀ ಮಾಡಿದವ ಶಿವಾಚಾರಕ್ಕೆ ಹೊರಗು । ಯಂದು ಬಸವಾದಿ ಪ್ರಮತಗಣದ ಸ್ಥಳದಲ್ಲಿ ಆದ ವಿವರವು ನಿರ್ನಯ । ಮಾಡಿದರು ಯಿಮಾ ನಾಡುಕುರುಬಗೌಡರು ಪ್ರಜೆಯಂದು ಯಲ್ಲಾ ನೋಡಿ । ದ ವಾಕ್ಯವು ಹುಲಿಜಂತಿ ಮಾಳಿಂಗರಾಯ ಅಮ್ಮೊಗಿ ವಡಿಯರು ಸದಾ । ತಿರ್ತ ಬಲಗೊಂಡು ಗುರುವಾಗಿ ಪೂಜಿಗೊಂಬುವರು ಯಿಂತಿ ಮಾಂಜರ । ಕುಲಗೋತ್ರ ಪೂಜಿಗೊಳ್ಳಬೇಕು ಯಿ ಮೇಲೆ ವೆಗ್ಗಳ ಬರಿಯ । ಲಾಗದು ಯಿಂತಿ ಮಾಂಜರವು । ಮತ್ತು ಯಿ ಮಾಂಜರದಲ್ಲಿ ನಮ್ಮ ಕುರುಬಯಂಬ ಕುಲದೊಳಗೆ । ಯಲ್ಲಾ ಕುರುಬಕುಲಕ್ಕೆ ನಾವೇ ವಡಿಯರುಯಂದು ಅಮ್ಮೊಗಿಸಿದ್ಧನು । ಪಟ್ಟದ ವಡಿಯನು ಗುರು ಹತ್ತಿಕಂಕಣ ಮತ್ತೆ । ಉಣ್ಣಿಕಂಕಣ ಮತ್ತೆ । ಗೌಳಿಗೇರು ಮತ್ತೇ ಕಿಲಾರಿ ಕುರುಬರು ಮತ್ತೆ । ಕೊಂಕನೆ ಕುರುಬರು ಮತ್ತೆ । ಗೌಲೆತ್ತು ಆಡಿಸುವ ಕುರುಬರು ಮೇಲೆ ಬರಿದ ಯಿ ಯಲ್ಲಾ ಜಾತಿ । ಗೆ ಅಮ್ಮೊಗಿಶಿದ್ಧದೇವರ ಮನಿತನದವರು ಅಧಿಕಾರಯಿರುತ್ತದೆ.*

ಈ ದಾಖಲೆಯನ್ನು ಪರಿಶೀಲಿಸಿದಾಗ ಅಮೋಘಸಿದ್ಧ ಪರಂಪರೆಯ ಒಡೆಯರಿಗೂ ರೇವಣಸಿದ್ಧ ಪರಂಪರೆಯ ಒಡೆಯರಿಗೂ ಗುರುಗಳಾಗುವ ವಿಷಯದಲ್ಲಿ ಮನಸ್ತಾಪಗಳಿದ್ದದ್ದು ಸ್ಪಷ್ಟವಾಗುತ್ತದೆ.[೧೧] ಇಂಥ ದಾಖಲೆಗಳು ಪ್ರತಿಯೊಬ್ಬ ಒಡೆಯರ ಮನೆಯಲ್ಲಿರುವುದು ಗಮನಿಸಬೇಕಾದ ಸಂಗತಿ.

ಒಡೆಯರ ಭವಿಷ್ಯ ಉಜ್ವಲವಾಗಬೇಕಾದರೆ ಕೆಲವೊಂದು ಉಪಕ್ರಮಗಳನ್ನು ಅನುಷ್ಠಾನಗೊಳಿಸಬೇಕಾಗಿದೆ. ಅವು ಹೀಗಿವೆ: ೧. ಒಡೆಯರ ಒಂದು ಕುಟುಂಬದಲ್ಲಿ ಒಬ್ಬರಾದರೂ ಗುರುತನವನ್ನು ಕಡ್ಡಾಯವಾಗಿ ವಹಿಸಿಕೊಳ್ಳಬೇಕು. ಹೀಗೆ ವಹಿಸಿಕೊಂಡ ಪ್ರತಿಯೊಬ್ಬ ಒಡೆಯನು ಭಕ್ತರ ಊರು ಮನೆಗಳಿಗೆ ತಪ್ಪದೇ ಹೋಗಿ ಲಿಂಗಪೂಜೆ ನೇರ ವೇರಿಸಿ ಪ್ರಸಾದ ಸ್ವೀಕರಿಸಿ ಅವರಿಗೆ ಉಪದೇಶ ನೀಡಬೇಕು. ಆ ಮೂಲಕ ಜನಜಾಗೃತಿಯನ್ನು ಮಾಡಬೇಕು. ೨. ಜನನ ನಾಮಕರಣ, ಮದುವೆ, ಮರಣ ಇತ್ಯಾದಿ ಸಾಮಾಜಿಕ ಕಾರ್ಯಗಳನ್ನು ಸುಸೂತ್ರವಾಗಿ ನಡೆಸಿಕೊಡಲು ಒಡೆಯರು ಸಂಪೂರ್ಣವಾದ ತಿಳುವಳಿಕೆಯನ್ನು ಹೊಂದಿರಬೇಕು. ಇದಕ್ಕಾಗಿ ತರಬೇತಿ ಶಿಬಿರಗಳನ್ನು ಏರ್ಪಡಿಸಬೇಕು. ಈ ಶಿಬಿರಗಳಲ್ಲಿ ಹಾಲುಮತದ ಇತಿಹಾಸ, ಸಂಸ್ಕೃತಿ, ಆಚಾರ ವಿಚಾರ, ಸಂಪ್ರದಾಯಗಳ ಕುರಿತು ತಜ್ಞರಿಂದ ಉಪನ್ಯಾಸ ಕೊಡಿಸುವುದು. ಹಾಲುಮತಕ್ಕೆ ಸಂಬಂಧಿಸಿದಂತೆ ಗ್ರಂಥಾಲ

ಯವನ್ನು ಆಯಾ ಮಠ ಮಂದಿರಗಳಲ್ಲಿ ಸ್ಥಾಪಿಸುವುದು. ೩. ರೇವಣಸಿದ್ಧ, ಅಮೋಘಸಿದ್ಧ, ಸಿದ್ಧರಾಮೇಶ್ವರ, ಮಾಳಿಂಗರಾಯ ಮೊದಲಾದ ಹಾಲುಮತ ಸಾಂಸ್ಕೃತಿಕ ನಾಯಕರ ಕುರಿತಂತೆ ರಚಿತವಾಗಿರುವ ಪುರಾಣಗಳ ಪ್ರವಚನ ಕಾರ್ಯಕ್ರಮವನ್ನು ಪ್ರತಿಯೊಂದು ಗ್ರಾಮದಲ್ಲಿ ಆಯೋಜಿಸುವುದು. ೪. ಪ್ರತಿವರ್ಷ ಒಂದೊಂದು ಸ್ಥಳದಲ್ಲಿ ಒಡೆಯರ ಸಮ್ಮೇಳನ, ಹಾಲುಮತ ಸಮ್ಮೇಳನ ಹಾಗೂ ಧಾರ್ಮಿಕ ಸಭೆಸಮಾರಂಭಗಳನ್ನು ನಡೆಸುವುದು. ೫. ಹಾಲುಮತ ಸಮಾಜದ ಸಮಗ್ರ ಅಭಿವೃದ್ಧಿಗಾಗಿ ಒಡೆಯರ ನೇತೃತ್ವದಲ್ಲಿ ರಚನಾತ್ಮಕ ಯೋಜನೆಗಳನ್ನು ಕಾರ್ಯಗತಗೊಳಿಸಬೇಕು. ೬. ಅಮೋಘಸಿದ್ಧ ಪರಂಪರೆಯ ಮಠ ದೇವಾಲಯಗಳನ್ನು ಜೀರ್ಣೋದ್ಧಾರ ಕೈಕೊಳ್ಳುವುದು. ಆ ಮೂಲಕ ಅವುಗಳನ್ನು ಜಾಗ್ರತ ಕೇಂದ್ರಗಳನ್ನಾಗಿ ಅಭಿವೃದ್ಧಿಗೊಳಿಸುವುದು. ೭. ಗುರು ಮತ್ತು ಭಕ್ತರ ನಡುವಿನ ಕಂದರಗಳನ್ನು ಹೋಗಲಾಡಿಸುವುದು. ಇಂಥ ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದರೆ ಹಾಲುಮತ ಗುರುಗಳು ಮತ್ತು ಭಕ್ತ ಸಮುದಾಯದವರ ಭವಿಷ್ಯ ಉಜ್ವಲವಾಗಬಹುದು.

ಅಮೋಘಸಿದ್ಧ ಪರಂಪರೆಯ ಕುರಿತು ಸಂಶೋಧನೆ ಕೈಕೊಳ್ಳಲು ಸಾಕಷ್ಟು ಅವಕಾಶಗಳಿವೆ. ಅವುಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು : ೧. ಅಮೋಘಸಿದ್ಧ ಪರಂಪರೆಯ ಮಠ ಮಂದಿರಗಳ ಕೋಶಗಳನ್ನು ಸಿದ್ಧಪಡಿಸುವುದು. ೨. ಈ ಪರಂಪರೆಯಲ್ಲಿ ಬರುವ ಒಡೆಯರ ಸಮಗ್ರ ವಿವರಗಳನ್ನು ಸಂಗ್ರಹಿಸಿ ಒಂದೆಡೆ ಪ್ರಕಟಿಸುವುದು. ೩. ಮೌಖಿಕ ರೂಪದಲ್ಲಿ ಈ ಪರಂಪರೆ ಕುರಿತು ಸಾಕಷ್ಟು ಮಾಹಿತಿಗಳಿವೆ. ಉದಾಹರಣೆಗೆ ಹೇಳಿಕೆಗಳು, ಕಥೆಗಳು ಒಗಟುಗಳು, ಹಾಡುಗಳನ್ನು ಧ್ವನಿಸುರುಳಿಗಳ ಮೂಲಕ ದಾಖಲಿಸಿಕೊಳ್ಳಬೇಕು. ೪. ಅಮೋಘಸಿದ್ಧನ ಜೀವನ ಸಾಧನೆಗಳನ್ನು ತಿಳಿಸುವ ಡೊಳ್ಳಿನ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸುವುದು. ೫. ಅಮೋಘಸಿದ್ಧ ಮತ್ತು ಆತನ ಶಿಷ್ಯಪ್ರಶಿಷ್ಯರ ಕುರಿತು ಪುರಾಣಗಳು ಕಥೆಗಳು ರಚನೆಗೊಂಡಿವೆ. ಅವೆಲ್ಲವುಗಳನ್ನು ಕ್ರಮಾನುಗತವಾಗಿ ಪರಿಷ್ಕರಿಸಿ ಪ್ರಕಟಿಸಬೇಕು. ೬. ಈ ಪರಂಪರೆಯ ಕುರಿತು ನಡೆಯುವ ಆಚರಣೆ ಹಬ್ಬಗಳನ್ನು ಚಿತ್ರಿಕರಣ ಮಾಡಿಕೊಂಡು ಅಧ್ಯಯನಕ್ಕೊಳಪಡಿಸುವುದು. ೭. ಈ ಪರಂಪರೆಯ ಜೊತೆಗೆ ಇನ್ನಿತರ ಸಿದ್ಧಪರಂಪರೆಗಳನ್ನು ತೌಲನಿಕವಾಗಿ ವಿವೇಚನೆಗೊಳಪಡಿಸಬೇಕು. ಇಂಥ ಕೆಲವು ಯೋಜನೆಗಳನ್ನು ಕಾರ್ಯಗತಗೊಳಿಸಿದರೆ ಅಮೋಘಸಿದ್ಧ ಪರಂಪರೆಯ ಸಮಗ್ರ ಚಿತ್ರಣ ದೊರಕಬಹುದು. ಈ ನಿಟ್ಟಿನಲ್ಲಿ ಸಂಶೋಧಕರು ಮುಂದಾಗಬೇಕಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ರೇವಣ್ಣಸಿದ್ಧ ಸಂಪ್ರದಾಯ ಮಠಗಳ ಕುರಿತ ನನ್ನ ಲೇಖನ ನೋಡಿರಿ: **ಇತಿಹಾಸ ದರ್ಶನ,** ಸಂ. ೨೦, ೨೦೦೫, ಪುಟ ೩೦೫.

೨. ಇತ್ತೀಚಿನ ದಶಕಗಳಲ್ಲಿ ಕುರುಬರು ಕನಕದಾಸರ ಹೆಸರಿನಲ್ಲಿ ಪೀಠ ಸ್ಥಾಪಿಸುವುದರ ಮೂಲಕ ಹಾಲುಮತ ಗುರುಪರಂಪರೆಯಲ್ಲಿ ಕನಕದಾಸ ಪರಂಪರೆಯೊಂದನ್ನು ಸ್ಥಾಪಿಸಿರುವುದು ಕುತೂಹಲಕಾರಿಯಾಗಿದೆ.

೩. ಎಂ.ಎಂ. ಪಡಶೆಟ್ಟಿ, ಸಿದ್ಧಪರಂಪರೆಯಲ್ಲಿ ಅಮೋಘ ಸಿದ್ಧ, **ಹಾಲಕೆನೆ**(ಕಾಳಿದಾಸ ಶಿಕ್ಷಣ ಸಂಸ್ಥೆಯ ಬೆಳ್ಳಿ ಹಬ್ಬದ ಪ್ರಕಟಣೆ, ಪ್ರ. ಸಂ. ಶ್ರೀರಾಮ ಇಟ್ಟಣ್ಣವರ, (೨೦೦೨), ಪುಟ. ೮೮.

೪. ಹೆಚ್ಚಿನ ಮಾಹಿತಿಗಾಗಿ ನೋಡಿರಿ: **ಅಮೋಘಸಿದ್ಧೇಶ್ವರ ಅರಕೇರಿ ಅರಮನೆಯ ವಂಶಾವಳಿ.**

೫. ಅಮೋಘಸಿದ್ಧನ ಇತಿವೃತ್ತವನ್ನು ಕಟ್ಟಿಕೊಡುವಲ್ಲಿ ಡಾ.ಎಂ.ಎಂ. ಪಡಶೆಟ್ಟಿ ಅವರ ಸಿದ್ಧಪರಂಪರೆಯಲ್ಲಿ ಅಮೋಘಸಿದ್ಧ ಲೇಖನ ತುಂಬ ಸಹಾಯಕ್ಕೆ ಬಂದಿದೆ. ಅದಕ್ಕಾಗಿ ಅವರಿಗೆ ಉಪಕೃತನಾಗಿದ್ದೇನೆ.

೬. ಈ ಮಾಹಿತಿಯನ್ನು ನೀಡಿದ ನಾಗವಾಡ ಅಮೋಘಸಿದ್ಧ ಮಠದ ಗುರುಸ್ವಾಮಿ ಅ. ಒಡೆಯರ ಅವರಿಗೆ ಕೃತಜ್ಞತೆಗಳು.

೭. ಹೇಳಿಕೆಗಳಿಗಾಗಿ ನೋಡಿರಿ : ಎಂ. ಎಂ. ಪಡಶೆಟ್ಟಿ, **ಹೇಳಿಕೀ ಮಾಡ್ಯಾರ ಒಡೆಯರು,** ನೆಲೆ ಪ್ರಕಾಶನ ಸಿಂದಗಿ, ೧೯೯೩.

೮. ಹುಲ್ಲೂರಿನ ಅಮೋಗಿಮಠದ ಬಗ್ಗೆ ಹೆಚ್ಚಿನ ಸಂಗತಿಗಳಿಗಾಗಿ ಗಮನಿಸಿ: ೧. ವಿ.ಆರ್. ಹನುಮಂತಯ್ಯ, ಕುರುಬರ ಚರಿತ್ರೆ, ಪುಟ.೧೪೦. ೨.ಬಿ. ಜಿ. ಬಿರಾದಾರ., ಹುಲ್ಲೂರಿನ ಅಮೋಗಿಮಠ, **ಕನಕ ರಶ್ಮಿ,** ಸಂ.೪, ಸಂ.೧, ೨೦೦೬.

೯. ಈ ಪತ್ರದ ಜೆರಾಕ್ಸ್ ಪ್ರತಿಯನ್ನು ಸಂಗ್ರಹಿಸಿ ಒದಗಿಸಿ ಕೊಟ್ಟ ಶ್ರೀ ಬಿ.ಜಿ. ಬಿರಾದಾರ ಅವರಿಗೆ ಕೃತಜ್ಞತೆಗಳು.

೧೦. ಬಿಸರಳ್ಳಿಯ ಅಮೋಘಸಿದ್ಧ ಮಠದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ನೋಡಿರಿ: ಶರಣಬಸವರಾಜ ಬಿಸರಳ್ಳಿ, **ಶಿವಶರಣ ಸಿದ್ಧಪ್ಪನವರು ಭೂತಣ್ಣನವರ ಜೀವನ ಚರಿತ್ರೆಯು,** ಚಿಕ್ಕಸಿಂದೋಗಿ, ೧೯೮೫.

೧೧. ಮೂಲತಃ ಅರಕೇರಿ ಮನೆತನಕ್ಕೆ ಸಂಬಂಧಿಸಿದ ಕಲಘಟಗಿಯ ಗುರುಮಠ ಎಂಬುವವರ ಒಡೆತನದಲ್ಲಿ ಈ ಸುರುಳಿಯಾಕಾರದ ದಾಖಲೆಯಿದೆ. ಇದನ್ನು ಶೋಧಿಸಿಕೊಟ್ಟ ಶ್ರೀ ಬಿ. ಜಿ. ಬಿರಾದಾರ ಅವರಿಗೆ ಧನ್ಯವಾದಗಳು.

ಡಾ. ಬಿ. ನಂಜುಂಡಸ್ವಾಮಿ*

# "ಖಗೇಂದ್ರಮಣಿ ದರ್ಪಣಂ" ಕರ್ತೃ ಮೊದಲನೇ ಮಂಗರಾಜನ ಆಳ್ವಿಕೆಯ ಪ್ರದೇಶ ಮತ್ತು ಸ್ವಸ್ಥಾನ

"ಖಗೇಂದ್ರಮಣಿ ದರ್ಪಣಂ" ಎಂಬ ವಿಷವೈದ್ಯ ಕೃತಿಯನ್ನು ಮೊದಲನೇ ಮಂಗರಾಜ (ಸು. ೧೩೬೦) ಬರೆದಿದ್ದಾನೆ. ಇವನು ಜೈನಕವಿ. ಹೊಯ್ಸಳ ರಾಜ್ಯದಲ್ಲಿಯ ದೇವಳಿಗೆಯೆಂಬ ನಾಡಿನ ಮುಗುಳಿಪುರದ ವಿಭು. ಈ ಕೃತಿ ೧೯೪೨ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಶ್ರೀ ಎ. ವೆಂಕಟರಾವ್ ಮತ್ತು ಪಂಡಿತ್ ಹೆಚ್. ಶೇಷಯ್ಯಂಗಾರ್ ರವರಿಂದ ಸಂಪಾದಿತವಾಗಿ ಪ್ರಕಟವಾಗಿತ್ತು. ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೦೪ರಲ್ಲಿ ಕನ್ನಡ ಟೀಕೆ ಸಮೇತ ಶ್ರೀ ಬಿ.ಎಸ್. ಸಣ್ಣಯ್ಯನವರಿಂದ ಸಂಪಾದನೆಗೊಂಡು ಪ್ರಕಟವಾಗಿದೆ. ಪ್ರಥಮಾಧಿಕಾರದಲ್ಲಿ ಕವಿ ತನ್ನ ಸ್ವಂತ ವಿಷಯಗಳನ್ನು ಹೀಗೆ ಹೇಳಿಕೊಂಡಿದ್ದಾನೆ:

ಕಂ ॥ *ಭಾವಿಸಲರಿದದಟೆರವಂ ।*
*ಭೂವನಿತೆಯ ಲಪನ ದಂತಿರಾವಗಮೆಸೆಗುಂ*
***ದೇವಳಿಗೆಯೆಂಬ** ದೇಶಂ ।*
*ದೇವರ್ಗಣಮಿಲ್ಲಮಲ್ಲಿಯಖಿಳ ಸುಖಂಗಳ್ ॥ ೩೫ ॥*

ಕಂ ॥ *ಆ ನಾಡೊಳ್ ಸೊಗಯಿಸುಗುಂ ।*
*ಭೂನುತವೆಂದೆನಿಪ **ಚಿಕ್ಕಮುಗುಳಿಯದುಂ** ಸ್ವ*
*ಸ್ಥಾನ ಪ್ರಾಪ್ತಿಯನೀಗುಂ ।*
*ಜ್ಞಾನನಿಧಾನರ್ಗಶೇಷ ಸುಕವಿಜನಕ್ಕಂ ॥ ೩೯ ॥*

ವ ॥ ಅದೆಂತೆಂದೊಡೆ

ಕಂ ॥ *ಆ ಜನಪದ ಕಾಂತಾಮುಖ ।*
*ರಾಜೀವದವೋಲ್ ಕರಂ ಮನಂಗೊಳಿಸಿ ರಮಾ*
*ಭಾಜನಮೆನೆ **ಮುಗುಳಿ** ಕರಂ ।*
*ರಾಜಿಸುಗುಂ ಸಕಲ ಸುಖದ ಪೊಂಪುಟೆಯಿಂದಂ ॥ ೪೦ ॥*

ಚಂ ॥ *ಮದನಶರಂಗಳಂತೆಸೆವ ಕಾಂತೆಯರಿಂ ವನವೃಕ್ಷ ಮಾಲೆಯಿಂ*
*ಮೃದುಮಧುರಂಗಳಪ್ಪಫಲದಿಂ ಕುಸುಮಾವಳಿಯಿಂ ಸುನರ್ತಕೀ*
*ಸುದತಿಯರಿಂದೆ ಗಾಯಕಿಯರಿಂದೆ ಸಮಗ್ರತೆವೆತ್ತದೆತ್ತಲುಂ*
*ಮುದಮನದಾಗಿಕುಂ ವಿಷಯ ಪಂಚಕದಿಂ **ಮುಗುಳೀಪುರಂ***
*ಕರಂ ॥ ೪೧ ॥*

ಮ ॥ *ವರ ಪದ್ಮಾಕರದಿಂದೆ ಪುಷ್ಪಿತ ಕುಜವ್ರಾತಂಗಳಿಂ ಷಟ್ಪದ*
*ಸ್ವರದಿಂದೊಪ್ಪುವ ಗಂಧಶಾಳಿವನದಿಂದುತ್ತುಂಗ ಚೈತ್ಯಾಲಯೋ*
*ತ್ಕರದಿಂ ಹರ್ಮ್ಯ ಗೃಹಾಳಿಯಿಂ ಸುಜನರಿಂ ಸಂಪತ್ತಿಯಿಂದಾವಗಂ*
*ನಿರುತಂ **ಶ್ರೀಮುಗುಳೀಪುರಂ** ಸೊಗಯಿಕುಂ ವಿಶ್ವಂಭರಾ*
*ನೂಪುರಂ ॥ ೪೨ ॥*

ಉ ॥ *ಶ್ರೀ ಜಿನಪಾದಪದ್ಮಮಧುಪಂ ಪರಮಾಗಮದತ್ತ ಚಿತ್ತವಂ*
*ಭೋಜದಳೇಕ್ಷಣಂ ಪರಮಲಕ್ಷಣಲಕ್ಷಿತ ಪುಣ್ಯ ದೇಹದಿಂ*
*ರಾಜಸಮಾನನಿಂದ್ರವರವೈಭವ ಸಜ್ಜನ ಪಾರಿಜಾತನೆಂ*
*ದೀ ಜಗಮಟ್ಟೆಯಿಂದೆ ಸಲೆ ಬಣ್ಣಿಸುಗುಂ **ವಿಭು ಮಂಗರಾಜನಂ***
*॥ ೪೪ ॥*

ಚಂ ॥ *ಸುರಚಿರವೃತ್ತರತ್ನಸದನಂ ಜನರಕ್ಷಣದಕ್ಷನಬ್ಜಮಂ*
*ದಿರೆಯ ಸುಜನ್ಮಭೂಮಿ ಪುರುಷೋತ್ತಮ ಸಂಗತನಾವಗಂ ಶುಭಾ*
*ಕರ ವಿಲಸತ್ ಸರಸ್ವತಿ ನಿರಂತರಮಿರ್ಪುದಜೆಂದೆ ಸಿಂಧುಗಂ*
***ದೊರೆ ಮುಗುಳೀಪುರಪ್ರಭು ವಿದಗ್ಧಶಿಖಾಮಣಿ ಮಂಗಣೋತ್ತಮಂ***
*॥ ೪೫ ॥*

ಚಂ ॥ *ಎನೆ ನೆಗಟಿಾ ತ್ರಿಲೋಕಪತಿ ಪಾರ್ಶ್ವಜಿನಾಂಘ್ರಿ ಸರೋಜ ಭೃಂಗ ಸ*
*ನನ್ಮುಜಮುಕುಂದನೆಂದೆನಿಪ ತದ್ವಿಭುಗಂ ಮೃಗನೇತ್ರೆಯಪ್ಪ ತ*
*ನ್ಮನ ವಿಲಸಲ್ಲತಾಲಲಿತೆ ಪೆರ್ಮೆಲೆಗಂ ಜನಿಸಿರ್ದಪಂ ಸದಾ*
*ಘನತರಕೀರ್ತಿ ಪುಣ್ಯಕರಮೂರ್ತಿ **ಮಹಾಪ್ರಭು ಮಂಗಮನ್ಮಥಂ***
*॥ ೪೮ ॥*

ಕಂ ॥ *ಕಾಣದ ಮುನ್ನಂ ದಷ್ಟ ।*
*ಪ್ರಾಣದ ಗತಿ ದಷ್ಟನನ್ವಯಂ ಕ್ಷತದೆಡೆಯಂ*
*ಜಾಣನೆ ಪೇಟಿಲ್ ಜಗದ ।*
*ಕ್ಷೋಣ ಜಿನೋಕ್ತಿಯೊಳ್ **ಮಂಗರಾಜಂ** ಬಲ್ಲಂ ॥ ೭೪ ॥*

ಈ ಪದ್ಯಗಳ ಅನುವಾದವನ್ನು ಯಥಾವತ್ತಾಗಿ ಕೊಡಲಾಗಿದೆ :

ಭೂದೇವಿಯ ಮುಖದಂತೆ ವಿರಾಜಿಸುತ್ತಿರುವ ದೇವಳಿಗೆ ಎಂಬ ನಾಡು ಸುರಸುಖವನ್ನು ಮೀರಿದ ಊಹಾತೀತ ಸಂಪತ್ತಿನಿಂದ ಕೂಡಿದೆ. ॥ ೩೫ ॥ ಇಂತಹ ದೇಶದಲ್ಲಿ ಚಿಕ್ಕ ಮುಗುಳಿಯೆಂಬುದು ಜ್ಞಾನಿಗಳಿಗೆ ಕವಿಗಳಿಗೆ ಆಶ್ರಯ ಸ್ಥಾನವಾಗಿದ್ದಿತು. ॥ ವ ॥ ಅದು ಹೇಗೆಂದರೆ ॥ ೩೯ ॥ ಆ ದೇಶದ ಮುಖಕಮಲದಂತೆ ಶೋಭಿಸಿ ಸಂತಸವನ್ನೀಯುವ, ಲಕ್ಷ್ಮೀನಿವಾಸವೆನ್ನುವಂತೆ ಸಕಲ ಸುಖಸಂಪತ್ತಿನಿಂದ ತುಂಬಿರುವ ಮುಗುಳೀಪುರವು ಪ್ರಸಿದ್ಧವಾಗಿದೆ ॥ ೪೦ ॥. ಮನ್ಮಥ ಶರದಂತಿರುವ ಕಾಮಿನಿಯರಿಂದ ನಂದನವನಗಳಿಂದ ಮೃದು ಮಧುರ ಹಣ್ಣುಹಂಪಲುಗಳಿಂದ ಪುಷ್ಪಸಮೂಹದಿಂದ ಉತ್ತಮ ನರ್ತಕಿಯರಿಂದ ಸಂಗೀತ ವಿದ್ವಾಂಸರಿಂದ ತುಂಬಿರುವ ಮುಗುಳೀಪುರವು ವಿಷಯಪಂಚಕದಿಂದ ಸಂತಸವನ್ನುಂಟುಮಾಡಿದ್ದಿತು. ॥ ೪೧ ॥ ಪ್ರಸಿದ್ಧವಾದ ಸರೋವರ

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು – ೫೭೨ ೧೦೨

ಗಳಿಂದ ಹೂಬಿಟ್ಟ ಮರಗಳಿಂದ ದುಂಬಿಗಳ ಝೇಂಕಾರದಿಂದ ಸುವಾಸಿತ ಬತ್ತದ ಪ್ರದೇಶದಿಂದ ಉನ್ನತ ಚೈತ್ಯಾಲಯಗಳಿಂದ ಉಪ್ಪರಿಗೆ ಮನೆಗಳಿಂದ ಉತ್ತಮ ಜನರಿಂದ ತುಂಬಿದ್ದ ಮುಗುಳೀಪುರವು ಪರಮಾತ್ಮನ ಕಾಲಂದುಗೆಯಂತೆ ಕಂಗೊಳಿಸುತ್ತಿದ್ದಿತು.॥ ೪೨ ॥ ಶ್ರೀ ಜಿನದೇವರ ಪಾದಕಮಲದ ದುಂಬಿಯೂ, ಪರಮಾಗಮ ಶಾಸ್ತ್ರಕೋವಿದನೂ ಕಮಲದಂತಹ ಕಣ್ಣುಳ್ಳವನು ಶ್ರೇಷ್ಠ ಲಕ್ಷಣದಿಂದ ಕೂಡಿದ ಪುಣ್ಯದೇಹಿಯೂ ರಾಜ ಸಮ್ಮಾನನೂ ಇಂದ್ರವೈಭವನೂ ಸಜ್ಜನ ಪಾರಿಜಾತನೂ ಆಗಿರುವನೆಂದು ಪ್ರಭು ಮಂಗಲ ರಾಜನನ್ನು ಜನತೆಯು ಹೊಗಳುತ್ತಿದೆ॥ ೪೪ ॥ ಉತ್ತಮ ರತ್ನಗಳ ಮನೆ, ಜನರಕ್ಷಣದಕ್ಷ, ಲಕ್ಷ್ಮಿಯ ಆವಾಸಸ್ಥಾನ, ಪುರುಷೋತ್ತಮ ಸಂಗತ, ಶುಭಕರ, ಸರಸ್ವತಿಯು ಯಾವಾಗಲೂ ನೆಲಸಿರುವುದರಿಂದ ಸಮುದ್ರಕ್ಕೆ ಸಮಾನವಾದ ಮುಗುಳೀಪುರದ ಪ್ರಭು ಮಂಗರಾಜನು ವಿದ್ವನ್ಮಣಿಯಾಗಿದ್ದನು ॥ ೪೫ ॥ ಹೀಗೆ ಶೋಭಿಸುವ ಮೂಲೋಕದ ಒಡೆಯನಾದ ಪಾರ್ಶ್ವಜಿನನ ಪಾದಕಮಲದ ದುಂಬಿಯಂತಿರುವ ಮನುಜ ಶ್ರೇಷ್ಠನೆಂದೆನಿಸುವ ಆ ರಾಜನಿಗೆ ಜಿಂಕೆಯ ಕಣ್ಣುಗಳಂತಹ ಕಣ್ಣುಗಳಿಂದ ಆತನ ಮನಸ್ಸಂತೋಷವನ್ನುಂಟುಮಾಡುವ ಚೆಲುವೆ ಪೆರ್ಮಲೆಗೂ ಸತ್ಕೀರ್ತಿವಂತನೂ ಪುಣ್ಯಕರ ಮೂರ್ತಿಯೂ ಆದ ಮಹಾರಾಜ ಮಂಗರಾಜನು ಜನಿಸಿ ದನು ॥ ೪೮ ॥ ಕಚ್ಚಿಸಿಕೊಂಡವನನ್ನು ಕಾಣದ ಮುಂಚೆಯೆ ಕಚ್ಚಿದ ಗಾಯದ ಭಾಗವನ್ನು ತಿಳಿದು ಹೇಳಲು ಲೋಕಪೂಜ್ಯ ಜಿನೋಕ್ತಿಯ ಪ್ರಭಾವದಿಂದ ಮಂಗರಾಜನು ಸಮರ್ಥ ನಾಗಿದ್ದಾನೆ ॥ ೭೪॥

ಈ ಕಾವ್ಯದ ಅಧ್ಯಯನದಿಂದ ಚಿಕ್ಕಮುಗುಳಿ ಕವಿಯ ಸ್ವಸ್ಥಾನ, ಕವಿ ರಾಜನಾಗಿದ್ದಿದು "ದೇವಳಿಗೆ ದೇಶ" ಎಂಬ ದೇಶಕ್ಕೆ ಎಂಬುದು ಸ್ಪಷ್ಟವಾಗುತ್ತದೆ. *ಚಿಕ್ಕಮಗಳೂರು ಜಿಲ್ಲೆ ಶಾಸನ ಸಂಪುಟ ೧೧, (೧೯೯೮, ಮೈಸೂರು ವಿಶ್ವ ವಿದ್ಯಾಲಯದ ಸಂಪುಟದ)* ಅಧ್ಯಯನದಿಂದ ದೇವಳಿಗೆ ನಾಡು, ಚಿಕ್ಕಮುಗುಳಿ, ಮುಗುಳಿ ಯಾವುದು, ಎಂಬುದು ಸ್ಪಷ್ಟವಾಗುತ್ತದೆ.

**ಚಿಕ್ಕಮಗಳೂರು ಶಾಸನ ೧**

*ವೀರಭದ್ರ ದೇವಸ್ಥಾನದೊಳಗೆ ಈಶ್ವರಗುಡಿಗೆ ಬಲಗಡೆ ನಿಂತಿರುವ ಕಲ್ಲು*

ಹೊಯ್ಸಳ ನರಸಿಂಹ III ನ ಕ್ರಿಶ. ೧೨೫೭ ಕಾಲ ಮಾನದ ಶಾಸನದಲ್ಲಿ :

೧೪ ಡುತ್ತಿರೆ **ದೇವಳಿಗೆನಾಡ ಚಿಕ್ಕಮುಗುಳಿ**
೧೫ ಯ ನಾಳುಪ್ರಭು ಸೋಮಗೌಡ

**ಚಿಕ್ಕಮಗಳೂರು ಶಾಸನ ೨**

*ಚಿಕ್ಕಮಗಳೂರು ಲಾಲ್‌ಬಾಗಿನಲ್ಲಿ ನೆಟ್ಟಿರುವ ಕಲ್ಲು ರಾಜನ ಸಮಾಧಿಯ ಮೇಲೆ ನಿಲ್ಲಿಸಲಾಗಿದೆ. ಶಾಸನದ ಕಾಲ ಕ್ರಿ.ಶ. ೧೨೮೦*

೨೨ ಭಟ್ಟಾರಕರ ಗುಡ್ಡ **ಚಿಕ್ಕಮುಗುಳಿಯ** ಮಸಣಗೌ

**ಚಿಕ್ಕಮಗಳೂರು ಶಾಸನ ೩**

*ಕೋಟೆಯಲ್ಲಿ ಕಲ್ಯಾಣಿಗೆ ಉತ್ತರ ನೆಟ್ಟಿರುವ ಕಲ್ಲು ಶಾಸನದ ಕಾಲ ಕ್ರಿ.ಶ. ೮೯೯*

೭ ಮುಮಾಗೆ ಪೆಮ್ಮನಡಿಗಳ್ ಪ್ರಿಥುವೀರಾಜ್ಯಂಗೆ
೮ ಯ್ಯುತ್ತಮಿರೆ **ಕಿಱಿಯ ಮುಗುಳಿಯ** ಪೆಮ್ಮಾಡಿಗೊಂ
..............................................................
೧೩ ನಾಟ್ಗಾಮುಣ್ಡ ಬಿಯಳನುಂ ಪಿರಿಯ ಮುಗುಳಿಯ ಕೊಮ
೧೪ ರಯ್ಯನುಂ.................................

**ಚಿಕ್ಕಮಗಳೂರು ಶಾಸನ ೪**

*ಕೋಟೆ ಕಂದಕದ ಗೋಡೆಯ ಪಕ್ಕದಲ್ಲಿರುವ ವೀರಗಲ್ಲು ಕಾಲ ಕ್ರಿ.ಶ. ೧೧೪೦*

..................................

೩ ತ್ತಿರೆ **ದೇವಳಿಗೆನಾಡ ಚಿಕ್ಕಮುಗುಳಿಯ** ಮಹಾಪ್ರಭು ಚಿಕ್ಕಬಸವ

**ಚಿಕ್ಕಮಗಳೂರು ಶಾಸನ ೫**

*ಅದೇ ಸ್ಥಳದ ನೀರಿನಲ್ಲಿ ಬಿದ್ದಿದ್ದ ವೀರಗಲ್ಲು ಕ್ರಿ.ಶ. ೧೨೦೫ ಹೊಯ್ಸಳ ಎರಡನೇ ವೀರಬಲ್ಲಾಳನ ಕಾಲಮಾನದ್ದು*

೨ ಶ್ರೀ ವೀರಬಲ್ಲಾಳುದೇವ ಪ್ರಿಥುವೀರಾಜ್ಯಂಗೆಯುತ್ತಿರೆ **ಕಿಱಿಯಮುಗುಳಿಯ ಕಟ್ಟಿ**

ಈ ಶಾಸನಗಳ ಸೂಕ್ಷ್ಮ ಅಧ್ಯಯನದಿಂದ "ಖಗೇಂದ್ರ ಮಣಿ ದರ್ಪಣಂ" ಕೃತಿಯ ಕರ್ತೃ ಮೊದಲನೇ ಮಂಗರಸ ರಾಜ್ಯವಾಳುತ್ತಾ ಇದ್ದದ್ದು ಇಂದಿನ ಚಿಕ್ಕಮಗಳೂರು ಪ್ರದೇಶದಲ್ಲಿನ ಅದೇ ಚಿಕ್ಕಮುಗುಳಿ; ಅವನು ರಾಜ್ಯಭಾರ ಮಾಡುತ್ತಾ ಇದ್ದ ಪ್ರದೇಶವನ್ನು **ದೇವಳಿಗೆ ನಾಡು** ಎಂದು ಕರೆಯುತ್ತಾ ಇದ್ದರು. ಹಲವು ಶತಮಾನಗಳ ನಂತರ ಕಾವ್ಯ ಮತ್ತು ಶಾಸನದ ಅಧ್ಯಯನದಿಂದ ಮೊದಲನೇ ಮಂಗರಸ ರಾಜ್ಯವಾಳುತ್ತಾ ಇದ್ದ ಪ್ರದೇಶ ಮತ್ತು ಸ್ವಸ್ಥಾನ ಎರಡು ಗುರುತಿಸಲು ಸಾಧ್ಯವಾಯಿತು.

ಆಯುರ್ವೇದ ಇತಿಹಾಸದಲ್ಲಿ ಮಂಗರಾಜ ವಿರಚಿತ "ಖಗೇಂದ್ರಮಣಿ ದರ್ಪಣಂ" ಕೃತಿಗೆ ವಿಶೇಷ ಸ್ಥಾನವಿದೆ. ಇಡೀ ಭರತಖಂಡದಲ್ಲಿ ಈ ಗ್ರಂಥದ ಬಗ್ಗೆ ಬೇರೆ ಭಾಷೆಯ ವಿದ್ವಾಂಸರಿಗೆ ಬಹಳ ಕುತೂಹಲವಿದೆ. ಇಂತಹ ಐತಿಹಾಸಿಕ ಮಹತ್ತ್ವ ಇರುವ ಈ ಕೃತಿಯ ಕರ್ತೃವಿನ ಸ್ಥಾನ, ಪ್ರದೇಶ ಎರಡೂ ಪ್ರಕಟಿತ ಶಾಸನಗಳಿಂದ ಸ್ಪಷ್ಟವಾಗುತ್ತದೆ. "ಖಗೇಂದ್ರ ಮಣಿ ದರ್ಪಣಂ" ಕರ್ತೃ ಮೊದಲನೇ ಮಂಗರಾಜ (೧೩೬೦)ನ ಚಿಕ್ಕಮುಗುಳಿ; ಇಂದಿನ ಚಿಕ್ಕಮಗಳೂರು, ಮುಗುಳಿಪುರ ಇಂದಿನ ಹಿರೇಮಗಳೂರು, ಅದನ್ನು ಶಾಸನದಲ್ಲಿ "ಪಿರಿಯ ಮುಗುಳಿ' ಎಂದು ಕರೆಯಲಾಗಿದೆ. ಇಲ್ಲಿನ ಮಂಗರಸ ರಾಜ್ಯಭಾರ ಮಾಡುತ್ತಾ ಇದ್ದ ಪ್ರದೇಶವನ್ನು **"ದೇವಳಿಗೆ ದೇಶ"** ಎಂದು ಕರೆಯುತ್ತಾ ಇದ್ದುದು ಸ್ಪಷ್ಟ ವಾಗುತ್ತದೆ.



ಡಾ|| ಡಿ.ಎನ್. ಯೋಗೀಶ್ವರಪ್ಪ*

# ಗುಡೇಕೋಟೆ ಪಾಳೆಯಗಾರರು

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಹೋಬಳಿ ಕೇಂದ್ರವಾಗಿರುವ ಗುಡೇಕೋಟೆ ಮಧ್ಯಕಾಲೀನ ಯುಗದಲ್ಲಿ ಐತಿಹಾಸಿಕ ಕೇಂದ್ರವಾಗಿದ್ದು, ವಿಜಯನಗರ-ನಗರೋತ್ತರ ಕಾಲದಲ್ಲಿ ಒಂದು ಪ್ರಮುಖ ಪಾಳೆಯಪಟ್ಟಾಗಿತ್ತು. ಇದು ಬಳ್ಳಾರಿಯಿಂದ ನೈಋತ್ಯಕ್ಕೆ ೬೫ ಕಿ.ಮೀ., ಕೂಡ್ಲಿಗಿಯಿಂದ ೨೮ ಕಿ.ಮೀ. ಅಂತರದಲ್ಲಿದೆ. ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿದ್ದ ಗುಡೆಕೋಟೆಯ ಚಾರಿತ್ರಿಕ ಹಿನ್ನೆಲೆ ಗಮನಾರ್ಹ ವಾಗಿದೆ. ಮೌರ್ಯರ ಆಳ್ವಿಕೆಯಿಂದ ಆರಂಭವಾಗಿ ಬ್ರಿಟೀಷರ ವರೆಗೆ ಇಲ್ಲಿನ ಆಡಳಿತವನ್ನು ಗುರುತಿಸಬಹುದು. ಆದರೆ ಗುಡೇಕೋಟೆ ಪ್ರಸಿದ್ಧಿಗೆ ಬಂದು ಚಾರಿತ್ರಿಕ ದಾಖಲೆಯನ್ನು ನಿರ್ಮಿಸಿದ್ದುದು ವಿಜಯನಗರ- ನಗರೋತ್ತರ ಕಾಲದಲ್ಲಿ ಆಳ್ವಿಕೆ ಮಾಡಿದ ಪಾಳೆಯಗಾರರ ಕಾಲದಿಂದಲೇ ಎನ್ನಬಹುದು. ಅಂತಹ ಪಾಳೆಯಗಾರರ ಚರಿತ್ರೆಯ ವಿವರ ಮುಂದಿದೆ.

**ಗುಡೇಕೋಟೆಯ ಸ್ಥಳನಾಮ**

ಈ ಹೆಸರಿನ ಹಿಂದೆ ಅನೇಕ ಪ್ರತೀತಿ, ದಂತಕಥೆ, ನಂಬಿಕೆಗಳಿವೆ. ಇಲ್ಲಿ ಬಾಣಾಸುರ ಎಂಬ ಅರಸ ಆಳುತ್ತಿದ್ದನೆಂಬ ಪ್ರತೀತಿ ಇದೆ. ಇವನು ಪಾರ್ವತಿ ಪರಮೇಶ್ವರರ ಪರಮ ಭಕ್ತನಾಗಿದ್ದು, ಅವನ ಭಕ್ತಿಗೆ ಮೆಚ್ಚಿದ ಈಶ್ವರನು ಆ ಪಟ್ಟಣದ ಮಹಾದ್ವಾರವನ್ನು ಸದಾಕಾಲ ಕಾಯುತ್ತಿರುವಂತೆ ಆದೇಶಿಸಿದ ನೆಂಬ ಕಥೆ ಇದೆ. ಗುಡೇಕೋಟೆಯನ್ನು ಶಾಸನಗಳೂ ಸಹಾ ಗುಡೇಕೋಟೆ ಎಂತಲೇ ದಾಖಲಿಸಿವೆ[೧]. ಕೈಫಿಯತ್ತುಗಳಲ್ಲಿ ಅನೇಕ ಕಡೆ ಗುಡೀಕೋಟೆ[೨], ಗುಡೇಕೋಟೆ[೩] ಎಂತಲೂ ಉಲ್ಲೇಖವಾಗಿದೆ. ಸಿ.ಡಿ. ಮ್ಯಾಕಲಿನ್‌ರವರು Godi cotals> Gudicota ಇದನ್ನು Godi ಎಂದರೆ Temple ಎಂದೂ Kota ಎಂದರೆ Fort ಎಂದು ತಿಳಿಸಿದ್ದಾರೆ.[೪] ಮೆಕಂಜಿಯ ಪ್ರಕಟವಾಗದಿರುವ ಕೈಫಿಯತ್ತು *From the pagoda or Goodee and Fort or cotta it was called Goodikota* ಎಂದು ಗುಡೀಕೋಟೆಯ ಹೆಸರಿನ ಮೂಲದ ಬಗ್ಗೆ ತಿಳಿಸುತ್ತದೆ.[೫] ಈ ಗ್ರಾಮದ ಎರಡೂ ಬದಿಗಳಲ್ಲಿ ಕಲ್ಲು ಮಣ್ಣುಗಳಿಂದೊಡಗೂಡಿದ ಅಷ್ಟೇನೂ ಎತ್ತರವಲ್ಲದ ಗುಡ್ಡೆಯಂತಹ ಸ್ಥಳವಿದೆ. ಆ ಗುಡ್ಡೆಯಂತಹ (ಕಲ್ಲುಮಣ್ಣಿನ) ಸ್ಥಳವನ್ನುಪಯೋಗಿಸಿಕೊಂಡು ಕೋಟೆಯನ್ನು ಕಟ್ಟಿರುವುದ ರಿಂದ ಆ ಸ್ಥಳಕ್ಕೆ ಗುಡ್ಡೆಯ ಕೋಟೆ ಎಂದು ಹೆಸರು ಬಂದಿರಬಹುದು. ಕ್ರಮೇಣ ಗುಡ್ಡೆಕೋಟೆ ಗುಡೇಕೋಟೆ ಯಾಗಿರುವಂತಿದೆ. ಇದೇ ರೀತಿಯ ಅಭಿಪ್ರಾಯವನ್ನು ಇನ್ನೊಬ್ಬ ಸಂಶೋಧಕರೂ ವ್ಯಕ್ತಪಡಿಸಿದ್ದಾರೆ.[೬] ಗುಡಿ ಮತ್ತು ಕೋಟೆಗೆ ಸಂಬಂಧಿಸಿದ ಅಭಿಪ್ರಾಯಗಳು ಸಮಂಜಸವೆನಿಸು ವುದಿಲ್ಲ, ಹಾಗೂ ನಾಯಕ ಜಾತಿಯ ಬೆಡಗುಗಳಲ್ಲೊಂ ದಾದ ಗುಡಿಕೊಟ್ಟಲಾರು ಎಂಬುದಕ್ಕೆ[೭] ಸಂಬಂಧಿಸಲು ಸಾಧ್ಯ ವಿಲ್ಲ ಎಂದು ಹೇಳಬಹುದು. ಏಕೆಂದರೆ, ಕೋಟೆಯನ್ನು ರಕ್ಷಣೆಗಾಗಿಯೂ, ದೇವಾಲಯಗಳನ್ನು ಧಾರ್ಮಿಕ ಆಚರಣೆ ಗಾಗಿಯೂ ಎಲ್ಲಾ ಗಿರಿದುರ್ಗಗಳಲ್ಲಿ ನಿರ್ಮಿಸಿರುವುದನ್ನು ಸಾಮಾನ್ಯವಾಗಿ ನೋಡಬಹುದು. ಆದುದರಿಂದ ಇದರಲ್ಲಿ ವಿಶೇಷತೆ ಇಲ್ಲದಿರುವುದರಿಂದ ಹಿಂದಿನ ಎಲ್ಲಾ ಗುಡಿ ಮತ್ತು ಕೋಟೆಗೆ ಸಂಬಂಧಿಸಿದ ಮತ್ತು ಬೆಡಗು ಎಂದು ಹೇಳುವ ಸಂಶೋಧನೆಗಳನ್ನು ಒಪ್ಪಲು ಸಾಧ್ಯವಿಲ್ಲ.

**ಆಕರಗಳು**

ಗುಡೇಕೋಟೆ ಪಾಳೆಯಗಾರರ ಬಗೆಗೆ ಚಾರಿತ್ರಿಕ ದಾಖಲೆಗಳು ಹೆಚ್ಚಿಗೆ ಇಲ್ಲದಿರುವುದರಿಂದ ಅವರ ಸರಿಯಾದ ಚಾರಿತ್ರಿಕ ಚಿತ್ರಣವನ್ನು ನೀಡುವುದು ಕಷ್ಟದಾಯಕ ಸಂಗತಿಯಾಗಿದೆ. ಇತಿಹಾಸ ರಚನೆಗೆ ಶಾಸನಗಳು ಅಮೂಲ್ಯವಾದ ಸಮಕಾಲೀನ ಲಿಖಿತ ದಾಖಲೆಗಳಾಗಿವೆ. ಈ ಮನೆತನಕ್ಕೆ ಸಂಬಂಧಿಸಿದ ಕೇವಲ ಮೂರು ಶಿಲಾ ಶಾಸನಗಳಿವೆ. ಈ ಶಾಸನಗಳು ಕೇವಲ ದಾನದ ವಿಷಯ ವನ್ನೊಳಗೊಂಡಿದ್ದು ಪಾಳೆಯಗಾರರ ಆಳ್ವಿಕೆಯನ್ನು ಗುರುತಿಸಲು ಸಹಾಯಕವಾಗಿವೆ. ಈ ಶಾಸನಗಳು ಪುರಾತತ್ವ ವರದಿಯಲ್ಲಿ ಪ್ರಕಟಗೊಂಡಿವೆ.[೮] ಈ ಶಾಸನಗಳನ್ನು ಬಿಟ್ಟರೆ ನಮಗೆ ದೊರಕುವ ಪ್ರಮುಖ ಆಧಾರಗಳೆಂದರೆ ಸ್ಮಾರಕಗಳು.

* ಪ್ರಾಧ್ಯಾಪಕ ಮತ್ತು ಮುಖ್ಯಸ್ಥ, ಇತಿಹಾಸ ವಿಭಾಗ, ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜು, ತುಮಕೂರು.

ದೇವಾಲಯಗಳು ವಾಸ್ತುಶಿಲ್ಪಕ್ಕೆ ಪ್ರಸಿದ್ಧವಾಗಿರುವುದಲ್ಲದೆ ಸ್ಮಾರಕಗಳಲ್ಲಿ ಇವು ಬಹುಮುಖ್ಯ ಭಾಗವಾಗಿವೆ. ಆಂಜನೇಯ, ಚೌಡಮ್ಮ ಮರಿಯಮ್ಮ, ರಾಮಲಿಂಗೇಶ್ವರ, ಬಸವಣ್ಣ, ಕಾಳಮ್ಮ, ಈಶ್ವರ, ಲಕ್ಷ್ಮಿವೆಂಕಟೇಶ್ವರ, ಉಮಾಮಹೇಶ್ವರ, ಪಂಚ ಲಿಂಗೇಶ್ವರ ಮೊದಲಾದ ದೇವಾಲಯಗಳಲ್ಲಿ ಆ ಕಾಲದ ಜನ ಜೀವನದ ಸ್ಥಿತಿಗತಿ ಜನರ ಉಡುಗೆ ತೊಡುಗೆ ಹವ್ಯಾಸ ಮೊದಲಾದವುಗಳನ್ನು ತಿಳಿದುಕೊಳ್ಳಬಹುದು. ದೇವಾಲಯವೇ ಅಲ್ಲದೇ ಕೋಟೆ, ಅರಮನೆ, ಮಂಟಪ ಕೂಡಾ ಆ ಪ್ರದೇಶದಲ್ಲಿ ಪ್ರಾಮುಖ್ಯತೆ ಪಡೆದಿವೆ.

ಶಾಸನ ಮತ್ತು ಸ್ಮಾರಕಗಳನ್ನು ಬಿಟ್ಟರೆ ನಮಗೆ ದೊರಕುವ ಪ್ರಮುಖ ದಾಖಲೆ ಎಂದರೆ ಮೆಕಂಜಿಯವರು ಸಂಗ್ರಹಿಸಿರುವ ಕೈಫಿಯತ್ತುಗಳು.[೯] ಇವುಗಳಲ್ಲಿ ಉಲ್ಲೇಖ ಗೊಂಡಿರುವ ಕೆಲವು ಸಂಗತಿಗಳಾದರೂ ಚರಿತ್ರೆಕಾರರಿಗೆ ವಿಶ್ವಸನೀಯ ಸಾಕ್ಷ್ಯವಾಗಬಲ್ಲವು. ಮೆಕಂಜಿಯು ದೇಶೀಯ ಪಂಡಿತರ ಸಹಾಯದಿಂದ ಇವುಗಳನ್ನು ರೂಪಿಸಿದನು. ಇವುಗಳೇ ಗುಡೇಕೋಟೆ ಪಾಳೇಗಾರರ ಚರಿತ್ರೆಗೆ ಪ್ರಮುಖ ಆಕರವಾಗಿವೆ.

**ಅಧ್ಯಯನ**

ಇದುವರೆಗೆ ಈ ಪಾಳೆಯಗಾರರ ಬಗೆಗೆ ಕೆಲವು ಅಧ್ಯಯನಗಳು ನಡೆದಿವೆ. ಈ ಪಾಳೆಯಗಾರರ ಬಗೆಗೆ ಮೊದಲು ಬಳ್ಳಾರಿ ಜಿಲ್ಲಾ ಗೆಜೆಟಿಯರ್‌ನಲ್ಲಿ ಸಂಕ್ಷಿಪ್ತವಾದ ಲೇಖನವಿದ್ದು[೧೦] ಈ ಮಾಹಿತಿಯನ್ನಾಧರಿಸಿ ಕ್ಷೇತ್ರಕಾರ್ಯದ ಮೂಲಕ ಮತ್ತು ಆ ಮನೆತನದವರ ಬಳಿ ಇರುವ ಕೆಲ ದಾಖಲೆಗಳನ್ನು ಪರಿಶೀಲಿಸಿ ಇತ್ತೀಚೆಗೆ ವಿರೂಪಾಕ್ಷ ಪೂಜಾರಿ ಹಳ್ಳಿಯವರು ಲೇಖನವೊಂದನ್ನು ಬರೆದಿದ್ದಾರೆ. ಅದು ಬಳ್ಳಾರಿ ಜಿಲ್ಲೆಯ ಪಾಳೆಯಗಾರರು ಎಂಬ ಕೃತಿಯಲ್ಲಿ ಪ್ರಕಟವಾಗಿದೆ. ಗುಡೇಕೋಟೆ–ಚಾರಿತ್ರಿಕ ಅಧ್ಯಯನ ಎಂಬ ಕೃತಿಯೂ; ಇದೇ ವಿಷಯದ ಬಗ್ಗೆ ಹಂಪಿ ವಿ.ವಿ.ಗೆ ಸಲ್ಲಿಸಿರುವ ಎಂ.ಫಿಲ್ ಪ್ರಬಂಧವೂ ಆ ಮನೆತನದ ಬಗ್ಗೆ ಬೆಳಕು ಚೆಲ್ಲುವ ಪ್ರಮುಖ ಲೇಖನಗಳು. ಆದರೆ ಇತ್ತೀಚೆಗೆ ಮೆಕಂಜಿ ಸಂಗ್ರಹದಲ್ಲಿ ಅಪ್ರಕಟಿತ ಇಂಗ್ಲೀಷ್ ದಾಖಲೆಯಾದ *Historical Account of Gudekote and of the poligar of that District from information collected there on December 1806*ನ್ನು ಜಪಾನಿನ ನನ್ನ ಸ್ನೇಹಿತರಾದ ಓ. ಓತಾ ಎಂಬುವ ರಿಂದ ಪಡೆದುಕೊಂಡು, ಅದರ ಆಧಾರದ ಮೇಲೆ ಹಿಂದಿನ ಎಲ್ಲಾ ಪ್ರಕಟಿತ ಲೇಖನಗಳನ್ನು ಗಮನದಲ್ಲಿಟ್ಟುಕೊಂಡು ಆ ಪಾಳೆಯಗಾರರ ಬಗ್ಗೆ ಚಾರಿತ್ರಿಕ ವಿವರಣೆ ನೀಡಲು ಪ್ರಯತ್ನಿಸಿದ್ದೇನೆ. ಈ ದಾಖಲೆಯನ್ನು ಉಪಯೋಗಿಸುವಾಗ ಮುಂದೆ ನಾನು ಅಡಿಟಿಪ್ಪಣಿಯಲ್ಲಿ ಮೆಕಂಜಿ ಇಂಗ್ಲೀಷ್ ದಾಖಲೆ ಎಂದು ಉಲ್ಲೇಖಿಸುತ್ತೇನೆ.

**ಮೂಲ :** ಗುಡೇಕೋಟೆ ನಾಯಕ ಮನೆತನ ಅಮರನಾಯಕ ಸಂಕೀರ್ಣ ವ್ಯವಸ್ಥೆಯ ಒಂದು ಭಾಗವಾಗಿ ವಿಜಯನಗರದ ತುಳುವ ವಂಶದ ಕೃಷ್ಣದೇವರಾಯನ ಕಾಲದಲ್ಲಿ ಉಗಮಗೊಂಡಿತು. ಗುಡೇಕೋಟೆಯನ್ನು ಕಟ್ಟುವ ವರೆಗೆ ಈ ಮನೆತನ ಹೆಚ್ಚು ಪ್ರಕಾಶಮಾನಕ್ಕೆ ಬಂದಿರಲಿಲ್ಲ. ಅಲ್ಲಿನ ಸುತ್ತಮುತ್ತಲಿನ ಸಂಪನ್ಮೂಲಗಳನ್ನು ತಮ್ಮದಾಗಿಸಿ ಕೊಂಡ ಆ ಮನೆತನದ ಆರಂಭ ನಾಯಕರು ಕೃಷ್ಣ ದೇವರಾಯನ ನಂತರ ಪ್ರಖ್ಯಾತರಾದರು. ಈ ಹಿನ್ನೆಲೆಯಲ್ಲಿ ಗುಡೇಕೋಟೆ ನಾಯಕರ ಮೂಲದ ಬಗೆಗೆ ಅಥವಾ ಅದರ ಸಂಸ್ಥಾಪಕರ ಬಗೆಗೆ ದೊರೆಯುವ ಕೆಲ ಮಾಹಿತಿಗಳನ್ನು ವಿಶ್ಲೇಷಿಸಲಾಗಿದೆ. ಮೊದಲು ಗುಡೇಕೋಟೆ ನಾಯಕ ಮನೆತನದ ಮೂಲಸ್ಥಳ ಯಾವುದು ಎಂಬ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಪ್ರಸ್ತುತ ದೊರಕುವ ಆಧಾರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ[೧೧] ಈ ಮನೆತನದ ಸ್ಥಾಪಕನಾದ ಗಂಡಳನಾಯಕನ ಪೂರ್ವಜರು ಆರಂಭದಲ್ಲಿ ಅಂದರೆ ಈ ರಾಜ್ಯ ಸ್ಥಾಪನೆ ಮಾಡುವುದಕ್ಕೆ ಮೊದಲು ನೆಲ್ಲೂರಿನಲ್ಲಿದ್ದ ರೆಂದು ತಿಳಿಸುತ್ತದೆ.[೧೨] *It is said that the ancestors of Gondal Naik came with their family from Nellore country.* ಅಲ್ಲಿಂದ ಕರ್ನಾಟಕದ ಬಳ್ಳಾರಿ ಜಿಲ್ಲೆಯ ವಿಜಯ ನಗರಕ್ಕೆ ಬಂದರು ಎಂಬ ಹೇಳಿಕೆ ನಮಗೆ ದಾಖಲೆಗಳಲ್ಲಿ ಸಿಗುತ್ತದೆ[೧೪]. ಆದರೆ ಈ ಮನೆತನದ ಬಗೆಗೆ ಹಿಂದೆ ಪ್ರಕಟ ಗೊಂಡಿರುವ ಎಲ್ಲಾ ಲೇಖನಗಳು ಈ ವಿಷಯದ ಬಗೆಗೆ ಮೌನ ವಹಿಸಿವೆ. ಪ್ರಕಟಗೊಂಡಿರುವ ಅಂತಾಪುರ ಕೈಫಿಯತ್ತಿ ನಲ್ಲಿ ಮೂಲಪುರುಷ ಕುಮಾರರಾಮನ ವಂಶಸ್ಥರು ಬೊಮ್ಮಂತರಾಜ ಎಂಬ ಹೇಳಿಕೆಯನ್ನು ಆಧಾರವಾಗಿಟ್ಟು ಕೊಂಡು ಇವರ ಮೂಲವನ್ನು ಕಂಪಿಲಿಯ ಕುಮಾರರಾಮನ ವಂಶಜರೆಂದು ಹೇಳುವ ಪ್ರಯತ್ನ ಮಾಡಲಾಗಿದೆ.[೧೫] ಕುಮಾರರಾಮ ೧೪ನೇ ಶತಮಾನದ ಪೂರ್ವಾರ್ಧದಲ್ಲಿದ್ದ ಒಬ್ಬ ಸಾಂಸ್ಕೃತಿಕ ವೀರ. ಕಮ್ಮಟ ದುರ್ಗದ ಆಸುಪಾಸಿನಲ್ಲಿ ಬಾಳಿದ ವಿಜಯನಗರದ ಚಕ್ರವರ್ತಿ ಗಳಿಗೆ ದೊರಕದ ಗೌರವ, ಆದರ, ಪ್ರೀತಿಗಳು ಜನಸಾಮಾನ್ಯ ರಿಂದ ಕುಮಾರರಾಮನಿಗೆ ದೊರೆತಿರುವುದು ಆತನ ಸಂಕ್ಷಿಪ್ತ ಜೀವನಾವಧಿಯಲ್ಲಿ ಅವನು ಸಾಧಿಸಿದ ಅಪಾರ ಹಿರಿಮೆಯ ದ್ಯೋತಕವಾಗಿದೆ. ಆದ್ದ ರಿಂದಲೇ ಅವನ ಬಗ್ಗೆ ಐದು ಸಾಹಿತ್ಯ ಕೃತಿಗಳು ರಚನೆ ಗೊಂಡಿವೆ. ಇಂತಹ ವೀರನ ವಂಶಸ್ಥನೆಂದು ಹೇಳಿಕೊಳ್ಳು ವುದು ಹೆಮ್ಮೆಯ ವಿಷಯ ಹಾಗೂ ತಮ್ಮ ಮನೆತನಕ್ಕೆ

ಗೌರವವನ್ನು ಹೆಚ್ಚಿಸುವ ತಂತ್ರವಾಗಿದೆ. ಅಲ್ಲದೇ ಎರಡೂ ಮನೆತನಗಳು ಬೇಡ ಕುಲಕ್ಕೆ ಸೇರಿರುವುದರಿಂದ ಗುಡೇ ಕೋಟೆಯ ನಾಯಕ ಬೊಮ್ಮಂತರಾಜನ ಕಾಲದಲ್ಲೋ ಅಥವಾ ನಂತರದಲ್ಲೋ ಕುಮಾರರಾಮನ ವಂಶದವ ರೊಂದಿಗೆ ವೈವಾಹಿಕ ಸಂಬಂಧ ಮಾಡಿಕೊಂಡಿರಬಹುದು ಎಂದು ಊಹಿಸಬಹುದಷ್ಟೇ. ಇದಕ್ಕೆ ದಾಖಲೆಗಳಿಲ್ಲ. ಆದ್ದ ರಿಂದಲೇ ಕೈಫಿಯತ್ತುಗಳಲ್ಲಿ ಕುಮಾರರಾಮನ ವಂಶಜರೆಂದು ಹೇಳಿರುವ ಸಾಧ್ಯತೆ ಇದೆ. ಈ ಕಾರಣ ಗುಡೇಕೋಟೆ ನಾಯಕರು ಕುಮಾರರಾಮನ ನೇರ ವಂಶಜರಲ್ಲ ಎಂದು ನಿಖರವಾದ ಮತ್ತು ಇನ್ನೂ ಹೆಚ್ಚಿನ ದಾಖಲೆಗಳು ದೊರಕು ವವರೆಗೆ ಮೆಕಂಜಿಯ ಅಪ್ರಕಟಿತ ಇಂಗ್ಲೀಷ್ ದಾಖಲೆಯನ್ನು ಆಧಾರವಾಗಿಟ್ಟುಕೊಂಡು ಹೇಳಬಹುದು.

**ವಲಸೆ :** ದೊರಕಿರುವ ಅಪ್ರಕಟಿತ ದಾಖಲೆಯಂತೆ ಗುಡೇಕೋಟೆ ನಾಯಕರ ಮೂಲ ಸ್ಥಳ ನೆಲ್ಲೂರು. ಅದು ಇಂದಿನ ಆಂಧ್ರಪ್ರದೇಶದ ಪ್ರಮುಖ ಕೇಂದ್ರವಾಗಿದೆ. ಅಂದರೆ ಈ ಮನೆತನದ ಮೂಲಪುರುಷ ತೆಲುಗು ಮೂಲದವನೆಂದು ಊಹಿಸಬೇಕಾಗುತ್ತದೆ. ಹೀಗೆ ಅವರು ವಲಸೆ ಬರಲು ಕಾರಣಗಳೇನು? ಎಂಬುದನ್ನು ಪರಿಶೀಲಿಸಿದಾಗ ಅವರು ಸಾಹಸ ಪ್ರವೃತ್ತಿಯುಳ್ಳವರಾಗಿದ್ದು ನೆಲ್ಲೂರಿನಂತಹ ಹೆಚ್ಚು ಪ್ರಶಸ್ತವಲ್ಲದ ಪ್ರದೇಶವನ್ನು ಬಿಟ್ಟು ತಮ್ಮ ಸಾಹಸ ಪ್ರದರ್ಶನಕ್ಕೆ ಅನುಕೂಲವಾಗಿದ್ದ ಹಾಗೂ ಸಾಹಸಿಗಳಿಗೆ ಹೆಚ್ಚು ಪ್ರೋತ್ಸಾಹ ಸಿಗುತ್ತಿದ್ದ ವಿಜಯನಗರಕ್ಕೆ ಬಂದಿರಬಹುದು. ಏಕೆಂದರೆ ೧೫–೧೬ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಸಾಹಸಿಗರಿಗೆ ರಾಜಕೀಯ ಘಟಕಗಳನ್ನು ಸ್ಥಾಪಿಸಿಕೊಳ್ಳುವ ನೂರಾರು ಅವಕಾಶಗಳು ಇದ್ದವು ಎಂಬುದನ್ನು ಬೇರೆ ಬೇರೆ ನಾಯಕ ಮನೆತನಗಳ ಮೂಲಪುರುಷರ ಚರಿತ್ರೆಗಳನ್ನು ಆ ಕುಟುಂಬ ಗಳ ವಲಸೆಯ ಹಿನ್ನೆಲೆಗಳನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ. ಆದ್ದರಿಂದ ಗಂಡಳನಾಯಕನ ಪೂರ್ವಜರು ತಮ್ಮ ಕುಟುಂಬ ಪರಿವಾರ ಸಮೇತ ನೆಲ್ಲೂರಿನಿಂದ ರಾಜಕೀಯ ಆಕಾಂಕ್ಷೆಯಿಟ್ಟುಕೊಂಡೇ ವಿಜಯನಗರದ ಕಡೆಗೆ ಬಂದಿರಬಹುದು.

ತೆಲುಗು ಮೂಲದ ಗುಡೇಕೋಟೆ ನಾಯಕರ ಮೂಲ ಪುರುಷ ಬೇಡಕುಲಕ್ಕೆ ಸೇರಿದವನು ಎಂದು ಅವರು ಚಿತ್ರದುರ್ಗ, ಹರಪನಹಳ್ಳಿ, ನಾಯಕನಹಟ್ಟಿ, ಸುರಪುರ ಕನಕಗಿರಿ ನಾಯಕರೊಂದಿಗೆ ವೈವಾಹಿಕ ಸಂಬಂಧವನ್ನು ಮಾಡಿ ಕೊಂಡಿರುವ ದಾಖಲೆಗಳೊಂದಿಗೆ ಹೇಳಬಹುದು. ಇವರು ಬೇಡಕುಲದ ಮೆಳೆಲೋರು ಗೋತ್ರಕ್ಕೆ ಸೇರಿದವರು[೧೬]. ಇದು ಮಂದಲೋರು ಪ್ರಧಾನ ಶಾಖೆಯೊಳಗೆ ಮತ್ತೊಂದು ಒಳ ಬೆಡಗು. ವೈವಾಹಿಕ ಸಂಬಂಧಕ್ಕೆ ಹೆಣ್ಣುಗಳ ಕೊರತೆ ಉಂಟಾದಾಗ ತಮ್ಮಲ್ಲೇ ಕೆಲವು ಗುಂಪನ್ನು ವರ್ಗೀಕರಿಸಿ ನೆಂಟರನ್ನಾಗಿ ಮಾಡಿಕೊಂಡರು. ಹೀಗಾಗಿ ಹೊಸದಾಗಿ ಸೃಷ್ಟಿಯಾದ ಮೆಳೆಲೋರು ವರ್ಗಕ್ಕೆ ಎರಡು ಪ್ರಧಾನ ಶಾಖೆಗಳಾದ ಮಲ್ಲನನಾಯಕನೋರು ಸಹಜ ಬೀಗರಾದರೆ ಒಂದು ಕಾಲಕ್ಕೆ ಸೋದರರೇ ಆಗಿದ್ದ ಮಂದಲೋರು ಕೂಡಾ ಬೀಗರಾದರು[೧೭]. ಹೀಗೆ ಸಮಾಜದ ಅತ್ಯಂತ ಕೆಳವರ್ಗದಲ್ಲಿ ಜನಿಸಿ ರಾಜ್ಯ ಕಟ್ಟಿ ವಿಜಯನಗರದವರ ಮನ್ನಣೆಗೆ ಪಾತ್ರ ವಾಗುವ ಅಂತಸ್ತನ್ನು ಗಳಿಸಿದ್ದು ಅಂದಿನ ಸಾಂಪ್ರದಾಯಿಕ ಒಟ್ಟಾರೆ ದೃಷ್ಟಿಯನ್ನು ಗಮನಿಸಿದರೆ ಇದೊಂದು ವಿಶಿಷ್ಟ ಉದಾಹರಣೆಯಾಗಿದೆ.

**ರಾಜ್ಯ ಸ್ಥಾಪನೆ**

ಗಂಡಳನಾಯಕನ ಪೂರ್ವಜರು ವಿಜಯನಗರದವ ರಿಂದ ತುಂಗಭದ್ರಾ ನದಿಗೆ ಹೊಂದಿಕೊಂಡ ದಕ್ಷಿಣದ ಪ್ರದೇಶಗಳಿಗೆ ಮುಖ್ಯ ತಳಾರ ಹುದ್ದೆಗೆ ನೇಮಕ ಮಾಡಲಾಯಿ ತೆಂದು ಅಪ್ರಕಟಿತ ಇಂಗ್ಲೀಷಿನ ಕೈಫಿಯತ್ತು ದಾಖಲಿಸಿದೆ[೧೮]. ಅಲ್ಲಿಂದ ಗಂಡಳನಾಯಕನ ವರೆಗೆ ಅವರು ಅದೇ ಹುದ್ದೆ ಯಲ್ಲಿ ಮುಂದುವರೆದರು. ಇವನ ಪೂರ್ವಜರು ಯಾರು? ಎಂಬ ಪ್ರಶ್ನೆಗೆ ಕೈಫಿಯತ್ತಿನಲ್ಲಿರುವ ಅಂಶಗಳ ಆಧಾರದ ಮೇಲೆ ಹೇಳುವುದಾದರೆ ಬೊಮ್ಮಂತರಾಜನೇ ಇರಬೇಕೆಂದು ಹೇಳಬೇಕಾಗುತ್ತದೆ. ಏಕೆಂದರೆ ಅಲ್ಲಿ ದಾಖಲಾಗಿರುವಂತೆ ಬೊಮ್ಮಂತರಾಜನು ವಿಜಯನಗರದ ಕೃಷ್ಣದೇವರಾಯನಿಗೆ ಮನವಿ ಮಾಡೋ ಸಮಯದಲ್ಲಿ "*ನಮಗೆ ಪೂರ್ವದಲ್ಲಿ ನಾಡ ತಳವಾರಿಕೆ ಕಾವಲಿ ಸ್ವಾಸ್ತಿ ಭಾಗದ್ದು ಸುದ್ದಾ ನಡೆ ಉತ್ತಾಯಿತ್ತು ಅದೇ ಪಾಲಿಸಿದರೆ ಪಾಲಿಸಬೇಕೆಂದು ಬಿನ್ನಹ ಮಾಡಿಕೊಳಾಗಲು ಅದೇ ಮೇರೆಗೆ ರಾಯರು ಸಂತೋಷ ಬಿಟ್ಟು ಕೊಟ್ಟ ತಾಲ್ಲೂಕು ವಿವರ ಕುತ್ತಾನೆ, ಸಂಡೂರು, ಜರಿಮಲೆ, ಧರೋಧಿ ಸಹಾ ಗುಡೇಕೋಟೆ, ಬಾಣರಾವಿ, ಉಜನಿ*"[೧೯] ಅಂದರೆ ಗಂಡಳನಾಯಕನ ಪೂರ್ವಜನಾದ ಬೊಮ್ಮಂತರಾಜನು ಕುತ್ತಾನೆ, ಸಂಡೂರು, ಜರಿಮಲೆ ಗುಡೇಕೋಟೆ ಮುಂತಾದ ಪ್ರಾಂತ್ಯಗಳ ನಾಡ ತಳವಾರಿಕೆ ಮಾಡಿಕೊಂಡಿದ್ದಾನೆಂದು ಹೇಳಬಹುದು. ಗುಡೇಕೋಟೆ ಸಂಸ್ಥಾನವು ಶಕ ೧೪೨೮ (೧೫೦೬ ಕ್ರಿ.ಶ.)ನೇ ಪ್ರಭವ ನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿಯಂದು ಸ್ಥಾಪಿತ ವಾಯಿತೆನ್ನಲಾಗಿದೆ. ಇದರ ಮೊದಲ ಅರಸ ಗಂಡಳನಾಯಕ ಎನ್ನಲಾಗಿದೆ.[೨೦] ಇದರ ಆಧಾರದ ಮೇಲೆ ಹೇಳುವುದಾದರೆ ಗಂಡಳನಾಯಕನ ಪೂರ್ವಜರು ಕೃಷ್ಣದೇವರಾಯನ ಕಾಲಕ್ಕಿಂತ ಮೊದಲೇ ಅಂದರೆ ಸಾಳುವರ ಅಥವಾ ಸಂಗಮರ ಕೊನೆಯ

ಕಾಲದಲ್ಲೋ ವಿಜಯನಗರಕ್ಕೆ ಬಂದಿರ ಬಹುದು. ನಂತರ ತುಳುವರ ಕಾಲದಲ್ಲಿ ಪ್ರಾಮುಖ್ಯತೆ ಪಡೆದರೆಂದು ಹೇಳ ಬಹುದು. ಕೈಫಿಯತ್ತಿನಲ್ಲಿ ಉಲ್ಲೇಖಗೊಂಡಿರುವ ಕೃಷ್ಣದೇವ ರಾಯ ಬೊಮ್ಮಂತರಾಜನ ಸಮಕಾಲೀನನಲ್ಲ ವಾದುದರಿಂದ ಅವನು ಕೃಷ್ಣದೇವರಾ ಯನಿಗಿಂತ ಮೊದಲು ಆಳಿದ ಬೇರೆ ದೊರೆಯಿರಬೇಕು. ಏಕೆಂದರೆ ತಮ್ಮ ಚರಿತ್ರೆಗೆ ಘನತೆ ತರಬೇಕೆಂಬ ಉದ್ದೇಶದಿಂದ.ಅನೇಕ ವಂಶಾವಳಿ, ಕೈಫಿಯತ್ತು ಗಳಲ್ಲಿ ಪ್ರಸಿದ್ಧರಾದ ರಾಜರ ಹೆಸರನ್ನು ಉಪಯೋಗಿಸಿ ಕೊಳ್ಳುವುದು ಸಾಮಾನ್ಯ ಸಂಗತಿಯಾಗಿದೆ.

ಈ ವಂಶಕ್ಕೆ ಸೇರಿದ ಗಂಡಳನಾಯಕನನ್ನು ಕೃಷ್ಣ ದೇವರಾಯನು ತನ್ನ ಸೈನ್ಯದಲ್ಲಿ ಸೈನಿಕಾಧಿಕಾರಿ ಹುದ್ದೆಗೆ ನೇಮಕ ಮಾಡಿದನೆಂದು ದಾಖಲೆಯು ತಿಳಿಸುತ್ತದೆ[೨೧]. ಆ ಹುದ್ದೆಯಲ್ಲಿದ್ದಾಗ ಗಂಡಳನಾಯಕನು ಅನೇಕ ಯುದ್ಧಗಳಲ್ಲಿ ಭಾಗವಹಿಸಿಸುವುದರ ಮೂಲಕ ತನ್ನ ಧೈರ್ಯ, ಸಾಹಸ ನಿಷ್ಠೆಯನ್ನು ತೋರಿಸಿ ಕೃಷ್ಣದೇವರಾಯನ ವಿಶ್ವಾಸಕ್ಕೆ ಪಾತ್ರನಾದನು. ಇದರಿಂದ ಸಂತೃಪ್ತಿಗೊಂಡ ಚಕ್ರವರ್ತಿಯು ಆತನನ್ನು ಸೇನಾ ಇಲಾಖೆಯಲ್ಲಿ ಬಡ್ತಿ ನೀಡಿ ಹೆಚ್ಚಿನ ಜವಾಬ್ದಾರಿ ಕೊಟ್ಟನು. ಈ ಸನ್ನಿವೇಶದಲ್ಲಿ ಆತನಿಗೆ ತನ್ನ ಶಕ್ತಿ ಪ್ರದರ್ಶಿಸುವ ಅವಕಾಶ ದೊರೆಯಿತು. ಮೆಕಂಜಿ ಇಂಗ್ಲೀಷ್ ದಾಖಲೆಯ ಪ್ರಕಾರ[೨೨].

*"The Rayaloo being informed that the country of Soondoor, Voojanee, Coodatenee, Allamutty and their dependences were occupied by plunders who settled in these jungles by robbing passengers ordered gondal Naik as a duty of importance to finished thither and after exterminating these and destroying the wild beasts that infosted these tracts to settle the country and endeavour to populate it."*

ಕೃಷ್ಣದೇವರಾಯನ ಸೈನ್ಯದಲ್ಲಿ ಸೇನಾಧಿಕಾರಿಯಾಗಿದ್ದು ತನ್ನ ಸಾಹಸಗಳಿಂದ ಗಮನ ಸೆಳೆದಿದ್ದ ಗಂಡಳನಾಯಕನು ರಾಯನ ಆದೇಶದಂತೆ ಮೇಲೆ ತಿಳಿಸಿದ ಪ್ರದೇಶಗಳ ಮೇಲೆ ಸ್ವತಂತ್ರವಾಗಿಯೇ ಆಕ್ರಮಣ ಮಾಡಿ ಯಶಸ್ವಿಯಾಗಿದ್ದುದು ಆತನ ಬಲ ವೃದ್ಧಿಯನ್ನು ತೋರಿಸುತ್ತದೆ. ಹೀಗೆ ಬಲಶಾಲಿ ಯಾಗಿ ವಿಜಯಿಯಾಗಿ ವಿಜಯನಗರಕ್ಕೆ ಹಿಂತಿರುಗುತ್ತಿದ್ದ ಸಮಯದಲ್ಲಿ ಇಂದಿನ ಗುಡೇಕೋಟೆ ಇರುವ ಜಾಗಕ್ಕೆ ಬಂದನು. ಆ ಸನ್ನಿವೇಶವನ್ನು ಅದೇ ಇಂಗ್ಲಿಷ್ ದಾಖಲೆಯು ಈ ರೀತಿ ತಿಳಿಸುತ್ತದೆ[೨೩].

"ಗಂಡಳನಾಯಕನು ಪ್ರಸ್ತುತ ಗುಡೇಕೋಟೆ ಇರುವ ಸ್ಥಳದಲ್ಲಿ ಮರದ ಕೆಳಗೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು. ಆ ಸಂದರ್ಭದಲ್ಲಿ ಒಂದು ನಾಯಿಯು ಕಾಡಿನ ಮಧ್ಯದ ಕಣಿವೆಯಿಂದ ಆಗಮಿಸುತ್ತಿರುವುದನ್ನು ಮತ್ತು ಅದು ನೀರಿನಿಂದ ತೋಯ್ದಿರುವುದನ್ನು ನೋಡಿ, ಆಶ್ಚರ್ಯದಿಂದ ಅವನು ನಾಯಿ ಹೋಗಿದ್ದ ದಿಕ್ಕಿನಲ್ಲೇ ಕಾಡಿನೊಳಗೆ ಪ್ರವೇಶಿಸಿದಾಗ ಅಲ್ಲಿ ಶಿವನ ದೇವಾಲಯ ಮತ್ತು ಸನಿಹದಲ್ಲೇ ಕೆರೆ ಇರುವುದನ್ನು ಕಂಡನು. ನಂತರ ಅವನು ಆ ದೇವಾಲಯದ ಹತ್ತಿರ ತನ್ನ ವಾಸಕ್ಕೆ ಮನೆಯೊಂದನ್ನು ನಿರ್ಮಿಸಿ ಗುಡ್ಡದ ಮೇಲೆ ಕೋಟೆಯನ್ನು ಕಟ್ಟಿ ಅಲ್ಲಿಯೇ ವಾಸ ಮಾಡತೊಡಗಿದನು".

ಈ ಕಥೆಗಳು ಎಲ್ಲಾ ಚಾರಿತ್ರಿಕ ದಾಖಲೆಗಳಲ್ಲಿ ಸರ್ವೆ ಸಾಮಾನ್ಯವಾಗಿ ಕಂಡುಬರುತ್ತವೆ. ಇದರ ಆಶಯವೇನೆಂದರೆ, ದರೋಡೆಕೋರರನ್ನು ಸದೆಬಡಿದು ಹಿಂತಿರುಗಿ ಬರುವಾಗ ಗಂಡಳನಾಯಕನಿಗೆ ತನ್ನ ಬಲದಲ್ಲಿ ಆತ್ಮವಿಶ್ವಾಸ ನಂಬಿಕೆ ಹೆಚ್ಚಾಗಿರಬೇಕು. ಆಗ ಅವನು ಅದಕ್ಕಾಗಿ ಸೂಕ್ತ ಸ್ಥಳವನ್ನರಸು ತ್ತಿರಬೇಕು. ಆ ಸಂದರ್ಭದಲ್ಲಿ ಇಂದಿನ ಗುಡೇ ಕೋಟೆ ಅವನಿಗೆ ದೊರಕಿರಬಹುದೆಂದು ಊಹಿಸಬಹುದು. ಮೇಲಿನ ದಾಖಲೆಯು ಆ ಸ್ಥಳದಲ್ಲಿ ಕೋಟೆ ನಿರ್ಮಾಣ ಮಾಡುವ ಮೊದಲೇ ಶಿವನ ದೇವಾಲಯ ಮತ್ತು ಕೆರೆ ಇದ್ದವೆಂದು ತಿಳಿಸಿರುವುದರಿಂದ ಆ ಸ್ಥಳದಲ್ಲಿ ಜನವಸತಿ ಇದ್ದು ಕಾಲಾಂತರ ದಲ್ಲಿ ಅದು ನಾಶವಾಗಿರಬಹುದು. ಇಂದಿಗೂ ಅವನತಿಯ ಹಂತದಲ್ಲಿರುವ ಕಲ್ಯಾಣಿ ಚಾಲುಕ್ಯರ ಕಾಲದ ಕಲ್ಲೇಶ್ವರ, ಚೌಳೇಶ್ವರ ದೇವಾಲಯಗಳು ಇದನ್ನು ಸಮರ್ಥಿಸುತ್ತವೆ. ಈ ಪರಿಸರದಲ್ಲಿ ಶಿಲಾಯುಗದ ನೆಲೆಗಳು ಮತ್ತು ಮೌರ್ಯರ ರಾಜ್ಯಾಳ್ವಿಕೆಯಿಂದಲೇ ಇಲ್ಲಿನ ಆಡಳಿತವನ್ನು ಗುರುತಿಸ ಬಹುದೆಂದು ಸಂಶೋಧನೆಗಳು ತಿಳಿಸುತ್ತವೆ[೨೪]. ಆದುದರಿಂದ ಗಂಡಳನಾಯಕನ ಕಾಲಕ್ಕಿಂತ ಮೊದಲೇ ಈ ಸ್ಥಳ ಜನವಸತಿಯಿಂದ ಕೂಡಿದ್ದು ಕಾರಣಾಂತರದಿಂದ ನಾಶವಾದ ಈ ಸ್ಥಳವೇ ಅವನಿಗೆ ರಕ್ಷಣೆಗೆ ಆಯಕಟ್ಟಿನ ಸ್ಥಳವಾಯಿತು. ಆದುದರಿಂದ ಅವನು ಅಲ್ಲಿ ಗುಡ್ಡದ ಮೇಲೆ ಕೋಟೆಯನ್ನು ಕಟ್ಟಿ ಶಿವನ ದೇವಾ ಲಯದ ಬಳಿ ಅರಮನೆಯೊಂದನ್ನು ನಿರ್ಮಾಣ ಮಾಡಿ ಕೊಂಡು ಸ್ವತಂತ್ರವಾದ ಸಂಸ್ಥಾನವೊಂದಕ್ಕೆ ಆಸ್ತಿಭಾರ ಹಾಕಿ ಅಲ್ಲಿಯೇ ನೆಲೆಸತೊಡಗಿದನು. ತನ್ನ ಆಡಳಿತ ಕೇಂದ್ರವಾದ ಈ ಸ್ಥಳವನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸಿದ ನಾಯಕನು ಅಲ್ಲಿ ನೆಲಸಲು ಬರುವ ಜನರಿಗೆ ಅನೇಕ ಅನುಕೂಲಗಳನ್ನು ಮಾಡಿಕೊಟ್ಟು ಜನ ಸಂಘಟನೆ ಮಾಡಿದನು. ಆದಾಗ್ಯೂ ವಿಜಯನಗರಕ್ಕೆ ನಿಷ್ಠೆಯಿಂದಿದ್ದು ಅವರು ನೀಡಿದ್ದ ಉಜ್ಜನಿ, ಕುಡತಿನಿ, ಸಂಡೂರು ಮುಂತಾದ ಪ್ರದೇಶಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಾ ಮರಣ ಹೊಂದಿದನು.

ಹೀಗೆ ಗುಡೇಕೋಟೆನಾಯಕ ವಂಶದ ಪೂರ್ವಜರು ನೆಲ್ಲೂರಿನಿಂದ ವಿಜಯನಗರಕ್ಕೆ ಆಗಮಿಸಿ ತಳವಾರಹುದ್ದೆ ಪಡೆದು ಸೈನಿಕ ಸೇವೆಗೆ ಸೇರಿ, ಸೇನಾಧಿಕಾರಿಗಳಾಗಿ ಗಂಡಳ ನಾಯಕನ ಕಾಲಕ್ಕೆ ಸ್ವತಂತ್ರ ಪಾಳೇಪಟ್ಟನ್ನು ನಿರ್ಮಿಸುವ ಮಟ್ಟಕ್ಕೆ ಬೆಳೆದದ್ದು ಆ ನಾಯಕರ ಇತಿಹಾಸದಲ್ಲಿ ಪ್ರಮುಖ ಸಾಧನೆಯಾಗಿದೆ.

ಗಂಡಳನಾಯಕನ ನಂತರ ಪೆನ್ನಪ್ಪನಾಯಕ ಅವನ ನಂತರ ಪಾಪಳನಾಯಕ ಆಳ್ವಿಕೆ ನಡೆಸಿದರೆಂದು ದಾಖಲೆಗಳು ತಿಳಿಸುತ್ತವೆ. ಆದರೆ ಈ ನಾಯಕರ ಆಡಳಿತದ ಬಗೆಗೆ ವಿವರಗಳಿಲ್ಲ. ನಂತರ ಪಾಪಳನಾಯಕನ ಮೊಮ್ಮಗ ತಿಮ್ಮಪ್ಪನಾಯಕನ ಆಳ್ವಿಕೆ ಆರಂಭವಾಗುತ್ತದೆ.

**ತಿಮ್ಮಪ್ಪನಾಯಕ**

ವಿಜಯನಗರದ ಕೃಷ್ಣದೇವರಾಯನ ಸಮಕಾಲೀನ ನಾಗಿದ್ದ ಗಂಡಳನಾಯಕನ ಆಳ್ವಿಕೆ ಮುಗಿದ ನಂತರ ಇವರ ವಂಶಾವಳಿಯಲ್ಲಿ ತಿಮ್ಮಪ್ಪನಾಯಕನವರೆಗೆ ಅನೇಕ ಗೊಂದಲ ಗಳಿದ್ದು ಇವರ ಮನೆತನದ ಹಸ್ತಪ್ರತಿಗಳಲ್ಲಿ ಕೃಷ್ಣದೇವರಾಯನ (೧೫೦೯–೧೫೨೯) ಸಮಕಾಲೀನನಾದ ಗಂಡಳನಾಯಕನ ಮಗ ಪೆನ್ನಪ್ಪನಾಯಕ ೩೨ ವರ್ಷ, ಅವನ ಮಗ ಪಾಪಳ ನಾಯ್ಕ ೧೭ ವರ್ಷ, ಅವನ ಮಗ ಕಮ್ಮಯ್ಯರಾಜ ೪೪ ವರ್ಷ ಆಳ್ವಿಕೆ ಮಾಡಿದರೆಂದು ದಾಖಲಾಗಿದೆ. ಅಂದರೆ ಒಟ್ಟು ೯೩ ವರ್ಷಗಳು ತಿಮ್ಮಪ್ಪನಾಯಕನಿಗಿಂತ ಮೊದಲು ಆಳ್ವಿಕೆ ನಡೆಸಲಾಯ್ತು. ಇದನ್ನು ಆಧಾರವಾಗಿಟ್ಟುಕೊಂಡು ಹೇಳುವುದಾದರೆ ತಿಮ್ಮಪ್ಪನಾಯಕನ ಆಳ್ವಿಕೆ ಪ್ರಾಯಶ ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಆರಂಭವಾದಂತೆ ತೋರುತ್ತದೆ.

ತಿಮ್ಮಪ್ಪನಾಯಕ ಗುಡೇಕೋಟೆಯ ಪಾಳೆಯಪಟ್ಟಿನ ನಾಯಕನಾಗಿ ಅಧಿಕಾರ ವಹಿಸಿಕೊಳ್ಳುವ ವೇಳೆಗೆ ದಕ್ಷಿಣ ಭಾರತದಲ್ಲಿ ಅನೇಕ ರಾಜಕೀಯ ಬದಲಾವಣೆಗಳಾಗಿದ್ದವು. ಗಂಡಳನಾಯಕನ ಸಮಕಾಲೀನ ವಿಜಯನಗರದ ಕೃಷ್ಣದೇವ ರಾಯನ ಮರಣದ ನಂತರ ವಿಜಯನಗರದಲ್ಲಿ ಸಿಂಹಾಸನ ಕ್ಕಾಗಿ ಅಂತಃಕಲಹಗಳು ಆರಂಭಗೊಂಡು ಸರ್ವಾಧಿಕಾರಿ ಅಳಿಯ ರಾಮರಾಯನ ಪ್ರಭಾವ ಹೆಚ್ಚಾಯಿತು. ಈ ರಾಮರಾಯ ಷಾಹಿ ಸುಲ್ತಾನರ ಅನ್ಯೈಕ್ಯತೆಯ ಲಾಭ ಪಡೆದುಕೊಂಡು ವಿಜಯನಗರದ ಪ್ರಭಾವವನ್ನು ಹೆಚ್ಚಿಸಲು ಪ್ರಯತ್ನಿಸಿ ಸಫಲನಾದನು. ಇದನ್ನರಿತ ಅವರೆಲ್ಲಾ ಒಟ್ಟಾಗಿ ಸೇರಿ ವಿಜಯನಗರದ ಮೇಲೆ ದಾಳಿ ಮಾಡಿ ಅದರ ನಾಶಕ್ಕೆ ಕಾರಣರಾದರು. ವಿಜಯನಗರಕ್ಕೆ ಸೇರಿದ್ದ ತುಂಗಭದ್ರಾ ತೀರದ ಎಲ್ಲಾ ಪ್ರದೇಶಗಳು ಅವರ ವಶವಾದವು. ಉತ್ತರ ಕರ್ನಾಟಕದಲ್ಲಿ ವಿಜಾಪುರದ ಆದಿಲ್ ಶಾಹಿಗಳು ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆದರು. ಕ್ರಿ.ಶ. ೧೬೨೭–೧೬೫೬ರ ಅವಧಿಯಲ್ಲಿ ಆಳಿದ ಮಹಮದ್ ಆದಿಲ್ ಷಾನು ಮೊಗಲರ ರಾಜ್ಯವಿಸ್ತರಣೆಯನ್ನು ೧೬೩೬ರವರೆಗೆ ಯಶಸ್ವಿ ಯಾಗಿ ತಡೆದರೂ ಕೊನೆಗೆ ಅವರಿಗೆ ಸೋತು ಅವರೊಂದಿಗೆ ಅಧೀನತ್ವದ ಒಪ್ಪಂದ ಮಾಡಿಕೊಂಡನು. ಇವನು ಉತ್ತರ ಭಾಗದಲ್ಲಿ ತನಗಾದ ನಷ್ಟವನ್ನು ತುಂಬಿಕೊಳ್ಳಲು ದಕ್ಷಿಣ ಭಾಗದ ಪ್ರದೇಶಗಳ ಮೇಲೆ ದಾಳಿ ಮಾಡಿ ಪ್ರಭುತ್ವ ಸಂಪಾದಿಸಿದನು. ಇವನ ನಂತರ ಬಂದ ಆಲಿ ಆದಿಲ್ ಷಾ (೧೬೫೬–೧೬೭೨) ಮತ್ತು ಸಿಕಂದರ್ ಆದಿಲ್ ಶಾ (೧೬೭೨–೧೬೮೯)ರ ಕಾಲದಲ್ಲಿ ಆದಿಲ್ ಶಾಹಿ ಸಾಮ್ರಾಜ್ಯ ಕುಸಿಯತೊಡಗಿದರೂ ಅದನ್ನೇ ಕೆಲಕಾಲ ತನ್ನ ಬುದ್ಧಿವಂತಿಕೆ ಯನ್ನು ಬೆಳೆಸಿ ರಕ್ಷಿಸಿದವನೇ ಸಿದ್ಧಿ ಮಾಸೂದ್ ಖಾನನು. ಇವನು ಆರಂಭದಲ್ಲಿ ಆದಿಲ್‌ಶಾಹನ ಸೇವಕ ಮಂಡಳಿಯಲ್ಲಿ ದ್ದನು. ಕ್ರಮೇಣ ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳತೊಡಗಿದ. ಇವನು ಕರ್ನೂಲಿನಲ್ಲಿ ಅಮೀರನಾಗಿದ್ದ ಸಿದ್ಧಿ ಜೋಹರನ ಅಳಿಯನಾದನು. ಅವನ ಪರವಾಗಿ ಯುದ್ಧದಲ್ಲಿ ಹೋರಾಟ ಮಾಡಿ ಅಮೀರಿಯಾ ಹಾಗೂ ಖಾನ್ ಎಂಬ ಬಿರುದನ್ನು ಗಳಿಸಿದನು. ಸಿದ್ಧಿ ಜೋಹರ್ ಮರಣಿಸಿದಾಗ ಅವನ ಮಗ ಅಬ್ದುಲ್ ಅಜೀಜನು ಬೆಳೆಯುತ್ತಿದ್ದ ಸಿದ್ಧಿ ಮಾಸೂದನನ್ನು ಬಂಧಿಸಲು ಪ್ರಯತ್ನಿಸಿದಾಗ ತಪ್ಪಿಸಿಕೊಂಡು ಆದೋನಿ ಕೋಟೆಯ ಕಡೆಗೆ ಓಡಿಹೋದನು. ಅಲ್ಲಿನ ಶೇಖ ಇನಾಯತುಲ್ಲಾಖಾನ್ ಅವನಿಗೆ ಆಶ್ರಯ ಕೊಟ್ಟನು. ಆಶ್ರಯ ಕೊಟ್ಟ ವ್ಯಕ್ತಿಯಿಂದಲೇ ಆ ಕೋಟೆಯನ್ನು ಕೈವಶ ಮಾಡಿ ಕೊಂಡನು. ಈ ಕೋಟೆಯು ಆದಿಲ್ ಶಾಹಿಗಳ ಭದ್ರವಾದ ಕೋಟೆಯಾಗಿತ್ತು. ತನ್ನ ಮಾವನಾದ ಸಿದ್ಧಿ ಜೋಹರ್‌ನಿಂದ ಆಲಿ ಆದಿಲ್ ಶಾಹಿಯ ವಿಶ್ವಾಸ ಗಳಿಸಿಕೊಂಡಿದ್ದ ಇವನು ತನ್ನ ಶಕ್ತಿ ಬುದ್ಧಿವಂತಿಕೆಯಿಂದ ಆದಿಲ್‌ಶಾಹಿ ರಾಜ್ಯದ ವಜೀರ ಪದವಿಗೇರಿದನು. ಹೀಗೆ ಆದೋನಿಯ ಜಾಗೀರಿನ ಆಡಳಿತದ ಜೊತೆಗೆ ಆದಿಲ್‌ಶಾಹಿ ರಾಜ್ಯದ ವಜೀರನಾಗಿಯೂ ಕೆಲಸ ಮಾಡ ತೊಡಗಿದನು. ಈ ಸನ್ನಿವೇಶದಲ್ಲಿ ಸಿದ್ಧಿ ಮಸೂದ್ ಖಾನನು (ಕ್ರಿ.ಶ. ೧೬೫೦–೧೬೯೦) ತಿಮ್ಮಪ್ಪ ನಾಯಕ ನೊಂದಿಗೆ ಕದನಕ್ಕಿಳಿಯುವ ಸಂದರ್ಭ ಒದಗಿತು.

ವಿಜಯನಗರಕ್ಕೆ ಸೇರಿದ ತುಂಗಭದ್ರಾ ನದಿ ತೀರದ ದಕ್ಷಿಣ ಪ್ರದೇಶಗಳು ಅನೇಕ ಪಾಳೆಯಪಟ್ಟುಗಳ ಕೇಂದ್ರ ಗಳಾಗಿದ್ದವು. ಆ ಸಂಸ್ಥಾನಗಳು ಪರಸ್ಪರ ಯುದ್ಧನೀತಿಯನ್ನು ಕೈಗೊಂಡು ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದವು. ಅಷ್ಟೇನೂ ಬಲಾಢ್ಯವಲ್ಲದ ಈ ಸಂಸ್ಥಾನಗಳ ಮೇಲೆ ಆದಿಲ್‌ಶಾಹಿ ವಜೀರನಾಗಿದ್ದ ಸಿದ್ದಿ ಮಸೂದ್ ಖಾನನ ದೃಷ್ಟಿ ಬಿತ್ತು.

ಇವನ ದಾಳಿಗೆ ಗುಡೇಕೋಟೆ ಸಂಸ್ಥಾನ ಸಿಲುಕಿತು. ಅದನ್ನು ಮೆಕಂಜಿ ಇಂಗ್ಲೀಷ್ ದಾಖಲೆಯು ಹೀಗೆ ತಿಳಿಸುತ್ತದೆ.

"ಸಿದ್ದಿ ಮಾಸೂದ್‌ಖಾನನು ಗುಡೇಕೋಟೆಯ ಮೇಲೆ ಮುತ್ತಿಗೆ ಹಾಕಿದನು. ಅದು ಹನ್ನೆರಡು ವರ್ಷಗಳವರೆಗೆ ಮುಂದುವರೆಯಿತು. ಆದರೂ ಸಂಪೂರ್ಣವಾಗಿ ಕೋಟೆಯನ್ನು ವಶಪಡಿಸಿಕೊಳ್ಳಲಾಗಲಿಲ್ಲ ಹಾಗೂ ತಿಮ್ಮಪ್ಪ ನಾಯಕನು ಶರಣಾಗತನಾಗಲಿಲ್ಲ. ಇದರಿಂದ ಸಿದ್ದಿ ಮಾಸೂದ್‌ಖಾನನು ತಿಮ್ಮಪ್ಪ ನಾಯಕನೊಂದಿಗೆ ತಾತ್ಕಾಲಿಕ ಶಾಂತಿ ಒಪ್ಪಂದ ಮಾಡಿಕೊಳ್ಳಲು ಬಯಸಿದನು. ತಿಮ್ಮಪ್ಪನಾಯಕನ ಸಾಹಸಕ್ಕೆ ಮೆಚ್ಚಿದ ವಜೀರನು ಅವನಿಗೆ "ರಾಜ" ಎಂಬ ಬಿರುದನ್ನು ನೀಡಿ ಕೋಟೆ ಮತ್ತು ನಗರ ಗಳನ್ನು ನಿರ್ಮಾಣ ಮಾಡಲು ಅನುಮತಿ ಕೊಟ್ಟನು"[೨೫]

ಹೀಗೆ ತಿಮ್ಮಪ್ಪನಾಯಕನು ರಾಜಾ ತಿಮ್ಮನಾಯಕನಾದನು. ಅಂದಿನಿಂದ ಈ ಮನೆತನದವರೆಲ್ಲರೂ 'ರಾಜಾ' ಎಂಬ ಹೆಸರಿನಿಂದಲೇ ಕರೆಯಲ್ಪಟ್ಟಿದ್ದಾರೆ. ಸಿದ್ದಿ ಮಾಸೂದ್ ಖಾನನಿಂದ ಗೌರವಿಸಲ್ಪಟ್ಟ ರಾಜಾ ತಿಮ್ಮನಾಯಕನು ಅವನಿಗೆ ಅತ್ಯಂತ ನಿಷ್ಠೆಯಿಂದಿದ್ದು ಆ ಭಾಗದ ಸರ್ಕಾರದ ಎಲ್ಲಾ ಆಗುಹೋಗುಗಳನ್ನು ಅವನಿಗೆ ಚಾಚೂ ತಪ್ಪದೆ ವರದಿ ಮಾಡುತ್ತಿದ್ದನು. ಈ ವಿಧೇಯತೆಗೆ ಮೆಚ್ಚಿದ ಸಿದ್ದಿ ಮಾಸೂದ್ ಖಾನನು ಆ ಭಾಗದ ಆಕ್ರಮಣಗಳನ್ನು ಸ್ಥಗಿತಗೊಳಿಸಿ ಬಿಜಾಪುರಕ್ಕೆ ಹಿಂತಿರುಗಿದನು. ಮತ್ತು ರಾಜಾ ತಿಮ್ಮಪ್ಪನಾಯಕನಿಗೆ ವಜೀರನು ತಾನು ಗೆದ್ದಿದ್ದ ತುಂಗಭದ್ರಾ ತೀರದ ಎಲ್ಲಾ ಪ್ರದೇಶಗಳ ಜವಾಬ್ದಾರಿ ನೀಡಿದ್ದೇ ಅಲ್ಲದೇ ಅವನಿಗೆ ಅವನ ಹಳೆಯ ಪ್ರದೇಶಗಳನ್ನು ಮಾನ್ಯ ಮಾಡುವುದರ ಜೊತೆಗೆ ಹೊಸದಾಗಿ, ಸಂಡೂರು, ಕುಡತಿನಿ, ನಾಗಲಾಪುರ, ಗೂಳೂರು, ಮಚ್ಚೇರಿ, ದೊಡ್ಡಘಟ್ಟ, ಹೊಸೂರು ನಾರಾಯಣ ದೇವರಕೆರೆ, ಚೋರಕುಂಟೆ ಮೊದಲಾದ ಪ್ರದೇಶಗಳನ್ನು ನೀಡಿದನು[೨೬]. ಹೀಗೆ ವಿಜಯನಗರದವರ ಪ್ರೇರಣೆಯಿಂದ ರಾಜ್ಯಕಟ್ಟಿದ ಗುಡೇಕೋಟೆ ಪಾಳೆಯಗಾರರು ರಾಜಾ ತಿಮ್ಮಪ್ಪನಾಯಕನ ಕಾಲಕ್ಕೆ ವಿಜಾಪುರದ ಆದಿಲ್‌ಶಾಹಿಗಳಿಗೆ ನಿಷ್ಠರಾಗಿ ರಾಜ್ಯ ಉಳಿಸಿಕೊಳ್ಳುವ ಪ್ರಯತ್ನ ಮಾಡಿದ್ದುದು. ಅಂದಿನ ರಾಜಕೀಯ ವಾತಾವರಣದಲ್ಲಿ ಅನಿವಾರ್ಯವಾಗಿತ್ತು. ಆದರೂ ರಾಜಾ ತಿಮ್ಮಪ್ಪನಾಯಕನು ವಜೀರನು ದೂರದ ಬಿಜಾಪುರ ದಲ್ಲಿದ್ದರೂ ಯಾವುದೇ ಆತಂಕಕ್ಕೊಳಗಾಗದೇ ಅನೇಕ ವರ್ಷಗಳ ಕಾಲ ತೊಂದರೆಯಿಲ್ಲದೆ ಆಡಳಿತ ನಡೆಸಿ ಮರಣ ಹೊಂದಿದನು.

**ರಾಮರಾಜ**

ರಾಜಾ ತಿಮ್ಮಪ್ಪನಾಯಕನ ಮರಣಾನಂತರ ರಾಮರಾಜಪ್ಪನಾಯಕನು ಗುಡೇಕೋಟೆ ಸಂಸ್ಥಾನದ ನಾಯಕನಾದನು. ಇವನು ಚಿತ್ರದುರ್ಗದ ಭರಮಣ್ಣನಾಯಕನ (೧೬೮೯–೧೭೨೧ ಕ್ರಿ.ಶ.) ಸಮಕಾಲೀನನಾಗಿದ್ದನು. ಆಡಳಿತ ವಹಿಸಿಕೊಂಡ ತರುವಾಯದಲ್ಲೇ ಗುಡೇಕೋಟೆಯನ್ನು ಮತ್ತಷ್ಟು ಬಲಾಢ್ಯಗೊಳಿಸಲು ಕೋಟೆಯನ್ನು ರಿಪೇರಿ ಮಾಡಿದನು. ವರ್ತಕರನ್ನು ಗುಡೇಕೋಟೆಯಲ್ಲಿ ನೆಲೆಸುವಂತೆ ಪ್ರೇರೇಪಿಸಿ ಅವರಿಗೆ ಎಲ್ಲಾ ಅನುಕೂಲಗಳನ್ನು ಒದಗಿಸಿ ಕೊಟ್ಟನು. ಭರಮಣ್ಣನಾಯಕನಿಗೆ ಹರಪನಹಳ್ಳಿಯವರ ಮೇಲೆ ಯುದ್ಧ ಮಾಡಲು ಸೇನಾ ಸಮೇತನಾಗಿ ಹೋಗಿ ಸಹಾಯ ಮಾಡಿದ್ದನು. ಇದರಿಂದ ಅಣಜಿಕೋಟೆ ದುರ್ಗದವರ ವಶವಾಯ್ತು. ಹೀಗೆ ದುರ್ಗದವರ ಸ್ನೇಹ ಬೆಳೆಸಿಕೊಂಡಿದ್ದರೂ ದುರ್ಗದವರು ಗುಡೇಕೋಟೆಯ ಮೇಲೆ ಆಕ್ರಮಣ ಮಾಡುವ ಸನ್ನಿವೇಶವೊಂದು ಸೃಷ್ಟಿಯಾಯಿತು. ದಿಲಾವರ್ ಬಕ್‌ಷನ ದಂಡು ಚಿತ್ರದುರ್ಗದವರ ಮೇಲೆ ದಾಳಿ ಮಾಡಿದಾಗ ಅವನು ಗುಂಟನೂರು ಮಲ್ಲಪ್ಪನ ಮುಖಾಂತರ ೩ ಕೋಟಿ ವರಹಾ ಕೊಡಬೇಕೆಂದು ಒತ್ತಾಯಿಸಿದನು. ಈ ಸಂದರ್ಭದಲ್ಲಿ ದುರ್ಗದವರು ಅವನೊಡನೆ ಯುದ್ಧಕ್ಕಿಳಿಯಲು ಸಂಪನ್ಮೂಲ ಕ್ರೋಢೀಕರಣಕ್ಕೆ ಬಹುಧಾನ್ಯ ಸಂವತ್ಸರದಲ್ಲಿ (ಕ್ರಿ.ಶ. ೧೬೯೯) ಗುಡೇಕೋಟೆ ಮೇಲೆ ಆಕ್ರಮಣ ಮಾಡಿದರು[೨೭]. ಆಗ ಗುಡೇಕೋಟೆಯಲ್ಲಿ ರಾಮರಾಜನ ಆಳ್ವಿಕೆಯಿತ್ತು. ಅವರಿಗೆ ಸೇರಿದ್ದ ನಾಗಸಮುದ್ರಕ್ಕೆ ಮುತ್ತಿಗೆ ಹಾಕಿ ದುರ್ಗದವರು ಕೊಳ್ಳೆ ಹೊಡೆದರು. ಪರಿಸ್ಥಿತಿ ಕೈ ಮೀರುವ ಸಂದರ್ಭ ಒದಗಿದಾಗ ಗುಡೇಕೋಟೆ ಪಾಳೇಗಾರರ ಸಕ್ಕರೆ ನಾರಾಣಪ್ಪನನ್ನು ದುರ್ಗದವರೊಂದಿಗೆ ಸಂಧಾನಕ್ಕೆ ಕಳುಹಿಸಿದನು. ಅದರಂತೆ ಗುಡೇಕೋಟೆ ಹೆಣ್ಣುಮಗಳು ಬಂಗಾರವ್ವ ನಾಗತಿಯನ್ನು ಭರಮಣ್ಣ ನಾಯಕನಿಗೆ ಕೊಟ್ಟು ವಿವಾಹ ಮಾಡಲಾಯಿತು[೨೮]. ನಂತರ ಗುಡೇಕೋಟೆ ಪಾಳೇಗಾರನು ಕೊಟ್ಟೂರಿನ ಆಕ್ರಮಣದಲ್ಲಿ ದುರ್ಗದವರ ಪರವಾಗಿ ಭಾಗವಹಿಸಿದ್ದನು.

ಹೀಗೆ ಚಿತ್ರದುರ್ಗದವರೊಂದಿಗೆ ಮೈತ್ರಿಯಿಂದ ಇರುತ್ತಾ ಅವರು ಕೇಳಿದ ಸಂದರ್ಭದಲ್ಲಿ ಸೈನಿಕ ಸೇವೆ ನೀಡುತ್ತಾ ಇರುವ ಕಾಲದಲ್ಲಿ ರಾಮರಾಜಪ್ಪನಾಯಕನಿಗೆ ಗುಡೇಕೋಟೆಯ ಬಳಿ ಜಮೀನೊಂದರಲ್ಲಿ ಉಮಾಮಹೇಶ್ವರ ವಿಗ್ರಹವು ದೊರಕಿತು. ಅದಕ್ಕೆ ಒಂದು ಹೊಸ ದೇವಾಲಯ ಕಟ್ಟಿಸಿ ಅಲ್ಲಿ ಆ ವಿಗ್ರಹವನ್ನು ಪ್ರತಿಷ್ಠಾಪಿಸಿದನೆಂದು ದಾಖಲೆಯು ತಿಳಿಸುತ್ತದೆ[೨೯]. ಗುಡೇಕೋಟೆಯ ಪಶ್ಚಿಮ ದಿಕ್ಕಿಗೆ ಕೂಡಲಗಿ ಮಾರ್ಗದಲ್ಲಿ ದಕ್ಷಿಣ ಬದಿಗಿರುವ ದೇವಾಲಯವೇ ಇದಾಗಿದೆ. ಗರ್ಭಗುಡಿ, ಅಂತರಾಳ, ನವರಂಗ, ಮುಖಮಂಟಪ, ಸುತ್ತುಗೋಡೆ, ಇಟ್ಟಿಗೆಯ ಗೋಪುರ, ಗ್ರಾನೈಟ್ ಶಿಲೆ, ಗಾರೆ, ಇಟ್ಟಿಗೆ, ಮುಂತಾದ ಲಕ್ಷಣಗಳು ವಿಜಯನಗರ–ನಗರೋತ್ತರ ಶೈಲಿಯನ್ನು ನೆನಪಿಸುವುದರಿಂದ ಪ್ರಾಯಶಃ

ಈ ದೇವಾಲಯವನ್ನು ರಾಮರಾಜನಾಯಕನೇ ನಿರ್ಮಿಸಿರಬಹುದು. ದೇವಾಲಯದ ಗರ್ಭಗುಡಿಯಲ್ಲಿ ವಿಗ್ರಹವನ್ನು ೩ ಅಡಿ ಎತ್ತರ ಇರುವ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಶಿವನು ತನ್ನ ಎಡತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡಿರುವ ಭಂಗಿ ನಯನ ಮನೋಹರವಾಗಿದೆ. ಇದನ್ನು ಸಂಶೋಧಕರೊಬ್ಬರು ಶಿವಪಾರ್ವತಿ ವಿಗ್ರಹ ಎಂದು ಕರೆದಿದ್ದಾರೆ.[೩೦] ವಿಗ್ರಹದಲ್ಲಿ ಶಿವಪಾರ್ವತಿ ಶಿಲ್ಪಗಳೇ ಇದ್ದರೂ ತಾಂತ್ರಿಕವಾಗಿ ಪೌರಾಣಿಕ ಕಥೆಗಳಂತೆ ಇಂಗ್ಲೀಷ್ ದಾಖಲೆಯಲ್ಲಿ ಇರುವಂತೆ ಉಮಾಮಹೇಶ್ವರನ ಮೂರ್ತಿಯೇ ಆಗಿದೆ ಎಂದು ಯಾವುದೇ ಸಂದೇಹವಿಲ್ಲದೇ ಹೇಳಬಹುದು.

ರಾಮರಾಜನ ನಂತರ ಅವನ ಪುತ್ರ ಬೊಮ್ಮಂತರಾಜನ ಆಳ್ವಿಕೆ ಆರಂಭವಾಗುತ್ತದೆ. ಮೊಳಕಾಲ್ಮೂರು ಚಳ್ಳಕೆರೆ, ಜಗಳೂರು ಕೂಡ್ಲಿಗೆ ಪ್ರದೇಶ, ರಾಯದುರ್ಗದ ಗೊಲ್ಲಹಳ್ಳಿ ಗಲಗಲ್ಲು ಮೊದಲಾದ ಪ್ರದೇಶಗಳು ಇವನ ರಾಜ್ಯವ್ಯಾಪ್ತಿಗೆ ಸೇರಿದ್ದವು. ರಾಯದುರ್ಗ ಪ್ರದೇಶವನ್ನು ಇವನು ತನ್ನ ತಮ್ಮನಾದ ಯರಿಬೊಮ್ಮಳನಾಯಕನಿಗೆ ಬಿಟ್ಟುಕೊಟ್ಟನು. ಹೆಚ್ಚು ದಿನ ಆಳ್ವಿಕೆ ನಡೆಸದ ಬೊಮ್ಮಂತರಾಜನು ಖಾಯಿಲೆಯಿಂದ ಅಕಾಲಿಕ ಮರಣಕ್ಕೆ ತುತ್ತಾದನೆಂದು ಇಂಗ್ಲೀಷ್ ದಾಖಲೆಯು ತಿಳಿಸುತ್ತದೆ. ಅನಂತರ ಅವನ ಮಗ ಚಿನ್ನಯರಾಜನು ಗುಡೇಕೋಟೆ ಸಂಸ್ಥಾನದ ನಾಯಕನಾದನು. ಇವನ ಕಾಲದಲ್ಲಿ ರಾಜ್ಯದ ಸ್ಥಿತಿಗತಿ ಹೇಳಿಕೊಳ್ಳುವಷ್ಟು ಉತ್ತಮವಾಗಿರಲಿಲ್ಲ. ನೆರೆಹೊರೆಯವರ ಉಪಟಳ ಹೆಚ್ಚಾಗಿತ್ತು. ಹರಪನಹಳ್ಳಿ, ಚಿತ್ರದುರ್ಗ, ಜರಿಮಲೆ ಪಾಳೇಗಾರರು ಯಾವುದೇ ಸಂದರ್ಭದಲ್ಲಾದರೂ ಇವರ ಮೇಲೆ ದಾಳಿ ಮಾಡುವ ಸನ್ನಾಹದಲ್ಲಿದ್ದರು. ಆದೋನಿಯಲ್ಲಿ ಆಳ್ವಿಕೆ ಮಾಡುತ್ತಿದ್ದ ನವಾಬರಿಗೆ ಅಧೀನನಾಗಿದ್ದ ಇವನು ಅವರಿಗೆ ತಪ್ಪದೆ ಪೊಗದಿ ಸಲ್ಲಿಸುತ್ತಿದ್ದನು. ಆಗ ಅಲ್ಲಿ ಸಿದ್ದಿಮಾಸೂದ್‌ಖಾನನ ವಂಶಸ್ಥರು ಆಳ್ವಿಕೆ ನಡೆಸುತ್ತಿದ್ದರು. ಇವನ ಮರಣಾನಂತರ ಜಟ್ಟಂಗರಾಜ ಸಂಸ್ಥಾನದ ನಾಯಕನಾದನು. ಇವರ ವಂಶಾವಳಿಯಲ್ಲಿ ಒಂದೇ ರೀತಿಯ ಅನೇಕ ಹೆಸರುಗಳು ಉಲ್ಲೇಖವಾಗಿರುವುದರಿಂದ ಕಾಲ ನಿರ್ಧರಿಸಲು ಕಷ್ಟವಾಗುತ್ತದೆ. ಅಲ್ಲದೇ ಯಾರು ಯಾರಿಗೆ ಯಾವ ರೀತಿಯ ಸಂಬಂಧ ಎಂದು ಹೇಳಲೂ ಆಗುವುದಿಲ್ಲ.

**ಜಟ್ಟಂಗರಾಜ**

ಇವನು ಚಿತ್ರದುರ್ಗದ ಹಿರಿಮದಕರಿನಾಯಕನ (ಕ್ರಿ.ಶ. ೧೭೨೧-೧೭೪೮) ಸಮಕಾಲೀನ. ಜಟ್ಟಂಗರಾಜನು ದುರ್ಗದ ಹಿರಿಮದಕರಿನಾಯಕನ ಸಹೋದರಿಯನ್ನ ವಿವಾಹವಾಗಿದ್ದನು. ಜಟ್ಟಂಗರಾಜನ ತಂದೆ ಚಿನ್ನಯರಾಜನು ತನ್ನ ಮಗಳಾದ ಬೊಮ್ಮಕ್ಕಳನ್ನು (ಜಟ್ಟಂಗರಾಜನ ಸೋದರಿ) ಹಿರಿಮದಕರಿಗೆ ವಿವಾಹ ಮಾಡಿಕೊಟ್ಟು ಅವನನ್ನು ತನ್ನ ಅಳಿಯನನ್ನಾಗಿ ಮಾಡಿಕೊಂಡಿದ್ದನೆಂದು ಇಂಗ್ಲೀಷ್ ದಾಖಲೆಯು ತಿಳಿಸುತ್ತದೆ. ಹೀಗೆ ಜಟ್ಟಂಗರಾಜನ ಸೋದರಿಯನ್ನು ಹಿರಿಮದಕರಿಯೂ, ಹಿರಿಮದಕರಿ ನಾಯಕನ ಸೋದರಿಯನ್ನು ಜಟ್ಟಂಗರಾಜನೂ ವಿವಾಹ ವಾಗಿರಲು ಕೆಲಕಾಲ ನಿರಾತಂಕವಾಗಿ ಜಟ್ಟಂಗರಾಜನ ತಂದೆ ಚಿನ್ನಯರಾಜನು ಆಳ್ವಿಕೆ ನಡೆಸಿದ್ದನು. ಆದರೆ ಜಟ್ಟಂಗರಾಜನು ಪ್ರಾಪ್ತವಯಸ್ಸಿಗೆ ಬಂದ ನಂತರ ಚಿತ್ರದುರ್ಗದವರ ಜೊತೆ ಕದನಕ್ಕಿಳಿದ ಸಂದರ್ಭವನ್ನು ಮೆಕಂಜಿ ಇಂಗ್ಲೀಷ್ ದಾಖಲೆಯು ವಿವರಿಸಿದೆ.[೩೧]

"ಜಟ್ಟಂಗರಾಜನು ಪ್ರಾಪ್ತವಯಸ್ಸಿಗೆ ಬಂದು ಸಂಸ್ಥಾನದ ನಾಯಕತ್ವವನ್ನು ವಹಿಸಿಕೊಂಡ ನಂತರ ತನ್ನ ತಂದೆ ಚಿನ್ನಯರಾಜನು ಚಿತ್ರದುರ್ಗದವರೊಂದಿಗೆ ಮಾಡಿಸಿದ್ದ ವಿವಾಹವನ್ನು ಧಿಕ್ಕರಿಸಿ ಅವರನ್ನು ಊರುಬೇಡರು ಎಂದು ಜರಿದು; ಕನಕಗಿರಿ ಸಂಸ್ಥಾನಕ್ಕೆ ಸೇರಿದ ಒಬ್ಬ ನಾಗತಿ ಮತ್ತು ಗುಡಿಬಂಡೆ ಸಂಸ್ಥಾನಕ್ಕೆ ಸೇರಿದ ನಾಲ್ಕು ಜನ ನಾಗತಿಯರನ್ನು ವಿವಾಹವಾದನು."

ಈ ಘಟನೆ ಇವರಿಬ್ಬರ ಮಧ್ಯೆ ವಿರಸ ಮೂಡಿಸುತ್ತದೆ. ಚಿತ್ರದುರ್ಗ ನಾಯಕರು ಮೂಲತಃ ಮ್ಯಾಸಬೇಡರಾಗಿದ್ದರೂ ಜಟ್ಟಂಗರಾಜನು ಊರ ಬೇಡರು ಎಂದು ಹೀಯಾಳಿಸಲು ಪ್ರಾಯಶಃ ಆ ಭಾಗದಲ್ಲಿ ಹೆಚ್ಚಾಗಿದ್ದ ಮ್ಯಾಸಮಂಡಲದ[೩೨] ಮೇಲೆ ರಾಜಕೀಯ ನಿಯಂತ್ರಣದ ಜೊತೆಗೆ ಧಾರ್ಮಿಕ ಹತೋಟಿಯನ್ನು ಪಡೆಯುವ ಇಚ್ಛೆ ಇದ್ದಂತೆ ತೋರುತ್ತದೆ. ಈ ಸುದ್ದಿ ದುರ್ಗದ ಮದಕರಿನಾಯಕನಿಗೆ ತಲುಪಿ ತನ್ನನ್ನು ತನ್ನ ವಂಶವನ್ನು ಅಪಮಾನಿಸಿದವನ ವಿರುದ್ಧ ಸೇಡು ತೀರಿಸಿಕೊಳ್ಳಲು ಹೊರಟನು. ಒಬ್ಬರು ಮತ್ತೊಬ್ಬರ ಜಾತಿಯನ್ನು ಹೀಯಾಳಿಸುವ ಘಟನೆಗಳು ಮಧುಗಿರಿ ಮತ್ತು ಪಾವಗಡ ನಾಯಕರ ಚರಿತ್ರೆಯಲ್ಲೂ ದಾಖಲಾಗಿದೆ. ಹಿರಿಮದಕರಿನಾಯಕನು ಗುಡೇಕೋಟೆಯ ಸುತ್ತಮುತ್ತಲ ಪ್ರದೇಶಗಳನ್ನೆಲ್ಲಾ ಕೊಳ್ಳೆ ಹೊಡೆದು ೩ ವರ್ಷಗಳ ಕಾಲ ನಿರಂತರವಾಗಿ ಕೋಟೆಗೆ ಮುತ್ತಿಗೆ ಹಾಕಿದನು. ಕ್ರಿ.ಶ. ೧೭೩೪ರ ಪ್ರಮೋದೀಚ ಸಂವತ್ಸರ ಆಷಾಢ ಮಾಸದಲ್ಲಿ ಚೋರಮನೂರು, ಗುಡಿಕೋಟೆಯನ್ನು ದುರ್ಗದವರು ವಶಪಡಿಸಿಕೊಂಡರು.[೩೩] ಗುಡಿಕೋಟೆಯನ್ನು ಕಳೆದುಕೊಂಡ ಜಟ್ಟಂಗರಾಜ ತನ್ನ ಮಗನಾದ ಇಮ್ಮಡಿ ಜಟ್ಟಂಗರಾಜನನ್ನು ಕೋಟೆಯೊಳಗೆ ಬಿಟ್ಟು ಪಲಾಯನ ಮಾಡಿದನು. ಆ ಸಂದರ್ಭದಲ್ಲಿ ಇವರ ವಂಶದಲ್ಲೇ ನಡೆಯಬಾರದ ಘಟನೆಯೊಂದು ಜರುಗಿ ಹೋಗುತ್ತದೆ. ಅದನ್ನು ಮೆಕಂಜಿ ಇಂಗ್ಲೀಷ್ ದಾಖಲೆಯು ಹೀಗೆ ತಿಳಿಸುತ್ತದೆ.[೩೪]

*"In his absence his son Immadi Jattinga Raja then a youth took his stepmother to her bed without fear or consideration that it is forbidden by the laws"*

ಜಟ್ಟಿಂಗರಾಜ ಗುಡಿಕೋಟೆಯಲ್ಲಿ ಇಲ್ಲದೇ ಇದ್ದಾಗ ಅವನ ಮಗ ಹದಿಹರೆಯದ ಯುವಕ ಇಮ್ಮಡಿ ಜಟ್ಟಿಂಗ ರಾಜನು ತನ್ನ ಮಲತಾಯಿಯ ಮೇಲೆಯೇ ಅತ್ಯಾಚಾರ ಮಾಡಿದನು. ತನ್ನ ಮಗನ ಅನುಚಿತ ನಡವಳಿಕೆಯಿಂದ ಬೇಸತ್ತ ಜಟ್ಟಿಂಗರಾಜನು ಗುಡೇಕೋಟೆಗೆ ಆಗಮಿಸಿ ಕುಲನಿಯಮಗಳಿಗೆ ಅನುಸಾರವಾಗಿ ಅವನಿಗೆ ಮರಣ ದಂಡನೆ ವಿಧಿಸಲು ಸಿದ್ಧತೆ ನಡೆಸಿದನು. ಆದರೆ ಇಮ್ಮಡಿ ಜಟ್ಟಿಂಗರಾಜನು ತನ್ನ ತಂದೆಯು ಬರುವವರೆಗೂ ಕಾಯದೆ ಅವರಿಗೆ ಮುಖವನ್ನು ಕೂಡಾ ತೋರಿಸದೆ ಶಿಕ್ಷೆಗೆ ಹೆದರಿ ಅರಮನೆಯಿಂದಲೇ ಪಲಾಯನ ಮಾಡಿದನು. ಆದುದರಿಂದ ಗುಡೇಕೋಟೆ ನಾಯಕನು ತನ್ನ ಎರಡನೇ ಪುತ್ರ ರಾಮಪ್ಪ ನಾಯಕ (ಕನಕಗಿರಿ ವಂಶದ ನಾಗತಿಯ ಪುತ್ರ)ನನ್ನು ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದನು. ಅವನು ಚಿತ್ರದುರ್ಗ ದವರ ವಿರುದ್ಧ ಸುಮಾರು ನಾಲ್ಕು ವರ್ಷಗಳ ಕಾಲ ಕೋಟೆಯೊಳಗಡೆ ಇದ್ದುಕೊಂಡು ಹೋರಾಟ ನಡೆಸಿದನು. ಶತ್ರುಗಳು ಜಟ್ಟಿಂಗರಾಜನ ಬೆನ್ನತ್ತಿದರು. ಕೋಟೆ ಬಾಗಿಲು ತೆರೆಯಲಿಲ್ಲ. ಕೋಟೆಯ ಒಳಗಡೆ ಸಂಗ್ರಹಿಸಿಟ್ಟಿದ್ದ ಆಹಾರ ಪದಾರ್ಥಗಳೆಲ್ಲಾ ಖಾಲಿಯಾಗ ತೊಡಗಿದವು. ಹರಪನಹಳ್ಳಿ ಪಾಳೇಗಾರರ ಸಹಾಯ ಪಡೆದಿದ್ದ ಜಟ್ಟಿಂಗರಾಜನ ಎಲ್ಲಾ ಸಹಾಯಕ ಮಾರ್ಗಗಳನ್ನು ದುರ್ಗದವರು ಕಂಡುಹಿಡಿದು ಮುಚ್ಚಿದರು. ಇದರಿಂದ ಎಚ್ಚೆತ್ತುಗೊಂಡ ಜಟ್ಟಿಂಗರಾಜ ಗುಡೇಕೋಟೆಯ ಮೇಲಿನ ಒತ್ತಡವನ್ನು ಕಡಿಮೆಗೊಳಿಸಲು ತನ್ನೆಲ್ಲಾ ಪತ್ನಿಯರನ್ನು ಚಿತ್ರದುರ್ಗ ವಂಶದ ತನ್ನ ರಾಣಿ ಚಿಕ್ಕನಾಗತಿಯ ರಕ್ಷಣೆಯಲ್ಲಿಟ್ಟು ತನ್ನ ಮಗ ರಾಮಪ್ಪನಾಯಕ ನೊಂದಿಗೆ ಹರಪನಹಳ್ಳಿಗೆ ಪಲಾಯನ ಮಾಡಿದನು. ಏಕೆಂದರೆ ಅಂದಿನ ಸನ್ನಿವೇಶದಲ್ಲಿ ಜಟ್ಟಿಂಗ ರಾಜನಿಗೆ ಇದು ಅನಿವಾರ್ಯ ವಾಗಿದ್ದು ಅವನ ರಾಜಕೀಯ ಭವಿಷ್ಯದ ಉಳಿವಿನ ಪ್ರಶ್ನೆ ಯಾಗಿತ್ತು. ಮತ್ತು ಚಿತ್ರದುರ್ಗದ ಹಿರಿಮದಕರಿನಾಯಕನ ಸೋದರಿಯ ಮತ್ತು ತನ್ನ ರಾಣಿಯ ಆಶ್ರಯದಲ್ಲಿ ಗುಡೇಕೋಟೆಯೊಳಗೆ ಇನ್ನುಳಿದ ರಾಣಿಯರನ್ನು ಇಟ್ಟಿದ್ದು ಅವನ ರಾಜಕೀಯ ಚತುರತೆಗೆ ಉದಾಹರಣೆಯಾಗಿದೆ.

ಚಿತ್ರದುರ್ಗದ ಹಿರಿಮದಕರಿನಾಯಕನು ತನ್ನ ವಂಶಕ್ಕೆ ಅಪಮಾನ ಮಾಡಿದ ಗುಡೇಕೋಟೆ ಪಾಳೆಯಗಾರ ಜಟ್ಟಿಂಗ ರಾಜನನ್ನು ಹಿಡಿದು ಶಿಕ್ಷಿಸಲೇಬೇಕೆಂಬ ಹಠದಿಂದ ಅನೇಕ ಬಾರಿ ಆಕ್ರಮಣ ಮಾಡಿದರೂ ಅವನು ಕೈಗೆ ಸಿಕ್ಕದೆ ಪಲಾಯನ ಮಾಡುತ್ತಿದ್ದನು. ಆದರೆ ಈ ಬಾರಿ ಸೇನೆಯ ನಾಯಕತ್ವವನ್ನು ತಾನೇ ವಹಿಸಿಕೊಂಡು ಹಿರಿ ಮದಕರಿಯು ಗುಡೇಕೋಟೆಯ ಮೇಲೆ ಆಕ್ರಮಣ ಮಾಡಿದನು. ಕ್ರಿ.ಶ. ೧೭೩೬ರ ರಾಕ್ಷಸ ಮಾಸದಲ್ಲಿ ಕೋಟೆಯ ಮೇಲೆ ಆಕ್ರಮಣ ಮಾಡಿ ಗೆದ್ದು ಕೊಂಡನು.[೩೫] ಸ್ವತಃ ತಾನೇ ಕೋಟೆಯೊಳಗೆ ಪ್ರವೇಶಿಸಿ ತನ್ನ ಸೋದರಿಯನ್ನು ಭೇಟಿಯಾಗಿ ಮಾತುಕತೆ ನಡೆಸಿದನು. ತನ್ನ ರಕ್ಷಣೆಯಲ್ಲಿ ಇರಲು ಬಯಸುವುದಾದರೆ ಅವಳಿಗೆ ಮತ್ತು ಅವಳ ಹತ್ತಿರದ ಸಂಬಂಧಿಕರೆಲ್ಲರಿಗೂ ಜಾಗೀರನ್ನು ಕೊಡುತ್ತೇನೆಂಬ ಭರವಸೆ ನೀಡಿದನು. ಅದನ್ನು ರಾಣಿ ಚಿಕ್ಕ ನಾಗತಿ ಮತ್ತು ಉಳಿದ ರಾಣಿಯರು ತಿರಸ್ಕರಿಸಿದರು.[೩೬] ಇದರಿಂದ ನಿರಾಶನಾದ ಹಿರಿಮದಕರಿ ನಾಯಕನು ತನ್ನ ಸೋದರಿಗೆ ಯಾವುದೇ ತೊಂದರೆ ನೀಡದೆ ಕೋಟೆಯನ್ನು ತನ್ನ ಸೇನಾನಾಯಕರಿಗೆ ವಹಿಸಿ ದುರ್ಗಕ್ಕೆ ಹಿಂತಿರುಗಿದನು. ಹೀಗೆ ಗುಡೇಕೋಟೆ ದುರ್ಗದವರ ಅಧೀನಕ್ಕೆ ಒಳಪಟ್ಟಿತು. ಚಿತ್ರದುರ್ಗದವರ ಅಧೀನದಲ್ಲಿರುವ ಕೋಟೆಯೊಳಗೆ ಇರಲು ಬಯಸದ ಚಿಕ್ಕನಾಗತಿ ಮತ್ತು ಉಳಿದವರು ತಮ್ಮ ಪತಿಯನ್ನು ಸೇರಿಕೊಳ್ಳಲು ಹರಪನಹಳ್ಳಿಗೆ ಹೋದರು.

ಇದೇ ಸಂದರ್ಭದಲ್ಲಿ ಗುಡೇಕೋಟೆಯ ರಾಮಪ್ಪ ನಾಯಕನು ಕನಕಗಿರಿಗೆ ಹೋಗಿ ಸೇನಾಸಹಾಯ ಪಡೆದು ಕೊಂಡು ಗುಡೇಕೋಟೆಯನ್ನು ವಶಕ್ಕೆ ತೆಗೆದುಕೊಳ್ಳುವ ಯೋಜನೆಯನ್ನು ರೂಪಿಸಿದನು. ಕನಕಗಿರಿಯವರ ಸಹಾಯ ದಿಂದ ಅವನು ಕುಡತಿನಿ, ಕೊಡೆಕಲ್‌ಗಳನ್ನು ಗೆದ್ದುಕೊಂಡಿದ್ದು, ಅಲ್ಲದೇ ಚಿತ್ರದುರ್ಗದವರ ರಕ್ಷಣೆಯಲ್ಲಿದ್ದ ಅನೇಕ ಕೋಟೆ ಗಳನ್ನು ೩ ವರ್ಷಗಳ ಕಾಲ ಲೂಟಿ ಹೊಡೆದು ಆ ಭಾಗದಲ್ಲಿ ತನ್ನ ಪ್ರಭುತ್ವ ಸ್ಥಾಪಿಸಿ ಮತ್ತೊಮ್ಮೆ ಗುಡೇಕೋಟೆ ಯನ್ನು ವಶಪಡಿಸಿಕೊಂಡು ಆಳ್ವಿಕೆ ಮಾಡಲಾರಂಭಿಸಿದನು.

ಈ ವೇಳೆಗಾಗಲೇ ಚಿತ್ರದುರ್ಗದಲ್ಲಿ ಹಿರಿಮದಕರಿ ನಾಯಕನು ಮರಣ ಹೊಂದಿದ್ದನು. ನಂತರ ಬಂದ ಇಮ್ಮಡಿ ಕಸ್ತೂರಿರಂಗಪ್ಪನಾಯಕನು ಇನ್ನು ಸರಿಯಾಗಿ ರಾಜ್ಯದಲ್ಲಿ ಪ್ರತಿಷ್ಠಾಪಿತನಾಗಿರಲಿಲ್ಲವಾಗಿದ್ದುದು ಗುಡೇಕೋಟೆಯವರೆಗೆ ವರದಾನವಾಗಿತ್ತು. ಚಿತ್ರದುರ್ಗದವರ ಉಪಟಳದಿಂದ ತಾತ್ಕಾಲಿಕವಾಗಿಯಾದರೂ ವಿಮೋಚನೆ ಹೊಂದಿದ ಇವರಿಗೆ ಮತ್ತೊಂದು ಆಘಾತವು ಕಾದಿತ್ತು. ಅದನ್ನು ದಾಖಲೆಯು ಹೀಗೆ ಸೃಷ್ಟಿಪಡಿಸಿದೆ.[೩೭] ಗುತ್ತಿಯ ಮುರಾರಿರಾಯನು ಗುಡೆಕೋಟೆಯ ಮೇಲೆ ಆಕ್ರಮಣ ಮಾಡಿ ಅಲ್ಲಿದ್ದ ರಾಮಪ್ಪನಾಯಕ ಮತ್ತು ಆತನ ಕುಟುಂಬವರ್ಗದವರನ್ನು ಕೋಟೆಯಿಂದ ಹೊರಹಾಕಿದನು. ಹೀಗೆ ನೆಲೆ ಕಳೆದುಕೊಂಡ ರಾಮಪ್ಪನು ತನ್ನ ತಂದೆ ಜಟ್ಟಿಂಗರಾಜನೊಂದಿಗೆ ಕನಕಗಿರಿಗೆ ಹೋಗಿ ಕೆಲವು ವರ್ಷಗಳ ಕಾಲ ಅವನ ಆಶ್ರಯದಲ್ಲೇ

ಇದ್ದನು. ಹೀಗೆ ಗುಡೇಕೋಟೆ ಚಿತ್ರದುರ್ಗದವರಿಂದ ಗುತ್ತಿಯ ಮುರಾರಿರಾಯನ ಅಧಿನಕ್ಕೆ ಒಳಪಟ್ಟಿತು. ಆ ಕೋಟೆಯ ಮೇಲೆ ಇನ್ನೂ ಆಸೆ ಇಟ್ಟುಕೊಂಡಿದ್ದ. ಪಾಳೆಯಗಾರರಿಗೆ ಅದನ್ನು ಪಡೆದುಕೊಳ್ಳುವ ಮತ್ತೊಂದು ಅವಕಾಶವು ಹೈದರಾಲಿಯು ಚಿತ್ರದುರ್ಗದವರ ಮೇಲೆ ದಂಡೆತ್ತಿ ಬಂದಾಗ ಒದಗಿ ಬಂತು.

ಹೈದರಾಲಿಯ ಉತ್ತರದ ದಾಳಿಯಲ್ಲಿ ಚಿತ್ರದುರ್ಗ ದವರು ಅವನಿಗೆ ತನು ಮನ ಧನಗಳಿಂದ ಸಹಾಯ ಮಾಡಿದ್ದರೂ ಹೈದರನು ಅವರನ್ನು ಸಂಪೂರ್ಣವಾಗಿ ನಂಬಿರಲಿಲ್ಲ. ರಾಜ್ಯ ವಿಸ್ತರಣೆಯಲ್ಲಿ ಶಿನೇ ಮದಕರಿ ನಾಯಕನೇ ಅಡ್ಡಗೋಡೆಯೆಂದು ಭಾವಿಸಿದ, ಹೈದರನು ಅವನನ್ನು ಮಟ್ಟ ಹಾಕಲು ನಿರ್ಧರಿಸಿ ದುರ್ಗದ ಮೇಲೆ ದಾಳಿ ಮಾಡಿದನು. ಚಿತ್ರದುರ್ಗದವರ ಉಪಟಳಕ್ಕೆ ತುತ್ತಾಗಿ ಅವರ ಶತ್ರುವಾಗಿದ್ದ ಕನಕಗಿರಿ ಪಾಳೆಯಗಾರರು ಸೇನಾ ಸಮೇತರಾಗಿ ಹೈದರಾಲಿಗೆ ಸಹಾಯ ಮಾಡಲು ಹೊರಟರು. ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ಗುಡಿಕೋಟೆ ರಾಮಪ್ಪನಾಯಕನು ನಿರ್ಧರಿಸಿದನು. "ಕನಕಗಿರಿ ಪಾಳೆಯ ಗಾರರ ಆಶ್ರಯದಲ್ಲಿದ್ದ ರಾಮಪ್ಪನಾಯಕನು ತನ್ನ ಅಳಿದುಳಿದ ದಂಡಿನ ಸಮೇತ ಕನಕಗಿರಿಯವರೊಂದಿಗೆ ಹೈದರಾಲಿಗೆ ಸಹಾಯ ಮಾಡಲು ಹೋಗಿ ಯುದ್ಧದಲ್ಲಿ ಹೈದರನ ಗಮನ ಸೆಳೆದನು." ಯುದ್ಧ ಮುಗಿದ ನಂತರ ಹೈದರನು ಕೊಡಗಿನ ದಾಳಿಯಲ್ಲಿ ನಿರತನಾದನು. ಚಿತ್ರದುರ್ಗದವರ ವಿರುದ್ಧ ನಡೆದ ಯುದ್ಧದಲ್ಲಿ ಗಮನ ಸೆಳೆದಿದ್ದ ರಾಮಪ್ಪನಾಯಕನನ್ನು ಹೈದರನು ಶ್ರೀರಂಗಪಟ್ಟಣಕ್ಕೆ ಆಹ್ವಾನಿಸಿ ಅವನನ್ನು ಈ ದಾಳಿಗೆ ನಿಯೋಜಿಸಿದನು. ಆಸ್ಥಾನದಲ್ಲಿ ರಾಮಪ್ಪನಾಯಕನ ಸಾಹಸವನ್ನು ಕೊಂಡಾಡಿದ ಹೈದರನು ಅವನಿಗೆ ಖಿಲ್ಲತ್ (ಗೌರವಕ್ಕಾಗಿ ಕೊಡುವ ರಾಜವಸ್ತ್ರ) ಸಮಾರಂಭ ಏರ್ಪಡಿಸಿ ಅವನನ್ನು ಗುಡಿಕೋಟೆ ಸಂಸ್ಥಾನದಲ್ಲಿ ಪುನರ್ ಪ್ರತಿಷ್ಠಾಪಿ ಸುವ ಭರವಸೆ ನೀಡಿದನು. ಇದರಿಂದ ಸಂತೋಷಗೊಂಡ ರಾಮಪ್ಪನಾಯಕನು ಹೈದರಾಲಿಯ ಸೇನೆಯೊಂದಿಗೆ ಕೊಡಗಿಗೆ ತೆರಳಿದನು. ಅಲ್ಲಿ ನಡೆದ ಯುದ್ಧದಲ್ಲಿ ಮರಣ ಹೊಂದಿದನು.

ಕ್ರಿ.ಶ. ೧೭೭೮ರ ವೇಳೆಗೆ ಹೈದರನು ಚಿತ್ರದುರ್ಗದವರ ಪ್ರಾಬಲ್ಯವನ್ನು ಮುರಿದು ಘಟ್ಟ ಪ್ರದೇಶಗಳ ಕಡೆಗೆ ಹೊರಟನು. ಹೈದರನ ಮರಣಾನಂತರ ಕ್ರಿ.ಶ. ೧೭೮೨ರಲ್ಲಿ ಟಿಪ್ಪುಸುಲ್ತಾನನು ಅಧಿಕಾರಕ್ಕೆ ಬಂದನು. ಸಣ್ಣ ಪುಟ್ಟ ಪಾಳೆಪಟ್ಟುಗಳ ಕಡುದ್ವೇಷಿಯಾಗಿದ್ದ ಅವನು ಎಲ್ಲಾ ಸಂಸ್ಥಾನಗಳನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡು ಬಲಾಢ್ಯನಾಗಿದ್ದನು. ಈ ಸನ್ನಿವೇಶದಲ್ಲಿ ಗುಡೆಕೋಟೆಯೂ ಕೂಡ ಮೈಸೂರಿನವರ ನಿಯಂತ್ರಣದಲ್ಲಿತ್ತು. ರಾಮಪ್ಪ ನಾಯಕನ ಮಕ್ಕಳಿಗೆ ಆ ಸಂಸ್ಥಾನವನ್ನು ಬಿಟ್ಟುಕೊಡುವ ಆಲೋಚನೆಯನ್ನು ಟಿಪ್ಪುಸುಲ್ತಾನನು ಹೊಂದಿರಲಿಲ್ಲ. ಟಿಪ್ಪುಸುಲ್ತಾನನನ್ನು ದ್ವೇಷಿಸುತ್ತಿದ್ದ ಇಂಗ್ಲೀಷರು ಅವನ ವಿರುದ್ಧ ಬಲಾಢ್ಯ ಸೇನಾಕೂಟ ರಚಿಸಿಕೊಂಡು ಅವನನ್ನು ಮುಗಿಸುವ ತಂತ್ರವನ್ನು ರೂಪಿಸಿದ್ದರು. ಈ ಕೂಟದಲ್ಲಿ ಮರಾಠರೂ ಕೂಡ ಸೇರಿಕೊಂಡಿದ್ದರು. ಆದ್ದರಿಂದ ಮರಾಠರು ಪರುಶುರಾಂ ಬಾಹುವಿನ ನಾಯಕತ್ವದಲ್ಲಿ ಇಂಗ್ಲೀಷರ ಲಾರ್ಡ್ ಕಾರ್ನ್‌ವಾಲೀಸನ ನೆರವಿಗೆ ಸೇನೆ ಕಳುಹಿಸಿದರು. ಅವನು ಟಿಪ್ಪುವಿಗೆ ಸೇರಿದ್ದ ಬಳ್ಳಾರಿ ಜಿಲ್ಲೆಯ ಅನೇಕ ಕೋಟೆಗಳನ್ನು ಮಾರ್ಗಮಧ್ಯೆ ಲೂಟಿ ಹೊಡೆದು ತನ್ನ ಅಧೀನಕ್ಕೆ ಒಳಪಡಿಸಿ ಕೊಂಡಿದ್ದನು. ಈ ಅವಕಾಶವನ್ನುಪ ಯೋಗಿಸಿಕೊಂಡು ಗುಡೇಕೋಟೆ ಪಾಳೆಯಗಾರ ರಾಮಪ್ಪ ನಾಯಕನ ಮಕ್ಕಳಾದ ರಾಮಲಿಂಗರಾಜ ಮತ್ತು ಬೊಮ್ಮಂತ ರಾಜರು ಶ್ರೀರಂಗ ಪಟ್ಟಣದಿಂದ ತಪ್ಪಿಸಿಕೊಂಡು ಗುಡೇಕೋಟೆ ಸೇರಿದರು. ಮರಾಠರೊಂದಿಗೆ ೩೦ ಸಾವಿರ ರೂ.ಗಳ ವಾರ್ಷಿಕ ಕಾಣಿಕೆ ನೀಡುವ ಒಪ್ಪಂದಕ್ಕೆ ಸಹಿ ಹಾಕಿ ಗುಡೇಕೋಟೆ ಪಡೆದು ಕೊಂಡು ಪುನಃ ಆಳ್ವಿಕೆ ಮಾಡತೊಡಗಿದರು.[೩೮]

ಕ್ರಿ.ಶ. ೧೭೯೨ರಲ್ಲಿ ಮೂರನೇ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಬ್ರಿಟೀಷರೊಂದಿಗೆ ಶ್ರೀರಂಗಪಟ್ಟಣ ಶಾಂತಿ ಒಪ್ಪಂದಕ್ಕೆ ಸಹಿ ಹಾಕಿದನು. ಟಿಪ್ಪುಸುಲ್ತಾನನ ಪತನ ಖಚಿತವೆಂದು ನಂಬಿದ್ದ ಗುಡೇಕೋಟೆ ಪಾಳೆಯಗಾರರು ಈ ಒಪ್ಪಂದದಿಂದ ಟಿಪ್ಪುವಿಗೆ ಹೆದರಿ ತಮ್ಮ ಪರಿವಾರ ದೊಂದಿಗೆ ಗುಡೇಕೋಟೆಯಿಂದ ಪಲಾಯನ ಮಾಡಿದರು.[೩೯]

ಟಿಪ್ಪುಸುಲ್ತಾನನ ಅಧಿಕಾರಿಗಳು ಹರಪ್ಪನಹಳ್ಳಿ ಮತ್ತು ಆನೆಗೊಂದಿ ಪಾಳೆಯಗಾರರನ್ನು ಅನೇಕ ಬಾರಿ ಅಲ್ಲಿಂದ ಹೊರ ಹಾಕಿದ್ದರೂ ಅವರು ಪುನಃ ತಮ್ಮ ಪಟ್ಟಣಗಳಿಗೆ ಹಿಂತಿರುಗಿದ್ದೂ ಅಲ್ಲದೆ ನಾಲ್ಕೈದು ಸಾವಿರ ಸೈನಿಕರನ್ನು ಕಟ್ಟಿಕೊಂಡು ಆ ಪ್ರದೇಶಗಳನ್ನು ಕೊಳ್ಳೆ ಹೊಡೆಯುತ್ತಿದ್ದರು. ಈ ಅವಕಾಶವನ್ನು ಉಪಯೋಗಿಸಿಕೊಂಡು ಪಲಾಯನ ಗೈದಿದ್ದ ಗುಡೇಕೋಟೆ ಪಾಳೆಯಗಾರರು ಕೂಡ ತಮ್ಮ ಸಂಸ್ಥಾನಕ್ಕೆ ಹಿಂತಿರುಗಿ ಅದನ್ನು ಬಲವಂತದಿಂದ ಆಕ್ರಮಿಸಿ ಆಳತೊಡಗಿದರು. ಒಂದು ವರ್ಷ ಕಾಲ ತಮ್ಮ ವಶದಲ್ಲಿ ಗುಡೇಕೋಟೆ ಸಂಸ್ಥಾನವನ್ನು ಇಟ್ಟುಕೊಂಡಿದ್ದರು. "ಈ ಭಾಗದ ಪಾಳೆಯಗಾರರ ಉಪಟಳವನ್ನು ಹತ್ತಿಕ್ಕಲು ನಿರ್ಧರಿಸಿದ ಟಿಪ್ಪುಸುಲ್ತಾನನು ಕ್ರಿ.ಶ. ೧೭೯೩ರಲ್ಲಿ ಖಾನ್-ಜಹಾನ್-ಖಾನ್ ಮತ್ತು ಮೀರ್-ಕಮರುದ್ದೀನ್-ಖಾನ್‌ನ ನೇತೃತ್ವದಲ್ಲಿ ಸೇನೆಯನ್ನು ಕಳುಹಿಸಿದನು. ಆ ಸೇನೆ ಮೊದಲು

ಶ್ರೀರಂಗಪಟ್ಟಣದಿಂದ ಪಲಾಯನ ಮಾಡಿದ ಗುಡೇಕೋಟೆ ಸಂಸ್ಥಾನದ ಗಿರಿದುರ್ಗದ ಮೇಲೆ ಆಕ್ರಮಣ ಮಾಡಿತು. ೩ ದಿನಗಳ ಕಾಲ ಹೋರಾಟ ಸಂಭವಿಸಿತು. ಎರಡೂ ಕಡೆ ಅನೇಕರು ಬಲಿಯಾದರು ಕೊನೆಗೆ ಪಾಳೆಯಗಾರರ ಸಹೋದರರಿಬ್ಬರು ಕೆಲವೇ ಸೈನಿಕರೊಂದಿಗೆ ಬಲಾಢ್ಯ ಸೈನ್ಯದ ವಿರುದ್ಧ ಹೋರಾಡಲು ಮತ್ತು ಕೋಟೆಯನ್ನು ರಕ್ಷಿಸಲು ಸಾಧ್ಯವಿಲ್ಲವೆಂದು ಮನಗಂಡು ರಾತ್ರಿಯ ವೇಳೆ ತಮ್ಮ ಕುಟುಂಬದವರೊಂದಿಗೆ ಗುಡೇಕೋಟೆಯನ್ನು ಬಿಟ್ಟು ಓಡಿ ಹೋದರು. ಮಾರನೆಯ ಬೆಳಿಗ್ಗೆ ಟಿಪ್ಪುವಿನ ಸೈನಿಕರು ಗುಡೇಕೋಟೆಯನ್ನು ಸುಲಭವಾಗಿ ಪ್ರವೇಶಿಸಿ ಪಾಳೆಯ ಗಾರರಿಗೆ ಹುಡುಕಾಟ ನಡೆಸಿದರೂ ಪ್ರಯೋಜನವಾಗಲಿಲ್ಲ. ಇದರಿಂದ ಹತಾಶರಾದ ಸೈನಿಕರು ಇಡೀ ಕೋಟೆಯನ್ನೇ ನಾಶಪಡಿಸಿ ಅದನ್ನು ಮತ್ತೊಮ್ಮೆ ಪಾಳೆಯಗಾರರ ಅಡಗುತಾಣ ವಾಗದಂತೆ ಮಾಡಿದರು."[೪೦]

ಶ್ರೀರಂಗಪಟ್ಟಣದ ಒಪ್ಪಂದದಿಂದ ಅಪಮಾನಿತನಾಗಿದ್ದ ಟಿಪ್ಪುಸುಲ್ತಾನನು ಬ್ರಿಟೀಷರ ವಿರುದ್ಧ ತನ್ನ ಬಲವನ್ನು ವೃದ್ಧಿ ಪಡಿಸಿಕೊಳ್ಳುತ್ತಿದ್ದನು. ಅಂತಿಮ ಯುದ್ಧಕ್ಕೆ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುವ ಪ್ರಯತ್ನದಲ್ಲಿದ್ದನು. ಬ್ರಿಟೀಷರೂ ಕೂಡ ಟಿಪ್ಪುವನ್ನು ಅಂತಿಮವಾಗಿ ಮುಗಿಸಲೇ ಬೇಕೆಂಬ ಹಠ ತೊಟ್ಟಿದ್ದರು. ಈ ಸಂದರ್ಭದಲ್ಲಿ ಟಿಪ್ಪುವಿನ ರಾಜ್ಯದಲ್ಲಿ ಶಾಂತಿ ನೆಲೆಸಿ, ಹಣಕಾಸು ಪರಿಸ್ಥಿತಿ ಉತ್ತಮ ಗೊಂಡಿತ್ತು. ಶ್ರೀರಂಗಪಟ್ಟಣದ ಒಪ್ಪಂದ ರೂಪಿಸಿದ್ದ ಶಕ್ತಿ ಸಮತೋಲನ ಅಸ್ತವ್ಯಸ್ಥೆಗೊಂಡಿತ್ತು. ಆದುದರಿಂದ ಬ್ರಿಟೀಷರು ಭಾರತದಲ್ಲಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಲು ಎಂಥದೇ ಬೆಲೆ ತೆತ್ತಾದರೂ ಟಿಪ್ಪುವನ್ನು ನಿರ್ಮೂಲ ಮಾಡಲೇಬೇಕು ಎಂಬ ಆದೇಶದಿಂದ ಲಾರ್ಡ್‌ವೆಲ್ಲೆಸ್ಲಿಯನ್ನು ಭಾರತಕ್ಕೆ ಕಳುಹಿಸಿದರು. ಅವನು ಬಂದವನೆ ಶ್ರೀರಂಗಪಟ್ಟಣದ ಒಪ್ಪಂದದ ಅಂಶಗಳನ್ನು ಟಿಪ್ಪು ಉಲ್ಲಂಘಿಸಿದ್ದಾನೆಂದು ಆಪಾದಿಸಿ ಅವನ ವಿರುದ್ಧ ಯುದ್ಧ ಘೋಷಿಸಿದನು. ಕ್ರಿ.ಶ. ೧೭೯೮ರ ಕಾಳಾಯುಕ್ತಿ ಸಂವತ್ಸರದ ಮಾಘ ಮಾಸ ದಲ್ಲಿ ಇಂಗ್ಲೀಷರ ಸೈನ್ಯ ಟಿಪ್ಪುವಿನ ವಿರುದ್ಧ ಹೋರಾಡಲು ಹೊರಟಿತು. ಈ ಅವಕಾಶವನ್ನುಪಯೋಗಿಸಿ ಕೊಂಡ ಗುಡೇಕೋಟೆಯ ಪಾಳೆಯಗಾರ ಬೊಮ್ಮಂತರಾಜ; ಟಿಪ್ಪುಸುಲ್ತಾನನ ಗಮನ ಬ್ರಿಟೀಷರ ಕಡೆಗೆ ಹೋಗಿದ್ದುದನ್ನು ಗಮನಿಸಿ ಮತ್ತು ಗುಡೇಕೋಟೆಯಲ್ಲಿದ್ದ ಸೈನ್ಯವನ್ನು ಟಿಪ್ಪು ಹಿಂತೆಗೆದುಕೊಂಡ ಮೇಲೆ ಆ ಕೋಟೆಯ ಮೇಲೆ ಆಕ್ರಮಣ ಮಾಡಿ ಪುನಃ ತನ್ನ ಆಳ್ವಿಕೆಯನ್ನು ಆರಂಭಿಸಿದನು. ಕ್ರಿ.ಶ. ೧೭೯೮ರ ಮಾಘ ಮಾಸದಿಂದ ಕ್ರಿ.ಶ. ೧೭೯೯ರ ಶ್ರಾವಣ ಮಾಸದವರೆಗೂ ಕಂದಾಯವನ್ನು ಸಂಗ್ರಹಿಸಿದನು.[೪೧] ಕ್ರಿ.ಶ. ೧೭೯೯ರಲ್ಲಿ ಬ್ರಿಟೀಷರಿಗೂ ಮತ್ತು ಟಿಪ್ಪುಸುಲ್ತಾನನಿಗೂ ೪ನೇ ಮೈಸೂರು ಯುದ್ಧ ಜರುಗಿದಾಗ ಟಿಪ್ಪುಸುಲ್ತಾನನು ಯುದ್ಧದಲ್ಲಿ ಮೃತನಾದನು. ಅವನ ಇಡೀ ಪ್ರಾಂತ್ಯ ಬ್ರಿಟೀಷರ ವಶವಾಯಿತು. ಮುಂದೆ ಮೈಸೂರು ರಾಜ್ಯದ ವ್ಯವಸ್ಥೆಗಾಗಿ ವೆಲ್ಲೆಸ್ಲಿಯು ಜನರಲ್ ಹ್ಯಾರಿಸ್, ಕರ್ನಲ್ ವೆಲ್ಲೆಸ್ಲಿ, ಹೆನ್ರಿವೆಲ್ಲೆಸ್ಲಿ, ಲೆ.ಕೆ. ಕಿರ್ಕ್‌ಪ್ಯಾಟ್ರಿಕ್ ಹಾಗೂ ಲೆ.ಕ. ಬ್ಯಾರಿಕ್ಲೋಸ್‌ರವರ ನ್ನೊಳಗೊಂಡ ಒಂದು ಆಯೋಗವನ್ನು ನೇಮಕ ಮಾಡಿ ದನು. ಅವರ ವರದಿಯ ಪ್ರಕಾರ ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ಮಾಡಲಾಯಿತು. ಗುಡೇಕೋಟೆಯ ನ್ನೊಳಗೊಂಡ ಅನೇಕ ಪ್ರದೇಶಗಳು ನಿಜಾಮನ ಪಾಲಿಗೆ ಹೋದವು. ಈ ಸನ್ನಿವೇಶದಲ್ಲಿ ಪಾಳೆಯಗಾರ ಬೊಮ್ಮಂತ ರಾಜ, ಜನರಲ್ ಹ್ಯಾರಿಸ್ ಮತ್ತು ಲೆ.ಕ. ಬ್ಯಾರಿಕ್ಲೋಸರನ್ನು ಭೇಟಿಯಾಗಿ ಪಾಳೆಯಪಟ್ಟಿನ ಒಡೆತನವನ್ನು ನೀಡುವಂತೆ ಮನವಿ ಮಾಡಿಕೊಂಡನು. ಅವರು ಅವನನ್ನು ಹೈದರಾಬಾದಿನ ಮೀರ್ ಆಲಮ್‌ನ ಬಳಿ ವರದಿ ಮಾಡಿಕೊಳ್ಳುವಂತೆ ಸೂಚಿಸಿದರು. ನಿಜಾಮನು ಬ್ರಿಟೀಷರ ಸಹಾಯಕ ಸೈನ್ಯ ಪದ್ಧತಿಗೆ ಒಪ್ಪಿ ಗುಡೇಕೋಟೆ ಪ್ರದೇಶವನ್ನು ದತ್ತಿ ಮಂಡಲ ವಾಗಿ (Ceded District) ಬಿಟ್ಟುಕೊಟ್ಟನು. ಹೀಗೆ ಈ ಪ್ರದೇಶ ಕ್ರಿ.ಶ. ೧೮೦೦ ರಲ್ಲಿ ಮದ್ರಾಸ್ ಅಧಿಪತ್ಯಕ್ಕೆ ಸೇರುತ್ತದೆ. ೧೮೦೩ರಲ್ಲಿ ಥಾಮಸ್ ಮನ್ರೋ, ಗುಡೇಕೋಟೆಗೆ ಭೇಟಿ ಕೊಟ್ಟನು. ಮೀರ್ ಆಲಮ್ ತನ್ನ ಬಳಿ ಇದ್ದ ಗುಡೇಕೋಟೆ ಬೊಮ್ಮಂತರಾಜನ ಹಕ್ಕುದಾರಿಕೆಯ ಅರ್ಜಿಯನ್ನು ಪರಿಶೀಲಿಸಿ ಮುಂದಿನ ಕ್ರಮಕ್ಕಾಗಿ ಕಲೆಕ್ಟರ್ ಥಾಮಸ್ ಮನ್ರೋನ ಕಛೇರಿಗೆ ರವಾನಿಸಿದನು. ಅವನು ಮೇಲಿನ ಅಧಿಕಾರಿಗಳ ಆದೇಶದಂತೆ ಎಲ್ಲಾ ಪಾಳೆಯಗಾರರ ಸಂಸ್ಥಾನಗಳನ್ನೆಲ್ಲಾ ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಅವರನ್ನು ರಾಜಕೀಯದಿಂದ ದೂರ ವಿರಲು ತೀರ್ಮಾನಿಸಿ ದರು. ಅದರಂತೆ ಗುಡೇಕೋಟೆ ಪಾಳೆಯಗಾರ ಬೊಮ್ಮಂತರಾಜನ ಜೀವನ ನಿರ್ವಹಣೆಗೆ ಹುಜೂರ ಖಜಾನೆಯಿಂದ ಮಾಸಿಕ ೫೦೦ ರೂಗಳ ವಿಶ್ರಾಂತಿ ವೇತನವನ್ನು ನಿಗದಿಪಡಿಸಿದನು. ಅದರಂತೆ ಬೊಮ್ಮಂತರಾಜನು ಈಗ ಮೈಸೂರು ರಾಜರಿಗೆ ಸೇರಿರುವ ಚೋರನೂರಿನಲ್ಲಿ ಸಂತೋಷದಿಂದ ಇದ್ದಾನೆಂದು ಮೆಕಂಜಿ ತಿಳಿಸಿದ್ದಾನೆ.[೪೨].

ಬಳ್ಳಾರಿ ಪ್ರದೇಶದ ಪಾಳೆಯಗಾರರು ತಮ್ಮನ್ನು ರಾಜಕೀಯದಿಂದ ದೂರವಿರುವ ಬ್ರಿಟೀಷರ ಕ್ರಮದ ವಿರುದ್ಧ ಒಳಗಿಂದೊಳಗೆ ಅಸಮಾಧಾನವಿದ್ದರೂ ಕೂಡಾ ಅದನ್ನು ಬಹಿರಂಗವಾಗಿ ತೋರ್ಪಡಿಸುವಂತಿರಲಿಲ್ಲ. ಅವರ ಜೀವನ ನಿರ್ವಹಣೆಗೆ ನೀಡುತ್ತಿದ್ದ ಮಾಸಿಕ ವಿಶ್ರಾಂತಿ ವೇತನವೂ

ಕೂಡಾ ತೃಪ್ತಿಯಾಗಲಿಲ್ಲ. ಇದೇ ಸಂದರ್ಭದಲ್ಲಿ ಕ್ರಿ.ಶ. ೧೮೨೮ರಲ್ಲಿ ಆ ಪ್ರದೇಶದಲ್ಲಿ ಕ್ಷಾಮ ಸಂಭವಿಸಿತು. ಪಾಳೆಯಗಾರ ಬೊಮ್ಮಂತರಾಜ ತನ್ನ ತಮ್ಮ ಲಿಂಗಪ್ಪ ಸಂಬಂಧಿ ರಾಮಪ್ಪಯ್ಯ ಮತ್ತಿತರ ಬೇಡ ಸಮುದಾಯದ ೫೦೦ ಜನರನ್ನು ಒಟ್ಟುಗೂಡಿಸಿ ಬ್ರಿಟೀಷರ ವಿರುದ್ಧ ದಂಗೆ ಎದ್ದನು. ಇದನ್ನು ಪಾಳೆಯಗಾರರ ದಂಗೆ ಎಂದು ಕರೆಯಲಾಗಿದೆ. ಬಳ್ಳಾರಿ ಜಿಲ್ಲೆಯ ಕಲೆಕ್ಟರನ ಆದೇಶದ ಮೇರೆಗೆ ಅಲ್ಲಿನ ಅಮಲ್ದಾರನು ಹಡಗಲಿ, ಹರಪನಹಳ್ಳಿಯಿಂದ ಪೋಲಿಸರನ್ನು ಕರೆಯಿಸಿ ದಂಗೆಯನ್ನು ಹತ್ತಿಕ್ಕಿದನು ಇಂತಹ ಬಂಡಾಯಗಳು ನಂತರ ೧೮೫೭ರಲ್ಲಿ ನಡೆದ ಬೃಹತ್ ಬಂಡಾಯಕ್ಕೆ ಸ್ಫೂರ್ತಿಯನ್ನು ನೀಡಿದ್ದರಲ್ಲಿ ಸಂದೇಹವಿಲ್ಲ ಎಂದು ಹೇಳಬಹುದು.

**ಗುಡೇಕೋಟೆ ಪಾಳೆಯಗಾರರ ವಂಶಾವಳಿ**

ಗಂಡಳನಾಯಕ (ಕ್ರಿ.ಶ. ೧೫೩೦)
|
ಪೆನ್ನಪ್ಪನಾಯಕ
|
ಪಾಪಳನಾಯಕ
|
ಕಮ್ಮಯ್ಯರಾಜ
|
ರಾಜಾ ತಿಮ್ಮಪ್ಪ ನಾಯಕ
|
ರಾಮರಾಜ
|
ಬೊಮ್ಮಂತರಾಜ – ಯರಿ ಬೊಮ್ಮಳನಾಯಕ
|
ಚಿನ್ನಯರಾಜ
|
ಜಟ್ಟಿಂಗರಾಜ
|
ಇಮ್ಮಡಿ ಜಟ್ಟಿಂಗರಾಜ — ರಾಮಪ್ಪನಾಯಕ

ರಾಮಪ್ಪನಾಯಕ
|
ರಾಮಲಿಂಗರಾಜ — ಇಮ್ಮಡಿ ಬೊಮ್ಮಂತರಾಜ (ಕ್ರಿ.ಶ. ೧೭೮೦–೧೮೨೮)



# ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಂ.ಎ.ಆರ್.** ೧೯೩೫, ಪುಟ. ೧೪೬, ೧೪೭, ೧೪೮.
೨. **ಕರ್ನಾಟಕದ ಕೈಫಿಯತ್ತುಗಳು,** ಎಂ.ಎಂ. ಕಲಬುರ್ಗಿ (ಸಂ)–ಪು. ೧೯೦, ೪೦೬, ೪೧೦, ೪೫೫, ೪೫೬, ೪೭೦, ೫೬೧. ಪ್ರಸಾರಾಂಗ, ಹಂಪೆ–೧೯೯೪.
೩. ಅದೇ., ಪು. ೩೧, ೫೧೦, ೫೧೧.
೪. **ಮ್ಯಾನುಯಲ್ ಆಫ್ ದಿ ಅಡ್ಮಿನಿಸ್ಟ್ರೇಶನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ**–ಸಂಪುಟ ೩.
೫. ಪ್ರಕಟಿತವಾಗದಿರುವ ಮೆಕಂಜಿ ಕೈಫಿಯತ್ತು.
೬ ವಿರೂಪಾಕ್ಷಿ ಪೂಜಾರಿಹಳ್ಳಿ., ೨೦೦೪, **ಬಳ್ಳಾರಿ ಜಿಲ್ಲೆಯ ಪಾಳೆಯಗಾರರು,** ಪು. ೧೩, ಪ್ರಸಾರಂಗ, ಹಂಪೆ.
೭. ಅದೇ.
೮. **ಎಂ.ಎ.ಆರ್.** ೧೯೩೫, ಪು. ೧೪೮, ೧೪೯, ಪುಟ ೧೪೬, ೧೪೭. **ಎ.ಆರ್.ಎಸ್.ಐ.ಇ.** ೧೯೨೪–೨೫, ನಂ. ೨೮೮.
೯. **ಕರ್ನಾಟಕದ ಕೈಫಿಯತ್ತುಗಳು.,** ಎಂ.ಎಂ. ಕಲಬುರ್ಗಿ (ಸಂ) – ಅದೇ.,
೧೦. **ಬಳ್ಳಾರಿ ಗ್ಯಾಜೆಟಿಯರ್,** ಡಬ್ಲ್ಯೂ. ಫ್ರಾನ್ಸಿಸ್, ಮದ್ರಾಸ್–೧೯೦೪, ಪುನರ್ ಮುದ್ರಣ, ಕರ್ನಾಟಕ ಸರ್ಕಾರ–೨೦೦೪.
೧೧. ವಿರೂಪಾಕ್ಷಿ ಪೂಜಾರಿಹಳ್ಳಿ., **ಬಳ್ಳಾರಿ ಜಿಲ್ಲೆಯ ಪಾಳೆಯಗಾರರು,** ಅದೇ.,
೧೨. ಮೆಕಂಜಿ ಇಂಗ್ಲೀಷ್ ದಾಖಲೆ.
೧೩. ಅದೇ.,
೧೪. ಅದೇ.,
೧೫. ವಿರೂಪಾಕ್ಷಿ ಪೂಜಾರಿಹಳ್ಳಿ – ಅದೇ., ಪು. ೧೯.
೧೬. **ಕರ್ನಾಟಕ ಕೈಫಿಯತ್ತುಗಳು.,** ಕಲಬುರ್ಗಿ ಎಂ.ಎಂ. (ಸಂ), ಅದೇ, ಪು. ೪೧೦.
೧೭. ಡಾ. ಮೀರಾಸಾಬಿಹಳ್ಳಿ ಶಿವಣ್ಣ., ೨೦೦೫, **ಮ್ಯಾಸ ಮಂಡಲ,** ಪು. ೩೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
೧೮. ಮೆಕಂಜಿ ಇಂಗ್ಲೀಷ್ ದಾಖಲೆ.
೧೯. ಕಲಬುರ್ಗಿ ಎಂ.ಎಂ. (ಸಂ) – ಅದೇ., ಪು. ೪೧೦.
೨೦. ವಿರೂಪಾಕ್ಷಿ ಪೂಜಾರಿಹಳ್ಳಿ., ಅದೇ., ಪು. ೨೧.
೨೧. ಮೆಕಂಜಿ ಇಂಗ್ಲೀಷ್ ದಾಖಲೆ.
೨೨. ಅದೇ.
೨೩. ಅದೇ.
೨೪. ವಿರೂಪಾಕ್ಷಿ ಪೂಜಾರಿಹಳ್ಳಿ., ಅದೇ., ಪು. ೧೪ ಮತ್ತು ೧೫.
೨೫. ಮೆಕಂಜಿ ಇಂಗ್ಲೀಷ್ ದಾಖಲೆ.
೨೬ ಅದೇ.
೨೭. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು,** ಪು. ೫೩.
೨೮. ಅದೇ.
೨೯. ಮೆಕಂಜಿ ಇಂಗ್ಲಿಷ್ ದಾಖಲೆ.
೩೦. ವಿರೂಪಾಕ್ಷಿ ಪೂಜಾರಿಹಳ್ಳಿ, ಅದೇ., ಪು. ೩೧.
೩೧. ಮೆಕಂಜಿ ಇಂಗ್ಲಿಷ್ ದಾಖಲೆ.
೩೨. ಚಿತ್ರದುರ್ಗ ಜಿಲ್ಲೆಯೂ ಸೇರಿದಂತೆ ದಾವಣಗೆರೆ ಜಿಲ್ಲೆಯ ಜಗಳೂರು, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ, ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕುಗಳ ವ್ಯಾಪ್ತಿ ಒಳಗೊಂಡಿದೆ. ಮ್ಯಾಸಮಂಡಲವನ್ನು ಆಡಳಿತಾತ್ಮಕವಾದ ಭೌತಿಕ ಗಡಿಗಳನ್ನು ಮೀರಿದ ಒಂದು ಸಾಂಸ್ಕೃತಿಕ ಗಡಿ ಎಂದು ಭಾವಿಸಬೇಕಾಗುತ್ತದೆ.
೩೩. ಮೆಕಂಜಿ ಅಪ್ರಕಟಿತ ಕೈಫಿಯತ್ತು.
೩೪. ಮೆಕಂಜಿ ಇಂಗ್ಲಿಷ್ ದಾಖಲೆ.
೩೫. ಮೆಕಂಜಿ ಪ್ರಕಟಿತ ಕೈಫಿಯತ್ತು.
೩೬. ಮೆಕಂಜಿ ಇಂಗ್ಲಿಷ್ ದಾಖಲೆ.
೩೭. ಅದೇ.,
೩೮. ಅದೇ.,
೩೯. ಅದೇ.
೪೦. ಅದೇ.
೪೧. ಅದೇ.
೪೨. ಅದೇ.

ಡಾ. ಅಮರೇಶ್ ಯತಗಲ್*

# ಸುರಪುರ ಸಂಸ್ಥಾನದಲ್ಲಿ ಕೊಟಗಾರರು

ಗುಲಬರ್ಗಾ ಜಿಲ್ಲೆಯಿಂದ ದಕ್ಷಿಣಕ್ಕೆ ಇರುವ ಸುರಪುರ ಕೃಷ್ಣಾ ಹಾಗೂ ಭೀಮಾನದಿಗಳ ಮಧ್ಯದಲ್ಲಿದೆ. ಕ್ರಿ.ಶ. ೧೬೩೬ ರಿಂದ ೧೮೫೮ ರವರೆಗೆ ಸುಮಾರು ೧೨ ಜನ ನಾಯಕ ಅರಸರು ಇಲ್ಲಿ ಆಳ್ವಿಕೆ ಮಾಡಿದ್ದಾರೆ. ಬಿಜಾಪುರದ ಆದಿಲ್‌ಶಾಹಿಗಳು, ಮರಾಠರು, ಹೈದ್ರಾಬಾದ್ ನಿಜಾಮರು ಹಾಗೂ ಬ್ರಿಟಿಷರ ಆಡಳಿತದ ನಡುವೆಯೂ ಸ್ವತಂತ್ರ ಸಂಸ್ಥಾನವನ್ನು ಕಟ್ಟಿ ಆಳ್ವಿಕೆಯನ್ನು ನಡೆಸಿರುವುದು ಈ ಅರಸರ ಶೌರ್ಯ, ಸಾಹಸಕ್ಕೆ ಹಿಡಿದ ಕನ್ನಡಿಯಾಗಿದೆ.

ಮೊಘಲ್‌ರ ಔರಂಗಜೇಬನನ್ನು, ಪಾಂಡಿಚೇರಿಯ ಫ್ರೆಂಚರನ್ನೂ ಸೋಲಿಸಿದರಲ್ಲದೆ, ಕ್ರಿ.ಶ. ೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದಕ್ಷಿಣ ಭಾರತದ ಅರಸರನ್ನೆಲ್ಲಾ ಒಂದುಗೂಡಿಸಿ, ಬ್ರಿಟಿಷರನ್ನು ಈ ದೇಶದಿಂದ ಹೊಡೆದೋಡಿಸಬೇಕೆಂಬ ಛಲತೊಟ್ಟ ಕೀರ್ತಿ ಈ ಸಂಸ್ಥಾನದ ಅರಸರಿಗೆ ಹಾಗೂ ಅವರ ಸೈನಿಕರಿಗೆ ಸಲ್ಲುತ್ತದೆ. ಅದಾಗಿ ಭಾರತದ ಚರಿತ್ರೆಯಲ್ಲಿ ಸುರಪುರ ಸಂಸ್ಥಾನಕ್ಕೊಂದು ವಿಶಿಷ್ಟ ಸ್ಥಾನ ಲಭಿಸುವಂತೆ ಮಾಡಿವೆ.

ಸುರಪುರ ಸಂಸ್ಥಾನದ ಅರಸರು ಸುವ್ಯವಸ್ಥಿತ ಸೈನ್ಯ ಪಡೆಯನ್ನು ಹೊಂದಿದ್ದರಲ್ಲದೆ ಆ ಸೈನ್ಯವು ವಿಲಕ್ಷಣವಾದದ್ದಾಗಿತ್ತು. ಈ ಸೈನ್ಯದಲ್ಲಿ ಬೇಡರು, ಮರಾಠಿಯವರು, ದಖನಿಯವರು, ಜಟ್ಟರು, ಮಾದಿಗರು, ಹಾಗೂ **ಕೊಟಗಾರ**ರೆಂಬುವರಿದ್ದರು. ದಖನಿಯವರು ಮುಸಲ್ಮಾನರಾದರೆ ಕೊಟಗಾರರು ಹೊಲೆಯ ಜಾತಿಯವರಾಗಿದ್ದರು[೧]. ಸುರಪುರದ ಅರಸರು ಪ್ರಾರಂಭದಲ್ಲಿ ಈ ಕೊಟಗಾರರನ್ನು ಕೋಟೆಯ ಕಾವಲುಗಾರರನ್ನಾಗಿ ನೇಮಕ ಮಾಡಿದರು. ಸುರಪುರದ ಎಲ್ಲಾ ಕೋಟೆ ಬಾಗಿಲುಗಳಿಗೆ ಹತ್ತಿಕೊಂಡು ಇವರ ಮನೆಗಳಿದ್ದವು. ಸಿದ್ಧಾಪುರ ಕೋಟೆ ಬಾಗಿಲು ಮತ್ತು ಹಸನಾಪುರ ಕೋಟೆ ಬಾಗಿಲಿನಲ್ಲಿ ಕೊಟಗಾರರ ಮನೆಗಳು ಇಂದಿಗೂ ಇವೆ. ಇವರಲ್ಲಿಯ ಧೈರ್ಯ, ಸಾಹಸ, ವಿಶ್ವಾಸಗಳನ್ನು ಮೆಚ್ಚಿ ಅರಸರು ತಮ್ಮ ಪ್ರಾಣ ಸಂಗಾತಿಗಳನ್ನಾಗಿ ಆಯ್ಕೆ ಮಾಡಿಕೊಂಡರು. ಅರಸರು ಪ್ರತಿಯೊಂದು ಕೊಟಗಾರರ ಕುಟುಂಬಕ್ಕೆ ಕೋಣದ ಚಪ್ಪೆಯನ್ನು ಊಟಕ್ಕಾಗಿ ನೀಡುತ್ತಿದ್ದರು. ಇವರು ಶಸ್ತ್ರಾಸ್ತ್ರರಹಿತ ಯುದ್ಧ ಕುಶಲಿಗಳಾಗಿದ್ದರು. ಇವರ ಎತ್ತರ ಸುಮಾರು ೬ ಅಡಿ ಆಗಿರುತ್ತಿತ್ತು.

ಸುರಪುರ ಸಂಸ್ಥಾನದಲ್ಲಿ ೧೨೦೦೦ ಬೇಡ ಜಾತಿಯ ಸೈನಿಕರಿದ್ದಲ್ಲದೆ, ೧೯೦೦ ಜನ ಕೊಟಗಾರ ಜಾತಿಯ ಸೈನಿಕರಿದ್ದರು. ಇವರ ಮೇಲೆ ಯಾವ ಮೇಲಾಧಿಕಾರಿಯ ಅಧಿಕಾರವಿರಲಿಲ್ಲ. ಸ್ವತಃ ಅರಸನೇ ಇವರ ಮೇಲಾಧಿಕಾರಿಯಾಗಿರುತ್ತಿದ್ದನು. ಅರಸನ ಪಹರೆಗಾರರಾಗಿದ್ದ ಇವರು ಅರಸ ಹೋದೆಡೆಯಲ್ಲೆಲ್ಲಾ ಇರುತ್ತಿದ್ದರು. ಯುದ್ಧಗಳಲ್ಲಿ ಅರಸನ ಅಂಗರಕ್ಷಕರಾಗಿರುತ್ತಿದ್ದ ಇವರು ಅರಸನ ಸುತ್ತಲು ಭಲ್ಲೆಗಳನ್ನು ಹಿಡಿದು ಆತನನ್ನು ರಕ್ಷಿಸುತ್ತಿದ್ದರು. ತಮ್ಮ ಪ್ರಾಣ ಹೋದರೂ ಹೆದರುತ್ತಿರಲಿಲ್ಲ. ಹೀಗಾಗಿ ಇವರನ್ನು **'ಆತ್ಮಹತ್ಯೆಯ ದಳ'**ವೆಂದು ಕರೆಯುತ್ತಿದ್ದರು. ಇಂಥ ಕೆಲಸ ಕಾರ್ಯಗಳನ್ನು ಮಾಡುವವರನ್ನು ಇಂದು ಕಮ್ಯಾಂಡೋಗಳೆಂದು ಕರೆಯುವರು. ಕೊಟಗಾರರಿಗೆ ಸುರಪುರದಲ್ಲಿ ಮುಕ್ತವಾಗಿ ತಿರುಗಾಡಲು ನಿರ್ಬಂಧವಿತ್ತು. ಊರೊಳಗೆ ತಿರುಗಾಡುವಾಗ ಬಹಳ ಗಲಾಟೆ ಮಾಡುತ್ತಿದ್ದರು. ವಿಶೇಷ ತಾಮಸಿಗಳಾದ ಇವರು ದಾರಿಯಲ್ಲಿ ತಿರುಗಾಡುತ್ತಿದ್ದವರ ಕೈಕಾಲುಗಳನ್ನು ಮುರಿಯುತ್ತಿದ್ದರು. ಎದುರಿಗೆ ಬಂದವರನ್ನು ಕೊಲ್ಲುತ್ತಿದ್ದರು. ಹೀಗಾಗಿ ಇವರಿಂದ ಪ್ರಜೆಗಳಿಗೆ ತೊಂದರೆಯಾಗಬಾರದೆಂದು ಬಿಚ್ಚುಗತ್ತಿಯ ಬೇಡರ ಪಡೆಯು ಯಾವಾಗಲೂ ಇವರನ್ನು ಕಾಯುತ್ತಿತ್ತು. ಈ ಕೊಟಗಾರರು ಅರಸನ ಹತ್ತಿರ ಬರುವಾಗ ಅದೇ ಜಾತಿಯ ಬಂಧುವರ್ಗದವರು, ಇವರಿಗೆ ಸರಪಳಿ ಹಚ್ಚಿ ಹಿಡಿದುಕೊಂಡು ಬರುತ್ತಿದ್ದರು. ಸರಪಳಿ ಹಚ್ಚುವವರು ಇವರ ಬಂಧುಗಳಾಗಿರುತ್ತಿದ್ದರಿಂದ ಇವರು ಅವರಿಗೆ ಯಾವ ತೊಂದರೆಯನ್ನು ಕೊಡುತ್ತಿರಲಿಲ್ಲ. ಇವರು ಸ್ವಭಾವತಃ ಕ್ರೂರರಾಗಿದ್ದರೂ

* ಅಧ್ಯಾಪಕರು, ಸರಕಾರಿ ಪದವಿ ಪೂರ್ವಕಾಲೇಜು (ಪ್ರೌ.ವಿ), ಲಿಂಗಸುಗೂರು, ಜಿ॥ ರಾಯಚೂರು – ೫೮೪ ೧೨೨.

ಇವರಲ್ಲಿಯ ಶೌರ್ಯಕ್ಕೆ ಅಳತೆ ಇರಲಿಲ್ಲ. ಇವರನ್ನು ಆನೆ, ಕುದುರೆಗಳಿಂದ ತುಳಿಸಿದರೂ ಏನೂ ಆಗುತ್ತಿರಲಿಲ್ಲ.

ಶೂರರಾದ ಕೊಟಗಾರರು ಯುದ್ಧದಲ್ಲಿ ಭಾಗವಹಿಸಿದರೆ ವೈರಿ ಸೈನಿಕರು ದಿಕ್ಕುಪಾಲಾಗುತ್ತಿದ್ದರು. ಯುದ್ಧ ಮಾಡಲು ಇವರಿಗೆ ಯಾವುದೇ ಆಯುಧಗಳು ಬೇಕಿರಲಿಲ್ಲ. ಯುದ್ಧದಲ್ಲಿ ಒಬ್ಬೊಬ್ಬರನ್ನು ಒಂದೊಂದು ಕೈಯಿಂದ ಹಿಡಿದು ತಲೆ ಒಡೆದು ತಲೆ ಬುರುಡೆಗಳನ್ನು ಕಿತ್ತು ಬಿಸಾಡುತ್ತಿದ್ದರು. ದೊಡ್ಡ ಗಾತ್ರದ ಸೈನ್ಯ ಎದುರಿಗಿದ್ದರೂ ಹೆದರದೇ ಸಾಗುವ ಸಾಹಸಿಗಳಾಗಿದ್ದರು. ಬಿಡುವಿನ ಸಮಯದಲ್ಲಿ ಕೋಟೆಯನ್ನು ರಕ್ಷಿಸುವ ಕಾರ್ಯದಲ್ಲಿ ನಿರತರಾಗುತ್ತಿದ್ದರು. ಕೋಟೆ ಏರುವುದರಲ್ಲಿ ಪ್ರವೀಣರಾಗಿದ್ದರು. ಪ್ರತಿಯೊಬ್ಬ ಕೊಟಗಾರ ಸೈನಿಕನ ಹತ್ತಿರ ಒಂದೊಂದು ಉಡ ಇರುತಿತ್ತು. ಉಡಕ್ಕೆ ಕಟ್ಟಲು ರೇಶ್ಮೆಯ ಹಗ್ಗಗಳು ಮತ್ತು ಮರಗಾಲುಗಳು ಇರುತ್ತಿದ್ದವು. ಇವರು ಕೋಟೆಯನ್ನು ಹತ್ತುವಾಗ ರೇಶ್ಮೆ ಹಗ್ಗವನ್ನು ಬಿಗಿದ ಉಡವನ್ನು ಕೋಟೆಯ ಮೇಲೆ ಬಿಡುತ್ತಿದ್ದರು. ನಂತರ ರೇಶ್ಮೆ ಹಗ್ಗವನ್ನು ಹಿಡಿದು ಕೋಟೆಯನ್ನು ಹತ್ತುತ್ತಿದ್ದರು. ಅರಸರು ಇವರಿಗೆ ಕತ್ತಿ, ಢಾಲುಗಳನ್ನು ಕೊಡುತ್ತಿದ್ದರು.

ಹಸರಂಗಿ ಪಾಮನಾಯಕನ (ಕ್ರಿ.ಶ. ೧೬೬೬–೧೬೮೭) ಅಧಿಕಾರಾವಧಿಯಲ್ಲಿ ೧೨,೦೦೦ ಜನ ಕುದುರೆ ಸವಾರರು ಹಾಗೂ ೧,೦೦,೦೦೦ ಕಾಲಾಳುಗಳಿದ್ದರು, ಇದರಲ್ಲಿ ಕೊಟಗಾರ ಸೈನಿಕರೂ ಇದ್ದರು. ಪೀತಾಂಬರಬಹರಿ ಪಿಡ್ಡನಾಯಕನು (ಕ್ರಿಶ ೧೬೮೭– ೧೭೨೬) ತನ್ನ ರಾಜಧಾನಿಯನ್ನು ವಾಗಿನಗೇರಿಯಿಂದ ಸುರಪುರಕ್ಕೆ ವರ್ಗಾಯಿಸಿಕೊಂಡ ಮೇಲೆ ರಾಜಧಾನಿಯನ್ನು ಸರ್ವೆ ಮಾಡಿದನು. ಭೂಮಿಯನ್ನು ೧೪ ಕೇರಿ (ಓಣಿ) ಗಳನ್ನಾಗಿ ವಿಭಾಗಿಸಿದನು. ಅಲ್ಲದೇ ಆ ಕೇರಿ (ಓಣಿ)ಗಳ ಕಾವಲಿಗಾಗಿ ಕೊಟಗಾರರನ್ನು ಕಾವಲುಗಾರರನ್ನಾಗಿ ನೇಮಕ ಮಾಡಿದನು.

| | | |
|---|---|---|
| ದೊಣ್ಣೆಕೇರಿಯಲ್ಲಿ | – | ೧೦೦ ಜನ ಕೊಟಗಾರರು |
| ಹುಲಕೇರಿಯಲ್ಲಿ | – | ೬೦೦ ಜನ ಕೊಟಗಾರರು |
| ಪಲ್ಲೇದ ಕೇರಿಯಲ್ಲಿ | – | ३೦೦ ಜನ ಕೊಟಗಾರರು |
| ಗೋಗಿ ಕೇರಿಯಲ್ಲಿ | – | ೨೦೦ ಜನ ಕೊಟಗಾರರು |

ರಾಮಪುರ ಕೇರಿಯಲ್ಲಿ–೧೦೦ ಜನ ಕೊಟಗಾರರು ಗಂಟೆ ನಾಯಕನ ಕೇರಿಯಲ್ಲಿ ೨೦೦ ಜನ ಕೊಟಗಾರರನ್ನು ನೇಮಿಸಿದ್ದನು. ಅಲ್ಲಿಯ ಕೋಟೆಯ ಬಾಗಿಲನ್ನು ಕಾಯುವ ವ್ಯವಸ್ಥೆ ಮಾಡಿದ್ದನು. ಹೀಗಾಗಿ ಆ ಮಾರ್ಗವಾಗಿ ವೈರಿಗಳು ಯಾವುದೇ ಕಾಲಕ್ಕೂ ಪ್ರವೇಶ ಮಾಡಲು ಸಾಧ್ಯವಾಗುತ್ತಿರಲಿಲ್ಲ.

ಕೊಟಗಾರರು ಅರಸನ ಆಜ್ಞಾಪಾಲಕರಾಗಿದ್ದರು. ಅರಸ ಕೆಲವು ಸಲ ತನ್ನ ಅಧೀನದ ಅರಸರನ್ನು ಬಂಧಿಸುವಲ್ಲಿ



ಹಸರಂಗಿ ಪಾಮನಾಯಕ

ಕೊಟಗಾರರ ಸಹಾಯವನ್ನು ತೆಗೆದುಕೊಳ್ಳುತ್ತಿದ್ದನು. ಕನಕಗಿರಿಯ ಅರಸ ಹಿರೇನಾಯಕನು ಕ್ರೂರಿ ಹಾಗೂ ದುರ್ನಡತೆಯುಳ್ಳವನಾಗಿದ್ದನು. ತನ್ನ ಸಂಸ್ಥಾನದ ಅಧೀನದಲ್ಲಿಯ ಸಂಪತ್ತನ್ನು ಕೊಳ್ಳೆ ಹೊಡೆಯುತ್ತಿದ್ದನಲ್ಲದೇ ರೈತರಿಗೆ ಕಿರುಕುಳ ಕೊಡುತ್ತಿದ್ದನು. ಹಾಗೂ ಸುಂದರವಾದ ಹೆಣ್ಣು ಮಕ್ಕಳನ್ನು ಅಪಹರಿಸುತ್ತಿದ್ದನು. ಅಲ್ಲದೇ ಈತನ ಅಧೀನದಲ್ಲಿದ್ದ ಬಾದರಬಂಡಿಯ ದೇಸಾಯಿಯ ಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿದ್ದನು. ಆಗ ತೊಂದರೆಗೀಡಾದವರೆಲ್ಲರೂ ಸೇರಿ ಹಿರೇನಾಯಕ ನೀಡುತ್ತಿದ್ದ ಕಿರುಕುಳವನ್ನು ಹೈದ್ರಾಬಾದ್ ನಿಜಾಮನ ಹತ್ತಿರ ಹೇಳಿದರು. ಆಗ ಹೈದ್ರಾಬಾದ್ ನಿಜಾಮನು ಕನಕಗಿರಿಯ ಮೇಲೆ ದಾಳಿ ಮಾಡಿ ಹಿರೇನಾಯಕನನ್ನು ಬಂಧಿಸಿ ಹೈದ್ರಾಬಾದ್‌ಗೆ ಕರೆತರುವಂತೆ ಸುರಪುರದ ಇಮ್ಮಡಿ ಪಾಮನಾಯಕನಿಗೆ (ಕ್ರಿ.ಶ. ೧೭೨೭–೧೭೪೧) ಆದೇಶಿಸಿದನು. ಆಗ ಇಮ್ಮಡಿ ಪಾಮನಾಯಕ ಕನಕಗಿರಿಯ ಮೇಲೆ ದಾಳಿ ಮಾಡಿದನು. ಆದರೆ ಹಿರೇನಾಯಕ ಈತನ ಕೈಗೆ ಸಿಗಲಿಲ್ಲ. ನಂತರ ಸಹಾಯಕ್ಕಾಗಿ ಇಮ್ಮಡಿ ಪಾಮನಾಯಕ



ಮೊಂಡುಗೈ ವೆಂಕಟಪ್ಪನಾಯಕ

ತನ್ನ ಮೈದುನ ದೇವದುರ್ಗ ಸಂಸ್ಥಾನದ ಅರಸ ಕೃಷ್ಣಪ್ಪ ನಾಯಕನ ಸಹಾಯವನ್ನು ಪಡೆದನು. ಆದರೂ ಹಿರೇನಾಯಕ ಬಂದಿಯಾಗಲಿಲ್ಲ. ಈ ಸುದ್ದಿ ತಿಳಿದ ಹೈದ್ರಾಬಾದ್ ನಿಜಾಮನು ಸಹಾಯಕ್ಕಾಗಿ ೧೦,೦೦೦ ಸೈನ್ಯವನ್ನು ಕಳುಹಿಸಿದನು. ಮತ್ತೆ ಹಿರೇನಾಯಕ ಇವರ ಕೈಗೆ ಸಿಗಲಿಲ್ಲ. ಅವನು ಕನಕಗಿರಿಯ ಸಮೀಪದ ಎಮ್ಮಿಗುಡ್ಡವನ್ನು ಸೇರಿದ್ದನು. ಅದು ಅಡಗಿ ಕೊಳ್ಳಲು ಉತ್ತಮ ಸ್ಥಳವಾಗಿತ್ತು. ಆಗ ಕೊಟಗಾರರು ಹಿರೇನಾಯಕನನ್ನು ಬಂಧಿಸಲು ತಮಗೆ ಅನುಮತಿ ನೀಡಿದರೆ ಇಂದೇ ಹಿಡಿದು ತರುವುದಾಗಿ ಸುರಪುರದ ಅರಸ ಪಾಮನಾಯಕನಲ್ಲಿ ಕೋರಿಕೊಂಡರು. ಅರಸ ಅಪ್ಪಣೆ ನೀಡಿದನು. ರಾತ್ರಿಯಲ್ಲಿ ಕೊಟಗಾರರು ಎಮ್ಮಿಗುಡ್ಡವನ್ನು ಪ್ರವೇಶಿಸಿ ಹಿರೇನಾಯಕನನ್ನು ಶೋಧಿಸಿ ಆತನ ಕೈಕಾಲು ಕಟ್ಟಿ ಹಿಡಿದು ತಂದು ಅರಸನ ಮುಂದೆ ಹಾಕಿದರು, ಸಂತಸ ಗೊಂಡ ಪಾಮನಾಯಕ ಕೊಟಗಾರರನ್ನು ಕೊಂಡಾಡಿದನು. ನಂತರ ಹಿರೇನಾಯಕನನ್ನು ಹೈದ್ರಾಬಾದ್‌ಗೆ ಕಳುಹಿಸಿದನು[೩]. ನಿಜಾಮನು ಪಾಮನಾಯಕನ ಸೈನಿಕರ ಶೌರ್ಯವನ್ನು ಮೆಚ್ಚಿ ಸನ್ಮಾನಿಸುವದರೊಂದಿಗೆ ಬಹುಮಾನ ನೀಡಿ ಕಳುಹಿಸಿದ.

ಸುರಪುರದ ಅರಸ ಮೊಂಡಗೈ ವೆಂಕಟಪ್ಪನಾಯಕ (ಕ್ರಿ.ಶ. ೧೭೪೭-೧೭೭೩) ರಾಜ್ಯ ವಿಸ್ತರಣೆಗಾಗಿ ತೆರಳುತ್ತಾನೆ. ಈ ಸಂದರ್ಭದಲ್ಲಿ ಸುರಪುರದಲ್ಲಿ ಗುರಿಕಾರ ರಾಯಪ್ಪ, ಗುರಿಕಾರ ಮಲ್ಲಯ್ಯ ಹಾಗೂ ಸರಹವಾಲ್ದಾರ ತಿಮ್ಮಪ್ಪರ ಮುಖಂಡತ್ವದಲ್ಲಿ ಸುರಪುರದ ಮೂರು ಕೇರಿಗಳ ಜನರು ವೆಂಕಟಪ್ಪನಾಯಕನ ವಿರುದ್ಧ ಬಂಡೇಳುತ್ತಾರೆ. ಗುಡ ಗುಂಟಿಯ ಅರಸ ಸೋಮಸರ್ಜನನ್ನು ಕರೆತಂದು ಸುರಪುರದ ಅರಸೊತ್ತಿಗೆಯ ಮೇಲೆ ಕೂಡಿಸುತ್ತಾರೆ. ಸೋಮ ಸರ್ಜನಾಯಕ ೯ ತಿಂಗಳುಗಳ ಕಾಲ ಸುರಪುರದ ಅರಸನಾಗಿ ಅಧಿಕಾರ ಚಲಾಯಿಸುತ್ತಾನೆ. ರಾಜ್ಯ ವಿಸ್ತರಣೆಯಲ್ಲಿದ್ದ ಸುರಪುರದ ಅರಸ ಮೊಂಡಗೈ ವೆಂಕಟಪ್ಪನಾಯಕ ಈ ವಿಷಯ ತಿಳಿದು ತನ್ನ ಸೈನ್ಯದೊಂದಿಗೆ ಸುರಪುರಕ್ಕೆ ಮರಳು ತ್ತಾನೆ. ಆಗ ಅರಸನನ್ನು ಮೂರು ಕೇರಿಯ ಜನರು ಬಂಧಿಸಿ ಸೆರೆಮನೆಗೆ ತಳ್ಳುತ್ತಾರೆ. ಈ ಸುದ್ದಿ ತಿಳಿದ ಈತನ ಬಂಧು ದೇವದುರ್ಗದ ಅರಸ ಕಿಲಿಚನಾಯಕ ಸುರಪುರಕ್ಕೆ ತೆರಳಿ ಬಂಡೆದ್ದ ಮೂರುಕೇರಿಯ ಜನರನ್ನು ಒಂದೆಡೆ ಸೇರಿಸಿ ಸಮಾಲೋಚಿಸಿ, ಆ ಜನರ ಮನವೊಲಿಸುತ್ತಾನೆ. ವೆಂಕಟಪ್ಪ ನಾಯಕನನ್ನು ಸೆರೆಮನೆಯಿಂದ ಬಿಡುಗಡೆ ಗೊಳಿಸುತ್ತಾನೆ. ಆಗ ಅನ್ಯ ಮಾರ್ಗವಿಲ್ಲದೆ ಸೋಮಸರ್ಜ ನಾಯಕ ಗುಡ ಗುಂಟಿಗೆ ವಾಪಸ್ಸಾಗುತ್ತಾನೆ.

ನಂತರ ವೆಂಕಟಪ್ಪನಾಯಕ ಕೊಟಗಾರರ ಮೂಲಕ ಸುರಪುರದ ಮೂರುಕೇರಿಯ ಜನರು ಬಂಡೇಳುವಂತೆ ಮಾಡಿದ ಗುರಿಕಾರ ರಾಯಪ್ಪ, ಗುರಿಕಾರ ಮಲ್ಲಯ್ಯ ಹಾಗೂ ಸರಹವಾಲ್ದಾರ ತಿಮ್ಮಪ್ಪನನ್ನು ಹಿಡಿದು ತರುತ್ತಾನೆ. ಅವರನ್ನು ಕೊಟಗಾರರ ಪಹರೆಯಲ್ಲಿಡುತ್ತಾನೆ. ನಂತರ ಆ ಮೂವರನ್ನು **'ಶಿಬಾರ ಬಂಡಿಗೆ'** ಒಯ್ದು ತಲೆ ಹೊಡೆಯಿಸುತ್ತಾನೆ[೪]. ಆನಂತರದಲ್ಲಿ ವೆಂಕಟಪ್ಪನಾಯಕ ತನ್ನ ದಖನಿ ಮತ್ತು ಕೊಟಗಾರರ ಸೈನಿಕದೊಂದಿಗೆ ಗುಡಗುಂಟಿಯ ಮೇಲೆ ದಾಳಿ ಮಾಡುತ್ತಾನೆ. ಸೋಮಸರ್ಜನನ್ನು ಬಂಧಿಸುವಲ್ಲಿ ಯಶಸ್ವಿಯಾಗುತ್ತಾನೆ.

ಆಗ ಸೋಮಸರ್ಜನಾಯಕ ವೆಂಕಟಪ್ಪ ನಾಯಕನಿಗೆ ಶರಣಾಗತನಾಗಿ ತನ್ನ ತಪ್ಪನ್ನು ಮನ್ನಿಸಲು ಬೇಡಿಕೊಳ್ಳುತ್ತಾನೆ. ವೆಂಕಟಪ್ಪನಾಯಕ ಆತನ ತಪ್ಪನ್ನು ಮನ್ನಿಸಿ ಕೊಟಗಾರ ಸೈನಿಕರೊಂದಿಗೆ ಸುರಪುರಕ್ಕೆ ಮರಳುತ್ತಾನೆ.

ಇದೇ ಸಂದರ್ಭದಲ್ಲಿ ಪಾಂಡಿಚೇರಿಯು ಫ್ರೆಂಚರ ವಶದಲ್ಲಿತ್ತು. ಆಗ ಹೈದ್ರಾಬಾದ್ ನಿಜಾಮುಲ್ಮುಲಕನ ತರು ವಾಯ ರಾಜ್ಯಕ್ಕಾಗಿ ಮಗನಾದ ಮುಜಫರಜಂಗನೊಡನೆ ಕಲಹ ಏರ್ಪಟ್ಟಿತು. ಇಂಥ ಪ್ರಸಂಗದ ನಿರೀಕ್ಷೆಯಲ್ಲಿಯೇ ಇದ್ದ ಫ್ರೆಂಚ್ ಗರ್ವನರ್ ಡೂಪ್ಲೆಯು ಹೈದ್ರಾಬಾದ್ ನಿಜಾ

ಮನ ವಿರುದ್ಧ ಚಂದಾಸಾಹೇಬನನ್ನು ಎತ್ತಿಕಟ್ಟಿ ಪಾಂಡಿಚೇರಿ ಕದನಕ್ಕೆ ಕಾರಣನಾದನು[೫]. ಆಗ ಹೈದ್ರಾಬಾದ್ ನಿಜಾಮನ ಸಂಬಂಧಿಕರುಗಳಾದ ಮುಜಾಫರಜಂಗ್ ಹಾಗೂ ಚಂದಾ ಸಾಹೇಬರು ಹೈದ್ರಾಬಾದನ್ನು ವಶಪಡಿಸಿಕೊಳ್ಳಬೇಕೆಂದು ಫ್ರೆಂಚರ ಜೊತೆ ಸ್ನೇಹ ಬೆಳೆಸಿಕೊಂಡರು. ಇದನ್ನು ಅರಿತ ನಿಜಾಮ ನಾಸರಜಂಗ, ಕರ್ನೂಲದ ಹಿಮ್ಮತ್‌ಖಾನ್, ಸವಣೂರಿನ ಅಬ್ದುಲ್ ಕರಿಂಖಾನ್, ಕಡಪದ ಮಾದಿಮಯ್ಯ ಮುಂತಾದ ಮಾಂಡಲಿಕರನ್ನು ೧ ಲಕ್ಷ ಸೈನ್ಯದೊಂದಿಗೆ ಇಂಗ್ಲೀಷರನ್ನು ಕರೆದುಕೊಂಡು ಪಾಂಡಿಚೇರಿಗೆ ತೆರಳುತ್ತಾನೆ. ತಿಂಗಳುಗಟ್ಟಲೆ ಕೋಟೆಯನ್ನು ಸುತ್ತುವರೆಯುತ್ತಾರೆ. ಆದರೆ ಫ್ರೆಂಚರ ತೋಪುಗಳು ಕೋಟೆಯ ಮೇಲಿನಿಂದ ಸದಾ ಗರ್ಜಿಸುತ್ತಿದ್ದುದರಿಂದ ಆಕ್ರಮಣ ಮಾಡಲು ಸಾಧ್ಯವಾಗಲಿಲ್ಲ.

ಆಗ ನಾಸರಜಂಗನ ೧ ಲಕ್ಷ ಸೈನ್ಯದಲ್ಲಿ[೬] ೩೨ ಸಾವಿರ ಸೈನಿಕರು ಹತರಾದರು. ಬ್ರಿಟೀಷರ ಯುದ್ಧ ಕೌಶಲ್ಯವಾಗಲೀ, ಅವರ ತೋಪುಗಳಾಗಲಿ, ಯಾವುದೇ ಕೆಲಸವನ್ನು ಮಾಡಲಿಲ್ಲ. ಆಗ ಕೆಲವು ಆಪ್ತರು ನಾಸರಜಂಗನಿಗೆ– ಸುರಪುರದ ಮೊಂಡಗೈವೆಂಕಟಪ್ಪನಾಯಕನನ್ನು ಸಹಾಯಕ್ಕಾಗಿ ಕರೆದು ಕೊಂಡರೆ ಫ್ರೆಂಚರನ್ನು ಸೋಲಿಸಲು ಸಾಧ್ಯವಾದೀತು ಎಂಬ ಸಲಹೆಯನ್ನು ನೀಡುತ್ತಾರೆ. ಆಗ ನಾಸರಜಂಗ ಮೊಂಡಗೈ ವೆಂಕಟಪ್ಪನಾಯಕನನ್ನು ಸಹಾಯಕ್ಕಾಗಿ ಬರಲು ಆಮಂತ್ರಣ ಕಳಿಸುತ್ತಾನೆ. ವೆಂಕಟಪ್ಪನಾಯಕ ಎರಡು ಷರತ್ತುಗಳನ್ನು ನಾಸರಜಂಗನ ಮುಂದಿಡುತ್ತಾನೆ. ಒಂದನೇ ಷರತ್ತು : ಸುರಪುರ ಬಿಟ್ಟಾಗಿನಿಂದ ಮರಳಿ ಸುರಪುರ ತಲುಪುವವರೆಗಿನ ಸೈನ್ಯದ ಎಲ್ಲಾ ಖರ್ಚನ್ನು ನಿಜಾಮ ಸರಕಾರವೇ ಭರಿಸಬೇಕು. ಎರಡನೇ ಷರತ್ತು : ಫ್ರೆಂಚರ ವಿರುದ್ಧ ನಾವು ಏಕಾಂಗಿಯಾಗಿ ಯುದ್ಧ ಮಾಡುವೆವು. ಯಾರೂ ನಮ್ಮೊಂದಿಗೆ ಸೇರಬಾರದು. ಈ ಎರಡು ಷರತ್ತುಗಳಿಂದ ನಾಸರಜಂಗನಿಗೆ ಅವಮಾನ ವಾದರೂ ಅನಿವಾರ್ಯವಾಗಿ ಒಪ್ಪಿಕೊಳ್ಳುತ್ತಾನೆ. ಸುರಪುರದ ಕಾರ್ಯಭಾರವನ್ನೆಲ್ಲಾ ರಮಣಪ್ಪನಾಯಕನಿಗೆ ವಹಿಸಿ ಕೊಡುತ್ತಾನೆ. ಆಗ ಮೊಂಡಗೈ ವೆಂಕಟಪ್ಪನಾಯಕ ೧೨,೦೦೦ ಮೂಲ ಬಲಾಢ್ಯ ಬೇಡ ಪಡೆಯೊಂದಿಗೆ, ೯೦೦ ಜನ ಯುದ್ಧ ಕೌಶಲ್ಯವುಳ್ಳ ಕೊಟಗಾರರನ್ನು ಕರೆದುಕೊಂಡು ನಾಸರಜಂಗನಿಗೆ ಬೆಂಬಲಿಸುತ್ತಾನೆ[೭].

ಅಂದು ಅರಸ ವೆಂಕಟಪ್ಪನಾಯಕ ಯುದ್ಧದ ಪೂರ್ವ ಸಿದ್ಧತೆಗಾಗಿ ತನ್ನೆಲ್ಲಾ ಸೈನಿಕ ಮುಖಂಡರನ್ನು ಸಭೆ ಸೇರಿಸಿ ಸಮಾಲೋಚನೆಯನ್ನು ನಡೆಸುತ್ತಾನೆ. ಎರಡು ದಿನದಲ್ಲಿ ಪಾಂಡಿಚೇರಿ ಕಿಲ್ಲೆಯ ಮರ್ಮಸ್ಥಳವನ್ನು ತಿಳಿದುಕೊಳ್ಳಲು ಕೊಟಗಾರರನ್ನು ಕಳುಹಿಸುತ್ತಾನೆ. ಉಳಿದವರು ಎರಡು ದಿನ ತಿರುಗಾಡಿ ಕಣಕಿಯ ಹೊರೆಗಳನ್ನು ತಯಾರು ಮಾಡುತ್ತಾರೆ. ನಿಜಾಮನ ಸೈನ್ಯಕ್ಕೆ ಗುರುತು ಮಾಡಿದ ಸ್ಥಳದಿಂದ ಸೂಚನೆಯ ಪ್ರಕಾರ ತೋಪುಗಳನ್ನು ಹಾರಿಸಲು ಆದೇಶಿಸಿದ. ಕೊಟಗಾರರು ಕಣಕಿಯ ಹೊರೆಗಳನ್ನು ತಮ್ಮ ಬೆನ್ನ ಮೇಲೆ ಕಟ್ಟಿಕೊಂಡು ಕಂದಕದ ನೀರಿನಲ್ಲಿ ತೇಲಿ ಬಿಡಬೇಕೆಂದು, ಸೈನ್ಯವು ಅವರ ಮೇಲೆ ನಡೆದು ವೈರಿಗಳ ತೋಪುಗಳನ್ನು ಲೆಕ್ಕಿಸದೇ ಕಂದಕವನ್ನು ಕ್ಷಣಾರ್ಧದಲ್ಲಿ ದಾಟಬೇಕೆಂದು ಆದೇಶಿಸಿದ.

ಮೂರನೆಯ ದಿನ ರಾತ್ರಿಯಲ್ಲಿ ಸುರಪುರದ ಎಲ್ಲಾ ಸೈನಿಕರು ಹಾಗೂ ಕೆಲವು ಜನ ಕೊಟಗಾರರು ರೇಶ್ಮೆ ಹಗ್ಗಗಳಿಂದ ಕಟ್ಟಿದ ಉಡಗಳನ್ನು ತೆಗೆದುಕೊಂಡು ಹೊರಟರು. ಕೋಟೆಯ ಹಿಂದಿನ ಭಾಗದ ಕಂದಕವನ್ನು ಮುಟ್ಟುವಷ್ಟ ರಲ್ಲಿಯೇ ಕೋಟೆಯ ಮುಂಭಾಗದಲ್ಲಿದ್ದ ನಿಜಾಮನ ಗುಂಪಿನ ಸೈನಿಕರು ತೋಪುಗಳನ್ನು ಹಾರಿಸಹತ್ತಿದರು. ಕೋಟೆಯಲ್ಲಿ ದ್ದವರ ಗಮನ ಹಾರುವ ತೋಪುಗಳ ಕಡೆ ತಿರುಗಿತು. ಆಗ ಕೊಟಗಾರರು ಕಂದಕವನ್ನು ಪ್ರವೇಶಿಸಿದರು. ಇನ್ನೂ ಕೆಲವರು ಕಂದಕಗಳನ್ನು ಈಜಿದರು. ತಮ್ಮ ಉಡಗಳ ಸಹಾಯದಿಂದ ಹಾಗೂ ಮರಗಾಲಿನಿಂದ ಕೋಟೆಯ ಗೋಡೆಯನ್ನು ಏರಲು ಪ್ರಾರಂಭಿಸಿದರು. ಉಳಿದ ಕೊಟಗಾರರು ಕಣಕಿಯ ಹೊರೆ ಯನ್ನು ಕಟ್ಟಿಕೊಂಡು ಕಂದಕದ ನೀರಿನಲ್ಲಿ ತೇಲಿಬಿದ್ದರು. ಕಂದಕವು ತೊಪ್ಪಲು ಹೊರೆಗಳಿಂದ ತುಂಬಿತು. ಆಗ ಒಂದು ಸೇತುವೆಯನ್ನು ನಿರ್ಮಿಸಿದಂತಾಯಿತು. ಉಳಿದವರು ತೇಲಿ ಬಿದ್ದವರ ಮೇಲೆ ದಾಟಿ ಕೋಟೆಯನ್ನು ಹತ್ತಲು ಸಿದ್ಧವಾದರು.

ಸುರಪುರದ ಸೈನ್ಯ ತಮ್ಮ ಆರಾಧ್ಯ ದೈವ ವೆಂಕಟ ರಮಣನ ಹೆಸರಿನಿಂದ ಜಯಘೋಷ ಪ್ರಾರಂಭಿಸಿದರು. ಕೋಟೆಯ ಸುತ್ತಲೂ ಗದ್ದಲ ಎಬ್ಬಿಸಿದರು. ಈ ಗದ್ದಲದಲ್ಲಿ ಕೊಟಗಾರರು ಹೇಗೋ ತಪ್ಪಿಸಿಕೊಂಡು ಕೋಟೆಗೋಡೆ ಯನ್ನು ಏರಿ ಮದ್ದಿನ ಮನೆಗೆ ಬೆಂಕಿ ಹಚ್ಚುತ್ತಾರೆ. ತಕ್ಷಣ ಮದ್ದು ಸ್ಫೋಟವಾಯಿತು. ಅನೇಕರನ್ನು ಬಲಿ ತೆಗೆದು ಕೊಂಡಿತು. ಅಲ್ಲದೇ ಫ್ರೆಂಚ್ ಸೈನಿಕರು ಅಸುನೀಗಿದರು. ಕೊಟಗಾರರು ಕೆಲ ಸೈನಿಕರು ಸಾವಿಗೀಡಾದರು. ಆದರೆ ಫ್ರೆಂಚರು ಧೈರ್ಯಗುಂದದೇ ಕೋಟೆಯಿಂದ ಬಿಟ್ಟು ಬಿಡದೇ ತೋಪುಗಳ ಗುಂಡಿನ ಮಳೆಗೆರೆಯುತ್ತಾರೆ. ಅಷ್ಟರಲ್ಲಿ ಬೆಳಗಾಗುತ್ತದೆ. ಎಷ್ಟು ಪ್ರಯತ್ನಪಟ್ಟರೂ ಕಂದಕದ ಸಮೀಪಕ್ಕೆ ಬೇಡರ ಪಡೆಗೆ ಹೋಗಲಾಗಲಿಲ್ಲ. ಆ ಕೋಲಾಹಲದಲ್ಲಿ ಅರಸನ ಪ್ರಾಣ ಸ್ನೇಹಿತರಾದ ಕೊಟಗಾರರು ವ್ಯರ್ಥವಾಗಿ ಸಾಯುವರೆಂದು ಅರಿತು ಮೊಂಡಗೈ ವೆಂಕಟಪ್ಪನಾಯಕ ಜೀವದಾಸೆ ತೊರೆದು ತಾನೇ ಯುದ್ಧದಲ್ಲಿ ಧುಮುಕುತ್ತಾನೆ. ಈ ಸಂದರ್ಭದಲ್ಲಿ ವೆಂಕಟಪ್ಪನಾಯಕನ ಬಲಾಢ್ಯ ಸೈನ್ಯ ಹೇಗಿತ್ತು ಎಂಬುದಕ್ಕೆ 'ಕೋಸಲ ನೃಪ ವೃತ್ತಾಂತ'ವು

*'ಗುಂಡಿಗಂಜದೇ ವೆಂಕಟೇಂದ್ರನು*
*ತುಂಡುಗಡಿದನು ತಾಮ್ರಮುಖರನ್ನು*
*ದಂಡಧವನದಂದದಲಿ ಗಿರಿಕೋದಂಡ ರುದ್ರನೊಲು*
*ಚಂಡುತರ ಮಾರ್ತಾಂಡನನೆ ರಣ*
*ಮಂಡಲದಿ ವೈರಿಗಳ ರುಂಡವ*
*ಚಂಡನಾಡಿದ ಬಹರಿ ವೆಂಕಟ ಮಂಡಲಾಧಿಪನು'*[೮]

ಎಂದು ಹೇಳುತ್ತದೆ.

ಕಂದಕದೊಳಗೆ ಕೊಟಗಾರು ಒಬ್ಬರನ್ನೊಬ್ಬರು ಆಶ್ರಯಸಿದರು. ಕಣಕಿಯ ಹೊರೆಗಳ ಕೆಳಗೆ ನೀರೊಳಗೆ ತೇಲಾಡುತ್ತಿದ್ದರು. ಕೊಟಗಾರರ ಮೇಲೆ ಕಾಲಿಟ್ಟು ಕಂದಕವನ್ನು ದಾಟಿದ ಸುರಪುರದ ಸೈನ್ಯ ಕಿಲ್ಲೆಯ ಬಾಗಿಲನ್ನು ಸುಟ್ಟಿತು. ಮತ್ತೊಂದು ಕಡೆ ಬಾಗಿಲಿಗೆ ಆನೆಯನ್ನು ಹಾಯಿಸಿ ಅದನ್ನು ಮುರಿದರು. ಇನ್ನು ಕೆಲವರು ಹಗ್ಗಗಳನ್ನು ನಿಚ್ಚಣಿಕೆಯನ್ನಾಗಿ ಮಾಡಿಕೊಂಡರು. ಕೆಲವರು ಉಡಗಳ ಹಗ್ಗದಿಂದಲೂ ಕೋಟೆಯನ್ನು ಏರಿ ಒಳ ಹೊಕ್ಕು ಜೋಳದ ದಂಟನ್ನು ಕೊಯ್ಯುವಂತೆ ತಮ್ಮ ವೈರಿಗಳ ೧೨೦೦೦ ಸೈನಿಕರ ತಲೆಯನ್ನು ಕತ್ತರಿಸಿ ಹಾಕಿದರು. ಆಗ ಫ್ರೆಂಚರ ಸೈನ್ಯವು ನಿಸ್ತೇಜವಾಗಿ ತೋಪುಗಳು ನಿಶ್ಯಬ್ದವಾದವು. ವೆಂಕಟಪ್ಪನಾಯಕ ಕಿಲ್ಲೆಯ ಮೇಲೆ ತಮ್ಮ ಹನುಮಧ್ವಜವನ್ನು ಹಾರಿಸಿದನು. ಆಗ ತನ್ನ ಸೈನ್ಯದ ಕಡೆ ನೋಡಿದನು. ಈ ಭಯಂಕರ ಯುದ್ಧದಲ್ಲಿ ಕೊಟಗಾರರ ಸೈನಿಕರು ಮಡಿದು ಆಗ ಕೇವಲ ೬೦೦ ಜನ ಸೈನಿಕರು ಉಳಿದಿದ್ದರು. ಇದನ್ನು ನೋಡಿ ವೆಂಕಟಪ್ಪ ನಾಯಕನ ಹೃದಯವೇ ಕಿತ್ತು ಬಂದಿತು[೯]. ಉಳಿದ ಕೊಟಗಾರರು ಅಲ್ಲಿಯ ನವಾಬನನ್ನು ಬಂಧಿಸಿ ತಂದರು. ಕೊಟಗಾರ ನಾಯಕರ ಶೂರತನವನ್ನು ಮೆಚ್ಚಿದ ವೆಂಕಟಪ್ಪ ನಾಯಕನು ಅವರನ್ನು ಹೃದಯ ತುಂಬಿ ಕೊಂಡಾಡಿದನು.

ಅದೇ ಸಂದರ್ಭದಲ್ಲಿ ಹೈದ್ರಾಬಾದಿನ ನಾಸರಜಂಗನು ಜಯದ ಸುದ್ದಿಯನ್ನು ತಿಳಿದು ಆನಂದಿತನಾಗಿದ್ದನು. ವೆಂಕಟಪ್ಪನಾಯಕನ ಕೈಕುಲಕಿ ಹರ್ಷ ವ್ಯಕ್ತ ಪಡಿಸಿ ಅಭಿನಂದಿಸಿದನು. ಆಗ ಮೊಂಡಗೈ ವೆಂಕಟಪ್ಪನಾಯಕನ ಕಣ್ಣಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತದೆ. ಆಗ ನಾಸರಜಂಗನು ಕಾರಣ ಕೇಳುತ್ತಾನೆ. ಆಗ ವೆಂಕಟಪ್ಪನಾಯಕನು 'ನನ್ನ ವೀರ ಕೊಟಗಾರರು ಮಡಿದದ್ದು ದುಖಃಕ್ಕೆ ಕಾರಣ' ಎಂದು ಹೇಳುತ್ತಾನೆ. ಆಗ ನಾಸರಜಂಗನು 'ರಾಜಾ ಮೊಂಡಗೈವೆಂಕಟಪ್ಪ ನಾಯಕರೇ ನಾವು ಲಕ್ಷಾವಧಿ ಸೈನ್ಯವನ್ನು ಸಜ್ಜುಗೊಳಿಸಿ, ಶೂರರಾದ ಸೇನಾಪತಿಗಳ ನೇತೃತ್ವದಲ್ಲಿ ನಾಲ್ಕಾರು ಸಲ ಮುತ್ತಿಗೆ ಹಾಕಿದರೂ ಪಾಂಡಿಚೇರಿ ಕೋಟೆಯನ್ನು ಗೆಲ್ಲಲಾಗಲಿಲ್ಲ. ಆದರೆ ನೀವು ಮಾತ್ರ ೧೨೦೦೦ ವೀರ ಸೈನಿಕರೊಂದಿಗೆ ಬಂದು ಕೆಲವೇ ದಿನಗಳಲ್ಲಿ ನನ್ನ ಶತ್ರುಗಳನ್ನು ಸೋಲಿಸಿದಿರಿ ಇದರ ಗುಟ್ಟೇನು'? ಎಂದು ಕೇಳುತ್ತಾನೆ. ಆಗ ಮೊಂಡಗೈ ವೆಂಕಟಪ್ಪ ನಾಯಕನು 'ನವಾಬರೇ ನಿಮ್ಮ ಒಂದು ಲಕ್ಷ ಸೈನ್ಯದಲ್ಲಿ ಒಬ್ಬ ಸೇನಾಪತಿಯನ್ನು ಕರೆಯಿಸಿರಿ' ಎಂದನಂತೆ. ಆಗ ನವಾಬ ಆಜ್ಞೆ ಇತ್ತನು. ನವಾಬನ ಆಜ್ಞೆಯಂತೆ ಒಬ್ಬ ಸೇನಾಪತಿಯು ನಾಯಕನ ಎದುರಿಗೆ ಬಂದು ನಿಂತನು. ನಾಯಕನು ಸೇನಾಪತಿಗೆ ಅಲ್ಲಿಯೇ ಇದ್ದ ಮರವೊಂದನ್ನು ಹತ್ತಲು ಆಜ್ಞಾಪಿಸಿದನು. ಮರ ಹತ್ತಿದ ಬಳಿಕ ಕೆಳಗೆ ಹುಲ್ಲಿನ ಹೊರೆಗಳನ್ನು ಹಾಕಿ ಬೆಂಕಿ ಹಚ್ಚಿದರು. ಆಗ ಆ ಸೇನಾಪತಿಯು 'ಬೆಂಕಿಯಲ್ಲಿ ನಾನು ಸುಟ್ಟು ಹೋಗುವೆ, ನೆಲಕ್ಕೆ ಬಿದ್ದರೆ ತಲೆ ಒಡೆದು ಸಾಯುವೆ, ದಯಮಾಡಿ ನನ್ನನ್ನು ಕ್ಷಮಿಸಿರಿ'. ಎಂದು ಬೇಡಿಕೊಂಡನಂತೆ, ಅವನನ್ನು ಕೆಳಗೆ ಇಳಿಸಿ, ನಾಯಕನು ತನ್ನ ವೀರ ಕೊಟಗಾರನೊಬ್ಬನನ್ನು ಕರೆಯಿಸಿ ಮರ ಹತ್ತಿ ಬೆಂಕಿಯಲ್ಲಿ ತಲೆ ಕೆಳಗೆ ಮಾಡಿ ಬೀಳಲು ಆಜ್ಞಾಪಿಸಿದನು. ಕೂಡಲೇ ವೀರ ಕೊಟಗಾರ ಮರಹತ್ತಿ ಬೆಂಕಿಯಲ್ಲಿ ಹಾರಲು ಸಿದ್ದನಾದನು. ಆಗ ಅವನನ್ನು ತಡೆಯಲಾಯಿತು.

ಆಗ ವೆಂಕಟಪ್ಪನಾಯಕ 'ನವಾಬರೇ, ನನ್ನ ಒಬ್ಬ ಪ್ರಾಮಾಣಿಕ ಕೊಟಗಾರನ ಮುಂದೆ ನಿನ್ನ ಲಕ್ಷ ಸೈನ್ಯ ವ್ಯರ್ಥವಾಯಿತು. ಇದಕ್ಕೆ ಸಾಕ್ಷಿ ನಿಮ್ಮ ಸೈನ್ಯದ ದಂಡ ನಾಯಕನೇ ಸಾಕು, ನಿಮ್ಮ ಸೈನಿಕರಲ್ಲಿ ನಿಷ್ಠೆ, ವಿಶ್ವಾಸ, ಆಜ್ಞಾಪಾಲನೆಯ ಅಭಾವವಿದೆ'[೧೦] ಎಂದನಂತೆ. ಹೀಗೆ ಕೊಟಗಾರರು ತಮ್ಮ ಅರಸನ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸುತ್ತಿದ್ದರು. ಹೀಗಾಗಿ ಅನೇಕ ಯುದ್ಧಗಳಲ್ಲಿ ಸುರಪುರದ ಅರಸರು ಜಯಶಾಲಿಗಳಾಗಲು ಸಾಧ್ಯವಾಯಿತು. ಅರಸ ಮುಮ್ಮಡಿ ಪಾಮನಾಯಕ- (ಕ್ರಿ.ಶ. ೧೭೭೨- ೧೭೭೪) ನ ಅಧಿಕಾರಾವಧಿಯಲ್ಲಿ ಸುರಪುರ ಸಂಸ್ಥಾನದ ಅಧೀನದ ಅಗ್ಗಿಣಿ ಎಂಬ ಹಳ್ಳಿಯನ್ನು ಮರಾಠ ಸವಾವಿ ಮಾಧವ ರಾಯನು ತನ್ನ ಸೈನ್ಯದೊಂದಿಗೆ ಮುತ್ತಿಗೆ ಹಾಕುತ್ತಾನೆ. ಆಗ ಅಲ್ಲಿನ ಜನರು ಅವರಿಗೆ ಹೆದರಿ ಗೂಳೆಕಟ್ಟಿಕೊಂಡು ಊರು ತೊರೆಯಲು ನಿರ್ಧಸಿದರು. ಆಗ ಈ ವಿಷಯ ಮುಮ್ಮಡಿ ಪಾಮನಾಯಕನಿಗೆ ಗೊತ್ತಾಯಿತು. ಆತ ತನ್ನ ಕೊಟಗಾರರ ಸೈನ್ಯದೊಂದಿಗೆ ಅಗ್ಗಿಣಿಗೆ ಬಂದಿಳಿಯುತ್ತಾನೆ. ಈ ವಿವರಣೆಯನ್ನು **ಪುರುಷಕಾರಿ ಲೋಕಯ್ಯನ ಹಸ್ತಪ್ರತಿ,** ಈ ರೀತಿ ವಿವರಣೆ ನೀಡುತ್ತದೆ.

*ಮಿಮಲಮತಿ ಯೀರಪ್ಪ ವಿಬುಧ ತಾ ಕೇಳಿ*
*ಅಮಿತ ವಿಕ್ರಮ ನೃಪಗೆ ಆ ಸುದ್ದಿ ವುಸರೆ*
*ಭೂರಿ ಕೋಪದಿ ರಾಜ ಹುಕುಮುಗಯ್ಯಲ್ಕೆ*
*ಸಾರಿದರು ದಂಡೋರ ಸರ್ದಾರ್‍ರಿಗೆಲ್ಲ*
*ವೂರೂರು ಮಂದೆಲ್ಲ ಗೂಳ ಕಟ್ಟಿದರು*
*ದಾರಿಡದು ಹೋಗುವರು ಬದುಕುವ ತೆರಕೆ*
*ಆಗ ಪಾಮೇಂದ್ರನ ಕೌಲೆನಲು*

*ಸಾಗದೆ ನಿಂತರು ಸರ್ವ ಜನರೆಲ್ಲ*
*ಇಲ್ಲಿಯು ಫೌಜೆಲ್ಲ ಇಪ್ಪತ್ತು ಸಾವ್ರ*
*ಬಲ್ಲಿದವರೊಳು ಬಲ ಪರಾಕ್ರಮಿಯು*
*ವುಳ್ಳ ಕೊಟಗಾರ್, ಝುಟ್ಟ, ದಖನೀ ಸಮೂಹ*[೧೧]–
*----------ಹೀಗೆ ಮುಂದುವರೆಯುತ್ತದೆ.*

ಇಲ್ಲಿ ಸರ್ನೌಬತ್ತು ರಂಗಯ್ಯ, ಪಿಡ್ಡಪ್ಪ, ದಖನಿಯವರು, ಇಂದೋಲಾಕಾರ ಗಾಡ್ಡರು, (ಗಾರದಿ) ಸಬನೇಶಿಯಲ್ಲಪ್ಪ, ಸುಬೇದಾರ ವೆಂಕಟಸುಧೀರ, ಚಿಂತಿಮೊಲಕಪ್ಪ, ಶರಣಪ್ಪ, ಗೋಗಿಸುಬೇದಾರ, ಕೊಟಗಾರ, ರಾಂಬಾಣ, ಮಾಶಾಳೆರು ಇವರುಗಳು ಸೈನ್ಯವನ್ನು ಮೂರುಭಾಗಗಳಾಗಿ ವಿಂಗಡಿಸಿ ಪೂರ್ವ, ಉತ್ತರ, ದಕ್ಷಿಣ, ದಿಕ್ಕುಗಳಿಗೆ ತೆರಳಲು ಸಜ್ಜಾಗುತ್ತಾರೆ. ಅರಸ ಪಾಮನಾಯಕ ಪೂರ್ವ ದಿಕ್ಕಿಗೆ ಹೋಗುತ್ತಾನೆ. ಗುಂಡಲಗೇರಿ ಯುದ್ಧಭೂಮಿಯಾಯಿತು. ಆನಂದರಾಯನು ತೋಪುಗಳನ್ನು ಹಾರಿಸಿ ಬಿರುಸಿನ ಯುದ್ಧ ಮಾಡಲು ಸುರಪುರದ ಹದಿನೈದು ಸಾವಿರ ಸೈನಿಕರು ಯುದ್ಧ ಮಾಡಲು ಮುಂದಾದರು. ಯುದ್ಧ ಭೀಕರ ಸ್ವರೂಪ ತಾಳಿತು. ಸುರಪುರದ ಸೈನಿಕರಿಗೆ ಅಪಾರ ಗಾಯವಾಗಿ ಹಿಂದಿರುಗಲು ಸಜ್ಜಾದರು. ಆಗ ಯುದ್ಧ ಚಪಲರಾದ ಕೊಟಗಾರರು ಒಂದು ಕಡೆ ಮುತ್ತಿಗೆ ಹಾಕಿ ಒಳಹೊಕ್ಕ ಶತ್ರು ಸೈನ್ಯವನ್ನು ಕುರಿಗಳಂತೆ ಕಡಿದರು. ವೈರಿ ಸೈನಿಕರ ಕಿವಿ, ಮೂಗುಗಳನ್ನು ಕೊಯ್ದರು. ಕೊನೆಗೆ ಪೇಶ್ವೆಯವರ ಸೈನ್ಯ ದಿಕ್ಕುಪಾಲಾಯಿತು. ಅರಸನ ಆಜ್ಞೆಯಂತೆ ನಾಗೂರ್, ಲೊಟ್ಟಗಿರಿ, ಕುಂಟೋಜಿ, ಮುದ್ದೇ ಬಿಹಾಳಗಳನ್ನು ಲೂಟಿಗೈಯುತ್ತ ಸುಲ್ತಾನಪುರ, ಬಾಗೇವಾಡಿ ಖಜಾನೆಯನ್ನು, ಸಿಂದಗಿ, ಹಿಪ್ಪರಗಿಗಳನ್ನು ಸುಲಿದು ಸುರಪುರ ವನ್ನು ತಲುಪಿದರು[೨]. ಕೊಟಗಾರರು ಝಾಂವಲಿಯವರು, ಗುರಿಕಾರ ರಾವುತ, ಘಂಟೆ ತಿಮ್ಮಯ್ಯ, ವಜ್ರದಯ್ಯ, ತಳ್ಳಳ್ಳಿ ವಾಸಪ್ಪ ಇವುರುಗಳನ್ನೊಳಗೊಂಡ ಸೈನ್ಯವು ಕರಿಗುಡ್ಡ, ಚಂದನಕೇರಿ, ಅರಿಕೇರಿಗಳನ್ನು ಸುಲಿದು ಅರಿಕೇರಿಯಲ್ಲಿದ್ದ ಚೊಕ್ಕಪ್ಪನ ತಲೆ ಕಡಿದು ಝಾಂಡಕ್ಕೇರಿಸಿ ಅರಿಕೇರಿಯನ್ನು ವಶಪಡಿಸಿಕೊಂಡು ವಾಗಿನಗೇರಿಗೆ ಹಿಂದಿರುಗಿದರು. ಇದು ಪುರುಷಕಾರಿ ಲೋಕಯ್ಯನ ಗ್ರಂಥದಲ್ಲಿ **'ಏಳುಪಾಳ್ಯದ ಮೇಲೆ ಯುದ್ಧ'** ಎಂಬ ಶೀರ್ಷಿಕೆಯಡಿಯಲ್ಲಿ ಇದೆ. ಅದರ ವಿವರಣೆ ಈ ಕೆಳಗಿನ ಪದ್ಯ–

*ರಾಮಬಾಣದ ಝುರ್ಟು ಕೊಟಗಾರ್*
*ಪ್ರೇಮದಿಂದಲಿ ಝಾಂವಲಿಯರು*

ಆ ಮಹಾನೃಪ ಫಾಜು ಕಲಸಿದ ಹದಿನೆಂಟು ಸಾವಿರ, ಎಂದು ಹೇಳುತ್ತದೆ. ನಂತರ ಈ ಸೈನ್ಯವು ಎಲ್ಲೆಲ್ಲಿಗೆ ಮುತ್ತಿಗೆಯನ್ನು ಹಾಕಿತು ಎಂಬುದನ್ನು–

*ವಿಜಯಭೇರಿಯು ವೈಸಿ ನೃಪನೂ*
*ಸುಲನಧೀರರು ದಖನಿಯರನಾ*
*ವಿಜಯಗೈಯರಿ ನೀವು ಇನ್ನಾಧ್ವಜವು ಅರಿಕೇರ್ಲೆ*
*ಆಗ ಕೇದಿಗ್ಗೇರಿಗತ್ತಿತು*
*ವೇಗದಿಂ ಗಜತುರುಗವೆಲ್ಲಾ*
*ಸಾಗಿದರೂ ಕೊಟಗಾರ್ರು ಝುಟ್ಟಹಳ್ಳಿ ಸುಲಕೊಂತಾ*[೧೩]

ಎಂದು ವಿವರಿಸುತ್ತದೆ.

ರುಸುಮು ವಸೂಲಿಗಾಗಿಯೂ ಕೊಟಗಾರರನ್ನು ಬಳಸಿಕೊಳ್ಳುತ್ತಿದ್ದರು. ಇವರು ಗೊಬ್ಬೂರು ಲೂಟಿಗೈದು **'ಪಾಂದುರ್ಗ'**ದ ನಾಡಗೌಡ, ದೇಶಪಾಂಡೆಯವರಿಂದ ೧೭೦೦ ರುಸುಮು ಪಡೆದು ಸೈನ್ಯವು ಲೂಟಿಮಾಡಿಕೊಂಡು ಮೊಸರು ಕಲ್ಲಿನ ನಾಡಿಗನನ್ನು ಕೈದುಮಾಡಿ, ದಂಡಿನ ಖರ್ಚು ೧೦,೦೦೦ ತರಲು ಕೊಟಗಾರರಿಗೆ ಒಪ್ಪಿಸಿದರು[೧೪].

ಕುದುರೆ ಸವಾರರಾಗಿ, ಹಳ್ಳಿಗಳನ್ನು ಸುಲಿಯುವ ಅಥವಾ ದರೋಡೆ ಮಾಡುವ ಹಾಗೂ ದಾರಿಯಲ್ಲಿ ಸಿಕ್ಕ ಸಿರಿವಂತರನ್ನು ದೋಚುವ ಒಂದು ಗುಂಪು ಇತ್ತು. ಇವರನ್ನು 'ಪಿಂಡಾರಿಗಳು' ಹಾಗೂ 'ಧ್ವಂಸಾ' ವೆಂಬ ಹೆಸರಿನಿಂದ ಕರೆಯುತ್ತಿದ್ದರು. ಇವರಿಗೆ ಮರಾಠಿ ಪೇಶ್ವೆಗಳ ಸಂಪೂರ್ಣ ಬೆಂಬಲವಿತ್ತು. ಈ ದಂಡು ಸಗರನಾಡಿಗೆ ಬಂದು ಧ್ವಂಸ ಕಾರ್ಯದಲ್ಲಿ ತೊಡಗಿದಾಗ ಕೊಟಗಾರರ ಸೈನ್ಯ ವೆಂಕಟಪ್ಪ ನಾಯಕನ ಮುಖಂಡತ್ವದಲ್ಲಿ ಅವರನ್ನು ಇಲ್ಲಿಂದ ಕಾಲ್ತೆಗೆಯು ವಂತೆ ಮಾಡಿತು.

ಪೇಶ್ವೆಯವರು ಪೊನ್ನಾಳಕ್ಕೆ ಮುತ್ತಿಗೆ ಹಾಕಿದಾಗ ಸುರಪುರ ಸೈನ್ಯದಲ್ಲಿನ ಕೊಟಗಾರರು, ಜಟ್ಟರು ರಾಮಬಾಣದ ಮಾಶಾಳೆಯವರೊಂದಿಗೆ ಸೇರಿ ಕೆಚ್ಚಿನಿಂದ ಮುಂದಕ್ಕೆ ಸಾಗಿ ಶತ್ರುಗಳನ್ನು ಕಡಿಯ ಹತ್ತಿದರು. ಪೇಶ್ವೆಯವರ ರಕ್ತದಿಂದ ಬೋನ್ಹಾಳ ಕೆರೆಯ ನೀರು ರಕ್ತವಾಗಿ ಹರಿಯುತ್ತಿರುವಂತೆ ಭಾಸವಾಯಿತು. ಕೊಟಗಾರರು ಮಹಿಪತಿ ಶಿವಾಜಿರಾಯ ನನ್ನು ಬಂಧಿಸಿ ಅರಸನೆದುರಿಗೆ ನಿಲ್ಲಿಸಿದರು[೧೫]. ಮರಾಠರಿಗೆ ಹೈದ್ರಾಬಾದ್ ನಿಜಾಮ ಕೊಡಬೇಕಾಗಿದ್ದ ಚೌಥ್ (ಶೇಕಡಾ ೨೫ ರಷ್ಟು ಭಾಗ) ರುಸುಮುಗಳನ್ನು ಕೊಡಲಿಲ್ಲ. ಹೀಗಾಗಿ ಖರ್ದೆ ಎಂಬಲ್ಲಿ ಯುದ್ಧ ಪ್ರಾರಂಭವಾಯಿತು. ಆಗ ನಿಜಾಮನು ವೆಂಕಟಪ್ಪನಾಯಕನ ಸಹಾಯ ಕೋರಿದನು. ಆಗ ಸುರಪುರದ ಅರಸ ಕೊಟಗಾರರನ್ನು ಕಳುಹಿಸಿದನು. ಕೊಟಗಾರರು ಮರಾಠರ ೩೦೦೦ ಸೈನಿಕರನ್ನು ಗಾಯ ಗೊಳಿಸಿದರು.

ಸುರಪುರದ **ಇಮ್ಮಡಿ ವೆಂಕಟಪ್ಪನಾಯಕ** (ಕ್ರಿ.ಶ. ೧೭೭೩ ರಿಂದ ೧೮೦೨)ನ ಪತ್ನಿ ಕನಕಗಿರಿಯ ನರಸಿಂಗಮ್ಮ ನಿಗೆ ಬಾಪೂಸಾಹೇಬ ಮತ್ತು ಶ್ರೀನಿವಾಸನಾಯಕ ಎಂಬ ಮಕ್ಕಳಿದ್ದರು. ಕಿರಿಯವನಾದ ಶ್ರೀನಿವಾಸನಾಯಕನ ಜಾವಳ ಕಾರ್ಯಕ್ರಮಕ್ಕೆ ಸೋದರಮಾವ ದೇವದುರ್ಗದ ರಂಗಪ್ಪ ನಾಯಕನನ್ನು ಮತ್ತು ಇತರ ಬಂಧು ಬಳಗವನ್ನು ಬರಲು ವೆಂಕಟಪ್ಪನಾಯಕ ಕೋರಿದ್ದನು. ಆದರೆ ಅವರು ಬರಲಿಲ್ಲ.

ಕಾರಣ ಇಮ್ಮಡಿ ವೆಂಕಟಪ್ಪನಾಯಕ ಮುಸ್ಲಿಂ ಜಾತಿಯ ಕನ್ಯೆಯನ್ನು ಮದುವೆಯಾಗಿ ತನ್ನ ಕುಲದಲ್ಲಿ ಸೇರಿಸಿಕೊಂಡಿದ್ದನು. ಇಂಥ ಶುಭ ಸಮಾರಂಭದಲ್ಲಿ ಪರಕುಲದವರೊಂದಿಗೆ ಭೋಜನ ಮಾಡುವದು ಈತನಿಗೆ ಸರಿಯಿರಲಿಲ್ಲ. ಹೀಗಾಗಿ ಬಂಧು ವರ್ಗದವರು, ಗುರಿಕಾರ ಸರನೌಬತ್ತು, ಸರಹವಾಲ್ದಾರ ಮುಂತಾದ ಸ್ಥಳೀಯ ಜನರೂ ಬರಲಿಲ್ಲ. ಇದಕ್ಕೆಲ್ಲಾ ರಂಗಪ್ಪನಾಯಕ ಕಾರಣವೆಂದು ಭಾವಿಸಿದ ಇಮ್ಮಡಿ ವೆಂಕಟಪ್ಪನಾಯಕ ಸಾಸಿವೆಗೇರಿ, ಚೆಂದನಕೇರಿ ಹಾಗೂ ದೇವದುರ್ಗದ ಪ್ರಮುಖ ಭಂಟರನ್ನು ಕರೆದು, ಸುರಪುರದ ಸದರಬಾರಗೀರ ಗಾರಡಿಯವರು, ಶಿಲೇದಾರ ಹಾಗೂ ಕೊಟಗಾರರು ಮುಂತಾದವರನ್ನು ಮತ್ತು ದಂಡಿನ ಮುಖ್ಯಸ್ಥರನ್ನು ನೇಮಕ ಮಾಡುತ್ತಾನೆ.

ಆಗ ದೇವದುರ್ಗದ ರಂಗಪ್ಪನಾಯಕನ್ನು ಸೆರೆ ಹಿಡಿದು ತರಬೇಕೆಂದು ಕಟ್ಟಾಜ್ಞೆ ಮಾಡುತ್ತಾನೆ. ಆಗ ಸುರಪುರದ ಸೈನ್ಯ ದೇವದುರ್ಗದ ಅಂಜಳವನ್ನು ಮುತ್ತಿಗೆ ಹಾಕಿತು. ದೇವದುರ್ಗದ ರಂಗಪ್ಪನಾಯಕನ ೮೦೦೦ ಸೈನ್ಯ ಸುರಪುರದವರನ್ನು ಎದುರಿಸಿದರೂ ಸುರಪುರದವರ ತೋಪುಗಳ ಹೊಡೆತ ಹಾಗೂ ಕೊಟಗಾರರ ಸಹಾಯದಿಂದ ದೇವದುರ್ಗ ಸೈನ್ಯವು ದಿಕ್ಕುಪಾಲಾಯಿತು. ನಂತರ ದೇವದುರ್ಗವನ್ನು ಲೂಟಿ ಮಾಡಲಾಯಿತು. ಆಗ ರಂಗಪ್ಪನಾಯಕ ಹೆದರಿ ತಲೆಮರೆಸಿಕೊಂಡನು. ಶೋಧಿಸ ಹೊರಟ ಸುರಪುರದ ಕೊಟಗಾರರು ಬೆನ್ನುಹತ್ತಿದರು. ತಪ್ಪಿಸಿಕೊಳ್ಳುವ ಯತ್ನದಲ್ಲಿ ಈತ ಉಳಿದ ತನ್ನ ಪರಿವಾರವನ್ನು ಕರೆದುಕೊಂಡು ದೇವದುರ್ಗದ ಬೆಟ್ಟದ ಪೂರ್ವಕ್ಕಿದ್ದ ಮದ್ದಿನ ಮನೆಗೆ ಹೋಗಿ ತನ್ನ ಕೈಯ್ಯಲ್ಲಿದ್ದ ಕೊಳ್ಳಿಯಿಂದ ಸಿಡಿಮದ್ದಿಗೆ ಬೆಂಕಿ ಹಚ್ಚಿಕೊಂಡು ಆಹುತಿಯಾದನು. ಹೀಗಾಗಿ ಈತನನ್ನು ಕೊಳ್ಳಿರಂಗಪ್ಪನಾಯಕನೆಂದು ಕರೆಯುತ್ತಾರೆ. ಈತನನ್ನು ಅಡಗಿಸುವಲ್ಲಿ ಕೊಟಗಾರ ಸೈನಿಕರ ಪಾತ್ರವು ಬಹು ಪ್ರಮುಖವಾಗಿತ್ತು.

ಇಂಥ ಶೂರತ್ವದ, ಪ್ರಾಮಾಣಿಕತೆಯ ಕೊಟಗಾರ ಜನಾಂಗವನ್ನು ಸುರಪುರದ ಅರಸರು ಉತ್ತಮ ರೀತಿಯಿಂದ ಕಂಡಿದ್ದಾರೆ. ಎಲ್ಲಾ ಸಮಾಜದ ಹಾಗೂ ಕೊಟಗಾರರ ಕುಟುಂಬದಲ್ಲಿ ಗಂಡು ಮಗು ಜನಿಸಿದರೆ ಆ ಮಗುವಿನ ಪೋಷಣೆಗಾಗಿ ಸಂಸ್ಥಾನದ ಖಜಾನೆಯಿಂದ ಪ್ರತಿ ತಿಂಗಳು ಐದು ರೂಪಾಯಿಗಳನ್ನು ಆ ಮಗು ಪ್ರೌಢನಾಗುವವರೆಗೆ ನೀಡುತ್ತಿದ್ದರು. ಮುಂದೆ ಆ ಬಾಲಕನಿಗೆ ಗರಡಿ ಮನೆಯಲ್ಲಿ ಮಲ್ಲವಿದ್ಯೆ, ಶಸ್ತ್ರಾಸ್ತ್ರ ವಿದ್ಯೆ, ಕುದುರೆ ಸವಾರಿ, ಈಜುವಿಕೆ, ಮುಷ್ಟಿಯುದ್ಧ, ತುಪಾಕಿ ಉಪಯೋಗಿಸುವುದು ಮತ್ತು ಜಟ್ಟಿ ಕಾಳಗ ಹೀಗೆ ಅನೇಕ ಕಲೆಗಳನ್ನು ಕಲಿಸುತ್ತಿದ್ದರು. ನಂತರ ಅಂಥ ಯುವಕರನ್ನು ಅರಸನ ಸಮ್ಮುಖದಲ್ಲಿ ಕರೆತಂದು ಸಾಮೂಹಿಕವಾಗಿ ಲಗ್ನ ಮಾಡುತ್ತಿದ್ದರು.

ಅರಸರು ಲಗ್ನವಾದ ನವದಂಪತಿಗಳಿಗೆ ಶಸ್ತ್ರಾಸ್ತ್ರ ಮತ್ತು ಉಡುಗೊರೆಗಳನ್ನು ನೀಡುತ್ತಿದ್ದರು. ಸಂಸ್ಥಾನವನ್ನು ಬೇರೆಯವರು ಆಕ್ರಮಿಸಿದಾಗ, ರಕ್ಷಣೆಗಾಗಿ ಅರಸನಿಂದ ಕರೆ ಬಂದಾಗ ಶಸ್ತ್ರಸಮೇತರಾಗಿ ರಾಜಧಾನಿಗೆ ಧಾವಿಸಿ ಬರಬೇಕೆಂದು ಅರಸನ ಸಮ್ಮುಖದಲ್ಲಿ ಗೌಪ್ಯ ಪ್ರತಿಜ್ಞೆಗಳನ್ನು ಮಾಡುವ ಸಂಪ್ರದಾಯವಿತ್ತು.

ಪ್ರತಿ ವರುಷ ಸುರಪುರದಲ್ಲಿ ಕೃಷ್ಣ ಜನ್ಮಾಷ್ಟಮಿ ದಿನದಂದು ಶ್ರೀ ವೇಣುಗೋಪಾಲ ಸ್ವಾಮಿಯ ಜಾತ್ರೆಯ ನಡೆಯುತ್ತದೆ. ಆಗ ಜಾತ್ರೆಯ ಅಂಗವಾಗಿ ಅನೇಕ ಸಾಹಸದ ಪ್ರದರ್ಶನಗಳು ಜರಗುತ್ತಿದ್ದವು. ಅವುಗಳಲ್ಲಿ ಚಿರತೆ ನಾಯಿಗಳ ಕಾದಾಟವೂ ಒಂದು, ಆಗ ೪-೫ ದಿನಗಳಿಂದ ಉಪವಾಸವಿದ್ದ ಚಿರತೆಯನ್ನು ತಂದು ಅದರ ಕಾಲಿಗೆ ಕೊಟಗಾರು ಹಗ್ಗಕಟ್ಟುತ್ತಿದ್ದರು. ಬೇಟೆ ನಾಯಿಗಳನ್ನು ಬಿಟ್ಟು ಚಿರತೆಯನ್ನು ಸೋಲಿಸುವ ಪ್ರದರ್ಶನ ನಡೆಸುತ್ತಿದ್ದರು. ಅಲ್ಲದೇ ಸಂಸ್ಥಾನದಲ್ಲಿ ಯಾವುದೇ ಹಬ್ಬ, ಉತ್ಸವ ಹಾಗೂ ಸಭೆ ಸಮಾರಂಭಗಳು ನಡೆದರೆ ಅಲ್ಲಿ ಗಲಾಟೆಯಾಗದಂತೆ ಶಾಂತತೆಯನ್ನು ನೋಡಿಕೊಂಡು ಹೋಗಲು ಕೊಟಗಾರರನ್ನು ನೇಮಿಸಲಾಗಿರುತ್ತಿತ್ತು.

ಹೀಗೆ ಹತ್ತು ಹಲವು ಯುದ್ಧಗಳಲ್ಲಿ ಹಾಗೂ ಸುರಪುರ ಸಂಸ್ಥಾನದ ಅರಸರ ರಕ್ಷಣೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರಲ್ಲದೇ ಸುರಪುರಕ್ಕೆ ಬೆನ್ನೆಲುಬಾಗಿ ನಿಂತು ಹೋರಾಡಿದವರು ಈ ಕೊಟಗಾರರು. ಆದರೆ ಪ್ರಸ್ತುತ ಚರಿತ್ರೆಯ ಪುಟಗಳಲ್ಲಿ ಹೆಚ್ಚಾಗಿ ಅರಸರ ವೈಭವಗಳೇ ತುಂಬಿವೆ. ಇವರ ವೈಭವಕ್ಕೆ ಇಂಬಾಗಿ ನಿಂತು ಅವರ ಏಳ್ಗೆಗಾಗಿ ಶ್ರಮಿಸಿದ ಅವರ ಅಧೀನದ ಕೆಳವರ್ಗದವರ ಚರಿತ್ರೆ ಕಣ್ಮರೆಯಾಗಿ ಹೋಗುತ್ತಿದೆ. ಇಂದು ಸ್ಥಳೀಯ ಚರಿತ್ರೆಯಲ್ಲಿ ಕೆಳಮಟ್ಟದವರ ಚರಿತ್ರೆಯ ಕುರಿತಾಗಿ ಅನಾಸಕ್ತಿ ತಾಳುತ್ತಿರುವುದು ಸಲ್ಲದು. ಅವರನ್ನು ಯಾವುದೇ ಕಾರಣಕ್ಕೂ ಕಡೆಗಣಿಸುವಂತಿಲ್ಲ. ಹಾಗೇನಾದರೂ ಮಾಡಿದರೆ ಚರಿತ್ರೆಗೆ ದ್ರೋಹ ಮಾಡಿದಂತೆ. ಒಂದು ಮನೆತನದ ರಾಜವೈಭವದಲ್ಲಿ ಅಂಥವರ ಕಾಣಿಕೆಯೂ ಅವಿಸ್ಮರಣೀಯವಾದದು. ಅವರ ಸೇವೆ, ತ್ಯಾಗ, ಬಲಿದಾನಗಳು ಒಂದಕ್ಕಿಂತ ಇನ್ನೊಂದು ಮೇಲೆಂಬಂತೆ ಮೆರೆದಿರುತ್ತವೆ. ಅವುಗಳನ್ನು ದಾಖಲಿಸುವ, ವಿಶ್ಲೇಷಿಸುವ ಕಾರ್ಯವಾಗ ಬೇಕಾಗಿದೆ.

ಇಂದು ಕೊಟಗಾರ ಜನಾಂಗದವರ ಕುಟುಂಬಗಳು ಸುರಪುರದ ದೊಣ್ಣಿಗೇರಿಯಲ್ಲಿ ೧೫, ಹುಲಕಲ್ಲಕೇರಿಯಲ್ಲಿ ೨೦, ಪಲ್ಲೇದ ಕೇರಿಯಲ್ಲಿ ೨೫, ಗೋಗಿಕೇರಿಯಲ್ಲಿ ೧೮, ರಾಮಪುರ ಕೇರಿಯಲ್ಲಿ ೨೬, ಸಿದ್ದಾಪುರ ಕೋಟೆ ಬಾಗಿಲ ಹತ್ತಿರ ೮ ಮತ್ತು ಹಸನಾಪುರ ಕೋಟೆಬಾಗಿಲಿನ ಹತ್ತಿರ ೧೫ ಕುಟುಂಬಗಳು ನೆಲೆಸಿವೆ. ಮತ್ತು ವಾಗಿನಗೇರಿಯಲ್ಲಿ ಎಲ್ಲೆಲ್ಲಿ ಕೋಟೆಯ ಬಾಗಿಲುಗಳಿವೆಯೋ ಅಲ್ಲಲ್ಲಿ ಇವರ ಮನೆಗಳಿವೆ.


ಸುರಪುರದ ಹುಲ್ಲಕೇರಿಯಲ್ಲಿರುವ ಕೊಟಗಾರರ ಮನೆಗಳು


ಸುರಪುರ ಸಂಸ್ಥಾನದ ಕೊಟಗಾರರ ವಂಶಸ್ಥರು

ಪ್ರಸ್ತುತ ದಿನಗಳಲ್ಲಂತೂ ಇವರ ಬದುಕು ಚಿಂತಾಜನಕ ಸ್ಥಿತಿಯನ್ನು ತಲುಪಿದೆ. ಮೂರ್ಹೊತ್ತು ಊಟಕ್ಕೂ ಗತಿಯಿಲ್ಲದಾಗಿದೆ. ಇವರಿಗೆ ಅಂದು ಅರಸರು ಸರಿಯಾಗಿ ನೋಡಿಕೊಂಡರೆ ಸಾಕಾಗಿತ್ತೇ ಹೊರತು ಯಾವುದೇ ಆಸ್ತಿ-ಪಾಸ್ತಿಗೆ ಆಸೆ ಪಡಲಿಲ್ಲ. ಅರಸರು ನೀಡಿದ ಇನಾಮುಗಳು, ಕೆಲವು ಭಂಟಮಾನ್ಯ ಇನಾಮುಗಳನ್ನು ಮಾತ್ರ ಪಡೆದುಕೊಂಡರು. ಇವನ್ನೇ ಶೂರತನದ ಇನಾಮುಗಳೆಂದು ಕರೆಯುತ್ತಾರೆ. ಈ ಇನಾಮುಗಳ ಸಂಖ್ಯೆ ತೀರಾ ಕಡಿಮೆ. ಇಂದು ಇವರಿಗೆ ಕೆಲವು ಹಬ್ಬಗಳಲ್ಲಿ ಅರಸು ಮನೆತನದಿಂದ ಚಾಜಗಳಿವೆ. ಇಂದು ಇವರು ಶೈಕ್ಷಣಿಕವಾಗಿ ಬಹಳ ಹಿಂದುಳಿದ್ದಾರೆ. ಕೇವಲ ಇವರ ಸಾಕ್ಷರತೆಯ ಪ್ರಮಾಣ ಶೇಕಡಾ ೧೦. ಸದ್ಯ ಹಲಗಿ ಬಾರಿಸುವದು, ಚರ್ಮವನ್ನು ಹದಗೊಳಿಸುವದು, ಕಲ್ಲು ಹೊಡೆಯುವದು, ಗೋಡೆ ಕಟ್ಟುವದು, ಮುಂತಾದ ಕೆಲಸಗಳಲ್ಲಿ ನಿರತರಾಗಿದ್ದಾರೆ.

[ಈ ಪ್ರಬಂಧವನ್ನು ಮಂಡಿಸಲು ಪ್ರೋತ್ಸಾಹಿಸಿ, ಮಾರ್ಗದರ್ಶನವನ್ನು ನೀಡಿದ ಖ್ಯಾತ ಇತಿಹಾಸ ತಜ್ಞರಾದ ಪ್ರೊ॥ ಲಕ್ಷ್ಮಣ್ ತೆಲಗಾವಿ ಗುರುಗಳಿಗೆ, ಸುರಪುರ ಹಾಗೂ ಕೆಲವು ಹಳ್ಳಿಗಳಿಗೆ ಕ್ಷೇತ್ರಕಾರ್ಯ ಕೈಗೊಂಡಾಗ ನನ್ನ ಜೊತೆಗಿದ್ದು ಅನೇಕ ಮಾಹಿತಿಗಳನ್ನು ಒದಗಿಸಿಕೊಟ್ಟ ಸುರಪುರದ ಹಿರಿಯ ನ್ಯಾಯವಾದಿಗಳಾದ ಜೆ.ಅಗಸ್ಟೀನ್, ನಿಂಗಣ್ಣ ಚಿಂಚೋಡಿ, ತಮ್ಮಣ್ಣನಾಯಕ ಯಲ್ಲಪ್ಪ ಹುಲ್ಲಕೇರಿ, ಮತ್ತು ವೆಂಕಟೇಶ ಮುತಾಲಿಕ ಮೆದಿಕಿನಹಾಳ ಅವರುಗಳಿಗೆ, ಅಲ್ಲದೇ ಸದಾ ನನ್ನ ಸಂಶೋಧನಾ ಕೆಲಸಗಳಿಗೆ ಪ್ರೋತ್ಸಾಹ ನೀಡುತ್ತಿರುವ ಶ್ರೀಮತಿ ಸರೋಜ ಪೋಳ ಉಪ ಪ್ರಾಚಾರ್ಯರು ಹಾಗೂ ಬೋಧಕ ವರ್ಗ, ಸರಕಾರಿ ಪದವಿ ಪೂರ್ವ ಕಾಲೇಜು (ಪ್ರೌ.ವಿ) ಲಿಂಗಸುಗೂರು ಇವರುಗಳಿಗೆ ನನ್ನ ಅನಂತ ಕೃತಜ್ಞತೆಗಳು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕಪಟರಾಳ ಕೃಷ್ಣರಾವ್., ೧೯೭೭, **ಸುರಪುರ ಸಂಸ್ಥಾನ ಇತಿಹಾಸ**, ಪುಟ-೯೧.
೨. ಭಾಸ್ಕರರಾವ್ ಮುಡಬೂಳ., ೨೦೦೧, **ಮರೆತುಹೋದ ಸುರಪುರ ಇತಿಹಾಸ**, ಪುಟ-೧೫.
೩. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪುಟ-೮೦.
೪. ಬಿ. ಕೃಷ್ಣಮಾಚಾರ್ಯ., ೨೦೦೩, **ಮರೆಯಲಾಗದ ಸುರಪುರ ರಾಜರ ಚರಿತ್ರೆ**, ಪುಟ-೮೧.
೫. ದೇವೇಂದ್ರಪ್ಪ ರಂಗರಾಜ., **ಸುರಪುರ ಸಂಸ್ಥಾನ ಒಂದು ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಮಹಾ ಪ್ರಬಂಧ- ೧೯೯೫, ಪುಟ-೫೨.
೬. ಅದೇ, ಪುಟ-೫೨.
೭. ಅದೇ, ಪುಟ-೫೨.
೮. ಪುರುಷಕಾರಿ ಲೋಕಯ್ಯ (ಹಸ್ತಲಿಪಿ) ಲಿಪಿಕಾರರು ಪಂ॥ ಪಾಪಯ್ಯಶಾಸ್ತ್ರಿ: **ಸುರಪುರ ರಾಜರುಗಳ ಚರಿತ್ರೆ** (ಗೋಸಲ ವಂಶ) ಪುಟ-೩೨.
೯. ಭಾಸ್ಕರರಾವ್ ಮುಡಬೂಳ., ಪೂರ್ವೋಕ್ತ, ಪುಟ-೨೬.
೧೦. **ಸಗರನಾಡ ದರ್ಶನ.**, (ಸ್ಮರಣ ಸಂಚಿಕೆ) ೧೯೮೫. ಎ.ಕೃಷ್ಣ (ಸಂ), ಪುಟ-೨೮೧.
೧೧. ಬಿ. ಕೃಷ್ಣಮಾಚಾರ್ಯ., ಪೂರ್ವೋಕ್ತ, ಪುಟ-೧೦೭.
೧೨. ಬಿ. ಕೃಷ್ಣಮಾಚಾರ್ಯರು ರಾಜಗುರುಗಳು., ಸುರಪುರ ಸಂಸ್ಥಾನ ಇವರ ಹೇಳಿಕೆಯಿಂದ.
೧೩. ಪುರುಷಕಾರಿ ಲೋಕಯ್ಯ (ಹಸ್ತಲಿಪಿ)., ಪೂರ್ವೋಕ್ತ-ಪುಟ ೪೩-೪೫.
೧೪. ಬಿ. ಕೃಷ್ಣಮಾಚಾರ್ಯ., ಪೂರ್ವೋಕ್ತ, ಪುಟ-೧೪೮.
೧೫. ಬಿ. ಕೃಷ್ಣಮಾಚಾರ್ಯರು., ರಾಜಗುರುಗಳು ಸುರಪುರ ಸಂಸ್ಥಾನ ಇವರ ಹೇಳಿಕೆಯಿಂದ.

ಇಂದಿರಾ ಹೆಗ್ಗಡೆ*

# ಸುರಾಲ – ಉಳ್ಳಾಲ – ಪುತ್ತಿಗೆ ರಾಜಕುಟುಂಬಗಳ ಬಳಿ/ವಂಶ

ಮೂಲತಃ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೆಳಗಾವಿಯಿಂದ ಸುರಾಲಿನ ತೊಳಹರರು ತುಳುನಾಡಿಗೆ ವಲಸೆ ಬಂದಿರಬಹುದೆಂದು ಭಾವಿಸಲಾಗಿದೆ. ಅವರ ಮೂಲದ ಬಗ್ಗೆ ಮೇಲಿನ ಅಭಿಪ್ರಾಯವೇ ಖಚಿತ ಎಂದು ಹೇಳಲಾಗದು. ಆದರೆ ೧೧–೧೨ನೇ ಶತಮಾನದ ತುಳುನಾಡಿನ ಶಾಸನಗಳಲ್ಲಿ ಅವರ ಬಗ್ಗೆ ಮಾಹಿತಿಗಳು ಲಭ್ಯವಾಗುತ್ತವೆ. ತುಳುನಾಡಿನ ಶಿರಿಯಾರದ ಶಾಸನವೊಂದು (ಕ್ರಿ.ಶ. ೧೩೭೯) ಬಾರ್ಕೂರಿನ ಹತ್ತು ಕೇರಿಯ ಹಲರು, ಹಂಜಮಾನರು, ಸಾಂತಳಿಗೆಯ ತೋಳಾಹರ– ಇವರುಗಳ ಸಮಕ್ಷಮವನ್ನು ತಿಳಿಸುತ್ತದೆ. ಇಲ್ಲಿ 'ಸಾಂತಳಿಗೆಯ ತೋಳಹರ' ಎಂದಿರುವುದರಿಂದ ತೋಳಹರರು ಸಾಂತಳಿಗೆಯಿಂದ ತುಳುನಾಡಿಗೆ ಬಂದಿರಬೇಕು ಎಂದು ಗುರುರಾಜಭಟ್ಟರು ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಶ. ೧೦೪೨ರ ಸಾಗರ ತಾಲೂಕಿನ ಶಾಸನ ಹಾಗೂ ಕ್ರಿ.ಶ. ೧೩೯೯ರ ಬಾರ್ಕೂರು ಶಾಸನಗಳಲ್ಲಿ 'ಸಾಗುವಳಿಗೆಯ ಕೋಲಹರ' ಎಂದಿರುವುದು 'ಸಾಂತಳಿ ಗೆಯ ತೋಳಹರ' ಆಗಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ. [೧]ಬೆಳಗಾವಿಯ ಸಿರಸಂಗಿಯ ಶಾಸನದಲ್ಲಿ (೧೧೪೪) ಕುಲದೀಪಕನನೆನಿಸಿ ಕಾವಗೌಡಂ ತೊಜಿಹರ ಕುಲಕ್ಕೆ ತಿಲಕಂ'[೨] ಎಂದು ಉಲ್ಲೇಖಿಸುತ್ತದೆ.

ಶಾಸನಗಳಲ್ಲಿ ತೋಳಹರ ವಂಶದ ಹೆಸರು ಉಲ್ಲೇಖವಾಗಿರುವುದನ್ನು ಹಿನ್ನೆಲೆಯಾಗಿಟ್ಟುಕೊಂಡು ಸುರಾಲಿನ ತೋಳಹರು ಶಾಸನ ದೊರಕಿರುವ ನಾಡಿನವರೇ ಎಂದು ಗ್ರಹಿಸಬೇಕಾಗಿಲ್ಲ. ತೋಳಹರ ಬಳಿ(ವಂಶ) ಯು ನಾಗ ಬಳಿಯ ಕೂಡುಬಳಿ ಎನ್ನುತ್ತಾರೆ ತೋಳಹ ಬಳಿಯವರು. ಅವರ ಪರಂಪರಾಗತ ನಂಬಿಕೆಯಂತೆ ತೋಳಹರ ಬಳಿ ಮತ್ತು ನಾಗ ಬಳಿಯವರು ಒಂದೇ ಮಾತೃಮೂಲ ಕುಟುಂಬ; ಅಕ್ಕ ತಂಗಿಯರ ಮಕ್ಕಳು. ಅಂದರೆ ತೋಳಹರ ವಂಶ ನಾಗವಂಶದ ಪ್ರವರ ಶಾಖೆ. ನಾಗವಂಶ ಅತ್ಯಂತ ಪುರಾತನ ವಂಶ. ತುಳುವರ ಅಸ್ಮಿತೆ (identity) ಇರುವುದು ಇವರ ವಂಶನಾಮ ಅರ್ಥಾತ್ ಬಳಿಯಲ್ಲಿ.

೧೯೧೮ರ ವರೆಗೆ ಸುರಾಲು– ಉಳ್ಳಾಲ– ಪುತ್ತಿಗೆ– ಇವು ಮೂರು ರಾಜ ಮನೆತನಗಳು ಒಂದೇ ವಂಶದವರಿಂದ ಆಳಲ್ಪಡುತ್ತಿದ್ದ ಬಗ್ಗೆ ಆ ಮನೆಯವರಿಂದ ವಿವರ ಲಭ್ಯವಾಗುತ್ತದೆ. ತೋಳಹರ ಎಂಬುದು ಸುರಾಲಿನ ಪಟ್ಟದ ಹೆಸರು. ಚೌಟ ಎಂಬುದು ಪುತ್ತಿಗೆಯ ಪಟ್ಟದ ಹೆಸರಾಗಿದೆ. ಆದರೆ ಸುರಾಲಿನ ಕುಟುಂಬದ ತೋಳಾರ ಎಂಬ ಹೆಸರು ವಂಶನಾಮವಾಗಿಯೂ ಪಟ್ಟದ ನಾಮವಾಗಿಯೂ ಇದ್ದಿರಬೇಕು.

**ಸುರಾಲಿನ ತೋಳಾರ ವಂಶದ ಬಗ್ಗೆ ದೊರೆತ ಪರಂಪರಾಗತ ಹೇಳಿಕೆ :** ಸುರಾಲಿನ ತೋಳಾರ ವಂಶದ ಅರಸರ ಮೂವರು ಸೋದರಿಯರಲ್ಲಿ ಪಾಲು ಆಯಿತು. ಸುರಾಲು ಅರಮನೆ, ದೊಡ್ಡಮನೆ, ಮೊದಲ ತಾವು ಎಂಬ ಮೂರು ಮನೆಗಳಲ್ಲಿ ಮೂರು ಮಂದಿ ಸೋದರಿಯರು ಪಾಲು ಪಡೆದರು. ಕಿರಿಯ ಸೋದರಿ ತನಗೆ ಬಂದ ಪಾಲು ಕಡಿಮೆಯಾಯಿತು ಎಂದು ಸುರಾಲ್ ಅರಮನೆಯ ಹಿರಿಯಕ್ಕಳಲ್ಲಿ ನೊಂದುಕೊಳ್ಳುತ್ತಾಳೆ. ಆಗ ಅರಮನೆಯಲ್ಲಿದ್ದ ಅಕ್ಕ, ತಂಗಿಯನ್ನು ಸಮಧಾನಿಸಿ ಸುರಾಲಿನಲ್ಲಿ ಆಗುವ ಎಲ್ಲ ಗ್ರಾಮ ಕಾರ್ಯಕ್ರಮಗಳಲ್ಲಿ ಮೊದಲ ಗೌರವವು ತನ್ನ ತಂಗಿಯ ಮನೆಗೆ ಸಲ್ಲುವ ವ್ಯವಸ್ಥೆ ಮಾಡಿದಳಂತೆ. ಹೀಗೆ ತಂಗಿಯ ಮನೆಗೆ 'ಮೊದಲತಾವು' ಎಂಬ ಹೆಸರು ಬಂತು ಎನ್ನುತ್ತಾರೆ. ದೊಡ್ಡಮನೆ ಮುಂದೆ ನಿಸ್ಸಂತತಿಯಾಯಿತು. ಮೊದಲ ತಾವಿನಲ್ಲಿ ಈಗಲೂ ತೋಳಾರ ಬಳಿಯವರು ಇದ್ದಾರೆ. ಹೀಗಾಗಿ ಮೇಲಿನ ಪರಂಪರಾಗತ ಹೇಳಿಕೆ ನಂಬಲರ್ಹವಾಗಿದೆ. ಸುರಾಲ್ ಅರಸರ ಪಟ್ಟಾಭಿಷೇಕದಲ್ಲಿ ಪಟ್ಟದ ಅರಸನನ್ನು ಅಲಂಕರಿಸಿ ಕೂರಿಸುವ ಅಧಿಕಾರ 'ಮೊದಲತಾವು' ಮನೆಯದು. ಈಗ ಮೊದಲ ತಾವಿನಲ್ಲಿ ಇರುವವರು ಬಂಟರು. ಸುರಾಲಿನಲ್ಲಿ ಇರುವವರು ಜೈನರು.

* ನಂ. ೬, ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು – ೫೬೦ ೦೪೦.

**ಸುರಾಲಿನಿಂದ ಉಳ್ಳಾಲಕ್ಕೆ ಬಂದ ಸುರಾಲ್‌ನ ರಾಜ ವಂಶ :** ಸುರಾಲಿನಲ್ಲಿ ಆಳುತ್ತಿದ್ದ ತೋಳಾರ ರಾಜ ವಂಶದ ಶಾಖೆಯೊಂದು ಉಳ್ಳಾಲಕ್ಕೆ ಬಂದು ಉಳ್ಳಾಲದಿಂದ ಆಳುತ್ತಾರೆ. ಈ ಮಾತನ್ನು ಐಗಳು ದಾಖಲಿಸಿದ್ದಾರೆ. ಚೌಟ ಅರಸು ಮನೆಯ ಉತ್ತರಾಧಿಕಾರಿ ಕುಂಞಮ್ಮ ಸೆಟ್ಟರ ಮೊಮ್ಮಗ ರಾಜೇಂದ್ರರು ಮತ್ತು ಸುರಾಲಿನ ತೋಳಾರ ಅರಮನೆಯ ಚಂದ್ರಶೇಖರ ಅವರ ಮಗ ಸಂತೋಷ್ ಕುಮಾರ್ ಅವರು ತಮ್ಮ ಹಿರಿಯರಿಂದ ಕೇಳಿದ ಮೇಲಿನ ಮಾತನ್ನು ನೆನಪಿಸಿ ಕೊಳ್ಳುತ್ತಾರೆ. ಈ ಎರಡೂ ಮನೆತನದವರ ಹೇಳಿಕೆಯ ಪ್ರಕಾರ ಸುರಾಲಿನ ರಾಜವಂಶದ ಶಾಖೆಯವರು ಉಳ್ಳಾಲದಲ್ಲಿ ಚೌಟ ಎಂಬ ಪಟ್ಟದ ಹೆಸರಲ್ಲಿ ಆಳುತ್ತಾರೆ. ಮುಂದೆ ಉಳ್ಳಾಲದ ಶಾಖೆ ಪುತ್ತಿಗೆಗೆ ಹೋಗಿ ಅಲ್ಲೂ ಚೌಟ ಹೆಸರಲ್ಲಿ ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತದೆ. ಸುರಾಲಿನಿಂದ ಉಳ್ಳಾಲಕ್ಕೆ ಇವರು ಬಂದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಉಳ್ಳಾಲ ದಿಂದ ಪುತ್ತಿಗೆಗೆ ಇವರು ಹೋದ ಬಗ್ಗೆ ಈ ಅರಸು ಮನೆತನ ಗಳು ಮಾತ್ರವಲ್ಲ ಮೂಡಬಿದ್ರೆಯ ಸ್ಥಳೀಯರೂ ಹೇಳುತ್ತಾರೆ.

**ಉಳ್ಳಾಲದಲ್ಲಿ ಚೌಟ ಪಟ್ಟ:** ಸುರಾಲಿನ ರಾಜವಂಶ ಉಳ್ಳಾಲದ ಹಿಂದಿನ ಅರಸು ಪಟ್ಟವನ್ನು ಗೆದ್ದು ಪಟ್ಟ ಕಟ್ಟಿಸಿ ಕೊಂಡಿರಬೇಕು. ಇದು ತುಳುನಾಡಿನ ರೂಢಿ. ಸಿಂಹಾಸನದಲ್ಲಿ ಯಾವ ವಂಶದ ಅರಸು ಕುಳಿತು ಆಳಿದರೂ ಅವರಿಗೆ ಆಯಾ ಸಿಂಹಾಸನದ ಅರ್ಥಾತ್ ಪಟ್ಟದ ಉಪನಾಮ ಅನ್ವಯವಾಗುತ್ತದೆ. ಯಾವ ವಂಶದವರಿಗೆ ಪಟ್ಟ ಆದರೂ ಅವರ ವಂಶದ ಹೆಸರು ಹುಟ್ಟುವಾಗ ಇದ್ದುದು ಮುಂದುವರಿ ಯುತ್ತದೆ. ವ್ಯಕ್ತಿಯ ಹೆಸರು (ಕೆಲವೆಡೆ) ಮತ್ತು ಉಪನಾಮ ವನ್ನು (ಎಲ್ಲೆಡೆ) ತೆಗೆದು ಪಟ್ಟದ ಹೆಸರು ಹಾಕಲಾಗುತ್ತದೆ. ತುಳುನಾಡಿನ ಎಲ್ಲ ಗುತ್ತು, ಬೀಡು, ಬಾವ, ಅರಮನೆಗಳು ಈ ಸಂಪ್ರದಾಯವನ್ನು ಇಂದಿಗೂ ಮುನ್ನಡೆಸಿ ಕೊಂಡು ಹೋಗುತ್ತಿವೆ. ತುಳುನಾಡಿನ ನಂಬಿಕೆಯಂತೆ ಪೂರ್ವ ಪರಂಪರೆಯ ಗುತ್ತು ಬೀಡು ಅರಮನೆಗಳಿಗೆ ಯಾರು ಬಂದು ನೆಲೆನಿಂತು ಅರಸ ಅಥವಾ ದಂಡನಾಯಕನಾಗಿ ಅಧಿಕಾರ ಸ್ವೀಕರಿಸಬೇಕು; ಆ ಊರಿನ ಗ್ರಾಮಾಡಳಿತದ ಅಧಿಕಾರ ಇರುವ ಗುತ್ತುಗಳ ಅಧಿಕಾರಿಗಳು ಪಟ್ಟದ ದೈವದ ಸಮಕ್ಷಮದಲ್ಲಿ ಆತನಿಗೆ ಆ ಬೀಡಿನ ಪೂರ್ವ ಪರಂಪರೆಯ ನಾಮ ಘೋಷಿಸಿ ಅಧಿಕಾರ ಹಸ್ತಾಂತರ ನೀಡಬೇಕಾಗುತ್ತದೆ. ನಿಜವಾಗಿ ಆಳುವವನು ಚಾವಡಿಯ ಪಟ್ಟದ ದೈವ. ಪಟ್ಟದಲ್ಲಿ ಇರುವಾತ ದೈವದ ಪ್ರತಿನಿಧಿ ಮಾತ್ರ. ಹೀಗೆ ಪಟ್ಟ ಆಗಿ ಆಳುವವನು ಪೂರ್ವ ಪರಂಪರೆಯ ಚಾವಡಿಯ ಪಟ್ಟದ ದೈವದ ಪ್ರತಿನಿಧಿಯಾಗಿ ಆಳುತ್ತಾನೆ. ತುಳುನಾಡಿನ ಪಾಳೆಯ ಗಾರಿಕೆಯಲ್ಲಿ ಹೆಚ್ಚಿನ ಅಧಿಕಾರಗಳು ಗುತ್ತುಗಳಲ್ಲಿ ಇದ್ದು ಸೈನ್ಯ ಮತ್ತು ಆರ್ಥಿಕ ಸಂಪನ್ಮೂಲ ಅವರ ಮೂಲಕ ಅರಸ ನಿಗೆ ಬರುತ್ತಿತ್ತು. ಇಲ್ಲವಾದಲ್ಲಿ ಉಳ್ಳಾಲದಲ್ಲೂ 'ತೋಳಾ ಹರ' ಹೆಸರಲ್ಲಿ ಪಟ್ಟ ಕಟ್ಟಿಸಿಕೊಳ್ಳುತ್ತಿದ್ದರು. ಸುರಾಲಿನ 'ತೋಳಹರ' ಎಂದು ಪಟ್ಟ ಆದವರನ್ನು ಮಾತ್ರ ಗುರುತಿಸು ತ್ತಿದ್ದ ಬಗ್ಗೆ ಶಾಸನ ಲಭ್ಯವಿದೆ. ತುಳುನಾಡಿನಲ್ಲಿ ಪಟ್ಟ ಆಗದವರನ್ನು ಪಟ್ಟದ ಹೆಸರಿನಿಂದ ಕರೆಯಲು ನಿಷೇಧವಿದೆ. ಈ ಎರಡೂ ಅರಮನೆಗಳಲ್ಲೂ ಪಟ್ಟ ಆದವರು ಮಾತ್ರ ಪಟ್ಟದ ಹೆಸರಿನಿಂದ ಕರೆಯಲ್ಪಡುತ್ತಾರೆ.

"ಸಕಲ ಗುಣ ಸಂಪಂನರಪ ಬೆಂಮಣ(ಕೋ)ರಿಯ ರಾದ ತೊಳಹರ ಕಾಲದಲಿ ಹೊಸಬು ಕೋರಿಯರ ಕುಮಾರ ವೃತ್ತಿಯಲು.... ಬೆಂಮಣ ಕೋರಿ ತೊಳಹರು ಬರೆಸಿದ ಶಿಲಾಶಾಸನ... ಮುದ್ರಾಡಿ ತೊಳಹರು ಮಾಡಿ ದಂಥಾ ಧರ್ಮ ಬಾಳಿಂದ"[೩] ಈ ಶಾಸನದಲ್ಲಿ ಬೆಂಮಣ ಕೋರಿಯವರು ತೋಳಹರರಾದವರು. ಅವರ ತಮ್ಮ ಬೆಂಮಣ ಕೋರಿಯರು ತೋಳಹರರಲ್ಲ.

ಪುತ್ತಿಗೆಯ ಚೌಟರ ಪಟ್ಟದ ವಿಷಯದಲ್ಲೂ ಇಂತಹುದೇ ಶಾಸನ ದಾಖಲೆ ಇದೆ.

"ಪುತ್ತಿಗೆಯ ಜನನದಲ್ಲು ಬಾಳುವ ಅಲ್ಲಪ್ಪ ಶೇಖರಾದ ಚೌಟರು ಅವರ ತಂಮ ದೇವರು ಸೇಖ, ಬಿಮ್ಮಣಶೇಖ– ಬೊಂಮ್ಮಣ ಶೇಖ. ಅಮುಳಿಂಜೆಯಳಿ ಬಾಳಿಹ ಕಂರ್ಮ್ಮಂ ಬಳಿಯ ಬಂಗ ಮಂಜ–ಅಳಿಯ ಮಂಜಣ ಶೇಖ ಆತನ ಒಡ ಹುಟ್ಟಿದ ದೇವಕ್ಕಳ ಸಂತತಿ ಬೆರ್ಮಕ್ಕ ನಾಯಕತ್ತಿ ಯವರಿಗೆ ಬರೆಸಿಕೊಟ್ಟ ಶಾಸನ."[೪]

ಮೇಲಿನ ಶಾಸನದಲ್ಲಿ ಅಲ್ಲಪ್ಪಸೇಖರು ಪಟ್ಟ ಆಗಿ ಚೌಟರಾದರೆ ಅವರ ತಮ್ಮಂದಿರು ಶೇಖ ಆಗಿಯೇ ಗುರುತಿಸಿ ಕೊಂಡಿದ್ದಾರೆ.

ಮುಂದೆ ಪುತ್ತಿಗೆಗೆ ರಾಜಧಾನಿಯನ್ನು ಬದಲಾಯಿಸಿ ಕೊಳ್ಳುವಾಗ ಪುತ್ತಿಗೆಯಲ್ಲಿ ಯಾವ ಹಳೆಯ ರಾಜರ ಪಟ್ಟದರ ಮನೆಯನ್ನು ಜಯಿಸುವುದಿಲ್ಲ. ಹೊಸ ಜಾಗ ಆಯ್ದು ತಾವೇ ಅರಮನೆ ಕಟ್ಟಿ ಸುತ್ತಮುತ್ತಲಿನ ಜಾಗ ಜಯಿಸುತ್ತಾರೆ. ಹೊಸ ಜಾಗದಲ್ಲಿ ಅರಮನೆ ಕಟ್ಟಿ ಪಟ್ಟ ನಿರ್ಮಿಸಿ ಪಟ್ಟಾಭಿಷೇಕ ಮಾಡಿಸಿದುದರಿಂದ ಉಳ್ಳಾಲದ ಪಟ್ಟದ ಚೌಟ ಹೆಸರನ್ನು ಇಲ್ಲಿಗೂ ಅನ್ವಯಿಸಿಕೊಂಡಿರಬೇಕು. ಈ ರೀತಿ ತುಳುನಾಡಿನ ಇತರೆಡೆ ನಡೆದಿದೆ. ಉಳ್ಳಾಲದಲ್ಲಿ ಇವರ ಒಂದು ಶಾಖೆ (ಸಾಮಾನ್ಯವಾಗಿ ಹಿರಿಮಗಳು) ಉಳಿದು ರಾಜ್ಯಾಡಳಿತ

ನಡೆಸುತ್ತಿದ್ದಿರಬೇಕು. ಈ ರೀತಿ ತುಳುವ ವಾರಸುದಾರ ಪದ್ಧತಿಯಲ್ಲಿ ನಡೆಯುತ್ತದೆ. ಪೋರ್ಚುಗೀಸರನ್ನು ಸೋಲಿಸಿದ್ದು ಉಳ್ಳಾಲದ ಶಾಖೆ. ಆ ಸಮಯದಲ್ಲಿ ಪುತ್ತಿಗೆಯ ಅಥವಾ ಮೂಡಬಿದ್ರೆಯ ಬಗ್ಗೆ ಮಾಹಿತಿ ಲಭ್ಯವಾಗುವುದಿಲ್ಲ.

ಆಳುಪರ ಕಾಲದಿಂದಲೂ ಪಟ್ಟ ಆದವರನ್ನು ಮಾತ್ರ ಪಟ್ಟದ ಹೆಸರಿನಿಂದ ಕರೆಯುವ ರೂಢಿ ಇದೆ. ಹಳೆಯ ಹೆಸರನ್ನು ಇಟ್ಟುಕೊಂಡರೆ 'ದ್ವಿತೀಯನಾಮ' ಎಂದು ಕರೆಯುತ್ತಾರೆ. ಶಾಸನಗಳಲ್ಲೂ ಈ ಬಗ್ಗೆ ಸ್ಪಷ್ಟನೆ ಇದೆ.

ಒಂದನೆಯ ಆಳುವರಸನ ಪೊಳಲಿ ಅಮ್ಮುಂಜೆಯ ಶಾಸನ: '*ಸ್ವಸ್ತಿ ಶ್ರೀಮತ್ ವಿಪುಲ ವಜ್ಯವಶೀಕೃತ ಮಹೀಭುಜಾಮ್ ಪಾಣ್ಡ್ಯನಾಮಾಳುಪೇಂದ್ರ*' (೭,೮ನೆಯ ಶತಮಾನ.)[೫] ಎಂದಿದೆ.

ಕ್ರಿ.ಶ. ೭ನೆಯ ಶತಮಾನದ ಉದಿಯಾವರದ ಶಾಸನ: '*ಸ್ವಸ್ತಿ ಶ್ರೀ ಚಿತ್ರವಾಹನ ನಾಮಧೇಯ ಅಳುಪೇಂದ್ರ*..[೬] ಎಂಟನೆಯ ಶತಮಾನದ ರಣಸಾಗರನ ಉದಿಯಾವರ ಶಾಸನ: *ಸ್ವಸ್ತಿಶ್ರೀ ಚೆಂಬುಕಲ್ಲ ಭಟ್ಟರ(ಕ) ಶ್ರೀರಣ ಸಾಗರಾಳುಪೇನ್ದ್ರ ರಾಜ್ಯದುಳ್ಳೆ*[೭], ಎಂದಿದೆ.

ಬ್ರಿಟಿಷರ ಕಾಲದಲ್ಲಿ ಮಾತ್ರವಲ್ಲ ಸ್ವಾತಂತ್ರ್ಯ ಬಂದ ಮೇಲೂ ಅರಸರಿಗೆ ಮತ್ತು ಹೋಬಳಿ ಗುತ್ತುಗಳಿಗೆ ಪಟ್ಟಾಭಿಷೇಕ ಆಗಲು ಜಿಲ್ಲಾ ನ್ಯಾಯಾಲಯದ ಅನುಮತಿ ಬೇಕಿತ್ತು. ಹೋಬಳಿ ಗುತ್ತುಗಳಿಗೆ ಜಿಲ್ಲಾ ನ್ಯಾಯಾಲಯದಲ್ಲಿ ಪಟ್ಟ ಅಥವಾ ಗಡಿ ಆಗುತ್ತಿತ್ತು. ಮುಖ್ಯ ನ್ಯಾಯಾವಾದಿಗಳು ಗಡಿಯ ಬಳೆ/ಸರಪಳಿ ತೊಡಿಸಿ ಪಟ್ಟದ ಹೆಸರು ಘೋಷಿಸುತ್ತಿದ್ದರು. ಉದಾಹರಣೆಗೆ ಸುರಾಲ್‌ನ ತೋಳಾಹರರಿಗೆ ಉಳ್ಳಾಲದಲ್ಲಿ ಪಟ್ಟ ಆಗುವಾಗ ತೋಳಾಹರರನ್ನು ಇನ್ನು ಮುಂದೆ ಎಲ್ಲರೂ (ಚೆನ್ನರಾಯ)ಚೌಟ ಎಂದು ಕರೆಯ ತಕ್ಕದ್ದು. ಯಾರಾದರೂ 'ತೋಳಹರ' ಎಂದು ಕರೆದರೆ ಅವರಿಗೆ ಮೂರು ತಿಂಗಳ ಸಜೆ ಮತ್ತು ೨೦೦೦ರೂಪಾಯಿ ಜುಲ್ಮಾನೆ ಹಾಕಲಾಗುವುದು." ಎಂದು ನ್ಯಾಯಾಲಯ ಘೋಷಿಸುತ್ತಿತ್ತು.

ಸುರಾಲಿನಲ್ಲಿ ಪುರುಷನಿಗೆ ಪಟ್ಟ ಆದರೆ ಒಂದು ತಲೆಮಾರು ರಾಜೇಂದ್ರ ತೋಳಹರ ಮತ್ತೊಂದು ತಲೆಮಾರು ನಾಗೇಂದ್ರ ತೋಳಹರ ಎಂದೂ ಮಹಿಳೆಗೆ ಪಟ್ಟ ಆದರೆ (ಹಿರಿ ಮಗು ಹೆಣ್ಣಾದರೆ ಹೆಣ್ಣಿಗೆ ಪಟ್ಟ) ಮದನದೇವಿ ತೋಳಹರತಿ ಹಾಗೂ ಚೆಲುವಮ್ಮದೇವಿ ತೋಳಹರತಿ ಎಂದೂ ಕರೆಯುತ್ತಾರೆ. ಅದೇ ಸಂಪ್ರದಾಯದಂತೆ ಪುತ್ತಿಗೆಯಲ್ಲಿ ಪುರುಷನಿಗೆ ಪಟ್ಟ ಆದರೆ ಒಂದು ತಲೆಮಾರು ಚೆನ್ನರಾಯ ಚೌಟ ಮತ್ತೊಂದು ತಲೆಮಾರು ಚಿಕ್ಕರಾಯ ಚೌಟ ಎಂದೂ ಸ್ತ್ರೀಗೆ ಪಟ್ಟ ಆದರೆ ಒಂದು ತಲೆಮಾರಿಗೆ ಅಬ್ಬಕ್ಕದೇವಿ ಚೌಟೆದಿ ಮತ್ತೊಂದು ತಲೆಮಾರಿಗೆ ಚನ್ನಮ್ಮದೇವಿ ಚೌಟೆದಿ ಎಂದೂ ಕರೆಯುತ್ತಾರೆ. ಉಳ್ಳಾಲದಿಂದ ಬಂದವರು ಎಂಬ ಚೌಟರ ಮನೆಯವರ ಹೇಳಿಕೆ ಉಳಿದು ಉಳ್ಳಾಲದ ಬಗ್ಗೆ ನಮಗೆ ಯಾವ ಮಾಹಿತಿಯೂ ಈಗ ಲಭ್ಯವಾಗುವುದಿಲ್ಲ.

**ಉಳ್ಳಾಲದಿಂದ ಪುತ್ತಿಗೆಗೆ ಸುರಾಲಿನ ಕುಟುಂಬ :** ಉಳ್ಳಾಲದಲ್ಲಿ ಸುರಾಲಿನ ತೋಳಾರ ಕುಟುಂಬದ ಒಂದು ಶಾಖೆ ನೆಲಸಿದ ಮೇಲೆ ಕೂಡಾ ಮೂಲ ಮನೆಯ ಸಂಪರ್ಕ ಮುಂದುವರಿದಿತ್ತು. ತುಳು ಸಂಪ್ರದಾಯದಂತೆ ಸತ್ತವರಿಗೆ ಎಡೆ ಇಡಲೂ, ಇನ್ನಿತರ ದೈವ ಕಾರ್ಯ, ಸಾವು ಮುಂತಾದ ಕೆಲಸಗಳಿಗೆ ಚೌಟರ ರಾಜ ಪರಿವಾರದವರು ಉಳ್ಳಾಲದಿಂದ ಸುರಾಲಿಗೆ ಹೋಗುವುದನ್ನು ಮುಂದುವರಿಸಿದ್ದರು. ಅವರು ಪುತ್ತಿಗೆಯ ಮಾರ್ಗವಾಗಿ ಹೋಗುತ್ತಿದ್ದರು. ಮೂಡಬಿದಿರೆಯಿಂದ ಸುಮಾರು ೨ ಕಿಲೋ ಮೀಟರ್ ದೂರ ಪುತ್ತಿಗೆಯ ಒಂದು ಜಾಗದಲ್ಲಿ ಇದ್ದ ಕಾಸರಕನ ಮರದ ಬಳಿ ಬೀಡು ಬಿಡುತ್ತಿದ್ದರು.

'ಹೀಗೆ ಒಮ್ಮೆ ಸುರಾಲಿಗೆ ಹೋಗುವ ಮಾರ್ಗದಲ್ಲಿ ಪುತ್ತಿಗೆಯಲ್ಲಿ ಉಳ್ಳಾಲದ ಚೌಟರು (ಚನ್ನರಾಯ ಚೌಟ ಕ್ರಿ.ಶ. ೧೧೯೪-೧೨೧೯) ಬೀಡು ಬಿಟ್ಟಿದ್ದರು. ಅಲ್ಲಿಯೇ ಇದ್ದ ಕಾಸರಕನ ಮರದ ಹಣ್ಣು ನೆಲದ ಮೇಲೆ ಬಿದ್ದಿತ್ತು. ಅದನ್ನು ಬಾಯಿಗಿಟ್ಟರು ಉಳ್ಳಾಲದ ಚೌಟರು. ಆ ಹಣ್ಣು ಸಿಹಿಯಾಗಿತ್ತು. ಕಾಸರಕನ ಹಣ್ಣು ಸಿಹಿ ಇರಬೇಕಾದರೆ ಇಲ್ಲಿಯ ಮಣ್ಣಿನಲ್ಲಿ ಏನೋ ಶಕ್ತಿ ಇರಬೇಕು. ಇದು ಅರಮನೆ ಕಟ್ಟಲು ಯೋಗ್ಯ ಸ್ಥಳ ಎಂದು ಭಾವಿಸಿ ಅಲ್ಲಿ ಅರಮನೆ ಕಟ್ಟಲು ಸಂಕಲ್ಪಿಸಿದರು. ಐಗಳ ಪ್ರಕಾರ ಚನ್ನರಾಯನು ಅರಮನೆ ಕಟ್ಟುತ್ತಾನೆ. ಜೊತೆಗೆ ದೈವಂತಿ ದೈವದ ಗುಡಿಯನ್ನೂ ಕಟ್ಟುತ್ತಾರೆ. ಬಳಿಕ ಸೈನ್ಯ ಕೂಡಿಸಿ ಸುತ್ತಲಿನ ಸೀಮೆ ಯನ್ನು ಜಯಿಸುತ್ತಾರೆ.'[೮]

ಐಗಳ ಪ್ರಕಾರ ೧ನೆಯ ತಿರುಮಲರಾಯನು (೧೨೪೫-೧೨೮೫) ಪುತ್ತಿಗೆಯಲ್ಲಿ ಅರಮನೆ ಕಟ್ಟಿಸಿದವನು. ಪುತ್ತಿಗೆ ಅರಮನೆಗೆ ಬಂದು ನಿಂತ ಮೇಲೆ ಪ್ರತಿ ದಿನವೂ ಸೋಮೇಶ್ವರದಿಂದ ಪ್ರಸಾದ ಬರಲು ಅನಾನುಕೂಲವಾದುದರಿಂದ ಪುತ್ತಿಗೆಯ ಅರಮನೆಯ ಹತ್ತಿರ ಸೋಮನಾಥ ದೇವರಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿ ಕ್ರಿ.ಶ. ೧೨೫೫ ರಲ್ಲಿ ದೇವತಾ ಪ್ರತಿಷ್ಠೆ ಮಾಡಿದನು. ಪಂಚ ಧೂಮಾವತಿ ದೈವದ ಗುಡಿಯನ್ನೂ ಕಟ್ಟಿದನು. ತನ್ನ ಸೀಮೆಧ್ವಜವನ್ನಾಗಿ ವೃಷಭ (ನಂದಿ?) ಧ್ವಜವನ್ನು ರೂಢಿಸಿದನು.

ಊರವರ ಮತ್ತು ಪುತ್ತಿಗೆಯ ಅರಮನೆಯ ಸದಸ್ಯರ ಹೇಳಿಕೆ ಹೀಗಿದೆ; ಸುರಾಲಿಗೆ ಹೋಗುವ ಮಾರ್ಗದಲ್ಲಿ ಕಾಸರಕನ ಕಾಡಿನಲ್ಲಿ ಮರದಡಿ ಕುಳಿತ ಚೌಟರು ಕಾಸರಕನು ಹಣ್ಣು ಸಿಹಿಯಾಗಿರುವುದನ್ನು ಮನಗಂಡು ಈ ಜಾಗ ಅರಮನೆ ಕಟ್ಟಲು ಸೂಕ್ತ ಎಂದು ಯೋಜನೆ ಹಾಕುತ್ತಾರೆ. ಅರಮನೆ ಕಟ್ಟಿದ ಮೇಲೆ ಇಲ್ಲೇ ವಾಸ ಮಾಡಬೇಕು. ಆದರೆ ಸೋಮನಾಥನ ಪ್ರಸಾದವನ್ನು ಸ್ವೀಕರಿಸಿದ ಊಟ ಮಾಡುವಂತಿಲ್ಲವಾದುದರಿಂದ ಅರಮನೆಯೊಂದಿಗೆ ಉಳ್ಳಾಲದಿಂದ ಸೋಮನಾಥೇಶ್ವರನನ್ನು ಕೂಡಾ ತಂದು ಇಲ್ಲಿ ದೇವಸ್ಥಾನ ಕಟ್ಟುವುದು ಎಂದು ಸಂಕಲ್ಪಿಸಿ ಕಾರ್ಯೋನ್ಮುಖರಾಗುತ್ತಾರೆ.

ಕಾಸರಕನ ಮರದ ಅಡಿಯಲ್ಲಿ ಅರಮನೆ ಹಾಗೂ ಅಲ್ಲಿಂದ ಒಂದು ಕಿಲೋ ಮೀಟರ್ ಪೂರ್ವಕ್ಕೆ ಸೋಮನಾಥ ದೇವಸ್ಥಾನವನ್ನು ಕಟ್ಟುವುದು ಎಂದು ನಿಶ್ಚಯಿಸಲಾಯಿತು. ಏಕ ಮುಹೂರ್ತದಲ್ಲಿ ಎರಡೂ ಕಡೆ ಕಟ್ಟಡಗಳಿಗೆ ಕೆಸರು ಕಲ್ಲು ಹಾಕಲು ಸಿದ್ಧತೆ ನಡೆಯಿತು. ಸೋಮನಾಥನ ದೇವಸ್ಥಾನಕ್ಕೆ ಕೆಸರು ಕಲ್ಲು ಹಾಕುವಾಗ ಕದೋನಿ ಸಿಡಿಸಿ ಮುಹೂರ್ತ ತಿಳಿಸುವುದಾಗಿಯೂ ಆ ಕದೋನಿ ಸದ್ದು ಕೇಳಿ ಅರಮನೆಗೆ ಕೆಸರ ಕಲ್ಲು ಹಾಕಬೇಕು ಎಂದೂ ಅರಮನೆ ಕಟ್ಟಲು ಆಯ್ದ ಸ್ಥಳದಲ್ಲಿ ಬಳಿ ಇರುವವರಿಗೆ ತಿಳಿಸಲಾಗಿತ್ತು. ಅಂತಹ ಸದ್ದು ಬರುತ್ತಲೇ ಅರಮನೆಗೆ ಕೆಸರು ಕಲ್ಲು ಹಾಕಲಾಯಿತು. ಮತ್ತೊಮ್ಮೆ ಕದೋನಿಯ ಸದ್ದು ಮುಹೂರ್ತ ತಿಳಿಸಿತು. ಆಗ ಅರಮನೆಯ ಕಡೆಯಲ್ಲಿ ಕಾಯುತ್ತಾ ಇದ್ದವರು ಗಲಿಬಿಲಿಗೊಂಡರು. ಮೊದಲ ಕದೋನಿಯ ಸದ್ದು ಹಾಗೂ ಎರಡನೆಯ ಸದ್ದು– ಇದರಲ್ಲಿ ಯಾವುದು ಮುಹೂರ್ತ ಕಾಲ ಎಂಬ ಆತಂಕ ಅವರಲ್ಲಿ ಆಯಿತು. ಆದರೆ ವಾಸ್ತವವಾಗಿ ಮೊದಲನೆಯ ಸದ್ದು ಸೋಮನಾಥ ದೇವಸ್ಥಾನಕ್ಕೆ ಕೆಸರು ಕಲ್ಲು ಹಾಕಿದ ಮುಹೂರ್ತ ಆಗಿರಲಿಲ್ಲ. ಯಾರೋ ಹಕ್ಕಿಗಿಟ್ಟ ಬೆಡಿಯೋ, ಮೀನಿಗಿಟ್ಟತೋಟೆಯೋ ಆಗಿತ್ತು. ಆದರೆ ಮುಹೂರ್ತ ಅಲ್ಲದ ಹೊತ್ತಿನಲ್ಲಿ ಅರಮನೆಗೆ ಕೆಸರು ಕಲ್ಲು ಹಾಕಿ ಆಗಿತ್ತು. ಆದೂ ಅದೇ ಜಾಗದಲ್ಲಿ ಮುಳಿ ಅರಮನೆ (ಆಗಿನ ಕಾಲದಲ್ಲಿ ಇದ್ದಂತೆ) ಹುಲ್ಲಿನ ಕಟ್ಟಲಾಯಿತು.

ಕಾಸರಕನ ಮರವನ್ನು ತುಳುವಿನಲ್ಲಿ 'ಕಾಯೆರ್‌ದ ಮರ' ಎನ್ನುತ್ತಾರೆ. 'ಕಾಯೆರ್‌ದ ಮರದಡಿಯೋ, ಕಾವೆರ್'ದ ಕಾಡಿನಲ್ಲೋ (ಈ ಪ್ರದೇಶದಲ್ಲಿ ಈಗಲೂ ಕಾಸರಕನ ಮರಗಳು ಇವೆ.) ಕಟ್ಟಿದ ಅರಮನೆ 'ಕಾಯೆರ ಮಂಜ(ರ) ಅರಮನೆ' ಎಂದು ಕರೆಸಿಕೊಂಡಿತು. ಆದರೆ ಕೆಲವು ಕಾಲಾನಂತರ ಆ ಅರಮನೆಗೆ ಬೆಂಕಿ ಬಿತ್ತು. ಎರಡನೆ ಬಾರಿಗೆ ಅದೇ ಜಾಗದಲ್ಲಿ ಮನೆ ಕಟ್ಟಲಾಯಿತು. ಮುಂದೆಯೂ ಕೆಲವು ಕಾಲಾನಂತರ ಆ ಮನೆಗೆ ಬೆಂಕಿಬಿತ್ತು. ಹೀಗಾಗಿ ಇನ್ನು ಅಲ್ಲಿ ಕಟ್ಟುವ ಅರಮನೆ ವಾಸಯೋಗ್ಯ ಅಲ್ಲವೆಂದು ಭಾವಿಸಿ ಚೌಟರು ಮೂಡಬಿದ್ರೆಯಲ್ಲಿ ಅರಮನೆಯನ್ನು ಕಟ್ಟಿ ತಮ್ಮ ವಾಸವನ್ನು ಮೂಡಬಿದಿರೆಗೆ ಬದಲಾಯಿಸಿದರು.

[ಕಾಯರ್ ಮಂಜ ಅರಮನೆಯ ಹಳೆಯ ತಳ ಪಾಯದ ಮೇಲೆ ಹೊಸ ಮನೆ ಕಟ್ಟಲು ಚೌಟರ ಮನೆತನಕ್ಕೆ ಸಂಬಂಧಿಸಿದವರು ಕಳೆದ ವರ್ಷ (೨೦೦೨-೦೩) ಮುಂದಾದರು. ಅಷ್ಟಮಂಗಳ ಪ್ರಶ್ನೆಯಲ್ಲಿ ಅಲ್ಲಿ ಮನೆಕಟ್ಟಲು ಶುಭ ಸೂಚನೆ ದೊರೆಯಲಿಲ್ಲ. ಹೀಗಾಗಿ ಕಾಯರ ಮಂಜ ಅರಮನೆಯ ಬಲದ ಭಾಗದಲ್ಲಿ ಮನೆ ಕಟ್ಟಿ ಪೂರ್ಣಗೊಂಡಿದೆ. ಕಾಯರ ಮಂಜ ಅರಮನೆಯ ಹಳೇ ಬಾವಿ ಈಗಿನ ಮನೆಯ ಹಿತ್ತಲಿಗೆ ಇದೆ. ಆ ಬಾವಿಗೆ ಕಟ್ಟಿದ ಕಲ್ಲುಗಳಲ್ಲಿ ಶಂಖ ಚಕ್ರದಂತಹ ಚಿಹ್ನೆಗಳು ಇವೆ.]

ಸೋಮನಾಥ ಲಿಂಗವನ್ನು ಉಳ್ಳಾಲದಿಂದ ಪುತ್ತಿಗೆಗೆ ತಂದಾಗ ಒಂದು ಕಡೆ ತಾತ್ಕಾಲಿಕ ನೆಲೆಯನ್ನು ಸ್ಥಾಪಿಸಿದರು. ಆ ಜಾಗ ಸೋಮಿನೊಟ್ಟು (ಕನ್ನಡ ಸೋಮನಾಥ ಬೆಟ್ಟು) ಎಂದು ಕರೆಯಲಾರಂಭವಾಯಿತು. ಮುಂದೆ ಸೋಮನಾಥೇಶ್ವರ ದೇವಸ್ಥಾನ ಕಟ್ಟಿದ ಮೇಲೂ ಆ ಸ್ಥಳಕ್ಕೆ ಸೋಮಿನೊಟ್ಟು ಎಂಬ ಹೆಸರೇ ಉಳಿಯಿತು. ಆದರೆ ಪಿಯಾತ್ರೊ ದೆಲ್ಲಾವೆಲ್ಲಿ (೧೬೨೩) ಉಳ್ಳಾಲದ ರಾಣಿ ಅಬ್ಬಕ್ಕಳ ಮನೆತನದ ದೇವರು ಪುತ್ತೆಯ ಸೋಮನಾಥ ಎಂದೂ ಸೋಮನಾಥ ಎಂದರೂ ಮಹದೇವ ಎಂದರೂ ಒಂದೇ ಎಂದೂ ಬರೆಯುತ್ತಾನೆ.[೯] ಹೀಗಾಗಿ ಸೂರ್ಯನಾಥ ಕಾಮತರು ಚೌಟರು ಪುತ್ತಿಗೆಯಿಂದ ಉಳ್ಳಾಲಕ್ಕೆ ಹೋಗಿರಬೇಕು ಎನ್ನುತ್ತಾರೆ. ಮೂಲತಃ ಸುರಾಲಿನಲ್ಲಿ ಇರುವುದು ಮಹದೇವ. ಸುರಾಲಿನ ತೋಳಾಹರರು ಮಹದೇವನ ಪೂಜಕರು.[೧೦] ಕೆಳದಿ ಅರಸರ ಕಾಲದಲ್ಲಿ ಮಹಾದೇವನಿಗೆ ಮಹಾಲಿಂಗೇಶ್ವರ ಎಂದು ಕರೆಯುವ ರೂಢಿ ಬಂತು. ಸುರಾಲು ಸುತ್ತ ಮುತ್ತ ಇರುವ ಸಂಪ್ರದಾಯದಂತೆ ತೋಳಾಹರ ಅರಮನೆಯಲ್ಲಿ ದುರ್ಗೆಯನ್ನು ಪೂಜಿಸುತ್ತಿದ್ದರು. ವಿಜಯ ದಶಮಿಯ ಒಂಬತ್ತು ದಿನ ಪಟ್ಟದ ಚಾವಡಿಯಲ್ಲಿ ದುರ್ಗಾಪರಮೇಶ್ವರಿಗೆ ಪೂಜೆ ನಡೆಯಬೇಕು. ಅರಮನೆಯ ಒಳಗೆ ದುರ್ಗಾಪರಮೇಶ್ವರಿ ಕಟ್ಟೆ ಉಂಟು. ಆಕೆ ಹೊರಗಡೆಯಿಂದ (?) ಬಂದು ಇಲ್ಲಿ ಒಂಬತ್ತು ರಾತ್ರಿ ನೆಲಸುತ್ತಾಳೆ. ಆಕೆ ಇಲ್ಲಿಗೆ ಬರುವ ವಾರದಲ್ಲಿ ಮಂಗಳವಾರ ಮಧ್ಯೆ ಬಂದಾಗ ಆ ದಿನ ಆಕೆ ಮರಳುವುದಿಲ್ಲ. ಇಲ್ಲಿಯೇ ಉಳಿಯು

ತ್ತಾಳೆ. (ಅರಮನೆ ಜೀರ್ಣೋದ್ಧಾರ ಆದ ಮೇಲೆ ಮತ್ತೆ ವಿಜಯದಶಮಿ ಆಚರಿಸುವ ಸಂಕಲ್ಪ ಇದೆ ಎಂದರು ಸಂತೋಷ ಕುಮಾರರು)

ಉಳ್ಳಾಲಕ್ಕೆ ವಲಸೆ ಬಂದಮೇಲೆ ತಮ್ಮ ಮನೆತನದ ದೇವರನ್ನು ಉಳ್ಳಾಲಕ್ಕೆ ತಂದು ಪ್ರತಿಷ್ಠಾಪಿಸಿ ಈ ದೇವಸ್ಥಾನ ವನ್ನು ಸೀಮೆ ದೇವಸ್ಥಾನವನ್ನಾಗಿ ಮಾಡಿರಬೇಕು. ಜೊತೆಗೆ ದುರ್ಗೆಯನ್ನೂ ತಂದಿರಬೇಕು. ಉಳ್ಳಾಲದ ಸೋಮನಾಥ ದೇವಾಲಯದ ಪೂರ್ವ ಭಾಗದಲ್ಲಿ ದುರ್ಗೆಯನ್ನು ನಿರ್ದೇಶಿ ಸುವ ಐದು ಲಿಂಗಗಳು ಒಂದೇ ಪಾಣಿ ಪೀಠದಲ್ಲಿವೆ. ಈ ದೇವಾಲಯ ಪರಿಸರದಲ್ಲಿ ದೇವ, ದೇವಿ ಮತ್ತು ದೈವಗಳಿವೆ.[೧೧]

ಈ ರೀತಿ ಬೇರೆ ಊರಿಗೆ ನೆಲಸಲು ಹೋಗುವಾಗ ತಮ್ಮ ಕುಲದೇವರನ್ನು ಜೊತೆಗೆ ಕೊಂಡುಹೋಗುವ ಸಂಪ್ರದಾಯ ಇದೆ. ಇದಕ್ಕೆ ತುಳುನಾಡಿನ ಬೇರೆಡೆಯೂ ಉದಾಹರಣೆ ಇದೆ. ಅದರಲ್ಲೂ ಕುಂದಾಪುರದ ಕಡೆ ಕುಲ ದೇವರನ್ನು ಪಾಲುಮಾಡಿ ವಲಸೆ ಹೋಗುವವರು ತೆಗೆದು ಕೊಂಡು ಹೋಗುವುದು ಸಾಮಾನ್ಯ. ದುರ್ಗೆಯೂ ಇದರಲ್ಲಿ ಸೇರುತ್ತದೆ. ಹೀಗೆ ಕುಲದೇವರನ್ನು ಅಭಿಮಂತ್ರಿಸಿ ಹೊಸ ನೆಲೆಗೆ ಕೊಂಡು ಹೋಗಿ ಅಲ್ಲಿ ಸ್ಥಾಪಿಸಿದ ಮೇಲೆ ಹೊಸ ನೆಲೆಯ ದೇವರೇ ಕುಲದೇವರಾಗುತ್ತಾರೆ. ಉಳ್ಳಾಲಕ್ಕೆ ಬಂದ ಮಹದೇವ ಚೌಟರಾಜಕುಟುಂಬದ ಕುಲದೇವರು ಮಾತ್ರವಲ್ಲ ಉಳ್ಳಾಲದ ಸೀಮೇದೇವರು ಕೂಡಾ ಆಗುತ್ತಾರೆ.[೧೨]

ಸುರಾಲಿನಿಂದ ಮಹದೇವನನ್ನು ಉಳ್ಳಾಲಕ್ಕೆ ತಂದು ಸ್ಥಾಪಿಸಿದ ಸುರಾಲಿನ ವಂಶದವರು ಮುಂದೆ ಉಳ್ಳಾಲದಿಂದ ತಮ್ಮ ರಾಜಧಾನಿಯನ್ನು ಪುತ್ತಿಗೆಗೆ ಬದಲಾಯಿಸುವಾಗ ಕುಲದೇವರನ್ನು ಪುತ್ತಿಗೆಗೆ ಕೊಂಡು ಹೋಗಿ ಅಲ್ಲಿ ದೇವಾ ಲಯ ಕಟ್ಟುತ್ತಾರೆ. ಪುತ್ತಿಗೆಯ ಸೋಮನಾಥ, ಪುತ್ತಿಗೆಯ ಸೀಮೆದೇವರು ಆಗುತ್ತಾನೆ. ಈ ಕಾರಣದಿಂದ ದೆಲ್ಲಾವೆಲ್ಲಿ ಅಬ್ಬಕ್ಕಳ ಕುಲದೇವರು ಪುತ್ತಿಗೆಯ ಸೋಮನಾಥ ಎಂದು ಬರೆದಿರಬೇಕು. ಪುತ್ತಿಗೆಯ ಸೋಮನಾಥನ ಕುಲದೇವರು ಆದ ಮೇಲೆ ಅವರು ಉಳ್ಳಾಲದ ಸೋಮನಾಥನನ್ನು ಕುಲ ದೇವರನ್ನಾಗಿ ಒಪ್ಪುವ ಸಂಭವ ಕಡಿಮೆ. ಹಾಗಿ ಒಪ್ಪುವು ದಾದರೆ ಸುರಾಲಿನ ಮಹಾದೇವನನು ಒಪ್ಪುತ್ತಾರೆ. ೨ನೆಯ ಚನ್ನರಾಯನು (ಕ್ರಿ.ಶ. ೧೪೦೩–೧೪೨೦) ಉಳ್ಳಾಲಕ್ಕೆ ರಾಜ ಕಾರ್ಯ ನಿಮಿತ್ತ ಹೋದಾಗ ಸೋಮೇಶ್ವರ ದೇವಸ್ಥಾನಕ್ಕೂ ಭೇಟಿ ನೀಡುತ್ತಾನೆ.

ಮೂಡಬಿದಿರೆಯ ಅರಮನೆಯಲ್ಲಿ ಇರುವಾಗ ಒಂದು ದಿನ ಪುರೋಹಿತರು ಪ್ರಸಾದ ತರುವುದು ತಡವಾಯಿತು. ಹಸಿವಿನಿಂದ ಆಗಿನ ಪಟ್ಟದ ಚೌಟರು ಚಡಪಡಿಸಿದಾಗ ಪುರೋಹಿತರು ಸೋಮನಾಥನನ್ನು ತಂದು ಅರಮನೆಯ ಬಳಿ ದೇವಸ್ಥಾನ ಕಟ್ಟಲು ಸಲಹೆ ನೀಡಿದರು. ಈಗಿರುವ ಪದ್ಮಾವತಿ ಕಲ್ಯಾಣ ಮಂಟಪದ ಬಳಿ ಸೋಮನಾಥ ದೇವಸ್ಥಾನವನ್ನು ಕಟ್ಟಲಾಯಿತು. ಕ್ರಮೇಣ ಆ ದೇವಸ್ಥಾನ ಬಿದ್ದುಹೋಯಿತು. ಅಲ್ಲಿಯ ಲಿಂಗವನ್ನು ತಂದು ಅರಮನೆಯ ಒಂದು ಕೋಣೆಯಲ್ಲಿ ಕಪಾಟಿನಲ್ಲಿ ಇಟ್ಟುಪೂಜಿಸುತ್ತಿದ್ದರು. ಮುಂದೆ ೧೯೯೧ರಲ್ಲಿ ತಾಯಿ ಶ್ರೀಮತಿ ನಿರ್ಮಲಾ ಅವರ ಸಲಹೆಯಂತೆ ಮಗ ಕುಲದೀಪ ಅವರು ಸೋಮನಾಥನ ಲಿಂಗವನ್ನು ಅದೇ ಕೋಣೆಯಲ್ಲಿ ಪ್ರತಿಷ್ಠಾಪಿಸಿ ದೇವಾಲಯದ ಪಾವಿತ್ರ್ಯ ತಂದುಕೊಟ್ಟರು. ಈಗ ದಿನಕ್ಕೊಮ್ಮೆ ಪೂಜೆ ಆಗುತ್ತಿದೆ. ನವರಾತ್ರಿ ಪೂಜೆ ನಿಂತು ಹೋಗಿತ್ತು. ಪುದುವಾಲರ ಸಲಹೆಯ ಮೇರೆಗೆ ಕೆಲ ವರ್ಷಗಳಿಂದ ಮತ್ತೆ ನಡೆಸುತ್ತಿದ್ದಾರೆ.

ಪುತ್ತಿಗೆಯ ಚೌಟ ಪಟ್ಟದ ನಾಮ ಮೂಲದ ಬಗ್ಗೆ ಇತಿಹಾಸಕಾರರು ಕೊನೆಯ ಅಭಿಪ್ರಾಯಕ್ಕೆ ಬರುವುದಿಲ್ಲ. ಮೆಕೆಂಜಿ ಸಂಪುಟವು ಚೌಟರ ಮೂಲ ಸ್ಥಾನ ಉಮೆಗುಂಡಿ ಬ್ರಹ್ಮಸ್ಥಾನ ಎಂದು ಹೇಳುತ್ತದೆ. ಪಂಚ ದೈವಗಳಿರುವ ಬ್ರಹ್ಮಸ್ಥಾನ ತುಳುವರ ಮೂಲಸ್ಥಾನ. ಆದರೆ ಉಮೆಗುಂಡಿ ಸುರಾಲಿನಿಂದ ಉಳ್ಳಾಲಕ್ಕೆ, ಉಳ್ಳಾಲದಿಂದ ಪುತ್ತಿಗೆಗೆ ಬಂದ ಚೌಟರ ಮೂಲಸ್ಥಾನ ಹೇಗಾಗುತ್ತದೆ? ಎಂಬುದು ಇಲ್ಲಿ ಪ್ರಶ್ನೆ.

ಚೌಟ ಪಟ್ಟದ ಹೆಸರು ಉಳ್ಳಾಲ ಮತ್ತು ಪುತ್ತಿಗೆಯಲ್ಲಿ ಮಾತ್ರವಲ್ಲದೆ ತುಳುನಾಡಿನ ಇತರ ಅಧಿಕಾರದ ಕೆಲವು ಪೂರ್ವ ಪರಂಪರೆಯ ಮನೆಗಳಲ್ಲಿ ಇದೆ. ಈ ಕೆಳಗಿನ ಮನೆಗಳನ್ನು ಗಮನಿಸಬಹುದು.

I ನೆಯ ಚೇಳಾರುಗುತ್ತು, ಹಳೆಯಂಗಡಿ ೧ ನೆಯ ತಲೆ ಮಾರು ದೇವುಚೌಟ ೨ನೆಯ ತಲೆಮಾರು ಸಂಕು ಚೌಟ

II ಚೌಟರ ಮನೆ ಮುಲ್ಕಿ 'ಕಿಞಣ್ಣ ಚೌಟ'

III ನಿಟ್ಟೆ ಚೌಟರ ಮನೆ ಕಾರ್ಕಳ ತಾಲೂಕು

IV ಪದವು ಚೌಟರ ಮನೆ. ಕುಲಶೇಖರ

V ಪಾರೆ(ರಾ)ಲ್ ಗುತ್ತು ಪೆರ್ಮುದೆ, ಮಂಗಳೂರು

ಚೌಟ ಹೆಸರಿನ ಮೂಲದ ಬಗ್ಗೆ ಇತಿಹಾಸಕಾರರು ಯಾವ ನಿರ್ಣಯಕ್ಕೂ ಬರಲಿಲ್ಲ. ಲೋನನಾಥ ತಿರುಮಲ ರಾಯ ಕ್ರಿ.ಶ. ೧೧೬೦–೧೧೭೯ರ ವರೆಗೆ ತಿರುಮಲರಾಯ ಚೌಟ ಎಂಬ ಹೆಸರಿನಲ್ಲಿ ತುಳುನಾಡಿನಲ್ಲಿ ಆಳಿದ ಕಾಣಸಿಗುವ ಮೊದಲ ಚೌಟ ಹೆಸರು ಎನ್ನುತ್ತಾರೆ. ಗುರುರಾಜ ಭಟ್ಟರು



ಅವರ ಪ್ರಕಾರ ಚೌಟ ಹೆಸರಿನ ಉಲ್ಲೇಖ ಸಿಗುವುದು ಕ್ರಿ.ಶ. ೧೨೬೪ರ ಕೊಡಗಿನ ಉಲುಗುಲಿ ಗ್ರಾಮದ ಶಾಸನದಲ್ಲಿ[೧೩] ಚೌಟ ಎಂಬುದು ಚೌತಾಲ ಎಂಬ ಪದದಿಂದ ನಿಷ್ಪನ್ನವಾಗಿರ ಬೇಕು. ಅಂದರೆ ನಾಲ್ಕನೇ ಒಂದು ಭಾಗ (ಚೌತ)ರೆವಿನ್ಯೂ ಸಂಗ್ರಹ ಮಾಡುವ ಸುಂಕಾಧಿಕಾರಿ ಆಗಿರಬೇಕು

ಸುರಾಲಿನಿಂದ ಪುತ್ತಿಗೆಗೆ ಈ ರಾಜವಂಶ ವಲಸೆ ಹೋದ ಕಾಲ ತಿಳಿದುಬರುತ್ತಿಲ್ಲವಾದರೂ ೧೯೧೮ರ ವರೆಗೆ ಅಂದರೆ ಕುಞಮ್ಮಸೆಟ್ಟಿ ನಿಧನ ಆಗುವವರೆಗೆ ಮೂಡಬಿದ್ರೆಯವರೂ ಸುರಾಲಿನವರೂ ಒಂದೇ ವಂಶ ಒಂದೇ ಬಳಿಯರಾಗಿದ್ದು ಕುಟುಂಬ ಸೂತಕಗಳು ಇವರೊಳಗಿದ್ದುವು.[೧೪]

**೧೮೩೩ರಲ್ಲಿ ಮತ್ತೆ ಮಾತೃಮೂಲ ಕುಟುಂಬ ನೆಲೆ ಸುರಾಲಿನಿಂದ ದತ್ತು :** ದತ್ತು ತರುವುದು ವಂಶದವರಿಂದ. ಆಗಿನ ಮೂಡಬಿದ್ರೆಯ ಅರಸರಾದ ಚನ್ನರಾಯ ಚೌಟರ ವಂಶದಲ್ಲಿ ಸಂತಾನ ಇರಲಿಲ್ಲ. ಸಿದ್ಧಮ್ಮ ಮತ್ತು ಅಕ್ಕಯ ಎಂಬ ಇಬ್ಬರು ಸೋದರಿಯಲ್ಲಿ ಅಕ್ಕಯ ಎಂಬವರ ಮಗ ಚನ್ನರಾಯ ಚೌಟ. ೧೮೩೩ರಲ್ಲಿ ಅಕ್ಕಯ (ಅಥವಾ ಚನ್ನರಾಯ ಚೌಟ) ತಾವುಪಾಲಿನ (ಮೂಲ) ಮನೆಯಾದ ತೋಳಾಹರ ರಾಜ ಕುಟುಂಬದಿಂದ ಒಂದು ಗಂಡು ಮಗುವನ್ನು ದತ್ತು ಪಡೆಯುತ್ತಾರೆ. ಆ ಹುಡುಗನಿಗೆ ಗುಮ್ಮಣ್ಣ ಸೆಟ್ಟಿ ಎಂದು ನಾಮಕರಣ ಮಾಡುತ್ತಾರೆ.

ಆಕೆಯ ಸೋದರಿ ಸಿದ್ದಮ್ಮ ತಮ್ಮ ಪುತ್ತಿಗೆಯ ಕುಟುಂಬದ ಮತ್ತೊಂದು ಶಾಖೆಯಿಂದ ೧೩ ವರುಷದ ಉಞಮ್ಮ ಎಂಬ ಹೆಣ್ಣು ಮಗುವನ್ನು ದತ್ತು ಪಡೆಯುತ್ತಾರೆ. ತುಳುವ ಸಂಪ್ರದಾಯದಂತೆ ಗಂಡು ಮಗ ರಾಜ್ಯಭಾರ ಮಾಡಲು, ಹೆಣ್ಣು ಮಗಳು ಸಂತಾನ ಮುಂದುವರಿಸಲು ದತ್ತು ಮಕ್ಕಳಾಗಿ ಚೌಟರ ರಾಜಕುಟುಂಬಕ್ಕೆ ಬರುತ್ತಾರೆ. ಸುರಾಳಿನ ದತ್ತು ಮಗನಾಗಿ ಬಂದ ಗುಮ್ಮಣ್ಣಸೆಟ್ಟಿ ಪಟ್ಟಾಭಿಷೇಕ ಮಾಡಿಸಿಕೊಂಡು ಚಿಕ್ಕರಾಯ ಚೌಟನಾದ. ದತ್ತುಮಗಳಾಗಿ ಬಂದ ಉಞಮ್ಮ ಪದ್ಮಾವತಿ, ಕುಞಣ್ಣ ಪಾಪಚ್ಚ ಶಾಂತಪ್ಪ/ ರಾಜ್-ಹೀಗೆ ೪ ಮಕ್ಕಳ ತಾಯಿಯಾ ದಳು. ಅವರಲ್ಲಿ ಹಿರಿಯ ಮಗನ ಹೆಸರು ಕುಂಞಣ್ಣ ಸೆಟ್ಟಿ.

ಗುಮ್ಮಣ್ಣಸೆಟ್ಟಿ ಯಾನೆ ಚಿಕ್ಕರಾಯ ಚೌಟರು ೧೮೬೭ರಲ್ಲಿ ಕಾಲವಾಗುತ್ತಾರೆ. ಆಗ ಪಟ್ಟದ ಉತ್ತರಾಧಿಕಾರಿ ಯಾಗಿದ್ದ ಚಿಕ್ಕರಾಯ ಚೌಟರ ಬಳಿ(ವಂಶ)ಯ ದತ್ತು ಸೋದರಿ ಉಞಮ್ಮಳ ಹಿರಿಯ ಮಗ ಕುಞಣ್ಣ ಸೆಟ್ಟಿಗೆ ಪಟ್ಟ ಆಗಬೇಕಿತ್ತು. ತುಳುನಾಡಿನ ವ್ಯವಸ್ಥೆಯಲ್ಲಿ ಸೋದರಿಯ ಹಿರಿಮಗನೇ ಪಟ್ಟಕ್ಕೆ ಉತ್ತರಾಧಿಕಾರಿಯಾದರೂ ಗುತ್ತುಗಳು ರಾಜನನ್ನು ಆರಿಸುವ ಅಧಿಕಾರವನ್ನು ಪಡೆದಿದ್ದವು. ಆ ಅಧಿಕಾರ ಇಲ್ಲಿ ದುರುಪಯೋಗವಾಯಿತು. ಕುಞಣ್ಣ ಸೆಟ್ಟಿಯ ಬದಲಿಗೆ ಆಗಿನ ಚೌಟರಾದ ಚಿಕ್ಕರಾಯ ಚೌಟರ ಮಗಳ ಮಗನಿಗೆ ಪಟ್ಟಾಭಿಷೇಕವನ್ನು ಪುತ್ತಿಗೆ ಸೀಮೆಯ ಗುತ್ತುಗಳವರು ಮಾಡಿ 'ಅವನನ್ನು ಚನ್ನರಾಯ ಚೌಟ'ನೆಂದು ಘೋಷಿಸುತ್ತಾರೆ. ಪುತ್ತಿಗೆಯ ಕುಟುಂಬದ ಕುಡಿಯೂ 'ಚೌಟ' ರಾಜಸತ್ತೆಯ ಉತ್ತರಾಧಿಕಾರಿಯೂ ಆದ ಕುಞಣ್ಣ ಸೆಟ್ಟಿಗೆ ಪಟ್ಟ ಕಟ್ಟುವ ಬದಲು ಗುತ್ತುಗಳವರು ಆಗ ಆಳುತ್ತಿದ್ದ ಪಟ್ಟದ ಅರಸ ಚಿಕ್ಕರಾಯನ ಮಗಳ ಮಗನಿಗೆ ಮಾಡುತ್ತಾರೆ. ಈತ ಪುತ್ತಿಗೆ ಅಥವಾ ಸುರಾಲಿನ ಕುಟುಂಬ ಆಗುವುದಿಲ್ಲ. ಚೌಟ ಪಟ್ಟದ ವಾರಸುದಾರನಾಗಿದ್ದ ತನಗೆ ಬರಬೇಕಾಗಿದ್ದ ಪಟ್ಟ ತಪ್ಪಿದ್ದಕ್ಕೆ ಕುಂಞಣ್ಣಸೆಟ್ಟಿ ಕೋರ್ಟು ಹತ್ತುತ್ತಾರೆ. ೧೨ ವರುಷಗಳ ಬಳಿಕ ಹಿಂದಿನ ಪಟ್ಟದ ರಾಜನ ಅಧಿಕಾರವನ್ನು ಅಸಿಂಧು ಗೊಳಿಸಿ ಕುಂಞಣ್ಣಸೆಟ್ಟಿಗೆ ಪಟ್ಟಾಭಿಷೇಕ ಮಾಡಲು ಬ್ರಿಟಿಷ್ ಸರಕಾರದ ಮದ್ರಾಸ್ ಕೋರ್ಟು ಘೋಷಿಸುತ್ತದೆ. ೧೮೮೦ ರಲ್ಲಿ ಕುಞಣ್ಣಸೆಟ್ಟರು ಗೆಲ್ಲುತ್ತಾರೆ.[೧೫] ಆದರೆ ಗುತ್ತುಗಳ ವರ್ತನೆಗೆ ಬೇಸತ್ತ ಕುಂಞಣ್ಣ ಸೆಟ್ಟಿ ಗುತ್ತುಗಳಿಗೆ ಸಲಾಮ್ ಹೊಡೆದು ತಾನು ಪಟ್ಟ ಕಟ್ಟಿಸಿಕೊಳ್ಳಲಾರೆ ಎಂದು ಪಟ್ಟ ಕಟ್ಟಿಸಿಕೊಳ್ಳಲಿಲ್ಲ. ಹೀಗಾಗಿ ಅಂದಿನಿಂದ ಚೌಟರ ಮನೆಯ ಯಾವ ಸದಸ್ಯನಿಗೂ ಪಟ್ಟ ಆಗಿಲ್ಲ. ಹೀಗಾಗಿ ಚೌಟ ಎಂಬ ರಾಜಾಧಿಕಾರದ ಹೆಸರನ್ನು ಯಾರೂ ರೂಢಿಸಿಲ್ಲ. ಕುಞಣ್ಣ ಸೆಟ್ರು ಕೂಡಾ ತಾವು ಚೌಟ ಪಟ್ಟಕ್ಕೆ ಕಾನೂನು ರಿತ್ಯಾ ವಾರಸುದಾರ ರಾಗಿದ್ದರೂ ಪಟ್ಟ ಆಗದೆ ಪಟ್ಟದ ಹೆಸರು ರೂಢಿಸಬಾರದು ಎಂಬ ತುಳುನಾಡಿನ ಸಾಂಪ್ರದಾಯಿಕ ನಿಯಮದಂತೆ ನಡೆದುಕೊಂಡು ಜನಸಾಮಾನ್ಯರು ರೂಢಿಸುವ ಸೆಟ್ಟಿ ಉಪನಾಮವನ್ನೇ ರೂಢಿಸಿಕೊಂಡರು.

ಕುಂಜಣ್ಣಸೆಟ್ಟಿಯ ಸಹೋದರಿಗೂ ಸಂತಾನ ಇರಲಿಲ್ಲ. ಹೀಗಾಗಿ ಮುಂದೆ ಚೌಟ ರಾಜಸತ್ತೆ ಸುರಾಲ್ ವಂಶದಿಂದ ಕುಂಜಣ್ಣಸೆಟ್ಟಿ ಅವರ ಮಡದಿ ಮಕ್ಕಳ ವಂಶಕ್ಕೆ ಸೇರುತ್ತದೆ. ಕುಂಜಣ್ಣಸೆಟ್ಟಿಯು ೧೯೧೮ರಲ್ಲಿ ಕಾಲವಾಗುತ್ತಾರೆ. ಸುರಾಲಿನ ತೋಳಹರ ವಂಶ ಇಲ್ಲಿಗೆ ಕೊನೆಯಾಗುತ್ತದೆ. ಅವರ ಮಕ್ಕಳು ಮಾಘಮಾಲಮ್ಮ, ಧರ್ಮ ಸಾಮ್ರಾಜ್ಯ, ಜಗತ್ಪಾಲ. ಮಾಘಮಾಲಮ್ಮರಿಗೂ ನಿಸ್ಸಂತತಿ. ಹೀಗಾಗಿ ಆಸ್ತಿ ಅರಮನೆ ಸೋದರರಿಗೆ ಹೋಗುತ್ತದೆ. ಧರ್ಮಸಾಮ್ರಾಜ್ಯರ ಮಗ ವಿಜಯರಾಜೇಂದ್ರರ (ಇವರು ಕಾಲವಾಗಿದ್ದಾರೆ) ಮಡದಿ ಮಕ್ಕಳು ಅರಮನೆಯ ಒಂದು ಭಾಗದಲ್ಲಿ ವಾಸಿಸುತ್ತಿದ್ದಾರೆ. ಅರಮನೆ ಪುರಾತತ್ವ ಇಲಾಖೆಯ ಸ್ವಾಧೀನ ಇದೆ. ಉಳಿದವರು ಮಕ್ಕಳು ತಮಗೆ ಅನುಕೂಲವಾದಲ್ಲಿ ಅಲ್ಲಿಯೇ ಸುತ್ತಮುತ್ತ ಮನೆ ಕಟ್ಟಿಕೊಂಡಿದ್ದಾರೆ. ಎಲ್ಲರ ಮನೆಗಳನ್ನೂ ಅರಮನೆ ಗಳೆಂದು ಗುರುತಿಸಲಾಗುತ್ತದೆ.

ಮುಂದೆ ಯಾರಿಗೂ ಪಟ್ಟ ಆಗಲಿಲ್ಲ. ಧರ್ಮ ಸಮ್ರಾಜ್ಯರು ಸೋದರಿ ನಾಗಮೂಲಮ್ಮ ಶೆಡ್ತಿ ಕೂಡಾ ನಿಸ್ಸಂತತಿ (ಆಕೆಗೆ ಮಕ್ಕಳಿಲ್ಲ). ಹೀಗಾಗಿ ಅರಮನೆಯ ಸಮಸ್ತ ಆಸ್ತಿ ಆಕೆಯ ತಮ್ಮಂದಿರ ಕೈಯಲ್ಲಿ ಇದೆ. ಆದರೆ ಪಟ್ಟ ಆಗದೆ ಯಾರೂ ಚೌಟ ಆಗಲಿಲ್ಲ.

ಚೌಟರ ಅರಸೊತ್ತಿಗೆಯಲ್ಲಿ ಒಂದು ತಲೆಮಾರು ಹಿರಿಯ ಮಗಳಿದ್ದರೆ ಆಕೆ ರಾಣಿಯಾಗಿ ಅಬ್ಬಕ್ಕ ಹೆಸರಲ್ಲಿ ಪಟ್ಟದರಸಿಯಾಗುತ್ತಾಳೆ. ಒಂದು ತಲೆಮಾರು ಅಬಕ್ಕದೇವಿ ಎಂದೂ ಮತ್ತೊಂದು ತಲೆಮಾರು ಚನ್ನಮ್ಮ ದೇವಿಯೆಂದೂ ಪಟ್ಟದರಸಿಯಾಗುತ್ತಾರೆ. ಆದರೆ ಚೌಟರ ವಂಶಾವಳಿಯಲ್ಲಿ ಪದುಮಲಾದೇವಿ ಮತ್ತು ತಿರುಮಲಾದೇವಿಯೂ ಇದ್ದಾರೆ.

(ಸುರಾಲಿನ ಚಂದ್ರಶೇಖರ ತೋಳಾಹರರ ಮಗ ಸಂತೋಷ್ ಕುಮಾರ್ ಮಾಹಿತಿ ಸಂಗ್ರಹಕ್ಕೆ ನೆರವಾದವರು: ಅಪ್ಪು ವಿಷ್ಣುನಾಯಕ, ಭೋಜ ಕೋಟ್ಯಾನ್, ಸುಧೀರ್ ಬಂಗೇರ. ದಿನಾಂಕ : ೮-೯-೨೦೦೫)

## Genealogy




*Shalivahana shaka 1082 Vikrama Samvatsara Vaishaka Shuddha 5.*

*1101 Vikrama Samvatsara Jyeshta Shuddha 5.*

*1141 Pramathi Samvatsara Shravana Shuddha 15.*

*1167 Vishwavasu Samvatsara Ashwija Shuddha 13.*

*1205 Shobhana Samvatsara Magha Bahula 10.*

*1238 Nala Samvatsara Karthika Shuddha 15.*

*1277 Manmatha Samvatsara Chaithra Shuddha 5.*

*1304 Dundubi Samvatsara Ashada Bahula 9.*

*1325 Shobhana Samvatsara Shravana Bahula 5.*



10. Bhojaraya Chowta 30
Female
1360 Kalithakshi Samvatsara Chaithra Shuddha 11.
11. Thirumalaraya Chowta 46
Female
1390 Sarvadhari Samvatsara Magha Shuddha 12.
12. Thirumaladevi Chowta. 23
1436 Bhava Samvatsara Phalguna Shuddha 11.
13. Abbakka Devi Chowta 24
1459 Hevilambi Samvatsara Vaishaka Shuddha 3.
14. Chikkarava Chowta 24
Female
1483 Durmathi Samvatsara Marghashira Shuddha 5.
15. Channamma Devi Chowta 18
1507 Parthiva Samvatsara Shravana Shuddha 13.
16. Bhojaraya Chowta 41
Female
1525 Shobhakrathu Samvatsara Magha Shuddha 10.
17. Channamma Devi Chowta 43
1566 Tharana Samvatsara Jyeshta Bahula 5.
Shaka 1609
Shaka 1637
Shaka 1648.
18. Shikkaraca Chowta 28
Prabhava Pushya B.5.
19. Padmala Devi Chowta 11
Manmatha Phalguna B.7.
20. Abbakka Devi Chowta 23
Parabhava Karthika Shuddha 5.
Channamma Devi
21. Chandrashekara Chikkaraya Chowta 20
Female 1671 Shukla Sam.
Shubbha 2.
Female
Year 1769
Fasli 1179
Shaka 1691 Virodhi
Year 1781
Fasli 1179
Shaka 1703 Plava
Fasli 1193
Shaka 1705
Shobhakrathu.
Year 1783
22. Channaraya Chowta. 12
Shravana B.9
23. Chikkaraya Chowta 2
Margashira Shuddha 10.
24. Chandrashekhara Chikkaraya Chowta. 39
Dejamma.
Akkaya
Chandraya Ballal.
Siddamma




This genealogy has been prepared according to instructions given by petitioner and filed by Vakil Sri Bhavanishankrayya.

Date of application for
certified copy 2-3-1888
Thasildar's Order 3-3-1888
Application No. 543/88.

Sd. M. Ramappa
Thasildar
/True Copy/
Seal : Deputy Collector of South Kanara.

SUBORDINATE JUDGE'S COURT OF MANGALORE.
O.S.NO.39 OF 1887., PRODUCED ON THE 6 MARCH 1888., BY DEFTS. VAKIL., FILED ON THE 6TH MARCH 1888., AS EXHIBIT XV.
(IID) X X X
SUBORDINATE JUDGE.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಗುರುರಾಜ್ ಭಟ್, ಪು. ೭೯.

೨. SII., Vol. 27, No. 24.

೩. SII., Vol. 27, No. 356, 1416-17A.D.

೪. SII., Vol. IX, part II, No. 460.

೫. ರಮೇಶ ಕೆ.ವಿ. ಮತ್ತು ಶರ್ಮ ಎಂ.ಜೆ., **ತುಳುನಾಡಿನ ಶಾಸನಗಳು ಸಂ. ೨.**

೬. ಅದೇ., ಶಾ.ಸಂ. ೫.

೭. ಅದೇ., ಶಾ. ಸಂ. ೧೨

೮. ಗಣಪತಿರಾವ್ ಐಗಳ್ ಎಂ., ೧೯೨೩, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,** ಪು. ೨೮೭–೨೯೦.

೯. **ಪ್ರವಾಸಿ ಕಂಡ ಇಂಡಿಯಾ,** ಭಾಗ ೪, ಪು. ೨೮೨.

೧೦. ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ., ಅದೇ, ಪು. ೯೪, ೧೯೮೫.

೧೧. ಡಾ|| ಕೆ.ಜಿ. ವಸಂತ ಮಾಧವ., ೧೯೯೮, **ಅಬ್ಬಕ್ಕ ದೇವಿಯರು.,** ಪು. ೭, ೮.

೧೨. ತುಳುವರು ತಮ್ಮನ್ನು ಸೋಮವಂಶದವರೆಂದು ಹೇಳುತ್ತಾರೆ. ಸೋಮವಂಶದವರಿಂದ ಕಟ್ಟಿದ ದೇವಸ್ಥಾನ ಸೋಮೇಶ್ವರ ಆಗಿರಬೇಕು.

೧೩. P. Gururaja Bhatt, ೧೯೭೫, ***Studies in Tuluva History and Culture,*** ಪು. ೬೮.

೧೪. ಮುಂದೆ ಕುಞಮ್ಮಸೆಟ್ಟಿಯ ಸೋದರಿ ಪದ್ಮಾವತಿ ಅಮ್ಮನಿಗೆ ಮಕ್ಕಳಿಲ್ಲದ ಕಾರಣ ಚೌಟ ಅರಸೊತ್ತಿಗೆ ಕುಞಮ್ಮ ಸೆಟ್ಟಿಯ ಮಡದಿ ಮಕ್ಕಳ ಪಾಲಿಗಾಯಿತು.

೧೫. ಕುಂಜಮ್ಮ ಸೆಟ್ಟಿ ಗೆದ್ದ ಕೂಡಲೇ ಪಟ್ಟದ ಉಂಗುರ ಹಾಗೂ ಪಟ್ಟದ ಕತ್ತಿಯ ಸಮೇತ ಅರಮನೆಯ ಅಮೂಲ್ಯ ವಸ್ತುಗಳನ್ನೂ ಹಳೆಯ ದಾಖಲೆಗಳನ್ನೂ ಹಿಂದಿನ ಅರಸನ ಮಡದಿ ಮಕ್ಕಳು ಸುರಾಲಿಗೆ (ಅರಸುಮನೆಗಲ್ಲ) ಸಾಗಿಸುತ್ತಾರೆ.
(ಮಾಹಿತಿ ನೀಡಿದವರು: ಕುಞಮ್ಮಸೆಟ್ಟಿಯ ಮೊಮ್ಮಗ ರಾಜೇಂದ್ರಸೆಟ್ಟಿ ನಿರ್ಮಲ ವಿ. ರಾಜ್.)

ಹಣಮಂತ ತಾಸಗಾಂವಕರ*

# ಬಾಗಲಕೋಟೆಯ ರಘುವೀರ ಸಮಾಧಿ

ಬಾಗಲಕೋಟೆಯ ಮಾರವಾಡಿ ಓಣಿ ಅಥವಾ ಮಿರ್ಜಿ ಗಲ್ಲಿಯಲ್ಲಿ ಶ್ರೀರಘುವೀರಸ್ವಾಮಿಗಳ ಹಳೆಯ ಮಠವಿದೆ. ಅದೀಗ ಮನೆಯೂ ಹೌದು. ರಘುವೀರ ಕುಟುಂಬಗಳು ಸುತ್ತಮುತ್ತ ವಾಸಿಸುತ್ತಿವೆ. ಈ ರಘುವೀರ ಸ್ವಾಮಿಗಳಿಂದಲೇ ಇವರ ವಂಶಿಕರಿಗೆ ರಘುವೀರ ಎಂದಾಗಿದೆ. ಇವರು ಅದ್ವೈತ-ಸಂಪ್ರದಾಯಸ್ಥರು. ರಾಮದೇವರ ಭಕ್ತರು ತುಳಜಾಭವಾನಿಯ ಆರಾಧಕರು. ರಾಮನವಮಿ ಸಂದರ್ಭದಲ್ಲಿ ರಾಮೋತ್ಸವವನ್ನು ಪಾಡ್ಯದಿಂದ ಹುಣ್ಣಿಮೆಯವರೆಗೆ ಆಚರಿಸುತ್ತಾರೆ. ಸ್ವಾಮಿಗಳ ಆರಾಧನೆಯನ್ನು ಮಾಘಶುದ್ಧ ನವಮಿಯಿಂದ ದ್ವಾದಶಿಯ ವರೆಗೆ ಮಾಡುವರು. ಆದರೆ ಇಲ್ಲಿ ಹಳೆಯದ್ದಾದ ಇಂಥ ಸ್ಥಳವೊಂದಿದೆ ಎನ್ನುವುದೂ ಕೂಡ ಸಾಕಷ್ಟು ಜನರಿಗೆ ಗೊತ್ತಿಲ್ಲ.

**ಹಿನ್ನೆಲೆ :** ಐತಿಹ್ಯದಂತೆ ಶ್ರೀ ರಘುವೀರ ಸ್ವಾಮಿಗಳು ಹದಿನೇಳನೇ ಶತಮಾನಕ್ಕೆ ಸೇರುತ್ತಾರೆ. ಅಂದಿನ ದಿನಗಳಲ್ಲಿ ಈ ಪ್ರದೇಶವೆಲ್ಲ ಕಾಡುಸ್ಥಳವಾಗಿ ನಿರ್ಜನವಾದುದಾಗಿತ್ತು. ಆದಿಲಶಾಹಿ ವಿಜಾಪುರದಿಂದ ಆನೆ, ಒಂಟೆಗಳ ಸಾಲು ಮಾತ್ರ ವ್ಯಾಪಾರಕ್ಕಾಗಿ ಪಯಣಿಸುತ್ತಿದ್ದವು. ಅಂತೇ ಈ ಭಾಗದಲ್ಲಿ "ಆನೆ ಬಂತೊಂದಾನೆ...ಯಾವೂರು ಆನೆ...... ವಿಜಾಪುರಆನೆ.... ಹಾದಿ ಗೊಂದುಡ್ಡ....... ಬೀದಿ ಗೊಂದುಡ್ಡ" .....ಎಂಬ ಜಾನಪದ ಹಾಡು ಜನ ಜನಿತವಾಗಿದೆ. ಬಾಗಲ ಕೋಟೆಯವರೇ ಆಗಿದ್ದ ದಾಸವರೇಣ್ಯ ಶ್ರೀ ಪ್ರಸನ್ನ ವೆಂಕಟದಾಸರಿಗೆ "ಅಂಗಾರದ ದಾಸಪ್ಪ" ಎನ್ನುತ್ತಿದ್ದರು. ಇವರು ಹುಲಿ ಮೇಲೆ ದೇವರ ಪೆಟ್ಟಿಗೆ ಇಟ್ಟುಕೊಂಡು ಬದಾಮಿಗೆ ಹೋಗುತ್ತಿದ್ದರು. ಅಂಥ ಹುಲಿಗೆ ಅಂಗಾರ ಹಚ್ಚಿ ಸಾಧು ಪ್ರಾಣಿಯನ್ನಾಗಿ ಸಿದ್ದರು.

ಆಗ ಬಾಗಲಕೋಟೆ ಕೇವಲ ಕಿಲ್ಲೆಯೊಳಗೆ ಘಟಪ್ರಭಾ ನದಿ ದಂಡೆಗುಂಟ ಪ್ರಸರಿಸಿತ್ತು. ಬುರುಜದೊಳಗಿದ್ದ ಇಂದಿನ ಕೊತ್ತಲಪ್ಪನ ಗುಡಿ ಊರ ಹೊರಸ್ಥಳ. ಇದಕ್ಕೆ ತಾಗಿಯೇ ಕೋಟೆ ಗೋಡೆ ಅದರಾಚೆ ಕಂದಕವಿತ್ತು. ಜನವಸತಿಯಿಂದ ದೂರವಿದ್ದ ಈ ಸ್ಥಳದಲ್ಲಿ ಮಠ ನಿರ್ಮಾಣಗೊಂಡಿದೆ. ಮಠದ ಜಾಗೆ ವಿಸ್ತಾರವಿದ್ದು ಮಠ ಕೂಡ ತನ್ನ ಗಾಂಭೀರ್ಯದ


ಜೀವಂತ ಸಮಾಧಿ ಕೈಕೊಂಡ ಸ್ಥಳ

ಇರವನ್ನೂ ಸೂಚಿಸುತ್ತಿದೆ. ದಕ್ಷಿಣದ ಜಾಗೆಯಲ್ಲಿ ಸ್ವಾಮಿಗಳು "ಜೀವಂತ ವೃಂದಾವನ" ಪ್ರವೇಶಿಸಿದ್ದು ಮಾಘಶುದ್ಧ ಅಷ್ಟಮಿ ಆದರೆ ನಿರ್ವಾಣಗೊಂಡಿದ್ದು ಏಕಾದಶಿಯಂದು. ಅವರಿಗೆ ಇಲ್ಲಿಯೇ ಸಮಾಧಿಕಟ್ಟಿದ್ದಾರೆ. ಈಗ ಇದು ಮನೆಯ ಒಳಭಾಗ ವಾಗಿದೆ. ಊರು ಬೆಳೆದಂತೆ-ಮಠಕ್ಕೆ ಹತ್ತಿದಂತೆಯೇ ಮನೆ ಗಳನ್ನು ನಿರ್ಮಿಸಿರಬಹುದಾಗಿದೆ.

ಸಮಾಧಿ ಮೇಲೆ ಕಪ್ಪು ಶಿಲೆಯಲ್ಲಿ ನಿರ್ಮಿತ ಸುಂದರ ಪ್ರಾಣದೇವರ ಮೂರ್ತಿಯಿದ್ದು ಕಲಾತ್ಮಕ ಪ್ರಭಾವಳಿಯಿದೆ. ಇದರ ಮೇಲೆ "ಶ್ರೀ ರಾಮ ಜಯ ರಾಮ ಜಯ ಜಯ ರಾಮ" ದೇವನಾಗರಿಲಿಪಿಯಲ್ಲಿದೆ. ಮಠದ ದ್ವಾರ ಉತ್ತರಾಭಿಮುಖವಾಗಿದೆ. ಒಳಭಾಗದಲ್ಲೊಂದು ವಿಶಾಲ ಹಜಾರ ಕೋಣೆಗಳು. ಅದಕ್ಕಂಟಿದಂತೆ-ಕೈಸಾಲೆ ಮುಂಭಾಗದಲ್ಲಿ ಅಂಗಳ. ಆನೆಕಟ್ಟುವ ಸ್ಥಳ, ಕಾವಲು ಕೋಣೆ, ಧರ್ಮಧ್ವಜ ಸ್ತಂಭದ ಮೂಲೆಕಲ್ಲು, ಸ್ವಾಮಿಗಳಿಗಾಗಿ ದೊಡ್ಡ ಅಂಕಣ-

* ಸುಧನ್ವ, ಸೆಕ್ಟರ ನಂ. ೧೮/೨೫, ನವನಗರ, ಬಾಗಲಕೋಟೆ - ೫೮೭ ೧೦೨.



ಸಮಾಧಿ ಮೇಲಿನ ಹನುಮಂತ ದೇವರು

ಇವೆಲ್ಲ ಮಠದ ವಿಶಾಲತೆಯನ್ನು ಸೂಚಿಸುತ್ತವೆ. ಮಠವು ಹಳೆಯದಾಗಿ ಅರ್ಧಂಬರ್ಧ ಏಳು ಬೀಳು ಸ್ಥಿತಿಯಲ್ಲಿದೆ. ಕೆಲ ಕಡೆ ಬಿದ್ದಿದೆ.

**ಸಾಂಪ್ರದಾಯಿಕ ಆಚರಣೆಗಳು :** ಅನೂಚಾನವಾಗಿ ಕೆಲ ಆಚರಣೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಉತ್ಸವದಲ್ಲಿ **ತೊಟ್ಟಿಲು ಸೇವೆ** ಮಹತ್ವದ್ದು. ನಾಲ್ಕು ಚಿಕ್ಕ ತೊಟ್ಟಿಲುಗಳು, ಅವುಗಳಿಗೆ ಕುಸೂರಿ ವಸ್ತ್ರ ಕುಂಚಿಗೆಗಳು. ಎರಡು ನಂದಾದೀಪಗಳಿಗಾಗಿ ಕೋಲುಗಳು. ಅವನ್ನು ಪಡಸಾಲೆಯಲ್ಲಿಟ್ಟಿದ್ದು ಒಂದು ತುಪ್ಪ ಹಾಗೂ ಇನ್ನೊಂದು ಎಣ್ಣೆ ದೀವಿಗೆ. ರಘುವೀರ ಸ್ವಾಮಿಗಳ ಯೋಗದಂಡಕ್ಕೆ ಹಿತ್ತಾಳೆ ಹಿಡಿಕೆಯ ಹಿಲಾಲುಗಳಿವೆ. ಇವೆಲ್ಲವುಗಳನ್ನಿಡಲು ಭದ್ರವಾದ ದೊಡ್ಡ ಸಂದೂಕುಗಳು. ಲಕ್ಷ್ಮಿದೇವಿ ಕೊಡದಲ್ಲಿ ಒಡಮೂಡಿರುವಳು ಎನ್ನಲಾಗಿದೆ. ಇದರ ಪ್ರತಿಕೃತಿಯು ಸಮಾಧಿಯ ಹೊರಗೋಡೆಯ ಮಾಡಿನಲ್ಲಿ "ಹುಡೇದಲಕ್ಷ್ಮಿ" ಎಂದು ಪೂಜಿತಗೊಳ್ಳುತ್ತಿದೆ. ಶ್ರೀ ರಘುವೀರಸ್ವಾಮಿಗಳು ಪೂಜಿಸಿದ ದೇವರ ವಿಗ್ರಹಗಳಿವೆ. ನಸುಗೆಂಪು ಬಣ್ಣದ ಶಾಲಿಗ್ರಾಮ ಹಾಗೂ ಶುಭ್ರಶಾಲಿಗ್ರಾಮ ಸಂಪುಷ್ಟದಲ್ಲಿವೆ. ದೊಡ್ಡ ದೇವರುಗಳೆಂದು ಪೂಜಿಸಲ್ಪಡುವ ಲಕ್ಷ್ಮಿ ವೆಂಕಟೇಶ ಪ್ರತಿಮೆಗಳಿವೆ. ಅಂಬಾಭವಾನಿ ಒಕ್ಕಲದವರು ಉತ್ಸವದಲ್ಲಿ ಗೊಂದಲಿಗರು ಧರಿಸುವಂಥ ದಿರಿಸುಗಳನ್ನು ಧರಿಸುತ್ತಾರೆ. ಹಿಂದೆ ಉತ್ಸವದ ನಂತರ ತುಳಜಾಪುರಕ್ಕೆ ನಡೆದು ಹೋಗುತ್ತಿದ್ದರು. ಆರತಿಕಾಕ ಆರತಿ ಮಾಡುತ್ತಾರೆ. ಹನುಮಂತ ದೇವರಿಗೆ ಅಭಿಷೇಕ, ರುದ್ರಾಭಿಷೇಕಗಳನ್ನು ಮಾಡುವರು. ಉತ್ಸವ ಸಮಯದಲ್ಲಿ ಹಿಂದೆ ಸಾಕಷ್ಟು ಸಂಖ್ಯೆಯಲ್ಲಿ ಭಕ್ತರು ಆಗಮಿಸಿ ಹರಕೆ ತೀರಿಸುತ್ತಿದ್ದರು. ಆಗ ಬಲು ವಿಜೃಂಭಣೆಯಿಂದ ನಡೆಯುತ್ತಿತ್ತು.

**ರಘುವೀರ ಸ್ವಾಮಿಗಳು :** ಇವರ ಪೂರ್ವಜರು ಪೈಠಣ ಕಡೆಯವರಂತೆ ಉಂಡುಟ್ಟು ಸುಖವಾಗಿದ್ದರು. ಕೊನೆಯ ಮಗು ಈ ರಘುವೀರರು ತಾಯಗರ್ಭದಲ್ಲಿದ್ದಾಗ ಮುಸಲ್ಮಾನರ ಹಾವಳಿಯಿಂದಾಗಿ ಆ ಪ್ರದೇಶ ತ್ಯಜಿಸಿ ಬರುತ್ತಿದ್ದಾಗ ಮಾರ್ಗ ಮಧ್ಯವೇ ಇವರ ಜನ್ಮವಾಯಿತಂತೆ. ಮುಂದೆ ದಕ್ಷಿಣದ ಬಿಜಾಪುರದತ್ತ ಆಗಮಿಸುವರು. ಬಿಜಾಪುರದಲ್ಲಾಗ ಎರಡನೆಯ ಇಬ್ರಾಹಿಂ ಆದಿಲಶಾಹಿ ಆಳ್ವಿಕೆ. ಹೇಳಿಕೇಳಿ ಈತ "ಜಗತಗೀರ" ಜಗದ್ಗುರು ಇಬ್ರಾಹಿಂ. ಹೀಗಾಗಿ ಇಲ್ಲಿ ಆಶ್ರಯ ದೊರೆತಿರಬಹುದು. ಇಲ್ಲಿಯ ಸಮಾಜ ಸುಧಾರಕರೂ ಖ್ಯಾತ-ವೈದ್ಯರೂ ಪ್ರಸಿದ್ಧ ಸಂಗೀತಕಾರರೂ ಆಗಿದ್ದ ಶೈವ ಸಂಪ್ರದಾಯದ ರುಕ್ಮಾಂಗದ ಪಂಡಿತರೊಂದಿಗೆ (ಕಾಲ.೧೬೧೦-೧೭೧೦) ರಘುವೀರರ ಸ್ನೇಹ. ಕಾಲಾಂತರದಲ್ಲಿ ಅತ್ಯಂತ ನಿಕಟವರ್ತಿಗಳಾಗುವರು. ಈ ಪಂಡಿತರು ತಾರುಣ್ಯಕ್ಕೆ ಬರುವಷ್ಟರಲ್ಲಿ ಬಿಜಾಪುರದಲ್ಲಿ ಮುಹಮ್ಮದ ಆದಿಲಶಹನ (ಕಾಲ ೧೬೨೬-೧೬೫೬) ಆಳ್ವಿಕೆಯು ಪ್ರಾರಂಭಗೊಂಡಿತ್ತು. ಆದ್ದರಿಂದ ಭವರೋಗ ವೈದ್ಯರು ರುಕ್ಮಾಂಗದಪಂಡಿತರು ಎರಡನೆ ಇಬ್ರಾಹಿಂ ಆದಿಲಶಹನ ಸಮವಯಸ್ಕ ರಾಗಿರಬಹುದು. ಅಂತೇ ರಘುವೀರರೂ ಓರಗೆಯವ ರಾಗಿರಲೂ ಸಾಕು. ಹಂಪಿ ಕ್ಷೇತ್ರವಾಸಿ ಶಂಕರಾಚಾರ್ಯ ಮಠದ ಪರಂಪರೆಯ ಶ್ರೀ ಗೌರಾನಂದ ಯತಿಗಳು ತಮ್ಮ ವಿಜಾಪುರ ವಾಸ್ತವ್ಯ



ಶ್ರೀ ರಘುವೀರರು ಪೂಜಿಸಿದ ಕೆಲ ವಸ್ತುಗಳು

ನಲ್ಲಿದ್ದಾಗ, ರುಕ್ಮಾಂಗದಪಂಡಿತರು ಈ ಯತಿಗಳಿಂದ ಆಶ್ರಮ ಸ್ವೀಕರಿಸಿದರು. ಇದೇ ಸಂದರ್ಭದಲ್ಲೇ ರಘುವೀರರೂ ಸನ್ಯಾಸಾಶ್ರಮ ಸ್ವೀಕರಿಸಿರಬಹುದು. ಆದರೆ ಶಿವಾಜಿ ಮಹಾರಾಜರ ರಾಜಗುರುಗಳಾಗಿದ್ದ ಸಮರ್ಥರಾಮದಾಸರು (ಕಾಲ ೧೬೦೮–೧೬೮೨) ರಘುವೀರರಿಗೂ ಗುರುವಾಗಿದ್ದರು.

ರುಕ್ಮಾಂಗದಪಂಡಿತರು ಮತ್ತು ರಘುವೀರ ಸ್ವಾಮಿಗಳೀರ್ವರ ಗೆಳೆತನದ ಬೆಸುಗೆಗೆ ಸಾಕ್ಷಿಯೆಂಬಂತೆ ಜೋಡಿ ಪ್ರಾಣದೇವರ ಮೂರ್ತಿಗಳಿವೆ. ಸನ್ಯಾಸತ್ವ ಸ್ವೀಕರಿಸಿದ್ದ ರಘುವೀರಸ್ವಾಮಿಗಳು ಕಾಲಾಂತರದಲ್ಲಿ ಬಾಗಲಕೋಟೆಗೆ ನಿರ್ಗಮಿಸುವ ವೇಳೆಯಲ್ಲಿ ಈ ಜೋಡಿ ಮೂರ್ತಿಗಳನ್ನು ಬೇರ್ಪಡಿಸಲಾಯಿತಂತೆ. ಒಂದು ರಘುವೀರಸ್ವಾಮಿ ಸಮಾಧಿ ಮೇಲಿದ್ದರೆ, ಇನ್ನೊಂದು ವಿಜಾಪುರದಲ್ಲಿಯ ರುಕ್ಮಾಂಗದ ಪಂಡಿತರ ಸಮಾಧಿ ಮೇಲಿದೆ.

ಈರ್ವರೂ ಮಹಿಪತಿರಾಯರನ್ನು ಗುರುಗಳಂತೆ ಕಾಣುತ್ತಿದ್ದರು. ಇದರಲ್ಲಿ ರಘುವೀರರು "ತ್ಯಾಗಿ" ಎಂದು ಅಭಿನಾಮಾಂಕಿತರಾಗಿದ್ದರು.

ರಘುವೀರಸ್ವಾಮಿಗಳು ಅರವತ್ನಾಲ್ಕು ವರ್ಷಕಾಲ ಜೀವಿಸಿದ್ದರು.

ಈಗ ಮಠ ಹಾಗೂ ಮನೆಯಿದ್ದ ಅಲ್ಲದೇ ಸುತ್ತಲಿನ ನಾಲ್ಕು ಎಕರೆಯಷ್ಟು ಜಾಗೆಯನ್ನು ಎರಡನೇ ಇಬ್ರಾಹಿಂ ಆದಿಲಶಾಹಿ ಉಂಬಳಿಯಾಗಿ ನೀಡಿದ್ದು. ಈ ಜಾಗೆಯಲ್ಲಿ ಒಂದು ಹಾಳ ಬಾವಿಯಿದ್ದು ಅದಕ್ಕೆ ಪವಾಡ ಘಟಿಸಿದ ಕಾರಣದಿಂದಾಗಿ ತುಪ್ಪದಬಾವಿ ಎಂದು ಈಗಲೂ ಕರೆಯುತ್ತಾರೆ. ಇವರ ಪಾದುಕೆಗಳಿವೆ. ಅವಕ್ಕೆ ಬೆಳ್ಳಿಕಟ್ಟು ಹಾಕಿಸಿ ವಂಶೀಯರು ಭಯ ಭಕ್ತಿಯಿಂದ ಪೂಜಿಸುತ್ತಾರೆ. ಇವರ ಕೃತಿಗಳಾವೂ ಸದ್ಯಕ್ಕೆ ದೊರೆತಿಲ್ಲ. ಅವರ ವಂಶೀಯರೇ ಹೇಳುವಂತೆ ಅನೇಕ ಕಾಗದ ಪತ್ರ ಕಡತ, ಪುಸ್ತಕವಾಲಿ ಮುಂತಾದವುಗಳನ್ನೆಲ್ಲ ಗೋಣಿಚೀಲದಲ್ಲಿ ಕಟ್ಟಿ ಈ ಬಾವಿಯಲ್ಲಿ ಎಸೆಯಲಾಗಿದೆ. ಹೀಗಾಗಿ ಇವರಿಗೆ ಸಂಬಂಧಿತ ಮತ್ತಷ್ಟು ಅಧಿಕೃತ ದಾಖಲೆಗಳಿಗಾಗಿ ಸಂಶೋಧಿಸಬೇಕಿದೆ. ಇವರ ಹೆಸರಿನಲ್ಲಿ ಅನೇಕ ಪವಾಡಗಳಿವೆ.

ವಂಶಾವಳಿ




(ಒಟ್ಟಿಗೆ ಸದ್ಯದವರು ಹನ್ನೊಂದನೆಯ ತಲೆಯವರಾಗಬೇಕು.)
* ಮಧ್ಯದಲ್ಲಿ ಬಿಟ್ಟು ಹೋಗಿದೆಯಂತೆ



ಡಾ. ಚನ್ನಬಸವ ಹಿರೇಮಠ*

# ಗೆಜ್ಜಲಗಟ್ಟಿ ನಾಡಗೌಡರು

ರಾಯಚೂರು ಜಿಲ್ಲೆ ಲಿಂಗಸೂಗುರು ತಾಲೂಕಿನ ಗೆಜ್ಜಲಗಟ್ಟಿಯು ನಿಜಾಮ ಕಾಲದ ಒಂದು ಚಿಕ್ಕ ನಾಡಗೌಡ ಮನೆತನ. ಇವರು ಗುಡಗುಂಟಿ ಸಂಸ್ಥಾನದ ಅಧೀನರಾಗಿ ಆಳುತ್ತಿದ್ದರು. ಇವರು ಏಕಕಾಲದಲ್ಲಿ ಗುಡಗುಂಟಿನಾಯಕರು ಮತ್ತು ಹೈದ್ರಾಬಾದ ನಿಜಾಮರ ಸಾಮಂತರಾಗಿದ್ದರು.

**ಮನೆತನದ ಮೂಲ :** ಗೆಜ್ಜಲಗಟ್ಟಿ ಮನೆತನದ ಪೂರ್ವಜರು ಇಂದಿನ ಆಂಧ್ರಪ್ರದೇಶದ ಆದೋನಿ ಸೀಮೆಯ ಕಲ್ಲುಬಾವಿ ಪ್ರದೇಶಕ್ಕೆ ಸೇರಿದವರು. ಈಗಿನ ಆದೋನಿಯ ರೈಲು ನಿಲ್ದಾಣವು ಹಿಂದೆ ಕಲ್ಲುಬಾವಿ ಗ್ರಾಮವಾಗಿತ್ತು. ಈ ಮನೆತನದ ಮೂಲಪುರುಷ ಸಂಗಾರಡ್ಡಿ. ಆತನು ಶಾಲಿವಾಹನ ಶಕೆ ೧೧೨೫ನೆಯ ರಾಕ್ಷಸ ನಾಮ ಸಂವತ್ಸರದ ಕಾರ್ತೀಕ ಶುದ್ಧ ಪಂಚಮಿಯಲ್ಲಿ ಕಲ್ಲುಬಾವಿ ಗ್ರಾಮದ ಗೌಡಕಿ ಮಾಡುತ್ತಿದ್ದನೆಂದು ಹೆಳವರ ದಾಖಲೆ ಹೇಳುತ್ತದೆ. ಆದರೆ ಗೆಜ್ಜಲಗಟ್ಟಿ ಮನೆತನದವರು ತಮ್ಮ ಪೂರ್ವಜರು ವಿಜಯನಗರ ಸಾಮ್ರಾಜ್ಯದಲ್ಲಿ ಕುದುರೆ ಸವಾರರಾಗಿ ಕೆಲಸ ಮಾಡುತ್ತಿದ್ದರೆಂದು ಹೇಳುತ್ತಾರೆ. ನಮಗೆ ಲಭ್ಯವಾದ ಗೆಜ್ಜಲಗಟ್ಟಿ ವಂಶಾವಳಿಯೂ ಇದನ್ನು ಖಚಿತಪಡಿಸುತ್ತದೆ.

ಬಿಜಾಪುರ ಆದಿಲ್ ಶಾಹಿಗಳು ವಿಜಯನಗರ ಚಕ್ರವರ್ತಿಗಳೊಂದಿಗೆ ದೋಆಬ್ ಪ್ರದೇಶವನ್ನು ವಶಪಡಿಸಿಕೊಳ್ಳಲು ನಿರಂತರ ಹೋರಾಟ ನಡೆಸಿದ್ದರು. ಇಂಥ ಒಂದು ಯುದ್ಧದಲ್ಲಿ ವಿಜಯನಗರದ ಪರವಾಗಿ ಸಂಗಾರಡ್ಡಿ ಭಾಗವಹಿಸಿದ್ದನು. ರಣರಂಗದಲ್ಲಿ ವೀರಾವೇಶದಿಂದ ಹೋರಾಡುತ್ತ ಆದಿಲ್ ಶಾಹಿಯ ಅಂಬಾರಿ ಮೇಲಿದ್ದ ಧ್ವಜವನ್ನು ಸಂಗಾರಡ್ಡಿ ಕಿತ್ತು ಹಾಕಿದನು. ಅಂತಿಮವಾಗಿ ಈ ಯುದ್ಧದಲ್ಲಿ ವಿಜಯನಗರಕ್ಕೆ ಜಯವಾಯಿತು. ತನ್ನ ಸೈನಿಕನೊಬ್ಬ ಜೀವದ ಹಂಗು ತೊರೆದು ಹೋರಾಡಿದ್ದನ್ನು ಕಂಡು ಚಕ್ರವರ್ತಿಗೆ ಸಂತೋಷವಾಯಿತು. ಆಸ್ಥಾನದಲ್ಲಿ ಸಂಗಾರಡ್ಡಿಯನ್ನು ಸತ್ಕರಿಸಿ ಲಿಂಗಸೂಗೂರು ತಾಲೂಕಿನ ಒಂದು ಹಳ್ಳಿಯನ್ನು (ನಿಲೋಗಲ್ಲು) ಉಂಬಳಿಯಾಗಿ ನೀಡಿದನು. ಇದಿಷ್ಟು ತಮ್ಮ ಮನೆತನದ ಬಗ್ಗೆ ಅವರು ಹೇಳುವ ವಿವರಣೆ. ಆದರೆ ಈ ಯುದ್ಧ ಎಲ್ಲಿ ನಡೆಯಿತು? ಆಗ ಆಳುತ್ತಿದ್ದ ವಿಜಯನಗರದ ದೊರೆಯಾರು? ಇತ್ಯಾದಿ ಯಾವ ವಿವರಗಳನ್ನೂ ಅವರು ನೀಡುವುದಿಲ್ಲ.

ಮುದಗಲ್ಲು ಮತ್ತು ರಾಯಚೂರು ಕೋಟೆಗಳನ್ನು ವಶಪಡಿಸಿಕೊಳ್ಳಲು ಈ ಎರಡೂ ಮನೆತನಗಳು ನಿರಂತರ ಹೋರಾಡಿದ ಇತಿಹಾಸ ನಮ್ಮ ಕಣ್ಣ ಮುಂದಿದೆ. ಕ್ರಿ.ಶ. ೧೩೬೬ ರಿಂದ ಕ್ರಿ.ಶ. ೧೫೬೫ರ ವರೆಗೆ ನಿರಂತರವಾಗಿ ಹದಿಮೂರಕ್ಕಿಂತ ಹೆಚ್ಚು ಸಲ ಮುದಗಲ್ಲು ಕೋಟೆಗಾಗಿ ಯುದ್ಧ ನಡೆದಿದೆ. ಹತ್ತು ಯುದ್ಧಗಳಲ್ಲಿ ವಿಜಯನಗರದ ಚಕ್ರವರ್ತಿಗಳು ಮತ್ತು ಮೂರು ಯುದ್ಧಗಳಲ್ಲಿ ಆದಿಲ್ ಶಾಹಿಗಳು ಜಯಗಳಿಸಿದ್ದಾರೆ. ಪ್ರತಿ ಯುದ್ಧದಲ್ಲಿ ಸೋಲಿನ ಕಹಿ ಉಂಡರೂ ಛಲ ಬಿಡದೆ ಹೋರಾಟ ನಡೆಸಿದ್ದಾರೆ. ಕ್ರಿ.ಶ. ೧೪೪೩ ರಲ್ಲಿ ರಾಯಚೂರು ಪ್ರದೇಶವು ಬಹಮನಿಗಳ ವಶದಲ್ಲಿದ್ದರೆ ಕ್ರಿ.ಶ. ೧೪೯೦ರಲ್ಲಿ ಅದು ಆದಿಲ್ ಶಾಹಿ ರಾಜ್ಯದ ಭಾಗವಾಗಿತ್ತು. ಕ್ರಿ.ಶ. ೧೪೯೨ರಲ್ಲಿ ವಿಜಯನಗರವು ರಾಯಚೂರನ್ನು ಹಿಡಿದುಕೊಂಡಿತು. ಆದರೆ ವಿಜಯನಗರದ ಅರಮನೆಯ ಅಂತಃಕಲಹದಿಂದಾಗಿ ಯುಸೂಫ್ ಆದಿಲ್‌ಖಾನ್ ಕ್ರಿ.ಶ. ೧೪೯೩ರ ಏಪ್ರಿಲ್‌ನಲ್ಲಿ ಮತ್ತೆ ರಾಯಚೂರನ್ನು ವಶಪಡಿಸಿಕೊಂಡನು. ಮುಂದೆ ಕೃಷ್ಣ ದೇವರಾಯನು ಕ್ರಿ.ಶ. ೧೫೧೨ರಲ್ಲಿ ಅದನ್ನು ಗೆದ್ದುಕೊಂಡನು, ಕ್ರಿ.ಶ. ೧೫೨೦ರಲ್ಲಿ ಇಸ್ಮೈಲ್ ಆದಿಲ್ ಖಾನ್ ಸುಮಾರು ೭೦೦೦ ಅಶ್ವದಳದೊಂದಿಗೆ ರಾಯಚೂರು ಕೋಟೆಗೆ ಲಗ್ಗೆ ಹಾಕಿದನು. ಪೂರ್ವಯೋಜನೆ ಇಲ್ಲದೆ ಅವನು ಕೃಷ್ಣಾನದಿ ದಾಟಿದ್ದರಿಂದ ಕೃಷ್ಣದೇವರಾಯನ ಸೈನ್ಯದೆದುರು ಸೋತು ಹಿಂದೆ ಸರಿದನು. ಇವರ ಆನೆಗಳು ಹೊಸೂರು ಹತ್ತಿರ ಬೀಡುಬಿಟ್ಟಿದ್ದವಂತೆ. ಆದ್ದರಿಂದ ಮುಂದೆ ಇದನ್ನು ಆನೆ ಹೊಸೂರು ಎಂದು ಕರೆಯಲಾಯಿತು.

* ಕನ್ನಡ ಪ್ರಾಧ್ಯಾಪಕ, ಎಲ್.ವಿ.ಡಿ. ಕಾಲೇಜು, ರಾಯಚೂರು.

ಪ್ರಾಚೀನ ಕಾಲದಲ್ಲಿ ಎಡೆದೊರೆ ಅಥವಾ ದೋಆಬ್ ಪ್ರಾಂತವನ್ನು ಉತ್ತರದಿಂದ ಪ್ರವೇಶಿಸಲು ಕೃಷ್ಣಾ ನದಿಯನ್ನು ದಾಟಿ ಬರಬೇಕಾಗಿತ್ತು. ಇದಕ್ಕೆ ಸೂಕ್ತ ಸ್ಥಳವೆಂದರೆ ಇಂದಿನ ಸುರಪುರ ತಾಲೂಕಿನ ಕಕ್ಕೇರಿಯಾಗಿದೆ. ಹಾಗೆಯೆ ಮುಂದೆ ಸಾಗಿ ಗುಡಗುಂಟ, ಕೋಟ, ಹಟ್ಟಿ, ನಿಲೋಗಲ್, ಗೆಜ್ಜಲಗಟ್ಟಿ ಮಾರ್ಗವಾಗಿ ರಾಯಚೂರು ಅಥವಾ ಮುದಗಲ್ಲುಗಳಿಗೆ ಹೋಗಬೇಕಾಗಿತ್ತು. ಕೃಷ್ಣದೇವರಾಯನ ಸೈನ್ಯವು ಈ ಪ್ರದೇಶ ದಿಂದಲೆ ಇಸ್ಮೈಲ್‌ನನ್ನು ಸೋಲಿಸಿರಬೇಕು. ಕೋಟೆಯನ್ನು ಕೈವಶಮಾಡಿಕೊಳ್ಳಲು ನಡೆದ ಈ ಯುದ್ಧದಲ್ಲಿ ವಿಜಯನಗರದ ಚಕ್ರವರ್ತಿಗಳಿಗೆ ಬೆನ್ನೆಲುಬಾಗಿ ನಿಂತವರು ಸ್ಥಳೀಯ ಪಾಳೆಯ ಗಾರರು.

ದಖನಿ ಬಾದಶಹನು ದಂಡಿಗೆ ಬಂದಾಗ ಗೆಜ್ಜಲಗಟ್ಟಿ ಮನೆತನದ ಹೆಣ್ಣುಮಗಳು ಅವರ ಸೈನಿಕರಿಗೆ ಆಶ್ರಯ ನೀಡಿದಳಂತೆ. ಇದರಿಂದ ಸಂತೃಪ್ತನಾದ ಬಾದಶಹ ಅವರಿಗೆ ಕೋಟೆ ಸೀಮೆಯ (ಲಿಂಗಸೂಗೂರು ತಾಲೂಕು) ಗೌಡಿಕೆ ಯನ್ನು ನೀಡಿದನಂತೆ. ವಿಜಯನಗರ ಪತನಾನಂತರ ಎರಡನೇ ಇಬ್ರಾಹಿಂ ಆದಿಲ್ ಶಾಹಿ ದಕ್ಷಿಣ ಕರ್ನಾಟಕದ ಕಡೆಗೆ ದಂಡಯಾತ್ರೆ ಕೈಕೊಂಡುದು ತಿಳಿಯುತ್ತದೆ. ಬಹುಶಃ ಇವನೇ ಗೆಜ್ಜಲಗಟ್ಟಿ ನಾಡಗೌಡರಿಗೆ ಉಂಬಳಿ ನೀಡಿರಬೇಕು.

ಗೆಜ್ಜಲಗಟ್ಟಿಯವರು ಹೇಳುವಂತೆ ಸಂಗಾರಡ್ಡಿ ಮತ್ತು ಆತನ ಮಗ ತಾತಾರಡ್ಡಿ ಈ ಯುದ್ಧದಲ್ಲಿ ಭಾಗವಹಿಸಿದ್ದರು. ಚಕ್ರವರ್ತಿಯು ನಿಲೋಗಲ್ಲ ಗ್ರಾಮವನ್ನು ಉಂಬಳಿಯಾಗಿ ನೀಡಿದಾಗ ತಾತಾರಡ್ಡಿಯು ಅಲ್ಲಿಗೆ ಬಂದು ನೆಲೆನಿಂತನು. ಏಕ ಗ್ರಾಮದ ಉಂಬಳಿಯೊಂದಿಗೆ ಪ್ರಾರಂಭವಾದ ಗೆಜ್ಜಲ ಗಟ್ಟಿಯವರ ಆಳ್ವಿಕೆ ಮುಂದೆ ೨೨ ಹಳ್ಳಿಗಳವರೆಗೆ ವಿಸ್ತರಿಸಿತು. ಈ ವೇಳೆಗೆ ವಿಜಯನಗರವು ಶಾಹಿ ಮನೆತನಗಳ ಸಂಯುಕ್ತ ದಾಳಿಗೆ ಬಲಿಯಾಯಿತು. ಇವರ ನಿಷ್ಠಾವಂತ ಸಾಮಂತರೂ ನಾಮಾವಶೇಷವಾದರು. ಪರಿಸ್ಥಿತಿ ಅರಿತ ಕೆಲವು ಜಾಗೀರ ದಾರರು ಶಾಹಿ ಸುಲ್ತಾನರ ಒಡೆತನವನ್ನು ಮನ್ನಿಸಿ ಮುಂದು ವರಿದರು. ಇವರೂ ಸ್ಥಳೀಯ ಆಳ್ವಿಕೆಯ ಬದಲಾವಣೆಗೆ ಕೈ ಹಾಕಲಿಲ್ಲ. ಗೆಜ್ಜಲಗಟ್ಟಿ ಮನೆತನದ ಮೂರನೆಯ ಸಂಗಾರಡ್ಡಿ ಕಾಲದಲ್ಲಿ (ಕ್ರಿ.ಶ.ಸು. ೧೫೫೫) ಗುಡುಗುಂಟಿ ಗ್ರಾಮವನ್ನು ಆದಿಲ್ ಶಾಹಿಗಳು ಗಡ್ಡದ ಲಿಂಗನಾಯಕನಿಗೆ ಉಂಬಳಿಯಾಗಿ ನೀಡಿದನು.

**ಚಾರಿತ್ರಿಕ ದಾಖಲೆ :** ನಾಡಗೌಡರ ಮನೆಯಲ್ಲಿರುವ ದಾಖಲೆಗಳು ಗೌಡಪ್ಪಗೌಡನ ಮಗ ಅಪ್ಪನಗೌಡನಿಗೆ ಹಿಜರಿ ೧೦೭೫ (ಕ್ರಿ.ಶ. ೧೬೫೪)ರಲ್ಲಿ ಗುಡಗುಂಟಿ ಸಂಸ್ಥಾನದ ಸೋಮಪ್ಪನಾಯಕನ ಮಗ ಲಿಂಗನಾಯಕ ಗೆಜ್ಜಲಗಟ್ಟಿ ಗ್ರಾಮವನ್ನು ಉಂಬಳಿ ನೀಡಿರುವುದನ್ನು ಹೇಳುತ್ತವೆ. ಇದು ಗೆಜ್ಜಲಗಟ್ಟಿ ಮನೆತನದ ಅತ್ಯಂತ ಪ್ರಾಚೀನ ದಾಖಲೆಯಾಗಿದೆ. ಮುಂದೆ ಗುಡಗುಂಟಿ ಸೋಮಲಿಂಗನಾಯಕನು ಹಿಜರಿ ೧೧೩೮ (ಕ್ರಿ.ಶ. ೧೭೧೭) ರಲ್ಲಿ ಚಿಕ್ಕ ಹೆಸರೂರು ಗ್ರಾಮ ವನ್ನು ಅಪ್ಪನಗೌಡನ ಮಗ ಆದೆಪ್ಪಗೌಡನಿಗೆ ಉಂಬಳಿಯಾಗಿ ಬಿಟ್ಟುಕೊಟ್ಟನು. ಫಸಲಿ ೧೧೯೯ ಜೆಹಾಜ್ ೨೫ ರಲ್ಲಿ (ಕ್ರಿ.ಶ. ೧೭೪೮) ಹೂವಿನಬಾವಿ ಮತ್ತು ನಗನೂರು ಗ್ರಾಮಗಳನ್ನು ಸೋಮಸರ್ಜಾನಾಯಕ ಉಂಬಳಿಯಾಗಿ ನೀಡಿದ ದಾಖಲೆಗಳು ಸಿಗುತ್ತವೆ. ರಾಜಾ ಪಿಡ್ಡನಾಯಕನು ಫಸಲಿ ೧೨೧೭ (೧೮೦೯)ರಲ್ಲಿ ವೆಂಕಟರಾವ ನಾಡಗೌಡರ ಮಗ ಮಾನಪ್ಪಗೌಡರಿಗೆ ಚಿಕ್ಕಲದೊಡ್ಡಿ ಗ್ರಾಮವನ್ನು ನೀಡಿದನು. ಈ ಎಲ್ಲ ದಾಖಲೆಗಳಿಂದ ಇವರು ಗುಡುಗುಂಟಿ ಸಂಸ್ಥಾನದ ಅಧೀನರಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಸ್ಪಷ್ಟವಾಗುತ್ತದೆ.

**ರಾಣಿಯರ ಆಳ್ವಿಕೆ :** ಮಾನಪ್ಪ ನಾಡಗೌಡರಿಗೆ ನಾಲ್ಕು ಜನ ರಾಣಿಯರು. ಇವರಲ್ಲಿ ಮೂವರ ಹೆಸರು ತಿಳಿಯುವು ದಿಲ್ಲ. ಆದರೆ ಕಿರಿಯ ರಾಣಿ ಲಕ್ಷ್ಮಮ್ಮ ಆಡಳಿತದಲ್ಲಿ ನೇರವಾಗಿ ಭಾಗಿಯಾಗಿದ್ದನ್ನು ದಾಖಲೆಗಳು ಖಚಿತಪಡಿಸುತ್ತವೆ. ರೂಪ-ಲಾವಣ್ಯಗಳಲ್ಲಿ ಆಕೆಯನ್ನು ಮೀರಿಸುವವರು ಮತ್ತೊಬ್ಬರಿರ ಲಿಲ್ಲ. ಆಡಳಿತದ ವಿಷಯಕ್ಕೆ ಬಂದಾಗ ಅತ್ಯಂತ ದರ್ಪದಿಂದ ವರ್ತಿಸುತ್ತಿದ್ದಳು.

**ರಾಣಿ ಲಕ್ಷ್ಮಮ್ಮ :** ಗುಡಗುಂಟಿಯ ಜಡೆಸೋಮಪ್ಪ ನಾಯಕನ ಮೂವರು ರಾಣಿಯರಲ್ಲಿ (ಗೌರಮ್ಮ, ಲಕ್ಷ್ಮಮ್ಮ ಮತ್ತು ಚನ್ನಮ್ಮ) ಗೌರಮ್ಮ ತನ್ನ ವರ್ಚಸ್ಸಿನಿಂದ ಖ್ಯಾತಿ ಪಡೆದಿದ್ದಳು. ಈಕೆಯ ಸಮಕಾಲೀನಳಾಗಿ ಗೆಜ್ಜಲಗಟ್ಟಿಯಲ್ಲಿ ಲಕ್ಷ್ಮಮ್ಮ ಆಳ್ವಿಕೆ ನಡೆಸುತ್ತಿದ್ದಳು. ಆಳ್ವಿಕೆಯ ದೃಷ್ಟಿಯಿಂದ ಅಧೀನರಾದರೂ ಇಬ್ಬರಲ್ಲಿ ಪ್ರೀತಿ-ವಿಶ್ವಾಸವಿತ್ತು. ಆದರೆ ಈ ವಿಶ್ವಾಸ ಬಹಳ ಕಾಲ ಮುಂದುವರೆಯಲಿಲ್ಲ. ಇವರ ಮಧ್ಯೆ ಭೂ-ವ್ಯಾಜ್ಯ ಉಂಟಾಯಿತು. ಫಸಲಿ ೧೨೮೨ (ಕ್ರಿ.ಶ. ೧೮೭೪) ದಾಖಲೆಯು ಈ ವಿಷಯವನ್ನು ಖಚಿತಪಡಿಸುತ್ತದೆ. ಈ ಜಗಳ ಹೈದ್ರಾಬಾದ್ ನಿಜಾಮನ ಬಳಿಗೆ ಬಂದಿತು. ನಿಜಾಮನು ದಾಖಲೆಗಳನ್ನು ಪರಿಶೀಲಿಸಿ ಗೆಜ್ಜಲಗಟ್ಟಿಯವರ ಪರವಾಗಿ (ಕೇಸ್ ಸಂ. ೧೦೨೫) ೧೩ನೆಯ ಮೆಹರ ೧೩೦೪ ಫಸಲಿಯಲ್ಲಿ ತೀರ್ಪು ನೀಡಿದನು. ಇದು ಕ್ರಿ.ಶ. ೧೮೯೬ಕ್ಕೆ ಸರಿಹೊಂದುತ್ತದೆ.

ಎರಡು ಅಧೀನ ಸಂಸ್ಥಾನಗಳ ನಡುವೆ ವ್ಯಾಜ್ಯ ಉಂಟಾಗಲು ಕಾರಣವೇನು? ಎಂಬುದು ಸ್ಪಷ್ಟವಾಗದಿದ್ದರೂ

ಆಡಳಿತ ವ್ಯಾಪ್ತಿಗೆ ಸಂಬಂಧಿಸಿ ಜಗಳ ಉಂಟಾಗಿರಬೇಕು. ಮಾನಪ್ಪ ನಾಡಗೌಡರಿಗೆ ನಾಲ್ಕು ಜನ ರಾಣಿಯರಿದ್ದರೂ ಮಕ್ಕಳ ಭಾಗ್ಯ ಪ್ರಾಪ್ತವಾಗಲಿಲ್ಲ. ಈ ಕೊರತೆ ಅವರನ್ನು ನಿರಂತರವಾಗಿ ಕಾಡುತ್ತಿತ್ತು. ಗೆಜ್ಜಲಗಟ್ಟಿ ಸಂಸ್ಥಾನಕ್ಕೆ ಪುತ್ರ ಸಂತಾನವಿಲ್ಲದ್ದರಿಂದ ಅದನ್ನು ತಮ್ಮ ಅಧೀನಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸಿರಬೇಕು. ಕೂಡಲೇ ಎಚ್ಚೆತ್ತುಕೊಂಡ ಲಕ್ಷ್ಮಮ್ಮ ನಿಲೋಗಲ್ಲಿನ ತಮ್ಮ ಸಂಬಂಧಿಗಳ ಮಗ ದೊಡ್ಡ ಬಸವಂತ ರಾಯನನ್ನು ವಿಧಿವತ್ತಾಗಿ ದತ್ತು ಸ್ವೀಕರಿಸಿ ಸಿಂಹಾಸನದ ಮೇಲೆ ಕೂಡಿಸಿದಳು. ಸಮಯ ಪ್ರಜ್ಞೆ ಉಪಯೋಗಿಸಿ ಕಾರ್ಯಕೈಕೊಂಡಿದ್ದರಿಂದ ಸಂಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದಳು. ಈ ದಾಖಲೆಗಳನ್ನು ನಿಜಾಮನು ಪರಿಶೀಲಿಸಿ ಮಾನ್ಯ ಮಾಡಿರಬೇಕು. ಸಾಮಂತ ಮನೆತನ ಗಳೆರಡು ಅಧಿಕಾರ ವಿಸ್ತರಣೆಗಾಗಿ ಕಚ್ಚಾಡುತ್ತಿದ್ದಾಗ ಸಾಮ್ರಾಟರು ಅದನ್ನು ಬಗೆಹರಿಸುತ್ತಿದ್ದ ರೀತಿಯು ಇದರಿಂದ ಸ್ಪಷ್ಟವಾಗುತ್ತದೆ.

ಮಾನಪ್ಪ ನಾಡಗೌಡರ ಅಕಾಲಿಕ ನಿಧನದಿಂದ ಗೆಜ್ಜಲಗಟ್ಟಿ ಸಂಸ್ಥಾನವು ಕಂಗೆಟ್ಟಿತು. ರಾಣಿ ಲಕ್ಷ್ಮಮ್ಮ ಧೈರ್ಯ ಗೆಡದೆ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡಳು. ಪತಿ ಯೊಂದಿಗೆ ಈ ಮೊದಲೇ ಆಡಳಿತದಲ್ಲಿ ಭಾಗವಹಿಸಿದ್ದರಿಂದ ಅಷ್ಟೇನೂ ಕಷ್ಟವಾಗಲಿಲ್ಲ. ಆದರೆ ಪುತ್ರ ಸಂತಾನವಿಲ್ಲವೆಂದು ಸಂಸ್ಥಾನವನ್ನು ಕಿತ್ತುಕೊಳ್ಳಲು ಪ್ರಯತ್ನಿಸಿದಾಗ ವಿಚಲಿತ ಳಾದಳು. ತಕ್ಷಣ ಎಚ್ಚೆತ್ತುಕೊಂಡು ಕಾನೂನುಬದ್ಧವಾಗಿ ದತ್ತು ಸ್ವೀಕರಿಸಿದಳು. ಈ ದಾಖಲೆಗಳನ್ನು ನಿಜಾಮನು ಪರಿಶೀಲಿಸಿ ತನ್ನ ಒಪ್ಪಿಗೆ ನೀಡಿದನು.

ರಾಣಿ ಲಕ್ಷ್ಮಮ್ಮ ಈ ಭಾಗದ ಸುಪ್ರಸಿದ್ಧ ಸಂತ ಸಂತೆಕೆಲ್ಲೂರು ಘನಮಠ ಶಿವಯೋಗಿಗಳ ಸಮಕಾಲೀನಳಾಗಿ ಬಾಳಿದ್ದಾಳೆ. ಒಮ್ಮೆ ಲಕ್ಷ್ಮಮ್ಮ ಆಡಳಿತ ನಿಮಿತ್ಯ ಅಂಕುಶದೊಡ್ಡಿ ಗ್ರಾಮಕ್ಕೆ ಬಂದಾಗ ಸ್ವಾಮಿಗಳೂ ಅಲ್ಲಿಯ ಮಠದಲ್ಲಿ ತಂಗಿದ್ದರು. ಅವರ ದರ್ಶನ ಪಡೆಯಲು ಬರುವುದಾಗಿ ಲಕ್ಷ್ಮಮ್ಮ ಓಲೆಕಾರನಿಂದ ಹೇಳಿಕಳಿಸಿದಳು. ಅಲ್ಲದೆ ತಾನು ಬಂದಾಗ ಅಲ್ಲಿ ಯಾವ ಗಂಡಸರೂ ಇರಬಾರದೆಂದು ಸೂಚಿಸಿದಳು. ರಾಣಿ ಮೊದಲಾದ ರಾಜಕುಟುಂಬದ ಸ್ತ್ರೀ ಯರು ಆ ಕಾಲದಲ್ಲಿ ಮೇನೆಯಲ್ಲಿ ಕುಳಿತು ಪ್ರಯಾಣ ಮಾಡುತ್ತಿದ್ದರು. ರಾಜಪರಿವಾರ ಹೊರತುಪಡಿಸಿ ಇತರ ಪುರುಷರ ದೃಷ್ಟಿಯಿಂದ ಸಾಧ್ಯವಾದಷ್ಟು ದೂರವಿರುತ್ತಿದ್ದರು.

ರಾಣಿ ಸಾಹೇಬರು ಸ್ವಾಮಿಗಳಿಗೆ ನಮಸ್ಕರಿಸಿ ಸ್ವಲ್ಪ ದೂರದಲ್ಲಿ ಅವರ ಆಶೀರ್ವಚನಕ್ಕಾಗಿ ಕುಳಿತುಕೊಂಡಳು. ರಾಣಿಯವರು ಮೇನೆಯಲ್ಲಿ ಕುಳಿತು ಬಂದುದು ಸ್ವಾಮಿಗಳ ಕೋಪಕ್ಕೆ ಕಾರಣವಾಗಿತ್ತು. ಘನಮಠ ಶಿವಯೋಗಿಗಳು ಇದನ್ನು ಟೀಕಿಸುತ್ತ "ಬದುಕಿದ್ದಾಗಲೇ ಈ ಸ್ಥಿತಿ ಬಂದಿತೆ?" ಎಂದು ಗೇಲಿ ಮಾಡಿದರು. ಅದಕ್ಕೆ ಲಕ್ಷ್ಮಮ್ಮನವರು ರಾಜ ವ್ಯವಸ್ಥೆಯಲ್ಲಿ ಇದು ಸಾಮಾನ್ಯ. ಪೂಜ್ಯರು ಅನ್ಯಥಾ ಭಾವಿಸಬಾರದೆಂದು ಕ್ಷಮೆ ಯಾಚಿಸಿದಳು.

"ನಿಮ್ಮ ಆಡಂಬರ ಹೆಚ್ಚಾಯಿತು. ಸರಳತೆಯನ್ನು ಮೈಗೂಡಿಕೊಳ್ಳಿ" ಎಂದು ಸ್ವಾಮಿಗಳು ಸಲಹೆ ನೀಡಿದರು. "ಹಣ, ಅಧಿಕಾರದಿಂದ ನಾನು ಹೀಗೆ ಬರಲಿಲ್ಲ. ಘೋಷಾ ಪದ್ಧತಿ ರಾಜವಂಶದಲ್ಲಿ ಚಲಾವಣೆಯಲ್ಲಿದೆ ಎಂದು ವಿನಂತಿಕೊಳ್ಳುತ್ತ, ಸಂಸ್ಥಾನದ ವತಿಯಿಂದ ಕಾಣಿಕೆಯನ್ನು ನೀಡಲು ಹೋದಳು. "ಸಂಸಾರ ತ್ಯಜಿಸಿ ಬಂದ ಸಂನ್ಯಾಸಿಗೆ ಇವೆಲ್ಲ ಬೇಕಾಗಿಲ್ಲ. ಅವುಗಳನ್ನು ಹೊತ್ತುಕೊಂಡು ನಾನೆಲ್ಲಿ ತಿರುಗಾಡಲಮ್ಮ" ಎಂದು ನಿರಾಕರಿಸಿದರು. ಸ್ವಾಮಿಗಳ ಮಾತು – ವರ್ತನೆ ಲಕ್ಷ್ಮಮ್ಮಳಲ್ಲಿ ಅಧಿಕಾರದ ವೈರಾಗ್ಯಕ್ಕೆ ದಾರಿ ಮಾಡಿ ಕೊಟ್ಟಿತು. ಗುರುಗಳಿಂದ ಶಿವದೀಕ್ಷೆ ಪಡೆದು ವೀರಶೈವ ಧರ್ಮದ ಅಭಿವೃದ್ಧಿಗೆ ತನ್ನನ್ನು ತೊಡಗಿಸಿಕೊಂಡಳು.

ದೊಡ್ಡ ಬಸವಂತರಾಯ ಇನ್ನೂ ಬಾಲಕನಿದ್ದುದರಿಂದ ಲಕ್ಷ್ಮಮ್ಮಳೇ ನಾಡಗೌಡಿಕೆಯನ್ನು ನೋಡಿಕೊಳ್ಳುತ್ತಿದ್ದಳು. ಲಕ್ಷ್ಮಮ್ಮ ೬ನೇ ಅಬಾನ ೧೩೧೫ ಫಸಲಿಯಲ್ಲಿ (ಕ್ರಿ.ಶ. ೧೯೦೭) ತೀರಿಕೊಂಡಾಗ ಬಸವಂತರಾಯರ ಜವಾಬ್ದಾರಿ ಹೆಚ್ಚಿತು. ಅಲ್ಲದೆ ಗುಡಗುಂಟಿ ಸಂಸ್ಥಾನದೊಂದಿಗಿನ ಘರ್ಷಣೆ ಮುಂದುವರಿದಿತ್ತು. ಈತನ ಮಗ ವೆಂಕಟರಾವ ನಾಡಗೌಡನು ನಿಜಾಮ ಕೋರ್ಟಿನಲ್ಲಿ ಮತ್ತೊಂದು ದೂರನ್ನು (ಕೇಸ್ ಸಂಖ್ಯೆ ೧೬೩) ಅತಿಯಾತ ೧೩೪೩ ಫಸಲಿಯಲ್ಲಿ (ಕ್ರಿ.ಶ. ೧೯೩೬) ದಾಖಲು ಮಾಡಿದನು. ಈ ಬಗ್ಗೆ ನಿಜಾಮ ಸರಕಾರ ೮ನೆಯ ಬೆಹಮನ್ ೧೩೪೭ ಫಸಲಿಯಂದು ತೀರ್ಪು ನೀಡಿ ಗೆಜ್ಜಲಗಟ್ಟಿಯವರ ವಾದ ಸರಿಯಾಗಿದೆ ಎಂದು ಘೋಷಿಸಿದನು. ಇದು ಕ್ರಿ.ಶ. ೧೯೪೧ಕ್ಕೆ ಸರಿ ಹೊಂದುತ್ತದೆ. ಮುಂದೆ ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದು ದೇಶೀಯ ಸಂಸ್ಥಾನಗಳು ಭಾರತದ ಒಕ್ಕೂಟದಲ್ಲಿ ಸೇರಲು ಸಮ್ಮತಿಸಿದವು. ಆದರೆ ಹೈದ್ರಾಬಾದ್ ನಿಜಾಮ ಇದಕ್ಕೆ ವಿರೋಧಿಸಿದನು. ನಿಜಾಮನ ನಿರ್ಣಯವನ್ನು ಆತನ ಅಧೀನ ಸಂಸ್ಥಾನಗಳೂ ಬೆಂಬಲಿಸಿದವು. ಇದಕ್ಕೆ ಗೆಜ್ಜಲ ಗಟ್ಟಿಯೂ ಹೊರತಾಗಿರಲಿಲ್ಲ. ಪೋಲೀಸ ಕಾರ್ಯಾಚರಣೆಗೆ ಹೆದರಿ ನಿಜಾಮನು ೧೯೪೮ ಸೆಪ್ಟಂಬರ್ ೧೭ ರಂದು ಶರಣಾದನು. ಅಂದಿನಿಂದ ಗೆಜ್ಜಲಗಟ್ಟಿಯೂ ಭಾರತದ ಒಕ್ಕೂಟದಲ್ಲಿ ವಿಲೀನವಾಯಿತು.

**ಆಡಳಿತ :** ಗೆಜ್ಜಲಗಟ್ಟಿಯು ೨೨ ಹಳ್ಳಿಗಳ ಒಂದು ಆಡಳಿತ ಘಟಕವಾಗಿತ್ತು. ಅವುಗಳೆಂದರೆ ಗೆಜ್ಜಲಗಟ್ಟಿ, ಚಿಕ್ಕ ಹೆಸರೂರು, ಹೂವಿನಬಾವಿ, ಹಿರೇನಗನೂರು, ಮುಧೋಳ, ಸರ್ಜಾಪುರ, ಕೋಟಾ, ಗುಡದನಾಳ, ಮೇದಿನಾಪುರ, ಗೋನವಾರ, ಹಿರೇ ಹೆಸರೂರು, ಅನ್ವರಿ, ತವಗ, ಮಾಚನೂರು, ಎರಡೋಣಿ, ಜಂಗಮರಹಳ್ಳಿ, ವೀರಾಪುರ, ನಿಲೋಗಲ್ಲ, ಚಿಕ್ಕಲದೊಡ್ಡಿ (ಬೇಚರಾಕ), ಬೇಡರ ಕಾರಲ ಕುಂಟಿ, ಅಂಕುಶದೊಡ್ಡಿ, ಕಾತರಕಿ, ಬಸಾಪುರ (ಬೇಚರಾಕ) ಅಲಬನೂರು ಮತ್ತು ದಡೇಸೂಗೂರು. ಇವುಗಳಲ್ಲಿ ೭ ಜಾಗೀರು ಹಳ್ಳಿಗಳೂ ಸೇರಿವೆ.

ಲಕ್ಷ್ಮಮ್ಮ ಅನೇಕ ವಿದ್ವಾಂಸರಿಗೆ ಆಶ್ರಯನೀಡಿದ್ದಳು. ಕಂದಗಲ್ಲ ಪರುತಶಾಸ್ತ್ರಿಗಳು ಅಂಥ ವಿದ್ವಾಂಸರಲ್ಲಿ ಒಬ್ಬರು. ಇವರು ವೀರಶೈವ ಮಠಗಳ ನಿಯೋಜಿತ ಸ್ವಾಮಿಗಳು ಮತ್ತು ಇತರ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದರು. ಬಸವ ಪುರಾಣ ಪ್ರವಚನ ಇವರ ಆಸಕ್ತಿಯ ಕ್ಷೇತ್ರವಾಗಿತ್ತು. ಒಮ್ಮೆ ಇವರು ಬಸವ ಪುರಾಣ ಹೇಳುತ್ತಿದ್ದಾಗ ಘನಮಠ ಶಿವಯೋಗಿಗಳು ಬಂದಿದ್ದರಂತೆ. ಇಬ್ಬರ ಮಧ್ಯೆ ಬಸವಣ್ಣನ ವ್ಯಕ್ತಿತ್ವದ ಬಗ್ಗೆ ಚರ್ಚೆ ನಡೆಯಿತು. ಬಸವ ಪುರಾಣವನ್ನು ಮೂರು ತಿಂಗಳಲ್ಲ ಮೂರು ಜನ್ಮ ಎತ್ತಿ ಬಂದರೂ ಪರಿಪೂರ್ಣವಾಗಿ ಹೇಳಲು ಅಸಾಧ್ಯ, ಅಂಥದರಲ್ಲಿ ನೀವು ಮೂರು ತಿಂಗಳಲ್ಲಿ ಹೇಗೆ ಮುಗಿಸುತ್ತೀರಿ ಎಂದು ಸವಾಲೆಸೆದರು. ಕೊನೆಗೆ ಸಿಟ್ಟಿನಿಂದ ಆ ಸ್ಥಳ ಬಿಟ್ಟು ಹೊರಟು ಹೋದರಂತೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಪಂಡಿತರಾಗಿದ್ದ ಪರುತ ಶಾಸ್ತ್ರಿಗಳು ವಿದ್ಯಾರ್ಥಿಗಳಿಗೆ ಕಾವ್ಯ, ನಾಟಕ ಪುರಾಣ, ಮೀಮಾಂಸೆ, ವಚನ, ಜೋತಿಷ್ಯ ಮೊದಲಾದ ಪಠ್ಯಗಳನ್ನು ಕಲಿಸುತ್ತಿದ್ದರು. ಇವರ ಊಟ – ವಸತಿ–ವಸ್ತ್ರ ಮೊದಲಾದವುಗಳ ವ್ಯವಸ್ಥೆಯನ್ನು ಸಂಸ್ಥಾನವೇ ನೋಡಿಕೊಳ್ಳುತ್ತಿದ್ದಿತು. ಹುಬ್ಬಳ್ಳಿಯ ಸಿದ್ಧಾರೂಢಮಠದ ಶಿವಪುತ್ರಪ್ಪನವರು ಇಲ್ಲಿ ಕಲಿತ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿದ್ದಾರೆ. ಇದು ಆ ಕಾಲದ ಪ್ರಸಿದ್ಧ ಸಂಸ್ಕೃತ ಅಧ್ಯಯನ ಕೇಂದ್ರವಾಗಿತ್ತು. ಶಾಸ್ತ್ರಿಗಳಿಗೆ ಸಂಸ್ಥಾನದ ವತಿಯಿಂದ ೧೮ ಎಕರೆ ಭೂಮಿಯನ್ನು ದಾನವಾಗಿ ನೀಡಿದ್ದರು.

ಲಕ್ಷ್ಮಮ್ಮ ಕುದುರೆ ಸವಾರಿ ಮಾಡುತ್ತಿದ್ದಳು. ಅವಳು ಖಡ್ಗ ಹಿಡಿದು ಹೋರಾಟದಲ್ಲಿ ಪಾಲ್ಗೊಳ್ಳುತ್ತಿದ್ದ ಕಥೆಯನ್ನು ಸ್ಥಳೀಯರು ರೋಚಕವಾಗಿ ಬಣ್ಣಿಸುತ್ತಾರೆ. ಕಲ್ಯಾಣನಾಡಿನ ಮಹಿಳೆಯರು ಆಡಳಿತದಲ್ಲಿ ನೇರವಾಗಿ ಭಾಗವಹಿಸುತ್ತಿದ್ದ ಅಂಶಗಳು ಚರಿತ್ರೆಯ ಪುಟಗಳಲ್ಲಿ ಹೊಸ ಸೇರ್ಪಡೆಗಳಾಗಿವೆ. ಚೆನ್ನಮ್ಮ, ಮಲ್ಲಮ್ಮರಂತೆ ಇವರು ಹೋರಾಡಿದ ವಿಷಯಗಳು ಸಿಗದಿದ್ದರೂ ತಮ್ಮ ಸಂಸ್ಥಾನದ ಉಳಿವಿಗಾಗಿ ಅವರು ಆಡಳಿತದಲ್ಲಿ ತೊಡಗಿದ್ದು ಉಲ್ಲೇಖನೀಯ.

ನಿಜಾಮ ಪ್ರದೇಶವು ಪ್ರತ್ಯೇಕ ಭಾಗವಾಗಿದ್ದರಿಂದ ಈ ಭಾಗಕ್ಕೆ ಬರುವ ಹೋಗುವ ವ್ಯಕ್ತಿ ಮತ್ತು ವಸ್ತುಗಳನ್ನು ತಪಾಸಣೆ ಮಾಡಲಾಗುತ್ತಿತ್ತು. ನಂದವಾಡಗಿ ಹತ್ತಿರ ಕರುಡಗಿರಿ (Toll=ಸುಂಕದಕಟ್ಟೆ) ಇತ್ತು. ಈ ಮನೆತನದ ಲಕ್ಷ್ಮಮ್ಮ ಮೊದಲಾದವರು ತವರುಮನೆಗೆ ಹೋಗುವಾಗಲೆಲ್ಲ ತಪಾಸಣೆಯ ಸಮಸ್ಯೆಯನ್ನು ಎದುರಿಸುತ್ತಿದ್ದರು. ಇದು ರಾಣಿಯರಿಗೆ ಮುಜುಗುರವನ್ನುಂಟು ಮಾಡುತ್ತಿತ್ತು. ನಾಡ ಗೌಡರು ಸ್ಥಳೀಯ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಈ ಸಂದರ್ಭದಲ್ಲಿ ಬಳಸುತ್ತಿದ್ದ ಹಪ್ತಗಿರಿ, ಛತ್ರಿ, ಪಲ್ಲಕ್ಕಿ, ಡಂಕ, ನಿಶಾನೆ, ಮೇನೆ ಮೊದಲಾದವುಗಳು ವಾಡೆಯಲ್ಲಿ ನೋಡಲು ಸಿಗುತ್ತವೆ. ನಶಿಸುತ್ತಿರುವ ಈ ಸಾಮಗ್ರಿಗಳನ್ನು ಸಂಗ್ರಹಿಸಿ, ಸಂರಕ್ಷಿಸಬೇಕಾಗಿದೆ.

ಆಡಳಿತವನ್ನು ನೋಡಿಕೊಳ್ಳಲು ಮಂತ್ರಿಮಂಡಲ ಇದ್ದಿತು. ವೆಂಕಟರಾವ ನಾಡಗೌಡರ ಕಾಲದಲ್ಲಿ ಜಾವೂರು ಅಯ್ಯನಗೌಡರು, ಅಪ್ಪಾಚಾರಿ, ಮತ್ತು ಕರಡಕಲ್ಲ ಗಿರಿಮಲ್ಲಪ್ಪ ಮೊದಲಾದವರು ಆಡಳಿತದಲ್ಲಿ ನೆರವಾಗುತ್ತಿದ್ದರು.

## ಗೆಜ್ಜಲಗಟ್ಟ ಸಂಸ್ಥಾನದ ವಂಶಾವಳಿ

- ಸಂಗಾರಡ್ಡಿ
  - ತಾತಾರಡ್ಡಿ
    - ಸಂಗಾರಡ್ಡಿ
      - ತಿಮ್ಮಾರಡ್ಡಿ
        - ೩ನೇ ಸಂಗಾರಡ್ಡಿ
        - ೪ನೇ ತಿಮ್ಮಾರಡ್ಡಿ
          - ೪ನೆಯ ಸಂಗಾರಡ್ಡಿ
            - ಗೌಡಪ್ಪಗೌಡ
              - ಹಿರೇ ತಿಮ್ಮಾರಡ್ಡಿ
              - ಸಣ್ಣ ತಿಮ್ಮಾರಡ್ಡಿ
              - ಅಪ್ಪನಗೌಡ (ಕ್ರಿ.ಶ. ೧೬೫೪)
                - ತಿಮ್ಮಪ್ಪಗೌಡ
                - ಮುದಿಯಪ್ಪಗೌಡ
                  - ಹುಚ್ಚ ತಿಮ್ಮಪ್ಪಗೌಡ
                  - ತಿಮ್ಮಪ್ಪಗೌಡ
                    - ಆದೆಪ್ಪಗೌಡ (೧೭೧೭)
                      - ಅಮರಪ್ಪಗೌಡ
                        - ಸಂಗಪ್ಪಗೌಡ
                          - ಅಮರಪ್ಪ
                            - ಅಯ್ಯಪ್ಪ
                              - ಶಂಕರಪ್ಪ
                        - ತಿಮ್ಮಪ್ಪಗೌಡ
                      - ದೊಡ್ಡಪ್ಪಗೌಡ
                        - ವೆಂಕಟರಾವನಾಡಗೌಡ
                          - ಮಾನಪ್ಪನಾಡಗೌಡ + (ರಾಣಿಯರು)
                            - ಪಟ್ಟದರಾಣಿ (ಕಾಳಾಪುರ ಮನೆತನ)
                            - (ಹಡಗಲಿ ಮನೆತನ)
                            - (ಹಡಗಲಿ ಮನೆತನ)
                            - ಲಕ್ಷ್ಮಮ್ಮ
                              - ದೊಡ್ಡ ಬಸವಂತರಾಯ (ದತ್ತುಪುತ್ರ)
                                - ವೆಂಕಟರಾವ ನಾಡಗೌಡ
                                  - ಶರಣಬಸವರಾಜ + ಬಸವರಾಜೇಶ್ವರಿ
                                  - ಶಿವಶಂಕರಗೌಡ
                                  - ಮಲ್ಲಿಕಾರ್ಜುನ
                                  - ನೀಲಕಂಠರಾವ
                  - ಶಿವಪ್ಪಗೌಡ
                - ಗಿರಿಯಪ್ಪಗೌಡ
                - ಬಸಪ್ಪಗೌಡ
    - ತಿಮ್ಮಪ್ಪ
  - ತಿಮ್ಮಪ್ಪ



ಡಾ. ಟಿ.ವಿ. ನಾಗರಾಜ*

# ಡಾ. ಫ್ರಾನ್ಸಿಸ್ ಬುಖಾನನ್ ಕಂಡಂತೆ- ಕೋಲಾರ ಪ್ರದೇಶ

ಟಿಪ್ಪೂ ಪತನಾನಂತರ ಬ್ರಿಟಿಷರ ಪರೋಕ್ಷ ಅಧೀನಕ್ಕೆ ಒಳಪಟ್ಟ ಸಂದರ್ಭದಲ್ಲಿ ಅಂದಿನ ಗವರ್ನರ್ ಜನರಲ್ ಮಾರ್ಕ್ವಿಸ್ ವೆಲ್ಲೆಸ್ಲಿಯಿಂದ, ಮೈಸೂರು ಅರಸರ ಹಾಗೂ ಟಿಪ್ಪೂವಿನಿಂದ ಆಕ್ರಮಿಸಿಕೊಂಡ ಪ್ರದೇಶಗಳು ಮತ್ತು ಮಲಬಾರ್ ಪ್ರದೇಶಗಳ ಕೃಷಿ ಚೌಕಟ್ಟು, ವಾಣಿಜ್ಯ, ಧರ್ಮ, ಆಚಾರ-ವಿಚಾರಗಳು, ಇತಿಹಾಸ ಮತ್ತು ಸ್ಮಾರಕಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ನಿಯೋಜಿಸಲ್ಪಟ್ಟ ಡಾ॥ ಫ್ರಾನ್ಸಿಸ್ ಬುಖಾನನ್, ೨೩ ಎಪ್ರಿಲ್ ೧೮೦೦ ರಿಂದ ೬ ಜುಲೈ ೧೮೦೧ ರವರೆಗೆ ವಿಸ್ತೃತ ಪ್ರವಾಸಕೈಗೊಂಡು, ದಿನಚರಿಯಲ್ಲಿ ದಾಖಲಿಸಿದ ಮಾಹಿತಿ *"A Journey from Madras through the Countries of Mysore, Canara and Malbar"* ಎಂಬ ಕೃತಿಯ ರೂಪದಲ್ಲಿ ೧೮೦೧ರಲ್ಲಿ ಮೂರು ಸಂಪುಟಗಳಲ್ಲಿ ಪ್ರಕಟಗೊಂಡಿತು.

ಫ್ರಾನ್ಸಿಸ್ ಬುಖಾನನ್ ಮೂಲತಃ ವೈದ್ಯ[1] ವೃತ್ತಿಯಲ್ಲಿದ್ದರೂ, ಪ್ರವೃತ್ತಿಯಿಂದ ಸಸ್ಯಾಧ್ಯಯನ ಮತ್ತು ಪ್ರಾಣಿ ಸಂಕುಲಧ್ಯಯನಗಳಲ್ಲಿ ತೊಡಗಿಸಿಕೊಂಡಿದ್ದು ಆಶ್ಚರ್ಯಕರವಾಗಿ ಕಂಡು ಬರುತ್ತದೆ. ಪ್ರಸ್ತುತ ಲೇಖನದಲ್ಲಿ ಕೃಷಿ ಚೌಕಟ್ಟು, ನೀರಾವರಿ, ಕೈಗಾರಿಕಾ ಸ್ವರೂಪ, ನೈಸರ್ಗಿಕ ಸಂಪನ್ಮೂಲಗಳು ಇತಿಹಾಸ ರೂಪಿಸುವ ಹಂತದಲ್ಲಿ ಹೇಗೆ ಪ್ರಧಾನ ಪಾತ್ರ ವಹಿಸಿವೆ; ಈ ಹಿನ್ನೆಲೆಯಲ್ಲಿ ಫ್ರಾನ್ಸಿಸ್ ಬುಖಾನನ್ ಕಂಡಂತಹ ಕೋಲಾರ ಪ್ರದೇಶದ ಸ್ಥಿತಿಗತಿಗಳನ್ನು ಇತಿಹಾಸ ಕಟ್ಟುವ ಕ್ರಿಯೆಗೆ ಪೂರಕವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ರಾಜ್ಯದ ಮೈದಾನ ಪ್ರದೇಶದಲ್ಲಿರುವ ಕೋಲಾರ ಜಿಲ್ಲೆ, ಈಶಾನ್ಯ ಭಾಗದಲ್ಲಿದ್ದು, ಮಳೆ ವೈಪರೀತ್ಯಗಳಿಂದಾಗಿ ಅತಿವೃಷ್ಟಿ ಹಾಗು ಅನಾವೃಷ್ಟಿಗಳ ನಡುವೆ, ಕೃಷಿ, ಕೈಗಾರಿಕೆ ಅಲ್ಲಿನ ಜನರ ಬದುಕು-ಬವಣೆಗಳೊಂದಿಗೆ ಹಾಸು ಹೊಕ್ಕಾಗಿದೆ. ಈ ಭಾಗದ ಹವಾಗುಣ, ಕೃಷಿ ಚೌಕಟ್ಟು, ಕೈಗಾರಿಕಾ ಸ್ವರೂಪ, ನೈಸರ್ಗಿಕ ಸಂಪನ್ಮೂಲಗಳ ಸಮೀಕ್ಷೆ ಮತ್ತು ನಿಷ್ಠ ಅಧ್ಯಯನಕ್ಕೆ ಪೂರಕವಾಗಿದೆ. ಫ್ರಾನ್ಸಿಸ್ ಬುಖಾನನ್ ಭೇಟಿಯ ಕಾಲ, ಸಂಸ್ಥಾನದ ಇತಿಹಾಸದಲ್ಲಿ ಒಂದು ಅಪೂರ್ವ ಘಟ್ಟ-ಏಕೆಂದರೆ ಆಧುನಿಕ ಮೈಸೂರು ನಿರ್ಮಾಣದ ಆರಂಭಿಕ ಕಾಲ. ಹೀಗಾಗಿ ಬುಖಾನನ್ ಪ್ರವಾಸ ಕೈಗೊಂಡು ಸಂಗ್ರಹಿಸಿ ದಾಖಲಿಸಿದ ಅಪೂರ್ವ ಮಾಹಿತಿ ಇತಿಹಾಸ ರಚನೆಗೆ ವೈಶಿಷ್ಟ್ಯಪೂರ್ಣವಾದ ಆಕರವಾಗಿ ಪರಿಣಮಿಸಿದೆ.

**ಕೃಷಿ ಚೌಕಟ್ಟು** : ಈ ಪ್ರದೇಶವು ಬಯಲು ಪ್ರದೇಶವಾಗಿದ್ದು, ಬೆಟ್ಟ-ಗುಡ್ಡಗಳನ್ನು ಹೊಂದಿರುವ ಹಳ್ಳ, ಕಾಲುವೆ, ಕೆರೆಗಳಿಂದ ಆವರಿಸಿರುವ ಭೂ ಮೇಲ್ಮೆ ಲಕ್ಷಣಗಳನ್ನು ಹೊಂದಿದೆ. ಇಲ್ಲಿನ ಉತ್ತಮ ಮಣ್ಣು, ಕೃಷಿ ಚಟುವಟಿಕೆಗಳನ್ನು ವಿವರಿಸುತ್ತಾ ಕೃಷಿ ಚೌಕಟ್ಟನ್ನು ಅನಾವರಣಗೊಳಿಸುತ್ತಾನೆ. ಬಹುತೇಕ ಮಳೆ ಆಶ್ರಿತವಾದ ಪ್ರದೇಶವಾಗಿದ್ದು, ನೀರಾವರಿ ಸೌಲಭ್ಯ ಕಡಿಮೆ ಇದೆ. ರಾಗಿ, ಭತ್ತ, ಕಬ್ಬು, ಜೋಳ, ಸಾಸಿವೆ, ಹರಳು, ಉದ್ದು, ತೊಗರಿ, ಅವರೆ, ನವಣೆ, ಹುರಳಿ, ಹುಚ್ಚೆಳ್ಳು, ಸಾಮೆ, ಹೆಸರು, ತಂಬಾಕು ಮತ್ತು ತರಕಾರಿಗಳು ಈ ಭಾಗದ ಕೃಷಿ ಉತ್ಪನ್ನಗಳಾಗಿವೆ.[2] ಮಳೆಯ ಕಾಲಮಾನ ಮತ್ತು ಬೇಸಾಯದ ವೈವಿಧ್ಯತೆಯನ್ನು, ಬಳಕೆಯಲ್ಲಿದ್ದ ಉಪಕರಣಗಳನ್ನು ರೇಖಾ ಚಿತ್ರಗಳ ಸಮೇತ ಬಿಡಿಸಿ ವಿವರಿಸಿದ್ದಾನೆ. ಬೇಸಾಯದ ವಿಧಾನಗಳನ್ನು ಮತ್ತು ಬೆಳೆ ಪದ್ಧತಿಯನ್ನು ಸಾದರಪಡಿಸುತ್ತಾ ಕೃಷಿ ಚೌಕಟ್ಟು ಪ್ರತಿಬಿಂಬಿತವಾಗಿದೆ.

ಭತ್ತ, ಕಬ್ಬು, ವೀಳೆಯದೆಲೆ ಮತ್ತು ವಿವಿಧ ಬಗೆಯ ತರಕಾರಿಗಳು ನೀರಾವರಿ ಬೆಳೆಗಳಾಗಿವೆ. ರಾಗಿ, ಜೋಳ, ಹೆಸರು, ಉದ್ದು, ಹುಚ್ಚೆಳ್ಳು, ಸಾಮೆ, ಸಾಸಿವೆ, ಕಡಲೆ ಮತ್ತಿತರ ದವಸ ಧಾನ್ಯಗಳು ಖುಷ್ಕಿ ಬೆಳೆಗಳಾಗಿದ್ದ ಬಗ್ಗೆ, ಬಿತ್ತನೆ ಬೀಜದ ಸಂಗ್ರಹಣಾ ವಿಧಾನಗಳಾದ 'ಮುಡೆ' ಹಾಗೂ ಕಣಜಗಳ ಉಪಯೋಗದ ಕ್ರಮಗಳನ್ನು ಸಹ ದಾಖಲಿಸಿದ್ದಾನೆ. ಭತ್ತದಲ್ಲಿ ಎರಡು ಬೆಳೆ ಪದ್ಧತಿ ಇದ್ದು, ಭತ್ತದ ನಾಟಿ ಪದ್ಧತಿ ಮತ್ತು ಪುಣಜೆ ಭತ್ತದ ವಿಧಾನಗಳನ್ನು ತಿಳಿಸುತ್ತಾನೆ. ನೀರಿನ ಲಭ್ಯತೆಗೆ ಅನುಗುಣವಾಗಿ ಬೆಳೆ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು.

* ಇತಿಹಾಸ ಅಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು - ೫೬೦ ೦೦೧.

ಒಂದೆಡೆ ಜೋಳದ ಉತ್ಪನ್ನದ ಪ್ರಮಾಣವನ್ನು ತಿಳಿಸುತ್ತಾ, ಉತ್ತಮ ಬೆಳೆಯಾದರೆ ೬೦ರಷ್ಟು, ಮಧ್ಯಮ ಬೆಳೆಯಾದರೆ ೩೦ ರಷ್ಟು ಹಾಗೂ ಸಾಧಾರಣ ಬೆಳೆಯಾದರೆ ೨೫ರಷ್ಟು ಇದ್ದಿತು. ಖುಷ್ಕಿ ಬೇಸಾಯದ ಬಿತ್ತನೆಗೆ (ರಾಗಿ) ಪರಂಪರಾನುಗತವಾಗಿ ಬಳಕೆಯಲ್ಲಿದ್ದ 'ಕೂರಿಗೆ'ಯ ರೇಖಾ ಚಿತ್ರದ ಸಮೇತ ವಿವರಣೆ ಇದೆ.[೩] ಗಸಗಸೆ, ಶುಂಠಿ ಮತ್ತು ವೀಳೆಯದೆಲೆ ಬೆಳೆಗಳ ಪದ್ಧತಿಯನ್ನು ವಿವರವಾಗಿ ದಾಖಲಿಸಿದ್ದಾನೆ.

ಕೋಲಾರ ಪ್ರದೇಶದ ತೋಟಗಳಲ್ಲಿ ಅತ್ಯಂತ ವಿಶೇಷವೆಂದರೆ ಅಲ್ಲಿನ ಕೈತೋಟಗಳು. ಬಹುತೇಕ ಕೃಷಿ ಕುಟುಂಬಗಳು ತರಕಾರಿ ಮತ್ತು ಕಾಯಿಪಲ್ಯಗಳು ಬೆಳೆಯಲು, ಕೈತೋಟಗಳನ್ನು ಬಳಸುತ್ತಿದ್ದರು.[೪] ಕೈತೋಟಗಳಿಗೆ ನೀರನ್ನು ಒದಗಿಸಲು 'ಏತ'ಗಳು ಬಳಕೆಯಲ್ಲಿದ್ದವು. ಅವುಗಳಲ್ಲಿ 'ಚಿಕ್ಕ' ಮತ್ತು ದೊಡ್ಡ ಏತಗಳಿದ್ದವು. ಇಬ್ಬರ ಸಹಾಯದಿಂದ ನೀರನ್ನು ಎತ್ತುವ ಸಂದರ್ಭದಲ್ಲಿ ಎಂಟು ಅಡಿ ಆಳದಿಂದ ಸುಮಾರು ನಲವತ್ತು ಸೇರಿನಷ್ಟು ನೀರನ್ನು ಹಾಗು ಸಣ್ಣದಾದಲ್ಲಿ ಮೂವತ್ತೆರಡು ಸೇರಿನಷ್ಟು ನೀರನ್ನು ಎತ್ತಬಹುದು. ಇದರಿಂದ ಗಂಟೆಗೆ ಒಂದು ಸಾವಿರದ ನೂರು ಎಪ್ಪತ್ತೈದು ಗ್ಯಾಲನ್ ಪ್ರಮಾಣದ ನೀರನ್ನು ೮ ಅಡಿ ಆಳದಿಂದ ಎತ್ತುವ 'ಏತ' ವ್ಯವಸ್ಥೆಯ ಬಗ್ಗೆ ಉಲ್ಲೇಖಿಸುತ್ತಾನೆ.[೫]

**ನೀರಾವರಿ :** ಜಿಲ್ಲೆಯ ಪ್ರಮುಖ ನದಿಯಾದ 'ಪಾಲಾರ್' ಬಗ್ಗೆ ಉಲ್ಲೇಖಿಸುತ್ತಾ "ಸುಮಾರು ೪೦ ಅಡಿ ಅಗಲವಾದ ನದಿ ಈ ಕಾಲಾವಧಿಯಲ್ಲಿ (ಮೇ) ೨–೩ ಅಡಿ ಆಳದ ನೀರು ಇರುತ್ತಿದ್ದು, ಮಳೆಗಾಲದಲ್ಲಿ ಹಲವು ಕೆರೆಗಳ ಸರಣಿಗೆ ಹರಿದು, ಕೃಷಿ ಚಟುವಟಿಕೆಗಳಿಗೆ ಬಳಕೆಯಾಗುತ್ತಿದೆ."

**ಕೆರೆಗಳು :** ಈ ಪ್ರದೇಶದಲ್ಲಿ ಬಹುತೇಕ ನೀರಾವರಿ ಕೆರೆಗಳಿಂದಲೇ ಆಗುತ್ತಿತ್ತು. ಶ್ರೀಮಂತ ವ್ಯಕ್ತಿಗಳು, ಕೀರ್ತಿಗಾಗಿ ಕೆರೆ ಕಟ್ಟಿಸಿದಾಗ ಅವನಿಗೆ ಅಥವಾ ವಂಶದವರಿಗೆ, ಆ ಕೆರೆಯ ಅಚ್ಚುಕಟ್ಟಿನ ೧/೧೦ ಭಾಗದ ಭೂಮಿಯನ್ನು ಆ ಪ್ರದೇಶದಲ್ಲಿನ ಉತ್ಪನ್ನದ ಒಂದು ಭಾಗವನ್ನು ಪಡೆಯುತ್ತಿದ್ದನು. ಈ ರಿಯಾಯಿತಿ ಪಡೆದವ ಕೆರೆಯ ದುರಸ್ತಿಯ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿತ್ತು. ಒಂದು ವೇಳೆ ಸಂಸ್ಥಾಪಕನಾಗಲಿ ಅಥವಾ ವಂಶಸ್ಥನಾಗಲಿ ಇಲ್ಲದಿದ್ದ ಸಂದರ್ಭದಲ್ಲಿ ಸರ್ಕಾರವು ಅವನಿಗೆ ನೀಡಲಾಗಿದ್ದ, ಭೂಮಿಯನ್ನು ಹಿಂದಕ್ಕೆ ಪಡೆದು, ಕೆರೆ ಜವಾಬ್ದಾರಿಯನ್ನು ತಾನೇ ನಿರ್ವಹಿಸುತ್ತಿತ್ತು. ದೊಡ್ಡ ಪ್ರಮಾಣದ ಕೆರೆಗಳ ಕಾಮಗಾರಿಗಳನ್ನು ಕೈಗೊಂಡು, ನಿರ್ವಹಣೆಗೆ ಗ್ರಾಮಸ್ಥರಿಗೆ ನೀಡಲಾಗುತ್ತಿತ್ತು. ತುರ್ತು ಸಂದರ್ಭಗಳಲ್ಲಿ ರೈತರೆ ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ನೀರುಗಂಟಿ ನೀರನ್ನು ಹಾಯಿಸುವ ಪದ್ಧತಿ ಇದ್ದಿತು. ೧೫೦ ಖಂಡುಗದ ಭೂಮಿಗೆ ಆರು ಜನ ನೀರುಗಂಟಿಯರು ಸಾಕಾಗಿತ್ತು. ಅಂದರೆ ಸುಮಾರು ೧೦೦ ಎಕರೆಗೆ ಒಬ್ಬ ನೀರುಗಂಟಿ ಎಂದು ಸವಿವರ ಮಾಹಿತಿ ನೀಡುತ್ತಾನೆ.[೬]

ಕೆರೆ ನೀರಾವರಿ ವ್ಯವಸ್ಥೆಯ ವಿವರಿಸಿದ ಡಾ। ಫ್ರಾನ್ಸಿಸ್ ಬುಖಾನನ್ ಅಲ್ಲಿನ ಬೆಳೆಪದ್ಧತಿ ಬಗ್ಗೆ ತಿಳಿಸುತ್ತಾ, ೧೮ ವಿವಿಧ ಬಗೆಯ ಭತ್ತದ ತಳಿಗಳನ್ನು ದಾಖಲಿಸುತ್ತಾನೆ. ಅವುಗಳೆಂದರೆ–ದೊಡ್ಡಬೈರ, ಗುಟ್ಟಸಣ್ಣ, ದೊಡ್ಡಕೊಯಂಭತ್ತ, ಅರಿಶಿನಕೊಯಂಭತ್ತ, ಸಣ್ಣಕೊಯಂಭತ್ತ, ಬಿಳಿಸಣ್ಣ, ಮುರಾರ್ ಜಿಲ್ಲಾ, ಸುಖದಾಸ್, ಪುಣಿರಾಜ, ಯಲಿಸ್, ಗರುಡನೆಲ್ಲು, ಪುಟ್ಟಭತ್ತ, ತೋಕನೆಲ್ಲು, ಕರಿತೋಕನೆಲ್ಲು, ಗಣೆಸಳ್ಳ, ಕಳಗಬೈರ, ಗಿಡ್ಡಬೈರ ಮತ್ತು ಕರಿಚಿಲ್ಕಾರಿ[೭] ಇತ್ಯಾದಿ. ಇಂದಿನ ಪೇಟೆಂಟ್ ಯುಗದಲ್ಲಿ ದೇಶೀಯ ಭತ್ತದ ತಳಿಗಳ ಸ್ವಾಮ್ಯತೆಯ ಹಕ್ಕನ್ನು ಸ್ಥಾಪಿಸಲು ಫ್ರಾನ್ಸಿಸ್ ಬುಖಾನನ್ ದಾಖಲೆ ನಮ್ಮ ವಿಜ್ಞಾನಿ–ತಂತ್ರಜ್ಞರಿಗೆ ವರದಾನವಾಗಬಹುದಲ್ಲವೆ?

ಕಬ್ಬು ಬೆಳೆಯಲ್ಲೂ ಸಹ ನಾಲ್ಕು ಬಗೆಯ ತಳಿಗಳನ್ನು ದಾಖಲಿಸಿದ್ದಾನೆ. ಅವುಗಳೆಂದರೆ (೧) ರೆಸ್ಪಳಿ (೨) ಪುಟ್ಟಪಟ್ಟಿ (೩) ಮರಕೊಬ್ಬು ಮತ್ತು (೪) ಕಟ್ಟೆಕೊಬ್ಬು.[೮]

ಕೃಷಿ ಚಟುವಟಿಕೆಗಳಿಗೆ ಆಧಾರವಾಗಿದ್ದ ಪಶು ಸಂಪತ್ತು ಈ ಭಾಗದಲ್ಲಿ ಕಡಿಮೆ ಇದ್ದಿತು. ಹೀಗಾಗಿ ಬಾರಾಮಹಲ್, ಕೃಷ್ಣಗಿರಿ ಕಡೆಗಳಿಂದ ದನಗಳನ್ನು ತರುತ್ತಿದ್ದರು. ಕೃಷಿ ಕೂಲಿಯಾಳುಗಳು, ವಾರ್ಷಿಕ ೪ ಖಂಡುಗ ಉತ್ಪನ್ನ ಹಾಗೂ ೨೦ ಪಣಂ ನಗದು ರೂಪದಲ್ಲಿ ಪಡೆಯುತ್ತಿದ್ದರು. ಆದರೆ ಇದರಲ್ಲಿ ಸರ್ಕಾರಕ್ಕೆ ಪಾಲು ಸಲ್ಲಿಸಬೇಕಾಗಿತ್ತು. ಕೃಷಿ ಕೂಲಿ ೧/೨ ಪಣಂ. ಹೆಣ್ಣಾಳುಗಳಿಗೆ ೧/೪ ಪಣಂ ಎಂದು ತಿಳಿಸುತ್ತಾನೆ.[೯]

**ಗ್ರಾಮಾಡಳಿತ :** ಗೌಡನು ಪ್ರತಿವರ್ಷ ಅಮಿಲ್ದಾರ್‌ನೊಂದಿಗೆ ಒಪ್ಪಂದ ಮಾಡಿಕೊಳ್ಳುತ್ತಿದ್ದನು. ಪ್ರತಿ ಗ್ರಾಮಕ್ಕೆ ಒಬ್ಬ ವಂಶಪಾರಂಪರಾನುಗತ ಗೌಡ ಇರುತ್ತಿದ್ದನು. ಜೊತೆಗೆ ಶಾನುಭೋಗ ಲಿಖಿತ ದಾಖಲೆಗಳನ್ನು ನಿರ್ವಹಿಸುತ್ತಿದ್ದನು. ಗ್ರಾಮ ಮುಖಂಡ ಹಾಗು ಸೇವಕರಿಗೆ ಬತ್ತದ ಬೆಳೆ ಹಂಚುವಿಕೆಯ ಪ್ರಮಾಣ ತಿಳಿಸುತ್ತಾನೆ.

ಭತ್ತದ ಬೆಳೆಯ ಕಟಾವಿನ ನಂತರ ಹೊರೆಗಳನ್ನು ಕಟ್ಟುತ್ತಿದ್ದರು. ಬಿತ್ತನೆ ಪ್ರಮಾಣದ ೫೫/೬೦ ನೇ ಭಾಗವನ್ನು ಸಮವಾದ ಪ್ರಮಾಣಕ್ಕೆ ತೆಗೆದುಕೊಂಡು ಹಂಚಲಾಗುತ್ತಿತ್ತು. ಅದರಂತೆ :

| | |
|---|---|
| ನೀರುಗಂಟಿಗೆ | –೧೬ ಸೇರು |
| ತೋಟಿ | –೧೬ ಸೇರು |
| ಕೌಳಿಗ | –೧೬ಸೇರು |
| ಕಂಬಾರ | – ೮ ಸೇರು |
| | ೫೬ |

ನಂತರ ಮೆದೆಯಿಂದ :

| | |
|---|---|
| *ತೋಟಿ (ಕಾವಲುಗಾರ)* | *೩ ಸೇರು* |
| *ಪೂಜಾರಿ* | *೪ ಸೇರು* |
| *ಜೋಗಿ* | *೪ ಸೇರು* |
| *ಗೌಡ (ವಿಶೇಷ ಹಕ್ಕಾಗಿ)* | *೮ ಸೇರು* |
| *ಸಕಾರ (ವಿಶೇಷ ಹಕ್ಕಾಗಿ)* | *೧೬ ಸೇರು* |
| *ವಂಶಪಾರಂಪರ್ಯ ಗೌಡ* | *೧೬ ಸೇರು* |
| | *೫೧ ಸೇರು* |

ಈ ಪ್ರಮಾಣದ ಹಂಚಿಕೆಯಾಗುತ್ತಿತ್ತು ಎಂಬ ವಿವರ ನೀಡುತ್ತಾನೆ. [೧೦]

ಕೋಲಾರ ಪ್ರದೇಶದಲ್ಲಿ ಬಹುತೇಕ ಇದ್ದಂತಹ ಎಲ್ಲಾ ಜಾತಿಯ ವಿವರಗಳು ಮತ್ತು ಆಯಾ ಜಾತಿಯ ಆಚಾರ-ವಿಚಾರಗಳನ್ನು ಫ್ರಾನ್ಸಿಸ್ ಬುಖಾನನ್ ಸವಿವರವಾಗಿ ನೀಡುತ್ತಾನೆ. ಬ್ರಾಹ್ಮಣರಾದಿಯಾಗಿ, ಒಕ್ಕಲಿಗರು, ಬಣಜಿಗರು, ಕೊರವರು, ವಡ್ಡರು, ಅಗಸರು, ಹೊಲೆಯರು, ಮಾದಿಗರು, ಕುಂಬಾರ, ಬೆಸ್ತರು, ಅಕ್ಕಸಾಲಿಗರು, ಪದ್ಮಸಾಲಿ (ನೇಯ್ಗೆಯವರು) ಮುಂತಾದ ಎಲ್ಲಾ ಬಗೆಯ ಜಾತಿಗಳನ್ನು ಉಲ್ಲೇಖಿಸುತ್ತಾ, ಅವರ ಕಸಬು ಆಚಾರ-ವಿಚಾರ ಮತ್ತು ಧಾರ್ಮಿಕ ನಂಬಿಕೆಗಳನ್ನು ವಿವರಿಸುತ್ತಾನೆ. ಹೀಗಾಗಿ ಈ ಪ್ರದೇಶದ ಸಾಮಾಜಿಕ ಧಾರ್ಮಿಕ ಚೌಕಟ್ಟನ್ನು ಸಹ ಅರಿಯಲು ಅವನ ದಾಖಲೆ ಬಹುಮಟ್ಟಿಗೆ ಸಹಾಯಕವಾಗುತ್ತದೆ. ಆದರೆ ಕೋಲಾರ, ಚಿಕ್ಕಬಳ್ಳಾಪುರಗಳಲ್ಲಿ ಹೈದರ್-ಟಿಪ್ಪು ಆಳ್ವಿಕೆಯನ್ನು ಉಲ್ಲೇಖಿಸುತ್ತಾನಾದರೂ, ಮುಸ್ಲಿಂ ಸಮುದಾಯದ ಆಚಾರ-ವಿಚಾರಗಳನ್ನು ಪ್ರಸ್ತಾಪಿಸುವುದೇ ಇಲ್ಲದಿರುವುದು ಆಶ್ಚರ್ಯಕರವಾಗಿ ಕಂಡುಬರುತ್ತದೆ.

**ವ್ಯಾಪಾರ-ವಾಣಿಜ್ಯ :** ಕೋಲಾರ ಜಿಲ್ಲೆಯನ್ನು ಪ್ರವೇಶಿಸಿದ ಫ್ರಾನ್ಸಿಸ್ ಬುಖಾನನ್ ಲಕ್ಕೂರು-ಮಾಲೂರುಗಳಲ್ಲಿ ವ್ಯಾಪಾರ-ವಾಣಿಜ್ಯ ಕುರಿತಂತೆ ಗಮನಿಸುತ್ತಾ ಇಲ್ಲಿನ ದೇವಾಂಗ-ಪದ್ಮಸಾಲಿಗಳು ನೇಯ್ಗೆ ವೃತ್ತಿಯನ್ನು ಅವಲಂಬಿಸಿದ್ದರು. ಅವರು ತಯಾರಿಸುತ್ತಿದ್ದ ಬಟ್ಟೆ ಕೆಂಪು ಅಂಚಿನದು ತುಂಬಾ ಪ್ರಸಿದ್ಧವಾಗಿದ್ದಿತು. ಅದರಲ್ಲಿ ಶಾವಾಯಿಗಳು ೧ ೧/೪ ರೂ-೧ ೧/೨ ರೂ ಶಾಲ್ ರೀತಿಯ ಬಟ್ಟೆ ೧/೪ ರೂ ನಿಂದ ೧/೨ ರೂಪಾಯಿ, ಉದ್ದನೆಯ ಮುಂಡಾಸುಬಟ್ಟೆ ೧ ೧/೪ ರೂ-೧ ೧/೨ ರೂಪಾಯಿ ಬೆಲೆಯಿದ್ದಿತು. ಇವರು ತಮ್ಮ ಉತ್ಪನ್ನಗಳನ್ನು ಮಾರಾಟಕ್ಕೆ ಹತ್ತಿರದ ವಾರದ ಸಂತೆಗಳಿಗೆ ತೆಗೆದುಕೊಂಡು ಹೋಗುತ್ತಿ ದ್ದರು. ಉಳಿದಂತೆ ಹೊಸಕೋಟೆ, ಕೋಲಾರ, ಮಾಸ್ತಿ, ಸರ್ಜಾಪುರ, ಬೆಂಗಳೂರು ಮತ್ತು ಕೃಷ್ಣಗಿರಿಯ ವ್ಯಾಪಾರಿಗಳು ಬಂದು ಕೊಳ್ಳುತ್ತಿದ್ದರು.[೧೧]

ಈ ಭಾಗಕ್ಕೆ ಬಳ್ಳಾರಿ, ಆದೋನಿ, ನರಗುಂದ, ನವಲಗುಂದ, ಜಾಲಿಯಾಳ, ಅಣ್ಣಿಗೇರೆ (ಕೃಷ್ಣನದಿ ತೀರ-ಪ್ರದೇಶ) ಗಳಿಂದ ವ್ಯಾಪಾರಸ್ಥರು ಹತ್ತಿನೂಲು, ದಾರ, Dark blue ಹತ್ತಿಬಟ್ಟೆ, ಇಂಗು, ಖರ್ಜೂರ, ಬಾದಾಮಿ, ಮೈಲುತುತ್ತ ತಂದು ಮಾರಾಟ ಮಾಡುತ್ತಿದ್ದರು. ಬಳ್ಳಾರಿಯ ವ್ಯಾಪಾರಿಗಳು ತಮ್ಮ ವ್ಯಾಪಾರದ ಹಣದಲ್ಲಿ ೩/೪ ಪಾಲು ನಗದು ತೆಗೆದುಕೊಂಡು, ಉಳಿದ ಹಣಕ್ಕೆ ಹರಳೆಣ್ಣೆ, ಬೆಲ್ಲ ಇಲ್ಲಿಂದ ತೆಗೆದುಕೊಂಡು ಹೋಗುತ್ತಿದ್ದರು.

ಹೈದರ್‌ನಗರದ ವ್ಯಾಪಾರಿಗಳು ಅಡಿಕೆ, ಮೆಣಸು, ಶ್ರೀಗಂಧ ತಂದು ಮಾರಾಟ ಮಾಡುತ್ತಿದ್ದರು. ಇಲ್ಲಿಂದ ಸ್ವಲ್ಪ ಭಾಗದ ಹಣಕ್ಕೆ ಮಸ್ಲಿನ್ ಬಟ್ಟೆ ತೆಗೆದುಕೊಂಡು ಹೋಗುತ್ತಿದ್ದರು. ಶಿರಾ ಭಾಗದಿಂದಲೂ ಬಂದಂತಹ ವ್ಯಾಪಾರಿಗಳು ಇದೇ ವಸ್ತುಗಳನ್ನು ತಂದು, ಬಟ್ಟೆ ತೆಗೆದುಕೊಂಡು ಹೋಗುತ್ತಿದ್ದರು ದಕ್ಷಿಣ ಪ್ರದೇಶಗಳಿಂದ ಉಪ್ಪು ಹಾಗು ಚೀನಾ, ಯೂರೋಪ್ ಮತ್ತಿತರ ಕಡೆಗಳಿಂದ ಆಮದಾದ ವಸ್ತುಗಳನ್ನು ತಂದು ಮಾರಾಟ ಮಾಡುತ್ತಿದ್ದರು. ಇಲ್ಲಿಂದ ಅಡಿಕೆ, ಮೆಣಸು, ಬೆಳ್ಳುಳ್ಳಿ ಹುಣಸೆಹಣ್ಣು, ಶೀಗೇಕಾಯಿ ಮತ್ತು ಹಲವು ಧಾನ್ಯಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. [೧೨]

ಶಿಡ್ಲಘಟ್ಟ ಪ್ರದೇಶದಲ್ಲಿ ಅಡಿಕೆ, ಮೆಣಸು ಮತ್ತಿತರ ವಸ್ತುಗಳಿಗೆ ಕೊಡಿಯಾಲ್ ಮತ್ತು ನಗರಕ್ಕೆ ಹೋಗಿ ತರುತ್ತಿದ್ದರು. ಇಲ್ಲಿಂದ ಬಟ್ಟೆ ತಂಬಾಕು ತೆಗೆದುಕೊಂಡು ಹೋಗಿ ಮಾರಾಟಮಾಡಿ ಬರುತ್ತಿದ್ದರು. ದಕ್ಷಿಣದ ತುದಿಯಿಂದ ಕಚ್ಚಾರೇಷ್ಮೆ ಮತ್ತು ಮದ್ರಾಸ್‌ನಿಂದ ಆಮದು ಮಾಡಿಕೊಂಡಂತಹ ವಸ್ತುಗಳು ಮಾರಾಟವಾಗುತ್ತಿದ್ದವು. ಸ್ವಲ್ಪ ಭಾಗದಷ್ಟು ರೇಷ್ಮೆಯನ್ನು ಬೆಂಗಳೂರಿನಲ್ಲಿ, ಉಳಿದಂತೆ ಬಳ್ಳಾರಿ, ಆದೋನಿ ಮತ್ತಿತರ ಪ್ರದೇಶಗಳಲ್ಲಿ ಮಾರಾಟ ಮಾಡುತ್ತಿದ್ದರು. ಇಲ್ಲಿಂದ ನಿಜಾಂ ಪ್ರಾಂತ್ಯಗಳಿಗೂ ವ್ಯಾಪಾರಿಗಳು ಮಾರಾಟಕ್ಕಾಗಿ ಹೋಗುತ್ತಿದ್ದರು. ಅಲ್ಲಿಂದ ರೇಷ್ಮೆ ಹತ್ತಿ-ಬಟ್ಟೆ ತಂದು ಬೆಂಗಳೂರು ಮತ್ತು ಸ್ಥಳೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದರು. ಇಲ್ಲಿನ ಹತ್ತಿಬಟ್ಟೆಗೆ ಉತ್ತಮ ಬೇಡಿಕೆ ಇದ್ದಿತು. ಸಾದಾಶಿಳ್ಳೆ ಬಟ್ಟೆ ಕೆಂಪು ಅಂಚಿನದು ೪-೧೨ ಪಣಂಗೆ ಮಾರಾಟ ಆಗುತ್ತಿತ್ತು. ವ್ಯಾಪಾರಸ್ಥರು ನೇಯ್ಗೆಯವರಿಗೆ ಮುಂಗಡ ಹಣ ನೀಡುವ ಪದ್ಧತಿ ಇದ್ದಿತು. ಮಧ್ಯವರ್ತಿಗಳು ಇರಲಿಲ್ಲ. ನೇರವಾಗಿ ಉತ್ಪಾದಕ ಮತ್ತು ಕೊಳ್ಳುವವರ ನಡುವೆ ವ್ಯಾಪಾರ ಚಟುವಟಿಕೆ ನಡೆಯುತ್ತಿತ್ತು. [೧೩]

**ಉದ್ದಿಮೆ :** ಈ ಭಾಗದ ಹಲವು ಉದ್ದಿಮೆಗಳನ್ನು ಫ್ರಾನ್ಸಿಸ್ ಬುಖಾನನ್ ತನ್ನ ಪ್ರವಾಸದಲ್ಲಿ ಗುರುತಿಸುತ್ತಾನೆ. ಚಿಕ್ಕಬಳ್ಳಾಪುರದ ವಿವರಣೆಯ ನಂತರ, ಮುಂದೆ ಸಾಗಿದ

ಬುಖಾನನ್ ಸಕ್ಕರೆ ಉದ್ದಿಮೆ ಬಗ್ಗೆ ಉಪಯುಕ್ತ ಮಾಹಿತಿ ನೀಡುತ್ತಾನೆ. ಈ ಭಾಗದಲ್ಲಿ ಉತ್ಪಾದನೆಯಾಗುತ್ತಿದ್ದ ಸಕ್ಕರೆ, ಚೀಣಾ ಸಕ್ಕರೆಗಿಂತ ಉತ್ತಮ ಗುಣಮಟ್ಟದ್ದಾಗಿದ್ದಿತು. ಸಕ್ಕರೆ ಉತ್ಪಾದನೆಯ ತಾಂತ್ರಿಕ ಜ್ಞಾನ ಶ್ರೀರಂಗಪಟ್ಟಣದಿಂದ ಬಂದಿದ್ದು ಗುಟ್ಟಾಗಿದ್ದಿತು. ಟಿಪ್ಪು ದಕ್ಷಿಣದ ವ್ಯಾಪಾರದ ಮೇಲೆ ಹಾಕಿದ ನಿಷೇಧದಿಂದ ಈ ಭಾಗದಲ್ಲಿ ಸಕ್ಕರೆ ಉದ್ದಿಮೆ ಪ್ರಾಮುಖ್ಯತೆ ಪಡೆಯಿತು ಎಂದು ಅಭಿಪ್ರಾಯಪಡುತ್ತಾನೆ. ಕಬ್ಬಿನ ಬೆಳೆ ಪದ್ಧತಿಯನ್ನು ವಿವರಿಸುತ್ತಾ ಕಬ್ಬಿನ ನಾಟಿ ಪದ್ಧತಿಯಂತೆ ಒಂದು ಎಕರೆಗೆ ಸುಮಾರು ೧೪೦ ಮಣ ಬೆಲ್ಲ ತಯಾರಿ ಸುತ್ತಿದ್ದರು ಎಂದು ಉಲ್ಲೇಖಿಸುತ್ತಾನೆ. ಕಬ್ಬಿನ ಗದ್ದೆಗಳಿಗೆ 'ಏತ'ದ ಸಹಾಯದಿಂದ ನೀರಾವರಿ ಆಗುತ್ತಿತ್ತು. ಅಂದಿನ ಬೆಲೆಗಳಲ್ಲಿ ಒಂದು ಮಣ (೨೪ ಪೌಂಡ್) ೧೦ ರೂ ಆಗಿದ್ದಿತು. ಉತ್ತಮ ಸಕ್ಕರೆ ಇಪ್ಪತ್ತು 'ಸುಲ್ತಾನಿ ಪಣಂ', ಸಾಧಾರಣ ಸಕ್ಕರೆ ಒಂದು ಮಣಕ್ಕೆ ೫ ರೂ ಆಗಿತ್ತು.

"ಪೈನ್ಡ್ ವೈಟ್ ಷುಗರ್ ಕ್ಯಾಂಡಿ ೧೬ ಸೇರು ೦-೮-೮
ಪೈನ್ಡ್ ವೈಟ್ ಸಾಫ್ಟ್ ಷುಗರ್ ೩೫ ಸೇರು ೧-೧೨-೫
ಬ್ರೌನ್ ಷುಗರ್ ಕ್ಯಾಂಡಿ ೨೨ ಸೇರು ೦.೫ ೧೧/೨
ಬ್ರೌನ್ ಸಾಫ್ಟ್ ಷುಗರ್ ೪೦ ಸೇರು ೦.೬-೬ [೧೪]

**ಉಪ್ಪು :** ಚೌಳು ಮಣ್ಣಿನಿಂದ ಉಪ್ಪು ತಯಾರಿಕೆ ಇಲ್ಲಿನ ಉದ್ಯಮಗಳಲ್ಲಿ ಒಂದಾಗಿದ್ದಿತು. ಒಣ ವಾತಾವಾರಣದಲ್ಲಿ ಮಣ್ಣಿನ ಮೇಲ್ಪದರನ್ನು ಕೆರೆದು ಗುಡ್ಡೆ ಹಾಕುತ್ತಿದ್ದರು. ಅರ್ಧ ವರ್ತಲಾಕಾರದಲ್ಲಿ ಮೂರು ಅಡಿ ವ್ಯಾಸದ, ಒಂದು ಅಡಿ ಆಳದ ಕುಲುಮೆಯಲ್ಲಿ ಮಡಕೆ ಇರಿಸಿ ಮೇಲಿನಿಂದ ನೀರನ್ನು ಹರಿಸಿ, ಶೋಧಿತಗೊಂಡು ಉಪ್ಪಿನ ಅಂಶ ಶೇಖರಣೆ ಯಾಗುತ್ತಿತ್ತು. ಇದನ್ನು ಬಿಸಿಲಿಗೆ ಇರಿಸಿ ಸಂಗ್ರಹಿಸಲಾಗುತ್ತಿತ್ತು. ೧ ಸುಲ್ತಾನಿ ಪಣಂಗೆ ೨೦ ಸೇರು ಆದರೆ ಮದ್ರಾಸ್ ಉಪ್ಪು ೧ ಸುಲ್ತಾನಿ ಪಣಂಗೆ ೮ ಸೇರು ಆಗಿತ್ತು. ಈ ಉಪ್ಪಿನ ಕಣಗಳು ಗಾತ್ರದಲ್ಲಿ ದೊಡ್ಡದಾಗಿದ್ದವು. ಆದರೆ ಮಣ್ಣಿನ ಕೊಳೆ ಕಸಗಳಿಂದ ಕೂಡಿರುತ್ತಿತ್ತು ಎಂದು ಉಲ್ಲೇಖಿಸುತ್ತಾನೆ.

**ಕಂಬಳಿ :** ನೇಯ್ಗೆ ಇಲ್ಲಿ ಪ್ರಧಾನ ವೃತ್ತಿಗಳಲ್ಲಿ ಒಂದಾಗಿದ್ದು, ಅದನ್ನು ಹುಣಸೆಹಣ್ಣು ಹಾಕಿ ಗಟ್ಟಿಗೊಳಿಸುತ್ತಿದ್ದರು. ಇಂತಹ ಕಂಬಳಿಗಳು ಘಟ್ಟದ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಬಳಸುತ್ತಿದ್ದರು. ಕುರಿಗಳಿಂದ ವಾರ್ಷಿಕ ಎರಡು ಬಾರಿ ಉಣ್ಣೆ ಪಡೆಯುತ್ತಿದ್ದರು. ೧೨ ಕುರಿಗಳ ಉಣ್ಣೆಯಿಂದ ೬ಅಡಿ. ಉದ್ದ ೩ ಅಡಿ ಅಗಲದ ಕಂಬಳಿ ತಯಾರಿಸುತ್ತಿದ್ದರು. [೧೫] (ಈಗಲೂ ಈ ಭಾಗದಲ್ಲಿ ಕೋಲಾರದ ಕಂಬಳಿಗಳು ಪ್ರಸಿದ್ಧಿ ಯಾಗಿವೆ).

**ಸಾರಾಯಿ :** ಒಬ್ಬ ಸಾರಾಯಿ ಉತ್ಪಾದಕನ ಮನೆಗೆ ಭೇಟಿ ನೀಡಿ, ಅಲ್ಲಿನ ತಯಾರಿಕಾ ವಿಧಾನವನ್ನು ವಿವರಿಸುತ್ತಾನೆ. ಜಾಲಿಮರದ ತೊಗಟೆಯನ್ನು ಸಣ್ಣದಾಗಿ ಕತ್ತರಿಸಿ, ೪ ಪೌಂಡ್ ಜಾಲಿ, ಒಂದು ಪೌಂಡ್ ಬೆಲ್ಲ ಎರಡರಷ್ಟು ನೀರು ಹಾಕಿ ಮಡಿಕೆಯನ್ನು ನೆರಳಲ್ಲಿ ಇರಿಸಿದನಂತರ ೨೪ ಗಂಟೆಗಳಲ್ಲಿ ಫರ್ಮೆಂಟೇಷನ್ ಆರಂಭಗೊಂಡು ಹನ್ನೆರಡನೇ ದಿವಸ ಪೂರ್ಣಗೊಳ್ಳುತ್ತದೆ.[೧೬]

ವಾರದ ಸಂತೆಗಳು ಈ ಭಾಗದ ಪ್ರಮುಖ ವಾಣಿಜ್ಯ-ವ್ಯಾಪಾರದ ಕೇಂದ್ರಗಳಾಗಿದ್ದವು. ವಿವಿಧ ಬಗ್ಗೆಯ ದವಸ ಧಾನ್ಯಗಳು, ಹತ್ತಿಬಟ್ಟೆ, ಕಂಬಳಿ ಕಬ್ಬಿಣದ ಸಲಕರಣೆಗಳು, ಮತ್ತಿತರ ವಹಿವಾಟುಗಳು ಕಂಡು ಬರುತ್ತದೆ.

ಈ ೧೨ ದಿವಸಗಳ ಪ್ರವಾಸದ ಸಂದರ್ಭದಲ್ಲಿ ದಾಖಲಿಸಿದ ಮಾಹಿತಿಯನ್ನು ವಿಶ್ಲೇಷಿಸಿದಾಗ "ಕಂಡದ್ದಕ್ಕಿಂತ ಕೇಳಿದ್ದು ಹೆಚ್ಚು" ಎಂಬುದು ಮನವರಿಕೆಯಾಗುತ್ತದೆ. ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಮಾಹಿತಿ ಸಂಗ್ರಹಿಸಿ, ದಿನಚರಿಯಲ್ಲಿ ದಾಖಲಿಸುತ್ತಾ ಸಮಗ್ರ ಚಿತ್ರ ಮೂಡಿಸುವ ಬುಖಾನನ್‌ನ ಪ್ರಯತ್ನ ವೈಶಿಷ್ಟ್ಯ ಪೂರ್ಣವಾಗಿದೆ. ಜಿಲ್ಲೆಯ ಬಹು-ಭಾಗದ (ಗೌರಿಬಿದನೂರು, ಬಾಗೇಪಲ್ಲಿ, ಗುಡಿಬಂಡೆ, ಚಿಂತಾ ಮಣಿ, ಶ್ರೀನಿವಾಸಪುರ ಹಾಗು ಮುಳಬಾಗಿಲು)ತಾಲ್ಲೂಕುಗಳ ಪ್ರದೇಶಗಳಲ್ಲಿ ಹಾದುಹೋಗುವುದಿಲ್ಲವಾದರೂ ಕೊರತೆಯಾಗ ಲಿಲ್ಲ-ಏಕೆಂದರೆ, ಅವನ ಪ್ರವಾಸದ ಹಾದಿಯ ಚಿತ್ರಣವೇ ಒಟ್ಟಾರೆ ಪ್ರದೇಶದ ಪ್ರಾತಿನಿಧಿಕ ಸ್ವರೂಪವಾಗಿತ್ತು !

ಕೃಷಿ ಕ್ಷೇತ್ರದ ವಿವಿಧ ತಳಿಗಳನ್ನು ಉಲ್ಲೇಖಿಸುವ ಬುಖಾನನ್, (ಉದಾ: ೧೮ ಬಗೆಯ ಭತ್ತ ೪ ಬಗೆಯ ಕಬ್ಬು ಹಾಗೂ ರಾಗಿ ತಳಿಗಳು) ಇಂದಿನ ಪೇಟೆಂಟ್ ಯುಗ ದಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತಾನೆ. ಬಹುತೇಕ ಭಾರತೀಯ ಕೃಷಿ ವಿಧಾನಗಳು, ಬೆಳೆಗಳು ಉತ್ಪನ್ನಗಳ ವಿದೇಶಿಯರ ಪೇಟೆಂಟ್ ಜಾಲಕ್ಕೆ ಸಿಕ್ಕುವ ಅಪಾಯದಲ್ಲಿರುವಾಗ ಬುಖಾನನ್ ಉಲ್ಲೇಖನಗಳು ನಮ್ಮ ನೆರವಿಗೆ ಬರಬಹು ದಾಗಿದೆ. ಆ ರೀತಿ ದಾಖಲಿಸಬೇಕಾದ ಅಗತ್ಯತೆಗೆ ಅವನು ಮಾರ್ಗದರ್ಶಕನಾಗಿ ಕಂಡು ಬರುತ್ತಾನೆ.

ನೀರಿನ ಅಭಾವಕ್ಕೆ ತುತ್ತಾಗಿರುವಂತಹ ಪ್ರದೇಶಗಳಲ್ಲಿ ಸೂಕ್ತ ಬೆಳೆ ಪದ್ಧತಿಯ ಅನುಷ್ಠಾನ ವಿಧಾನಗಳು, ಪರಂಪ ರಾನುಗತ ಬೌದ್ಧಿಕ ಕೌಶಲ್ಯ ಸಾಕ್ಷಿಯಾಗಿರುವುದನ್ನು ಪ್ರಧಾನ ವಾಗಿ ಗಮನಿಸಬೇಕಾಗಿದೆ.

ತಳಿ ಸಂರಕ್ಷಣೆ ಬಿತ್ತನೆಬೀಜ ಸಂಗ್ರಹ ವಿಧಾನಗಳು ಉದಾ: ಮುಡೆ ಕಟ್ಟುವ, ಕಣಜದ ಸಂಗ್ರಹ, ಮುಂತಾದವು ಈಗಿನ ಸಂದರ್ಭಕ್ಕೆ (ಅಂದರೆ ದುಬಾರಿಯಾಗುತ್ತಿರುವ ಬೀಜ ಮತ್ತು ಇತರ ಪರಿಕರಗಳ) ಹೆಚ್ಚು ಪ್ರಸ್ತುತವೆನಿಸು ತ್ತವೆ.

ಕೃಷಿಯಲ್ಲಿ ಅತ್ಯಾಧುನಿಕವೆನಿಸಿದ ಯಾಂತ್ರಿಕ ಉಪಕರಣಗಳು ಬಳಕೆ ಹೆಚ್ಚಾಗುತ್ತಿದ್ದು, ದುಬಾರಿಯಾದರೂ, ಸಣ್ಣ ಹಿಡುವಳಿಗಳಿಗೆ ಸೂಕ್ತವಲ್ಲದಿದ್ದರೂ, ಅನಿವಾರ್ಯವಾಗಿ ಸಾಲದ ರೂಪಕ್ಕೆ ಕೊಳ್ಳಲ್ಪಟ್ಟಿದ್ದರೂ, ಕೂರಿಗೆಯಂತಹ ದೇಶೀಯ ತಾಂತ್ರಿಕ ಕೃಷಿ ಸಲಕರಣೆಗಳು-ಇವುಗಳ ಸಮೇತ ಉಲ್ಲೇಖಿಸುತ್ತಾನೆ.

ಗ್ರಾಮಾಡಳಿತ ಚೌಕಟ್ಟಿನ, ಸಮುದಾಯ ಪಾಲುದಾರಿಕೆ ಬಗ್ಗೆ ವಿವರವಾಗಿ ತಿಳಿಸುವ ಬುಖಾನನ್, ಸ್ಥಳೀಯ ಆಡಳಿತ ಚೌಕಟ್ಟು ಮತ್ತು ಹೊಣೆಗಾರಿಕೆಗಳನ್ನು ಪರಿಚಯಿಸುತ್ತಾನೆ. ಹಾಗಾಗಿ ಕೃಷಿ-ಆರ್ಥಿಕತೆಯ ವಿವಿಧ ಆಯಾಮಗಳನ್ನು ಅರಿತು ಚರಿತ್ರೆ ಕಟ್ಟುವ ಕ್ರಿಯೆಗೆ ಸಹಾಯಕವಾಗುತ್ತದೆ.

ಏತ, ಕೆರೆ ನೀರಾವರಿಯನ್ನು ಪ್ರಾಸ್ತಾವಿಕವಾಗಿ ಉಲ್ಲೇಖಿಸುತ್ತಾ, ಕೋಲಾರ ಜಿಲ್ಲೆಯಲ್ಲಿದ್ದ ಕೆರೆ ನೀರಾವರಿ ಚೌಕಟ್ಟನ್ನು, ಅಲ್ಲಿನ ನಿರ್ವಹಣೆಯನ್ನು ಸ್ಥೂಲವಾಗಿ ಪರಿಚಯಿಸುತ್ತಾನೆ? ಏತ ನೀರಾವರಿಯಲ್ಲಿ ಒಬ್ಬ ವ್ಯಕ್ತಿ ಅಥವಾ ಇಬ್ಬರು ವ್ಯಕ್ತಿಗಳು ಎಷ್ಟು ಪ್ರಮಾಣದಲ್ಲಿ ನೀರನ್ನು ಎತ್ತಬಲ್ಲರು! ಎಂಬುದನ್ನು ಅಳತೆ ರೂಪದಲ್ಲಿ ತಿಳಿಸುತ್ತಾನೆ.

ಕೃಷಿ ಪ್ರಧಾನ ಆರ್ಥಿಕತೆಯ ಚೌಕಟ್ಟನ್ನು ಹೊಂದಿರುವ ಕೋಲಾರ ಜಿಲ್ಲೆಯಲ್ಲಿ ಅದಕ್ಕೆ ಪೂರಕವಾದ ವ್ಯಾಪಾರ-ವಾಣಿಜ್ಯ ಚಟುವಟಿಕೆಗಳನ್ನು ವಿವರಿಸುವ ಮೂಲಕ ಇತಿಹಾಸಕ್ಕೆ ಮತ್ತೊಂದು ವಿಶೇಷ ಆಯಾಮ ತರಲು ಸಹಾಯಕವಾದ ಮಾಹಿತಿ ನೀಡುತ್ತಾನೆ. ಜಿಲ್ಲೆಯೊಂದಿಗೆ ಸಂಪರ್ಕವಿರುವ (ವ್ಯಾಪಾರ-ವಾಣಿಜ್ಯ) ಪ್ರದೇಶಗಳನ್ನು ತಿಳಿಯಲು, ವ್ಯಾಪಾರಿ ಮಾರ್ಗಗಳನ್ನು ಗುರುತಿಸಲು ಸಹಾಯಕವಾಗುತ್ತದೆ.

ಹಲವು ಉದ್ದಿಮೆಗಳನ್ನು ವಿವರಿಸುವ ಬುಖಾನನ್ ಇಲ್ಲಿನ ತಂತ್ರಜ್ಞಾನ ಆಧಾರಿತ ಉತ್ಪನ್ನಗಳು ವಿಶ್ವದರ್ಜೆ ವಸ್ತುಗಳಾಗಿದ್ದವು ಎಂಬುದಕ್ಕೆ ಸಕ್ಕರೆ ಉದ್ಯಮ ಉತ್ತಮ ಉದಾಹರಣೆಯಾಗಿದೆ ಎಂದಿದ್ದಾನೆ. ವಿಶೇಷವೆಂದರೆ ಕರಾವಳಿಯೇತರ ಪ್ರದೇಶದಲ್ಲಿ ಉಪ್ಪನ್ನು ತಯಾರಿಸುವ ವಿಧಾನ ದಾಖಲಿಸಿ ದ್ದಾನೆ.

ಇತಿಹಾಸ ನಿರ್ಮಾಣ ಪ್ರಕ್ರಿಯೆಯಲ್ಲಿ ಇಂತಹ ವಸ್ತುನಿಷ್ಠತೆ, ಸ್ಪಷ್ಟತೆ ವೈವಿಧ್ಯತೆ, ಔಚಿತ್ಯ, ಇತಿಹಾಸಕಾರನಿಗೆ ಎಷ್ಟು ಮುಖ್ಯ ಎಂಬುದು ತಮಗಿಲ್ಲಿ ವೇದ್ಯ. ಈ ನಿಟ್ಟಿನಲ್ಲಿ ಬುಖಾನನ್ ಬರವಣಿಗೆ ಆ ಭಾಗದ ಚರಿತ್ರೆಯ ರಚನೆಗೆ ಅತ್ಯಂತ ಉಪಯುಕ್ತವಾಗಿದೆ ಎಂಬುದರಲ್ಲಿ ಉತ್ಪ್ರೇಕ್ಷೆ ಇಲ್ಲ. ಹಾಗಾದಲ್ಲಿ ಅವನ ಬರಹಕ್ಕೆ ಮಿತಿಗಳಾಗಲಿ ಅಥವಾ ಕೊರತೆಗಳಾಗಲಿ, ಇಲ್ಲವೆ? ಎಂಬ ಪ್ರಶ್ನೆಯೂ ನಮ್ಮನ್ನು ಕಾಡಬೇಕಲ್ಲವೆ. ಅವನೆ ಅಭಿಪ್ರಾಯಪಟ್ಟಂತೆ, "ಅದು ಪ್ರಕಟಗೊಳ್ಳುವ ಮೊದಲು, ಸಂಕ್ಷಿಪ್ತಗೊಳಿಸುವ, ಪುನರ್ ಸಂಘಟಿತ ರೂಪಕ್ಕೆ ಬರವಣಿಗೆ ಮಾಡಬೇಕಾಯ್ತು" ಹಾಗೂ "ಸ್ವಲ್ಪ ಮಟ್ಟಿಗೆ ಬರವಣಿಗೆ ವಿಧಾನದಲ್ಲಿ ನನ್ನ ಕೃತಿ ಕೊರತೆಯಿಂದ ಮುಕ್ತವಾಗಿಲ್ಲ" ಎಂದು ವಿನಯದಿಂದ ಒಪ್ಪಿಕೊಳ್ಳುವ ಬುಖಾನನ್, ವಿಮರ್ಶಕರ ಮೆಚ್ಚುಗೆಗೂ ಪಾತ್ರವಾಗುತ್ತಾನೆ.

ಫ್ರಾನ್ಸಿಸ್ ಬುಖಾನನ್ ಬರಹಗಳು ಮೈಸೂರು ಸಂಸ್ಥಾನದ ಇತಿಹಾಸ ಅಧ್ಯಯನಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ. ಇತಿಹಾಸಕಾರರಿಗಷ್ಟೇ ಅಲ್ಲದೆ ಸಮಾಜಶಾಸ್ತ್ರಜ್ಞರಿಗೆ, ಅರ್ಥಶಾಸ್ತ್ರಜ್ಞರಿಗೆ ಹಾಗು ತಂತ್ರಜ್ಞರಿಗೂ ಉಪಯುಕ್ತ ಮಾಹಿತಿ ನೀಡುವ ಮೂಲಕ, ಇತಿಹಾಸ ಅಧ್ಯಯನ ಮತ್ತು ಅಂತರ ಶಾಸ್ತ್ರೀಯ ಹಾಗು ಬಹುಶಾಸ್ತ್ರೀಯ ಅಧ್ಯಯನಗಳಿಗೂ ನೆಲೆ ಒದಗಿಸುವ ನಿಟ್ಟಿನಲ್ಲಿ ಸಹಕಾರಿಯಾಗಿದೆ. ಕೋಲಾರ ಜಿಲ್ಲೆಗೆ ಪ್ರದೇಶಕ್ಕೆ, ಒಮ್ಮೆ ಜುಲೈ ೭ ರಂದು ಪ್ರವೇಶಿಸಿ, ಲಕ್ಕೂರು, ಮಾಲೂರು, ವಕ್ಕಲೇರಿ, ಕೋಲಾರ, ಸಿರಸಿ, ಶಿಡ್ಲಘಟ್ಟ ಮತ್ತು ಚಿಕ್ಕಬಳ್ಳಾಪುರಗಳನ್ನು ಹಾದು, ದೊಡ್ಡಬಳ್ಳಾಪುರದ ಮೂಲಕ ಜುಲೈ-೧೮ ತುಮಕೂರು ಜಿಲ್ಲೆಗೆ ಪ್ರವೇಶಿಸುತ್ತೇನೆ. ಇನ್ನೊಮ್ಮೆ ಮದ್ರಾಸ್ ಕಡೆಯಿಂದ ಬೆಂಗಳೂರಿಗೆ ಬರುವಾಗ ಟೇಕಲ್, ಬೇತಮಂಗಲಗಳ ಮೂಲಕ ಹಾದು ಬರುತ್ತಾನೆ. ಹೀಗಾಗಿ ಕೋಲಾರ ಪ್ರದೇಶದಲ್ಲಿ ಕೇವಲ ೧೨ ದಿವಸಗಳು ಕಾಲ ಪ್ರವಾಸ ಕೈಗೊಂಡು ಸಮಗ್ರ ಚಿತ್ರ ನೀಡುವ ಅವನ ದಿನಚರಿ ಮಾದರಿ ವೈಶಿಷ್ಟ್ಯ ಪೂರ್ಣವಾದುದಾಗಿದೆ.

ವಸಾಹತು ವ್ಯವಸ್ಥೆಯ ಪ್ರತಿನಿಧಿಯಾಗಿದ್ದರೂ, ವಸ್ತುನಿಷ್ಠವಾಗಿ ವರದಿ ಮಾಡುವಲ್ಲಿ ಫ್ರಾನ್ಸಿಸ್ ಬುಖಾನನ್ ನಮ್ಮ ಗಮನ ಸೆಳೆಯುತ್ತಾನೆ. ಇಲ್ಲಿನ ಸ್ಥಿತಿಗತಿಗಳು, ವಾತಾವರಣ, ಭಾಷೆ, ಸಂಸ್ಕೃತಿ, ಆಚಾರ-ವಿಚಾರ ಎಲ್ಲವೂ ಅವನದಲ್ಲದವಾಗಿದ್ದರೂ, ಅವುಗಳನ್ನು ಅರ್ಥೈಸಿಕೊಂಡ ಬಗೆ, ಅನೇಕ ಕಡೆ ವಿವರಣಾತ್ಮಕವಾಗಿದ್ದರೂ, ಸಹ ವಾಸ್ತವಾಂಶದ ಸಂಪೂರ್ಣ ಚಿತ್ರಣ ನಮ್ಮ ಕಣ್ಣು ಮುಂದೆ ಮೂಡಿ ಬರುತ್ತದೆ. ಅದೇ ಅವನ ಬರಹದ ಹೆಚ್ಚುಗಾರಿಕೆ ಎಂದರೆ ಉತ್ಪ್ರೇಕ್ಷೆಯಾಗಲಾರದು! ಈ ಹಿನ್ನೆಲೆಯಲ್ಲಿ, ಇತ್ತೀಚಿನ ಇತಿಹಾಸದ ಶಿಸ್ತಿನಲ್ಲಿ ಆರಂಭಗೊಂಡ ಸೂಕ್ಷ್ಮ ಅಧ್ಯಯನಗಳಂತೆ ಸಂಶೋಧನೆಗೆ, ಪ್ರಾದೇಶಿಕ ಇತಿಹಾಸ ಚೌಕಟ್ಟಿಗೆ ಆಕರಗಳಾಗಿ, ಮೂಲ ಚೌಕಟ್ಟಿಗೆ ಬುಖಾನನ್ ಬರಹ ಅಮೂಲ್ಯ ಕೊಡುಗೆಯಾಗಿ ಪರಿಣಮಿಸಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಫ್ರಾನ್ಸಿಸ್ ಬುಖಾನನ್ ೧೭ ಫೆಬ್ರವರಿ ೧೭೬೨ರಲ್ಲಿ ಸ್ಟಿರ್‌ಲಿಂಗ್‌ಶೈರ್ ಬಳಿಯ ಬ್ರಾಂಜ್ಲಿಟ್‌ನಲ್ಲಿ ಜನನ, ತಂದೆ ವೈದ್ಯರಾಗಿದ್ದು, ಬುಖಾನನ್ ಸಹ ಅದೇ ಜಾಡಿನಲ್ಲಿ ಸಾಗಿದರು. ೧೭೮೩ರಲ್ಲಿ ವೈದ್ಯ ಪದವಿ ಪಡೆದು, ಸರ್ಜನ್ ಆಗಿ ವೃತ್ತಿ ಆರಂಭಿಸಿದರಾದರೂ, ಅನಾರೋಗ್ಯದ ಕಾರಣ ನಿವೃತ್ತಿ ಪಡೆಯಬೇಕಾಯಿತು. ಆರೋಗ್ಯದಿಂದ ಚೇತರಿಸಿಕೊಂಡ ನಂತರ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಬಂಗಾಳದಲ್ಲಿ ಸರ್ಜನ್ ಆಗಿ ನೇಮಕಗೊಂಡರು. ಅಂಡಮಾನ್, ಪೆಗು ಮತ್ತಿತರ ಸ್ಥಳಗಳಿಗೆ ಭೇಟಿನೀಡಿ ಅಲ್ಲಿನ ಸಸ್ಯರಾಶಿಯ ಕುರಿತು, ಅಧ್ಯಯನಾಸಕ್ತಿಯನ್ನು ತಳೆದರು. ಬಟಾನಿಕಲ್ ಗಾರ್ಡನ್ ಸೂಪರಿಂಟೆಂಡೆಂಟ್ ಆಗಿದ್ದ ಡಾ। ರ್‍ಯಾಕ್ಸಬರ್ಗ್ ಶಿಫಾರಸ್ಸಿನ ಮೇರೆಗೆ ಕಲ್ಕತ್ತದ ಬೋರ್ಡ್ ಆಫ್ ಟ್ರೇಡ್‌ಗೆ ನೇಮಕಗೊಂಡು, ಚಿತ್ತಕಾಂಗ್‌ನಲ್ಲಿ ಕಾರ್ಯನಿರ್ವಹಿಸಬೇಕಾಯಿತು. ಆ ಸಂದರ್ಭದಲ್ಲಿ ಅವರ ಜೀವ-ಸಂಕುಲನದ ಒಲವು-ಆಸಕ್ತಿಗಳಿಗೆ ಮತ್ತುಷ್ಟು ಚಾಲನೆ ದೊರೆಯಿತು. ೧೮೧೪ರಲ್ಲಿ ಬಟಾನಿಕಲ್ ಗಾರ್ಡನ್‌ನ ಸೂಪರಿಂಟೆಂಡೆಂಟ್ ಆಗಿ ನೇಮಕ ಹೊಂದಿದರೂ, ಅನಾರೋಗ್ಯದ ಕಾರಣ, ಇಂಗ್ಲೆಂಡಿಗೆ ವಾಪಸು ಹೋಗಬೇಕಾಯಿತು. ಆ ಸಂದರ್ಭದಲ್ಲಿ ಅವರ ಅಪಾರ ಸಂಗ್ರಹಣೆಯನ್ನು (ಸಸ್ಯ ಪ್ರಬೇಧಗಳು, ನಾಣ್ಯಗಳು, ಹಸ್ತಪ್ರತಿ ಮತ್ತು ಇತರೆ) ಕೋರ್ಟ್-ಆಫ್-ಡೈರೆಕ್ಟರುಗಳಿಗೆ ಸಲ್ಲಿಸಿದರು. ಪೆನ್ಸಿಯಲ್ಲಿ ನೆಲೆಗೊಂಡ ಬುಖಾನನ್ ಅನೇಕ ಸಾಹಿತ್ಯ ಮತ್ತು ವಿಜ್ಞಾನ ಸಂಸ್ಥೆಗಳಿಗೆ ಲೇಖನಗಳನ್ನು ನೀಡಿ, F.R.S., F.S.A., L&E., M.R.A.S. ಸಂಸ್ಥೆಗಳ ಸದಸ್ಯತ್ವ ಪಡೆದು ಗೌರವಕ್ಕೆ ಪಾತ್ರರಾದರು. ೧೮೧೯ರಲ್ಲಿ *History of Nepal, Geneology of Hindoo Gods, Fishes of Ganges,* ಕೃತಿಗಳನ್ನು ಪ್ರಕಟಿಸಿದರು. ೧೫ನೇ ಜೂನ್, ೧೮೨೯ ರಲ್ಲಿ ನಿಧನರಾದರು.

೨. Francis Bucanan., *A Journey from Madras through the Countries of Mysore. Canara and MALABAR,* 3 Volumes, The Asian Educational Services. New Delhi, 1988 (Reprint) Vol.1, p.279.

೩. Ibid, p. 283.

೪. Ibid, p. 293.

೫. Ibid, p. 294.

೬ Ibid, p. 279.

೭. Ibid, p. 280.

೮. Ibid, p. 284.

೯. Ibid, p. 298.

೧೦. Ibid, p. 299.

೧೧. Ibid, p. 272.

೧೨. Ibid. p. 302.

೧೩. Ibid, p. 326-327.

೧೪. Ibid, p. 340.

೧೫. Ibid, p. 273.

೧೬. Ibid, p. 39.

೧೭. Ibid, p. 39-40.



ಡಾ. ಸುಮಾ ಎಸ್. ನಿರ್ಣೆ*

# ಯಶಸ್ವಿ ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಮಹಿಳೆಯರು

## ಪ್ರಸ್ತಾವನೆ

ಕರ್ನಾಟಕದ ಜನರು ಸ್ವಾತಂತ್ರ್ಯ ಚಳುವಳಿಗೆ ಧುಮುಕುವಂತೆ ಪ್ರೇರೇಪಿಸಿದ ಒಂದು ಮಹತ್ವದ ಘಟನೆಯೆಂದರೆ ೧೯೨೪ ಡಿಸೆಂಬರ್ ೨೬-೨೭ರಲ್ಲಿ ನಡೆದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ೩೯ನೆಯ ಬೆಳಗಾವಿ ಅಧಿವೇಶನವಾಗಿದೆ. ಪ್ರಥಮ ಬಾರಿಗೆ ಮಹಾತ್ಮ ಗಾಂಧೀಜಿ ಯವರ ಅಧ್ಯಕ್ಷತೆಯಲ್ಲಿ ಈ ಅಧಿವೇಶನ ಜರುಗಿರುವುದು ನಮ್ಮ ರಾಜಕೀಯ ಇತಿಹಾಸದಲ್ಲಿ ಅವಿಸ್ಮರಣೀಯವಾದ ಪ್ರಸಂಗವಾಗಿದೆ. ಪಂಡಿತ ಜವಹರಲಾಲ ನೆಹರೂ ಈ ಅಧಿವೇಶನದ ಕಾರ್ಯದರ್ಶಿಯಾಗಿದ್ದರು.

ಮಹಾತ್ಮಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಅಧಿವೇಶನ ನಡೆಯುತ್ತದೆಯೆಂಬ ಸುದ್ದಿ ತಿಳಿದ ತಕ್ಷಣ ತಮ್ಮ ಕೆಲಸಗಳನ್ನು ಬದಿಗೊತ್ತಿ ಮತ್ತು ಹಬ್ಬದ ವಾತಾವರಣದಿಂದ ಕಾಂಗ್ರೆಸ್ಸಿನ ಕಾರ್ಯಕರ್ತರು, ನಾಯಕರುಗಳು ಮತ್ತು ಜನರು ದೇಶಿಯ ಸಂಸ್ಥಾನಗಳನ್ನು ಕೂಡಿಕೊಂಡು ೯೦,೦೦೦ ರೂ.ಗಳನ್ನು ಅಧಿವೇಶನ ನಡೆಸಲು ಕೂಡಿ ಹಾಕಿದರು. ಭಾರತ ಮತ್ತು ಕರ್ನಾಟಕದ ಜನತೆಯು ಬೆಳಗಾವಿ ಅಧಿವೇಶನದ ಮಹತ್ವವನ್ನು ತಿಳಿಯಲು ರಾಜಕೀಯ ಜಾಗೃತಿಯನ್ನು ಬ್ರಿಟಿಷರ ವಿರುದ್ಧ ಮೂಡಿಸಲು ಅನೇಕ ಅಧಿವೇಶನಗಳು ಬೆಳಗಾವಿ, ಬಿಜಾಪೂರ, ಧಾರವಾಡ ಮತ್ತು ಹಾವೇರಿಗಳಲ್ಲಿ ಜರುಗಿದವು.

ಸಾವಿರಾರು ಜನ ಪುರುಷ ಮತ್ತು ಮಹಿಳೆಯರು, ಶಿಸ್ತಿನ ಸಂಕೇತವಾಗಿ, ಸ್ಫೂರ್ತಿಯಿಂದ ಈ ಅಧಿವೇಶನದಲ್ಲಿ ಭಾಗವಹಿಸಿದರು. ೩೯ನೇಯ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನವು ಗಣ್ಯರಾಷ್ಟ್ರ ನಾಯಕರಿಂದ ತುಂಬಿಹೋಗಿತ್ತು. ಅವರಲ್ಲಿ ಗಂಗಾಧರರಾವ ದೇಶಪಾಂಡೆ, ಕೆ. ಸದಾಶಿವರಾವ, ಚೆನ್ನಪ್ಪ ಅಂಬ್ಲಿ, ವೆಂಕಟಜಾಲಪ್ಪ, ಹನುಮಂತರಾವ ಕೌಜಲಗಿ, ಆರ್.ಆರ್. ದಿವಾಕರ್, ಹರ್ಡೇಕರ ಮಂಜಪ್ಪ, ಅಲಿ ಸಹೋದರರು, ಎನ್.ಎಸ್. ಹರ್ಡೇಕರ ಮುಂತಾದವರಾಗಿದ್ದಾರೆ. ಈ ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಯಶಸ್ಸಿನಲ್ಲಿ ಮಹಿಳೆ ಯರ ಪಾಲು ಮಹತ್ವದ್ದಾಗಿದೆ. ಪುರುಷರಿಗಿಂತ ತಾವೇನು ಕಡಿಮೆಯಿಲ್ಲವೆಂಬುದನ್ನು ಮಹಿಳೆಯರು ತಮ್ಮ ಕಾರ್ಯ ಕ್ಷಮತೆ, ಶಿಸ್ತು, ಸಂಯಮದ ಮೂಲಕ ತೋರಿಸಿಕೊಟ್ಟಿದ್ದಾರೆ. ಈ ಮಹಾ ಅಧಿವೇಶನದ ಪ್ರತಿಯೊಂದು ಹಂತದಲ್ಲೂ ಪುರುಷರಿಗೆ ಸರಿಸಮಾನವಾಗಿ ಕಾರ್ಯನಿರ್ವಹಿಸಿದ್ದು ನಿಜವಾಗಿಯೂ ಪ್ರಶಂಸನೀಯವಾಗಿದೆ.

## ವೈಶಿಷ್ಟ್ಯತೆ

ಬೆಳಗಾವಿ ಅಧಿವೇಶನದ ವೈಶಿಷ್ಟ್ಯವೇನೆಂದರೆ ವಿಭಿನ್ನ ರಾಜಕೀಯ ಹಿನ್ನೆಲೆಯ ಸಂಘಟನೆಗಳನ್ನು ಪ್ರತ್ಯೇಕವಾಗಿ ಮತ್ತು ಜಂಟಿಯಾಗಿ ಚರ್ಚೆ ನಡೆಸಲು ಆಹ್ವಾನಿಸಲಾಗಿತ್ತು. ಖಿಲಾಫತ್ ಸಂಘಟನೆ, ಮುಸ್ಲಿಂಲೀಗನವರಿಂದ ಉದಾರವಾದಿಗಳವರೆಗೆ, ಬ್ರಾಹ್ಮಣರೇತರ ಪಕ್ಷದಿಂದ ಹಿಡಿದು, ನಿಮ್ನ ವರ್ಗಗಳವರೆಗೆ ಎಲ್ಲರನ್ನೂ ಸಮಾವೇಶದಲ್ಲಿ ಭಾಗವಹಿಸಲು ಕರೆಯಲಾಗಿತ್ತು. ಮೇಲುನೋಟಕ್ಕೆ ಪರಸ್ಪರ ವ್ಯತಿರಿಕ್ತವಾದ ಹಿನ್ನೆಲೆಯುಳ್ಳ ಪಕ್ಷಗಳನ್ನು ಒಂದೆಡೆ ಚರ್ಚೆಗೆ ಸೇರಿಸಿದ್ದ ಒಂದು ಅಪೂರ್ವವಾದ ಅಧಿವೇಶನ ಅದಾಗಿತ್ತು. ಪರಸ್ಪರ ವಿರೋಧವಾದ ಅಭಿಪ್ರಾಯಗಳುಳ್ಳ ಪಕ್ಷಗಳು ಸೇರಿದ್ದಕ್ಕೆ ಮಾತ್ರ ಅದು ಒಂದು ರಾಷ್ಟ್ರೀಯ ಸಮಾವೇಶವೆಂದು ವರ್ಣಿಸಲಾಗದು; ಆದರೆ ಈ ದೇಶದ ಸಮಸ್ಯೆಗಳನ್ನು ಅಮೂಲಾಗ್ರವಾಗಿ ಅರಿತು ಅವುಗಳಿಗೆ ನಿಜವಾಗಿ ಪರಿಹಾರ ಕಂಡುಹಿಡಿಯಬೇಕೆಂದು ತುಡಿಯುತ್ತಿದ್ದ ಒಬ್ಬ ವ್ಯಕ್ತಿ ಅಧ್ಯಕ್ಷತೆ ವಹಿಸಿದ್ದುದು ಆ ಅಧಿವೇಶನಕ್ಕೆ ರಾಷ್ಟ್ರೀಯ ವೈಶಾಲ್ಯತೆಯನ್ನು ತಂದುಕೊಟ್ಟಿತು.[೧]

## ಮಹಿಳೆಯರ ಪಾತ್ರ

ಗೃಹಕೃತ್ಯಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟ ಮಹಿಳೆಯರು ಮನೆಯ ಹೊರಗೆ ಬಂದು, ಹೆಚ್ಚಿನ ಸಂಖ್ಯೆಯಲ್ಲಿ ಚಳುವಳಿಯಲ್ಲಿ ಭಾಗವಹಿಸುವಂತಾಗಲು ಕಾರಣ ಗಾಂಧೀಜಿಯವರ ದಿವ್ಯವಾಣಿಯಾಗಿದೆ. ಹೀಗಾಗಿ ಇವರ ಪ್ರಭಾವಕ್ಕೆ ಒಳಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು

* ಇತಿಹಾಸ ಅಧ್ಯಯನ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿದರು.[೨] ಅಷ್ಟೇ ಅಲ್ಲದೇ ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಸಕ್ರಿಯವಾಗಿ ಹುಮ್ಮಸ್ಸಿನಿಂದ ಪಾಲ್ಗೊಂಡರು. ಮಹಿಳೆಯೂ ಯಾವುದೇ ರೀತಿಯ ಜಾತಿ, ಮತ, ಪಂಥ ಮತ್ತು ವಯಸ್ಸಿನ ಭೇದಭಾವವಿಲ್ಲದೇ ಸಮರ್ಪಣಾ ಮನೋಭಾವದಿಂದ, ತಮ್ಮದೇ ಆದ ಅಮೂಲ್ಯವಾದ ಸೇವೆಯನ್ನು ಸಲ್ಲಿಸಲು ಮುಂದಾದುದು ನಿಜವಾಗಿಯೂ ಹೆಮ್ಮೆಯ ವಿಷಯವಾಗಿದೆ.

ಡಾ. ಎನ್.ಎಸ್. ಹರ್ಡೇಕರರು ತರಬೇತಿ ನೀಡಿ ಸಿದ್ಧಗೊಳಿಸಿದ ೧೭೦೦ ಮಂದಿ ಸ್ವಯಂ ಸೇವಕರು ಸಮಾರಂಭದ ಸಕಲ ಕಾರ್ಯಗಳನ್ನೇ ಸೈನಿಕ ಶಿಸ್ತಿನಿಂದ ನಿರ್ವಹಿಸಿದ್ದು ಎಲ್ಲರನ್ನು ಅಚ್ಚರಿಗೊಳಿಸಿತು. ಅಂದೇ ಕರ್ನಾಟಕದ ಸಹಸ್ರಾರು ಸ್ತ್ರೀ-ಪುರುಷರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಳ್ಳುವ ಸಂಕಲ್ಪವನ್ನು ಮಾಡಿದರು. ೧೯೨೪ರ ಬೆಳಗಾವಿ ಕಾಂಗ್ರೆಸ್ ಅಧಿವೇಶನಕ್ಕೆ ಪ್ರಥಮವಾಗಿ ಸುಮಾರು ೧೫೦ ಜನ ಸೇವಾದಳದ ಸೇವಕಿಯರು ಬಂದುದ್ದರಿಂದ ಕರ್ನಾಟಕದ ಸ್ತ್ರೀಯರಿಗೆ ಸಾರ್ವಜನಿಕ ರಂಗವನ್ನು ಪ್ರವೇಶಿಸಲು ಅವಕಾಶವಾಯಿತು.[೩]

೧೯೨೪ರಲ್ಲಿ ನಡೆದ ಈ ಮಹಾ ಅಧಿವೇಶನಕ್ಕೆ ಅನೇಕ ಮಹಿಳೆಯರು ಸ್ಫೂರ್ತಿಯಿಂದ ಬಂದು, ತಮ್ಮದೇ ಆದ ಸೇವೆಯನ್ನು ಸಲ್ಲಿಸುವಲ್ಲಿ ಸಫಲರಾಗಿದ್ದಾರೆನ್ನುವುದಕ್ಕೆ ಈ ಕೆಳಗೆ ವಿವರಿಸುವ ಮಹಿಳೆಯರೇ ಸಾಕ್ಷಿಯಾಗಿದ್ದಾರೆ. ಗೌರಾದೇವಿ ಇಂಚಲಮಠ, ಟಿ.ಬಿ. ಜಯಲಕ್ಷ್ಮಿಬಾಯಿ ಕುಲಕರ್ಣಿ, ಶ್ರೀಮತಿ ಆನಂದಿಬಾಯಿ, ಶ್ರೀಮತಿ ಶಾಂತಾಬಾಯಿ ಕೊಪ್ಪಳ, ಉಮಾಬಾಯಿ ಕುಂದಾಪುರ, ಸುಶೀಲಬಾಯಿ ಕುಲಕರ್ಣಿ, ಶ್ರೀಮತಿ ಗಂಗಾಬಾಯಿ ಎನ್. ಮಿರ್ಜಾಕರ, ಶ್ರೀಮತಿ ನಾಗಮ್ಮಾ ವೀರನಗೌಡ ಪಾಟೀಲ, ಡಾ. ಲಕ್ಷ್ಮೀದೇವಿ, ಶ್ರೀಮತಿ ಅಂಬಕ್ಕ ಬಳಿಗಾರ, ಶ್ರೀರಂಗಾ ಪಾಂಡುರಂಗ ಕಾಮತ್ ಮುಂತಾದವರಾಗಿದ್ದಾರೆ.

ಈ ಸ್ವಯಂ ಸೇವಕಿಯರು ಕಸಗುಡಿಸುವ, ಅಡುಗೆ ಮಾಡುವ, ಅಡಿಗೆ ಪಾತ್ರೆ ತೊಳೆಯುವ, ಊಟ ಬಡಿಸುವ ಕೆಲಸವನ್ನು ಮಾಡಿದರು. ಅಷ್ಟೇ ಅಲ್ಲದೇ ಶೌಚಾಲಯ ತೊಳೆಯುವ ಕಾರ್ಯವನ್ನು ಕೂಡ ಅಚ್ಚುಕಟ್ಟಾಗಿ ನಿರ್ವಹಿಸಿದರು. ಅಲ್ಲದೇ ಅಧಿವೇಶನದ ಕಾಲಕ್ಕೆ ಜನ ಜಂಗುಳಿಯನ್ನು ನಿಯಂತ್ರಿಸುವುದರ ಮೂಲಕ ಶಿಸ್ತಿನ ಸೈನಿಕರೆಂಬ ಕೀರ್ತಿಗೆ ಪಾತ್ರರಾದರು.[೪] ಶ್ರೀಮತಿ ಶಾಂತಾಬಾಯಿ ಕೊಪ್ಪಳ ಇವರು ಪತಿ ಶಿವರಾವ ಅವರ ಜೊತೆಗೆ ಈ ಅಧಿವೇಶನಕ್ಕೆ ಹೋಗಿದ್ದರು. ಹಾಗೆಯೇ ಬಿಜಾಪುರ ಜಿಲ್ಲೆಯ ಅಥಣಿ ತಾಲೂಕಿನ ಅಂಬಕ್ಕ ಬಳಿಗಾರರವರು ಸ್ವಯಂಸೇವಕಿಯಾಗಿ ಈ ಅಧಿವೇಶನದಲ್ಲಿ ಭಾಗವಹಿಸುವುದರ ಮೂಲಕ ತನ್ನ ಸೇವೆಯನ್ನು ಸಲ್ಲಿಸುವಲ್ಲಿ ಸಫಲಳಾಗಿದ್ದಾರೆ.[೫]

ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರ್ತಿಯರಲ್ಲಿ ಶ್ರೀಮತಿ ನಾಗಮ್ಮಾ ಪಾಟೀಲ ಅದ್ವಿತೀಯರಾಗಿದ್ದಾರೆ. ಹುಬ್ಬಳ್ಳಿಯ ವೀರಣ್ಣಗೌಡ ಪಾಟೀಲರ ಮಡದಿಯಾದ ಇವರು ಅಧ್ಯಾಪಕಿಯಾಗಿದ್ದು, ಮಹಾತ್ಮಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಇವರು ಬೆಳಗಾವಿ ಕಾಂಗ್ರೆಸ್ ಅಧಿವೇಶನದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ನಿರ್ವಹಿಸಿದರು. ಇವರ ರಾಷ್ಟ್ರಪ್ರೇಮ, ಕಾರ್ಯಕ್ಷಮತೆ, ಕರ್ತವ್ಯ ಬುದ್ಧಿ ಯುವ ಜನಾಂಗಕ್ಕೆ ಆದರ್ಶವಾಗಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುಳುಗಿದ ಅಂದಿನ ನಮ್ಮ ವೀರ ವನಿತೆಯರ ಧ್ಯೇಯ ಸಾಧನೆಯೇ ಮುಖ್ಯ ವಾಗಿತ್ತೆಂಬುದು ಅವರ ಮಾತಿನಿಂದ ನನಗೆ ಸ್ಪಷ್ಟವಾಯಿತು. ಅವರು ಸ್ವಾತಂತ್ರ್ಯ ಸಂಗ್ರಾಮದ ಜೊತೆಗೆ ಹರಿಜನೋದ್ಧಾರ ಕಾರ್ಯಕ್ರಮದಲ್ಲಿ ತನ್ನ ಪತಿಯೊಡನೆ ಅವಿಶ್ರಾಂತವಾಗಿ ಶ್ರಮಿಸಿದರು. ಸ್ವಾರ್ಥಪೇಕ್ಷೆಯಾಗಲಿ, ಸುಖದ ಬಯಕೆಯಾಗಲಿ, ಸಿರಿಸಂಪತ್ತಿನ ನಿರೀಕ್ಷೆಯಾಗಲಿ ತಮ್ಮ ಹತ್ತಿರ ಸುಳಿಯದಂತೆ ತಮ್ಮ ಕಾಯಕವನ್ನು ದೇಶದ ಕಾರ್ಯಕ್ಕಾಗಿ ಸಜ್ಜುಗೊಳಿಸಿದ್ದನ್ನು ಅವರ ಮಾತಿನಿಂದ ಅರ್ಥವಾಯಿತು.[೬]

ಶ್ರೀಮತಿ ಆನಂದಿಬಾಯಿಯವರು ಮೂಲತಃ ಬಡ ಕುಟುಂಬದಿಂದ ಬಂದವರಾಗಿದ್ದರಿಂದ ಸ್ವಾತಂತ್ರ್ಯ ಪಡೆಯಬೇಕೆಂಬ ತುಡಿತ ಇವರಲ್ಲಿ ಉಂಟಾಗಿತ್ತು. ಇವರು ಕೂಡ ಸ್ಫೂರ್ತಿಯಿಂದ ಈ ಅಧಿವೇಶನದಲ್ಲಿ ಪಾಲ್ಗೊಳ್ಳುವುದರ ಮೂಲಕ ಇತರರಿಗೆ ಆದರ್ಶಪ್ರಾಯರಾದರು. ಇವರು ಪ್ರಥಮ ಬಾರಿಗೆ ಹುಯಿಲಗೋಳ ನಾರಾಯಣರಾವ್ ಬರೆದ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯನ್ನು ಹಾಡಿದರು.[೭] ಇದರ ಮೂಲಕ ಸ್ತ್ರೀ-ಪುರುಷರಲ್ಲಿ ಇನ್ನಷ್ಟು ರಾಷ್ಟ್ರಪ್ರೇಮ ಮೂಡಲು ಮತ್ತು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಪ್ರೇರೇಪಿಸಿತು. ಕರ್ನಾಟಕದ ಪ್ರಮುಖ ಹೋರಾಟಗಾರ್ತಿಯರಲ್ಲಿ ಅದ್ವಿತೀಯರಾಗಿದ್ದು ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ಸರ್ವಸ್ವವನ್ನೇ ತ್ಯಾಗ ಮಾಡಿದ ವೀರಶಿಖಾಮಣಿಯೆಂದರೇ ಉಮಾಬಾಯಿ ಕುಂದಾಪುರರಾಗಿದ್ದಾರೆ.[೮] ಇವರು ತಮ್ಮ ಬಾಲ್ಯವನ್ನು ಮುಂಬಯಿಯಲ್ಲಿ ಕಳೆದರು. ಮುಂಬಯಿಯಲ್ಲಿನ ರಾಷ್ಟ್ರೀಯ ವಾತಾವರಣದಿಂದ ಪ್ರಭಾವಿತರಾದರು. ೧೯೨೩ರಲ್ಲಿ ಹುಬ್ಬಳ್ಳಿಗೆ ವಾಸಿಸಲು ಬಂದಾಗ ಡಾ. ಹರ್ಡೀಕರರು ಸ್ಥಾಪಿಸಿದ ಭಗಿನಿ ಮಂಡಲದಲ್ಲೂ, ಹಿಂದುಸ್ಥಾನಿ ಸೇವಾದಳದಲ್ಲೂ ಅವರು ಪ್ರಮುಖ ಕಾರ್ಯಕರ್ತೆಯಾಗಿ ದುಡಿಯತೊಡಗಿದರು. ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶದ ಕಾಲಕ್ಕೆ ಸ್ವಯಂ ಸೇವಾದಳದ

ಪ್ರಮುಖರಾಗಿ ದುಡಿದರು. ಆಗಿನ ಪರಿಸ್ಥಿತಿಯಲ್ಲಿ ಸಾರ್ವಜನಿಕ ಸಭೆಗಳಿಗೆ ಸ್ತ್ರೀಯರು ಬರಲು ಹಿಂಜರಿಯುತ್ತಿದ್ದರು. ಹೀಗಿರುವಾಗ ಸೇವಾದಳದ ಪ್ರಯತ್ನದ ಫಲವಾಗಿ ಕರ್ನಾಟಕದ ಬಹುತೇಕ ಎಲ್ಲ ಜಿಲ್ಲೆಗಳಿಂದ ನಮಗೆ ಸ್ವಯಂ ಸೇವಕಿಯರು ದೊರೆತರು. ಬೆಳಗಾವಿಯಿಂದ ದೂರವಿರುವ ಮಂಗಳೂರು, ಬೆಂಗಳೂರು ಮುಂತಾದ ಕಡೆಗಳಿಂದಲೂ ಸ್ವಯಂ ಸೇವಕಿಯರು ಪಥಕವನ್ನೇ ಸೇರಿದರು. ಈ ಅಧಿವೇಶನದಲ್ಲಿ ಸ್ವಯಂ ಸೇವಕಿಯರು ನಿರ್ವಹಿಸಿದ ಪಾತ್ರ ಅನೇಕರ ಮೆಚ್ಚುಗೆಗೆ ಪಾತ್ರವಾಯಿತು ಎಂದು ಈ ಕುರಿತು ಉಮಾಬಾಯಿ ಕುಂದಾಪುರರು ಸ್ವತಃ ಬರೆದಿದ್ದಾರೆ.

ಕನ್ನಡ ನಾಡಿನಲ್ಲೆಲ್ಲಾ ಸಂಚರಿಸಿ ಸ್ವಯಂ ಸೇವಕಿಯರನ್ನು ಕಲೆಹಾಕಿ ಅವರನ್ನು ತರಬೇತಿ ಮಾಡಿ ಮುಖಂಡರು ಮೆಚ್ಚುವಂತಹ ಕೆಲಸವನ್ನು ಉಮಾಬಾಯಿ ನಿರ್ವಹಿಸಿದರು. ಈ ಸಂದರ್ಭವನ್ನು ನೆನೆದು ಉಮಾಬಾಯಿಯವರು ಹೀಗೆನ್ನುತ್ತಾರೆ. ನಾನು ಬೆಂಗಳೂರು, ಮಂಗಳೂರು, ಉಡುಪಿ ಎಲ್ಲಾ ಭಾಗವನ್ನು ಸುತ್ತಿ ೧೦೧ ಸ್ವಯಂ ಸೇವಕಿಯರನ್ನು ಸಿದ್ಧಪಡಿಸಿದೆ, ನಾನು ಹೇಳಿದೆ; ೧೦೧ ಹುಡುಗಿಯರನ್ನು ತಯಾರು ಮಾಡುತ್ತೇನೆ. ಒಂದೇ ನಮೂನೆ ಸೀರೆ ಬೇಕೆನ್ನುತ್ತೀರಿ. ಯಾರಿಗೆ ಸಾಧ್ಯವಿಲ್ಲವೋ ಅವರಿಗೆ ನೀವೇ ಕೊಡಬೇಕು ಎಂದು ಹೇಳಿ ಮುಖಂಡರನ್ನು ಒಪ್ಪಿಸಿದೆ. ನಮ್ಮ ಜೊತೆ ಸೇರಿ ಕೆಲಸ ಮಾಡಲು ಇಷ್ಟಪಟ್ಟು ಕೆಲವು ವಿಧವೆಯರೂ ಬಂದರು. ಕೇಶಮುಂಡನ ಮಾಡಿದ ವಿಧವೆಯರು ತಮಗೂ ರಾಷ್ಟ್ರಸೇವೆ ಮಾಡುವ ಅವಕಾಶ ಕೊಡು ಎಂದು ಕಣ್ಣೀರಿಡುತ್ತಿದ್ದಾರೆ. ಅವರ ಚೈತನ್ಯ ನೋಡಿ ಅಚ್ಚರಿಪಟ್ಟ ನಾನು ಅಧಿವೇಶನದ ಕಾಲದಲ್ಲಿ ಪಾಠಶಾಲೆಯ ಉಸ್ತುವಾರಿಯನ್ನು ಅವರಿಗೆ ನೀಡಿದೆ.

ಗೌರಾದೇವಿ ಇಂಚಲಮಠ ಮತ್ತು ಡಾ. ಲಕ್ಷ್ಮೀದೇವಿಯರು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಬೆಳಗಾವಿ ಅಧಿವೇಶನದಲ್ಲಿ ಸ್ವಯಂ ಸೇವಕಿಯರಾಗಿ ಭಾಗವಹಿಸುವುದರ ಮೂಲಕ ಈ ಅಧಿವೇಶನದ ಯಶಸ್ಸಿನಲ್ಲಿ ತಮ್ಮ ಛಾಪು ಮೂಡಿಸುವ ಪ್ರಯತ್ನವನ್ನು ಮಾಡಿರುವುದನ್ನು ಗುರುತಿಸಬಹುದಾಗಿದೆ.[೯]

ಹೀಗೆ ಕರ್ನಾಟಕದ ನಾನಾ ಭಾಗಗಳಿಂದ ಸ್ತ್ರೀಯರು ಬಂದು ಭಾಗವಹಿಸಲು ಈ ಅಧಿವೇಶನವು ದಾರಿದೀಪವಾಯಿತು. ಈ ಮಹಿಳೆಯರು ಕಾಯಾ, ವಾಚಾ, ಮನಸಾ ತಮ್ಮನ್ನು ಈ ಅಧಿವೇಶನದಲ್ಲಿ ತೊಡಗಿಸಿಕೊಂಡು ತಮ್ಮ ದಕ್ಷತೆ, ಕಾರ್ಯಕ್ಷಮತೆ, ಶಿಸ್ತಿನ ಮೂಲಕ ಮುಂದಿನ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರು ಭಾಗವಹಿಸಲು ಸ್ಫೂರ್ತಿಯನ್ನು ನೀಡಿದಂತಾಯಿತು. ಹೀಗಾಗಿ ಜಿ.ಎಸ್. ಹಾಲಪ್ಪನವರು ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಬಗ್ಗೆ ಚರ್ಚಿಸುತ್ತಾ ಬೆಳಗಾವಿ ಅಧಿವೇಶನವನ್ನು ಐಕ್ಯತಾ ಅಧಿವೇಶ ನವೆಂದು ಕರೆಯಬಹುದು. ಏಕೆಂದರೆ, ಪ್ರತಿಯೊಬ್ಬರ ಗಮನವೂ ಐಕ್ಯತಾ ಸಾಧನೆಯ ಕಡೆಗೆ ಹರಿದಿತ್ತು, ಕೇವಲ ಕಾಂಗ್ರೆಸ್ ಕಾರ್ಯಕರ್ತರ ಐಕ್ಯತೆಯ ಬದಲಾಗಿ, ಇಡೀ ರಾಷ್ಟ್ರದ ಐಕ್ಯತೆ ಲಕ್ಷ್ಯದಲ್ಲಿತ್ತು. ಎಲ್ಲ ಪಕ್ಷಗಳಿಗೂ ತಮ್ಮ ತಮ್ಮ ಅಧಿವೇಶನವನ್ನು ನಡೆಸಲು ಆಹ್ವಾನಿಸಲು ಕಾರಣ ಐಕ್ಯತೆಯ ಸಾಧನೆಯೇ ಆಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಷೇಕ ಅಲಿ ಬಿ. ಮತ್ತು ಚಂದ್ರಶೇಖರ ಎಸ್. **ಕರ್ನಾಟಕ ಚರಿತ್ರೆ**, ಸಂಪುಟ–೭, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೯೪.

೨. ಕಮಲಾ ಸಂಪಳ್ಳಿ., **ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮ್ಮ ವೀರ ವನಿತೆಯರು**, ಬೆಂಗಳೂರು, ೧೯೯೨, ಪು. ೨.

೩. **'ಜನಪದ'** ಕನ್ನಡ ಮಾಸಪತ್ರಿಕೆ, (ಸೆಪ್ಟೆಂಬರ್) ೧೯೯೭, ಪು. ೧೭.

೪. ಸೂರ್ಯನಾಥ ಕಾಮತ್., **ಸ್ವಾತಂತ್ರ್ಯ ಸೂರ್ಯೋದಯ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨, ಪು. ೬೬.

೫. ಸೂರ್ಯನಾಥ ಕಾಮತ್ (ಸಂ.), **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂ. ೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪು. ೪೭೬–೭೭.

೬. ನೇರ ಸಂದರ್ಶನ ಹುಬ್ಬಳ್ಳಿ, ೨೧.೦೪.೨೦೦೧.

೭. ಉಮಾದೇವಿ ಕಣವಿ, **೧೯೪೨ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಮಹಿಳೆಯರ ಪಾತ್ರ–ಒಂದು ಅಧ್ಯಯನ** (ಎಂ.ಫಿಲ್. ಕಿರುಪ್ರಬಂಧ) ೧೯೯೫, ಪು. ೪೮–೪೯.

೮. ಕಮಲಾ ಸಂಪಳ್ಳಿ, ಅದೇ., ಬೆಂಗಳೂರು, ೧೯೯೨, ಪು. ೭೫.

೯. ಸರೋಜಿನಿ ಶಿಂತ್ರಿ ಮತ್ತು ರಾಘವೇಂದ್ರ ಕೆ. **ಕರ್ನಾಟಕದಲ್ಲಿ ಮಹಿಳಾ ಸ್ವಾತಂತ್ರ್ಯ ಹೋರಾಟಗಾರರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೩, ಪು. ೪೪–೪೬.

ಡಾ. ಶಕುಂತಲಾ ಶೆಟ್ಟಿ*

# ರಾಷ್ಟ್ರ ನಿರ್ಮಾಣದಲ್ಲಿ ಪಂಡಿತ ತಾರಾನಾಥರು ಮತ್ತು ಹಮ್ದರ್ದ್ ಶಾಲೆ

ಪಂಡಿತ ತಾರಾನಾಥರು ಒಬ್ಬ ವ್ಯಕ್ತಿಯಲ್ಲ, ಒಂದು ಶಕ್ತಿ ಹಾಗೂ ಈ ನಾಡಿನ ಬೆಳಕು. ೫-೭-೧೮೯೧ ರಲ್ಲಿ ಮಂಗಳೂರಿನಲ್ಲಿ ಜನ್ಮತಾಳಿದ ಶ್ರೀ ತಾರಾನಾಥರು ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸುವಷ್ಟರಲ್ಲಿ ಅವರ ಆರೋಗ್ಯವು ಹದಗೆಟ್ಟಿದ್ದರಿಂದ ಅವರಿಗೆ ಹವಾ ಬದಲಾವಣೆ ಮಾಡ ಬೇಕೆಂದು ವೈದ್ಯರು ಸೂಚಿಸಿದ್ದರು. ಆಗಿನ ಹೈದರಾಬಾದಿನ ನಿಜಾಂರ ರಾಜ್ಯದಲ್ಲಿ ವಿದ್ಯಾಧಿಕಾರಿಗಳಾದ ಅವರ ಮಾವಂದಿರಾದ ಶ್ರೀ ಸುಬ್ಬಾರಾವ್ ಅವರಲ್ಲಿಯೇ ಹೋಗಿ ವಿದ್ಯಾಭ್ಯಾಸ ಮುಂದುವರಿಸಿದರು. ಜೊತೆಜೊತೆಯಲ್ಲಿಯೇ ಈ ನಾಡಿಗೆ ಆವರಿಸಿದ ಅಜ್ಞಾನ, ಬಡತನ, ಮೌಢ್ಯತೆ ಹಾಗೂ ಪಾರತಂತ್ರಗಳ ಪಿಡುಗುಗಳ ಬಗ್ಗೆ ಅಂತಃಕರುಣೆಯ ನೆಲೆಯಲ್ಲಿ ಚಿಂತನಾನುಶೀಲರಾಗತೊಡಗಿದರು. ಹೀಗಾಗಿ ಅಂದು ಅವರು ಮುಂದೆ ಎಂ.ಬಿ.ಸಿ.ಎಂ ಓದಿಕೊಂಡರು. ಆನಂತರ ನಿಜಾಮರ ರಾಜವೈದ್ಯರಾದ ಶ್ರೀ ಹರಿಗೋವಿಂದ ಜೀ ಅವರಲ್ಲಿ ಆಯುರ್ವೇದ, ಯುನಾನಿ ಶಾಖೆಗಳಲ್ಲಿ ವಿಶೇಷ ಅಧ್ಯಯನ ನಡಿಸಿದರು. ಆ ವಾತಾವರಣದಲ್ಲಿ ಅವರು ತಮ್ಮ ಆರೋಗ್ಯದ ಬಗ್ಗೆಯೂ ಕಾಳಜಿ ತೆಗೆದುಕೊಂಡರು. ಆ ಕಾಳಜಿಯಲ್ಲಿ ತಮ್ಮ ಇಡೀ ಪರಿಸರದಲ್ಲಿ ಆರೋಗ್ಯವನ್ನು ನಳನಳಿಸುವಂತೆ ಮಾಡಲು ಕಂಕಣಬದ್ಧರಾಗಲು ಸಾಧ್ಯವಾಯಿತು.

ಮೊಟ್ಟಮೊದಲಿಗೆ ಅವರು ಮಹಾದಾನಗಳಲ್ಲಿ ಜ್ಞಾನ ದಾನವೇ ಪ್ರಮುಖವೆಂದು ಬಗೆದವರು. ಏಕೆಂದರೆ ಅದು ಒಬ್ಬ ಮನುಷ್ಯನನ್ನು ಮಾನವನನ್ನಾಗಿ ಮಾಡುವುದರ ಜೊತೆಗೆ ಸತ್‌ಧರ್ಮ, ಸತ್‌ಕಾರ್ಯಕ್ಕೆ ಹಚ್ಚುವುದು–ಇಂತಹ ಜ್ಞಾನ ಜ್ಯೋತಿಯನ್ನು ಹೊತ್ತಿಸುವಲ್ಲಿ ಪಂಡಿತ ತಾರಾನಾಥರು ಬೀದರಿನ ಸರ್ಕಾರಿ ಶಾಲೆಯೊಂದರಲ್ಲಿ ಕೆಲಸಮಾಡಿ ಸಾಕಷ್ಟು ಜನಪ್ರಿಯತೆಯನ್ನು ಪಡೆದರು. ಅದು ಅನೇಕರಿಗೆ ಹೊಟ್ಟೆಕಿಚ್ಚು ತಂದಿತು. ಹೀಗಾಗಿ ಮೇಲಧಿಕಾರಿಗಳು ಅವರನ್ನು ರಾಯಚೂರಿನ ಮಿಡಲ್ ಸ್ಕೂಲಿಗೆ ವರ್ಗ ಮಾಡಿದರು. ೧೯೧೧ಳ ರಲ್ಲಿ ರಾಯಚೂರಿಗೆ ಬಂದ ಸ್ವಲ್ಪ ದಿನಗಳಲ್ಲಿ ವಿದ್ಯಾರ್ಥಿಗಳಿಗೆ ತುಂಬಾ ಪ್ರಿಯ ಶಿಕ್ಷಕರಾದರು. ಒಮ್ಮೆ ತರಗತಿಯಲ್ಲಿ ಪಾಠ ಹೇಳುವಲ್ಲಿ ಮಜ್ಞರಾಗಿದ್ದಾಗ ವಿಭಾಗದ ಪರೀಕ್ಷಾಧಿಕಾರಿ [ಸದರ್ ಮೊಹತಮೀಮ] ಅವರ ತರಗತಿಗೆ ಪರಿವೀಕ್ಷಣೆಗಾಗಿ ಬಂದರು. ತಾರಾನಾಥರು ಅವರನ್ನು ಗಮನಿಸದೇ ಹೋದರು. ಅದನ್ನು ಕಂಡ ಆ ಅಧಿಕಾರಿಯು ತಾರಾನಾಥರನ್ನು ರಾಯಚೂರಿನಿಂದ ನಿರ್ಮಲ್ ಎಂಬ ಊರಿಗೆ ವರ್ಗಾವಣೆ ಮಾಡಿದರು. ಅದು ೧೯೨೦ರ ವೇಳೆ. ಆಗ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಅದೇ ವರ್ಷ ಯುಗಾದಿಯ ದಿನ ಹಮ್‌ದರ್ದ್ ಶಾಲೆಯನ್ನು ಪ್ರಾರಂಭಿಸಿದರು. ಪಂಡಿತ ತಾರಾನಾಥರು ಸ್ಥಾಪಿಸಿದ ಈ ಶಾಲೆಗೆ ನಿಜಾಮ ಆಡಳಿತಕ್ಕೆ ಶರಣಾಗದ ವಿದ್ಯಾರ್ಥಿಗಳು ಮಾತ್ರ ಪ್ರವೇಶ ಪಡೆಯುತ್ತಿದ್ದರು, ಆದರೆ ಉಳಿದವರು ಸರಕಾರಿ ಶಾಲೆಗೆ ಬೇರೆ ಬೇರೆ ನೆಲೆಯಲ್ಲಿ ಸೇರಿಕೊಂಡರು. ಒಂದು ಕಡೆ ತಾರಾನಾಥರೇ ಹೇಳುತ್ತಾರೆ : "ನಿಜಾಮ ರಾಜ್ಯದಲ್ಲಿ ಶಿಕ್ಷಣವು ಬಹಳ ಹಿಂದುಳಿದಿದೆ, ದಮ್ಮಯ್ಯ ಎನ್ನುವುದು, ಲಂಚ ನೀಡುವುದು, ಮುಖಸ್ತುತಿ ಮಾಡುವುದು ಇತ್ಯಾದಿಗಳು ವಿಪರೀತವಾಗಿವೆ, ಆಳರಸರ ಆಳ್ವಿಕೆಯ ವಿರುದ್ಧ ಜಗತ್ತೇ ಕೂಗೆಬ್ಬಿಸಿರುವಾಗ ಈ ಭಾಗದಲ್ಲಿಯೂ ಆ ತರಹದ ಸ್ವತಂತ್ರಾಪೇಕ್ಷೆಯ ಕೂಗು ಏಳಲೇ ಬೇಕು. ಅದಕ್ಕಾಗಿ ಇಲ್ಲಿ ತಿಳುವಳಿಕೆಯನ್ನು ಮೂಡಿಸಿ ಸ್ವಾಭಿಮಾನವನ್ನು ಕೆರಳಿಸಲು ರಾಜೀನಾಮೆಯನ್ನಿತ್ತು ಶಾಲೆಯನ್ನು ಪ್ರಾರಂಭಿಸಬೇಕೆಂದಿರುವೆ" ಎಂದು ಹೇಳಿರುವುದು ಅವರ ಸಾಮಾಜಿಕ ಕಾಳಜಿ ಹಾಗೂ ರಾಷ್ಟ್ರ ಭಕ್ತಿಯನ್ನು ಕುರಿತಾದ ನಿಟ್ಟಿಗೆ ಸ್ಪಷ್ಟತೆಯನ್ನು ಮೂಡಿಸುತ್ತದೆ.

ರಾಯಚೂರಿನ ಶಿಕ್ಷಣ ಕ್ಷೇತ್ರದಲ್ಲಿ ಹಮ್ದರ್ದ್ ಶಾಲೆಯು ಅರಳಿ ಬರುವ ಸಂದರ್ಭದಲ್ಲಿ ನಟ್ಟು ತೆಗೆಯುವ ಸಂದರ್ಭ, ಅಂತಹ ನೆಲವನ್ನು ಕಸಿಗೊಳಿಸಿ ವಿದ್ಯೆಯ ಬಿತ್ತನ್ನು ಬಿತ್ತಿದರು. ಅಂತಹ ಬರಡು ಭೂಮಿಯಲ್ಲಿ ಬೆಳೆಬೆಳೆಯಲು ಮಾಡಿದ

* ಪ್ರಾಧ್ಯಾಪಕರು, ಎಸ್.ಎಸ್.ಆರ್.ಜಿ. ಮಹಿಳಾ ಮಹಾವಿದ್ಯಾಲಯ, ರಾಯಚೂರು.

ಪ್ರಯತ್ನವನ್ನು ಇಂದಿನ ಕರ್ನಾಟಕ ಸಂಘ ಅರ್ಥಾತ್ ಅಂದಿನ ಕರ್ನಾಟಕ ಧರ್ಮ ಸಂಘವು ೧೯೩೧ ರಲ್ಲಿ ಹೊರಡಿಸಿದ ಚಿಕ್ಕ ಹೊತ್ತಿಗೆಯ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. "ಗಟ್ಟಿ ನೆಲದಲ್ಲಿ ನೀರು ಗೊಬ್ಬರದ ಕೊರತೆ ಇದ್ದೆಡೆಯಲ್ಲಿ ಕನ್ನಡ ಬೀಜವನ್ನು ಹಠಾತ್ತಾಗಿ ಬಿತ್ತಿದಾಗ, ಊಹಿಸದ ಫಲ ಬಂದಾಗ, ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ" ಎಂದು ಹೇಳಿದ್ದಾರೆ.

ತಾರಾನಾಥರಿಗೆ ತಮ್ಮ ಜೀವನದ ಗುರಿಯಾಗಿದ್ದ ಉತ್ತಮ ವಿದ್ಯಾಸಂಸ್ಥೆಯೊಂದನ್ನು ಸ್ಥಾಪಿಸಿ ತನ್ಮೂಲಕ ಭಾರತೀಯ ಸಂಸ್ಕೃತಿಯ ಪುನರುಜ್ಜೀವನಗೊಳಿಸಬೇಕೆಂಬುದು ಮೊದಲಿನಿಂದಲೂ ಇತ್ತು. ಇದೇ ಸಮಯದಲ್ಲಿ ಬಹುಶಃ ರಾಯಚೂರಿನ ಭವಿಷ್ಯದ ಬಾಗಿಲು ಕೂಡಾ ತೆರೆದಂತಿತ್ತು. ಭಾವೀ ರಾಷ್ಟ್ರದ ಆಧಾರಸ್ತಂಭಗಳಾಗಲಿರುವ ವಿದ್ಯಾರ್ಥಿಗಳಲ್ಲಿ ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನ ಇರಬೇಕೆಂಬ ಬಯಕೆ ರಾಯರ ಮನಸ್ಸಿನಲ್ಲಿ ಬೇರೂರಿತ್ತು. ಆದ್ದರಿಂದಲೇ ತಾರಾನಾಥರು ವಿದ್ಯಾರ್ಥಿ ವೃಂದದಲ್ಲಿ ಅಪಾರ ಕೀರ್ತಿಯನ್ನು ಗಳಿಸಿದ್ದರು. ವಿದ್ಯಾರ್ಥಿಗಳಿಗಾಗಿ ಒಂದು ವಾಚನಾಲಯವನ್ನು ತೆರೆದು ಅಗತ್ಯವಾದ ಪುಸ್ತಕಗಳನ್ನು ಪತ್ರಿಕೆಗಳನ್ನು ಒದಗಿಸಿ ವಿದ್ಯಾರ್ಥಿವೃಂದದಲ್ಲಿ ಓದುವ ಅಭಿರುಚಿಯನ್ನು ಬೆಳಸಿದರು. ವಾಚನಾಲಯದಲ್ಲಿ ವಾರಕ್ಕೊಮ್ಮೆ ವಿವಿಧ ವಿಷಯಗಳಮೇಲೆ ಭಾಷಣವನ್ನು ಏರ್ಪಡಿಸಿ ವಿದ್ಯಾರ್ಥಿಗಳಿಗೆ ಭಾಷಣದ ಕಲೆಯನ್ನು ಕಲಿಸಿದರು. ಪ್ರತಿ ಗುರುವಾರ ಸಾಮೂಹಿಕ ಭಜನೆ ಏರ್ಪಡಿಸಿ ಬ್ರಹ್ಮಚರ್ಯ ಮತ್ತು ನೀತಿಯ ಬಗ್ಗೆ ವಿದ್ಯಾರ್ಥಿಗಳಿಗೆ ಉಪದೇಶ ನೀಡುತ್ತಿದ್ದರು ಹಾಗೂ ಅವರು ಹಾಡುತ್ತಿದ್ದರೆ ಜನ ಮೈಮರೆತು ಕೇಳುತ್ತಿದ್ದರು.

ಒಂದುಸಲ ತಾರಾನಾಥರು "ಬ್ರಹ್ಮಚರ್ಯೆಯನ್ನು ಪಾಲಿಸುವುದರಿಂದ ಶಕ್ತಿ ವೃದ್ಧಿಗೊಳ್ಳುತ್ತದೆ" ಎಂದು ಹೇಳುತ್ತಲೇ ವಿದ್ಯಾರ್ಥಿಯೋರ್ವನು "ಸರ್ ಯಾವಾಗಲೂ ನೀವು ಬ್ರಹ್ಮಚರ್ಯದ ಬಗ್ಗೆಯೇ ಹೇಳುತ್ತಲೇ ಇದ್ದೀರಿ; ಹಾಗಾದರೆ ನಿಮ್ಮಲ್ಲಿ ಎಷ್ಟು ಶಕ್ತಿ ಇದೆ ಎಂಬುದನ್ನು ಎಂದು ತೋರಿಸುವಿರಿ?" ಎಂದು ಕೇಳಿದ್ದಕ್ಕೆ ರಾಯರು ಕೋಪಗೊಳ್ಳದೇ ತತ್‌ಕ್ಷಣ ಒಂದು ಬೇವಿನ ಮರಕ್ಕೆ ತಮ್ಮ ಭುಜದಿಂದ ಒಂದು ಡಿಕ್ಕಿಯನ್ನು ಹಾಕಿದರು. ಆಗ ಗಿಡದಲ್ಲಿದ್ದ ಬೇವಿನ ಹಣ್ಣುಗಳು ಉದುರಿದವು. ಇದಾದಕೂಡಲೇ ತಮ್ಮ ಹೆಬ್ಬೆರಳನ್ನು ನೆಲಕ್ಕೆ ಊರಿದರು. ಆನಂತರ ಅದನ್ನು ಸರಿಸಲು ಹೇಳಿದರು. ಯಾರಿಗೂ ಅದನ್ನು ಸರಿಸಲು ಸಾಧ್ಯವಾಗಲಿಲ್ಲ. ಈ ಶಕ್ತಿಯು ಯೋಗಾಭ್ಯಾಸ ಮತ್ತು ಬ್ರಹ್ಮಚರ್ಯ ಪಾಲನೆಯಿಂದಲೇ ಎಂಬುದನ್ನು ಅಲ್ಲಿರುವ ಎಲ್ಲರೂ ಮನಗೊಳ್ಳುವಂತೆ ಮಾಡಿದರು. ಪಾಠ ಹೇಳುವುದರಲ್ಲಿಯೂ ಕೂಡ ತಾರಾನಾಥರದೇ ಒಂದು ವೈಖರಿ. ಅವರ ವಿದ್ಯಾರ್ಥಿಯಾದ ದಿ॥ ರಾಘು ಜೋಷಿಯವರು ತಮ್ಮ ಲೇಖನ ಒಂದರಲ್ಲಿ ಹೀಗೆ ಹೇಳುತ್ತಾರೆ. "ಒಮ್ಮೆ ಮಧ್ಯಾಹ್ನ ೪.೦೦ ಗಂಟೆಗೆ ಆಕಾಶದಲ್ಲಿ ಮೋಡ ಕವಿಯಿತು, ಗಾಳಿ ಬಿಟ್ಟಿತು. ಆಗ ಇವರು ವಿದ್ಯಾರ್ಥಿಗಳನ್ನು ಊರ ಹೊರಗೆ ಕರೆದೊಯ್ದರು. ಮಾಣಿಕ್ ಪ್ರಭುವಿನ ಗುಡಿ ಇರುವ ಗುಡ್ಡ ಅದು. ಅಷ್ಟು ಎತ್ತರವಾದ ಗುಡ್ಡವಲ್ಲ. ಎಲ್ಲರನ್ನೂ ಕರೆದುಕೊಂಡು ತುತ್ತತುದಿಗೇರಿದರು. ತಂಪಾದ ಗಾಳಿ ತಿಳಿನೀಲಿ ಮೋಡಗಳನ್ನು ತೋರಿಸಿದರು. ಮೋಡ ರೂಪಗೊಳ್ಳುವ ರೀತಿಯನ್ನು ವಿವರಿಸಿದರು. ಮೋಡ ಮಳೆಗರೆಯುತ್ತಿರುವಾಗ ಅವರು ತೋರಿಸಿದ ರೀತಿ ಈಗಲೂ ಅಚ್ಚೊತ್ತಿದೆ. ಒಮ್ಮೆ ಅವರು ನಮಗೆ ಪಾಠ ಹೇಳಿಕೊಟ್ಟರೆ ಪುನಃ ಮನೆಯಲ್ಲಿ ಓದಿಕೊಳ್ಳುವ ಪ್ರಸಂಗವೇ ವಿದ್ಯಾರ್ಥಿಗಳಿಗೆ ಬೀಳುತ್ತಿರಲಿಲ್ಲ. ಅವರು ಹೇಳಿಕೊಡುವ ಪದ್ಧತಿ ಅಷ್ಟು ಗಟ್ಟಿಮುಟ್ಟು. ಇಂಥಹ ಸಾಧನೆ ಅವರದು"

ಹಮ್ದರ್ದ್ ಶಾಲೆಯಲ್ಲಿ ಎಲ್ಲಾ ಶಿಕ್ಷಕರು ತಾರಾನಾಥರ ಮನೆಯಲ್ಲಿಯೇ ಹೆಚ್ಚುಕಡಮೆ ವಾಸಿಸುತ್ತಿದ್ದರು. ಅಧ್ಯಾಪಕರ ಊಟ ತಾರಾನಾಥರ ಮನೆಯಲ್ಲಿ ನಡೆಯುತ್ತಿತ್ತು. ವಿದ್ಯಾರ್ಥಿಗಳಿಗೆ ಯಾವ ಶುಲ್ಕವೂ ಇರಲಿಲ್ಲ ಬದಲು ಉಚಿತ ಶಿಕ್ಷಣ, ಅಧ್ಯಾಪಕರಿಗೆ ವೇತನವಿರಲಿಲ್ಲ. ಸ್ವಯಂ ಸ್ಫೂರ್ತಿಯಿಂದ ಬಂದವರು. ತಾರಾನಾಥರ ನೇತೃತ್ವದಲ್ಲಿ ಸರ್ವಶ್ರೀ ಮಧ್ವರಾಜ, ರಾಜಾ ಬಹದ್ದೂರ್, ಶ್ರೀನಿವಾಸ ದೀಕ್ಷಿತ್, ಹೊಸೂರು ಹನುಮಂತಾಚಾರ್, ಸ್ವಾಮಿ ರಾಯಾಚಾರ್ಯ ಕೂರತಿಪ್ಪಿ ಶ್ರೀನಿವಾಸರಾವ ಮುಂತಾದವರು ಈ ಹಮದರ್ದ್ ಶಾಲೆಗೆ ಆರ್ಥಿಕ ಬಲ ನೀಡುತ್ತಿದ್ದರು. ಅವರೆಲ್ಲ ಸಾಮಾನ್ಯತಃ ಪ್ರತಿ ಮನೆಯಿಂದ ಮುಷ್ಟಿ ಧಾನ್ಯವನ್ನು ಮನೆ ಮನೆಗೆ ಹೋಗಿ ಸಣ್ಣ ಚೀಲಗಳಲ್ಲಿ ಸಂಗ್ರಹಿಸುತ್ತಿದ್ದರು. ಸಂಗ್ರಹಿಸಿದ್ದು ಅಧ್ಯಾಪಕರಿಗೆ. ಅದೇ ವಿದ್ಯಾರ್ಥಿಗಳ ಶುಲ್ಕ ಹಾಗೂ ಅದೇ ಸಾರ್ವಜನಿಕರ ವಂತಿಗೆಯೂ ಕೂಡ.

ತಾರಾನಾಥರು ಕೇವಲ ಉಪಾಧ್ಯಾಯರಾಗಿರದೆ ಸಮಾಜ ಸೇವಕರಾಗಿದ್ದರು. ಇವರು ತಮ್ಮ ಬಿಡುವಿನ ಸಮಯದಲ್ಲಿ ತಮ್ಮದೇ ಆದ ಒಂದು ದವಾಖಾನೆಯನ್ನು ತೆರೆದುಕೊಂಡಿದ್ದು ಅದರ ಮೂಲಕ ಬಡ ಬಗ್ಗರಿಗೆ ಆರೋಗ್ಯ ಸೇವೆ ಸಲ್ಲಿಸುತ್ತಿದ್ದರು. ತಾರಾನಾಥರಿಗೆ ಹರಿಜನರ ಬಗ್ಗೆ, ದೀನದಲಿತರ ಬಗ್ಗೆ ತುಂಬ ಕಳಕಳಿ. ರಾಯಚೂರಿನ ಸಮೀಪದ ಅಸ್ಕಿಹಾಳ ಎಂಬ ಗ್ರಾಮದಲ್ಲಿ ಗೋವಿಂದದಾಸರು ಎಂಬ ದಾಸರು ಹರಿಜನರಿಗೆ ಪದ್ಯಗಳನ್ನು ಹೇಳಿಕೊಟ್ಟು ದಾಸ ದೀಕ್ಷೆಯನ್ನು ನೀಡಿದ ಮಹಾಪುರುಷ. ಆತನ

ಮರಣದನಂತರ ಪರಿಶಿಷ್ಟ ಜಾತಿ ಪಂಗಡಗಳಲ್ಲಿ ದಾಸರಿಗೆ ಪದ್ಯ ಕಲಿಸುವ ಹಾಗೂ ದೀಕ್ಷೆ ಕೊಡುವ ಕೆಲಸವನ್ನು ತಾರಾನಾಥರು ಪೂರೈಸಿದರು.

ರಾಯಚೂರಿನಲ್ಲಿ ಒಂದು ಸಲ ಪ್ಲೇಗು ಕಾಣಿಸಿ ಕೊಂಡಿತ್ತು. ಆಗ ತಾರಾನಾಥರು ವಿದ್ಯಾರ್ಥಿಗಳ ಸೇವಾಪಡೆಯೊಂದನ್ನು ಕಟ್ಟಿ ದೀನದಲಿತರ, ಬಡ ರೋಗಿಗಳ ಸೇವೆ ಮಾಡಿದರು. ಕ್ರಿ.ಶ. ೧೯೨೦ ರಲ್ಲಿ ಭಾರತದ ಸ್ವಾತಂತ್ರ್ಯದ ಸಂಗ್ರಾಮದ ಇತಿಹಾಸದಲ್ಲಿ ಒಂದು ಪರ್ವಕಾಲ. ಬ್ರಿಟಿಷ್ ಸರ್ಕಾರವು ಮಾಂಟೋಫೇಮ್ಸ್ ಬೋರ್ಡರ ಸುಧಾರಣೆಗಳನ್ನು ವಿರೋಧಿಸಿ ದೇಶದ ಮೂಲೆಮೂಲೆಯಲ್ಲಿ ಆಂದೋಳನಗಳು ನಡೆದ ಕಾಲ. ನಿಜಾಮರ ಸಂಸ್ಥಾನದಲ್ಲಿಯೂ ಇದರ ಗಾಳಿಬೀಸಿ ವಾತಾವರಣದಲ್ಲಿ ಕ್ರಾಂತಿಯ ಮುನ್ಸೂಚನೆಯನ್ನು ತೋರಿದ ಕಾಲ. ಇಂತಹ ಅವಕಾಶಗಳನ್ನು ಪಡೆದು ತಾರಾನಾಥರು ತಮ್ಮ ಮಿತ್ರರಾದ ಕೆ. ರಾಘವೇಂದ್ರ ರಾವ್, ವಿಶ್ವನಾಥಂ, ರಾಮಾನಾಥರಾವ, ಫೈಸಲೆ ಮುಂತಾದ ಯುವಕರೊಂದಿಗೆ ನಿಜಾಮರಿಗೆ ಬೆದರಿಕೆಯ ಪತ್ರಗಳನ್ನು ಬರೆಯತೊಡಗಿದರು. ತಾರಾನಾಥರಂತೂ ಮೊದಲಿನಿಂದಲೂ ನಿಜಾಮರ ಮತ್ತು ಅವರ ಆಡಳಿತದ ವಿರುದ್ಧ ಬಂಡಾಯವನ್ನು ಹೂಡಿದವರು. ಆರಂಭದಿಂದಲೂ ಅವರು ನಿಜಾಮರಿಗೆ ನಜರಾಣಿ ಕೊಡುವುದನ್ನು ಕಟುವಾಗಿ ವಿರೋಧಿಸಿದವರು. ಅಲ್ಲದೇ ಹಿಂದು ಪತ್ರಿಕೆಯಲ್ಲಿ ನಿಜಾಮರ ದಬ್ಬಾಳಿಕೆಯನ್ನು ಕ್ರೂರವಾಗಿ ಖಂಡಿಸಿ ಒಂದು ಉಗ್ರ ಲೇಖನವನ್ನು ಬರೆದವರು. ನಿಜಾಮರನ್ನು ಜಲಿಯನ ವಾಲಾಬಾಗ್ ಹತ್ಯಾಕಾಂಡದ ಜನಕ ಜನರಲ್ ಡಯರ್ ಸಾಹೇಬನಿಗೆ ಹೋಲಿಸಿ ನಿಜಾಮರ ಪಾಶವೀ ಕೃತ್ಯಗಳನ್ನು ಕುರಿತು ಉಗ್ರಲೇಖನವೊಂದನ್ನು ಬರೆದರು. ಶೀರ್ಷಿಕೆ "ಇಂಡಿಯನ್ ಡಯರ್" ಎಂದಿತ್ತು. ಅದೇ ಲೇಖನ ಅದನ್ನು ತಮ್ಮ ಪ್ರಿಯ ಶಿಷ್ಯನಾದ ಹಾಗೂ ಸಹೋದ್ಯೋಗಿಯಾದ ರಾಜಾ ಬಹುದ್ದೂರ್ ಆರ್. ಆನಂದ್ ರವರ ಹೆಸರಿನಲ್ಲಿ ಪ್ರಕಟಿಸಿದ್ದರು. ಆಗ ನಿಜಾಮರು ತತ್‌ಕ್ಷಣವೇ ಕಿಡಿಕಿಡಿಯಾಗಿ ರಾಜಾ ಬಹದ್ದೂರರನ್ನು ಅಂಡಮಾನ್ ದ್ವೀಪದ ಜೈಲಿನಲ್ಲಿಟ್ಟರು. ಆನಂತರ ತಾರಾನಾಥರು ಇಂತಹ ರಾಜದ್ರೋಹದ ಕಾರ್ಯಗಳಿಗೆ ಕಾರಣಕರ್ತರೆಂದು ತಿಳಿದು ಅವರನ್ನು ಜೀವನಪರ್ಯಂತ ಸೆರೆಯಲ್ಲಿಡಬೇಕೆಂದು ನಿಜಾಮರು ಫರ್ಮಾನ್ ಹೊರಡಿಸಲು ಯೋಚಿಸತೊಡಗಿದರು. ಅಷ್ಟು ಹೊತ್ತಿಗಾಗಲೇ ಹೈದರಾಬಾದ್ ಸಂಸ್ಥಾನದ ತುಂಬ ಸ್ವಾತಂತ್ರ್ಯದ ಗಾಳಿಯು ಮಾರ್ದನಿಗೊಳ್ಳುತ್ತಿತ್ತು. ಈ ಸಂದರ್ಭದಲ್ಲಿ ನಿಜಾಮರು ತಾರಾನಾಥರನ್ನು ಕೊನೆಯಪಕ್ಷ ಗಡಿಪಾರ ಮಾಡುವ ಹುನ್ನಾರದಲ್ಲಿದ್ದರು. ಆ ಪೂರ್ವದಲ್ಲಿಯೇ ತುಂಗಭದ್ರೆಯಲ್ಲಿಯೇ ನೆಲೆಸಲು ಅವರ ಆತ್ಮೀಯರೆಲ್ಲ ಅವರನ್ನು ಕಳುಹಿಸಿಕೊಟ್ಟರು. ತುಂಗಭದ್ರೆಯಲ್ಲಿ ನೆಲಸಿದ ಕೆಲವೇ ದಿನಗಳಲ್ಲಿ "ಪ್ರೇಮಾಯತನ" ಎಂಬ ಆಶ್ರಮವನ್ನು ತಾರಾನಾಥರು ಸ್ಥಾಪಿಸಿದರು. ಆಶ್ರಮದಲ್ಲಿ ಆಯುರ್ವೇದ ವಿದ್ಯೆಯನ್ನು ತಿಳಿಸಿಕೊಡಲು ಮೂರು ವರ್ಷದ ಒಂದು ಶಿಕ್ಷಣ ಕ್ರಮವನ್ನು ಜಾರಿಗೆ ತಂದರು. ವಿದ್ಯಾರ್ಥಿಗಳಿಗೆ ಉಚಿತವಾಗಿ ವಸತಿ ಸೌಕರ್ಯವನ್ನು ಒದಗಿಸಿದರು. ಅವರು ಕೇವಲ ರಾಜಕಾರಣಿಯಾಗಿರದೇ ರಾಜಕೀಯವನ್ನೂ ಬಲ್ಲವರಾಗಿದ್ದರು. ಸಂಗೀತ, ಸಾಹಿತ್ಯಬಲ್ಲ ಪಂಡಿತರೂ ಆಗಿದ್ದರು. ಆಗ ತುಂಗಭದ್ರಾ ಎಂದರೆ ಈಗಿನ ಮಂತ್ರಾ ಲಯಂ ರೋಡ್ ಎಂಬ ರೈಲ್ವೇ ನಿಲ್ದಾಣವಿರುವ ಸ್ಥಳ. ತಾರಾನಾಥರು ದೇಶದ ವಿಮೋಚನೆಗೂ ಗಾಂಧೀಜಿಯವರ ವಿಧಾಯಕ ಕಾರ್ಯಕ್ರಮಗಳಿಗೂ ಬೆಂಬಲ ನೀಡುತ್ತಿರುವಾಗಲೇ ಅವರ ಅವಿರತ ಶ್ರಮದಿಂದಾಗಿ ಆರೋಗ್ಯ ತತ್ತರಿಸಿ ಅವರು ಪ್ರಕೃತಿಯ ಮಹಾಚೈತನ್ಯದಲ್ಲಿ ಲೀನರಾಗಬೇಕಾಯಿತು. ಅವರು ಕಟ್ಟಿದ ಹಮ್ದರ್ದ್ ಶಾಲೆ ಈಗ ಹೆಮ್ಮರವಾಗಿದೆ. ಶಾಖಾನುಶಾಖೆ ಗಳಿಂದ ಹಚ್ಚ ಹಸುರಾಗಿದೆ. ಹೂವು, ಕಾಯಿ, ಹಣ್ಣು ಕೊಡುತ್ತಲಿವೆ. ಆ ಹಮ್ದರ್ದ್ ಶಾಲೆ **"ತಾರಾನಾಥ ಶಿಕ್ಷಣ ಸಂಸ್ಥೆ"** ಎಂಬ ಹೆಸರಿನ ಹೆಮ್ಮರದ ನೆರಳು. ಆ ನೆರಳಿನಲ್ಲಿ ಹಮ್ದರ್ದ್ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಬಿ. ಆರ್. ಬಿ. ವಾಣಿಜ್ಯ ಮಹಾವಿದ್ಯಾಲಯ., ಎಸ್.ಎಸ್.ಆರ್.ಜಿ. ಮಹಿಳಾ ಮಹಾವಿದ್ಯಾಲಯ, ಎಲ್.ವಿ.ಡಿ. ಮಹಾವಿದ್ಯಾಲಯ, ಎಸ್.ಆರ್.ಪಿ.ಎಸ್. ಪಿ.ಯು ವಿದ್ಯಾಲಯ, ಹಮದರ್ದ್ ಪದವಿ ಪೂರ್ವ ವಿದ್ಯಾಲಯ, ಎಸ್.ಸಿ.ಎ.ಬಿ. ಕಾನೂನು ಮಹಾವಿದ್ಯಾಲಯ, ಟಿ.ಎಸ್.ಎಸ್ ಬಾಲಕಿಯರ ಪ್ರೌಢಶಾಲೆ, ಹೀಗೆ ಶಿಕ್ಷಣ ಕ್ಷೇತ್ರದ ವಿವಿಧ ಶಾಲಾ ಕಾಲೇಜುಗಳು ನಳನಳಿಸಿವೆ. ಈ ಸಂಸ್ಥೆಯಲ್ಲಿ ಬಡ ವಿದ್ಯಾರ್ಥಿಗಳಿಗೆ ಶಿಷ್ಯವೇತನ, ಅಂಗವಿಕಲರಿಗೆ ಶಿಷ್ಯವೇತನ, ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ನಗದುಹಣ ಬಹುಮಾನ ಅಲ್ಲದೇ ಸಿಬ್ಬಂದಿವರ್ಗದವರನ್ನು ಪ್ರೋತ್ಸಾಹಿಸುವುದಕ್ಕಾಗಿ ಪ್ರಶಸ್ತಿ ಪ್ರದಾನ ಮುಂತಾದ ಕಾರ್ಯಕ್ರಮಗಳು ಉತ್ತೇಜನಕಾರಿಯಾಗಿ ನಡೆದು ಬಂದಿವೆ. ಇದೆಲ್ಲ ಕಾರ್ಯಗಳಿಂದಾಗಿ ಈ ಸಂಸ್ಥೆಗೆ ಉಜ್ವಲ ಭವಿಷ್ಯವಿದೆ ಎನ್ನಬೇಕು.



ಟಿ.ಹೆಚ್.ಎಂ. ಬಸವರಾಜ*

# ಕರ್ನಾಟಕ ಏಕೀಕರಣಕ್ಕೆ ಹೋರಾಡಿದ ನ್ಯಾಯಮೂರ್ತಿ: ಟಿ.ಹೆಚ್.ಎಂ. ಸದಾಶಿವಯ್ಯನವರು

ದಿನಾಂಕ : ೪.೨.೧೯೦೨ ರಂದು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯಲ್ಲಿ ಜ್ಯೋತಿಷ್ಯ ಶಾಸ್ತ್ರಜ್ಞ ಮತ್ತು ಪಂಚಾಂಗ ಕರ್ತ ಟಿ.ಎಚ್.ಎಂ. ಹೊಳೆಬಸವಶಾಸ್ತ್ರಿ ಹಾಗೂ ಚನ್ನಬಸಮ್ಮ ನವರ ಗರ್ಭದಲ್ಲಿ ಸದಾಶಿವಯ್ಯನವರು ಜನಿಸಿದರು. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಹರಪನಹಳ್ಳಿಯಲ್ಲಿ ಮುಗಿಸಿದರು. ಮದ್ರಾಸಿನಲ್ಲಿ ೧೯೨೪ರಲ್ಲಿ ಕ್ರಿಶ್ಚಿಯನ್ ಕಾಲೇಜಿನಿಂದ ಬಿ.ಎಲ್.,ಪದವಿಯನ್ನು ಪಡೆದು ವಕೀಲರಾದರು. ಆಗ ಅವರು ಮದ್ರಾಸಿನ ಮೀಂಟ ರಸ್ತೆಯ **ಅಜ್ಜಿಮಠದಲ್ಲಿ** ಉಳಿದುಕೊಂಡಿದ್ದರು. ಅದೇ ವರ್ಷ ಇಂಗ್ಲೀಷ್‌ನಲ್ಲಿ ಎಂ.ಎ. ಪಡೆದರು. ೧೯೧೪ರಲ್ಲಿ ಹರಪನಹಳ್ಳಿಯಲ್ಲಿ ಮತ್ತು ಬಳ್ಳಾರಿಯಲ್ಲಿ ಇವರ ತಂದೆ ಶಿವಾನಂದ ಮುದ್ರಣಾಲಯವನ್ನು ಸ್ಥಾಪಿಸಿದರು. ತಮ್ಮ ಪಂಚಾಂಗದ ಮುದ್ರಣದ ಜೊತೆಗೆ "ವೀರಶೈವ ಧರ್ಮ ಪ್ರದೀಪಿಕೆ" ಎಂಬ ಪತ್ರಿಕೆಯನ್ನು ಮುದ್ರಿಸಿ ಪ್ರಕಟಿಸುತ್ತಿದ್ದರು ಮತ್ತು ಬಳ್ಳಾರಿಯಲ್ಲಿ **'ನವಸಂದೇಶ' ವಾರಪತ್ರಿಕೆ** ಪ್ರಾರಂಭಿಸಿ. ಕನ್ನಡದ ಕಾರ್ಯಕ್ರಮಗಳನ್ನು ಪ್ರಕಟಿಸುತ್ತಿದ್ದರು. ನಂತರ ಇವರ ಹಿರಿಯ ಸಹೋದರ ಟಿ.ಹೆಚ್.ಎಂ. ಚಂದ್ರಶೇಖರಶಾಸ್ತ್ರಿಗಳು ಸಂಪಾದಕರಾದರು. ಇವರು ಒಳ್ಳೆ ಈಜುಗಾರರು, ನೀರಿನ ಮೇಲೆ ಅನೇಕ ಆಸನಗಳನ್ನು ಹಾಕುತ್ತಿದ್ದರು. ಮತ್ತು ಯೋಗಾಸನಗಳಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಪಡೆದಿದ್ದರು. ಸದಾಶಿವಯ್ಯನವರು ಬಳ್ಳಾರಿಯ ಸುಪ್ರಸಿದ್ಧ ವಕೀಲರಾಗಿದ್ದ **ಶ್ರೀ ಕನಕಾಪುರ ಗುರುರಾಜಾಚಾರ್ಯರ ಹತ್ತಿರ** ೧೯೨೬ರಲ್ಲಿ ಅಣ್ಣ ಷಡಕ್ಷರಯ್ಯನವರೊಂದಿಗೆ ತಮ್ಮ ವಕೀಲ ವೃತ್ತಿ ಜೀವನವನ್ನು ಆರಂಭಿಸಿದರು. ೧೯೨೭ರಲ್ಲಿ ದಾವಣಗೆರೆಯ ಶ್ರೀಮಂತ, ಸುಸಂಸ್ಕೃತ, **ಹನಗವಾಡಿಯ ಮನೆತನದ ಸರ್ವಮಂಗಳಮ್ಮ** ನವರ ಜೊತೆಗೆ ಮದುವೆಯಾಯಿತು. **೧೯೨೭ರಲ್ಲಿ ಪ್ರಥಮಬಾರಿಗೆ ಹರಪನಹಳ್ಳಿಯಲ್ಲಿ ಬಸವಜಯಂತಿಯನ್ನು ಪ್ರಾರಂಭಿಸಿದರು.**

ಇಂದಿಗೂ ಹರಪನಹಳ್ಳಿಯಲ್ಲಿ ಬಸವೇಶ್ವರ ಜಯಂತಿಯ ದಿವಸ ರಥೋತ್ಸವ ನಡೆಯುತ್ತದೆ. ಬಳ್ಳಾರಿಯಲ್ಲಿ ೧೯೩೩ರಲ್ಲಿ ಮಲ್ಲಸಜ್ಜನ ವ್ಯಾಯಾಮ ಶಾಲೆ ಸ್ಥಾಪಿಸಿ ಅದರ ಸ್ಥಾಪಕ ಅಧ್ಯಕ್ಷರಾಗಿ ತುಂಬಾ ಶ್ರಮಿಸಿದರು. ಈಗ ಈ ಸಂಸ್ಥೆ ಬಳ್ಳಾರಿಯ ಕ್ರೀಡಾ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿ ಬೆಳೆದು ನಿಂತಿದೆ. **ಬಳ್ಳಾರಿ ವೀರಶೈವ ಹಾಸ್ಟೆಲಿಗೆ** ೧೯೩೩ ರಿಂದ ೩೫ರ ವರಗೆ ವಾರ್ಡನ್ ಆಗಿದ್ದರು. ನಂತರ ವೀರಶೈವ ಶಾಲೆಗೆ ಮೇನೇಜರ್ ಆಗಿ ಸೇವೆ ಸಲ್ಲಿಸಿದರು. ೧೯೩೪ರಲ್ಲಿ **ದಾವಣಗೆರೆಯಲ್ಲಿ ಟಿ.ಎಚ್.ಎಂ. ಅಂಡ್ ಕಂ.,** ತೆಗೆದು ಅದಕ್ಕೆ ಗೆಳೆಯ ಮಾಬಿನ್ ಎಂಬುವರನ್ನು ಮೇನೇಜರ್‌ರಾಗಿ ನೇಮಿಸಿದರು. ನಂತರ ಬಳ್ಳಾರಿಯಲ್ಲಿಯೂ ಸಹಿತ ಟಿ.ಹೆಚ್.ಎಂ. ಅಂಡ್ ಕಂಪನಿಯ ಶಾಖೆ ತೆಗೆದರು. ೨೬.೦೩.೧೯೩೫ ರಂದು ಮದ್ರಾಸ ಹೈಕೋರ್ಟಿನಿಂದ ಜಿಲ್ಲಾ ಮುನ್ಸೀಫ್‌ರಾಗಿ ಆಯ್ಕೆಯಾಗಿ ರಾಜಮಹೇಂದ್ರಿಯಲ್ಲಿ ಜಿಲ್ಲಾ ನ್ಯಾಯಾಧೀಶ ರಾಗಿ ವೃತ್ತಿ ಆರಂಭಿಸಿದರು. ನಂತರ ಅಮರಾಪುರ (ಪೂರ್ವ ಗೋದಾವರಿ), ಬಾಪಟಲಾ, ನೆಲ್ಲರೂರು, ಕರ್ನೂಲುಗಳಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿ ೧೯೪೫ರಲ್ಲಿ **ಗುತ್ತಿಗೆ** ಬಂದರು. **ಗುತ್ತಿಯಲ್ಲಿ ಸದಾಶಿವಯ್ಯನವರು** ನಡೆಸಿದ ಸಾಮಾಜಿಕ, ಸಾಂಸ್ಕೃತಿಕ ಕಾರ್ಯಗಳು ಸ್ಮರಣೀಯವಾಗಿವೆ. ಊರಿನ ಪ್ರಮುಖ ಸ್ಥಳದಲ್ಲಿ ಪಾರ್ಕ್ ನಿರ್ಮಿಸಿ ಅದಕ್ಕೆ **ಅಕ್ಕ ಮಹಾದೇವಿ ಪಾರ್ಕ್** ಎಂದು ಹೆಸರಿಟ್ಟರು. ಇಂದಿಗೂ ಅವರ ಹೆಸರು ಗುತ್ತಿಯಲ್ಲಿ ಅಜರಾಮರವಾಗಿದೆ.

ಗುತ್ತಿಯಲ್ಲಿರುವಾಗಲೇ **'ಅಕ್ಕನ ಹಂಬಲ'** ಎಂಬ ನಾಟಕ ಬರೆದರು ಕುವೆಂಪು ಅವರ **'ನನ್ನ ಗೋಪಾಲ'** ನಾಟಕವನ್ನು ತೆಲುಗಿಗೆ ಅನುವಾದಿಸಿ ಪ್ರಯೋಗಿಸಿದರು. ಆಂಧ್ರಪ್ರದೇಶದಲ್ಲಿ ಈ ನಾಟಕ ಆಗ ತುಂಬಾ ಪ್ರಚಾರ ಪಡೆಯಿತು. ೧೯೪೮–೫೧ರಲ್ಲಿ ಮಂಗಳೂರು ಜಿಲ್ಲಾ ನ್ಯಾಯಾಧೀಶರಾಗಿದ್ದರು. ಆಗ ಸದಾಶಿವಯ್ಯನವರು ಉಡುಪಿ ಮಠದ ಪರವಾಗಿ ನೀಡಿದ ಒಂದು ಐತಿಹಾಸಿಕ ತೀರ್ಪು ಅವರ ವೃತ್ತಿ ಜೀವನದ ಒಂದು ಮೈಲುಗಲ್ಲಾಗಿದೆ. ಪ್ರಾಚೀನ ನ್ಯಾಯಸೂತ್ರಗಳನ್ನು

* ೩೬/೨೫, ವಿದ್ಯಾಗಿರಿ, ಅಗ್ನಿಶಾಮಕದಳದ ಹಿಂಭಾಗ, ಬಳ್ಳಾರಿ – ೫೮೩ ೧೦೩.

ತರ್ಕಬದ್ಧವಾಗಿ ಹೊಸ ದೃಷ್ಟಿಯಿಂದ ವ್ಯಾಖ್ಯಾನಿಸಿ ತಮ್ಮ ತೀರ್ಪಿಗೆ ಬಳಸಿಕೊಂಡದ್ದು ವಿಶೇಷವಾಗಿದೆ. ಅವರ ಸಂಸ್ಕೃತ ಪಾಂಡಿತ್ಯಕ್ಕೆ ಇದು ಉದಾಹರಣೆಯಾಗಿದೆ. ಈ ತೀರ್ಪನ್ನು ಮದ್ರಾಸ್ ಹೈಕೋರ್ಟಿನಲ್ಲಿ ನಂತರ ಸುಪ್ರೀಮ್ ಕೋರ್ಟಿನಲ್ಲಿ ಪ್ರಶ್ನಿಸಲಾಯಿತು. ಎರಡೂ ಕಡೆಯಲ್ಲಿ ಈ ತೀರ್ಪು ಎತ್ತಿ ಹಿಡಿಯಲ್ಪಟ್ಟಿತಲ್ಲದೆ, ಮುಕ್ತಕಂಠದಿಂದ ಹೊಗಳಿಸಿಕೊಂಡಿತು. ಇದು ಸದಾಶಿವಯ್ಯನವರಿಗೆ ನ್ಯಾಯಾಂಗ ಪ್ರಪಂಚದಲ್ಲಿ ಹೆಚ್ಚಿನ ಗೌರವಸ್ಥಾನ ತಂದುಕೊಟ್ಟಿತು. ೧.೧೦.೧೯೫೩ರಂದು ಆಂಧ್ರರಾಜ್ಯ ನಿರ್ಮಾಣವಾಯಿತು. ಆಗ ಕರ್ನೂಲು ರಾಜಧಾನಿಯಾಯಿತು. ಸದಾಶಿವಯ್ಯನವರು ಕರ್ನೂಲಿನ **ಪ್ರಥಮ ಜಿಲ್ಲಾ ನ್ಯಾಯಾಧೀಶರಾಗಿ** ಆಯ್ಕೆಯಾದರು. ಅಂದಿನ ಮುಖ್ಯಮಂತ್ರಿ ಟಿ. ಪ್ರಕಾಶಂ ಅವರಿಗೆ ಸದಾಶಿವಯ್ಯನವರ ಬಗ್ಗೆ ಬಹಳ ವಿಶ್ವಾಸವಿತ್ತು. ಏಕಾಂಗಿಯಾಗಿರುತ್ತಿದ್ದ ಪ್ರಕಾಶಂ ಅವರಿಗೆ ಪ್ರತಿದಿನ ಸದಾಶಿವಯ್ಯನವರ ಮನೆಯಿಂದ ಊಟ ಹೋಗುತ್ತಿತ್ತು. ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದ ಕೋಕಾ ಸುಬ್ಬರಾವ್ ಅವರಿಗೂ ಸಹ ಸದಾಶಿವಯ್ಯನವರ ಮೇಲೆ ವಿಶೇಷ ಅಭಿಮಾನ. ಇದರ ಪ್ರತೀಕವಾಗಿ ಆಂಧ್ರ ಸರ್ಕಾರದವರು ಇವರಿಗೆ "ಧರ್ಮಜ್ಞ ಶೇಖರ" ಎಂಬ ಬಿರುದು ಕೊಟ್ಟು ಗೌರವಿಸಿದ್ದರು. ಆರು ಭಾಷೆಗಳಲ್ಲಿ ಪಾಂಡಿತ್ಯ ಪಡೆದ ಇವರು **"ಪ್ರಾಗಿತಿಹಾಸ ಪ್ರವೀಣ" ಎಂಬ ಬಿರುದೂ** ಸಹ ಪಡೆದಿದ್ದರು.

ಕನ್ನಡಿಗನೊಬ್ಬನನ್ನು ಆಂಧ್ರದ ಹೈಕೋರ್ಟಿನ ನ್ಯಾಯಾಧೀಶರನ್ನಾಗಿ ಆಯ್ಕೆ ಮಾಡಲು ಮುಖ್ಯಮಂತ್ರಿ ಟಿ. ಪ್ರಕಾಶಂ ಹಾಗೂ ಮುಖ್ಯ ನ್ಯಾಯಾಧೀಶ ಕೋಕಾ ಸುಬ್ಬರಾವ್ ಭರವಸೆ ನೀಡಿದ್ದರು. ಆದರೆ ಆಯ್ಕೆ ಮಾಡಲು ಬಹಳಷ್ಟು ವಿರೋಧ ವ್ಯಕ್ತವಾಯಿತು. ಏಕೆಂದರೆ ಸದಾಶಿವಯ್ಯನವರು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕರ್ನಾಟಕ ಏಕೀಕರಣ ಚಳುವಳಿಗೆ ಬೆಂಬಲವಾಗಿದ್ದುದೂ ಕಾರಣವಾಯಿತು. ಪ್ರತಿಭೆ, ಪಾಂಡಿತ್ಯ, ಅರ್ಹತೆ ಎಲ್ಲಾ ಇದ್ದೂ ತಾವೊಬ್ಬ ಹೈಕೋರ್ಟ್ ನ್ಯಾಯಾಧೀಶರಾಗಲಿಲ್ಲವಲ್ಲ ಎಂಬ ಕೊರಗು ಕೊನೆಯ ವರೆಗೂ ಉಳಿದುಕೊಂಡಿತು. ಈ ಮಧ್ಯೆ ಅವರನ್ನು ಕೇಂದ್ರದ **ಕಾನೂನು ಇಲಾಖೆಗೆ ಉಪಕಾರ್ಯದರ್ಶಿಯನ್ನಾಗಿ** ಆಯ್ಕೆ ಮಾಡಲಾಗಿತ್ತು ಆದರೆ ಅವರು ಆ ಹುದ್ದೆಯನ್ನು ಒಪ್ಪಿಕೊಳ್ಳಲಿಲ್ಲ. ಏಕೆಂದರೆ ಅದು **ನ್ಯಾಯಾಧೀಶರ** ಹುದ್ದೆಯಂತೆ ಸ್ವತಂತ್ರವಾಗಿದ್ದಿಲ್ಲ. ಕೊನೆಗೆ ಚುನಾವಣಾ ನ್ಯಾಯ ಮಂಡಳಿ ಮತ್ತು ಸಂಸ್ಥಾನ ನಿವಾರಣಾ ನ್ಯಾಯಮಂಡಳಿಗಳ ಅಧ್ಯಕ್ಷರಾಗಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದರು. ೧೯೫೭ರ ಲೋಕ ಸಭಾ ಚುನಾವಣೆಗೆ ಸಂಬಂಧಿಸಿದ ಒಂದು ನ್ಯಾಯವನ್ನು ಸದಾಶಿವಯ್ಯನವರು ಬಗೆಹರಿಸಬೇಕಾಗಿತ್ತು. ವಾದಿ-ಪ್ರತಿವಾದಿಗಳಿಬ್ಬರೂ ಬಲಾಢ್ಯರು. ಸದಾಶಿವಯ್ಯನವರ ಮೇಲೆ ತಮ್ಮ ತಮ್ಮ ಪ್ರಭಾವ ಬೀರಲು ಯತ್ನಿಸಿದರು. ಪ್ರಾಣಾಪಾಯದ ಬೆದರಿಕೆ ಹಾಕಿದರು. ಸದಾಶಿವಯ್ಯನವರು ಅಂಜದೆ, ಅಳುಕದೆ, ನಿಷ್ಪಕ್ಷಪಾತವಾಗಿ ನ್ಯಾಯ ನಿರ್ಣಯ ನೀಡಿದರು. ಈ ಸಂಗತಿ ಅಂದು ಇಡೀ ಆಂಧ್ರದ ತುಂಬ ಸುದ್ದಿ ಮಾಡಿತು.

ಟಿ.ಎಚ್.ಎಂ. ಸದಾಶಿವಯ್ಯನವರು ೨೮.೨.೧೯೫೯ರಂದು ಸೇವೆಯಿಂದ ನಿವೃತ್ತರಾದರು. ನಂತರ ಅವರು ಬಳ್ಳಾರಿಯಲ್ಲಿ ನೆಲೆಸಿ ವಕೀಲಿವೃತ್ತಿ ಪ್ರಾರಂಭಿಸಿದರು. ಈ ಅವಧಿಯಲ್ಲಿ ನಿರ್ವಹಿಸಿದ ಆದೆಪ್ಪನ ವಿರುದ್ಧದ ಕೊಲೆ ಖಟ್ಲೆ ಕೇಸು ಸದಾಶಿವಯ್ಯನವರ ವಕೀಲ ವೃತ್ತಿಗೆ ಕಳಸವಿಟ್ಟಂಥದು. **ಬಳ್ಳಾರಿ ಆದೆಪ್ಪನು** ಭಯಂಕರ ವ್ಯಕ್ತಿ. ಕೆಲವು ವರ್ಷಗಳ ವರೆಗೆ ಬಳ್ಳಾರಿಯನ್ನು ಅನಭಿಷಕ್ತ ದೊರೆಯಂತೆ ಆಳಿದನು. ಅವನ ದರ್ಪ ದಬ್ಬಾಳಿಕೆಗಳಿಗೆ ಮಿತಿ ಇರಲಿಲ್ಲ. ಅವನು ಒಂದು ಕೊಲೆ ಖಟ್ಲೆಯಲ್ಲಿ ಸಿಕ್ಕಿಕೊಂಡ. ಅವನ ವಿರುದ್ಧ ಕೇಸು ನಡೆಸುವ ತಾಕತ್ತು ಯಾರಿಗೂ ಇರಲಿಲ್ಲ. ಸದಾಶಿವಯ್ಯನವರು ಅದೊಂದು ಆಹ್ವಾನವೆಂಬಂತೆ ಆ ಕೇಸನ್ನು ಸ್ವೀಕರಿಸಿದರು. ಆದೆಪ್ಪನ ಕಡೆಯವರು ಸದಾಶಿವಯ್ಯನವರಿಗೆ ಪ್ರಾಣಾಪಾಯದ ಬೆದರಿಕೆ ಹಾಕಿದರು. ಯಾವುದಕ್ಕೂ ಎದೆಗುಂದದೇ ಕೇಸು ನಡೆಸಿ ಆದೆಪ್ಪ ಅಪರಾಧಿಯೆಂಬುದನ್ನು ಸಿದ್ಧಪಡಿಸಿದರು. ಅವನಿಗೆ ಮರಣದಂಡನೆ ಶಿಕ್ಷೆ ವಿಧಿಸಲ್ಪಟ್ಟಿತು. ಹೈಕೋರ್ಟ್, ಸುಪ್ರೀಮ್ ಕೋರ್ಟ್‌ಗಳಲ್ಲಿಯೂ ಆ ಶಿಕ್ಷೆ ಖಾಯಂ ಆಗಿ ಆದೆಪ್ಪ ಗಲ್ಲನ್ನೇರಿದ. ಬಳ್ಳಾರಿಯ ಜನತೆ ನಿಟ್ಟುಸಿರು ಬಿಟ್ಟು ನಿಶ್ಚಿಂತಿಯಿಂದಿರುವಂತಾಯಿತು.

೧೯೬೦ರಲ್ಲಿ ಡಾ॥ ನಂದಿಮಠ ಮತ್ತು ಎಂ.ಪಿ. ಪಾಟೀಲರು ಸದಾಶಿವಯ್ಯನವರನ್ನು ಭೆಟ್ಟಿಯಾಗಿ ಬಸವೇಶ್ವರರ ಸುದೀರ್ಘ ಚರಿತ್ರೆಯನ್ನು ಇಂಗ್ಲೀಷಿನಲ್ಲಿ ಬರೆದು ಕೊಡಬೇಕೆಂದು ವಿನಂತಿಸಿಕೊಂಡರು. ನಂತರ Lord Basveshwara ಎಂಬ ಬೃಹತ್ ಗ್ರಂಥವನ್ನು ಬರೆದು ಬಿಡುಗಡೆಗೊಳಿಸಿದರು. ೩.೧.೧೯೬೦ರಂದು ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿ, **ಶ್ರೀಶೈಲದಲ್ಲಿ ನಿರುಪಾದಿಸ್ವಾಮಿಗಳು,** ಚೆನ್ನಬಸವ ಸ್ವಾಮಿಗಳು, ಚೆನ್ನಂಜಯ್ಯ, ಹಂಪಮ್ಮ, ಮಲ್ಲಿಕಾರ್ಜುನ ದೇವಸ್ಥಾನದ ಪ್ರಧಾನ ಅರ್ಚಕರು ಮತ್ತು ಮಾರ್ಗದರ್ಶಕರಾಗಿ ಇಬ್ಬರು **ಚೊಂಚರನ್ನು** ಕರೆದುಕೊಂಡು ಕದಳೀವನಕ್ಕೆ ಹೋಗಿ ಅಲ್ಲಿಂದ ಅಕ್ಕನ ಗವಿಯಲ್ಲಿರುವ ಅಕ್ಕನ ಪವಿಧಾವಸ್ಥೆಯ ಮೂರ್ತಿಗಳನ್ನು, ಅಕ್ಕನ ಯೋಗಾನುಷ್ಠಾನ ವೇದಿಕೆಗಳನ್ನು ಕಂಡರು. ತ್ರಿಕೂಟ ಪರ್ವತದ ಮೂಲಕ ಮರಳಿ ಅಲ್ಲಿಂದ ತಂದ ಬಾಳೆಯ ಸಸಿಯನ್ನು ಹಾಗೂ ನಾಗಲಿಂಗ ಪುಷ್ಪದ

ಸಸಿಯನ್ನು ಧಾರವಾಡದ ಮುರುಘಾಮಠದಲ್ಲಿ ನೆಡಲಾಯಿತು. ಇಂದಿಗೂ ಧಾರವಾಡದ ಮುರುಘಾಮಠದಲ್ಲಿ ಅವರು ಹಾಕಿದ ಮರಗಳನ್ನು ಕಾಣಬಹುದು. ೧೯೬೨ರ ಏಪ್ರಿಲ್ ತಿಂಗಳಲ್ಲಿ ಒಂದು ಮಹತ್ವದ ಕೇಸಿನ ಸಲುವಾಗಿ ಕರ್ನೂಲಿಗೆ ಹೋಗಿದ್ದರು. ಬೇಸಿಗೆಯ ಧಗೆ ತಾಳಲಾರದೇ ಅಸ್ವಸ್ಥರಾಗಿ ಬಳ್ಳಾರಿಗೆ ವಾಪಸ್ಸು ಬಂದರು. ೮.೧೨.೧೯೬೩ ರಂದು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯಲ್ಲಿ ಶಿವಾಧೀನರಾದರು. ಶ್ರೇಷ್ಠ ವಿದ್ವಾಂಸರಾಗಿದ್ದ ಟಿ.ಹೆಚ್.ಎಂ. ಸದಾಶಿವಯ್ಯನವರು **"ಶಿವಸುತ"** ಎಂಬ ಕಾವ್ಯನಾಮದಲ್ಲಿ **ಅಕ್ಕನ ಹಂಬಲ,** *ಪೂರ್ವ ಕರ್ನಾಟಕದ ಗಡಿ ನಿರ್ಣಯ, ಆಂಧ್ರ ವೀರಶೈವ ಸಾಹಿತ್ಯ, ಶಿವತತ್ವಸಾರ, ಕಾಕತೀಯರ ಇತಿಹಾಸ* ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ. ಇದಲ್ಲದೆ *ಶ್ರೀಕರಭಾಷ್ಯವು ಮತ್ತು ವೀರಶೈವ ಧರ್ಮವು, ಅಜ್ಞಾತ ದೆಸೆಯಲ್ಲಿರುವ ಆಂಧ್ರ ವೀರಶೈವ ಕವಿಗಳು, ಶಿವದೇವ ಕವಿ, ವೀರಶೈವ ವರ್ಣಾಶ್ರಮ ವಿಚಾರವು, ಭಾರತೀಯ ತತ್ವಶಾಸ್ತ್ರ ಸಂಗ್ರಹ, ವೀರಶೈವ ಧರ್ಮವೂ ಆಂಧ್ರ ವಾಙ್ಮಯವೂ, ಲಿಂಗ,* Message of Basava, Gleenings into Basava, Discourses on Veerashaivism (an unwritten chapter in the religions history of India) ಎಂಬ ಲೇಖನಗಳನ್ನು ಬರೆದು, ವಿದ್ವತ್ಪ್ರಪಂಚಕ್ಕೆ ಪರಿಚಿತರಾ ದರು. *ಜಗಜ್ಯೋತಿ ಬಸವೇಶ್ವರ, ಗಿರಿಜಾ ಕಲ್ಯಾಣ* ಎಂಬ ನಾಟಕ ಗಳನ್ನು ಬರೆದು ಹರಪನಹಳ್ಳಿಯಲ್ಲಿ ಆಡಿಸುತ್ತಿದ್ದರು.

೧೯೨೨ರಲ್ಲಿ ಅಂದರೆ ಅವರ ೨೧ನೇ ವಯಸ್ಸಿನಲ್ಲೇ ಮದ್ರಾಸಿನ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿದ್ದಾಗ ವಿದ್ಯಾರ್ಥಿಗಳ ಏಕೈಕ ಪ್ರತಿನಿಧಿಯಾಗಿ ಆಯ್ಕೆಗೊಂಡು ಅದೇ ವರ್ಷ ಇಂಗ್ಲೇಂಡಿನ ಯುವರಾಜ ಎಡ್ವರ್ಡ್ ಅವರನ್ನು ಸಂದರ್ಶಿಸಿದರು, ಆಗ ಅವರು ಸುವರ್ಣ ಪದಕವನ್ನು ನೀಡಿ ಗೌರವಿಸಿದರು. ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ಆಜೀವ ಸದಸ್ಯರಾಗಿ ಸಂಘದ ಏಳ್ಗೆಗೆ ಸೇವೆ ಸಲ್ಲಿಸಿದ್ದಾರೆ. ಶೆಟ್ರ **ಗುರುಶಾಂತಪ್ಪ ಹೈಸ್ಕೂಲು** ಪ್ರಾರಂಭಿಸಲು ಪರವಾನಿಗೆ ತಂದು ದಾನಿಗಳಾದ ಶೆಟ್ರ ಮರೆಮ್ಮನವರಿಂದ ದೇಣಿಗೆ ಪಡೆದು ಶಾಲೆ ಪ್ರಾರಂಭಿಸುವಲ್ಲಿ ಯಶಸ್ವಿಯಾಗಿದ್ದಾರೆ. ಅನೇಕ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿ ಕನ್ನಡಕ್ಕೆ ವಿಶಿಷ್ಟಸೇವೆ ಯನ್ನು ಸಲ್ಲಿಸಿ ದಾವಣಗೆರೆಯ "ಪ್ರೇಮದ ಬಳ್ಳಿ" ಬಳಗದ ಉದಯಕ್ಕೆ ಕಾರಣರಾದರು, ಖ್ಯಾತ ಸಾಹಿತಿ **ಮಲ್ಲಾಬಾದಿ** ವೀರಭದ್ರಪ್ಪನವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಅನಂತಪುರದ **ಹಂಡೆ ವಂಶದ** ಮೂಲ ಪುರುಷನಾದ ಹಂಡೆ **ಹನುಮಪ್ಪ ನಾಯಕನ** ಬಗ್ಗೆ ಕೃತಿಯನ್ನು ರಚಿಸಿದ್ದಾರೆ. ಈತನು ವಿಜಯನಗರ ಸಾಮ್ರಾಜ್ಯದ ನಿಷ್ಠಾವಂತ ಸಾಮಂತನಾಗಿದ್ದನು.

೨೦.೦೧.೧೯೫೮ರಂದು ಬಳ್ಳಾರಿಯಲ್ಲಿ ನಡೆದ ೪೦ನೇ **ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ** 'ಸಾಹಿತ್ಯ ಬಾಂಧವ್ಯ ಗೋಷ್ಠಿಯ' ಅಧ್ಯಕ್ಷತೆ ವಹಿಸಿ ದಕ್ಷಿಣಾಪಥ ಭಾಷಾ ಸಾರಸ್ವತಗಳ ಪರಸ್ಪರ ಸಂಬಂಧ ಎಂಬ ವಿಷಯದ ಮೇಲೆ ಭಾಷಣ ಮಾಡಿ, ಭಾಷಾಶಾಸ್ತ್ರದ ಅಧ್ಯಯನದ ಮಹತ್ವವನ್ನು ಒತ್ತಿಹೇಳಿದ್ದಾರೆ. ತಮಿಳು ಭಾಷೆ ಸಾಹಿತ್ಯಗಳ ಪ್ರಾಚೀನತೆ ಯನ್ನು ಸಾಧಾರವಾಗಿ ವಿವರಿಸಿ ತಮಿಳು-ಕನ್ನಡ ಸಾಹಿತ್ಯಗಳ ಪರಸ್ಪರ ಸಂಬಂಧವನ್ನು ಉದಾಹರಣೆಗಳ ಮೂಲಕ ತಿಳಿಸಿದ್ದಾರೆ. ಕನ್ನಡದಲ್ಲಿ ವಿಪುಲವಾಗಿ ರಚನೆಗೊಂಡಿ ರುವ ೬೩ ಶರಣರ ಕಥೆಗಳಿಗೆ ಸತ್ಯೇಂದ್ರ ಚೋಳನ ಕಥೆಗೆ ತಮಿಳು ಸಾಹಿತ್ಯ ಆಕರವಾಗಿದೆ, ಹಾಗೇ ಕನ್ನಡದ **'ಪ್ರಭುಲಿಂಗಲೀಲೆ', ವಿವೇಕಚಿಂತಾಮಣಿ** ಮುಂತಾದವು **ತಮಿಳಿಗೆ** ಅನುವಾದ ಗೊಂಡು ಉಭಯ ಭಾಷಾ ಸಾಹಿತ್ಯಗಳ ಸಂಬಂಧವನ್ನು ಹೆಚ್ಚಿಸಿವೆಯೆಂದು ಹೇಳುತ್ತ "ಭಕ್ತಿ ತತ್ವ ರೂಪದಲ್ಲಿ ತಮಿಳರಿಂದ ಪಡೆದ ಸಾಲವನ್ನು ಕನ್ನಡಿಗರು ಶರಣತತ್ವ ರೂಪದಲ್ಲಿ ತೀರಿಸಿದರು" ಎಂದು ಹೇಳಿದ್ದಾರೆ. ಅದರಂತೆಯೇ ತೆಲುಗು-ಕನ್ನಡಗಳ ಸಂಬಂಧವನ್ನು ಪಾಂಡಿತ್ಯ ಪೂರ್ಣವಾಗಿ ವಿವೇಚಿಸಿದ್ದಾರೆ. ಸಾತವಾಹನರ ಕಾಲದಿಂದಲೂ ಅವಿಚ್ಛಿನ್ನವಾಗಿ ನಡೆದು ಬಂದಿರುವ ಎರಡು ನಾಡುಗಳ ಸಾಂಸ್ಕೃತಿಕ ಸಂಬಂಧ ಅತ್ಯಂತ ಮಹತ್ವದ್ದಾಗಿದೆ. "ವೆಂಗಿ ದೇಶ" ವೆಂದು ಹೆಸರಾಗಿದ್ದ ತೆಲುಗು ನಾಡನ್ನು ಆಳಿದ ಪೂರ್ವ ಚಾಲುಕ್ಯರ ಮೂಲ ಪುರುಷನಾದ ವಿಷ್ಣುವರ್ಧನನು ತಿರುಳ್ಗನ್ನಡದ ಬಾದಾಮಿ ಯವನು. ೨ನೇ ಪುಲಕೇಶಿಯ ತಮ್ಮನು. ಇವನ ವಂಶಜರೇ ಆಗಲೇ ಮೊಳಕೆಯೊಡೆಯುತ್ತಿದ್ದ ತೆಲುಗು ಸಾಹಿತ್ಯವನ್ನು ಅಸ್ತಿತ್ವಕ್ಕೆ ತಂದು ಅದಕ್ಕೆ ತನ್ನದೇ ಆದ ಒಂದು ಸ್ವರೂಪವನ್ನು ಕೊಟ್ಟಿರುತ್ತಾರೆ" ಎಂದು ಐತಿಹಾಸಿಕ ಸತ್ಯ ಸಂಗತಿಯನ್ನು ತಿಳಿಸಿದ್ದಾರೆ. ಈ ಭಾಷಣವನ್ನು ಮೆಚ್ಚಿಕೊಂಡು ಅಂದಿನ ಕರ್ನಾಟಕದ ಮುಖ್ಯಮಂತ್ರಿ **ಶ್ರೀ ಎಸ್. ನಿಜಲಿಂಗಪ್ಪನವರು** ೧೧.೨.೧೯೫೮ರಲ್ಲಿ ಅಭಿನಂದನಾ ಪತ್ರ ಬರೆದಿದ್ದಾರೆ. ೧೮.೪.೧೯೫೫ರಂದು ನೆಲ್ಲೂರಿನಲ್ಲಿ ನಡೆದ 'ಆಂಧ್ರ ರಾಷ್ಟ್ರ' ವೀರಶೈವ ಜಂಗಮ ಮಹಾಸಭೆಯ ಎಂಟನೆಯ ಅಧಿವೇಶನದ ಅಧ್ಯಕ್ಷರಾಗಿದ್ದರು. ೨೨.೨.೧೯೬೦ ರಂದು ಶಿವಯೋಗ ಮಂದಿರದಲ್ಲಿ ನಡೆದ ೧೭ನೇಯ ಅಖಿಲ ಭಾರತ ವೀರಶೈವ ಮಹಾಸಭೆಯ ಸಮ್ಮೇಳನದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷರಾಗಿದ್ದರು. ಆಗಸ್ಟ್ ೧೦,೧೧,೧೯೪೬ರಲ್ಲಿ ಆದವಾನಿಯಲ್ಲಿ ನಡೆದ ಬಳ್ಳಾರಿ ಜಿಲ್ಲಾ ೨ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ೧೩.೧.೧೯೩೩ರಂದು ಬಳ್ಳಾರಿಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಟಿ.ಹೆಚ್.ಎಂ.

ಸದಾಶಿವಯ್ಯ ನವರು ಭಾಷಣಮಾಡಿ ಬಳ್ಳಾರಿಯಲ್ಲಿ ಕರ್ನಾಟಕ ಸಂಘದ ಅವಶ್ಯಕತೆ ಇದೆ ಎಂದು ತೀರ್ಮಾನ ಮಾಡಿ ೮.೨.೧೯೩೫ರಂದು ವೀರಶೈವ ಶಾಲೆಯ ಸಭಾಂಗಣ ದಲ್ಲಿ ವಿದ್ವಾನ್ ಪಂಡಿತ ವೈ. ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ **ಕರ್ನಾಟಕ ಸಂಘದ** (ಈಗಿನ ಕನ್ನಡ ಸಾಹಿತ್ಯ ಪರಿಷತ್ತು) ಸ್ಥಾಪನೆ ಮಾಡಿಸಿದರು. ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ವೈ. ಮಹಾಬಲೇಶ್ವರಪ್ಪನವರನ್ನು ಕರ್ನಾಟಕ ಸಂಘದ ಅಧ್ಯಕ್ಷರನ್ನಾಗಿ ಆರಿಸಿದರು. ಎಸ್.ಆರ್. ವಟ್ಟಂ, ಕೆ. ಗುರುರಾಜ ರಾವ್ ಇವರನ್ನು ಉಪಾಧ್ಯಕ್ಷರನ್ನಾಗಿ ಟಿ.ಹೆಚ್.ಎಂ. ಶಿವಯ್ಯ ನವರನ್ನು ಕಾರ್ಯದರ್ಶಿಯಾಗಿ, ಎಸ್. ಗೋವಿಂದಾ ಚಾರ್ಯರನ್ನು ಸಹಕಾರ್ಯದರ್ಶಿಯಾಗಿ ಆರಿಸಲಾಯಿತೆಂದು ಘೋಷಿಸಿದರು. ಕನ್ನಡಿಗರ ಕರ್ತವ್ಯದ ಬಗ್ಗೆ ಮಾತನಾಡುತ್ತಾ ಬಳ್ಳಾರಿ ಜಿಲ್ಲಾ ಸಾಹಿತ್ಯ ಪರಿಷತ್ತನ್ನು ಪೂರ್ವ ಕರ್ನಾಟಕ ಸಾಹಿತ್ಯ ಸಮ್ಮೇಳನವೆಂದು ವಿಶಾಲ ಗೊಳಿಸಿ ಅದರ ಕಾರ್ಯ ವನ್ನು ಅನಂತರಪುರ ಜಿಲ್ಲೆಗೂ ಅನ್ವಯಿಸುವಂತೆ ಮಾಡಬೇಕು; ವಿಲ್ಸನ್ ಸಾಹೇಬರ ಅಭಿಮತದ ಪ್ರಕಾರ ಗುತ್ತಿಯಿಂದ ಅನಂತಪುರದ ದ್ವಾರಾ ದಕ್ಷಿಣಕ್ಕೆ ಒಂದು ಗೆರೆ ಎಳೆದರೆ ಅದರ ಪಶ್ಚಿಮ ಭಾಗವೆಲ್ಲವೂ ಕನ್ನಡ ನಾಡೆಂದು ಈ ಸಮ್ಮೇಳನವು ತಿಳಿದು ತನ್ನ ಕಾರ್ಯಕ್ಷೇತ್ರವನ್ನು ಹಿಗ್ಗಿಸಬೇಕು; ಶ್ರೀಶೈಲದವರೆಗೂ ಕನ್ನಡನಾಡು. ಮಳೆ ಸುರಿದಾಗ ಮಾತ್ರ ಕಪ್ಪೆಗಳು ಒಟಗುಟ್ಟುವಂತೆ ಈ ಸಂಘದ ಕಾರ್ಯಕ್ರಮವಿರ ಬಾರದು. "ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿದ್ದ ಲಿಂಗವು ಘಟಸರ್ಪ ನೋಡಯ್ಯ" ಎಂಬ ನಮ್ಮ ಹಿರಿಯರ ವಚನವು ನಮ್ಮನ್ನು ಬಾಧಿಸುತ್ತಿರಬೇಕು, ಈ ಭಾಗದಲ್ಲಿ "ಎದ್ದರೆ ಕನ್ನಡ, ಕುಳಿತರೆ ಕನ್ನಡ, ನುಡಿದರೆ ಕನ್ನಡ, ಹೃದ್ಯವು ಕನ್ನಡ, ಉದ್ಯಮ ಕನ್ನಡ, ಕನ್ನಡ ಕನ್ನಡ, ನಿದ್ದೆಯು ಕನ್ನಡ, ಕನಸು ಕನ್ನಡ, ನನಸು ಕನ್ನಡ, ಜೀವಿತ ಕನ್ನಡ, ಎಲ್ಲವೂ ಕನ್ನಡವು" ಎಂಬ ಕವಿಯ ಕನಸು ನೆನಪಾಗಬೇಕು. ಅಂದೇ ನಮಗೆ ಶಕ್ತಿ, ಮುಕ್ತಿ ಎಂದು ತಮ್ಮ ಅನೇಕ ಭಾಷಣಗಳಲ್ಲಿ ಪ್ರಸ್ತುತ ಪಡಿಸುತ್ತಿದ್ದರು. ಇದರ ಪ್ರಭಾವದಿಂದಾಗಿ ಟಿ.ಹೆಚ್.ಎಂ. ಸದಾಶಿವಯ್ಯನವರ ಮಾವನವರಾದ ಹೊಸಪೇಟೆಯ ಖ್ಯಾತ ವಕೀಲರಾದ ಎಂ.ಎಚ್.ಎಂ. ನಂಜುಂಡಯ್ಯನವರು ೨೮.೩.೧೯೩೬ರಂದು ಜಿಲ್ಲಾ ಬೋರ್ಡ್ ಸದಸ್ಯರಾಗಿದ್ದಾಗ ಜಿಲ್ಲಾ ಬೋರ್ಡ್ ಮೀಟಿಂಗ್ ನಲ್ಲಿ ಎಲ್ಲಾ ವ್ಯವಹಾರಗಳು ಕನ್ನಡದಲ್ಲೇ ನಡೆಯಬೇಕೆಂದು ಪಟ್ಟು ಹಿಡಿದು ಗೊತ್ತುವಳಿ ಮಂಡಿಸಿದರು. ಆಗ ಅಧ್ಯಕ್ಷರಾಗಿದ್ದ ವೈ. ಮಹಾಬಳೇಶ್ವರಪ್ಪ ನವರು ಅದಕ್ಕೆ ಸಮ್ಮತಿಸಿ ಠರಾವು ಮಾಡಿದರು.



ಕ್ರಿಸ್ತ ಶಕದ ಆದಿಕಾಲದ ತಮಿಳು ಕಾವ್ಯ 'ಶಿಲಪ್ಪದಿಗಾರಮ್' ಗ್ರಂಥದಲ್ಲಿ 'ಕನ್ನಡರ್' ಎಂಬ ಶಬ್ದ ಪ್ರಯೋಗವಿದೆ. ಪಾಂಡ್ಯರ ದೊರೆ ಶಡೆಯನ್ ಪರಾಂತಕ (ಕ್ರಿ.ಶ. ಸು. ೭೭೦)ನ ಪೆಲುಕೊಡಿ ಶಾಸನಗಳಲ್ಲಿ 'ಕರ್ನಾಡಗನ್' ಎಂಬ ಮಾತಿದೆ. ಕ್ರಿ.ಶ. ೬೩೪ರ ಗಂಗರಾಜ ಭೂವಿಕ್ರಮನ ಸಂಸ್ಕೃತ ತಾಮ್ರ ಶಾಸನದಲ್ಲಿ 'ಕನ್ನಾಟಕ' ಎಂಬ ಶಬ್ದ ಪ್ರಯೋಗವಿದೆ. ಅದರ ಮೂಲರೂಪ 'ಕನ್ನಾಡು' ಇರಬಹುದು. ಅದರ ಮೂಲಾರ್ಥ ಮಹಾನಾಡು, ಎತ್ತರವಾದ ನಾಡು ಎಂದಾಗಿದ್ದು ಸಂಸ್ಕೃತದಲ್ಲಿ 'ಮಹಾರಾಷ್ಟ್ರ' ಎಂಬ ರೂಪವಾಗಿರುವುದು ಅಸಂಭವ ಅಲ್ಲ. ಕರ್ನಾಟಕದ ಪ್ರಾಚೀನ ಗಡಿಗಳ ವ್ಯಾಪ್ತಿ ೮-೯ ಶತಮಾನದಲ್ಲಿಯೇ ರಾಷ್ಟ್ರಕೂಟ ನೃಪತುಂಗನ (ಕಾಲದ) ಕವಿರಾಜಮಾರ್ಗದಲ್ಲಿ ಸೂಚಿತವಾಗಿದೆ. ಅದೇ ವಿಷಯ ೧೬ನೆಯ ಶತಮಾನದ ನಂಜುಂಡ ಕವಿಯ ಕುಮಾರ ರಾಮನ ಕಥೆಯಲ್ಲಿ ದೃಢೀಕೃತವಾಗಿದೆ. ಕಿಸುವೊಳಲ್, ಪುಲಿಗೆರೆ, ಕೊಪಣ, ಒಂಕುಂದಗಳನ್ನೊಳಗೊಂಡ ಗೋದಾವರಿ ಮತ್ತು ಕಾವೇರಿ ನದಿಗಳ ಮಧ್ಯಭಾಗ ಕರ್ನಾಟಕವಾಗಿದ್ದಿತು.

– ಕರ್ನಾಟಕ ಸಂಪದ

ಡಾ. ಶ್ರೀಮತಿ ಸಿ.ಆರ್. ಶ್ಯಾಮಲ*
ಡಾ. ಶ್ರೀನಿವಾಸ ಹಾವನೂರ**

# ಡಾ. ಎ.ಸಿ. ಬರ್ನೆಲ್ (ಪ್ರಾರಂಭಿಕ ಪರಿಚಯ)

ಎ. ಸಿ. ಬರ್ನೆಲ್ ತಮ್ಮ ಐ.ಸಿ.ಎಸ್. ಪರೀಕ್ಷೆ ಮುಗಿಸಿ ೧೮೬೦ರಲ್ಲಿ ಭಾರತಕ್ಕೆ ಬಂದರು. ಮದ್ರಾಸ ಪ್ರಾಂತದಲ್ಲಿ ಜಿಲ್ಹಾ ನ್ಯಾಯಾಧೀಶರಾಗಿ ಕೆಲಸ ನಿರ್ವಹಿಸಿದರು. ಹಾಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಕೆಲಕಾಲ ಸೇವೆ ಸಲ್ಲಿಸಿದರು.

**ಸಂಸ್ಕೃತ ವಿದ್ವಾಂಸ**

ಭಾರತಕ್ಕೆ ಬರುವ ಮುಂಚೆಯೇ ಅವರು ಸಂಸ್ಕೃತದಲ್ಲಿ ಪರಿಣತಿ ಹೊಂದಿದ್ದರು. ಇಲ್ಲಿಗೆ ಬಂದ ಮೇಲೆ ಅವರು ವೇದ, ವೇದಾಂಗ, ಸ್ಮೃತಿಗಳು, ವ್ಯಾಕರಣ ಗ್ರಂಥಾದಿಗಳನ್ನು ಅಭ್ಯಸಿಸಿದರು. ಸಾಮವೇದ, ಮನುಸ್ಮೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. *Aindra School of Sanskrit Grammarians* ಎಂಬುದನ್ನು ಪ್ರಕಟಿಸಿದರು. ವ್ಯಾಕರಣ ಶಾಸ್ತ್ರಕ್ಕೆ ತಾತ್ವಿಕ ಭೂಮಿಕೆಯನ್ನು ಒದಗಿಸಿದರೆಂಬ ಖ್ಯಾತಿ ಅವರದು.

ತಂಜಾವೂರಿನಲ್ಲಿ ಪ್ರಾಚೀನ ಸಂಸ್ಕೃತ ಹಸ್ತಪ್ರತಿಗಳಿವೆಯಷ್ಟೆ. ಅವುಗಳ ಸೂಚಿಯನ್ನು ತಯಾರಿಸಲು ಮದ್ರಾಸದ ಗವರ್ನರ್ ಸೂಚಿಸಿದಂತೆ ಅವರು ಪ್ರತಿಯೊಂದು ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸಿದರು.

ವೃತ್ತಿಯಲ್ಲಿ ನ್ಯಾಯಾಧೀಶರಾಗಿದ್ದ ಅವರು ಹಿಂದೂ ಕುಟುಂಬಗಳಲ್ಲಿಯ ಆಸ್ತಿಯ ಒಡೆತನ, ದತ್ತಕವಿಧಿ ಮುಂತಾದವುಗಳನ್ನು ತಿಳಿದಿರಬೇಕಲ್ಲವೆ! ಅದಕ್ಕಾಗಿ ದಕ್ಷಿಣ ಕನ್ನಡ ಜಿಲ್ಲೆಯೂ ಸೇರಿದಂತೆ, ಜನಬಳಕೆಯಲ್ಲಿದ್ದ ಮಿತಾಕ್ಷರ, ವ್ಯವಹಾರ ನಿರ್ಣಯ ಮುಂತಾದ ಗ್ರಂಥಗಳನ್ನು ಅಭ್ಯಾಸ ಮಾಡಿದ್ದಲ್ಲದೆ, ಅವುಗಳನ್ನು ವ್ಯಾಖ್ಯಾನಸಹಿತ ಪ್ರಕಟಿಸಿದರು.

ಅವರ ಸಂಸ್ಕೃತ ಶಾಸ್ತ್ರದ ಪಾಂಡಿತ್ಯವನ್ನು ಗಮನಿಸಿ ಜರ್ಮನಿಯ ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾಲಯವು ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ದಯಪಾಲಿಸಿತು.

ಸಂಸ್ಕೃತವನ್ನುಳಿದು, ಅವರ ಇನ್ನೆರಡು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬೇಕು. ಯೂಲ್ ಎಂಬಾತ, ಇಂಗ್ಲಿಷಿನಲ್ಲಿ ಸೇರಿಕೊಂಡ ದೇಶೀ ಶಬ್ದಗಳ ಕೋಶವನ್ನು ರಚಿಸಿದ. *Hobson-Jobson* ಎಂದದರ ಹೆಸರು; ವಿದ್ವತ್ತಿನ ವಲಯದಲ್ಲಿ ಆಗಿನ ಕಾಲಕ್ಕೆ ಸಾಕಷ್ಟು ಮನ್ನಣೆ ಗಳಿಸಿದ ಕೃತಿ. ಬರ್ನೆಲ್ ಅದರ ಶಬ್ದ ಸಂಗ್ರಹ, ಅರ್ಥ ವಿವರಣೆಗಳಲ್ಲಿ ಸಮಭಾಗಿಯಾಗಿ ಪಾಲ್ಗೊಂಡಿದ್ದರು. ಮತ್ತೊಂದು, ಪೋರ್ಚುಗೀಜರನ್ನು ಕುರಿತದ್ದು. ಅವರು ಪಶ್ಚಿಮ ಭಾರತಕ್ಕೆ ಕಾಲಿಟ್ಟಾಗಿನಿಂದ ಅವರ ಇತಿಹಾಸಕ್ಕೆ ಸಂಬಂಧಿಸಿದ ಮೂಲ ದಾಖಲೆಗಳ ಪಟ್ಟಿಯನ್ನು ತಯಾರಿಸಿದರು. ಅತ್ಯಂತ ಅಪೂರ್ವ ದಾಖಲೆಗಳು. ಆದರೇನು ಕೇವಲ ಹದಿನೈದೇ ಪ್ರತಿಗಳನ್ನು ಮುದ್ರಿಸಿದರಂತೆ.

**ದಕ್ಷಿಣ ಭಾರತದ ಲಿಪಿ**

ಶಾಸನಗಳಲ್ಲಿಯೂ ಅವರಿಗೆ ಸಂಸ್ಕೃತ ಸಮಾನವಾದ ಆಸಕ್ತಿ ಇದ್ದಿತು. ಶಾಸನಗಳನ್ನು ಅದರಂತೆ ತಮಿಳು, ಕನ್ನಡ, ತೆಲುಗು ಭಾಷಾ ಹಸ್ತಪ್ರತಿಗಳನ್ನು ಅರ್ಥ ಮಾಡಿಕೊಳ್ಳಲು ಅವರು ದಕ್ಷಿಣ ಭಾರತದ ಲಿಪಿಗಳನ್ನು ಅಭ್ಯಸಿಸಬೇಕಾಯಿತು. ಶಾಸನಗಳ ಕಾಲವನ್ನು ಕಂಡು ಹಿಡಿಯಲು, ಆ ಶತಮಾನಗಳ ಲಿಪಿಯ ಸ್ವರೂಪವು ಅತ್ಯಂತ ಸಹಾಯಕಾರಿ ಎಂಬುದು ಮನಗಂಡ ಮಾತಾಗಿದೆ. ಸಂಸ್ಕೃತ ಗ್ರಂಥಗಳನ್ನಾದರೂ ದ್ರಾವಿಡ ಭಾಷಾ ಲಿಪಿಗಳಾದ ಗ್ರಂಥ, ವಟ್ಟೆಲುತ್ತುಗಳಲ್ಲಿ ಬರೆಯಲಾಗುತ್ತಿತ್ತು. ಹೀಗಾಗಿ ಕ್ರಿ.ಶ. ೪ನೆಯ ಶತಮಾನದಿಂದ ೧೭ನೆಯ ಶತಮಾನದವರೆಗಿನ ಶಾಸನಗಳನ್ನು ಮತ್ತು ಹಸ್ತಪ್ರತಿಗಳನ್ನು ಕೈಗೆತ್ತಿಕೊಂಡು, ಲಿಪಿಗಳ ವಿಕಾಸವನ್ನು ರೂಪಿಸುವ ಮಹತ್ವಪೂರ್ಣ ಕೆಲಸವನ್ನು ಕೈಗೊಂಡರು. "ಈ ಬಗ್ಗೆ ಖಚಿತವಾದ ನಿಲುಮೆ ತಾಳುವುದು ಸಾಧ್ಯವಿಲ್ಲ. ಅದಕ್ಕಾಗಿ ತಾನು ಅನುಮಾನಕ್ಕೆ (*hypothesis*) ಅಲ್ಲಲ್ಲಿ ಎಡೆಗೊಟ್ಟಿದ್ದೇನೆ" ಎಂದು ಒಪ್ಪಿಕೊಂಡಿದ್ದಾರೆ. ಹೀಗೆ ಶಾಸನ ಗಳ ಮುಖಾಂತರ ಲಿಪಿಯು ಬೆಳೆದು ಬಂದ ಬಗೆಯನ್ನು ತಿಳಿಯುವುದು ಒಂದು ಉದ್ದೇಶವಾದರೆ ಇನ್ನೊಂದು ಲಿಪಿಯ ಮೂಲಕ ಕಾಲವನ್ನು

* ಸೀತಾವಿಲಾಸ, ವಲ್ಲಭಬಾಯಿ ರಸ್ತೆ, ವಿಲ್ಲೆಪಾರ್ಲೆ (ಪ), ಮುಂಬಯಿ – ೪೦೦ ೦೫೭
** ಕರ್ನಾಟಕ ಥಿಯಾಲಜಿಕಲ್ ಕಾಲೇಜ್, ಬಲ್ಮಠ, ಮಂಗಳೂರು

ಕಾಣಿಸದಿದ್ದ ಶಾಸನಗಳ ರಚನಾಕಾಲವನ್ನು ಕಂಡು ಹಿಡಿಯುವುದಾಗಿದೆ.

ಭಾರತೀಯ ಲಿಪಿವಿಕಾಸವನ್ನು ರೂಪಿಸಲು ಈ ಮೊದಲು ಜೇಮ್ಸ್ ಪ್ರಿನ್ಸೆಪ್ ಯತ್ನಿಸಿದ್ದ. ಅವನ ಅನಂತರ ಉತ್ತರ ಕರ್ನಾಟಕದ ಶಾಸನಗಳನ್ನು ಪ್ರಥಮತಃ ಪರಿಶೋಧಿಸಿದ ವಾಲ್ಟರ್ ಎಲಿಯಟ್ ೧೮೩೬ರಲ್ಲಿ ಕನ್ನಡ ಲಿಪಿಯ ಬಗೆಯನ್ನು ಕೈಯಿಂದ ಬರೆದು, ಕಲ್ಲಚ್ಚಿನಲ್ಲಿ ಬಿಳಿ ಹಾಳೆಗಳಾಗಿ ಮುದ್ರಿಸಿದ್ದ. ಬೆಳವಣಿಗೆಯ ದೃಷ್ಟಿಯಿಂದ ಅಲ್ಲ. ಆ ಕೆಲಸವನ್ನು ದಕ್ಷಿಣ ಭಾರತಕ್ಕೆ ಅನ್ವಯಿಸಿ ಮೊದಲಿಗೆ ಬರ್ನೆಲ್ ಮಾಡಿದ್ದಾರೆ.

ಆ ಗ್ರಂಥದ ಹೆಸರು *Elements of South Indian Palaeography.* ಭಾರತದಲ್ಲಿ ಬರಹ ಯಾವಾಗಿನಿಂದ ಆರಂಭವಾಯಿತೆಂಬುದನ್ನು ಮೊದಲಿಗೆ ವಿವೇಚಿಸಲಾಗಿದೆ. ಅವರ ಪ್ರಕಾರ ಅಶೋಕನ ಕಿರುಶಾಸನಗಳು ಕಂಡುಬಂದ ಕಾಲದಿಂದ ಎಂದರೆ ಕ್ರಿ.ಶ. ಪೂ. ೨೫೦ಕ್ಕೆ ಮೊದಲು ನಮ್ಮ ದೇಶದಲ್ಲಿ ಲಿಪಿಯ ಬಳಕೆ ಇರಲಿಲ್ಲ ಎಂದು ಸಾರಿದ್ದಾರೆ. ಅದು ಸರಿಯಲ್ಲವೇನೋ! ಸಕೃದ್ದರ್ಶನಕ್ಕೆ ಲಿಖಿತವಾದದ್ದು ಇರಲಿಕ್ಕಿಲ್ಲ. ಆದರೆ ಲಿಪಿ ಎಂಬುದು ಪ್ರಚುರವಾಗಿತ್ತು. ಮಹಾಭಾರತದ ಕಾಲಕ್ಕೆ ಮಹಿಳೆಯರು ಪ್ರತಿ ಮಾಡುತ್ತಿದ್ದರು ಎಂಬ ಉಲ್ಲೇಖವಿದೆಯಾಗಿ ಕಿಟೆಲ್ ಒಂದೆಡೆ ಹೇಳಿದ್ದಾರೆ.

ಎರಡನೆಯ ಪ್ರಕರಣದಲ್ಲಿ ಕನ್ನಡ-ತೆಲುಗು ಲಿಪಿಗಳು ಪಶ್ಚಿಮ ಹಾಗೂ ಪೂರ್ವ ಚಾಳುಕ್ಯರ ಕಾಲಕ್ಕೆ ಒಂದೇ ಆಗಿದ್ದು ಕ್ರಮೇಣ ಹೇಗೆ ಸ್ವತಂತ್ರವಾಗಿ ಬೆಳೆದುವೆಂಬುದನ್ನು ವಿವರಿಸಿದ್ದಾರೆ. ಅನಂತರದ ಪ್ರಕರಣದಲ್ಲಿ ಗ್ರಂಥ-ತಮಿಳು ಲಿಪಿ, ಅದರಂತೆ ತುಳು-ಮಲೆಯಾಳೀ ಲಿಪಿಗಳ ಆರಂಭದ ಏಕರೂಪತೆ, ಅನಂತರದ ಬೇರ್ಪಡೆ, ಇವನ್ನು ಹಂತಹಂತವಾಗಿ ತೋರಿಸಿದ್ದಾರೆ. ವಟ್ಟೆಳುತ್ತು ಲಿಪಿಯ ಬಗ್ಗೆ ಮೊದಲ ಬಾರಿಗೆ ಸ್ಪಷ್ಟ ವಿವರಣೆ ಬಂದಿದೆ. ಮಧ್ಯಯುಗದ ದ್ರಾವಿಡ ಹಸ್ತಪ್ರತಿಗಳಲ್ಲಿ ಅದು ತುಂಬಾ ಬಳಕೆಯಲ್ಲಿದ್ದಿತು. ತುಳು ಭಾಷೆಯ ಹಾಡುಗಳು, ಕೆಲವು ಶಾಸನಗಳು ಇದೇ ಲಿಪಿಯಲ್ಲಿವೆ. ಈಗ ಅದನ್ನು ಓದಿ ಅರ್ಥ ಮಾಡಿಕೊಳ್ಳುವವರು ಕೆಲವೇ ಜನರಿದ್ದಾರೆ.

ಶಾಸನಗಳಲ್ಲಿ ಅಕ್ಷರಿಕೆಯ ತಪ್ಪುಗಳು ಧಾರಾಳವಾಗಿ ಕಂಡುಬರುತ್ತಿವೆಯಷ್ಟೆ. ಅವನ್ನು 'ತಪ್ಪು' ಎನ್ನಲಾಗದು. ಅವು ಆಗಿನ ಆಡುಮಾತಿನ ಅಪೂರ್ವ ನಿದರ್ಶನಗಳು. ಹಾಗೆಂದು ಬರ್ನೆಲ್ಲರ ಸ್ಪಷ್ಟ ಅಭಿಪ್ರಾಯವಾಗಿದೆ.

ಸಂಸ್ಕೃತದ ಅನೇಕ ಹಸ್ತಪ್ರತಿಗಳು ನಾಗರೀ ಲಿಪಿಯಲ್ಲಿರುವುದು ಸಹಜವೇ. ಆದರೆ ಜಾವಾದಲ್ಲಿಯ ಲಿಪಿಗೂ ದಕ್ಷಿಣ ಭಾರತದ ಲಿಪಿಗಳಿಗೂ ಸಂಬಂಧವಿದೆಯೆಂದು ಬರ್ನೆಲ್ ಹೇಳಿದ್ದು ಗಮನಿಸುವಂತಿದೆ.

ಅಷ್ಟೇ ಮೌಲಿಕವಾದದ್ದು, ಅಂಕಿಗಳ ಬರಹದ ವಿಕಾಸ. ಶಾಸನಗಳ ಶಕ ಮುಂತಾದ ಅಂಕಿಗಳನ್ನು ನಿದರ್ಶಿಸುವ ಹಿಂದಿನವರ ರೀತಿಯನ್ನು ವಿಸ್ತಾರವಾಗಿ ವಿಶದಗೊಳಿಸಿದ್ದಾಗಿದೆ. ಮತ್ತೊಂದೆಂದರೆ ಯಾವುದೇ ಲಿಪಿಯಲ್ಲಿ ಬರೆಯುವ ಸಾಮಗ್ರಿಗಳನ್ನು-ಎಂದರೆ ಮಸಿ, ತಾಡವೋಲೆ, ಕಂಟ ಇವುಗಳ ಸ್ವರೂಪವನ್ನೂ ಕೊಟ್ಟಿದ್ದಾರೆ. ಆಸ್ತಿಯ ಒಡೆತನ, ರಾಜಕೀಯ ಸನದು – ಇವುಗಳ ಬರಹ ಮಧ್ಯಯುಗದಲ್ಲಿ ಹೇಗಿದ್ದಿತು? ಅದನ್ನೂ ಬರ್ನೆಲ್ ಗಮನಿಸಿದ್ದಾರೆ.

ಹೀಗೆ ಬರವಣಿಗೆಗೆ ಸಂಬಂಧಿಸಿದ ಎಲ್ಲ ಅಂಶಗಳನ್ನು ಶೋಧಿಸಿ ಮೊದಲ ಬಾರಿಗೆ ಒದಗಿಸಿದ್ದಾರೆ.

ಈ ಗ್ರಂಥವನ್ನು ೧೮೭೪ರಲ್ಲಿ ಮುದ್ರಿಸಲಾಯಿತು. ನಾಲ್ಕೇ ವರ್ಷಗಳಲ್ಲಿ, ಅಂದರೆ ೧೮೭೮ರಲ್ಲಿ ಅದರ ತಿದ್ದಿದ ಹೊಸ ಆವೃತ್ತಿಯನ್ನು ಹೊರತಂದರು. ಮೂರನೆಯ ಸುಧಾರಿಸಿದ ಆವೃತ್ತಿಯನ್ನೂ ಸಿದ್ಧಗೊಳಿಸುವುದರಲ್ಲಿದ್ದರು. ಆದರೆ ೧೮೮೨ರಲ್ಲಿ ಎಂದರೆ ತಮ್ಮ ೪೨ನೆಯ ವರ್ಷದಲ್ಲಿಯೇ ತೀರಿಕೊಂಡರು. ಅರ್ಥಾತ್ ಸಂಸ್ಕೃತ ಹಾಗೂ ದಕ್ಷಿಣ ಭಾರತ ಭಾಷಾ ವಿಚಾರದಲ್ಲಿಯ ಅವರ ಇಷ್ಟೆಲ್ಲ ಸಾಧನೆ ಇಪ್ಪತ್ತು ವರ್ಷದ್ದು ಮಾತ್ರ. ಅವರ *Palaeography* ಗ್ರಂಥವಂತೂ ಫ್ಲೀಟರ *Dynasties,* ವಾಲ್ಟರ್ ಎಲಿಯಟ್ಟರ ನಾಣ್ಯಶಾಸ್ತ್ರ ಗ್ರಂಥ, ಗುಂಡರ್ಟ, ಕಿಟೆಲ್ಲರ ಮಲೆಯಾಳಿ, ಕನ್ನಡ ಶಬ್ದಕೋಶ ಇವು ಹೇಗೆ ಮೂಲಭೂತದ *(fundamental)* ಆಕರಗ್ರಂಥ ಎನಿಸಿರುವವೋ, ಅದೇ ಸ್ಥಾನ ಈ ಕೃತಿಗಿದೆ.

ಅನಂತರ ಕನ್ನಡ ಲಿಪಿಗೆ ಸಂಬಂಧಿಸಿದ ಕೃತಿಯೊಂದು ೧೯೭೫ರಲ್ಲಿ ಪ್ರಕಟವಾಯಿತು. ಎ.ವಿ. ನರಸಿಂಹಮೂರ್ತಿಯವರು ಕನ್ನಡ ಲಿಪಿಯ ವಿಕಾಸದ ಬಗ್ಗೆ ಸಮರ್ಪಕವೆನಿಸುವ ರೀತಿಯಲ್ಲಿ ಆ ಗ್ರಂಥ ರಚಿಸಿದ್ದಾರೆ. ಅವರು ಬರ್ನೆಲ್ ಗ್ರಂಥವನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಕ್ರಿ.ಶ. ೨೦೦೨ರಲ್ಲಿ ಸಮಗ್ರ ಲಿಪಿಯ ಉಗಮ ಮತ್ತು ವಿಕಾಸದ ಬಗ್ಗೆ ಡಾ. ದೇವರಕೊಂಡಾರೆಡ್ಡಿಯವರು ಉದ್ಗ್ರಂಥವನ್ನು ರಚಿಸಿದ್ದು, ಅದರಲ್ಲಿ ಬರ್ನೆಲ್ಲರ ಈ ಗ್ರಂಥದ ಉಲ್ಲೇಖವಿಲ್ಲ. ಪ್ರಾಸಂಗಿಕವಾಗಿ ಮಾತ್ರ ಒಂದೆರಡು ಕಡೆ ಅವರ ಹೆಸರು ಬಂದಿದೆ.

## ಬಾಸೆಲ್ ಮಿಶನ್ ಸಂಬಂಧ

ಬರ್ನೆಲ್ಲರ ಈ ಗ್ರಂಥದ ಮುದ್ರಣದ ಬಗ್ಗೆ ವಿಶೇಷದ ಸಂಗತಿ ಒಂದಿದೆ. ಅದಕ್ಕೆ ಬೇಕಾದ ವಿಶಿಷ್ಟ ಆಕಾರದ ಮೊಳೆಗಳು ಹಾಗೂ ನಕ್ಷಾ ರೂಪದ ಚಿತ್ರಗಳು – ಇವನ್ನು

ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನವರು ಇವರಿಗಾಗಿ ಜರ್ಮನಿಯಲ್ಲಿ ಎರಕ ಹೊಯ್ಯಿಸಿ ತರಿಸಿದರು. ಬರ್ನೆಲ್ ತಮ್ಮ ಹೆಚ್ಚಿನ ಗ್ರಂಥಗಳನ್ನು ಇಲ್ಲಿಯೇ ಮುದ್ರಿಸಿದ್ದಾರೆ.

೧೮೭೦ನೆಯ ವರ್ಷ ಇರಬಹುದು. ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನ್ಯಾಯಾಧೀಶರಾಗಿ ಬಂದರು. ೩-೪ ವರ್ಷವಂತೂ ಮಂಗಳೂರಲ್ಲಿ ವಾಸವಾಗಿದ್ದರು. ಸ್ವಾಭಾವಿಕ ವಾಗಿಯೇ ಬಾಸೆಲ್ ಮಿಶನ್ನಿನ ಸಂಪರ್ಕ ಬಂದಿತು. ಅವರಿಗೆ ವಿದ್ವತ್ತಿನಲ್ಲಿ ಸರಿಸಮನಾಗಿ ವ್ಯವಹರಿಸುವಲ್ಲಿ ಕಿಟೆಲ್ ಇದ್ದರು. ಅವರಿಬ್ಬರ ಒಡನಾಟ ಕನ್ನಡದ ಮಟ್ಟಿಗೆ ಫಲಪ್ರದವೆನಿಸು ವಂಥಾಗಿತ್ತು. ಕಿಟೆಲ್ ೧೮೭೨ರಲ್ಲಿ ಕೇಶಿರಾಜನ ಶಬ್ದಮಣಿ ದರ್ಪಣ ಎಂಬ ಪ್ರೌಢ ವ್ಯಾಕರಣವನ್ನು ಸಂಪಾದಿಸಿದ್ದರು. ಅದು ಪ್ರಕಟವಾದ ಮೇಲೆ ಬರ್ನೆಲ್ ಅವರಿಗೆ ಈ ವ್ಯಾಕರಣ ಗ್ರಂಥದ ಬೇರೊಂದು ಹಸ್ತಪ್ರತಿ ದೊರೆತಾಗ, ಅದನ್ನು ಕಿಟೆಲ ರಿಗೆ ಒದಗಿಸಿದರಂತೆ. ಅದರ ಪ್ರಯೋಜನ ಪಡೆದು ಕಿಟೆಲ್ ಆ ಕೂಡಲೇ ತಿದ್ದುಪಡಿಗಳನ್ನು ಮಾಡಿಕೊಂಡು ಎರಡನೇ ಆವೃತ್ತಿಯನ್ನು ತಂದರು. ಕಿಟೆಲ್ ರಚಿಸಿದ 'ಯಜ್ಞತಂತ್ರ ಸುಧಾನಿಧಿ' ಗ್ರಂಥವನ್ನು ಬರ್ನೆಲ್ ಇಂಡಿಯನ್ ಎಂಟಿಕ್ವೆರಿ ಪತ್ರಿಕೆಯಲ್ಲಿ ಸೊಗಸಾಗಿ ವಿಮರ್ಶಿಸಿದ್ದಾರೆ. ಇತ್ತ ಬರ್ನೆಲ್ಲರ ಗ್ರಂಥದ ರಚನೆಯಲ್ಲಿ ಕಿಟೆಲರು ನೆರವಾಗಿದ್ದಾರೆ. ಬರ್ನೆಲ್ ಅದನ್ನು ಕೃತಜ್ಞತಾಪೂರ್ವಕವಾಗಿ ನೆನೆದಿದ್ದಾರೆ.

ಬರ್ನೆಲ್ ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಊರುಗಳಿಗೆ ಹೋದದ್ದರ ಪ್ರಸ್ತಾಪಗಳಿವೆ. ಅವರಿಗೆ ಶಬ್ದಮಣಿದರ್ಪಣದ ಹಸ್ತಪ್ರತಿ ದೊರಕಿದ್ದು ಮೂಡಬಿದಿರೆಯಲ್ಲಿ. ಕಾರ್ಕಳಕ್ಕೆ ಹೋದಾಗ ಅಲ್ಲಿಯ ಗೊಮ್ಮಟೇಶ್ವರನ ಮೂರ್ತಿಯನ್ನು ಪರಿಶೀಲಿಸಿ ಆ ಕುರಿತು ಇಂಡಿಯನ್ ಎಂಟಿಕ್ವೆರಿಯ ಡಿಸೆಂಬರ್ ೧೮೭೩ರ ಸಂಚಿಕೆಯಲ್ಲಿ ವಿವರಣೆ ನೀಡಿದ್ದಾರೆ. ತೀರ್ಥಂಕರರಲ್ಲದೆ ಬೇರೆ ಜೈನ ಯತಿಗಳ ಮೂರ್ತಿಗಳು ಇಷ್ಟು ಬೃಹತ್ ಆಕಾರದವು ಏಕಿವೆ ಎಂಬುದಕ್ಕೆ ಕಾರಣ ಕೊಟ್ಟಿದ್ದಾರೆ. ಬಾಹುಬಲಿ ಮುಂತಾದವರಿದ್ದ ತೀರಾ ಹಿಂದಿನ ಕಾಲದಲ್ಲಿ ಅವರ ಆಕೃತಿ ಅ-ಮಾನುಷ ಎನಿಸುವಷ್ಟು ದೊಡ್ಡದಿತ್ತು ಎಂದಿದ್ದಾರೆ.

**ಭೂತಾರಾಧನೆ**

ಕೊನೆಯದಾಗಿ ಹೇಳುತ್ತಿದ್ದರೂ ಬರ್ನೆಲ್ ಶೋಧಿಸಿದ ಭೂತಾರಾಧನೆ ಹಾಗೂ ಅದಕ್ಕೆ ಸಂಬಂಧಿಸಿದ ಪಾಡ್ದನಗಳು ನಮಗೆ ಹೆಚ್ಚು ಪ್ರಸ್ತುತವಾಗಿವೆ. ಭೂತಾರಾಧನೆಯು ದಕ್ಷಿಣ ಕನ್ನಡ ಜಿಲ್ಲೆ ಹಾಗೂ ನೆರೆಯ ಪ್ರದೇಶಗಳಲ್ಲಿ ಬ್ರಾಹ್ಮಣೇತರ ಮತ್ತು ಪರಿಶಿಷ್ಟ ವರ್ಗದ ಜನರಲ್ಲಿ ಇಂದಿಗೂ ಪ್ರಚಲಿತ ವಾಗಿದೆ. ಮಡಿದು ಹೋದ ಕೆಲವರ ಆತ್ಮಗಳು ಭೂಮಿಯಲ್ಲಿ ಸಂಚರಿಸುತ್ತಿದ್ದು ಅವುಗಳನ್ನು ಕೋಲ, ನೇಮ ಮುಂತಾಗಿ ವಿವಿಧ ಬಗೆಯಲ್ಲಿ ಆರಾಧಿಸುತ್ತಾರೆ. ಕೆಲವುಗಳ ಆರಾಧನೆ ವರ್ಷಕ್ಕೊಮ್ಮೆ ಆದರೆ, ಮನೆತನವೊಂದರ ಖಾಸಾ ಭೂತದ ಆರಾಧನೆ ೧೦-೨೦ ವರ್ಷಕ್ಕೊಮ್ಮೆ ನಡೆಯುತ್ತದೆ.

ಮಂಗಳೂರಲ್ಲಿ ಜಿಲ್ಹಾ ನ್ಯಾಯಾಧೀಶರಿದ್ದಾಗ ಬರ್ನೆಲ್ ಬಾಸೆಲ್ ಮಿಶನ್ನಿನ ಹೆಸ್ಸೆ ಎಂಬ ಮಿಶನರಿಯೊಡನೆ ಅಂಥ ದೊಂದನ್ನು ವೀಕ್ಷಿಸಿ ಬಂದರು. ದೂಮಪ್ಪ ಎಂಬ ಬಿಲ್ಲವನ ಮನೆಯಲ್ಲಿ ನಾಲ್ಕು ದಿನಗಳವರೆಗೆ ನಡೆದ ಆ ಸಮಾರಂಭದಲ್ಲಿ ಪೂರ್ಣವಾಗಿ ಪಾಲುಗೊಂಡಿದ್ದರು. ಆರಾಧನೆಯ ಸ್ಥಳವನ್ನು ಸಜ್ಜುಗೊಳಿಸುವುದು, ಪೂಜಾ ವಿಧಾನ, ಪಂಬದ ಎಂಬ ಪೂಜಾರಿಯು ಕುಣಿಯುವುದು ಮತ್ತು ತುಳು ಹಾಡುಗಳನ್ನು ಹೇಳುವುದು- ಇಂಥ ಅನೇಕ ಅಜ್ಞಾತವಾಗಿದ್ದ ವಿಷಯಗಳನ್ನು ಬರ್ನೆಲ್ ಅಧಿಕೃತವಾಗಿ ದಾಖಲಿಸಿದ್ದಾರೆ. ಒಟ್ಟು ೨೯ ಪಾಡ್ದನ ಗಳನ್ನು ದೊರಕಿಸಿದ್ದು, ಅವುಗಳಲ್ಲಿ ಕೆಲವು ಬಾಸೆಲ್ ಮಿಶನ್ನಿನ ಮೊಗ್ಲಿಂಗ್ ಈ ಮುನ್ನ ಸಂಗ್ರಹಿಸಿದ್ದರು. ಕೆಲವು ಓರ್ವ ಕುರುಡ ಪಂಬದನಿಂದ ಹೇಳಿಸಿ ಬರೆದುಕೊಂಡವುಗಳು. ಇನ್ನೂ ಕೆಲವನ್ನು ಬರ್ನೆಲ್ ಜನ ಕಳುಹಿಸಿ ಬರೆಯಿಸಿ ತಂದವುಗಳು. ಇದೇ ಕಾಲಕ್ಕೆ ಮೆನರ್ ಎಂಬ ಮಿಶನರಿಯೂ ಕೆಲವು ತುಳು ಪಾಡ್ದನಗಳನ್ನು ಸಂಗ್ರಹಿಸಿ ೧೮೭೦ರಲ್ಲಿ ಪ್ರಕಟಿಸಿದ್ದನ್ನು ಕಾಣಿಸಬೇಕು.

ಆದರೆ ಬರ್ನೆಲರ ಕೆಲಸ ತುಂಬಾ ವಿಸ್ತಾರವಾದದ್ದು. ಅವರು ಕೊಟ್ಟಿರುವ ಭೂತಾರಾಧನೆಯ ಪರಿಚಯ ಮತ್ತು ಆ ಪಾಡ್ದನಗಳು ೬೫೦ ಪುಟಗಳ ಟಿಪ್ಪಣಿ ರೂಪದಲ್ಲಿ ಇದ್ದುವು. ಪ್ರಕಟ ಮಾಡಿರಲಿಲ್ಲ. ಅವರು ಮರಣ ಹೊಂದಿದ ಮೇಲೆ, ೧೯೦೩ರಷ್ಟು ತಡವಾಗಿ, ಆರ್.ಸಿ. ಟೆಂಪಲ್ ಎಂಬವರು ಆ ಟಿಪ್ಪಣಿ ಮತ್ತು ಹಾಡುಗಳನ್ನು ವ್ಯವಸ್ಥಿತವಾಗಿ ಸಂಪಾದಿಸಿ ಇಂಡಿಯನ್ ಎಂಟಿಕ್ವೆರಿ ಪತ್ರಿಕೆಯಲ್ಲಿ ಪ್ರಕಟಿಸಿ ದ್ದಾರೆ. ಈ ಲೇಖನ ಆಕರ ಸ್ವರೂಪದ್ದು ಮತ್ತು ಐತಿಹಾಸಿಕ ಮಹತ್ವದ್ದು. ಆದ್ದರಿಂದ ಇಂದಿಗೂ ದಕ್ಷಿಣ ಕನ್ನಡದ ವಿದ್ವಾಂಸರು ತುಳುವ ಸಂಸ್ಕೃತಿಯ ಅಭ್ಯಾಸದಲ್ಲಿ ಬರ್ನೆಲ್ ಅವರ ಈ ಕಾರ್ಯವನ್ನು ತಪ್ಪದೇ ಉಲ್ಲೇಖಿಸುತ್ತಾರೆ.



ಡಾ. ಟಿ.ವಿ. ಅಡಿವೇಶ*

# ಉತ್ತರ ಕರ್ನಾಟಕದಲ್ಲಿ ಉತ್ಸವಗಳು ಮತ್ತು ರಾಷ್ಟ್ರೀಯತೆ (೧೯೦೫-೧೯೧೧)

ಹಿನ್ನೆಲೆ : ಬಂಗಾಲವು ೧೬ನೇ ಅಕ್ಟೋಬರ, ೧೯೦೫ರಂದು ಅಂದಿನ ವೈಸ್‌ರಾಯ್ ಜನರಲ್‌ನಾದ ಲಾರ್ಡ್ ಕರ್ಜನ್ನನಿಂದ ಆಡಳಿತಾತ್ಮಕ ಕಾರಣಗಳ ಹಿನ್ನೆಲೆಯಲ್ಲಿ (ವಾಸ್ತವಿಕವಾಗಿ ಹಿಂದೂ-ಮುಸ್ಲೀಂ ಐಕ್ಯತೆಯನ್ನು ಮುರಿಯುವ ಹುನ್ನಾರವಾಗಿದ್ದು), ವಿಭಜಿಸಲ್ಪಟ್ಟಿತು. ಈ ಘಟನೆಯು ಬಂಗಾಳದ ನಾಯಕರಲ್ಲಿ ಬ್ರಿಟೀಷ್ ವಿರೋಧಿ ಅಲೆಯನ್ನೆಬ್ಬಿಸಿ, ಅದು ವಂಗ-ಭಂಗ ಚಳುವಳಿಯಾಗಿ ಪರಿಣಮಿಸಿತು. ಬಂಗಾಲದ ವಿಭಜನೆಯು ಬಂಗಾಲಿಗಳ ಆಶೋತ್ತರಗಳಿಗೆದುರಾಗಿ, ಅವರ ಜನತಾ ಪ್ರತಿಭಟನೆಗಳಿಗೆ ವಿರೋಧವಾಗಿತ್ತು. ಈ ಚಳುವಳಿಯ ಮಹೋನ್ನತ ಧ್ಯೇಯಗಳಾದ ಸ್ವದೇಶಿ ಕಾರ್ಯಕ್ರಮ, ವಿದೇಶಿ ವಸ್ತುಗಳ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯದ ಬೇಡಿಕೆಗಳು ದೇಶದ ಮೂಲೆ-ಮೂಲೆಗಳನ್ನು ತಲುಪಿ ಸ್ವದೇಶಿ ಚಳುವಳಿಯೆಂದೇ ಖ್ಯಾತವಾಗಿದೆ.

ಸ್ವದೇಶಿ ಚಳುವಳಿಯು ವಿಭಿನ್ನ ಆಯಾಮಗಳನ್ನೊಂದಿದ್ದು, ಅದರ ತತ್ವಗಳು ಜನತೆಯ ತ್ಯಾಗ ಮತ್ತು ಸಂಚಲನೆಯನ್ನು, ಹೋರಾಟದ ಪ್ರವೃತ್ತಿಯನ್ನು ಸ್ವಾತಂತ್ರ್ಯ ಹೋರಾಟದ ವಿವಿಧ ಹಂತಗಳಲ್ಲಿ ಜೀವಂತವಾಗಿರಿಸಿ ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಅನುಕರಣೀಯವಾಗಿದೆ. ಸ್ವದೇಶಿ ಚಳುವಳಿಯ ಕಾಲವು ನವ ರಾಷ್ಟ್ರೀಯತೆಯ ಕಾಲವಾಗಿದ್ದು, ತೀವ್ರಗಾಮಿ ನಾಯಕರಾದ ಲೋಕಮಾನ್ಯ ಬಾಲಗಂಗಾಧರ ತಿಲಕ, ಬಿಪಿನ್ ಚಂದ್ರಪಾಲ, ಲಾಲ ಲಜಪತರಾಯ ಅರವಿಂದ ಘೋಷ್ ಮುಂತಾದ ನಾಯಕರ ಪ್ರಾಬಲ್ಯ ಮತ್ತು ಪ್ರಭಾವಕ್ಕೊಳಗಾಗಿದೆ. ಈ ಕಾಲದಲ್ಲಿ ಜನತಾ ಚಳುವಳಿಯ ಅನೇಕ ತಂತ್ರ-ಕೌಶಲ್ಯಗಳು ಜನರ ಮಟ್ಟವನ್ನು ತಲುಪಿ, ಜನಸಾಮಾನ್ಯರನ್ನು ಪ್ರೇರೇಪಿಸಿದವು. ಸ್ವದೇಶಿ ವಸ್ತುಗಳ ಪ್ರಚಾರ, ವಿದೇಶಿ ವಸುಗಳ ಬಹಿಷ್ಕಾರ, ರಾಷ್ಟ್ರೀಯ ಶಾಲೆಗಳ ಸ್ಥಾಪನೆ, ಸಾರ್ವಜನಿಕ ಸಭೆ ಮತ್ತು ಮೆರವಣಿಗೆಗಳ ಸಂಘಟನೆ, ಉಪನ್ಯಾಸ ಕಾರ್ಯಕ್ರಮಗಳು, ಮತ್ತು ರಾಷ್ಟ್ರೀಯ ಕೈಗಾರಿಕೆ ಮತ್ತು ಶಿಕ್ಷಣ ಸಂಸ್ಥೆಗಳಲ್ಲಿ ಸ್ವಾವಲಂಬನೆ ಅಥವಾ 'ಆತ್ಮಶಕ್ತಿ'ಯನ್ನು ಪ್ರತಿಷ್ಠಾಪಿಸುವುದು ಸ್ವದೇಶಿಯ ಬಹುಮುಖ್ಯ ಆಯಾಮಗಳಾಗಿವೆ. ಇವುಗಳಲ್ಲಿ ಸಾಂಪ್ರದಾಯಕ ಉತ್ಸವ, ಮೇಳ ಮತ್ತು ಜಾತ್ರೆಗಳ ಕ್ರಿಯಾತ್ಮಕ ಬಳಕೆಯೂ ಬಹುಮುಖ್ಯ ಆಯಾಮವಾಗಿದೆ.[೧]

**ಉತ್ಸವ ಸಮಿತಿಗಳು :** ಮಹಾರಾಷ್ಟ್ರ ಮತ್ತು ಬಂಗಾಲಗಳಲ್ಲಿರುವಂತೆ ಉತ್ತರ ಕರ್ನಾಟಕ ಭಾಗದಲ್ಲಿಯೂ ಸ್ವದೇಶೀ ಚಳುವಳಿಯ ಹಿನ್ನೆಲೆಯಲ್ಲಿ ಅನೇಕ ಸಂಘ-ಸಂಸ್ಥೆಗಳು ಮತ್ತು ಸಭಾ-ಸಮಿತಿಗಳು ಹುಟ್ಟಿಕೊಂಡವು. ಈ ಎಲ್ಲಾ ಘಟನೆಗಳಿಗೆ ಕಳಸವಿಟ್ಟಂತೆ ತಿಲಕರು ೧೮೯೩ ಮತ್ತು ೧೮೯೫ರಲ್ಲಿ ಕ್ರಮವಾಗಿ ಗಣಪತಿ ಪೂಜೆ ಮತ್ತು ಶಿವಾಜಿ ಜಯಂತ್ಯೋತ್ಸವಗಳನ್ನು ಆಗಲೇ ಆರಂಭಿಸಿದ್ದರು. ಆದರೆ ಈ ಸಂದರ್ಭದಲ್ಲಿ ಈ ಉತ್ಸವಗಳು ತಿಲಕರಿಂದ ಇಮ್ಮಡಿ ಉತ್ಸಾಹಭರಿತವಾಗಿ ಪ್ರಚುರಗೊಂಡವು. ಈ ಮೂಲಕ ಜನಸಾಮಾನ್ಯರಲ್ಲಿನ ಧಾರ್ಮಿಕ ಜಿಜ್ಞಾಸು ಮತ್ತು ಐತಿಹಾಸಿಕ ಸಂಪ್ರದಾಯಗಳನ್ನು ಬಳಸಿಕೊಂಡು ಅವರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಒಡಮೂಡಿಸುವುದಾಗಿತ್ತು. ಆ ಮುಖಾಂತರ ನಿರಕ್ಷರ-ಸಾಕ್ಷರ, ಬಡವ-ಬಲ್ಲಿದ, ಪಂಡಿತ-ಪಾಮರರನ್ನು ಒಗ್ಗೂಡಿಸುವುದಾಗಿತ್ತು. ಇದು ಅಖಿಲ ಭಾರತ ಕಾಂಗ್ರೆಸ್ ಯೋಚಿಸದ ಕಾರ್ಯವಾಗಿತ್ತು.[೨]

ಸ್ವದೇಶಿ ಚಳುವಳಿಯ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಬಿಜಾಪುರ, ಧಾರವಾಡ, ಬೆಳಗಾವಿ ಮತ್ತು ಕಾರವಾರ ಜಿಲ್ಲೆಗಳು ಮುಂಬೈ ಪ್ರೆಸಿಡೆನ್ಸಿಯಲ್ಲಿದ್ದು, ಅವುಗಳು 'ದಕ್ಷಿಣ ಮರಾಠಾವಾಡ ಪ್ರಾಂತ'ವೆಂದೇ ಹೆಸರುವಾಸಿಯಾಗಿದ್ದು ತಿಲಕರ ಗಾಢಪ್ರಭಾವಕ್ಕೊಳಗಾಗಿದ್ದವು. ಇದರಿಂದಾಗಿ ಇಲ್ಲಿನ ನಾಯಕ ಗಂಗಾಧರರಾವ ದೇಶಪಾಂಡೆ ಮತ್ತು ಗೋವಿಂದರಾವ ಯಾಳಗಿಯವರು ತಿಲಕರಂತೆಯೇ, ಅವರ ಪ್ರಭಾವದಿಂದಾಗಿ ಬೆಳಗಾವಿಯಲ್ಲಿ ಶಿವಾಜಿ ಉತ್ಸವವನ್ನು ಸಂಘಟಿಸಿದರು.[೩] ನಾರಾಯಣ ಸುಬ್ಬರಾವ ಹರ್ಡೀಕರ್ ಅವರು ಗಣೇಶ ಮತ್ತು ಶಿವಾಜಿ ಉತ್ಸವಗಳೆರಡನ್ನೂ ಹುಬ್ಬಳ್ಳಿಯಲ್ಲಿ ಪ್ರಾರಂಭಿಸಿದರು.[೪] ಆಲೂರು ವೆಂಕಟರಾಯರು ಈ ಉತ್ಸವಗಳನ್ನು ಆಚರಿಸಲು ಆರಂಭಿಸುವುದರೊಂದಿಗೆ ಮರಾಠಿಗೆ ಬದಲಾಗಿ, ಕನ್ನಡ ಭಾಷೆಯನ್ನೇ ಉತ್ಸವಗಳ ಮಾಧ್ಯಮ ಭಾಷೆಯನ್ನಾಗಿ ಜಾರಿಗೆ ತಂದರು. 'ರಾಷ್ಟ್ರೀಯ ನೂತನ ವಿದ್ಯಾಲಯ'ದ ಪರಿಕಲ್ಪನೆಯನ್ನು ಧಾರವಾಡದಲ್ಲಿ ಆಲೂರರು ಕಾರ್ಯಗತಗೊಳಿಸಿದರು.[೫] 'ಮೊಹರಂ'ನ್ನು ಆಚರಣೆಗೆ ತಂದರು.

❀ ..

ಪುಣೆ, ಸೊಲ್ಲಾಪುರ ಮತ್ತಿತರ ಕಡೆಗಳಲ್ಲಿರುವಂತೆ ಉತ್ತರ ಕರ್ನಾಟಕದಲ್ಲಿಯೂ ಸಭೆ, ಸಮಾರಂಭ, ಉತ್ಸವ ಇತ್ಯಾದಿಗಳಿಗಾಗಿ ತಿಲಕರನ್ನು ಆಹ್ವಾನಿಸಲು ಒಂದು 'ಸ್ವಾಗತ ಸಮಿತಿ'ಯನ್ನು ಹುಟ್ಟುಹಾಕಲಾಯಿತು. ವಿಷ್ಣುಪಂಥನಾತು ಇದರ ಅಧ್ಯಕ್ಷರಾದರೆ ಶ್ರೀಪಾದರಾವ ಛಾತ್ರೆ ಮತ್ತು ದತ್ತೋಪಂಥ ಬೆಳ್ವಿ, ಖ್ಯಾತ ವಕೀಲರಿಬ್ಬರು ಸಮಿತಿಯ ಸದಸ್ಯರಾಗಿದ್ದು, ಗಂಗಾಧರರಾಯರು ಅದರ ಕಾರ್ಯದರ್ಶಿಗಳಾಗಿದ್ದರು. ೧೯೦೬ರಲ್ಲಿ ತಿಲಕರು ಬೆಳಗಾವಿಯಲ್ಲಿ ಸಂಘಟಿಸಿದ ಸಾರ್ವಜನಿಕ ಗಣೇಶ ಉತ್ಸವಕ್ಕೆ ಹಾಜರಾಗಿ ಬೆಳಗಾವಿಯ ಸುತ್ತಮುತ್ತಲಿನ ಊರುಗಳಾದ ಅಣಿಗೋಳ, ಶಹಪೂರ, ಹುದಲಿ, ಪಾಚ್ಛಾಪುರ ಮುಂತಾದ ಊರುಗಳಲ್ಲಿ ಸಾರ್ವಜನಿಕ ಸಭೆಗಳನ್ನು ಕೂಡಿಸಿ ಮಾತನಾಡಿದರು. ಹಾಗೆಯೇ, ತಿಲಕರು ಖ್ಯಾತ ಮರಾಠಿ ವೃತ್ತಪತ್ರಿಕೆಯ ಸಂಪಾದಕರಾದ (ಕಾಲ್) ಶಿವರಾಮಪಂಥ ಪರಾಂಜಪೆಯವರೊಂದಿಗೆ ಮೂರು ದಿನಗಳ ಪ್ರಚಾರಾಂದೋಲನವನ್ನು ಕೈಗೊಂಡು ಧಾರವಾಡದ ಮೂಲಕ ಗುರ್ಲಹೊಸೂರು, ಕರಿಕಟ್ಟಿ, ಬೈಲಹೊಂಗಲ, ಹೊಸೂರು, ಹೂಲಿ ಮತ್ತು ಮುರುಗೋಡುಗಳಲ್ಲಿ ಸಾರ್ವಜನಿಕ ಸಭೆಗಳನ್ನು ನಡೆಸಿದರು. ಸಾವಿರಗಟ್ಟಲೆ ಜನರು ಈ ಪ್ರಚಾರ ಸಭೆಗಳಿಗೆ ಹಾಜರಾಗುತ್ತಿದ್ದರು. ಈ ಸಂದರ್ಭದಲ್ಲಿ ತಿಲಕರ ಮರಾಠಿ ಭಾಷಣವನ್ನು ಧಾರವಾಡದ ಕೃಷ್ಣರಾವ ಮುದುವೀಡು ಅವರು ಭಾಷಾಂತರಿಸಿ ಕನ್ನಡದಲ್ಲಿ ಹೇಳುತ್ತಿದ್ದರು. ಈ ಮೂಲಕ ತಿಲಕರು ಉತ್ತರ ಕರ್ನಾಟಕದಲ್ಲಿ ಪ್ರಥಮ ಭಾರಿಗೆ ರಾಷ್ಟ್ರೀಯತೆಯ ಬೀಜವನ್ನು ಜನಮಾನಸದಲ್ಲಿ ಬಿತ್ತಿದರು.[೬]

ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ೧೯೦೭ರಲ್ಲಿ ಸ್ಥಾಪನೆಗೊಂಡ 'ನೂತನ ವಿದ್ಯಾಲಯ'ವನ್ನು – ಗುಲಬರ್ಗಾದಲ್ಲಿ ಮತ್ತು 'ಉಸ್ಮಾನಿಯ ಮಾಧ್ಯಮಿಕ ಶಾಲೆ'ಯನ್ನು – ಬೆಂಚೋಳಿಯಲ್ಲಿ ಶಿವಾಜಿ ಮತ್ತು ಗಣಪತಿ ಉತ್ಸವಗಳನ್ನು ಸಂಘಟಿಸಲಾಗುತ್ತಿತ್ತು. ಅವುಗಳ ಸ್ಥಾಪಕರಾದ **ವಿಠಲ್‌ರಾವ್ ದೇವುಳ್‌ಗಾಂವಕರ್** ಮತ್ತು **ವೆಂಕಟ ಕಿಷನ್‌ರಾವ್**ರವರಿಬ್ಬರು ತಿಲಕರಿಂದ ಪ್ರಭಾವಿತರಾಗಿದ್ದು, ಸ್ವತಃ ಪುಣೆ, ಸೊಲ್ಲಾಪುರಗಳಲ್ಲಿ ನಡೆಯುವ ಈ ಉತ್ಸವಗಳಲ್ಲಿ ಪಾಲ್ಗೊಂಡು ಪುನೀತರಾಗುತ್ತಿದ್ದರು. ನಂತರ ಅದರ ಸವಿಯೂಟವನ್ನು ಈ ಭಾಗದಲ್ಲಿಯೂ ಉಣಬಡಿಸುತ್ತಿದ್ದರು. ಇದರಿಂದಾಗಿ ಈ ಭಾಗದ ವಿದ್ಯಾರ್ಥಿ ಸಮೂಹದಲ್ಲಿ ರಾಷ್ಟ್ರೀಯತೆಯ ಕಿಚ್ಚು ಬೆಳೆದು, ಮುಂದೆ ಚಳುವಳಿಗಳನ್ನು ಹುಟ್ಟುಹಾಕುವಲ್ಲಿ ಈ ಉತ್ಸವಗಳನ್ನು ಯಶಸ್ವೀ ಸಾಧನಗಳನ್ನಾಗಿ ಬಳಸಿಕೊಂಡಿದ್ದಾರೆ.[೭]

ಈ ಸಂದರ್ಭದಲ್ಲಿ ರಾಜಕೀಯ ಪ್ರೇರಿತ ಸಭೆ–ಸಮಾರಂಭಗಳನ್ನು ಬ್ರಿಟೀಷರು ಧ್ವಂಸಪಡಿಸುತ್ತಿದ್ದರು. ಆದರೆ ಧಾರ್ಮಿಕ ಆಚರಣೆಗಳಿಗೆ ಇದರಿಂದ ವಿನಾಯಿತಿ ಇತ್ತು. ಈ ಅಂಶವನ್ನು ಗಮನಿಸಿದ 'ಕರ್ನಾಟಕ ಗಾಂಧಿ' ಎಂದು ಖ್ಯಾತರಾದರೂ ಮೊದಲಿಗೆ ತಿಲಕರ ಗಾಢ ಪ್ರಭಾವಕ್ಕೊಳಗಾದ ಹರ್ಡೇಕರ ಮಂಜಪ್ಪ ಅವರು, ತಿಲಕರ ಗಣಪತಿ ಮತ್ತು ಶಿವಾಜಿ ಉತ್ಸವಗಳನ್ನು ಮಾದರಿಯಾಗಿಟ್ಟುಕೊಂಡು ೧೯೧೧ರಲ್ಲಿ ಪ್ರಪ್ರಥಮಬಾರಿಗೆ **'ಬಸವ ಜಯಂತಿ'** ಯನ್ನು ಕರ್ನಾಟಕದಾದ್ಯಂತ ಆಚರಣೆಗೆ ತರಲು ಪ್ರಯತ್ನಿಸಿದರು. ಈ ಮೂಲಕ ಜನಸಾಮಾನ್ಯರಲ್ಲಿ ಸಮಾಜೋ–ರಾಜಕೀಯ ಪ್ರಜ್ಞೆಯನ್ನು ಮೂಡಿಸಿದರು. ಇದು ಮುಂದೆ ಜನಸಾಮಾನ್ಯರಿಗೆ ರಾಷ್ಟ್ರೀಯ ಕಲ್ಪನೆಯನ್ನು ಮೂಡಿಸಿ, ಅವರಲ್ಲಿ ರಾಷ್ಟ್ರ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಪ್ರಜ್ಞೆಯನ್ನು ಮೂಡಿಸಿತು.[೮]

**ಉಪಸಂಹಾರ** : ೧೯೨೦ರ ನಂತರದ ಕಾಲದಲ್ಲಿ ಗಾಂಧೀಯುಗದ ಅಸಹಕಾರ, ಕಾನೂನು ಭಂಗ ಮತ್ತು ಭಾರತ ಬಿಟ್ಟು ತೊಲಗಿ ಚಳುವಳಿಗಳ ಜನತಾ ಆಂದೋಲನದ ಮೂಲ ನೆಲೆಯನ್ನು ಸ್ವದೇಶಿ ಚಳುವಳಿಯ ಗರ್ಭದಲ್ಲಿಯೇ ತೀವ್ರಗಾಮಿ ನಾಯಕರು ಹುಟ್ಟುಹಾಕಿದ್ದರು ಎಂಬುದು ಮಹತ್ವದ ವಿಷಯ. ಸ್ವದೇಶಿ ಚಳುವಳಿಯ ಕಾಲದಲ್ಲಿ ಸಾಂಪ್ರದಾಯಿಕ ಉತ್ಸವಗಳು, ಮೇಳಗಳು ಮತ್ತು ಜಾತ್ರೆಗಳು ಹೊಸ ರೂಪವನ್ನು ಪಡೆದು ಜನತಾ ಸಂಘಟನೆ, ಸಂಚಲನೆ ಮತ್ತು ಚಳುವಳಿಗೆ ಸಾಧನಗಳಾಗಿವೆ. ಆಧುನಿಕ ರಾಜಕೀಯ ವಿಚಾರಗಳನ್ನು ಪ್ರಥಮ ಬಾರಿಗೆ ಜನತೆಯಲ್ಲಿ ಒಡಮೂಡಿಸಿ ಮಕ್ಕಳು–ಮಹಿಳೆಯರನ್ನು, ತರುಣ–ವೃದ್ಧರನ್ನು, ಶ್ರೀಮಂತ–ಬಡವರನ್ನು ಜಾತಿ–ಧರ್ಮಗಳೆನ್ನದೆ ಒಟ್ಟುಗೂಡಿಸಿ ಅವರನ್ನು ಮೊಘಲ್ ಕಾಲದ ಸಂಪ್ರದಾಯದಿಂದ ಆಧುನಿಕ ಬೆಳಕಿನ ಕಾಲದ ನವ ದಿಗಂತದತ್ತ ಎಳೆದೊಯ್ಯುವಲ್ಲಿ ಈ ರಾಷ್ಟ್ರೀಯತೆಯು ಪ್ರೇರಕವಾಗಿದೆ ಮತ್ತು ಪೂರಕವಾಗಿದೆ.



## ಆಧಾರಸೂಚಿ


೧. ಬಿಪಿನ್ ಚಂದ್ರ., **'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್'**, ಪು. ೧೨೮–೧೩೧.

೨. ಅಡಿವೇಶ ಟಿ.ವಿ., **'ದ ಸ್ವದೇಶಿ ಮೂವ್‌ಮೆಂಟ್ ಇನ್ ಕರ್ನಾಟಕ'**, ಪು. ೧೫೨–೫೩.

೩. ಕಾಮತ್ ಎಸ್.ಯು. (ಸಂ), **ಬೆಳಗಾಂವ ಜಿಲ್ಲಾ ಗೆಜೆಟಿಯರ್**, ಪು. ೧೩೬.

೪. ಕಾಮತ್ ಎಸ್.ಯು. (ಸಂ), **ಧಾರವಾಡ ಜಿಲ್ಲಾ ಗೆಜೆಟಿಯರ್**, ಪು. ೧೨೫.

೫. ಆಲೂರು, ವೆಂಕಟರಾವ್, **'ನನ್ನ ಜೀವನ ಸ್ಮೃತಿಗಳು'**, ಪು. ೧೨೮.

೬. ಕಾಮತ್ ಎಸ್.ಯು. (ಸಂ), **ಬೆಳಗಾವಿ ಜಿಲ್ಲಾ ಗೆಜೆಟಿಯರ್**, ಪು. ೧೩೬.

೭. ಬಜಂತ್ರಿ ಕೆ.ಎಸ್., **'ನ್ಯಾಷನಲ್ ಎಜ್ಯುಕೇಷನ್ ಅಂಡ್ ರೈಸ್ ಆಫ್ ನ್ಯಾಷನಲಿಸಂ ಇನ್ ಹೈದ್ರಾಬಾದ–ಕರ್ನಾಟಕ ಏರಿಯಾ'**, ಪು. ೮೬.

೮. ಗುಬ್ಬಣ್ಣನವರ, ಶಿವಾನಂದ, **'ಪೊಲಿಟಿಕಲ್ ಐಡಿಯಾಸ್ ಆಫ್ ಹರ್ಡೇಕರ ಮಂಜಪ್ಪ'**, ಪು. ३೭.

ಎಂ.ಬಿ. ಪಾಟೀಲ*

# ಏಕೀಕರಣ ಪೂರ್ವದ ಹೈದರಾಬಾದ ಕರ್ನಾಟಕದ ಬ್ಯಾಂಕಿಂಗ್ ಉದ್ಯಮ

ಪ್ರಾಚೀನ ಕಾಲದಲ್ಲಿ ಇಂದಿನ ಹೈದರಾಬಾದ ಕರ್ನಾಟಕದ ಪ್ರದೇಶಗಳಾದ ಗುಲಬರ್ಗ ಜಿಲ್ಲೆಯನ್ನು ಸಗರನಾಡು ಎಂದು; ಬೀದರ ಜಿಲ್ಲೆಯನ್ನು 'ಕಲ್ಯಾಣ ನಾಡು' ಎಂದು; ರಾಯಚೂರು ಜಿಲ್ಲೆಯನ್ನು 'ಎಡೆದೊರೆ ನಾಡು' ಎಂದು ಕರೆಯಲಾಗುತ್ತಿತ್ತು. ಕರ್ನಾಟಕ ಏಕೀಕರಣ ಪೂರ್ವದಲ್ಲಿ ಹೈದರಾಬಾದ ಕರ್ನಾಟಕದ ಪ್ರದೇಶಗಳನ್ನು 'ಮೊಗಲಾಯ' ಎಂದು ರೂಢಿಯಲ್ಲಿ ಕರೆಯಲಾಗುತ್ತಿತ್ತು. ಕಾರಣ ಈ ಪ್ರದೇಶಗಳು ಸುಮಾರು ೬೦೦ ವರ್ಷಗಳ ಸುದೀರ್ಘ ಕಾಲ ಬಹಮನಿ ಅರಸರಿಂದ ಅಸಫ್ ಜಾದಿವರೆಗೆ [೧೩೪೭ ರಿಂದ ೧೯೪೮ರ ವರೆಗೆ] ಮುಸ್ಲೀಮರ ಆಡಳಿತಕ್ಕೆ ಒಳಪಟ್ಟಿದ್ದವು.

ಒಂದು ಅಂದಾಜಿನ ಪ್ರಕಾರ (೧೯೩೮), ನೈಜಾಮ ರಾಜ್ಯದಲ್ಲಿ ಒಟ್ಟು ಜನ ಸಂಖ್ಯೆಯಲ್ಲಿ ಶೇ. ೧೪ ಕನ್ನಡ ಭಾಷಿಕರು ಆಗಿದ್ದರು. ಅವರಲ್ಲಿ ಹೆಚ್ಚು ಮಂದಿ ಈ ಮೇಲಿನ ಮೂರು ಜಿಲ್ಲೆಗಳಲ್ಲಿ ವಾಸವಾಗಿದ್ದರು. ರಾಜಧಾನಿ ಹೈದರಾಬಾದ ನಗರದಲ್ಲಿ ಸುಮಾರು ೩೦,೦೦೦ ಕನ್ನಡಿಗರು ವಾಸವಾಗಿದ್ದರು ಎಂದು ತಿಳಿದು ಬರುವದು.

ಸ್ವಾತಂತ್ರ ಪೂರ್ವದ ಸುಮಾರು ಆರುನೂರು ಚಿಕ್ಕದೊಡ್ಡ ದೇಶಿ ಸಂಸ್ಥಾನಗಳ ಪೈಕಿ; ಡೆಕ್ಕನ್ನ ಪ್ರದೇಶದ ಹೃದಯ ಭಾಗವಾಗಿದ್ದ ನಿಜಾಮರ ರಾಜ್ಯವು ಭಾರತದ ಅಂದಿನ ದೇಶೀಯ ಸಂಸ್ಥಾನಗಳ ಪೈಕಿ ಅತ್ಯಂತ ದೊಡ್ಡದಾಗಿತ್ತು. ಇದರಲ್ಲಿ ತೆಲಂಗಾಣಾ, ಮರಾಠವಾಡ ಮತ್ತು ಕರ್ನಾಟಕ ಎಂಬ ಮೂರು ಭಾಷಾವಾರು ಪ್ರಾಂತ್ಯಗಳು ಇದ್ದು, ಕನ್ನಡ ಭಾಷಿಕರ ೩ ಜಿಲ್ಲೆಗಳು ಆಡಳಿತಾತ್ಮಕವಾಗಿ ಮರಾಠವಾಡ ಪ್ರದೇಶಕ್ಕೆ ಒಳಪಟ್ಟಿದ್ದವು.

**ಶೋಚನೀಯ ಆರ್ಥಿಕ ಸ್ಥಿತಿಗತಿಗಳು :** ಸುಮಾರು ೨೨೫ ವರ್ಷಗಳ (೧೭೨೪-೧೯೪೮) (ನೈಜಾಮ) ಅಸಫ್‌ಜಾದಿ ಅರಸರ ಆಡಳಿತದ ಕಾದಲ್ಲಿ ೧೯ನೇ ಶತಮಾನದ ಮೊದಲ ಅರ್ಧ ಭಾಗದಲ್ಲಿ ರಾಜ್ಯದ ಆರ್ಥಿಕ ಪರಿಸ್ಥಿತಿ ತುಂಬಾ ಹದಗೆಟ್ಟಿತ್ತು. ಬಡರೈತರ ಸ್ಥಿತಿಗತಿಗಳು ತುಂಬಾ ಶೋಚನೀಯವಾಗಿದ್ದವು. ಸರ್ಕಾರದ ಹಣಕಾಸು ನಿರ್ವಹಣೆಯಲ್ಲಿ ಆಯ-ವ್ಯಯ ಎನ್ನುವದೇ ಇರಲಿಲ್ಲ. ಅನೇಕ ವರ್ಷಗಳ ಕಾಲ ಕೇಂದ್ರ ಖಜಾನೆ ಎನ್ನುವದೇ ಇರಲೇ ಇಲ್ಲ. ಸಂಸ್ಥಾನದ ನಿಜವಾದ ವರಮಾನ ಎಷ್ಟು, ಖರ್ಚು ಎಷ್ಟು ಎಂಬುದು ಪೇಷ್ಕರನಿಗೆ ತಿಳಿದಿರಲಿಲ್ಲ. ಕೆಲವೊಮ್ಮೆ ದಿನನಿತ್ಯದ ವೆಚ್ಚದ ವ್ಯವಹಾರಗಳನ್ನು ನಿರ್ವಹಿಸಲೂ ಸಹ ಸ್ಥಳೀಯ ಭಾರತೀಯ ಮತ್ತು ಯುರೋಪಿಯನ್ ಮೂಲದ ಬ್ಯಾಂಕರುಗಳ ಮೂಲಕ ಅಧಿಕ ಬಡ್ಡಿಯ ಮೇಲೆ ಸಾಲ ಪಡೆಯಲಾಗುತ್ತಿತ್ತು. ಉದಾ: ಅಂದಿನ ನೈಜಾಮ ಸರ್ಕಾರ "ಪಾಮರ ಎಂಡ ಕಂಪನಿ" ಯವರಿಂದ ಸಾಲ ಪಡೆದು ವ್ಯವಹಾರಗಳನ್ನು ನಿರ್ವಹಿಸಲಾಗುತ್ತಿತ್ತು. ಇದಕ್ಕೆ ಪ್ರತಿಯಾಗಿ ಭೂ ಕಂದಾಯವನ್ನು ಖಾಸಗಿ ಬ್ಯಾಂಕರುಗಳಿಗೆ ಮತ್ತು ಪಠಾಣ ಸೈನಿಕರಿಗೆ ಗೇಣಿಗೆ ಕೊಡಲಾಗುತ್ತಿತ್ತು. ೧೮೨೦ ರಲ್ಲಿ ಚಾರ್ಲಸ್ ಮೆಟಕಾಫ್ ರೆಸಿಡೆಂಟನ ಕಾಲದಲ್ಲಿ ಶೇ. ೬೦ರ ಬಡ್ಡಿದರದಲ್ಲಿ ಕಲಕತ್ತದಿಂದ ಸಾಲಪಡೆದು "ಪಾಮರ ಎಂಡ ಕಂಪನಿ"ಯ ಸಾಲ ತೀರಿಸಲಾಯಿತು ಎಂದು ದಾಖಲೆಗಳಿಂದ ತಿಳಿದುಬರುವದು. ೧೮೫೧ರಲ್ಲಿ ನಿಜಾಮನು ಮಾಡಿದ ಕಂಪನಿ ಸರ್ಕಾರದ ಸಾಲ ತೀರಿಸಲಾರದೇ ರಾಯಚೂರು ಒಳಗೊಂಡಂತೆ ಕೆಲವು ಪ್ರದೇಶಗಳನ್ನು ಬ್ರಿಟಿಷರಿಗೆ ಬಿಟ್ಟು ಕೊಡಬೇಕಾಯಿತು. ಅಂತರಿಕವಾಗಿ ಕಂದಾಯ ಇಲಾಖೆಯ ಅಧಿಕಾರಿಗಳ ದಬ್ಬಾಳಿಕೆ, ದೌರ್ಜನ್ಯ ತಾಳಲಾರದೇ ಗ್ರಾಮಸ್ಥರು ನೆರೆಯ ರಾಜ್ಯಗಳಿಗೆ ವಲಸೆ ಹೋಗುತ್ತಿದ್ದರು. ಇದರಿಂದ ಕೃಷಿ ಭೂಮಿ ಪಾಳುಬಿದ್ದು ಆರ್ಥಿಕ ಸ್ಥಿತಿ ಇನ್ನಷ್ಟು ಹದಗೆಟ್ಟಿತ್ತು. ಚಾರ್ಲಸ್ ಮೆಟಕಾಫ್ ಅವರ ಕಾಲದಲ್ಲಿ ಸರ್ಕಾರದ ಹಣಕಾಸಿನ ಕೊರತೆ ವರ್ಷಕ್ಕೆ ಸುಮಾರು ೧೦ ಲಕ್ಷ ರೂ. ಎಂದು ಅಂದಾಜು ಮಾಡಲಾಗಿತ್ತು.

**ಆರ್ಥಿಕ ಸುಧಾರಣಾ ಕ್ರಮಗಳು :** ೧೮೫೩ರಲ್ಲಿ ನಿಜಾಮ ನಾಸಿರುದ್ದೌಲನು (೧೮೨೯-೧೮೫೭) ನವಾಬ

* ನಂ. ೩, ಶ್ರೀ ರೇಣುಕ, ೩.ಟಿ. ರೋಡ್, ೮ನೇ ಕ್ರಾಸ್, ಬಿ.ಎಸ್.ಕೆ. ೨ನೇ ಹಂತ, ಬೆಂಗಳೂರು – ೭೦.

ತುರವಿ ಅಲಿಖಾನ ಅವರನ್ನು ನೂತನ ಪ್ರಧಾನ ಮಂತ್ರಿ (ದಿವಾನ) 'ಸಾಲಾರ ಜಂಗ' ಎಂಬ ಬಿರುದಿನೊಂದಿಗೆ ನೇಮಕ ಮಾಡಿದನು. ೧೮೮೩ರ ವರೆಗೂ (ಸಿಧನದ ವರೆಗೂ) ಅವನು (ಸಾಲಾರ ಜಂಗ) ಮುಂದುವರೆದನು. ಅವನ ಕಾಲದಲ್ಲೂ ಅನೇಕ ಆರ್ಥಿಕ ಸುಧಾರಣೆಗಳನ್ನು ಭೂ ಸುಧಾರಣೆಗಳನ್ನು ಆಡಳಿತಾತ್ಮಕ ಸುಧಾರಗಳನ್ನು ಜಾರಿಯಲ್ಲಿ ತರುವ ಮೂಲಕ ಬಡರೈತರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಪ್ರಯತ್ನಿಸಲಾಯಿತು. ರೈತರ ಹಿತರಕ್ಷಿಸಲು 'ರೈತವಾರಿ' ಪದ್ಧತಿಯನ್ನು ಜಾರಿಯಲ್ಲಿ ತರಲಾಯಿತು. ನೀರಾವರಿ ಸಾಲ ಒದಗಿಸಲಾಯಿತು. ಭೂ ಕಂದಾಯ ನಿಗದಿಪಡಿಸಲಾಯಿತು. ಒಂದನೇ ಸಾಲಾರಜಂಗ ಅವರನ್ನು "೧೯ನೇ ಶತಮಾನದ ಅತ್ಯುತ್ತಮ ಭಾರತೀಯ ಆಡಳಿತಗಾರರಲ್ಲಿ ಒಬ್ಬನು, ಹೈದರಾಬಾದನ್ನು ಮೊಗಲರ ಫ್ಯುಡಲ್ (fudal) ಸ್ಥಿತಿಯಿಂದ ಸುವ್ಯವಸ್ಥಿತ ಆಡಳಿತವುಳ್ಳ, ಹೊಂದಾಣಿಕೆಯ ಆರ್ಥಿಕ ಬದ್ರತೆಯುಳ್ಳ ಆಧುನಿಕ ರಾಜ್ಯ ಮಟ್ಟಕ್ಕೆ ಏರಿಸಿದನು". ಎಂದು ವರ್ಣಿಸಲಾಗಿದೆ. ೧೮೫೭-೫೮ರ ಸಂಗ್ರಾಮದ ನಂತರ ಹೈದರಾಬಾದ ಕರ್ನಾಟಕದಲ್ಲಿ ಆರ್ಥಿಕ ಆಡಳಿತಾತ್ಮಕ ಸುಧಾರಣೆಗಳು ಆರಂಭವಾದವು. ೧೮೬೮ರಲ್ಲಿ ಗುಲಬರ್ಗ, ರಾಯಚೂರ ಮೂಲಕ ಪ್ರವಹಿಸುವ ಬೊಂಬಾಯಿ ಮದ್ರಾಸ್ ರೈಲು ಸಂಪರ್ಕ ಆರಂಭವಾಯಿತು. ೧೦ ವರ್ಷದ ನಂತರ ೧೮೭೮ರಲ್ಲಿ ಹೈದರಾಬಾದ ವಾಡಿ ಸಂಪರ್ಕ ರೈಲು ಮೂಲಕ ಕಲ್ಪಿಸಲಾಯಿತು. ಸರ್ಕಾರದಲ್ಲಿ ಅತಿಯಾದ ಲಂಚಗುಳಿತನವನ್ನು ನಿವಾರಿಸಲು ಕ್ರಮ ಕೈಗೊಳ್ಳಲಾಯಿತು. ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳನ್ನು ಆರಂಭಿಸಲಾಯಿತು. ಪೋಲಿಸ, ಅಂಚೆ ಇಲಾಖೆ, ಶಿಕ್ಷಣ, ವೈದ್ಯಕೀಯ ಸೇವೆಗಳನ್ನು ಸುಧಾರಿಸಲಾಯಿತು. ಬ್ರಿಟೀಷ್ ರಾಜ್ಯಾಡಳಿತ ಪ್ರದೇಶಗಳ ಅನುಭವಿ ವಿದ್ಯಾವಂತರನ್ನು ರಾಜ್ಯ ಸೇವೆಗೆ ನೇಮಿಸಿಕೊಳ್ಳಲಾಯಿತು.

**ಸಂಘಟಿತ ಬ್ಯಾಂಕಿಂಗ್ ವಲಯದ ಆರಂಭದ ಪೂರ್ವದಲ್ಲಿ :** ಸುವ್ಯವಸ್ಥಿತ ಸಂಘಟಿತ (organised) ಬ್ಯಾಂಕಿಂಗ್ ಉದ್ಯಮ ಆರಂಭವಾಗುವ ಹಲವಾರು ದಶಕಗಳ ಪೂರ್ವದಲ್ಲಿ ಮತ್ತು ತದನಂತರವೂ ಗ್ರಾಮೀಣ ಆರ್ಥಿಕ ವ್ಯವಸ್ಥೆಯು ಖಾಸಗಿ ಸಾಹುಕಾರರು, ಲೇವಾದೇವಿಗಾರರು, ಜಮೀನುದಾರರು, ವರ್ತಕರು ಮುಂತಾದವರ ಸಂಪೂರ್ಣ ನಿಯಂತ್ರಣದಲ್ಲಿ ಇತ್ತು. ಗ್ರಾಮೀಣ ಸಾಲದ ಸುಮಾರು ಶೇ. ೯೦ ಭಾಗವನ್ನು ಈ ಸಾಹುಕಾರರು ನಿರ್ವಹಿಸುತ್ತಿದ್ದರು. ಒಂದು ವರದಿ ತಿಳಿಸುವಂತೆ ಗುಲಬರ್ಗ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಲೇವಾದೇವಿಗಾರರು ಇದ್ದರು. ಪ್ರತಿ ಒಬ್ಬ ಸಾಹುಕಾರನಿಗೆ ಸರಾಸರಿ ೧೦ ಜನ ಕಕ್ಷಿದಾರರು ಇದ್ದರು. ಈ ವ್ಯವಹಾರ ಎಷ್ಟೊಂದು ವ್ಯವಸ್ಥಿತವಾಗಿ ನಡೆಯುತ್ತಿತ್ತು ಎಂದರೆ ಸಾಹುಕಾರರು ತಮ್ಮ ತಮ್ಮಲ್ಲಿ ನಿಗದಿತ ಹಳ್ಳಿಗಳನ್ನು ಹಣದ ಲೇವಾದೇವಿಗೆ ಮತ್ತು ಧಾನ್ಯದ ಲೇವಾದೇವಿಗೆ ಹಂಚಿಕೊಳ್ಳುವ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದರು. ಬಡರೈತರ ಶೋಷಣೆ ಅಬಾಧಿತವಾಗಿ ನಡೆಯುತ್ತಿತ್ತು. ಬಡರೈತರ ಕಷ್ಟ ಹೇಳತೀರದಾಗಿತ್ತು. "ಅನ್ಯಾಯ ಅತ್ಯಾಚಾರವನ್ನು ಸಹಿಸಿಕೊಂಡು ಸತ್ತವರ ಹಾಗೆ ಇರಬೇಕಾಗಿತ್ತು". ಇದರೊಂದಿಗೆ ಈ ಪ್ರದೇಶವನ್ನು ಕಳೆದ ಶತಮಾನದಲ್ಲಿ ೧೮೦೪ ರಿಂದ ೧೯೦೦ರ ವರೆಗೆ ಮಧ್ಯಂತರದ ವರ್ಷಗಳಲ್ಲಿ ಬಂದೊದಗಿದ ಎಂಟು ಬರಗಾಲಗಳು ಭಯಾನಕವಾಗಿದ್ದವು. ಪರಿಸ್ಥಿತಿಯ ಸುಧಾರಣೆಗೆ ಸರ್ಕಾರ ಹಲವಾರು ಲೇವಾದೇವಿ ವ್ಯವಹಾರ ನಿಯಂತ್ರಣಾ ಕಾನೂನಿನ ಕ್ರಮಗಳನ್ನು, ಆರ್ಥಿಕ ಸುಧಾರಣಾ ಕ್ರಮಗಳನ್ನು ಬಡರೈತರ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತಂದಿತು.

"೧೮ನೆಯ ಶತಮಾನದಲ್ಲಿ ಎಡಬಿಡದೆ ಸತತವಾಗಿ ಸಾಗಿದ ಮುಘಲರ ಮರಾಠರ ಲಕ್ಷಲಕ್ಷ ಸೈನಿಕರ ಓಡಾಟದಿಂದ ಸಮೃದ್ಧ ಕೃಷಿಯ ಭೂಮಿ ಬರಡಾಯಿತು. ಸೈನ್ಯಗಳ ಭರದ ಓಡಾಟದಿಂದ ಹೊಲಗಳಲ್ಲಿ ಬೆಳೆದುನಿಂತ ಬೆಳೆಗಳು ಹಾಳಾಗಿ, ಸೇನೆಗಳ ಅಪಾರ ಹಸಿವನ್ನು ತೃಪ್ತಿಗೊಳಿಸಬೇಕಿದ್ದ ಕಾರಣ ಧಾನ್ಯದ ಕಣಜಗಳು ಬಿತ್ತನೆಗೂ ಉಳಿಯದಂತೆ ಬರಿದಾದವು. ಸರಕಾರದ ಜೊತೆ ಸ್ನೇಹದಿಂದ ಇದ್ದ ಜಮೀನುದಾರರು ಕೊಬ್ಬಿದರು. ಬಡವರು ಮಾತ್ರ ಬಡವರೇ ಆದರು".

**ಗ್ರಾಮೀಣ ಋಣ ಸಮೀಕ್ಷೆ :** ಈ ಪ್ರದೇಶಗಳೂ ಒಳಗೊಂಡಂತೆ ಹೈದರಾಬಾದ ಸಂಸ್ಥಾನದಲ್ಲೂ ಪ್ರಪ್ರಥಮವಾಗಿ ೧೯೩೭ರಲ್ಲಿ ಎಸ್.ಎಂ. ಬರೂಚಾ ಅವರ ಅಧ್ಯಕ್ಷತೆಯಲ್ಲಿ ಆಯ್ದ ಕೆಲವು ಗ್ರಾಮಗಳ ಸಮೀಕ್ಷೆಯನ್ನು ನಡೆಸಲಾಯಿತು. ಈ ಸಮೀಕ್ಷೆಯಿಂದ ಹೊರಬಂದ ಮಾಹಿತಿಯ ಪ್ರಕಾರ ಪ್ರತಿ ಒಂದು ಎಕರೆ ಜಮೀನಿನ ಮೇಲೆ ಅದರ ಸರಾಸರಿ ಭೂಕಂದಾಯ ರೂ. ೧.೭೫ ಇದ್ದರೆ ಇದರ ಆರುಪಟ್ಟು ಅಂದರೆ ಸುಮಾರು ೧೦ ರೂ. ಸಾಲದ ಹೊಣೆಗಾರಿಕೆ ಇತ್ತು. ಸಾಹುಕಾರರು ನೀಡುವ ಸಾಲದ ಮೇಲಿನ ಬಡ್ಡಿ ಶೇ. ೯ ರಿಂದ ೧೨ರ ವರೆಗೆ ಆಕರಣೆ ಆಗಿರುತ್ತಿತ್ತು. ಬರಡು ಭೂಮಿ ಮತ್ತು ರೈತರ ಹಿನ್ನೆಲೆ ಸರಿ ಇಲ್ಲದೇ ಇದ್ದರೆ ಶೇ. ೨೪ ರಿಂದ ೩೦ರ ವರೆಗೆ ಬಡ್ಡಿಯನ್ನು ವಸೂಲ ಮಾಡಲಾಗುತ್ತಿತ್ತು. ಗುಲಬರ್ಗ ಜಿಲ್ಲೆಯಲ್ಲಿ ಬಡ್ಡಿದರ ಸರಾಸರಿ ಶೇ. ೨೦ ಆಗಿತ್ತು.

ರಾಜ್ಯ ಪುನರ್ ರಚನೆಯ ನಂತರ ೧೯೬೧ರಲ್ಲಿ ನಡೆದ ಆಯ್ದ ಗ್ರಾಮಗಳ (ಜಿಲ್ಲಾವಾರು ಪ್ರಾತಿನಿಧಿಕ) ಅನ್ವಯ

ಗುಲಬರ್ಗ ಜಿಲ್ಲೆಯ ಕೊಡಗನೂರು (ಅಫಜಲ್‌ಪುರ ತಾಲೂಕು) ಹದನೂರು (ಸುರಪುರ ತಾಲೂಕು), ಮಹಗಾಂವ (ಗುಲಬರ್ಗ ತಾಲೂಕು), ರಾಯಚೂರು ಜಿಲ್ಲೆಯ ದ್ಯಾಮಪುರ (ಯಲಬುರ್ಗ ತಾಲೂಕು), ಯರಡೋಣ (ಗಂಗಾವತಿ ತಾಲೂಕು), ಶಿರವಾರ (ಮಾನವಿ ತಾಲೂಕು), ಮತ್ತು ಬೀದರ ಜಿಲ್ಲೆಯ ಕಮಲನಗರ (ಔರಾದ ತಾಲೂಕು) ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಲಾಗಿತ್ತು. ಭಾರತ ಸರ್ಕಾರದ ೧೯೬೧ರ ಜನಗಣತಿ ಕಾರ್ಯ್ದೆ ಕ್ರಮದ ಅನ್ವಯ ಈ ವಿವರವಾದ ಆರ್ಥಿಕ-ಸಾಮಾಜಿಕ ಸಮೀಕ್ಷೆಯನ್ನು ಕೈಗೊಳ್ಳಲಾಯಿತು. ಈ ಸಮೀಕ್ಷಾ ವರದಿಯ ಪ್ರಕಾರ ಗ್ರಾಮೀಣ ಪ್ರದೇಶಗಳಲ್ಲಿ ಇರುವ ಬಹುಪಾಲು ಸಣ್ಣ ಮತ್ತು ಅತಿಸಣ್ಣ ಹಿಡುವಳಿದಾರರು ಯಾವದೇ ಸಾಂಸ್ಥಿಕ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯುವದು ಅತ್ಯಂತ ದುರ್ಲಭ ವಾಗಿತ್ತು. ಸಾಲ ಏನಿದ್ದರೂ ದೊಡ್ಡ ಹಿಡುವಳಿದಾರರು ಶ್ರೀಮಂತ ರೈತರಿಗೆ ಮಾತ್ರ ದೊರೆಯುತ್ತಿತ್ತು, ಸಾಲದ ಬಹುಪಾಲು ಲಭ್ಯತೆ ಖಾಸಗಿ ಸಾಹುಕಾರರಿಂದ, ವ್ಯಾಪಾರಸ್ಥ ರಿಂದ ದೊರೆಯುತ್ತಿತ್ತು. ಸಹಕಾರಿ ಸಂಘಗಳು ಮತ್ತು ಸರ್ಕಾರ ನೀಡುತ್ತಿದ್ದ 'ತಕಾಯಿ' ಸಾಲದ ಪ್ರಮಾಣ ಒಟ್ಟು ಸಾಲದಲ್ಲಿ ಶೇ. ೧೦ಕ್ಕಿಂತ ಹೆಚ್ಚಾಗಿರಲಿಲ್ಲ. ಬಹುಪಾಲು ಸಾಲದ ಬಳಕೆ ಅನುತ್ಪಾದಕ ವೆಚ್ಚಗಳಿಗೆ ಖರ್ಚಾಗುತ್ತಿತ್ತು. ಸಹಕಾರಿ ಸಾಲದ ಬಡ್ಡಿದರ ಶೇ. ೬-೭ ಇದ್ದರೆ, ಸಾಹುಕಾರರು ಶೇ. ೨೪ ರಿಂದ ೩೬ರ ವರೆಗೆ ವಿಶೇಷ ಸಂದರ್ಭಗಳಲ್ಲಿ ಶೇ. ೫೦ರ ವರೆಗೆ ಬಡ್ಡಿಯನ್ನು ವಸೂಲಿ ಮಾಡುತ್ತಿದ್ದರು. ಆಹಾರ ಧಾನ್ಯಗಳನ್ನು ಸುಗ್ಗಿಯ ಪೂರ್ವದಲ್ಲಿ ಹಲವು ತಿಂಗಳು ಸಾಲ ರೂಪದಲ್ಲಿ ಪಡೆದಾಗ ಒಂದು ಚೀಲಕ್ಕೆ ಪ್ರತಿಯಾಗಿ ೧½ ಚೀಲವನ್ನು ಸುಗ್ಗಿಯ ನಂತರ ಕೊಡುವ ಪದ್ಧತಿ ರೂಢಿಯಲ್ಲಿ ಇತ್ತು. ಇದೂ ಒಂದು ರೀತಿಯಲ್ಲಿ ಶ್ರೀಮಂತ ರೈತರು ಬಡರೈತರನ್ನು ಕೂಲಿ ಕಾರ್ಮಿಕರನ್ನು ಶೋಷಣೆ ಮಾಡುವದಾಗಿತ್ತು. ಸಹಕಾರ ಪತ್ತಿನ ವ್ಯವಸ್ಥೆಯು ಸಮರ್ಪಕ ವಾಗಿರಲಿಲ್ಲ. ವಾಣಿಜ್ಯ ಬ್ಯಾಂಕುಗಳ ವ್ಯವಹಾರ ಕೇವಲ ನಗರ ಪ್ರದೇಶಗಳಿಗೆ ಸೀಮಿತವಾಗಿತ್ತು.

**ಲಾವಣಿ ಮತ್ತು ಲಗವಾಡ ಪದ್ಧತಿ :** ಖಾಸಗಿ ವ್ಯಾಪಾರಸ್ಥರು, ಲೇವಾದೇವಿಗಾರರು ರೈತರಿಗೆ ಎರಡು ವಿಧದ ಸಾಲಗಳನ್ನು ಕೊಡುತ್ತಿದ್ದರು. ಲಾವಣಿ ಪದ್ಧತಿಯಲ್ಲಿ (ಸಟ್ಟಾ ಪದ್ಧತಿ) ಸಾಹುಕಾರರು ರೈತರಿಗೆ ಬಿತ್ತನೆ ಪೂರ್ವದಲ್ಲಿ ಸಾಲ ನೀಡಿ ಸದರಿ ಸಾಲವನ್ನು ಸುಗ್ಗಿಯ ನಂತರ ಧಾನ್ಯ ರೂಪ ದಲ್ಲಿಯೇ ಮುಂದಿನ ಸುಗ್ಗಿಯ ಮಾರುಕಟ್ಟೆ ಬೆಲೆಗಿಂತ ಶೇ. ೧೫ ರಿಂದ ೪೦ರ ವರೆಗೆ ಕಡಿಮೆ ದರದಲ್ಲಿ ರೈತರು ಮಾರುವ ಕರಾರಿನ ಮೇಲೆ ಸಾಲ ನೀಡಲಾಗುತ್ತಿತ್ತು.

ಲಗವಾಡ ಪದ್ಧತಿಯಲ್ಲಿ ರೈತರ ಹೊಲಗಳಲ್ಲಿ ಇನ್ನೂ ಬೆಳೆ ಇರುವಾಗಲೇ ಸಾಹುಕಾರರು ಬೆಳೆಯ ಕಳೆಯನ್ನು ತೆಗೆಯಲು, ಸುಗ್ಗಿ ಮಾಡಿ ಪೂರೈಸಲು ಇತರೇ ವ್ಯವಸಾಯ ಸಂಬಂಧಿ ಕೆಲಸಗಳಿಗೆ ಸಹಾಯಕವಾಗುವಂತೆ ಕೆಲವು ತಿಂಗಳು ವಾರಗಳವರೆಗೆ ತಿಂಗಳಿಗೆ ಶೇ. ೨ರ ಬಡ್ಡಿದರದಂತೆ ಬೆಳೆಸಾಲವನ್ನು ಒದಗಿಸುತ್ತಿದ್ದರು. ಸಾಲ ಮರು ಪಾವತಿ ತಪ್ಪಿದಲ್ಲಿ ಚಕ್ರಬಡ್ಡಿಯನ್ನು ವಿಧಿಸಲಾಗುತ್ತಿತ್ತು. ಸದ್ಯ ಈ ಪದ್ಧತಿಗಳು ರೂಢಿಯಲ್ಲಿ ಇಲ್ಲದೇ ಇದ್ದರೂ, ರೈತರು ವ್ಯಾಪಾರಸ್ಥರಿಂದ, ದಲಾಲರಿಂದ, ಅಡಕೆ ಅಂಗಡಿಯವರಿಂದ ಸುಗ್ಗಿಯ ಪೂರ್ವದಲ್ಲಿ ಸಾಲ ಪಡೆದು ಸುಗ್ಗಿಯನಂತರ ದಲಾಲರ ಮೂಲಕ ಅವರ ಮಾಲನ್ನು ಮಾರುವ ವ್ಯವಸ್ಥೆ ರೂಢಿಯಲ್ಲಿ ಇರುವದು. ಈ ವ್ಯವಸ್ಥೆ ವ್ಯಾಪಕವಾಗಿರುವದು.

**ಸಂಘಟಿತವಲಯದ ಬ್ಯಾಂಕಿಂಗ್ ಉದ್ಯಮದ ಆರಂಭ:** ಹೈದರಾಬಾದ ಕರ್ನಾಟಕದಲ್ಲಿ ಖಾಸಗಿ ವಲಯದಲ್ಲಿ ವಾಣಿಜ್ಯ ಬ್ಯಾಂಕಿಂಗ್ ಉದ್ಯಮವು ೧೯೨೦-೩೦ರ ದಶಕದಲ್ಲಿ ಆರಂಭಗೊಂಡ ಬಗ್ಗೆ ನಮಗೆ ದಾಖಲೆಗಳಿಂದ ತಿಳಿದು ಬರುವದು. ಆದರೆ ಬ್ಯಾಂಕಿಂಗ್ ಉದ್ಯಮಕ್ಕೆ ಸ್ಥಳೀಯವಾಗಿ ಭದ್ರವಾದ ಬುನಾದಿ ದೊರೆತದ್ದು, ರಾಜ್ಯ ಸರ್ಕಾರ ಪ್ರಾರಂಭಿಸಿದ ಹೈದರಾಬಾದ ಸ್ಟೇಟ್ ಬ್ಯಾಂಕಿನ (SBH) ಆರಂಭ ದಿಂದ ೧೯೪೦ರ ದಶಕದಲ್ಲಿ. ೧೯೫೬ರಲ್ಲಿ ಹೈದರಾಬಾದ ಸ್ಟೇಟ್ ಬ್ಯಾಂಕಿನ ಹೆಸರನ್ನು ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ ಎಂದು ಬದಲಾಯಿಸಲಾಯಿತು ಮತ್ತು ಇದು ಭಾರತಿಯ ಸ್ಟೇಟ್‌ಬ್ಯಾಂಕಿನ (SBI) ಅಧಿಕೃತ ಪ್ರತಿನಿಧಿ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತಿರುವದು.

ಗುಲಬರ್ಗಾ ಜಿಲ್ಲೆಗೆ ಸಂಬಂಧ ಪಟ್ಟಂತೆ "ದಿ ಸರಸ್ವತಿ ಬ್ಯಾಂಕ್" ೫-೯-೧೯೨೭ರಲ್ಲಿ ಆರಂಭವಾಯಿತು. ಇದರ ಕೇಂದ್ರ ಕಛೇರಿ ಗುಲಬರ್ಗಾ ನಗರದಲ್ಲಿ ಇತ್ತು. ೧೯೩೦ ರಲ್ಲಿ ಈ ಕಂಪನಿಯ ಷೇರು ಬಂಡವಾಳ ಹಾಲಿ ಸಿಕ್ಕ ರೂ. ೪.೧೦,೭೭೫. ನಷ್ಟದ ಕಾರಣದಿಂದ ೧೯-೧೨-೧೯೫೪ ರಲ್ಲಿ ಈ ಸಂಸ್ಥೆಯ ವ್ಯವಹಾರ ನಿಂತುಹೋಯಿತು. ಜಿಲ್ಲೆಯಲ್ಲಿ ಬ್ಯಾಂಕಿನ ಮೂರು ಶಾಖೆಗಳು ಇದ್ದವು; ಹೈದರಾಬಾದಿನಲ್ಲಿ ಈ ಬ್ಯಾಂಕಿನ ಒಂದು ಶಾಖೆ ಇತ್ತು. ಮುಂದೆ ೧೯೩೦ರಲ್ಲಿ "ಗುಲಬರ್ಗ ಬ್ಯಾಂಕಿಂಗ್ ಕಂಪನಿ" ನೊಂದಾಯಿಸಲ್ಪಟ್ಟಿತು. ಇದರ ಬಂಡವಾಳ ಹಾಲಿ, ಸಿಕ್ಕಿದ್ದು ರೂ. ೯೬೨೯೧. ಇದು ಗುಲಬರ್ಗದಲ್ಲಿ ಒಂದು ಶಾಖೆಯನ್ನು ಹೊಂದಿತ್ತು. ಇದು ೧೯೫೫ರ ಸುಮಾರಿಗೆ ವಿಸರ್ಜನೆಗೊಂಡಿರಬೇಕು. ೧೯೩೪ರಲ್ಲಿ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾದ ಒಂದು ಶಾಖೆ ಗುಲಬರ್ಗದಲ್ಲಿ ಇದ್ದುದಾಗಿ ತಿಳಿದು ಬರುವದು.

ಇದೇ ಜಿಲ್ಲೆಯ ಯಾದಗಿರಿಯಲ್ಲಿ ೧೯೩೮ರಲ್ಲಿ "ಯಾದಗಿರಿ ಬ್ಯಾಂಕ್", ೧೯೪೨ರಲ್ಲಿ "Commercial Banking Co." ಮತ್ತು "ಮಹಬೂಬಿಯಾ ಕಟ್ಟೆ ಚರ ಕಂಪನಿ", ಸುರಪುರದಲ್ಲಿ ೧೯೪೦ರಲ್ಲಿ "ವೆಂಕಟೇಶ" ಎಂಬ ಹೆಸರಿನ ಬ್ಯಾಂಕಿಂಗ್ ಕಂಪನಿ ಕಾರ್ಯನಿರ್ವಹಿಸುತ್ತಿತ್ತು. ಮುಂದೆ ರಾಜ್ಯ ಸರ್ಕಾರದ ಪ್ರವರ್ತಿತ ಹೈದರಾಬಾದ ಸ್ಟೇಟ್ ಬ್ಯಾಂಕಿನ ಶಾಖೆಗಳು ಗುಲಬರ್ಗ (೧೯೪೪), ಶಹಬಾದ (೧೯೪೫), ಗುಲಬರ್ಗದಲ್ಲಿ ಎರಡನೆಯ ಶಾಖೆ (೧೯೫೦) ಆರಂಭಗೊಂಡವು. ರಾಜ್ಯದ ಹೊರಗಿನ ಬ್ಯಾಂಕುಗಳಲ್ಲಿ ಬೊಂಬಾಯಿ ಮೂಲಕ 'ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ' (೧೯೧೧)ವು ಈ ಜಿಲ್ಲೆಯ ಯಾದಗಿರಿಯಲ್ಲಿ ೧೯೫೯ ರಲ್ಲಿಯೇ ಒಂದು ಶಾಖೆಯನ್ನು ಆರಂಭಿಸಿತ್ತು. ಇನ್ನುಳಿದಂತೆ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾಂಕುಗಳ ಪ್ರವೇಶ ಈ ಜಿಲ್ಲೆಗೆ ಏಕೀಕರಣದ ನಂತರವೇ ಆಯಿತು. ಸಿಂಡಿಕೇಟ ಬ್ಯಾಂಕ್ ೧೯೫೭ರಲ್ಲಿ ಮತ್ತು ಕೆನರಾ ಬ್ಯಾಂಕ್ ೧೯೫೭ರಲ್ಲಿ ಆಯಿತು. (ಇಂದು ಈ ಜಿಲ್ಲೆಯಲ್ಲಿ ೨೨ ಬ್ಯಾಂಕಿಂಗ್ ಕಂಪನಿಗಳು ಕಾರ್ಯನಿರ್ವಹಿಸುತ್ತಿರುವವು). ಬೀದರ ಜಿಲ್ಲೆಗೆ ಸಂಬಂಧಪಟ್ಟಂತೆ ಲಭ್ಯ ಇರುವ ಮಾಹಿತಿ ಪ್ರಕಾರ ಜಿಲ್ಲಾ ಕೇಂದ್ರ ಬೀದರಿನಲ್ಲಿ ಹೈದರಾಬಾದ ಸ್ಟೇಟ್ ಬ್ಯಾಂಕಿನಿಂದ ೧೯೪೬ರಲ್ಲಿ ಪ್ರಾರಂಭಿಸಲ್ಪಟ್ಟ ಶಾಖೆಯು ಈ ಜಿಲ್ಲೆಯ ಪ್ರಥಮ ವಾಣಿಜ್ಯ ಬ್ಯಾಂಕಾಗಿತ್ತು. ನಂತರ ಭಾಲಕಿ (೧೯೬೧), ಹುಮನಾಬಾದ (೧೯೬೩), ಬಸವಕಲ್ಯಾಣದಲ್ಲಿ ೧೯೬೪ರಲ್ಲಿ ಆರಂಭಿಸುವ ಮೂಲಕ ಬ್ಯಾಂಕಿಂಗ್ ಸೇವೆಯನ್ನು ಒದಗಿಸುವಲ್ಲಿ ಮುಂದೆ ಬಂತು. ಜಿಲ್ಲಾ ಕೇಂದ್ರ ಬೀದರಿನಲ್ಲಿ ೧೯೪೬ ರಿಂದ ೧೯೬೭ರ ವರೆಗೆ ಒಂದೇ ಒಂದು ಬ್ಯಾಂಕ್ ಶಾಖೆ ಕಾರ್ಯ ನಿರ್ವಹಿಸುತ್ತಿತ್ತು. ಏಕೀಕರಣ ಪೂರ್ವದಲ್ಲಿ ಮತ್ತು ಬ್ಯಾಂಕುಗಳ ಪ್ರಥಮ ರಾಷ್ಟ್ರೀಕರಣದವರೆಗೆ (೧೯೬೯) ಹೈದರಾಬಾದ ಕರ್ನಾಟಕ ಪ್ರದೇಶ ಅದರಲ್ಲಿಯೂ ರಾಜ್ಯದ ಎತ್ತರದ ತುತ್ತತುದಿಯ ಜಿಲ್ಲೆ ಬೀದರ ಬ್ಯಾಂಕಿಂಗ್ ಸೇವೆಯಲ್ಲಿ ಅತ್ಯಂತ ಹಿಂದುಳಿದ ಪ್ರದೇಶವಾಗಿತ್ತು. ಈ ಪ್ರದೇಶದಲ್ಲಿ ಜನಸಾಮಾನ್ಯರಿಗೆ ಬ್ಯಾಂಕಿಗ್ ಸೇವೆಯ ಲಭ್ಯತೆ ಆರಂಭ ವಾದದ್ದು ರಾಷ್ಟ್ರೀಕರಣದ ನಂತರ ಅದರಲ್ಲಿಯೂ ಕೃಷ್ಣಾ ಗ್ರಾಮೀಣ ಬ್ಯಾಂಕು ಆರಂಭಗೊಂಡ ನಂತರ, (೧೯೭೮). ಇದರ ಕೇಂದ್ರ ಕಛೇರಿ ಗುಲಬರ್ಗದಲ್ಲಿ ಇರುವದು ಇದು ಭಾರತೀಯ ಸ್ಟೇಟ್ ಬ್ಯಾಂಕ್‌ನಿಂದ ಪ್ರವರ್ತಿಸಲ್ಪಟ್ಟಿದೆ.

**ರಾಯಚೂರು ಜಿಲ್ಲೆ :** ರಾಯಚೂರು ಜಿಲ್ಲೆಯಲ್ಲಿ ಸಂಘಟಿತ ವಲಯದಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮ ಪ್ರಾರಂಭವಾಗುವ ಸುಮಾರು ನೂರು ವರ್ಷಗಳ ಪೂರ್ವದಲ್ಲಿ 'ಚಾವಣಿ ಫಕೀರಪ್ಪ ಪಂಡ' ಎಂಬ ಹೆಸರಿನ ಖಾಸಗಿ ಕಂಪನಿಯು ಬಹು ವ್ಯಾಪಕ ಪ್ರಮಾಣದಲ್ಲಿ ಲೇವಾದೇವಿ ವ್ಯವಹಾರ ನಡೆಸುತ್ತಿದ್ದುದಾಗಿ ತಿಳಿದು ಬರುವದು. ಈ ಸಂಸ್ಥೆಯು ಈ ಜಿಲ್ಲೆಯಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ ಬುನಾದಿ ಹಾಕುವಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿತ್ತು ಎಂದು ತಿಳಿದುಬರುವದು.

ಇನ್ನು ಸಂಘಟಿತ ವಲಯದ ಬ್ಯಾಂಕುಗಳ ಪೈಕಿ ೧೯೨೦–೩೦ರ ದಶಕದಲ್ಲಿ ಈ ಜಿಲ್ಲೆಯಲ್ಲಿ ಗುಲಬರ್ಗದಲ್ಲಿ ಕೇಂದ್ರ ಕಛೇರಿ ಹೊಂದಿದ್ದ ಸರಸ್ವತಿ ಬ್ಯಾಂಕಿನ (೧೯೨೨) ಒಂದು ಶಾಖೆ ರಾಯಚೂರಿನಲ್ಲಿ ಇದ್ದುದಾಗಿ ತಿಳಿದು ಬರುವದು. ಇದು ಅಲ್ಲದೇ ಮಹಾಲಕ್ಷ್ಮಿ ಡೆಕ್ಕನ್ ಬ್ಯಾಂಕ, ಉಸ್ಮಾನಿಯಾ ಅಜೀಜ ಬ್ಯಾಂಕ್, ಶಾರದಾ ಬ್ಯಾಂಕಿಂಗ್ ಕಂಪನಿ' ಮುಂತಾದ ಕೂಡು ಬಂಡವಾಳ ಸಂಸ್ಥೆಗಳು joint stockಗಳು ಬ್ಯಾಂಕಿಂಗ್ ವ್ಯವಹಾರವನ್ನು ಇತರೇ ವ್ಯವಹಾರ ಗಳೊಂದಿಗೆ ನಡೆಸುತ್ತಿದ್ದವು (ಈ ಸಂಸ್ಥೆಗಳ ಬಗ್ಗೆ ಹೆಚ್ಚಿನ ಮಾಹಿತಿಯು ಲಭ್ಯ ಇರುವುದಿಲ್ಲ). ಬಹುಶಃ ಈ ಸಣ್ಣ ಕಂಪನಿಗಳು ಏಕೀಕರಣ ಪೂರ್ವದಲ್ಲಿ ಒಂದಲ್ಲಾ ಒಂದು ಕಾರಣದಿಂದ ಸಮಾಪನಗೊಂಡಂತೆ ಅಥವಾ ವಿಲೀನ ಗೊಂಡಂತೆ ತಿಳಿದುಬರುವದು. ಇದು ಅಲ್ಲದೇ ಈ ಜಿಲ್ಲೆಯಲ್ಲಿ ೧೯೫೮–೫೯ರ ಸುಮಾರಿಗೆ ೨೦೦ ಲೈಸೆನ್ಸ್ ಪಡೆದ ಖಾಸಗಿ ಲೇವಾದೇವಿಗಾರರು ಕಾರ್ಯ ನಿರ್ವಹಿಸುತ್ತಿದ್ದರು ಎಂದು ತಿಳಿದು ಬರುವದು.

ಹೈದರಾಬಾದ ಕರ್ನಾಟಕದ ಇತರೇ ಜಿಲ್ಲೆಗಳಂತೆ ಇಲ್ಲಿಯೂ ಸಹ ರಾಜ್ಯ ಸರ್ಕಾರದ ಬ್ಯಾಂಕಾಗಿದ್ದ ಹೈದರಾಬಾದ ಸ್ಟೇಟ್ ಬ್ಯಾಂಕ್ ತನ್ನ ಶಾಖೆಯನ್ನು ವಿಸ್ತರಿಸಿದ ನಂತವೇ ಬ್ಯಾಂಕಿಂಗ್ ಸೇವೆಗಳ ಸಮರ್ಪಕ ಸೇವಾ ಸೌಲಭ್ಯ ದೊರೆ ಯುವಂತಾಯಿತು ಎಂದು ಹೇಳಬಹುದು. ಹೈದರಾಬಾದ ಸ್ಟೇಟ್ ಬ್ಯಾಂಕಿನ ರಾಯಚೂರು ಶಾಖೆ ೧೯೪೪ರಲ್ಲಿ ಆರಂಭಗೊಂಡರೆ, ನಂತರ ಕೊಪ್ಪಳದಲ್ಲಿ ೧೯೪೫ರಲ್ಲಿ, ಗಂಗಾವತಿಯಲ್ಲಿ ೧೯೬೦ರಲ್ಲಿ ಆರಂಭಗೊಂಡವು – ಈ ಬ್ಯಾಂಕುಗಳ ಶಾಖೆಗಳಿಗಿಂತ ಹಲವು ವರ್ಷ ಪೂರ್ವದಲ್ಲಿಯೇ ಅಂದರೆ ೧೯೩೫ರಲ್ಲಿ ಬೊಂಬಾಯಿ ಮೂಲದ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ (೧೯೧೧) ರಾಯಚೂರಿನಲ್ಲಿ ತನ್ನ ಒಂದು ಶಾಖೆಯನ್ನು ಹೊಂದಿದ್ದಾಗಿ ತಿಳಿದುಬರುವದು.

ಕರ್ನಾಟಕ ಮೂಲದ ಸಿಂಡಿಕೇಟ್ ಬ್ಯಾಂಕು ರಾಯಚೂರು ಶಾಖೆಯನ್ನು ೧೯೫೫ರಲ್ಲಿ ಮತ್ತು ಕೊಪ್ಪಳ ಈ ಶಾಖೆಯನ್ನು ೧೯೫೭ರಲ್ಲಿ ಮತ್ತು ಕೆನರಾ ಬ್ಯಾಂಕ್ ರಾಯಚೂರಿನಲ್ಲಿ ೧೯೫೮ರಲ್ಲಿ ಶಾಖೆಗಳನ್ನು ಆರಂಭಿಸುವ ಮೂಲಕ ಈ ಜಿಲ್ಲೆಯ ಬ್ಯಾಂಕಿಂಗ್ ಉದ್ಯಮಕ್ಕೆ ಪಾದಾರ್ಪಣ ಮಾಡಿದವು ಎಂದು ತಿಳಿದುಬರುವದು. ಹೈದರಾಬಾದ

ಕರ್ನಾಟಕದ ಇತರೇ (ಅಂದರೆ ಗುಲಬರ್ಗ ಮತ್ತು ಬೀದರ) ಜಿಲ್ಲೆಗಳಿಗೆ ಹೋಲಿಸಿದರೆ ಈ ಜಿಲ್ಲೆಯಲ್ಲಿ ಬ್ಯಾಂಕಿಂಗ್ ಉದ್ಯಮವು ತೀವ್ರಗತಿಯಲ್ಲಿ ಮತ್ತು ಹೆಚ್ಚು ವ್ಯಾಪಕವಾಗಿ ಬೆಳೆದು ಬಂದಿರುವದನ್ನು ಗಮನಿಸಬಹುದು. ಇದಕ್ಕೆ ಕಾರಣ ಈ ಜಿಲ್ಲೆಯಲ್ಲಿ ಏಕೀಕರಣ ಪೂರ್ವದಲ್ಲಿ ಇದ್ದಂತೆ ಮೂಲಭೂತ ಸೌಕರ್ಯಗಳು ಅಂದರೆ ನೀರಾವರಿ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಅನೇಕ ವ್ಯವಸಾಯ ಅಪರಿಮಿತ ಕೈಗಾರಿಕೆಗಳು, ವಿದ್ಯುತ್ತಿನ ಲಭ್ಯತೆ, ವಿಪುಲವಾದ ಖನಿಜ ಸಂಪತ್ತು ಮತ್ತು ಅದರ ಉಪಯೋಗ, ವಿಶೇಷವಾದ ವಾಣಿಜ್ಯ ಬೆಳೆಗಳು ಮತ್ತು ರಾಜಕೀಯ ಕಾರಣಗಳು ಎಂದು ವರ್ಗೀಕರಿಸಬಹುದು.

**ಸಹಕಾರ ಚಳವಳಿ ಮತ್ತು ಸಹಕಾರಿ ಬ್ಯಾಂಕಿಂಗ್ :** ಭಾರತದಲ್ಲಿ ಸಹಕಾರ ಆಂದೋಲನವು ಕಾನೂನಿನ ಚೌಕಟ್ಟಿನಲ್ಲಿ ೧೯೦೪ರಲ್ಲಿ ಆರಂಭಗೊಂಡರೂ, ಹಿಂದಿನ ಹೈದರಾಬಾದ ಸಂಸ್ಥಾನದಲ್ಲಿ ಈ ಚಳವಳಿಯು ರೂಪಗೊಂಡದ್ದು ಒಂದು ದಶಕದ ನಂತರ, ಅಂದರೆ ೧೯೧೪ರಲ್ಲಿ ದೇಶದ ಇತರೇ ಭಾಗಗಳಲ್ಲಿ ಇತರೇ ಸಂಸ್ಥಾನಿಕರ ಆಡಳಿತ ಪ್ರದೇಶಗಳಲ್ಲಿ, ೧೯೦೫ರಲ್ಲಿ ಸಹಕಾರ ವ್ಯವಸ್ಥೆಯು ಆರಂಭಗೊಂಡರೂ, ನೈಜಾಮ ರಾಜ್ಯದಲ್ಲಿ ಒಂದು ದಶಕ ತಡವಾಗಿ ಆರಂಭವಾಗಲು ಬಹುಶಃ ದೇಶದ ಇತರೇ ಭಾಗಗಳಲ್ಲಿ ಈ ಚಳವಳಿಯ ಪ್ರಾರಂಭಿಕ ಪರಿಣಾಮಗಳನ್ನು ಕಾಯ್ದು ನೋಡುವ ಉದ್ದೇಶ ಇದ್ದಿರಬಹುದು. ಹೈದರಾಬಾದ ಸಂಸ್ಥಾನದಲ್ಲಿ ಸಹಕಾರಿ ಆಂದೋಲನವು ಹೈದರಾಬಾದ ಸಹಕಾರ ಸಂಘಗಳ ಕಾನೂನು II ೧೯೧೪ರ ಫಸಲಿ (೧೩೨೩) ಅನ್ವಯ ಜಾರಿಯಲ್ಲಿ ಬಂದಿತು. ಗ್ರಾಮೀಣ ಆರ್ಥಿಕ ವ್ಯವಸ್ಥೆಯಲ್ಲಿ ಈ ಚಳವಳಿಯ ಮಹತ್ವವನ್ನು ಕಂಡುಕೊಂಡ ನೈಜಾಮ ಸರ್ಕಾರ ಇದರ ಸಂಪೂರ್ಣ ಅಳವಡಿಕೆಗೆ ಸಹಾಯಕವಾಗುವಂತೆ ೧೯೧೬ರಲ್ಲಿ ಜರ್ಮನಿಗೆ ಫಜಲುಲ್ಲಾ ಎಂಬ ಅಧಿಕಾರಿಯನ್ನು ಸಹಕಾರವನ್ನು ಕುರಿತಂತೆ ವಿಶೇಷ ಅಧ್ಯಯನಕ್ಕೆ ಕಳುಹಿಸಲಾಗಿತ್ತು. ಅಲ್ಲದೇ ಅದೇ ವರ್ಷ ಸಹಕಾರ ಸಂಘಗಳ ರಿಜಿಸ್ಟ್ರಾರ್ ಅವರನ್ನು ನೇಮಿಸಲಾಯಿತು. ಉನ್ನತ ತರಬೇತಿಗಾಗಿ ಅಧಿಕಾರಿಗಳನ್ನು ಮದ್ರಾಸ್ ಮತ್ತು ಪೂನಾಗಳಿಗೆ ಕಳುಹಿಸಿಕೊಡಲಾಗುತ್ತಿತ್ತು. ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರ ಸಂಸ್ಥೆಗಳ ಆರಂಭ ಮತ್ತು ಅವುಗಳ ನಿರ್ವಹಣೆಗೆ ಸಹಾಯಕವಾಗುವಂತೆ ೨೦-೩೦ ಹಳ್ಳಿಗಳಿಗೆ ಒಬ್ಬರಂತೆ ಸುಪರವಾಯಜರರನ್ನು ನೇಮಿಸಿ ಅವರ ಖರ್ಚು ವೆಚ್ಚವನ್ನು ಸರ್ಕಾರವೇ ಭರಿಸುತ್ತಿತ್ತು. ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರ ವ್ಯಾಪಿಸಲು ಇದು ಸಹಾಯಕವಾಯಿತು. ಸಹಕಾರ ಚಳವಳಿಯನ್ನು ಬಲಪಡಿಸಲು ಸಹಾಯಕವಾಗುವಂತೆ, ೧೯೩೪ರಲ್ಲಿ ಸರ್ಕಾರವು "ಹೈದರಾಬಾದ ಸಹಕಾರ ಸಂಸ್ಥೆಗಳ ಹಣಕಾಸು ವಿಚಾರಣಾ ಸಮಿತಿ"ಯನ್ನು ನೇಮಿಸಿತು. ಸದರಿ ಸಮಿತಿಯ ಶಿಫಾರಸುಗಳ ಅನ್ವಯ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳಿಗೆ ರಾಜ್ಯ ಸರ್ಕಾರ ಹಣಕಾಸಿನ ನೆರವನ್ನು ಒದಗಿಸಲು ಮುಂದಾಯಿತು. ಇದರಿಂದ ಪ್ರಾಥಮಿಕ ಸಹಕಾರ ಸಂಘಗಳ ಹಣಕಾಸಿನ ಬೇಡಿಕೆಯನ್ನು ಪೂರೈಸಲು ಸಹಾಯಕವಾಯಿತು. ಇದೇ ಸಮಿತಿಯ ವರದಿಯ ಅನ್ವಯ ತಾಲೂಕು ಮಟ್ಟದಲ್ಲೂ ವ್ಯವಸಾಯದ ಅಭಿವೃದ್ಧಿಗೆ ಸಹಾಯಕವಾಗುವಂತೆ ತಾಲ್ಲೂಕು ಅಭಿವೃದ್ಧಿ ಯೂನಿಯನ್‌ಗಳನ್ನು ಮತ್ತು ಗ್ರಾಮೀಣ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಲು ಗ್ರೇನ್ಸ್ ಬ್ಯಾಂಕು (ದವಸದ ಬ್ಯಾಂಕುಗಳು)ಗಳನ್ನು ಪ್ರಾರಂಭಿಸಲಾಯಿತು. ದವಸದ ಬ್ಯಾಂಕುಗಳ ಆರಂಭ ಬಡರೈತರಿಗೆ ತುಂಬಾ ಅನುಕೂಲಕರವಾದ ವ್ಯವಸ್ಥೆಯಾಗಿತ್ತು. ನೈಜಾಮ ಸರ್ಕಾರದ ಭಾಗವಾಗಿದ್ದ ಗುಲಬರ್ಗ ಜಿಲ್ಲೆಯಲ್ಲಿ ಸಹಕಾರ ಚಳವಳಿಯ ೧೯೧೭ರಲ್ಲಿ ಬೀಜಾಂಕುರವಾಗಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಆರಂಭಿಸುವ ಮೂಲಕ ಈ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ Hyderabad Dominion Co-op Bank (೧೯೧೪) ಇದರ ಪ್ರಥಮ ಶಾಖೆಯಾಗಿತ್ತು. ರಾಯಚೂರು ಮತ್ತು ಬೀದರಗಳಿಗೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಕ್ರಮವಾಗಿ ೧೯೧೯ ಮತ್ತು ೧೯೨೨ರಲ್ಲಿ ಆರಂಭಗೊಂಡವು. ಇದರಿಂದ ಪ್ರಾಥಮಿಕ ವ್ಯವಸಾಯ ಪತ್ತಿನ ಸಂಘಗಳಿಗೆ. ಕೇಂದ್ರ ಬ್ಯಾಂಕಿನ ಮೂಲಕ ಆರ್ಥಿಕ ನೆರವು ನೀಡಲು ಸಹಾಯಕವಾಯಿತು. ಬಡರೈತರನ್ನು ಸಾಹುಕಾರರ ಶೋಷಣೆಯಿಂದ ದೂರಮಾಡಲು ೧೯೩೪ರಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಆರಂಭಿಸಲಾಯಿತು.

೧೯೪೦ರ ದಶಕದಲ್ಲಿ ವಿಶೇಷವಾಗಿ ಗುಲಬರ್ಗ ಜಿಲ್ಲೆಯಲ್ಲಿ ಗ್ರೇನ್ಸ್ ಬ್ಯಾಂಕುಗಳು ಬಹುದೊಡ್ಡ ಪ್ರಮಾಣದಲ್ಲಿ ಹೊರಹೊಮ್ಮಿದವು. ಇವುಗಳ ಮುಖ್ಯ ಉದ್ದೇಶ ಬಡರೈತಾಪಿ ವರ್ಗದಲ್ಲಿ ಆಹಾರ ದಾನ್ಯಗಳ ಉಳಿತಾಯ ಮನೋಭಾವನೆಯನ್ನು ಪ್ರೇರೇಪಿಸುವದು ಮತ್ತು ಸಂಗ್ರಹಿಸಿದ ಧಾನ್ಯವನ್ನು ಸದಸ್ಯರಿಗೆ ಸಾಲ ರೂಪದಲ್ಲಿ ಬೀಜ ಮತ್ತು ಇತರೇ ಅವಶ್ಯಕತೆಗಳನ್ನು ಪೂರೈಸುವದಾಗಿತ್ತು. ಹಣದ ಲೇವಾದೇವಿಯಂತೆ ಧಾನ್ಯಗಳ ಲೇವಾದೇವಿ ವ್ಯವಹಾರ ಈ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿತ್ತು.

**ಶಹರಿ ಬ್ಯಾಂಕುಗಳು :** ನಗರ ಪ್ರದೇಶದಲ್ಲಿ ವ್ಯವಸಾಯೇತರ ಉದ್ದೇಶಗಳಿಗೆ ಸಾಲ ಸೌಲಭ್ಯವನ್ನು ಒದಗಿಸಲು ಸಹಾಯಕವಾಗುವಂತೆ ಸ್ಥಳೀಯ ಸಹಕಾರಿ ನಾಯಕರಿಂದ ಅರ್ಬನ್ ಸಹಕಾರಿ ಬ್ಯಾಂಕುಗಳು (ಶಹರಿ ಬ್ಯಾಂಕುಗಳು) "ಅಂಜುಮನೆ ಇಮದಾದಿ ಬಹಮನಿ" ಕಾನೂನಿನ ಅನ್ವಯ

ಆರಂಭಗೊಂಡವು. ಈ ಬ್ಯಾಂಕುಗಳು ೧೯೩೨ ರಿಂದ ೧೯೪೧ರ ವರೆಗೆ ಗುಲಬರ್ಗ ಮತ್ತು ಬೀದರ ಜಿಲ್ಲೆಗಳಲ್ಲಿ ಆರಂಭಗೊಂಡ ಬಗ್ಗೆ ದಾಖಲೆಗಳು ದೊರೆಯುವವು. ಈ ಬ್ಯಾಂಕುಗಳ ಪೈಕಿ ಗುಲಬರ್ಗ ಜಿಲ್ಲೆಯ ಮಹಗಾಂವ (೧೯೩೨), ಯಾದಗಿರಿ (೧೯೪೦), ಗುಲಬರ್ಗ (೧೯೪೧) ಬೀದರ ಜಿಲ್ಲೆಯ ಬೀದರ (೧೯೩೫), ಮತ್ತು ಕಮಾಲನಗರ (೧೯೪೦) ಏಕೀಕರಣ ಪೂರ್ವದ ಸಂಸ್ಥೆಗಳಾಗಿವೆ. ಇಂದು ಹೈದರಾಬಾದ ಕರ್ನಾಟಕದ ಜಿಲ್ಲೆಗಳಲ್ಲಿ ಒಟ್ಟು ೩೦ ಪಟ್ಟು ಸಹಕಾರಿ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿದ್ದು ಅವುಗಳ ಜಿಲ್ಲಾವಾರು ವಿವರ ಈ ರೀತಿ ಇರುವದು : ಗುಲಬರ್ಗ (೧೧), ಬೀದರ (೬), ರಾಯಚೂರು (೬), ಮತ್ತು ಕೊಪ್ಪಳ (೭). ಈ ಬ್ಯಾಂಕುಗಳ ಪೈಕಿ, ಬೀದರನಲ್ಲಿ ಎರಡು, ಗುಲಬರ್ಗ ಮತ್ತು ರಾಯಚೂರಿನಲ್ಲಿ ತಲಾ ಒಂದರಂತೆ ಮಹಿಳಾ ಸಹಕಾರಿ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿರುವವು. ಏಕೀಕರಣ ಪೂರ್ವದ ದಶಕಗಳಲ್ಲಿ, ವಾಣಿಜ್ಯ ಬ್ಯಾಂಕುಗಳ ಆರಂಭದ ಪೂರ್ವದಲ್ಲಿ ಆಯಾನಗರ ಪ್ರದೇಶಗಳ ವ್ಯವಸಾಯೇತರ ಚಟುವಟಿಕೆಗಳಿಗೆ ಹಣಕಾಸಿನ ನೆರವನ್ನು ಈ ಶಹರಿ ಬ್ಯಾಂಕುಗಳು ಬಹುಮಟ್ಟಿಗೆ ಪೂರೈಸುತ್ತಿದ್ದವು ಮತ್ತು ಸ್ಥಳೀಯವಾಗಿ ಠೇವಣಿಗಳ ಸಂಗ್ರಹಣೆ ಮತ್ತು ಹಣಕಾಸಿನ ನೆರವನ್ನು ನೀಡುವಲ್ಲಿ ಈ ಬ್ಯಾಂಕುಗಳು ಮಹತ್ತರ ಪಾತ್ರ ವಹಿಸುತ್ತಿದ್ದವು ಮತ್ತು ಇಂದಿಗೂ ವಹಿಸುತ್ತಿವೆ – ಇನ್ನುಳಿದಂತೆ ಇತರೇ ಸಹಕಾರ ಸಂಘಗಳು: ಪ್ರಮುಖವಾಗಿ ಮತ್ತು ತಾಲೂಕು ಮಟ್ಟದ ಪ್ರಾಥಮಿಕ ಭೂ ಅಭಿವೃದ್ಧಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು. ವ್ಯವಸಾಯ ಉತ್ಪನ್ನ ಮಾರಾಟ ಸಂಸ್ಥೆಗಳು, ಗೃಹನಿರ್ಮಾಣ, ಗ್ರಾಹಕರ ಸ.ಸ. ನೇಕಾರಿಕೆ, ಕೈಗಾರಿಕಾ ಸ.ಸ.ಗಳು, ಜಿಲ್ಲಾ ಸಹಕಾರಿ ಯುನಿಯನ್, ಏಕೀಕರಣದ ನಂತರದ ವರ್ಷಗಳಲ್ಲಿ ಆರಂಭಗೊಂಡವು. ಗುಲಬರ್ಗ ಜಿಲ್ಲೆಗೆ ಸಂಬಂಧಪಟ್ಟಂತೆ ೧೯೨೫ ರಲ್ಲಿ ಯಾದಗಿರಿ ತಾಲೂಕಿನ ನಸಲವಾಯಿಯಲ್ಲಿ ಆರಂಭಗೊಂಡ ಸಂಘವು ಜಿಲ್ಲೆಯ ಪ್ರಥಮ ಸೇವಾ ಸ.ಸ. ಎಂದು ದಾಖಲೆಗಳಿಂದ ತಿಳಿದುಬರುವದು. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಯಾದಗಿರಿ (೧೯೫೬), ನಂತರ ೧೯೬೦ ರಲ್ಲಿ ಆಳಂದ, ಗುಲಬರ್ಗ ಶಹಾಪುರಗಳಲ್ಲಿ ಆರಂಭಗೊಂಡವು. ಕೈಗಾರಿಕಾ ಸ.ಸ.ಗಳಲ್ಲಿ ೧೯೫೦ರಲ್ಲಿ ಗುರುಮಠಕಲ್‌ನಲ್ಲಿ ಆರಂಭಗೊಂಡ ಚರ್ಮ ಸದಮಾಡುವ ಸ.ಸ. ಜಿಲ್ಲೆಗೆ ಮೊದಲನೆಯದು. ಚಿತ್ತಾಪುರದಲ್ಲಿ (೧೯೫೬)ರಲ್ಲಿ ಆರಂಭಗೊಂಡ ಎಣ್ಣೆಗಾಣದ ಸ.ಸ., ಚಿಂಚೋಳಿಯ ಕಂಬಳಿ ನೇಕಾರರ ಸ.ಸ. (೧೯೫೫) ಜಿಲ್ಲೆಯ ಹಳೆಯ ಕೈಗಾರಿಕಾ ಸ.ಸ.ಗಳು, ಜಿಲ್ಲೆಯಲ್ಲಿ ಪ್ರಥಮವಾಗಿ ೧೯೫೯ರಲ್ಲಿ ವ್ಯವಸಾಯ ಉತ್ಪನ್ನ ಮಾರಾಟ ಸ.ಸ.ಗಳು ಗುಲಬರ್ಗ ಮತ್ತು ಸೇಡಂನಲ್ಲಿ ಆರಂಭಗೊಂಡವು. ಗೃಹ ನಿರ್ಮಾಣ ಸ.ಸ.ಗಳು ೧೯೫೫ರಲ್ಲಿ ಗುಲಬರ್ಗ (ಜೈ ಹನುಮಾನ್), ಚಿತ್ತಾಪುರ ಮತ್ತು ಯಾದಗಿರಿ ೧೯೫೬, ಮತ್ತು ಜಿಲ್ಲೆಯಲ್ಲಿಯೇ ಪ್ರಥಮ ಪ.ಜಾ./ಪ.ಪಂ. ದವರ ಗೃಹ ನಿರ್ಮಾಣ ಸ.ಸ. ೧೯೫೬ರಲ್ಲಿ ಶಹಾಪುರದಲ್ಲಿ ಆರಂಭವಾದುವು ಎಂದು ತಿಳಿದುಬರುವದು.

ಬೀದರನಲ್ಲಿ ೧೯೫೭ರಲ್ಲಿ ಆರಂಭಗೊಂಡ ಅನಮೋಲ್ (Anamol) ಬಿದರಿವೇರ್ ಕೈಗಾರಿಕಾ ಸ.ಸ. ಏಕೀಕರಣ ಪೂರ್ವದ ಸ.ಸ.ಗಳಲ್ಲಿ ಪ್ರಮುಖವಾದದು – ಇನ್ನುಳಿದಂತೆ ಇತರೇ ವಿಧದ ಸ.ಸ.ಗಳು ೧೯೬೦ರ ದಶಕದಲ್ಲಿ ಆರಂಭಗೊಂಡವು.

ಹಳೆಯ ದಾಖಲೆಗಳ ಪ್ರಕಾರ ಗುಲಬರ್ಗ ಜಿಲ್ಲೆಯಲ್ಲಿ ೧೯೫೦–೫೧ ರಲ್ಲಿ ಇದ್ದ ಒಟ್ಟು ಸ.ಸಗಳ ಸಂಖ್ಯೆ ೩೭೬, ಆ ಪೈಕಿ ೩೬೬ ವ್ಯವಸಾಯ ಪತ್ತಿನ ಸ.ಸ.ಗಳು ಆಗಿದ್ದರೆ ೧೦ ಗ್ರಾಮೀಣ ಬ್ಯಾಂಕುಗಳು ಆಗಿದ್ದವು. ಈ ಎಲ್ಲಾ ಸಂಸ್ಥೆಗಳ ಒಟ್ಟು ಸದಸ್ಯರ ಸಂಖ್ಯೆ ೯,೨೭೬ ಆಗಿದ್ದರೆ, ಈ ಸಂಸ್ಥೆಗಳ ಷೇರು ಬಂಡವಾಳ, ದುಡಿಯುವ ಬಂಡವಾಳ ಕ್ರಮವಾಗಿ ರೂ. ೨.೫೨ ಲಕ್ಷ ಮತ್ತು ರೂ. ೧೦.೮೨ ಲಕ್ಷ ಆಗಿತ್ತು. ಈ ಸಂಸ್ಥೆಗಳು ನೀಡಿದ್ದ ಸಾಲದ ಪ್ರಮಾಣ ರೂ. ೧.೫೨ ಲಕ್ಷ ಎಂದು ತಿಳಿದು ಬರುವದು. ಮುಂದುವರೆದು ೧೯೫೫–೫೬ರಲ್ಲಿ ಸ.ಸ.ಗಳ ಸಂಖ್ಯೆ ೪.೪೬ ಕ್ಕೆ ಹೆಚ್ಚಳಗೊಂಡಿತು. ಸದಸ್ಯರ ಸಂಖ್ಯೆ ೧೩,೨೩೪ ಇದ್ದರೆ ಷೇರು ಬಂಡವಾಳ ರೂ. ೨.೭೩ ಲಕ್ಷಕ್ಕೆ ಹೆಚ್ಚಳಗೊಂಡಿತು. ಈ ಸಂಸ್ಥೆಗಳು ನೀಡಿದ್ದ ಸಾಲ ರೂ. ೨.೨೪ ಲಕ್ಷ ಆಗಿದ್ದರೆ ಇವುಗಳ ದುಡಿಯುವ ಬಂಡವಾಳ ರೂ. ೧೨.೭೫ ಲಕ್ಷ ಎಂದು ತಿಳಿದುಬರುವದು.

ಬೀದರ ಜಿಲ್ಲೆಗೆ ಸಂಬಂಧಪಟ್ಟಂತೆ, ಸಹಕಾರ ಚಳುವಳಿಯು ೧೯೨೨ರಲ್ಲಿ ಉದಗಿರ ಮತ್ತು ಬೀದರನಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿಗೆ ಶಾಖೆಗಳನ್ನು ತೆರೆಯುವ ಮೂಲಕ ಆರಂಭವಾಯಿತು. ಏಕೀಕರಣ ಪೂರ್ವದಲ್ಲಿ (೧೯೫೦) ಅವಿಭಜಿತ ಬೀದರ ಜಿಲ್ಲೆ ೯ ತಾಲೂಕುಗಳನ್ನು ಒಳಗೊಂಡಿತ್ತು. ೧೯೫೬ರಲ್ಲಿ ರಾಜ್ಯ ಪುನರ್ ರಚನೆಯ ಸಮಯದಲ್ಲಿ ಆ ಪೈಕಿ ನಾಲ್ಕು ತಾಲೂಕುಗಳು ಕರ್ನಾಟಕ್ಕೆ ವರ್ಗಾವಣೆಗೊಂಡರೆ (ಬೀದರ, ಭಾಲಕಿ, ಹುಮನಾಬಾದ ಮತ್ತು ಔರಾದ) ಉಳಿದ ೫ ತಾಲೂಕುಗಳ ಪೈಕಿ ಎರಡು ಆಂಧ್ರಪ್ರದೇಶಕ್ಕೆ, ಮೂರು ಮಹಾರಾಷ್ಟ್ರಕ್ಕೆ ವರ್ಗಾವಣೆಗೊಂಡವು. ೧೯೨೫–೨೬ರಲ್ಲಿ ಅವಿಭಜಿತ ಬೀದರ ಜಿಲ್ಲೆಯಲ್ಲಿ ೪೮ ಪ್ರಾಥಮಿಕ ವ್ಯವಸಾಯ ಸ.ಸ.ಗಳು ಇದ್ದು ಸದಸ್ಯರ

ಸಂಖ್ಯೆ ೯೦೬ ಮತ್ತು ಷೇರು ಬಂಡವಾಳ ರೂ. ೭,೨೪೫ ಆಗಿತ್ತು; ಜಿಲ್ಲೆಯಲ್ಲಿ ಕೇವಲ ೨ ವ್ಯವಸಾಯೇತರ ಸ.ಸ.ಗಳು ೨೫ ಜನ ಸದಸ್ಯರನ್ನು ಹೊಂದಿದ್ದವು ಎಂದು ತಿಳಿದು ಬರುವದು. ೧೯೫೫ರಲ್ಲಿ ಅವಿಭಜಿತ ಬೀದರ ಜಿಲ್ಲೆಯಲ್ಲಿ, ೨೦,೪೮೫ ಸದಸ್ಯರನ್ನು ಒಳಗೊಂಡ ೫೨೬ ವ್ಯವಸಾಯ ಸ.ಸ. ಇದ್ದು ಅವುಗಳ ಷೇರು ಬಂಡವಾಳ ರೂ. ೪.೫೭ ಲಕ್ಷ; ದುಡಿಯುವ ಬಂಡವಾಳ ರೂ. ೨೨.೨೧ ಲಕ್ಷ ಆಗಿತ್ತು. ಅದೇ ವರ್ಷದಲ್ಲಿದ್ದ ವ್ಯವಸಾಯೇತರ ಸ.ಸ. ಸಂಖ್ಯೆ ೪೧ ಆಗಿದ್ದು, ಸದಸ್ಯರ ಸಂಖ್ಯೆ ೮,೦೩೦ ಆಗಿದ್ದು ಈ ಸಂಸ್ಥೆಗಳ ಷೇರು ಬಂಡವಾಳ ಮತ್ತು ದುಡಿಯುವ ಬಂಡವಾಳಗಳು ಅನುಕ್ರಮವಾಗಿ ರೂ. ೧.೬೩ ಲಕ್ಷ ಮತ್ತು ರೂ. ೫.೨೬ ಲಕ್ಷ ಎಂದು ತಿಳಿದುಬರುವದು. ಈ ಜಿಲ್ಲೆಯ ಪ್ರಥಮ ಭೂ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ೧೯೫೮ರಲ್ಲಿ ಔರಾದದಲ್ಲಿ ಆರಂಭಗೊಂಡರೆ, ಮೊದಲನೆಯ ಗ್ರಾಹಕರ ಸ.ಸ. ೧೯೫೯ರಲ್ಲಿ (ಬೀದರ), ಪ್ರಥಮ ಗೃಹ ನಿರ್ಮಾಣ ಸ.ಸ. ೧೯೫೯ (ಬೀದರ) ಪ್ರಥಮ ಹಾಲು ಉತ್ಪಾದಕರ ಸ.ಸ. ಬೀದರ (೧೯೬೪), ಮೊದಲನೆಯ ಸಹಕಾರಿ ಸಕ್ಕರೆ ಖಾರಖಾನೆ ೧೯೬೧ (ಹಳ್ಳಿಖೇಡ) ಆರಂಭಗೊಂಡವು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಬೀದರ ಜಿಲ್ಲಾ ಗ್ಯಾಸೆಟ್ಟಿಯರ್** – ೧೯೭೭.
೨. **ಗುಲಬರ್ಗ ಜಿಲ್ಲಾ ಗ್ಯಾಸೆಟ್ಟಿಯರ್** – ೧೯೯೭.
೩. **ರಾಯಚೂರು ಜಿಲ್ಲಾ ಗ್ಯಾಸೆಟ್ಟಿಯರ್.**
೪. **ರಾಜ್ಯ ಗ್ಯಾಸೆಟ್ಟಿಯರ್** ಸಂಪುಟಗಳು.
೫. **ಕರ್ನಾಟಕ ಸಹಕಾರ ಕೈಪಿಡಿ** – ೧೯೭೨.
೬. **'ಸಹಕಾರ'** ವಾರಪತ್ರಿಕೆಯ ಹಿಂದಿನ ಸಂಚಿಕೆಗಳು.
೭. **ಇತಿಹಾಸ ದರ್ಶನ** ಸಂಚಿಕೆಗಳಲ್ಲಿ ಪ್ರಕಟವಾದ ಇದೇ ಲೇಖಕರ ಸಹಕಾರಕ್ಕೆ ಸಂಬಂಧಪಟ್ಟ ಲೇಖನಗಳು.


*Land revenue in the days of Badami Chalukyas formed the back bone of the State's income. The state's share was the normal share of one-sixth of the produce. Land revenue formed 20% of the empire's income in the Rastrakuta period and probably in the Chalukya period, it must have been still higher. Besides tax on trade articles (perjunka), There were taxes for maintenance of army, ownership of houses, duties (octroi) as well as excise duties.*

The Chalukyas of Badami (p.141) Ed. Dr. M.S. Nagaraja Rao.

ಡಾ. ಬಿ. ಲೀಲಾ*

# ನವರತ್ನ ರಾಮರಾವ್ ಮತ್ತು ಚಕ್ರವರ್ತಿ ರಾಜಗೋಪಾಲಾಚಾರ್ ಮೈತ್ರಿ ಬಾಂಧವ್ಯ

ಇಂಗ್ಲಿಷ್ ಸಾಹಿತ್ಯದಲ್ಲಿ ಅತ್ಯಂತ ವಿದ್ವಾಂಸರೆಂದು ಖ್ಯಾತಿ ಪಡೆದ ನವರತ್ನ ರಾಮರಾಯರು ಕನ್ನಡದ ವಿಷಯದಲ್ಲಿ ಅತಿಶಯವಾದ ಪ್ರೀತಿಯನ್ನಿಟ್ಟಿದ್ದರು. ಅವರು ಕನ್ನಡದಲ್ಲಿ ಬರೆದದ್ದು ಕಡಿಮೆ. ಆದರೆ ಅವರ ಅನುಭವೈಕ ಸಾಹಿತ್ಯ ಕೃತಿ **"ಕೆಲವು ನೆನಪುಗಳು"** ಮೈಸೂರಿನ ಸಾಮಾಜಿಕ ಚರಿತ್ರೆಯಲ್ಲಿ ಪ್ರಮುಖವಾದ ಪುಸ್ತಕವಾಗಿದೆ. ಹಾಗೆಯೇ ಚಕ್ರವರ್ತಿ ರಾಜಗೋಪಾಲಾಚಾರ್ ಅವರ ರಾಜಕೀಯ ಮುತ್ಸದ್ದಿತನ, ಸ್ವಾತಂತ್ರ್ಯ ಹೋರಾಟ ಇವುಗಳ ಸ್ಥೂಲ ಪರಿಚಯ ಎಲ್ಲರಿಗೂ ಗೊತ್ತಿರುವ ವಿಷಯ. ನವರತ್ನ ರಾಮರಾಯರು ಮತ್ತು ಚಕ್ರವರ್ತಿ ರಾಜಗೋಪಾಲಾಚಾರ್ಯರು ಇಬ್ಬರೂ ಬೇರೆ ಬೇರೆ ವೃತ್ತಿಯಲ್ಲಿದ್ದರೂ ಅವರ ಸ್ನೇಹ ಮತ್ತು ಪತ್ರ ವ್ಯವಹಾರ ನಿರಂತರವಾಗಿ ನಡೆದು, ಈ ಪತ್ರಗಳಲ್ಲಿ ಕಂಡುಬರುವ, ಮಾನವೀಯತೆ, ಸಾಮಾಜಿಕ ವ್ಯವಸ್ಥೆಯ ಚಿತ್ರಗಳು, ಸಾಹಿತ್ಯ ಚಟುವಟಿಕೆ ಇತ್ಯಾದಿಗಳನ್ನು ಇಲ್ಲಿ ದಾಖಲಿಸಿದೆ. ಈ ಪತ್ರಗಳು ಮೈಸೂರಿನ ಸಾಮಾಜಿಕ ಚರಿತ್ರೆಗೆ ಆಕರವಾಗಬಲ್ಲದು. "ರಾಜಗೋಪಾಲಾಚಾರ್ ಹೃದಯದಲ್ಲಿ ಮೈಸೂರಿನವರು" ಎಂದು ಅವರ ಪುತ್ರ ಸಿ.ಆರ್. ನರಸಿಂಹನ್ ಹೇಳಿರುವದನ್ನು[೧] ಇಲ್ಲಿ ಸ್ಮರಿಸಬೇಕು.

ನವರತ್ನ ರಾಮರಾಯರ ಜೀವನದಲ್ಲಿ ಅತ್ಯಂತ ಪ್ರಭಾವ ಬೀರಿದ ಇಬ್ಬರು ವ್ಯಕ್ತಿಗಳು ರಾಜಾಜಿ ಮತ್ತು ಅವರ ಇಂಗ್ಲಿಷ್ ಪ್ರಾಧ್ಯಾಪಕ ಜಾನ್‌ಗುತ್ರಿ ಟೇಟ್. ರಾಜಾಜಿ ಮತ್ತು ನವರತ್ನ ರಾಮರಾವ್ ಇಬ್ಬರೂ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಡಿಗ್ರಿ ಮುಗಿಸಿ, ಮದ್ರಾಸಿನಲ್ಲಿ ಲಾ ಪರೀಕ್ಷೆಮಾಡಿ, ಒಟ್ಟಿಗೆ ಪ್ರಾಕ್ಟೀಸ್ ಮಾಡಲು ಶುರು ಮಾಡಿದರೂ, ರಾಮರಾಯರಿಗೆ ಅದು ಒಗ್ಗಿ ಬರದಿದ್ದರಿಂದ ಮೈಸೂರಿನ ಸಿವಿಲ್ ಸರ್ವೀಸಿಗೆ ಸೇರಿದರು. ವೃತ್ತಿ ಬೇರೆಯಾದರೂ ಸ್ನೇಹ ತಿಳಿನೀರಿನಂತೆ ೬೮ ವರುಷಗಳ ಕಾಲ ನಡೆದುಬಂದು, ರಾಮರಾಯರ ಮರಣದ ನಂತರ ಕೊನೆಗೊಳ್ಳದೆ (೨೮-೧೧-೧೯೬೦) ಮೂರು ತಿಂಗಳ ನಂತರ ರಾಜಾಜಿ ಅವರು ಸೆಂಟ್ರಲ್ ಕಾಲೇಜಿಗೆ ತಮ್ಮ ಗುರುಗಳಾದ 'ಟೇಟ್' ಮತ್ತು ನವರತ್ನ ರಾಮರಾಯರ ಹೆಸರಿನಲ್ಲಿ ಒಂದು ಪುದುವಟ್ಟು ಕಳುಹಿಸಿ, ಅದನ್ನು ಷೇಕ್ಸ್‌ಪಿಯರ್ ನಾಟಕಗಳಲ್ಲಿ ಲಿಖಿತ ಪ್ರತಿಭೆಯನ್ನು ತೋರಿಸುವ ವಿದ್ಯಾರ್ಥಿಗೆ ಸಲ್ಲತ್ತಕ್ಕದೆಂದು ತಿಳಿಸಿದರು.[೨]

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದ ಇತಿಹಾಸವನ್ನು ಅಭ್ಯಸಿಸುವಾಗ ನಮಗೆ ಹೆಚ್ಚು ಕಂಡುಬರುವದು ಆಂಗ್ಲರ ಅನುಕರಣೆ ಮತ್ತು ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮನ್ನಣೆ. ಮೈಸೂರಿನ ಮಟ್ಟಿಗೆ ಹೇಳುವುದಾದರೆ ಆಂಗ್ಲ ವಿದ್ಯಾಭ್ಯಾಸವು ಮೈಸೂರು ಮಹಾರಾಜರಿಂದ ಪ್ರೋತ್ಸಾಹಿಸಲ್ಪಟ್ಟು ೧೮೩೨ರಲ್ಲಿ ರಾಜರ ಸ್ಕೂಲಿನಲ್ಲಿ ಇಂಗ್ಲಿಷ್ ಕಲಿಸಲಾಗುತ್ತಿತ್ತು. ಮಾದರಿ ಮೈಸೂರಿನ ಬೆಳವಣಿಗೆಗೆ ಕಾರಣರಾದವರೆಲ್ಲಾ ಆಂಗ್ಲ ವಿದ್ಯಾಭ್ಯಾಸ ಪಡೆದವರು. ಮತ್ತು ಕ್ರೈಸ್ತ ಮಿಷಿನರಿಗಳ ಪ್ರಭಾವ ಕೂಡ ಸಾಕಷ್ಟು ಇಲ್ಲಿದ್ದುದರಿಂದ, ಆಂಗ್ಲ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಮನ್ನಣೆ ದೊರೆಯಿತು. ಕನ್ನಡ ಭಾಷೆಯನ್ನು ಗೌರವಿಸಿ ಅದಕ್ಕೆ ತಕ್ಕ ಸ್ಥಾನವನ್ನು ಕೊಡಿಸಲು ಹಲವು ಆಂಗ್ಲ ಪ್ರಾಧ್ಯಾಪಕರೂ ಶ್ರಮಿಸಿದ್ದುಂಟು. ಇಲ್ಲಿ ಸೆಂಟ್ರಲ್ ಕಾಲೇಜಿನ ಜಾನ್ ಗುತ್ರಿ ಟೇಟರವರ ಬಗ್ಗೆ ತಿಳಿಸಬೇಕು.

**ಜಾನ್ ಗುತ್ರಿ ಟೇಟ್ :** ಪ್ರೊಫೆಸರ್ ಟೇಟ್‌ರವರು ೧೯೦೮-೧೨ರ ವರೆಗೆ ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದವರು ಮತ್ತು ನವರತ್ನ ರಾಮರಾವ್, ರಾಜಾಜಿ ಮತ್ತು ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರ ಇಂಗ್ಲಿಷ್ ಗುರುಗಳು. ಟೇಟ್‌ರವರಿಗೆ ಇಂಗ್ಲಿಷ್ ಅಲ್ಲದೆ ಸಂಸ್ಕೃತದ ಭಾಷೆ ಪರಿಚಯವಿತ್ತು. ಕನ್ನಡವನ್ನು ಉತ್ತಮ ಮಟ್ಟಕ್ಕೆ ಒಯ್ಯಬೇಕೆಂದು ಶ್ರಮಿಸಿದವರಲ್ಲಿ ಅವರೂ ಒಬ್ಬರು. ಮತ್ತು ಕನ್ನಡಕ್ಕೆ ಉಪ ಪ್ರಾಧ್ಯಾಪಕ ಹುದ್ದೆಯನ್ನು ಮಂಜೂರು ಮಾಡಬೇಕೆಂದು ವಾದಿಸಿದವರಲ್ಲಿ[೩] ಮೊದಲಿಗರು ಮತ್ತು ವಿದ್ಯಾರ್ಥಿಗಳ ಮೆಚ್ಚಿನ ಗುರುಗಳು. ಟೇಟ್ ಅವರು ವಿದ್ಯಾರ್ಥಿಗಳ ಅತ್ಯುತ್ತಮ ಗುಣವನ್ನು ಗುರುತಿಸಿ ಹಲವಾರು ವಿದ್ಯಾರ್ಥಿಗಳ ಏಳ್ಗೆಗೆ ಕಾರಣವಾದವರು.

ರಾಜಾಜಿ ಅವರಿಗೆ ಅವರ ತಂದೆ ಹಳುಹಿಸುತ್ತಿದ್ದ ಹಣ ಬಹಳ ಸ್ವಲ್ಪ. ಟೇಟ್‌ರವರು ಖುದ್ದಾಗಿ ಮಾಡಿದ

* ಪ್ಲಾಟ್ ನಂ. ೪೬, ಫಸ್ಟ್ ಫ್ಲೋರ್, 'ಶಾಮಲ'; ಮಾತುಂಗ, ಮುಂಬಯಿ – ೪೦೦ ೦೧೯.

ಹಣ ಸಹಾಯ ಮತ್ತು ವಿದ್ಯಾರ್ಥಿ ವೇತನದಿಂದ ರಾಜಾಜಿ ಅವರ ವ್ಯಾಸಂಗ ಮುಂದುವರಿಯಿತು. ನವರತ್ನರಾಮರಾವ್ ಮತ್ತು ರಾಜಾಜಿ ಈರ್ವರೂ ಟೇಟ್‌ರವರ ಅತ್ಯಂತ ಮೆಚ್ಚಿನ ವಿದ್ಯಾರ್ಥಿಗಳು. ಸೆಂಟ್ರಲ್ ಕಾಲೇಜಿನ ಒಂದು ಮೂಲೆಯಲ್ಲಿನ ಬೆಂಚುಹಾಕಿದ ಜಾಗ, ಈ ಇಬ್ಬರೂ ವಿದ್ಯಾರ್ಥಿಗಳಿಗೆ ರಾತ್ರಿ ಮಲಗಲು, ಬೆಳಿಗ್ಗೆ ಓದಲು ಸಾಕಾಗಿತ್ತು.[೪]

ನವರತ್ನ ರಾಮರಾಯರು 'ಕೆಲವು ನೆನಪುಗಳು' ಪುಸ್ತಕ ದಲ್ಲಿ ತಾವು ಟೇಟ್‌ರವರ ವಿದ್ಯಾರ್ಥಿ ಎಂದು ತಿಳಿದುಬಂದ ತಕ್ಷಣ ಬಿಳಿ ಸಾಹೇಬರಲ್ಲಿ ಆದ ಬದಲಾವಣೆಯನ್ನು ಸ್ವಾರಸ್ಯ ಕರವಾಗಿ ವರ್ಣಿಸಿದ್ದಾರೆ[೫] J.G. Tait ಅವರು Edinburgh ನಿಂದ ೧೯೨೫ರಲ್ಲಿ ಮಾಸ್ತಿ ವೆಂಕಟೇಶ ಐಯಂಗಾರರವರಿಗೆ ಬರೆದ ಪತ್ರದಲ್ಲಿ, ತಮ್ಮ ಪ್ರಿಯ ಶಿಷ್ಯರು ತಮ್ಮನ್ನು ಬೀಳ್ಕೊಟ್ಟ ರೀತಿಯನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ. ಸೆಂಟ್ರಲ್ ಕಾಲೇಜಿನ ಹಳೆಯ ವಿದ್ಯಾರ್ಥಿಗಳು ಏರ್ಪಡಿಸಿದ್ದ ವಾರ್ಷಿಕ ಕೂಟದಲ್ಲಿ ರಾಜಾಜಿ ಭಾಗವಹಿಸಿದ್ದಾಗ ಮಾಡಿದ ಭಾಷಣದಲ್ಲಿ ತಮ್ಮ ಗುರುಗಳಾದ ಟೇಟ್ ಅವರನ್ನು ಹೊಗಳಿ, ಅವರ ಎತ್ತರಕ್ಕೆ ಏರುವದು ಯಾರಿಗೂ ಸಾಧ್ಯವಿಲ್ಲವೆಂದರು. ಆಗ ಪ್ರಿನ್ಸಿಪಾಲರಾಗಿದ್ದ ಮೆಕಿಂತೋಷ್ಪ ಅವರು, ರಾಜಾಜಿ ಅವರಿಗೆ ವಂದನೆ ಅರ್ಪಿಸಿದಾಗ, ಟೇಟ್‌ರವರು ಜನರ ಮತ್ತು ವಿದ್ಯಾರ್ಥಿಗಳ ಮೆಚ್ಚಿಗೆ ಪಡೆದಷ್ಟು ಅವರ ನಂತರ ಬಂದ ಪ್ರಾಧ್ಯಾಪಕರಿಗೆ ಇರಲಿಲ್ಲವೆಂಬುದನ್ನು ಒಪ್ಪಿದರು. ಹೀಗೆ ರಾಜಾಜಿ, ಅವರ ಗುರುಗಳಾದ ಟೇಟ್ ಅವರನ್ನು ಬಹಳ ಗೌರವಿಸುತ್ತಿದ್ದರು. ೧೯೩೧ರಲ್ಲಿ ನವರತ್ನ ರಾಮರಾಯರನ್ನು, ದಿವಾನ್ ಮಿರ್ಜಾ ಇಸ್ಮೈಲ್‌ರವರು ಗುಂಡುಮೇಜಿನ ಸಮ್ಮೇಳನಕ್ಕೆ ಕರೆದೊಯ್ದಾಗ ತಮ್ಮ ಗುರುವನ್ನು ಭೇಟಿ ಮಾಡಿರುವ ಸಂಗತಿ ಮಾಸ್ತಿಯವರಿಗೆ ರಾಮರಾಯರು ಬರೆದಿರುವ ಪತ್ರದಿಂದ ತಿಳಿಯಬರುತ್ತದೆ.[೬]

ಜಾನ್ ಗುತ್ರಿ ಟೇಟ್ ಅವರ ಪತ್ನಿ ಕೂಡ ತಮ್ಮ ಯಜಮಾನರ ಶಿಷ್ಯರನ್ನು ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದರು ಎಂಬುದು ರಾಮರಾಯರು ರಾಜಾಜಿ ಅವರಿಗೆ ಬರೆದಿರುವ ಪತ್ರದಿಂದ ವ್ಯಕ್ತವಾಗುತ್ತದೆ.

*Bangalore*
*6-12-1950*

*My dear Rajaji,*

*I received today a chrismas card from the Taits with a covering letter from Margaret which touched me greatly. Mrs. Tait who had an accident some time back is disabled by arthritis from writing herself, but sends her greetings to her husband's friends. Can you - I cannot imagine more motherly fondness.*

*Rama Rao.*

ಆಂಗ್ಲ ಕವಿಗಳ ಪ್ರಭಾವ ಸಾಕಷ್ಟು ಇವರಿಬ್ಬರ ಮೇಲಿ ದ್ದರೂ, ಸರಿ ಸಮಾನವಾಗಿ ಕನ್ನಡ ಕವಿಗಳ ಬಗ್ಗೆ ಸಾಕಷ್ಟು ತಿಳಿದಿದ್ದರಿಂದ ಮಾತೃಭಾಷೆಯ ಅಭಿಮಾನವಿತ್ತು. ರಾಜಾಜಿ ಅವರಿಗೆ ಕನ್ನಡ ರೂಢಿಯಲ್ಲಿರದಿದ್ದರೂ ಬರೆಯುವಷ್ಟು ಬರುತ್ತಿತ್ತು ಎಂಬುದನ್ನು ಅವರ ಪತ್ರಗಳಿಂದ ತಿಳಿಯಬಹುದು. ರಾಜಾಜಿ ಮತ್ತು ರಾಮರಾಯರಿಗೆ ಮಾಸ್ತಿ ವೆಂಕಟೇಶ ಐಯಂಗಾರ್ ಅವರ ಸ್ನೇಹ ಇತ್ತು. ನವರತ್ನ ರಾಮರಾಯರು ಮಾಸ್ತಿಯವರ 'ಮಸುಮತಿ' ಕಥೆಯನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿದರು.* ಇದನ್ನು ಮೆಚ್ಚಿದ ರಾಜಾಜಿ ಅವರು 'ಮಸುಮತಿ' ಕಥೆಯನ್ನು 'ತಮಿಳಿಗೆ' ಭಾಷಾಂತರಿಸಿ ದರು. ನವರತ್ನ ರಾಮರಾಯರು ಇಂಗ್ಲಿಷಿನ ಪ್ರತಿಯನ್ನು ಟೇಟ್ ಅವರಿಗೆ, ಇಂಗ್ಲೆಂಡಿಗೆ ಕಳುಹಿಸಿದಾಗ ಟೇಟ್ ಅವರು ಅತ್ಯಂತ ಸಂತೋಷಪಟ್ಟರು.

### ರಾಜಾಜಿ ಮತ್ತು ಖಾದಿ

೧೯೨೦ರ ಹೊತ್ತಿಗೆ ರಾಜಾಜಿ ಮಹಾತ್ಮರಿಂದ ಆಕರ್ಷಿಸಲ್ಪಟ್ಟರು. ಮಹಾತ್ಮರು ಅನಾರೋಗ್ಯದಿಂದ ನಂದಿ ಬೆಟ್ಟದಲ್ಲಿ ವಿಶ್ರಾಂತಿಗಾಗಿ ತಂಗಿದ್ದರು. ಗಾಂಧೀಜಿಯರ ಜೊತೆ ಗಿದ್ದು, ಗಾಂಧೀಜಿಯವರ ಸಂದರ್ಶನಕ್ಕೆ ಬರುವವರ ನಿಯಂತ್ರಣದ ಹೊಣೆ ರಾಜಾಜಿಯವರ ಮೇಲಿತ್ತು. ಗಾಂಧಿ ಯವರನ್ನು ಸಂದರ್ಶಿಸಲು ಬರುವವರು ಖಾದಿ ಧರಿಸ ಬೇಕಾಗಿತ್ತು. ಗಾಂಧೀಜಿಯವರ ಸಾಯಂ ಪ್ರಾರ್ಥನೆ ಮತ್ತು ರಾಜಾಜಿಯವರ ಖಾದಿ ಪ್ರಚಾರದಿಂದ, ಅನೇಕರು ಖಾದಿ ಭಕ್ತರಾದರು. ಗಾಂಧಿ ಮತ್ತು ರಾಜಾಜಿಯವರು ಖಾದಿಯು ಆರ್ಥಿಕ ಸಂಬಂಧಪಟ್ಟ ವಿಷಯವೆಂದೂ, ಇದಕ್ಕೂ ರಾಜಕಾರಣಕ್ಕೂ ಯಾವ ಜೋಡಣೆಯೂ ಇಲ್ಲವೆಂದು ಸ್ಪಷ್ಟಪಡಿಸಿದ್ದರಿಂದ ಮೈಸೂರು ಸರ್ಕಾರವು ಸ್ಥಳೀಯ ಕಸುಬು ಗಳಿಗೆ ಉತ್ತೇಜನ ಕೊಟ್ಟಿತು. ಗಂಗಾಧರ ದೇಶಪಾಂಡೆಯವರ ನೇತೃತ್ವದಲ್ಲಿ ಖಾದಿ ವಸ್ತುಪ್ರದರ್ಶವನ್ನು ರಾಜಾಜಿ ಏರ್ಪಡಿಸಿ ದ್ದರು. ರಾಜಾಜಿ ಖುದ್ದಾಗಿ ಎಲ್ಲರಿಗೂ ಖಾದಿಯ ಉಪ ಯೋಗವನ್ನು ತಿಳಿಸುತಿದ್ದರಿಂದ ಖಾದಿ ಮೈಸೂರಿನಲ್ಲಿ ಹೆಚ್ಚಿನ ಪ್ರಭಾವಶಾಲಿಯಾಯಿತು. ಮೈಸೂರಿನ ಮಹಾರಾಜರು ಇದಕ್ಕೆ ಬೇಕಾದ ಸಹಾಯವನ್ನು ಒದಗಿಸಿದರು. ಮೈಸೂರು ಸರ್ಕಾರ ಬದನವಾಳದಲ್ಲಿ ಒಂದು ಕೇಂದ್ರವನ್ನು ಸ್ಥಾಪಿಸಲು ಅನುಮತಿ ನೀಡಿತು. ಖಾದಿ ವಸ್ತ್ರಾಲಯವೂ ರಾಜಾಜಿ ಅವರ ಪ್ರೇರಣೆ ಯಿಂದ ಶುರುವಾದದ್ದು. ಇದರ ಮೊದಲನೆ ಮುಖ್ಯಸ್ಥರೇ ಟಿ. ಸದಾಶಿವಂ. ಸರ್ಕಾರವು ಮೈಸೂರಿನಿಂದ ಆರು ಜನರನ್ನು ರಾಜಾಜಿ ಅವರ 'ಪುದುಪಾಳ್ಯಮ್'ನಲ್ಲಿ ಇರುವ ಆಶ್ರಮಕ್ಕೆ ತರಬೇತಿ ಹೊಂದಲು ಕಳುಹಿಸಿತು. ಅದಲ್ಲದೆ ೧೫೦೦ ಚರಕಗಳನ್ನು ತಯಾರಿಸಿಕೊಟ್ಟಿತು. 1st Nov. 1927ರಲ್ಲಿ

ಮೈಸೂರಿನ ಕೇಂದ್ರದಲ್ಲಿ ಹೆಂಗಸರು ಚರಕ ನೂಲಲು ಅವಕಾಶ ವಾಯಿತು ಮತ್ತು ಖಾದಿ ರಾಜಾಜಿ ಅವರಿಂದ, ಮೈಸೂರಿನ ಚರಿತ್ರೆಯಲ್ಲಿ ಕಾಲಿಟ್ಟಿದ್ದು ಆಮೇಲೆ ಹೈದರಾಬಾದ್ ಮೈಸೂರನ್ನು ಅನುಸರಿಸಿತು.

**ನವರತ್ನ ರಾಮರಾವ್ ಮತ್ತು ರಾಜಾಜಿ ಅವರ ಪತ್ರಗಳು :** ನವರತ್ನ ರಾಮರಾಯರು ಮತ್ತು ರಾಜಾಜಿ ಅವರು ನಿರಂತರವಾಗಿ ಪತ್ರ ವ್ಯವಹಾರವಿಟ್ಟಿದ್ದರೂ ಕೂಡ ನಮಗೆ ಕಾಣಸಿಗುವ ಸುಮಾರು ಪತ್ರಗಳು ೧೯೪೭ರ ನಂತರ ಬರೆದದ್ದು. ಪ್ರತಿಯೊಂದು ಕಾಗದದಲ್ಲಿ ನಮಗೆ ಗೋಚರ ವಾಗುವ ಸಂಗತಿ, ಒಬ್ಬರನ್ನೊಬ್ಬರು ಗೌರವದಿಂದ ಪ್ರೀತಿ ಯಿಂದ ಕಾಣುವ ರೀತಿ, ವ್ಯಾಸಂಗದ ಅರಿವು ಮತ್ತು ಚರ್ಚೆ, ಓದಿನ ವಿನಿಮಯ ಮತ್ತು ಸಹಾಯ. ಇದಕ್ಕೆ ಉದಾಹರಣೆ ಯಾಗಿ ೧೯೧೧ರಲ್ಲಿ ವಿಯೋಗದಿಂದ ಧೈರ್ಯ ಕುಂದಿದ್ದ ಶಿವಮೊಗ್ಗೆಯಲ್ಲಿ ಅಧಿಕಾರಿಯಾಗಿದ್ದ ರಾಮರಾಯ ರನ್ನು, ೪೦ ಮೈಲಿ ದೂರ ಬೈಸಿಕಲ್ಲಿನಲ್ಲಿ ರಾಜಾಜಿ ಹೋಗಿ ನೋಡಿ ದ್ದನ್ನು ನೆನಪಿಸಬೇಕು.

ರಾಜಾಜಿ ಅವರು ಬರೆದ ಪ್ರತಿಯೊಂದು ಕೃತಿಯನ್ನೂ ರಾಮರಾಯರು ತಿದ್ದಿ ವಿಮರ್ಶಿಸುತ್ತಿದ್ದರು. ರಾಮರಾಯರ ಒಪ್ಪಿಗೆಯನ್ನು ರಾಜಾಜಿ ಅತ್ಯಂತ ಹೆಚ್ಚಿನದೆಂದು ಭಾವಿಸಿದ್ದರು. ಉದಾಹರಣೆಗೆ ರಾಜಾಜಿ ಗೌರ್‍ನರ್ ಜನರಲ್ ಆಗಿದ್ದಾಗ ರಾಮರಾಯರಿಗೆ ಬರೆದ ಪತ್ರ.

*Government House*
*New Delhi*
*21-8-1949*

*My dearest Rama Rao*

*Your delightful letter of 18th Aug. I am reading Esmond. You may not know how many of these classics, I never read but only knew through you . . . . . . . . . . . . . . . . . . . . . . . you may do what ever you like with with it as I know what your touch can make, written by me and corrected by you is like a Dakshina after a feast.*

*Love*
*Raj*

ಮತೊಂದು ರಾಮರಾಯರಿಗೆ ರಾಜಾಜಿ ಬರೆದ ಪತ್ರ (ಮಹಾಭಾರತದ ಪುನಃ ಪರಿಶೀಲನೆಯನ್ನು ಮಾಡಿದಾಗ)

*Government House*
*New Delhi*
*23-4-1949*

*My dear RamaRao,*

*What a fine piece of work you have made of this Mahabharata revision. You have surpassed my expectation by your revision. Narasimhan (Rajajis son) wants the manuscript to be kept as a fine example of English composition in motion.*

*Love*
*Raj*

ಮತ್ತೊಂದು ಕಡೆ ರಾಜಾಜಿ "ಆರ್ಥರ್ ಮೂರ್" ಕವಿ ಹಿಂದೂಸ್ತಾನ್ ಟೈಮ್ಸ್ ಪತ್ರಿಕೆಯಲ್ಲಿ ಮಹಾಭಾರತದ ವಿಮರ್ಶೆ ಮಾಡಿ ಅದರ ಇಂಗ್ಲಿಷ್ ಶೈಲಿಯನ್ನು ಹೊಗಳಿದಾಗ ರಾಜಾಜಿ ರಾಮರಾಯರಿಗೆ ಪತ್ರ ಬರೆದು ಈ ಪ್ರಶಂಸೆ ರಾಮರಾಯರಿಗೆ ಸಲ್ಲಬೇಕೆಂದೂ ಕರ್ತೃ ಅವರೆಂದೂ, ಇದನ್ನು ತಾವು ಧರಿಸತಕ್ಕದ್ದಲ್ಲವೆಂದು ಸ್ಪಷ್ಟಪಡಿಸಿದ್ದಾರೆ; ಆದರೆ ನಿನ್ನದನ್ನು ನನ್ನದಾಗಿಸಿಕೊಳ್ಳಲು ಅಥವಾ ನನ್ನದನ್ನು ನಿನ್ನದಾಗಿಸಿಕೊಳ್ಳಲು ಏನಡ್ಡಿ ಎಂತಲೂ ಕೇಳಿದ್ದಾರೆ.[೮]

ರಾಮರಾಯರಿಗೆ, ರಾಜಾಜಿ ಅವರನ್ನು ಗೌರ್‍ನರ್ ಜನರಲ್ ಪದವಿಗೆ ಆಯ್ಕೆ ಮಾಡಿರುವ ಸಂಗತಿ, ರಾಮ ರಾಯರಿಗೆ ತಿಳಿದುಬಂತು. ಇದು ನಿಜವೆ? ಎಂದು ರಾಮ ರಾಯರು ಕೇಳಿದ ಪತ್ರಕ್ಕೆ ರಾಜಾಜಿ ಅವರ ರಹಸ್ಯವಾದ ಉತ್ತರ; ಇದರಲ್ಲಿ ಹೆಚ್ಚಿಗೆ ಏನೂ ಕಾಣುತ್ತಿಲ್ಲ. ಮುಖ್ಯವಾದ ಸಂಗತಿ ಎಂದರೆ "ಒಬ್ಬ ಭಾರತೀಯ ಪ್ರಜೆ ಈ ಹುದ್ದೆಯನ್ನೂ ಮೊದಲನೆಯದಾಗಿ ಅಲಂಕರಿಸಿರುತ್ತಿರುವದು". ತಾವು ಡಾರ್ಜಲಿಂಗ್‌ಗೆ ಹೋಗುವುದಾಗಿಯೂ, ರಾಮರಾಯರು ಬರುವುದಾದರೆ ಸಂತೋಷವೆಂದೂ, ೩ನೇ ತಾರೀಖು ಕಲಕತ್ತೆಗೆ ಪ್ರಯಾಣಿಸುವುದಾಗಿಯೂ ಕಲಕತ್ತೆಗೆ ಬಂದರೆ "ಮುದ್ದುಗಿಣಿಯ" ಹಾಗೆ ರಾಮರಾಯರನ್ನು ನೋಡಿಕೊಳ್ಳು ವೆನೆಂದು ಬರೆದಿದ್ದಾರೆ.[೯] ಎಲ್ಲರಿಗಿಂತ ರಾಮರಾಯರಿಗೆ ರಾಜಾಜಿ ಗೌರ್‍ನರ್ ಜನರಲ್ ಆಗುವದು ಅತ್ಯಂತ ಸಂತೋಷ ತಂದಿತ್ತು. ರಾಮರಾಯರು ರಾಜಾಜಿಗೆ ಅವರಿಗೆ ಬರೆದದ್ದು.

*My dear Rajaji,*

*You will God grant live in the history by the side of your immortal friend, the Mahatma.*[೧೦]

ನವರತ್ನ ರಾಮರಾಯರು, Dec. 5, 1959 'Swarajya' ಎಂಬ ಪತ್ರಿಕೆಗೆ ಬರೆದ ಲೇಖನದಿಂದ ರಾಮ ರಾಯರ ವ್ಯಕ್ತಿತ್ವದ ಪೂರ್ಣ ಪರಿಚಯ ಪಡೆಯಬಹುದು. ೧೯೨೪ರಲ್ಲಿ ಮೈಸೂರು ಸಾಮ್ರಾಜ್ಯಶಾಹಿ ವಸಾಹತಿನಲ್ಲಿತ್ತು. ರಾಜಾಜಿ ಆಗತಾನೆ ಜೈಲಿನಿಂದ ಬಿಡುಗಡೆ ಹೊಂದಿದ್ದರು. ಅವರ ಆರೋಗ್ಯ ಸೂಕ್ಷ್ಮವಾಗಿತ್ತು ಮತ್ತು ವಿಶ್ರಾಂತಿಗಾಗಿ ರಾಮರಾಯರಲ್ಲಿ, ಕೆಲವು ದಿವಸ ಇರುವ ಇಚ್ಛೆಯನ್ನು ವ್ಯಕ್ತಪಡಿಸಿದಾಗ, ಮೈಸೂರು ಸರ್ಕಾರಕ್ಕೆ ಸೂಕ್ತ ಉತ್ತರ ಕೊಟ್ಟು ತಾವು ಮಾಡುತ್ತಿರುವ ಕೆಲಸದ ಅರಿವು ತಮಗಿದೆ

ಯೆಂದು ತಿಳಿಸಿ, ಪರಿಣಾಮಕ್ಕೆ ಹೆದರುವುದಿಲ್ಲವೆಂದು ತಿಳಿಸಿದರು. ೧೯೪೪ರಲ್ಲಿ ರಾಜಾಜಿ ಗೌರ್‍ನರ್ ಜನರಲ್, ಆಗಿ ಭೇಟಿ ಕೊಟ್ಟಾಗ, ೧೯೨೪ರ ರಾಜಾಜಿ ಅವರ ಭೇಟಿ, ಕೇವಲ ತಮಗೋಸ್ಕರ, ಖಾಸಗಿಯಾದದ್ದು ತಮ್ಮ ಸಂತೋಷದ್ದು ಎಂಬುದನ್ನು ನೆನಪಿಸಿತು.

ಅಭಿಮಾನ ಶಾಲಿಯಾದ ರಾಮರಾಯರು, ಎಂತಹ ಸಂದರ್ಭದಲ್ಲೂ ಧೃತಿಗೆಡದೆ ಮನಸ್ಸಿಗೆ ಸರಿ ತೋರಿದ್ದನ್ನೆ ಮಾಡುವವರು. ಹೀಗಾಗಿ ಭಾರತರತ್ನ ಎಮ್.ಎಸ್. ಸುಬ್ಬುಲಕ್ಷ್ಮಿಯವರ ಸಂಗೀತ ಕಚೇರಿಗೆ ಹೋಗಲಾಗಲಿಲ್ಲ. ೫೦೦ ರೂಪಾಯಿ ಟಿಕೆಟ್ ಕೊಟ್ಟು ಹೋಗುವದು ಸಾಧ್ಯ ವಾಗಿರಲಿಲ್ಲ. ಒಂದು ವೇಳೆ ಸಾಧ್ಯವಾದಲ್ಲಿ ಆಹ್ವಾನವಿಲ್ಲದೆ ಹೋಗಲು ಮನಸ್ಸಿಗೆ ಒಗ್ಗಿ ಬರಲಿಲ್ಲ. ಆದರೆ ಶ್ರೀಮತಿ ಎಂ.ಎಸ್. ಸುಬ್ಬುಲಕ್ಷ್ಮಿ ಅವರೇ ಆಮೇಲೆ ಮನೆಗೆ ಬಂದು ಹಾಡಿದ್ದನ್ನು ನವರತ್ನ ರಾಮರಾಯರು ತೃಪ್ತಿಯಿಂದ ಕೇಳಿ ಸಂತೋಷಪಟ್ಟಿದ್ದನ್ನು ನಿರೂಪಿಸುವ ರಾಜಾಜಿ ಅವರಿಗೆ ಬರೆದ ಪತ್ರದಿಂದ ತಿಳಿಯಬರುತ್ತದೆ.[೧೧]

**ಪರಿಸಮಾಪ್ತಿ :**

ನವರತ್ನರಾಮರಾಯರ ಬಗ್ಗೆ ಸಾಕಷ್ಟು ಮಾಹಿತಿ, ಮಾಸ್ತಿ ಅವರ "ನವರತ್ನ ರಾಮರಾವ್" ಪುಸ್ತಕದಲ್ಲಿ ದಾಖಲಿಸಿದೆ. ಆದರೆ ಅವರ ಬರವಣಿಗೆ ಮತ್ತು ಪತ್ರ ವ್ಯವಹಾರ ಅವರು ತೀರಿಕೊಂಡ ೪೫ ವರ್ಷದಲ್ಲಿ ಒಮ್ಮೆಯಾದರೂ ಚರ್ಚೆ ಆದ ಹಾಗೆ ಕಂಡಿಲ್ಲ. ಕನ್ನಡದಲ್ಲಿ ಹೆಚ್ಚಿನ ಬರವಣಿಗೆ ಇಲ್ಲದಿದ್ದರೂ, ಕನ್ನಡದ ಅಭಿಮಾನಿಯಾದ ಅವರ ಬರವಣಿಗೆ ಗಳು ಅಪೂರ್ವ ಮತ್ತು ಸಾಮಾಜಿಕ ಚರಿತ್ರೆಗೆ ಆಕರವಾಗ ಬಲ್ಲದು. ಅವರ ಪತ್ರಗಳು ಹಲವಾರು ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಅದು ಸಂಗೀತ, ಸಾಹಿತ್ಯ, ಸಾಮಾಜಿಕ ವ್ಯವಸ್ಥೆ ಅಥವಾ ರಾಜಾಜಿ ಅವರ ಮೇಲೆ ಮಾಡಿದ ಹಲ್ಲೆ ಇರಬಹುದು. ಮಿರ್ಜಾ ಇಸ್ಮೈಲ್ ಅವರ ಜೊತೆ ಮಾತಾಡಿದ ಪ್ರಸಂಗ ಅಥವಾ ಇನ್ನೂ ತಾವು ಓದದ ಅಥವಾ ಓದಬೇಕಾದ ಗ್ರಂಥಗಳು ಅಥವಾ ಆ ಕಾಲದ ಮುಖ್ಯ (Hot subject) ರಾಜ್ಯ ಪುನರ್‌ವ್ಯವಸ್ಥೆಗೆ ಸಂಬಂಧಪಟ್ಟ ಸಂಗತಿ, ಹೀಗೆ ಪಟ್ಟಿ ಬೆಳೆಯುತ್ತದೆ. ಅವರ ಇಂಗ್ಲಿಷ್ ಬರವಣಿಗೆ ವಿದ್ಯಾರ್ಥಿ ಯಾಗಿದ್ದಾಗಲೇ 'Christian College Magazine'ನಲ್ಲಿ ಪ್ರಕಟವಾಗಿತ್ತು. ಲಾ ಕಾಲೇಜಿನಲ್ಲಿ ಓದುತ್ತಿದ್ದಾಗ ಹಣದ ಅವಶ್ಯಕತೆ ಇದ್ದುದರಿಂದ ಲೇಖನದ ಮೂಲಕ ಖರ್ಚು ತೂಗಿಸಬಹುದಿತ್ತು. ದಿವಾನ ಮಿರ್ಜಾರವರು ಇಂಡಿಯಾ ಸರ್ಕಾರಕ್ಕೆ, ಮೈಸೂರಿನಿಂದ ಹೋಗಬೇಕಾದ ಪತ್ರ ಬಹಳ ಚೆನ್ನಾಗಿರಬೇಕಾದರೆ, ನವರತ್ನ ರಾಮರಾಯರಿಗೆ ಒಪ್ಪಿಸು ತ್ತಿದ್ದರು. ೧೯೩೧ರಲ್ಲಿ ಮಿರ್ಜಾರೊಡಗೂಡಿ ರಾಮರಾಯರು ಗುಂಡುಮೇಜು ಸಮ್ಮೇಳನಕ್ಕೆ ಹೋದದ್ದು ವೈಶಿಷ್ಟ್ಯ.

ನವರತ್ನ ರಾಮರಾಯರು ತಮ್ಮ ಅಧಿಕಾರದಲ್ಲಿ ಹಲವಾರು ಉನ್ನತ ಹುದ್ದೆಯನ್ನು ನಿರ್ವಹಿಸಿದರು ಮತ್ತು ತಮ್ಮ ದಕ್ಷತೆಗೆ ಹೆಸರಾದವರು. ಸರ್ಕಾರದ ಸೆಕ್ರೆಟರಿಯಾಗಿ, ರೇಷ್ಮೆ ಇಲಾಖೆ ನಿರ್ದೇಶರಾಗಿ, ಪ್ರಜಾಪ್ರತಿನಿಧಿ ಸಭೆಯ ಅಧಿಕಾರಿಯಾಗಿ ಕೆಲಸ ಮಾಡಿದರು. ಮಹಾರಾಜರ ತಂದೆಯ ವರಾದ, ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರ ಭಾಷಣಗಳನ್ನು ಸಂಪಾದಿಸಿ, ಮಹನೀಯರ ಚರಿತ್ರೆಯನ್ನಾಗಿ ಮಾರ್ಪಡಿಸಿ ಅದನ್ನು ಪ್ರಕಟಪಡಿಸಿದರು. ರಾಜಸೇವಾಸಕ್ತ ಎಂಬ ಬಿರುದನ್ನು ಪಡೆದರು.

ಅವರ ತಾವರೆಕೋಟೆ, ಹೆಣ್ಣಿನ ಹೃದಯ ಮತ್ತು ಲಕ್ಷ್ಮಣರಾಯನ ಭಾಗ್ಯ, ಜೀವನ ಸಾಹಿತ್ಯ ಗ್ರಂಥಮಾಲೆಯಲ್ಲಿ ಪ್ರಕಟವಾಗಿವೆ. 'ವಸುಮತಿ' ಕಥೆಯ ಬಗ್ಗೆ ಆಗಲೇ ಪ್ರಸ್ತಾಪಿಸಿದೆ. ಮಾಸ್ತಿವೆಂಕಟೇಶ ಐಯಂಗಾರ್‌ರವರ "ಚೆನ್ನಬಸವನಾಯಕ" ಕಾದಂಬರಿಯನ್ನು ಇಂಗ್ಲಿಷಿಗೆ ಭಾಷಾಂತರಿಸಿದ ಹೆಗ್ಗಳಿಕೆ ರಾಮರಾಯರದ್ದು.

ಮಾಸ್ತಿಯವರ ಹ್ಯಾಂಲೆಟ್ ಭಾಷಾಂತರಕ್ಕೆ ಮಾಸ್ತಿ ಯವರ ಕೋರಿಕೆ ಮೇಲೆ ವಿಮರ್ಶನ ಲೇಖನ ಬರೆದದ್ದು ಮೆಚ್ಚುಗೆ ಪಡೆಯಿತು. ಇನ್ನು ರಾಜಾಜಿ ಅವರ ಇಂಗ್ಲಿಷ್ ಮಹಾಭಾರತವನ್ನು ಭಾರತೀಯ ವಿದ್ಯಾಭವನ ಪ್ರಕಟಿಸಿದ್ದು, ಪೂರ್ತಿ ಕರಡು ಪ್ರತಿಯನ್ನು ರಾಮರಾಯರು ತಿದ್ದಿದ್ದನ್ನೂ ಅದರ ಲಕ್ಷಾಂತರ ಪ್ರತಿ ಜನ ಕೊಂಡು ಓದಿದ್ದು ಚಾರಿತ್ರಿಕ ದಾಖಲೆ ಎನ್ನಬಹುದು.

ಅಸಾಧಾರಣ ಜ್ಞಾಪಕಶಕ್ತಿಯಿದ್ದ ರಾಮರಾಯರಿಗೆ ಹಲವಾರು ಭಾಷೆಗಳ ಪರಿಚಯವಿತ್ತು. ರಾಮರಾಯರ *'Old Age Utility'* ಎಂಬ ಪ್ರಬಂಧದಿಂದ ಹಲವಾರು ವಿಷಯ ಗಳನ್ನು ಸಂಗ್ರಹಿಸಬಹುದು. ಅವರ ರೇಷ್ಮೆ ಕೃಷಿ ಆಡಳಿತದ ಅನುಭವ, ಮೊದಲನೆ ಯುದ್ಧದಲ್ಲಿ (First World War 1914-16) ಮೈಸೂರು ಸರ್ಕಾರದ ಪರವಾಗಿ ಪ್ಯಾರಾಚೂಟ್ ಸಿಲ್ಕ್ ಒದಗಿಸಲು ಸಹಾಯವಾಯ್ತು.

ರಾಮರಾಯರಿಗೆ ತೀವ್ರಗತಿಯಲ್ಲಿ ಕೈಗೊಳ್ಳುವ ಸುಧಾ ರಣೆಗಳಲ್ಲಿ ನಂಬಿಕೆ ಇರಲಿಲ್ಲವೆಂದು ಅವರ ಬರವಣಿಗಳಿಂದ ಸ್ಪಷ್ಟಪಡುತ್ತದೆ. ಅವರ ಪ್ರಕಾರ ಸಂಪ್ರದಾಯಗಳನ್ನು ಸದಾ ಪಾಲಿಸಲಾಗುವದಿಲ್ಲ. ಕಾಲ ಕ್ರಮೇಣ ಅವು ಮಾರ್ಪಾಡು ಹೊಂದುತ್ತದೆ. ಆದರೆ ಕೆಲವು ವಿಷಯಗಳಲ್ಲಿ ಪೂರ್ಣ ಕ್ರಾಂತಿ ಯಾಗಲೇಬೇಕೆಂದು ಅವರ ಅಭಿಮತ. ಎಲ್ಲಕ್ಕಿಂತ ವಿದ್ಯಾ ಪ್ರಚಾರ ಕ್ರಾಂತಿಕಾರಕ ರೀತಿಯಲ್ಲಿ ನಡೆಯಬೇಕೆಂದು ಅವರ ಅಭಿಪ್ರಾಯವಾಗಿತ್ತು. ವಿದ್ಯೆ ಶತ್ರುವನ್ನು ನಾಶಮಾಡುವ ಏಕೈಕ ಅಸ್ತ್ರ ಎಂದು ತಿಳಿದಿದ್ದರು.

ರಾಮರಾಯರು ಮತ್ತು ರಾಜಾಜಿ ಇವರಿಬ್ಬರ ಬಗ್ಗೆ ಅಭ್ಯಾಸಿಸುವಾಗ ನಮಗೆ ಗೋಚರವಾಗುವದು, ರಾಮರಾಯರೇ ಬರೆದಿರುವಂತೆ ಮೈಸೂರು ವೆಂಕಟಕೃಷ್ಣಯ್ಯನವರ ಅವಲೋಕನ; "ರಾಮರಾಯರ ಸೂಟು, ರಾಜಾಜಿ ಅವರ ಖಾದಿವಸ್ತ್ರ, ರಾಮರಾಯರ ಅಧಿಕಾರ ದರ್ಪ, ರಾಜಾಜಿ ಅವರ ನಿಷ್ಕಪಟ ಸಭ್ಯತೆ". ರಾಮರಾಯರಿಗೆ ತಮ್ಮ ದಕ್ಷ ಅಧಿಕಾರ ಮತ್ತು ಕಾರ್ಯ ನಿರ್ವಹಣೆಯಲ್ಲಿ ಅತ್ಯಂತ ನಂಬಿಕೆ ಮತ್ತು ಅವರದ್ದು ಅತಿ ಸೂಕ್ಷ್ಮ ಮನಸ್ಸು. ರಾಜಾಜಿ ಅವರಾದರೋ ತೆರೆದ ಪುಸ್ತಕ. ರಾಜಾಜಿ ಅವರನ್ನು ಹೊಗಳಿ, ತೆಗಳಿ, ಪ್ರೀತಿಯಿಂದ ಕಂಡವರು ಅಪಾರ.

ಇವರಿಬ್ಬರಲ್ಲಿ ಹಲವು ವ್ಯತ್ಯಾಸವನ್ನು ನಾವು ಕಾಣಬಹುದಾದರೂ ಅವರಲ್ಲಿದ್ದ ಪರಿಶುದ್ಧ ಸ್ನೇಹ ಮತ್ತು ಬಾಂಧವ್ಯ ತಮ್ಮಷ್ಟಕ್ಕೆ ಅಲ್ಲದೆ ಇಬ್ಬರ ಸಂಸಾರವನ್ನು ಬೆಸೆದಿತ್ತು ಎಂಬುದು ಇವರಿಬ್ಬರ ಪತ್ರ ವ್ಯವಹಾರದಿಂದ ಸ್ಪಷ್ಟಪಡುತ್ತದೆ. ಅದೂ ಅಲ್ಲದೆ ಇಬ್ಬರ ಗುರುಗಳಾದ ಜಾನಗುತ್ರಿ ಟೇಟ್ ಕೂಡ ಈ ಬಾಂಧವ್ಯ ಬೆಸೆಯಲು ಕಾರಣ. ಮತ್ತೊಂದು ಇಬ್ಬರ ವ್ಯಾಸಂಗದ ದೃಷ್ಟಿಕೋನ, ರಾಜಾಜಿ ರಾಮರಾಯರಲ್ಲಿ ಕಂಡ ವಿದ್ವತ್ತು ಮತ್ತು ಮರ್ಯಾದೆ, ಇದಕ್ಕೆ ರಾಮರಾಯರ ಪ್ರತ್ಯುತ್ತರ ಸಾರಸ್ವತ ಲೋಕಕ್ಕೆ ಮಾದರಿಯಾದದ್ದು.

ವಿ. ಸೀತಾರಾಮಯ್ಯನವರು,

*ಸ್ವರ್ಗದೊಳಗೀ ಸ್ನೇಹ ದೊರಕುವುದೇನು*
*ಈ ಪರಿಯ ಸೌಹಾರ್ದ ಕೆಳೆಯ ವೈಭವವು*
*ಇಲ್ಲದಿರೆ ನನಗಿಲ್ಲೆ ನೂರು ಜನ್ಮಗಳಿರಲಿ*
*ಎಲ್ಲ ಪರಿ ಮಮತೆಗಳ ಸತ್ಯಜೀವನವು*

ಎಂದಿದ್ದಾರೆ.

ಬೈಬಲ್ ಪ್ರಕಾರ ನಿಷ್ಠಾವಂತ ಸ್ನೇಹಿತ ಬದುಕಿನ ದಿವ್ಯೌಷದ ಮತ್ತು ಸುಭಾಷಿತದಲ್ಲಿ ಕೂಡ ಅದೇ ಅರ್ಥ ಬರುವಂತೆ

*ಕೇನಾಮೃತಮಿದಂ ಸೃಷ್ಟಂ ಮಿತ್ರಮಿತ್ಯಕ್ಷರದ್ವಯಮ್*
*ಅಪದಾಂ ಚ ಪರಿತ್ರಾಣಂ ಶೋಕ ಸಂತಾಪ ಬೇಷಜಮ್*
*[ವಿಪತ್ತಿನಲ್ಲಿ ರಕ್ಷೆ, ದುಃಖಿತಾಪಕ್ಕ ಔಷಧಿ]*

ಕೊನೆಯದಾಗಿ ಮಿಲ್ಟನ್ ಕವಿ ಹೇಳುವಂತೆ

*Unmoved, Unshaken, Unseduced*
*Unterrified His loyalty, he kept, his*
*love, his zeal, no number, nor example*
*with him wrought*
*To swerve from truth or change his*
*constant mind.*

ಬಹುಶಃ ಇದು ರಾಜಸೇವಾಸಕ್ತ ನವರತ್ನ ರಾಮರಾಯರಿಗೂ ಮತ್ತು ಭಾರತರತ್ನ ಚಕ್ರವರ್ತಿ ರಾಜಗೋಪಾಲಚಾರ್ಯರಿಗೂ ಅನ್ವಯಿಸುತ್ತದೆಯೆಂದು ನನಗೆ ಅನ್ನಿಸುತ್ತದೆ.

**APPENDIX :**




Courtesy from the book *Rajamohan* Gandhi *The Rajaji Story; a warrior from South,* 1978.

## RAJAJI AND NAVARATNA RAMA RAO



This Photograph is from a rear book.  Vuppuluri Kalidas (ed.) Rajaji Reader.

*"We were each the external life of the other as Valmiki puts it in respect of Sri Lakshmana and Sri Ramachandra. All life is a mystery. But love is the greatest mystery in it. Dear young men and women, prize friendship as we did - Rama Rao & I. We were like one soul in two bodies and two lives in each body. Rama Rao's life and mine ran on different tracks. What if? This kind of friendship will help you from Sin, from all kinds of meanness. It will protect you like a guardian angel, against all evil, all unhappiness, all stepping down from the ideals of romantic youth."*

**- Rajaji on Sri Navaratna Rama Rao on his death in 1960.**



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. C.R. Narasimhan., 1993, *Rajagopalachar; a biography.*

* ಚಕ್ರವರ್ತಿ ರಾಜಗೋಪಾಲಚಾರ್, [ಮುಂದೆ ರಾಜಾಜಿ ಎಂದು ಸಂಬೋಧಿಸಿದೆ].

೨. Rajamohan Gandhi., 1978, *The Rajaji Story, a warrior from South.*

೩. Diamond Jubilee Celebration of Central College, Bangalore, 1935, p. 9.

೪. Raja Mohan Gandhi., 1978, *The Rajaji Story, A warrior from South,* Vol. I, p. 8.

೫. Navaratna RamRao; *Kelavu Nenapugalu,* p. 136-38.

೬. Masti Venkatesh Iyengar, *Navaratna Ram Rao,* p. 85.

೭. Rajaji-Rama Rao - Correspondence. [Nehru Memorial & Museum Library, New Delhi, 1950]. See also Jayachama Raja Wadiyar, A simple and plain Chakravarthy (in) *Rajaji 93 Souvenir,* 1971, p. 85.

* ತ್ರಿವೇಣಿ ಎಂಬ ಪತ್ರಿಕೆಯಲ್ಲಿ ಮಸುಮತ್ತಿ ಕಥೆ ಇಂಗ್ಲಿಷಿನಲ್ಲಿ ಪ್ರಕಟವಾಯಿತು.

೮. Rajaji's letter to Rama Rao. New Delhi, 15/8/1950. [Nehru Memorial Museum Library, New Delhi, M.SS. Collection. IV instalment] p.20.

೯. Correspondence file. (Secret) Calcutta, 31 May 1948.

೧೦. Raja Mohan Gandhi, *The Rajaji Story,* Vol. II, 1932-1937, p. 160.

೧೧. Letter from Ram Rao to Rajaji, 8-4-58, & 20-5-60. MSS Collection, Nehru Memorial Museum and Library, New Delhi.

ಡಾ. ಎ.ಕೆ. ಶಾಸ್ತ್ರಿ*

# ಡಾ. ಜಿ.ಎಸ್. ದೀಕ್ಷಿತ – ಒಂದು ಚಿರ ನೆನಪು

ನಾಲ್ಕು ದಶಕಗಳಿಗಿಂತಲೂ ಹೆಚ್ಚಿನ ಕಾಲ, ಅಂದರೆ ೧೯೬೦ ರಿಂದ ೨೦೦೪ರ ವರೆಗೆ, ಡಾ॥ ಜಿ.ಎಸ್. ದೀಕ್ಷಿತರ ಮಾರ್ಗದರ್ಶನದಲ್ಲಿ ನಾನು ಸಂಶೋಧನಾ ಕ್ಷೇತ್ರದಲ್ಲಿ ಒಂದೊಂದೇ ಹೆಜ್ಜೆ ಮುಂದೆ ಇರಿಸಿದ್ದು, ಇಂದು ಬರೇ ನೆನಪು. ದಿನಾಂಕ ೧೦-೧-೧೯೧೧ ರಂದು ಹರಿಹರದಲ್ಲಿ ಜನಿಸಿದ ಗಿರಿ ಶ್ರೀಧರ ದೀಕ್ಷಿತ ದಿ. ೨೬-೬-೨೦೦೪ ರಂದು ಧಾರವಾಡದಲ್ಲಿ ತಮ್ಮ ಜೀವನದ ಅಂತಿಮ ಯಾತ್ರೆ ಮುಗಿಸಿದರು. ಬದುಕನ್ನು ವ್ಯರ್ಥವಾಗಿ ಸಾಗಿಸುವವರ ಸಂಖ್ಯೆಯೇ ಹೆಚ್ಚು; ಆದರೆ ಬದುಕನ್ನು ಸಾರ್ಥಕ ಮಾಡಿಕೊಳ್ಳುವವರ ಸಂಖ್ಯೆ ತೀರ ವಿರಳ. ತಮ್ಮ ಸುದೀರ್ಘ ಬದುಕನ್ನು ಇತರರಿಗೆ ಪ್ರಯೋಜನವಾಗುವಂತೆ ಸಾಗಿಸಿದವರು ಡಾ॥ ದೀಕ್ಷಿತ. ಇತಿಹಾಸದ ಪ್ರತಿಭಾನ್ವಿತ ಪ್ರಾಧ್ಯಾಪಕರಾಗಿ, ಶ್ರೇಷ್ಠ ಸಂಶೋಧಕರಾಗಿ, ಆತ್ಮೀಯ ಹಿರಿಯ ಮಾರ್ಗದರ್ಶಕರಾಗಿ, ಸರಳ-ಸಜ್ಜನ ವ್ಯಕ್ತಿಯಾಗಿ, ಎಷ್ಟೋ ಸಂಘ-ಸಂಸ್ಥೆಗಳ ಹುಟ್ಟು ಮತ್ತು ಪ್ರಗತಿಗೆ ಕಾರಣೀಭೂತರಾಗಿ, ಎಲ್ಲರೊಂದಿಗೆ ಬೆರೆತು, ಸಂಶೋಧಕರಿಗೆ ಸದಾ ಪ್ರೇರಣೆ, ಪ್ರೋತ್ಸಾಹ ನೀಡುತ್ತಿದ್ದ ಒಬ್ಬ ಅಪರೂಪದ ವ್ಯಕ್ತಿ – ಡಾ॥ ದೀಕ್ಷಿತ. ಪ್ರಸ್ತುತದಲ್ಲಿ ಅವರ ಜೀವನ ಚರಿತ್ರೆಯನ್ನ ಕುರಿತು ನಾನು ಹೇಳಲು ಹೊರಟಿಲ್ಲ. ಆ ಕೆಲಸವನ್ನು, ಕಡಮೆ ಎನಿಸಿದರೂ, ಇತರರು ಈಗಾಗಲೇ ಮಾಡಿದ್ದಾರೆ. ಸುಮಾರು ನಾಲ್ಕೂವರೆ ದಶಕಗಳ ಅವಧಿಯಲ್ಲಿ ನಮ್ಮಿಬ್ಬರ ಪರಸ್ಪರ ಸಂಪರ್ಕ ಹೇಗಿತ್ತೆಂಬುದಕ್ಕೆ ಸಂಬಂಧಿಸಿ ಕೆಲವು ದೃಷ್ಟಾಂತಗಳನ್ನು ನೀಡಬಯಸುವೆ. ಈ ಅವಧಿಯಲ್ಲಿ ದೀಕ್ಷಿತರು ಸುಮಾರು ೧೦೦ಕ್ಕೂ ಹೆಚ್ಚು ಪತ್ರಗಳನ್ನು ಬರೆದು, ನನಗೆ ಬೇಕಾದ ಮಾಹಿತಿ ನೀಡುತ್ತಿದ್ದರು. ಗುರುಗಳಾದವರು ತನ್ನ ವಿದ್ಯಾರ್ಥಿ ಬಗ್ಗೆ ಇಷ್ಟೊಂದು ಕಾಳಜಿ ವಹಿಸುವದು ಅಪರೂಪ. ಮೊದಲಿನ ಬಹಳಷ್ಟು ಪತ್ರಗಳನ್ನು ಕಳೆದುಕೊಂಡಿದ್ದರೂ, ಅವರ ಅನೇಕ ಪತ್ರಗಳನ್ನು ಇನ್ನೂ ಕಾಯ್ದಿರಿಸಿಕೊಂಡಿದ್ದೇನೆ. ಅವರು ಕೇವಲ ನನಗಷ್ಟೇ ಅಲ್ಲ, ಇತರರಿಗೂ ಇದೇ ರೀತಿ ಪತ್ರ ಬರೆದು ಮಾಹಿತಿ ಒದಗಿಸುತ್ತಿದ್ದರು. ಅವರ ಜೀವನ ಕ್ರಮವೇ ಹಾಗೆ.

ಡಾ॥ ದೀಕ್ಷಿತರನ್ನು ಮೊದಲನೇ ಸಲ ನಾನು ಕಂಡಿದ್ದು ೧೯೬೦ರಲ್ಲಿ. ನಾನು ಸೀನಿಯರ್ ಬಿ.ಎ.ದಲ್ಲಿ ಓದುತ್ತಿದ್ದಾಗ ಬ್ರಿಟನ್‌ದ ಸಂವಿಧಾನದ ಚರಿತ್ರೆಯನ್ನು ಅವರು ವಿದ್ಯಾರ್ಥಿಗಳಿಗೆ ಬೋಧಿಸಿದರು. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಇತಿಹಾಸವನ್ನು ಮುಖ್ಯ ವಿಷಯವನ್ನಾಗಿ ಆಯ್ದುಕೊಂಡವರ ಸಂಖ್ಯೆ ವಿರಳವಾಗಿದ್ದರಿಂದ ಗುರುಗಳು ವಿದ್ಯಾರ್ಥಿಗಳೊಂದಿಗೆ ನಿಕಟ ಸಂಪರ್ಕವನ್ನಿರಿಸಿಕೊಳ್ಳಲು ಸಾಧ್ಯವಾಗಿತ್ತು. ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದ ಅವರು, ಕರ್ನಾಟಕ ಕಾಲೇಜಿನಲ್ಲಿಯೂ ಉಪನ್ಯಾಸ ಮಾಡುತ್ತಿದ್ದರು. ಅದು ವಿಶ್ವವಿದ್ಯಾಲಯದ ನೇರ ಕಕ್ಷೆಯಲ್ಲಿ ಬರುವ ಕಾಲೇಜಾಗಿದ್ದರಿಂದ, ಸ್ನಾತಕೋತ್ತರ ವಿಭಾಗಗಳ ಇನ್ನೂ ಕೆಲವು ಪ್ರಾಧ್ಯಾಪಕರು ಕಲಿಸಲು ಕರ್ನಾಟಕ ಕಾಲೇಜಿಗೆ ಬರುತ್ತಿದ್ದರು. ದೀಕ್ಷಿತರ ಉಡುಪು ಯಾವಾಗಲೂ 'ಫುಲ್ ಸೂಟ್'. ಸರಿಯಾದ ವೇಳೆಗೆ ವರ್ಗ ಪ್ರವೇಶ; ಕಿಸೆಯಲ್ಲಿರಿಸಿದ ಸರಪಳಿಯಿದ್ದ ಗಡಿಯಾರವನ್ನು ಮೇಜಿನ ಮೇಲೆ ಇರಿಸುವಿಕೆ; ನಂತರ ಕಲಿಸಲಿರುವ ವಿಷಯದ ಮುಖ್ಯಾಂಶ, ವಿಷಯದ ಒಂದೊಂದೇ ಅಂಕದ ಸ್ಪಷ್ಟ ವಿವರಣೆ; ಅಲ್ಲಲ್ಲಿ ತಿಳಿಹಾಸ್ಯ; ಒಟ್ಟಿನಲ್ಲಿ ಸಂಶಯಕ್ಕೆ ಎಲ್ಲಿಯೂ ಆಸ್ಪದವಿರದ, ನೇರವಾಗಿ ಮನಮುಟ್ಟುವ ಉಪನ್ಯಾಸ. ಆ ದಿನಗಳಲ್ಲಿ ನಾನು ಪ್ರಸಿದ್ಧ ಅಥ್ಲೆಟಿಕ್ ಕ್ರೀಡಾಪಟು ಆಗಿದ್ದುದರಿಂದ ಅವರ ಪಾಠದ ಪೂರ್ಣ ಪ್ರಯೋಜನವನ್ನು ಪಡೆಯಲಿಲ್ಲವೆಂದೇ ಹೇಳಬೇಕು. ಆದರೂ ನಾನೆಂದರೆ ಅವರಿಗೆ ವಿಶೇಷ ಪ್ರೀತಿ. ಹಾಗೆ ನೋಡಿದಲ್ಲಿ, ಅವರಿಗೆ ಎಲ್ಲ ವಿದ್ಯಾರ್ಥಿಗಳೂ ಅಚ್ಚುಮೆಚ್ಚಿನವರೇ. ದೀಕ್ಷಿತರು ಒಬ್ಬ ಶ್ರೇಷ್ಠ ಟೆನಿಸ್ ಕ್ರೀಡಾಪಟು ಆಗಿದ್ದರಿಂದ, ಆಟಗಾರನಾದ ನನ್ನ ಬಗ್ಗೆ ವಿಶೇಷ ಪ್ರೀತಿ ಬೆಳೆಸಿಕೊಂಡಿರಲು ಸಾಕು. ಕಾಲೇಜಿನಲ್ಲಿ ಓದುತ್ತಿದ್ದಾಗ, ಓದಿನಲ್ಲಿ ಚನ್ನಾಗಿದ್ದರೂ, ಅಂಥ ಹೇಳಿಕೊಳ್ಳುವಂಥ ವಿದ್ವತ್ತು ನನ್ನಲ್ಲಿರಲಿಲ್ಲ.

* ೬೩, ಎಸ್.ಎಸ್. ರೈಸ್ ಮಿಲ್ ಕೆಳಗೆ, ಶಿರಸಿ (ಉ.ಕ.)

ಮುಂದೆ, ೧೯೬೧ರಲ್ಲಿ ಎಂ.ಎ. ಓದಲು ನಾನು ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಇತಿಹಾಸ ವಿಭಾಗವನ್ನು ಸೇರಿದಾಗ, ದೀಕ್ಷಿತರು ಇದ್ದರೂ, ನಂತರ ಅವರು ಅಮೇರಿಕೆಗೆ ತೆರಳಿದರು. ಹೀಗಾಗಿ ಜ್ಯೂನಿಯರ್ ಎಂ.ಎ.ದಲ್ಲಿ ಅವರ ಉಪನ್ಯಾಸಗಳಿಂದ ನಾವು ವಿದ್ಯಾರ್ಥಿಗಳು ವಂಚಿತರಾದೆವು. ಸೀನಿಯರ್ ಎಂ.ಎ. ಪ್ರವೇಶಿಸಿದಾಗ, ಅವರು ಸ್ವದೇಶಕ್ಕೆ ಆಗಮಿಸಿದ್ದರು. ತಮ್ಮ ವ್ಯವಸ್ಥಿತವಾದ ಶೈಲಿಯಲ್ಲಿ ಪ್ರಾಚೀನ ಭಾರತದ ರಾಜಕೀಯ ವಿಚಾರ ಮತ್ತು ಸಂಸ್ಥೆಗಳಿಗೆ ಸಂಬಂಧಿಸಿ ಆ ವರ್ಷ (೧೯೬೨-೬೩) ಅವರು ನೀಡಿದ ಉಪನ್ಯಾಸಗಳನ್ನು ನಾನು ಎಂದೂ ಮರೆಯುವಂತಿಲ್ಲ. ವಿಭಾಗದ ಮುಖ್ಯಸ್ಥರಾಗಿದ್ದ ಡಾ॥ ಬಿ.ಎ. ಸಾಲೆತೂರ ಅವರ ಪ್ರಭಾವಶಾಲಿ ಉಪನ್ಯಾಸಗಳು ಇನ್ನೂ ಕಿವಿಗಳಲ್ಲಿ ಗುನುಗುಡುತ್ತವೆ. ಡಾ॥ ಪಿ.ಬಿ. ದೇಸಾಯಿಯವರೂ ವಿದ್ವಾಂಸರಾಗಿದ್ದರು.

ಎಂ.ಎ. ಪೂರೈಸಿದ ನಂತರ ಬೀದರನ ಬಿ.ವಿ. ಭೂಮರಡ್ಡಿ ಕಾಲೇಜಿನಲ್ಲಿ ಉಪನ್ಯಾಸಕನಾಗಿ ೧೯೬೩-೬೪ರಲ್ಲಿ ಸೇವೆ ಸಲ್ಲಿಸುತ್ತಿದ್ದಾಗಲೂ ನಾನು ಡಾ॥ ದೀಕ್ಷಿತರೊಂದಿಗೆ ಸಂಪರ್ಕವಿರಿಸಿಕೊಂಡಿದ್ದೆ. ಸಂಶೋಧನಾ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಅವರು ನನ್ನನ್ನು ಪ್ರೇರೇಪಿಸಿದರು. ಶಿರಸಿಯ ಕಾಲೇಜನ್ನು ೧೯೬೪ರಲ್ಲಿ ಸೇರಿದಾಗಿನಿಂದ ಅವರೊಂದಿಗೆ ಸಂಪರ್ಕ ಹೆಚ್ಚೆಚ್ಚು ನಿಕಟವಾಗತೊಡಗಿತು. ೧೯೬೯ರ ಮೇ ತಿಂಗಳಿನ ದಿನಾಂಕ ೧೮, ೧೯ ಮತ್ತು ೨೦ ರಂದು ಶಿವಮೊಗ್ಗೆಯಲ್ಲಿ ಕೆಳದಿಯ ಚರಿತ್ರೆಗೆ ಸಂಬಂಧಿಸಿ ಸಮ್ಮೇಳನ ನಡೆಯಿತು. ಸಮ್ಮೇಳನಕ್ಕೆ ಬರಲು ದೀಕ್ಷಿತರು ನನ್ನನ್ನು ಆಮಂತ್ರಿಸಿದ್ದರಿಂದ ನಾನೂ ಸಮ್ಮೇಳನದಲ್ಲಿ ಉಪಸ್ಥಿತನಿದ್ದೆ. ಆದರೆ ನಾನು ಯಾವ ಪ್ರಬಂಧವನ್ನೂ ಮಂಡಿಸಲಿಲ್ಲ. ಡಾ॥ ಎಸ್.ಆರ್. ರಾವ್, ಡಾ॥ ದೀಕ್ಷಿತ, ಎನ್. ಲಕ್ಷ್ಮೀನಾರಾಯಣರಾವ್, ಡಾ॥ ಶೇಖ ಅಲಿ, ಕವಲೇದುರ್ಗದ ಸ್ವಾಮಿಜಿ ಮತ್ತು ದಾವಣಗೆರೆಯ ಸದ್ಯೋಜಾತ ಸ್ವಾಮಿಜಿ ಮೊದಲಾದ ಗಣ್ಯರು ಭಾಗವಹಿಸಿದ್ದರಿಂದ, ಅವರೊಂದಿಗೂ ನನ್ನ ಸಂಪರ್ಕ ಬೆಳೆಯಲು ಅನುಕೂಲವಾಯಿತು. ಈ ಸದವಕಾಶ ಕಲ್ಪಿಸಿಕೊಟ್ಟವರು ಡಾ॥ ದೀಕ್ಷಿತ.

ದೀಕ್ಷಿತರ ಆದೇಶದ ಮೇರೆಗೆ, ೧೯೭೧ರಲ್ಲಿ ಪಿ.ಎಚ್‌ಡಿ.ಗಾಗಿ *'ಎ ಹಿಸ್ಟೊರಿ ಆಫ್ ಶೃಂಗೇರಿ'* ಎಂಬ ವಿಷಯ ಕುರಿತು ಅಧ್ಯಯನ ಪ್ರಾರಂಭಿಸಿದೆ. ಪ್ರಾಧ್ಯಾಪಕ ವೃತ್ತಿಯಿಂದ ಅವರು ನಿವೃತ್ತರಾಗಿದ್ದರೂ, ಸಂಶೋಧನೆಯ ಮಾರ್ಗದರ್ಶಕರಾಗಿದ್ದರು. ತಮ್ಮಲ್ಲಿ ನೊಂದಾಯಿಸಿದ ಎಲ್ಲ ವಿದ್ಯಾರ್ಥಿಗಳಿಗೂ ಸರಿಯಾದ ಮಾರ್ಗದರ್ಶನ ನೀಡಿ ಎಲ್ಲ ವಿದ್ಯಾರ್ಥಿಗಳೂ ಯಶಸ್ವಿಯಾಗುವಂತೆ ಗುರುಗಳು ಕಾಳಜಿ ವಹಿಸುತ್ತಿದ್ದರು. ತಮಗೆ ವಹಿಸಿದ ಜವಾಬ್ದಾರಿಯನ್ನು ಸಮರ್ಥವಾಗಿ ಹೇಗೆ ನಿರ್ವಹಿಸಬೇಕೆಂಬುದನ್ನು ನಾವೆಲ್ಲ ಅವರಿಂದ ಕಲಿಯಬೇಕು. ಅವರ ಆದೇಶದಂತೆ ನಾನು ೧೯೭೧ರಲ್ಲಿ ಶೃಂಗೇರಿಗೆ ಹೋಗಿ, ಜಗದ್ಗುರುಗಳಾದ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರ ದರ್ಶನ ಪಡೆದು, ಅಲ್ಲಿ ಸಂಗ್ರಹಿಸಿಡಲಾಗಿದ್ದ ಕಡತಗಳ ರಾಶಿಯನ್ನು ನೋಡಿ ಬಂದೆ. ಆ ದೊಡ್ಡ ರಾಶಿಯನ್ನು ನೋಡಿ, ಅಧ್ಯಯನ ಕೈಗೊಳ್ಳಲು ನನಗೆ ಧೈರ್ಯ ಸಾಲದಿದ್ದಾಗ, ನನ್ನನ್ನು ಹುರಿದುಂಬಿಸಿ ಕಾರ್ಯಪ್ರವರ್ತನನ್ನಾಗಿ ಮಾಡಿದವರು ದೀಕ್ಷಿತ. ಅವರ ಸಲಹೆಯಂತೆ ಧಾರವಾಡದ ಕೊಪ್ಪಳ ಮಾಸ್ತರ ಮತ್ತು ಮುಖ್ಯವಾಗಿ ಕೆಳದಿಯ ಗುಂಡಾ ಜೋಯ್ಸರನ್ನು ಕಂಡು, ಕನ್ನಡ ಮೋಡಿ ಲಿಪಿಯನ್ನು ಕಲಿಯಲು ಪ್ರಾರಂಭಿಸಿದೆ. ಅಂದು ದೀಕ್ಷಿತರ ಮಾರ್ಗದರ್ಶನದಲ್ಲಿ ಪ್ರಾರಂಭಿಸಿದ ಸಂಶೋಧನಾ ಕಾರ್ಯವನ್ನು ಇಂದಿನವರೆಗೂ ಮುಂದುವರಿಸಿಕೊಂಡು ಬಂದಿರುವೆ. ನಾನು ಮಂಡಿಸಿದ ಮಹಾಪ್ರಬಂಧಕ್ಕೆ ಕರ್ನಾಟಕ ವಿಶ್ವವಿದ್ಯಾಲಯ ೧೯೭೬ರಲ್ಲಿ ಪಿಎಚ್.ಡಿ., ದಯಪಾಲಿಸಿತು.

ಕರ್ನಾಟಕ ಹಿಸ್ಟೊರಿ ಕಾಂಗ್ರೆಸ್‌ನ ಮೂರನೇ ಸಮ್ಮೇಳನ ಮಂಗಳೂರಿನಲ್ಲಿ ೧೯೮೩ರ ಜನವರಿ ೨೮, ೨೯ ಮತ್ತು ೩೦ ರಂದು ನಡೆಯಿತು. ಡಾ॥ ದೀಕ್ಷಿತರ ಆದೇಶದ ಮೇರೆಗೆ ನಾನು *'Haider and Tipu's contacts with the Sringeri Matha'* ಎಂಬ ವಿಷಯ ಕುರಿತು ಪ್ರಬಂಧ ಮಂಡಿಸಿದೆ. ಡಾ॥ ಜಿ.ಎಸ್. ದೀಕ್ಷಿತ ಸಮ್ಮೇಳನಾಧ್ಯಕ್ಷರು ಮತ್ತು ಡಾ॥ ಜಿ.ಎಂ. ಮೊರೇಸ್ ಮುಖ್ಯ ಅತಿಥಿಗಳಾಗಿದ್ದರು. ಪ್ರತಿನಿಧಿಗಳ ಪರವಾಗಿ ನಾಲ್ಕು ಮಾತುಗಳನ್ನು ಆಡುವ ಅವಕಾಶವನ್ನೂ ನನಗೆ ಕಲ್ಪಿಸಿಕೊಡಲಾಯಿತು. ನಂತರ ದೀಕ್ಷಿತರನ್ನು ಕರೆದುಕೊಂಡು ಶಿರಸಿಗೆ ಬಂದೆ. ಅದೇ ಸಂದರ್ಭದಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಅಂದಿನ ಕುಲಪತಿಗಳಾಗಿದ್ದ ಡಾ॥ ಶೇಖಅಲಿಯವರು ನನ್ನನ್ನು ತಮ್ಮ ಮನೆಗೆ ಕರೆದೊಯ್ದು ಉಪಚರಿಸಿದ ಘಟನೆ ಇನ್ನೂ ನೆನಪಿದೆ.

೧೯೮೭ರ ಜುಲೈ ತಿಂಗಳಿನ ೧೫, ೧೬ ಮತ್ತು ೧೭ ರಂದು ಬೆಂಗಳೂರಿನ ನೃಪತುಂಗ ರಸ್ತೆಯಲ್ಲಿರುವ ಯುವಕ ಕೇಂದ್ರದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಥಮ ಸಮ್ಮೇಳನ ಜರುಗಿದ್ದನ್ನು ಸ್ಮರಿಸಿಕೊಳ್ಳಲೇ ಬೇಕು. ಡಾ॥ ದೀಕ್ಷಿತ ಅಕಾದೆಮಿಯ ಅಧ್ಯಕ್ಷರು ಮತ್ತು ಡಾ॥ ವಿ.ಕೃ. ಗೋಕಾಕರು ಸಮ್ಮೇಳನವನ್ನು ಉದ್ಘಾಟಿಸಿದರು. ಸಮ್ಮೇಳನದ ಪೂರ್ವದಲ್ಲಿ ದೀಕ್ಷಿತರು ನನಗೆ ಬರೆದ ಪತ್ರದ ಪಾಠ ಇಂತಿದೆ – "....ನೀವು ಸಮ್ಮೇಳನಕ್ಕೆ ಬರುವದನ್ನು ತಿಳಿದು ಬಹಳ

ಸಂತೋಷವಾಯಿತು. ನಿಮಗೆ ಆಮಂತ್ರಣ ಪತ್ರ ಕಳಿಸಲು ವ್ಯವಸ್ಥೆ ಮಾಡುತ್ತೇನೆ. ಒಂದು ವೇಳೆ ಅದು ನಿಮಗೆ ತಲ್ಪದಿದ್ದರೂ ನೀವು ಬರಬೇಕು. ೧೫ನೇ ಮೇ ಯಿಂದ ಸಮ್ಮೇಳನ ಶುರು. ನೂರು ಪಾಲು ಮಿಥಿಕ್ ಸೊಸೈಟಿಯ ಹೊಸ ಸಭಾಭವನದಲ್ಲಿ ನಿಮಗೆ ಅದರ ಪರಿಚಯವಿದ್ದೇ ಇದೆ. ನೀವು ಇಲ್ಲಿಗೆ ಬಂದಾಗ ಆಜೀವ ಸದಸ್ಯರಾಗಬಹುದು. ನಿಮ್ಮ ಸಂಶೋಧನಾತ್ಮಕ ಪ್ರಬಂಧ ಕನ್ನಡದಲ್ಲಿರಲಿ. ಉಳಿದುದೆಲ್ಲಾ ಸಮಕ್ಷಮ. ಇಂತೀ ವಿಶ್ವಾಸಿ, ಜಿ.ಎಸ್. ದೀಕ್ಷಿತ".

'ಶಿರಸಿ ತಾಲೂಕಿನ ಐತಿಹಾಸಿಕ ಪರಿಚಯ' ಎಂಬ ವಿಷಯ ಕುರಿತು ದಿನಾಂಕ ೧೭ ರಂದು ನಾನು ಪ್ರಬಂಧ ಮಂಡಿಸಿದೆ. ಅಂದಿನ ಪ್ರಥಮ ಸಮ್ಮೇಳನದಲ್ಲಿ ಭಾಗವಹಿಸಿದಾಗಿನಿಂದ ಇಂದಿನವರೆಗೂ ಅಕಾದೆಮಿಯ ಸಮ್ಮೇಳನಗಳಲ್ಲಿ ಭಾಗವಹಿಸುತ್ತಲೇ ಬಂದಿದ್ದೇನೆ. ಮುಂದೊಂದು ವರ್ಷ, ಅಂದರೆ ೨೦೦೨ರಲ್ಲಿ, ನಾನೂ ಸಮ್ಮೇಳನದ ಸರ್ವಾಧ್ಯಕ್ಷ ಆಗಬಹುದೆಂದು ಅಂದು ನಾನು ನಿರೀಕ್ಷಿಸಿರಲಿಲ್ಲ.

ಕರ್ನಾಟಕ ಇತಿಹಾಸ ಅಕಾದೆಮಿಯ ೧೧ನೇ ಸಮ್ಮೇಳನ ಶಿರಸಿಯ ತೋಟಿಗರ ಕಲ್ಯಾಣ ಮಂಟಪದಲ್ಲಿ, ಸ್ವರ್ಣವಲ್ಲೀ ಮಠದ ಆಶ್ರಯದಲ್ಲಿ, ೧೯೯೭ರ ಅಕ್ಟೋಬರ ತಿಂಗಳ ದಿನಾಂಕ ೨೫, ೨೬ ಮತ್ತು ೨೭ ರಂದು ಜರುಗಿತು. ರಾಜ್ಯದ ನಾನಾ ಭಾಗಗಳಿಂದ ಸುಮಾರು ೧೫೦ ಪ್ರತಿನಿಧಿಗಳು ಆಗಮಿಸಿದ್ದರು. ಆ ಸಂದರ್ಭದಲ್ಲಿ ನಾನು ಸ್ಥಳೀಯ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಉಪಸ್ಥಿತರಿದ್ದರು. ಅಕಾದೆಮಿಯ ಆಜೀವ ಗೌರವಾಧ್ಯಕ್ಷರಾಗಿದ್ದ ಡಾ॥ ದೀಕ್ಷಿತರು ನಾನು ಬರೆದ 'ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ' ಎಂಬ ಗ್ರಂಥವನ್ನು ಬಿಡುಗಡೆ ಮಾಡಿ, ತಮಗುಂಟಾದ ಹರ್ಷವನ್ನು ವ್ಯಕ್ತಪಡಿಸಿದರು. ಕೆ. ಅಭಿಶಂಕರ ಅವರು ಸಮ್ಮೇಳನಾಧ್ಯಕ್ಷರು. ಪಂಚವಟಿ ಹೊಟೆಲ್‌ನಲ್ಲಿ ದೀಕ್ಷಿತ ದಂಪತಿಗಳಿಗೆ ಉಳಿಯಲು ವ್ಯವಸ್ಥೆ ಮಾಡಿದ್ದೆ. "ಇದೊಂದು ಅಚ್ಚುಕಟ್ಟಾಗಿ ನಡೆದ ಒಳ್ಳೇ ಸಮ್ಮೇಳನ" ಎಂದು ದೀಕ್ಷಿತರು ತಮ್ಮ ಮೆಚ್ಚುಗೆ ವ್ಯಕ್ತಪಡಿಸುವದರ ಜೊತೆಗೆ, ಸಮ್ಮೇಳನದ ಯಶಸ್ಸಿಗೆ ಕಾರಣರಾದ ಸ್ವರ್ಣವಲ್ಲೀ ಮಠದ ಶ್ರೀ ಶ್ರೀ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳವರಿಗೆ ಕೃತಜ್ಞತಾಪೂರ್ವಕ ನಮನಗಳನ್ನು ಸಲ್ಲಿಸಿದರು. ದೀಕ್ಷಿತರು ಅದೆಷ್ಟು ಉತ್ಸಾಹದಿಂದ ಈ ಸಮ್ಮೇಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರೆಂದರೆ, ನಾವೆಲ್ಲ ಚಿಕ್ಕವರು ನಾಚುವಂತಿತ್ತು. ಗೋವೆಯ ಬಾಂದೋರಾದ ಸೋದೆಯ ರಾಜಕುಮಾರರ ಉಪಸ್ಥಿತಿಯಿಂದಾಗಿ ಸಮ್ಮೇಳನಕ್ಕೆ ರಂಗೇರಿತ್ತು. 'ಸ್ವರ್ಣವಲ್ಲೀ ಮಠದೊಂದಿಗೆ ಸೋದೆಯ ಮಧುಲಿಂಗ ನಾಯಕರ ಸಂಬಂಧ' ಎಂಬ ಪ್ರಬಂಧವನ್ನು ನಾನು ಸ್ವರ್ಣವಲ್ಲೀ ಮಠದಲ್ಲಿ ದಿನಾಂಕ ೨೬ ರಂದು ನಡೆದ ಗೋಷ್ಠಿಯಲ್ಲಿ ಮಂಡಿಸಿದೆ. ಎಲ್ಲರಿಗಿಂತಲೂ ಹಿರಿಯ ವಿದ್ವಾಂಸರಾಗಿದ್ದ ಡಾ॥ ದೀಕ್ಷಿತರ ಉಪಸ್ಥಿತಿಯಿಂದಾಗಿ ಸಮ್ಮೇಳನದ ಘನತೆ ಮತ್ತಷ್ಟು ಹೆಚ್ಚಿತು. ಈ ಸಂದರ್ಭದಲ್ಲಿ ದೀಕ್ಷಿತರು ಆಡಿದ ಒಂದು ಮಾತು ಇನ್ನೂ ನೆನಪಿನಲ್ಲಿದೆ. "ನಿಮಗೆ ಗಂಡು ಮಕ್ಕಳೆಷ್ಟು? ಎಂದು ಸ್ವಾಮಿಜಿಯವರು ಪ್ರಶ್ನಿಸಿದಾಗ, "ಸಂಶೋಧನೆ" ಎಂದು ದೀಕ್ಷಿತ ಉತ್ತರಿಸಿದ್ದರು.

ಇನ್ನೊಂದು ಮಹತ್ವದ ಘಟನೆಯನ್ನು ನಾನು ಸ್ಮರಿಸಿಕೊಳ್ಳಲೇಬೇಕು. ನಾನು ಉಪನ್ಯಾಸಕ ವೃತ್ತಿಯಿಂದ ೧೯೯೮ರಲ್ಲಿ ನಿವೃತ್ತನಾದಾಗ ನನ್ನ ಅಭಿಮಾನಿಗಳೆಲ್ಲ ಸೇರಿ ಸತ್ಕರಿಸಿದರು. ಆ ಸಂದರ್ಭದಲ್ಲಿ ಧಾರವಾಡದ ಡಾ॥ ಜಿ.ಎಂ. ಹೆಗಡೆಯವರು 'ಇತಿಹಾಸ ಸಂಶೋಧಕ' ಎಂಬ ಗ್ರಂಥವನ್ನು ಸಂಪಾದಿಸಿ ಬೆಳಕಿಗೆ ತಂದರು. ಸ್ವರ್ಣವಲ್ಲಿಯ ಸ್ವಾಮಿಗಳು ಅದನ್ನು ಬಿಡುಗಡೆ ಮಾಡಿದರು. ಶೃಂಗೇರಿಯ ಜಗದ್ಗುರುಗಳು ಮತ್ತು ಡಾ॥ ದೀಕ್ಷಿತರು ಶುಭ ಸಂದೇಶ ಕಳಿಸಿದರು. ಪ್ರಸ್ತುತದಲ್ಲಿ, ದೀಕ್ಷಿತರ ಶುಭ ಹಾರೈಕೆಯನ್ನು ಮಾತ್ರ ಉಲ್ಲೇಖಿಸುವೆ.

'ಡಾ॥ ಎ.ಕೆ. (ಅನಂತಕೃಷ್ಣ) ಶಾಸ್ತ್ರಿಗಳು ತಮ್ಮ ವೃತ್ತಿಯಿಂದ ನಿವೃತ್ತರಾಗುತ್ತಿರುವ ಸಂದರ್ಭದಲ್ಲಿ ಅವರ ಅಭಿಮಾನಿಗಳು ಅವರಿಗೆ ಈ ಅಭಿನಂದನ ಗ್ರಂಥವನ್ನು ಅರ್ಪಿಸಿ ಸತ್ಕರಿಸುವದು ಯಥಾ ಯೋಗ್ಯ. ಈ ಗ್ರಂಥಕ್ಕೆ ನಾನು ನಾಲ್ಕು ಮಾತುಗಳನ್ನು ಬರೆಯಬೇಕೆಂದು ಡಾ॥ ಜಿ.ಎಂ. ಹೆಗಡೆಯವರು ಸೂಚಿಸಿದಾಗ ನನಗೆ ಆದ ಆನಂದ ಅಷ್ಟಿಷ್ಟಲ್ಲ. ಯಾಕೆಂದರೆ ನನ್ನ ಶಿಷ್ಯರಲ್ಲಿ ಡಾ॥ ಶಾಸ್ತ್ರಿಗಳು ಅಗ್ರಗಣ್ಯರು. ಈ ಅಭಿನಂದನ ಗ್ರಂಥ ಇವರ ವಿದ್ವತ್ತು ಮತ್ತು ಜನಪ್ರಿಯತೆಗೆ ಸಂಕೇತ. ಇವೆರಡೂ ಗುಣಗಳು ಒಬ್ಬರಲ್ಲಿ ಇರುವದು ಅತಿ ವಿರಳ. ಇವರಲ್ಲಿ ಅವು ಇರುವದು ಬಹುಶಃ ಅವರ ಸಂಶೋಧನೆಯ ಕ್ಷೇತ್ರದಿಂದಿರಬಹುದು. ಮಠಗಳ ದಾಖಲೆಗಳ ಅಭ್ಯಾಸದಲ್ಲಿ ಶಾಸ್ತ್ರಿಗಳು ನಿಷ್ಣಾತರು. ಇವರ ಗ್ರಂಥ 'ಶೃಂಗೇರಿಯ ಇತಿಹಾಸ' ಇಂಗ್ಲೀಷ್ ಮತ್ತು ಕನ್ನಡದಲ್ಲಿ ಪ್ರಕಟವಾಗಿ ಇವರಿಗೆ ರಾಷ್ಟ್ರಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಖ್ಯಾತಿಯನ್ನು ತಂದಿದೆ. ಇಂತಹ ವಿದ್ವಾಂಸರಿಗೆ, ಶ್ರೀ ಸ್ವರ್ಣವಲ್ಲೀ ಮಠದ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಗಳು ತಮ್ಮ ಮಠದ ಇತಿಹಾಸವನ್ನು ಬರೆಯಬೇಕೆಂದು ಆದೇಶಿಸಿದ್ದು ಸೂಕ್ತ. ಈ ಆದೇಶದ ಅನುಸಾರವಾಗಿ ಹೊರಬಂದ 'ಶ್ರೀ ಸ್ವರ್ಣವಲ್ಲೀ ಮಹಾ ಸಂಸ್ಥಾನ'ವೆಂಬ ಪುಸ್ತಕ ಮಠಗಳ ಇತಿಹಾಸಕಾರರಿಗೆ ಮಾದರಿಯಾಗಿದೆ. ಈ

ವಿಷಯದಲ್ಲಿ ಇನ್ನೂ ಆಳವಾದ ಅಭ್ಯಾಸ ಮಾಡುವವರಿಗೆ ನಮ್ಮ ರಾಜ್ಯದ ಪತ್ರಾಗಾರ ಇಲಾಖೆ ಯವರು ಪ್ರಕಟಿಸಿರುವ 'ಶ್ರೀ ಮಂಜುಗುಣಿ ಕ್ಷೇತ್ರದ ಚಾರಿತ್ರಿಕ ದಾಖಲೆಗಳು', ನಮ್ಮ ರಾಜ್ಯದ ಪತ್ರಾಗಾರ ಇಲಾಖೆಗೂ, ಶಾಸ್ತ್ರಿಗಳಿಗೂ ಮತ್ತು ಮಠಕ್ಕೂ ಕೀರ್ತಿಯನ್ನು ತಂದಿವೆ. ಇದೇ ರೀತಿ ಶಾಸ್ತ್ರಿಗಳು ಶೃಂಗೇರಿ ಮಠದ ದಾಖಲೆಗಳ ಪಟ್ಟಿಯನ್ನು ಪ್ರಕಟಿಸಿದ್ದಾರೆ. ಶೃಂಗೇರಿ ಮಠದ ಹೆಚ್ಚಿನ ಅಭ್ಯಾಸ ಮಾಡುವವರಿಗೆ ಈ ಪಟ್ಟಿ ಅತ್ಯವಶ್ಯ. ಹೀಗೆ ತಾವು ಮಾಡಿದ ಅಭ್ಯಾಸದ ವಿಷಯದಲ್ಲಿ ಇತರರು ಮುಂದೆ ಹೋಗುವ ಸಲುವಾಗಿ ಇಲ್ಲಿಯ ದಾಖಲೆಗಳನ್ನು ಪ್ರಕಟಿಸಿದ್ದಾರೆ. ಶೃಂಗೇರಿ ಮಠದ ಹೆಚ್ಚಿನ ಅಭ್ಯಾಸ ಮಾಡುವವರಿಗೆ ಈ ಪಟ್ಟಿ ಅತ್ಯವಶ್ಯ. ಇದು ಸಂಶೋಧಕರಿಗೆ ಇವರು ಕಲ್ಪಿಸಿಕೊಟ್ಟಿರುವ ಸೌಕರ್ಯ.

ಇವರ ಸಂಶೋಧನೆ ಮಠಗಳ ಇತಿಹಾಸಕ್ಕೆ ಮಾತ್ರ ಸೀಮಿತವಾಗಿಲ್ಲ. ಬನವಾಸಿ ಕದಂಬರ ಬಗ್ಗೆ ಒಂದು ಗ್ರಂಥವನ್ನು ಸಂಪಾದಿಸಿದ್ದಾರೆ. ತಮ್ಮ ತಾಲೂಕಾದ ಶಿರ್ಸಿ ತಾಲೂಕಿನ ಬಗ್ಗೆ ಬರೆದ 'ಶಿರಸಿ ತಾಲೂಕಿನ ಇತಿಹಾಸ' ಮತ್ತು ಇವರು ಸಂಪಾದಿಸಿದ 'ಶಿರಸಿ ತಾಲೂಕಾ ದರ್ಪಣ' ಪ್ರಾದೇಶಿಕ ಇತಿಹಾಸಕ್ಕೆ ಇವರ ಕೊಡುಗೆ. ಯಾವ ತಾಲೂಕು ಇಂತಹ ವಿದ್ವತ್ಪೂರ್ಣ ಕೈಪಿಡಿಗಳನ್ನು ಹೊಂದಿಲ್ಲ. ಇವರ ಇತರ ಕೊಡುಗೆಗಳಲ್ಲಿ ಕೆಲವನ್ನು ಪ್ರಸ್ತುತ ಪುಸ್ತಕದಲ್ಲಿ ನೋಡಿದರೆ, ಇವರ ಪಾಂಡಿತ್ಯದ ವಿಸ್ತಾರ ಮತ್ತು ಗುಣಮಟ್ಟಗಳನ್ನು ತಿಳಿದುಕೊಳ್ಳಬಹುದು.

ಈಗ ಇವರು ನಿವೃತ್ತರಾಗುವದರಿಂದ ಇವರ ಸಹಾಯದಿಂದ ಈ ರಾಜ್ಯ ಪತ್ರಾಗಾರ ಖಾತೆಯವರು ರಾಜ್ಯದ ಇತರ ಮಠಗಳ ದಾಖಲೆಗಳನ್ನು ಪ್ರಕಟಿಸಿದರೆ ಆ ಮಠಗಳಿಗೂ ಮತ್ತು ರಾಜ್ಯದ ಇತಿಹಾಸ ಪ್ರೇಮಿಗಳಿಗೂ ಸಹಾಯವಾಗುತ್ತದೆ. ರಾಷ್ಟ್ರಮಟ್ಟದಲ್ಲಿಯೂ ಇವರಿಗೆ ರಾಜ್ಯದಲ್ಲಿ ಸಿಕ್ಕ ಮನ್ನಣೆ ಸಿಗಲೆಂದು ನನ್ನ ಆಶಯ.

ಹೋದ ವರ್ಷ ಶಿರ್ಸಿ ಮತ್ತು ಸ್ವಾದಿಗಳಲ್ಲಿ ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಶ್ರೀ ಸ್ವಾಮಿಗಳ ಆದೇಶದ ಮೇರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನವನ್ನು ಅಚ್ಚುಕಟ್ಟಾಗಿ ಶಾಸ್ತ್ರಿಗಳು ನಡೆಯಿಸಿಕೊಟ್ಟ ನೆನಪು ಇನ್ನೂ ಹಸಿರಾಗಿ ಉಳಿದಿದೆ.

ಶಾಸ್ತ್ರಿಗಳಿಗೂ ಅವರ ಕುಟುಂಬದವರಿಗೂ ಭಗವಂತನು ಆಯುರಾರೋಗ್ಯ ಸಂಪತ್ತನ್ನು ಅನುಗ್ರಹಿಸಲೆಂದು ನನ್ನ ಪ್ರಾರ್ಥನೆ.

..... ಈ ಗ್ರಂಥವು ಶಾಸ್ತ್ರಿಗಳ ಅಭಿಮಾನಿಗಳಿಂದಲೂ, ಇತಿಹಾಸ ಪ್ರೇಮಿಗಳಿಂದಲೂ ಮನ್ನಣೆ ಪಡೆಯುವದರಲ್ಲಿ ಸಂದೇಹವಿಲ್ಲ."

ಒಬ್ಬ ವಿದ್ಯಾರ್ಥಿಯಾದವನಿಗೆ ತನ್ನ ಗುರುವಿನ ಬಾಯಿಯಿಂದ ಬಂದ ಇಂಥ ಮೆಚ್ಚುಗೆ ಮಾತುಗಳಿಗಿಂತ ಶ್ರೇಷ್ಠವಾದ ಪುರಸ್ಕಾರ ಮತ್ತೊಂದಿಲ್ಲ.

ಕರ್ನಾಟಕ ಇತಿಹಾಸ ಅಕಾದೆಮಿಯ ೧೫ನೇ ವಾರ್ಷಿಕ ಸಮ್ಮೇಳನ ಉಡುಪಿಯ ಪರ್ಯಾಯ ಪೇಜಾವರ ಮಠದ ಆಶ್ರಯದಲ್ಲಿ ೨೦೦೧ ರ ನವೆಂಬರ್ ತಿಂಗಳಿನ ೧೩, ೧೪ ಮತ್ತು ೧೫ ರಂದು ನಡೆಯಿತು. ದೀಕ್ಷಿತರು ಪತ್ನಿ ಸಮೇತ ಉಡುಪಿಗೆ ಬಂದಿದ್ದರು. ಅತ್ಯಂತ ದೊಡ್ಡ ಧ್ವನಿಯಲ್ಲಿ ಅವರು ಭಾಷಣ ಮಾಡಿ ಮುಗಿಸಿದ ನಂತರ, ನಾನು ಅವರಿಗೆ, "ಸರ್ ನೀವು ಇಂದು ನನಗಿಂತಲೂ ದೊಡ್ಡ ಧ್ವನಿಯಲ್ಲಿ ಭಾಷಣ ಮಾಡಿದಿರಿ" ಎಂದು ಹೇಳಿದೆ. ಪಕ್ಕದಲ್ಲಿದ್ದ ಅವರ ಶ್ರೀಮತಿಯವರು ಕೂಡಲೇ, "ಶಾಸ್ತ್ರಿಯವರೇ, ಅವರು ಕೂಗಿದ್ದಕ್ಕೇ ನನಗೆ ಜಾಸ್ತಿ ಹೆದರಿಕೆ ಆಗಿದೆ. ಯಾಕಂದ್ರ, ಅವರ ಆರೋಗ್ಯದ ಕಾಳಜಿ ನನಗ ಅದರಿ!" ಉಪನ್ಯಾಸ ಮಾಡುವಾಗ ಮನಸ್ಸನ್ನು ಸಂಪೂರ್ಣ ಕೇಂದ್ರೀಕರಿಸುವದು ದೀಕ್ಷಿತರ ಸ್ವಭಾವ.

ಕರ್ನಾಟಕ ಇತಿಹಾಸ ಅಕಾದೆಮಿಯ ೧೬ನೇ ಸಮ್ಮೇಳನ ೨೦೦೨ರ ಸಪ್ಟೆಂಬರ್ ೨೨, ೨೩ ಮತ್ತು ೨೪ ರಂದು ಹೊಸನಗರದ ಶ್ರೀರಾಮಚಂದ್ರಾಪುರ ಮಠದಲ್ಲಿ ಜರುಗಿತು. *"ರಾಮಚಂದ್ರಾಪುರದಲ್ಲಿ ಸೆಪ್ಟೆಂಬರ್ ೨೨ ರಿಂದ ನಡೆಯುವ ಕ.ಇ.ಅ. ಸಮ್ಮೇಳನಕ್ಕೆ ಅಧ್ಯಕ್ಷ ಪದವಿಗೆ ನಿಮ್ಮ ಹೆಸರನ್ನು ನಾನು ಮತ್ತು ಡಾ॥ ಸೂರ್ಯನಾಥ ಕಾಮತರು ಕಾರ್ಯಕಾರಿ ಸಮಿತಿಗೆ ಸೂಚಿಸಿದ್ದೇವೆ. ೧೨ ನೇ ತಾ. ಸಭೆಯಲ್ಲಿ ಅದು ಬರಲಿದೆ. ಪಾಸಾಗುವದರಲ್ಲಿ ಯಾವ ಅಡಚಣೆಯೂ ಇಲ್ಲ. ಪಾಸಾದ ಕೂಡಲೇ ನಿಮಗೆ ತಿಳಿಸುತ್ತಾರೆ. ೮-೧೦ ದಿನಗಳು ಬೇಕು. ಆದಷ್ಟು ಬೇಗನೆ ನಿಮಗೆ ತಿಳಿಸಿದರೆ ಒಳ್ಳೆಯದೆಂದು ಬರೆಯುತ್ತಿದ್ದೇನೆ,"* ಎಂಬುದಾಗಿ ದೀಕ್ಷಿತರು ನನಗೆ ದಿ. ೫-೮-೨೦೦೨ ರಂದು ಪತ್ರ ಬರೆದರು. ಅದೇ ರೀತಿ, *"ರಾಮಚಂದ್ರಾಪುರ ಮಠದಲ್ಲಿ ನಡೆಯುವ ಇತಿಹಾಸ ಅಕಾದೆಮಿ ವಾರ್ಷಿಕ ಸಮ್ಮೇಳನದಲ್ಲಿ ಅಧ್ಯಕ್ಷರಾಗಿ ನಿಮ್ಮನ್ನು ಸರ್ವಾನುಮತದಿಂದ ಆರಿಸಿದ್ದಕ್ಕೆ ಹಾರ್ದಿಕ ಅಭಿನಂದನೆಗಳು. ಆ ಮಠದ ಸ್ವಾಮಿಗಳಿಗೂ ನಿಮ್ಮ ಆಯ್ಕೆಯಿಂದ ನಮಗೆ ಆದಷ್ಟೆ ಸಂತೋಷವಾಗಿರುತ್ತದೆ,"* ಎಂಬುದಾಗಿ ದಿನಾಂಕ ೨೧-೮-೨೦೦೨ ರಂದು ಅವರು ನನಗೆ ಮತ್ತೆ ಪತ್ರ ಬರೆದು ಅಭಿನಂದಿಸಿದರು.

ರಾಮಚಂದ್ರಾಪುರ ಸಮ್ಮೇಳನದ ಪೂರ್ವದಲ್ಲಿ, ದಿನಾಂಕ ೪-೯-೨೦೦೨ ರಂದು ಅವರು ನನಗೆ ಬರೆದ ಮತ್ತೊಂದು ಪತ್ರ ಗಮನಾರ್ಹ. ಅದು ಇಂತಿದೆ-

"....ಸಮ್ಮೇಳನಕ್ಕೆ ಬರಬೇಕೆಂದು ಪ್ರಯತ್ನ ಮಾಡುತ್ತಿದ್ದೇನೆ. ಸಮ್ಮೇಳನದಲ್ಲಿ ಅಧ್ಯಕ್ಷರ ಭಾಷಣಕ್ಕೆ ಕೊಡಬೇಕಾದ ವೇಳೆ ಕೊಡುವದಿಲ್ಲ. ಮೊದಲ ಕಾರ್ಯಕ್ರಮದ ಕೊನೆಗೆ ಇಡುತ್ತಾರೆ. ಇದಾದ ಮೇಲೆ ಸ್ವಾಮಿಗಳ ಆಶೀರ್ವಾದ. ಅದನ್ನು ಕೇಳಲಿಕ್ಕೆ ಜನ ಕುತೂಹಲರಾಗಿರುತ್ತಾರೆ. ಮತ್ತು ಅಷ್ಟೊತ್ತಿಗೆ ಊಟದ ವೇಳೆ ಹತ್ತಿರವಾಗಿರುತ್ತದೆ. ಆದ್ದರಿಂದ ನೀವು ನಿಮ್ಮ ಭಾಷಣ ಪರಿಣಾಮಕಾರಿಯಾಗಬೇಕಾದರೆ ೧೦ ಪುಟಗಳಷ್ಟು ಬರೆದು ೧೫-೨೦ ಮಿನಿಟಗಳಲ್ಲಿ ಭಾಷಣ ಮುಗಿಸಿದರೆ ಒಳ್ಳೆಯದು. ಪೂರ್ತಿ ಭಾಷಣ ಪ್ರಿಂಟಾಗಿರುತ್ತದೆ. ಅದನ್ನು ಎಲ್ಲರೂ ಸಾವಕಾಶವಾಗಿ ಓದೇ ಓದುತ್ತಾರೆ...." ತನ್ನ ವಿದ್ಯಾರ್ಥಿಯೊಬ್ಬ ಸಮ್ಮೇಳನದ ಅಧ್ಯಕ್ಷನಾಗುವದರಿಂದ ಕಾರ್ಯ ಹೇಗೆ ನಿರ್ವಹಿಸಬೇಕೆಂದು ಅವರು ಸೂಚನೆ ಕೊಟ್ಟಿದ್ದರು. ಅವರ ಸೂಚನೆ ನೆನಪಿನಲ್ಲಿದ್ದರೂ, ನನಗೆ ಅದನ್ನು ಕಾರ್ಯಗತಗೊಳಿಸಲಾಗಲಿಲ್ಲ. ಅನಿವಾರ್ಯವಾಗಿ ಸ್ವಲ್ಪ ಹೆಚ್ಚು ಮಾತನಾಡಿದೆ. ರಾಮಚಂದ್ರಾಪುರದ ಶ್ರೀರಾಘವೇಶ್ವರ ಭಾರತೀ ಸ್ವಾಮಿಗಳು ನಮ್ಮೆಲ್ಲ ಪ್ರತಿನಿಧಿಗಳಿಗೆ ಆತ್ಮೀಯ ಸ್ವಾಗತಕೋರಿ, ನಂತರ ಆಶೀರ್ವದಿಸಿದ್ದು ಇನ್ನೂ ಮನಸ್ಸಿನಲ್ಲಿ ಹಸಿರಾಗಿಯೇ ಇದೆ. ಡಾ॥ ದೀಕ್ಷಿತರ ಅನುಪಸ್ಥಿತಿ ಸಮ್ಮೇಳನದ ದೊಡ್ಡ ಕೊರತೆಯಾಗಿತ್ತು. ಸಮ್ಮೇಳನಕ್ಕೆ ಹೊರಡಲು ಸಿದ್ಧರಾಗಿದ್ದಾಗ, ಅನಾರೋಗ್ಯವಾದ್ದರಿಂದ ಭಾಗವಹಿಸಲು ಅವರಿಗೆ ಆಗಲಿಲ್ಲ. ಭಾಗವಹಿಸಲು ಆಗದಿದ್ದಕ್ಕಾಗಿ ಅವರು ಬಹಳೇ ಪರಿತಪಿಸಿದರು. ಅವರಿಲ್ಲದ ಸಮ್ಮೇಳನಕ್ಕೆ ಮೆರಗಿಲ್ಲ ಎಂಬುದೇ ನನ್ನ ಭಾವನೆ.

ಡಾ॥ ರಘುನಾಥ ಭಟ್ಟರ ಅಕಾಲ ಮರಣದ ಸುದ್ದಿ ಕುರಿತು, ಡಾ॥ ದೀಕ್ಷಿತರು ದಿನಾಂಕ ೧೨-೧-೨೦೦೪ರಂದು ನನಗೆ ಬರೆದ ಪತ್ರ ಕೊನೆಯದು. "ನಾನು ಅವರ ಮೇಲೆ ಬಹಳ ಅವಲಂಬಿಸಿದ್ದೆ. ನನಗೆ ಬಲಗೈ ಮುರಿದ ಹಾಗೆ ಆಗಿದೆ. ವಿಧಿಯಿಲ್ಲ," ಎಂಬುದಾಗಿ ರಘುನಾಥ ಭಟ್ಟರ ಕುರಿತು ಆ ಪತ್ರದಲ್ಲಿ ಬರೆದಿದ್ದಾರೆ. ಮುಂದೆ ಡಾ॥ ದೀಕ್ಷಿತರೇ ನಮ್ಮನ್ನೆಲ್ಲ ತೊರೆದು ದಿನಾಂಕ ೨೬-೬-೨೦೦೪ ರಂದು ಇಹಲೋಕ ತ್ಯಜಿಸಿದರು. ಬಾದಾಮಿಯಲ್ಲಿ, ೨೦೦೩ ರಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ೧೭ ನೇ ಸಮ್ಮೇಳನದಲ್ಲಿ ಅವರು ಸಕ್ರಿಯವಾಗಿ ಭಾಗವಹಿಸಿದ್ದರು. ಬಾದಾಮಿ ಗುಹೆಗಳ ಸಮುಚ್ಚಯವನ್ನೂ ಉದ್ಘಾಟಿಸಿದರು. ಅವರ ಪಾಲಿಗೆ ಬಾದಾಮಿ ಸಮ್ಮೇಳನವೇ ಕೊನೆಯದು. ಅವರಿಲ್ಲದ ಸಮ್ಮೇಳನ ನಮ್ಮ ಪಾಲಿಗೆ ಬರಡು. ಸ್ವಲ್ಪ ಸುಧಾರಿಸಿಕೊಳ್ಳಲು ನಮಗೆಲ್ಲ ಇನ್ನೂ ಕೆಲವು ಸಮಯ ಬೇಕಾಗಬಹುದು. ಬೇರೆ ವಿಧಿಯಿಲ್ಲ!

ದೀಕ್ಷಿತರು ದಿವಂಗತರಾದಾಗ, "....ಕರ್ನಾಟಕ ಇತಿಹಾಸ ಲೇಖನದ ............. ಕಾಲಘಟ್ಟ ಒಂದು ಶಿಖರವನ್ನು ತಲುಪಿಸಲು ದುಡಿದ ಕೆಲವೇ ಗಣ್ಯರಲ್ಲಿ ಪ್ರೊ. ದೀಕ್ಷಿತರು ಒಬ್ಬರು. ಪ್ರೊ. ದೀಕ್ಷಿತರು ಬರೆದ ಸಂಶೋಧನಾ ಲೇಖನ, ಪುಸ್ತಕಗಳ ಸಂಖ್ಯೆ ಕಡಿಮೆಯದಲ್ಲ. ಸಂಶೋಧಕರಿಗೆ, ಇತಿಹಾಸಾಭ್ಯಾಸಿಗಳಿಗೆ ಅವರು ನೀಡಿದ ಪ್ರೇರಣೆ, ಪ್ರಚೋದನೆ, ಮಾರ್ಗದರ್ಶನ ಅದ್ವಿತೀಯ. ಪ್ರೊಫೆಸರ್ ಪದವಿಗಳಲ್ಲಿ ದಂತ ಗೋಪುರಗಳನ್ನು ಸೇರಿ ತಮ್ಮ ಎಳೆಯ ಜೊತೆಗಾರರನ್ನು ಕಡೆಗಣಿಸುವವರಿದ್ದಾರೆ. ದೀಕ್ಷಿತರಲ್ಲಿ ಅಂಥ ವ್ಯರ್ಥ ಬಿಗುಮಾನ ವಿಲ್ಲ. ತಲೆ ತಪ್ಪಿಸಿಕೊಂಡು ಓಡಾಡುವ ತಮ್ಮ ಹಳೇ ವಿದ್ಯಾರ್ಥಿಗಳನ್ನೂ ಕರೆದು ಇಂತಿಂಥ ವಿಷಯದ ಬಗ್ಗೆ ಸಂಶೋಧನೆ ಮಾಡಿ ಎಂದು ಪ್ರೇರೇಪಿಸುವವರು ಅವರು. ತಮ್ಮ ವಿದ್ಯಾರ್ಥಿಗಷ್ಟೇ ಅಲ್ಲ, ಯಾವ ತರುಣ ವಿದ್ವಾಂಸ ತನ್ನಲ್ಲಿ ಬಂದರೂ ಅವರಿಗೆ ಪ್ರೇರಣೆ, ಪ್ರೋತ್ಸಾಹ ನೀಡುವ ನಿಸ್ಪ್ರಹ ಜಾಯಮಾನ ಅವರದು..." ಎಂಬುದಾಗಿ ನನ್ನ ಆತ್ಮೀಯ ಮಿತ್ರರಾದ ಡಾ॥ ಸೂರ್ಯನಾಥ ಕಾಮತರು ಬರೆದಿದ್ದು ಅಕ್ಷರಶಃ ಸತ್ಯ. ಅದು 'ವಿಜಯಕರ್ನಾಟಕ'ದಲ್ಲಿ ೧೧ ಜುಲೈ ೨೦೦೪ ರಂದು ಪ್ರಕಟವಾಯಿತು.

ಡಾ॥ ದೀಕ್ಷಿತರೊಂದಿಗಿನ ಸುಮಾರು ೪೫ ವರ್ಷಗಳ ಸಂಪರ್ಕ ನೆನಪಿಸಿಕೊಂಡಾಗ ಅದೆಷ್ಟು ಅವಿಸ್ಮರಣೀಯ ಘಟನೆಗಳು ನೆನಪಾಗುತ್ತಿವೆ. ಅವರ ಶಿಸ್ತಿನ ಜೀವನ, ವೇಳೆಗೆ ಮಹತ್ವ, ಶಿಷ್ಯಪ್ರೇಮ, ಸರಳ-ಸಜ್ಜನಿಕೆ, ಸಂಶೋಧನಾಸಕ್ತಿ, ಪರೋಪಕಾರ ಬುದ್ಧಿ, ಇತ್ಯಾದಿ ಸದ್ಗುಣಗಳನ್ನೆಲ್ಲ ನಾವೆಲ್ಲ ಅವರಲ್ಲಿ ಕಂಡಿದ್ದೆವು. ಅವರು ಯಾರನ್ನೂ, ಎಂದೂ ತೆಗಳಲಿಲ್ಲ. ತಮ್ಮ ಮನಸ್ಸಿಗೆ ಉಂಟಾದ ನೋವನ್ನು ಇತರರಿಗೆ ಎಂದೂ ಹೇಳಿದವರಲ್ಲ. ತನಗೆ ತಿಳಿದ ವಿಷಯದ ಮಾಹಿತಿಯನ್ನು ತರುಣ ಸಂಶೋಧಕರಿಗೆ ಕೂಡಲೇ ಪತ್ರ ಮುಖೇನ ತಿಳಿಸುತ್ತಿದ್ದರು. ವಿಷಯ ಗೊತ್ತಿಲ್ಲದಿದ್ದರೆ, "ನನಗೆ ತಿಳಿಯದು" ಎಂದು ಬರೆದು, ಈ ವಿಷಯವನ್ನು ಕುರಿತು ಯಾರನ್ನು ಸಂಪರ್ಕಿಸಿದರೆ ಒಳಿತು ಎಂಬುದನ್ನೂ ಬರೆಯುತ್ತಿದ್ದರು. ಒಣ ಪ್ರತಿಷ್ಠೆಯೆಂಬುದನ್ನು ಅವರಲ್ಲಿ ನಾನು ಎಂದೂ ಕಾಣೆ. ಮನೆಗೆ ಹೋದಾಗಲೆಲ್ಲ ಅವರ ಶ್ರೀಮತಿಯವರು ತಿನಿಸು-ಚಹಾ ಕೊಟ್ಟು ಉಪಚರಿಸುತ್ತಿದ್ದರು ದೀಕ್ಷಿತರ ಉಪನ್ಯಾಸ ಬರೇಶುಷ್ಕವಲ್ಲ. ತಿಳಿಹಾಸ್ಯ ಬೆರೆಸಿ, ಬೇರೆಯವರಿಗೆ ನೋವನ್ನುಂಟುಮಾಡದೆ ಸರಳವಾಗಿ ಮಾತನಾಡುವ ದೀಕ್ಷಿತರ ಮಾತು ಕೇಳುವದೆಂದರೆ ಎಲ್ಲರಿಗೂ ಖುಶಿ. ಶಿರಸಿಯ ಸಮ್ಮೇಳನದಲ್ಲಿ ಅವರು ತಮ್ಮ ಮಾತಿನಲ್ಲಿ ತಿಳಿಹಾಸ್ಯ ಬೆರೆಸಿದ್ದು ನನಗೆ ಇನ್ನೂ ನೆನಪಿದೆ. "ನೀವು ಸಮ್ಮೇಳನಕ್ಕೆ ಹೋಗಿ

ಏನು ಮಹಾ ಸಾಧಿಸುವವರಿದ್ದೀರಿ? ಉದ್ಘಾಟನಾ ಸಮಾರಂಭದಲ್ಲಿ ರಿಬ್ಬನ್ ಹರಿಯುವದನ್ನು ಬಿಟ್ಟರೆ, ಅದಕ್ಕಿಂತಲೂ ದೊಡ್ಡದನ್ನು ಮಾಡಲು ಈ ವಯಸ್ಸಿನಲ್ಲಿ ನಿಮಗೇನು ಸಾಧ್ಯ? ಎಂದು ನನ್ನ ಶ್ರೀಮತಿಯು ಸಮ್ಮೇಳನಕ್ಕೆ ಬರುವ ಮುಂಚೆ ಹೇಳಿದ್ದಳು. ಆದರೆ ಈಗ ನೋಡಿದರೆ, ನಾನು ಕೇವಲ ರಿಬ್ಬನ್ ಕತ್ತರಿಸಲಿಕ್ಕಷ್ಟೇ ಅಲ್ಲ, ಸಾಕಷ್ಟು ಕಾಲ ಮಾತನಾಡಲೂ ಯೋಗ್ಯನಿದ್ದೇನೆ ಎಂಬುವದನ್ನು ಈಗ ತಾನೇ ಭಾಷಣ ಮಾಡಿ, ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತೋರಿಸಿದ್ದೇನೆ", ಎಂದು ದೀಕ್ಷಿತರು ಹೇಳಿದಾಗ, ಸಭೆಯಲ್ಲಿ ಉಪಸ್ಥಿತರಿದ್ದವರೆಲ್ಲರ ಮುಖದಲ್ಲಿ ಮಂದಹಾಸ ಎದ್ದು ಕಾಣುತ್ತಿತ್ತು. ಇನ್ನೊಂದು ಸಂದರ್ಭದಲ್ಲಿ, "ಸರ್, ತಮ್ಮಂಥ ಗುರುಗಳು ನನಗೆ ಲಭ್ಯವಾಗಿದ್ದರಿಂದ, ಜೀವನದಲ್ಲಿ ಸ್ವಲ್ಪ ಸಾಧನೆ ಮಾಡಿ ಮೇಲೆ ಬರಲು ಸಾಧ್ಯವಾಯಿತು" ಎಂದು ನಾನು ಅವರಿಗೆ ಹೇಳಿದಾಗ, "ಅದೇನೇ ಇರಲಿ. ನಿಮ್ಮಂಥ ವಿದ್ಯಾರ್ಥಿಗಳಿಂದಾಗಿ ನನಗೆ ಹೆಚ್ಚಿನ ಮಾನ, ಸನ್ಮಾನ ದೊರೆತಿವೆ," ಎಂದು ಕೂಡಲೇ ಪ್ರತ್ಯುತ್ತರ ನೀಡಿದರು. ಅವರು ತನ್ನನ್ನು ತಾನು ಎಂದೂ ಹೊಗಳಿಕೊಂಡವರಲ್ಲ. ಬೇರೆಯವರನ್ನು ದೂಷಿಸಿದವರೂ ಅಲ್ಲ. ಪ್ರಚಾರ ಪ್ರಿಯರೂ ಅಲ್ಲ. ನನ್ನಂಥ ಸಹಸ್ರಾರು ವಿದ್ಯಾರ್ಥಿಗಳು ಮತ್ತು ಸಂಶೋಧಕರ ಹೃದಯದಲ್ಲಿ ಡಾ॥ ದೀಕ್ಷಿತರ ದಿವ್ಯ ಚೇತನ ಚಿರಸ್ಥಾಯಿ. ಅವರು ಅನುಸರಿಸಿದ ಮಾರ್ಗದಲ್ಲಿ ನಾವೂ ಮುಂದುವರೆದರೆ ಮಾತ್ರ ನಾವು ಆ ಮಹಾನ್ ವ್ಯಕ್ತಿಗೆ ಸಲ್ಲಿಸುವ ನಿಜವಾದ ಗೌರವ, ಅದೇ ಶ್ರದ್ಧಾಂಜಲಿ.



### *ಡಾ. ಜಿ.ಎಸ್. ದೀಕ್ಷಿತ್ ಅವರ ೧೧ನೆಯ ಸಮ್ಮೇಳನಾಧ್ಯಕ್ಷ ಭಾಷಣದಿಂದ*

*ನಮ್ಮ ಕೆರೆಗಳ ಈಗಿನ ದುಸ್ಥಿತಿಗೆ ಕಾರಣಗಳಿವೆ. ಒಂದು ಅವುಗಳ ಜಲಾನಯನ ಪ್ರದೇಶ ಕಡಿಮೆಯಾಗಿರುವುದು. ಮತ್ತು ಎರಡನೆಯದು ಅವುಗಳ ಸುತ್ತಲೂ ಗಿಡಮರಗಳು ಇಲ್ಲದಿರುವುದು. ಜಲಾನಯನ ಪ್ರದೇಶವೆಂದರೆ ಕೆರೆಗೆ ನೀರು ಬರುವ ಪ್ರದೇಶ. ಈ ಪ್ರದೇಶವು ಸರ್ಕಾರಕ್ಕೆ ಸೇರಿದ್ದೆಂದು ಅದನ್ನು ಜಮೀನು ಇಲ್ಲದ ಬಡವರಿಗೆ ದಾನವಾಗಿ ಕೊಡಲಾಗಿದೆ. ಇನ್ನು ಕೆಲವು ಕಡೆ ಗಟ್ಟುಳ್ಳವರು ಈ ಪ್ರದೇಶವನ್ನು ಅಪಹರಿಸಿ ಉಪಯೋಗಿಸುತ್ತಿದ್ದಾರೆ. ಈ ಕ್ರಮಗಳಿಂದ ಕೆರೆಯಲ್ಲಿ ಜಲಸಂಗ್ರಹ ಕಡಿಮೆ ಆಗಿದೆ. ಹಿಂದೆ ಎಲ್ಲಾ ಕೆರೆಗಳ ಸುತ್ತ ಮುತ್ತ ಗಿಡಗಳನ್ನು ನೆಟ್ಟಿರುವರು. ಆ ಗಿಡಗಳು ಮಳೆಯ ರಭಸವನ್ನು ತಡೆದು ಕೆರೆಗೆ ನಿಧಾನವಾಗಿ ನೀರು ಸಂಗ್ರಹವಾಗುವ ಹಾಗೆ ಮಾಡುತ್ತಿದ್ದುವು, ಮತ್ತು ಕೆರೆಯೊಳಗೆ ಹೂಳು ಸೇರುವುದನ್ನು ಕಡಿಮೆ ಮಾಡುತ್ತಿದ್ದುವು. ಈಗ ಅವುಗಳಿಲ್ಲ. ಪರಿಸರವಾದಿಗಳ ಪ್ರಕಾರ ಭಾರಿ ಅಣೆಕಟ್ಟುಗಳನ್ನು ಕಟ್ಟುವುದಕ್ಕಿಂತ ವಿಪುಲವಾಗಿ ಕಾಡುಗಳನ್ನು ಬೆಳೆಸುವುದು ಸೂಕ್ತ. ಅಣೆಕಟ್ಟುಗಳ ಕೆಲಸವನ್ನು ಕಾಡುಗಳು ಕಡಿಮೆ ಖರ್ಚಿನಲ್ಲಿ ಮಾಡುತ್ತವೆ. ಅಂತರ್ಜಲವು ಹೆಚ್ಚಾಗುತ್ತದೆ ಎನ್ನುತ್ತಾರೆ.*

* * * *

*ಹತ್ತು ವರ್ಷ ಕಾಲ ಕರ್ನಾಟಕ ಇತಿಹಾಸ ಅಕಾದೆಮಿಯ ಅಧ್ಯಕ್ಷನಾಗಿರುವ ಸುಯೋಗ ನನ್ನದಾಗಿತ್ತು. ನಾನು ಅಧ್ಯಕ್ಷನೆಂದು ಉತ್ಸವಮೂರ್ತಿ ಆಗಿದ್ದೆ. ಕೆಲಸ ಮಾಡುತ್ತಿದ್ದವರು ಉಳಿದ ಪದಾಧಿಕಾರಿಗಳು. ಅವರ ಜತೆಗೆ ಕೆಲಸ ಮಾಡುವುದು ಎಷ್ಟು ಹಿತಕರವಾಗಿತ್ತೆಂದು ಹೇಳುವುದು ಸುಲಭವಲ್ಲ. ಇವರು ಇತಿಹಾಸದ ಉಜ್ವಲ ಪ್ರೇಮಿಗಳು. ಸೇವಾ ಮನೋಭಾವ ಉಳ್ಳವರು. ಈ ಸಂಸ್ಥೆಯನ್ನು ಹುಟ್ಟಿ ಹಾಕಿ ಬೆಳೆಸುವ ಸಂಕಲ್ಪ ಮಾಡಿದವರು. ಇವರ ಕೆಲಸ ರಾಜ್ಯದ ಇತರ ಇತಿಹಾಸ ಪ್ರೇಮಿಗಳ ಮತ್ತು ಸಂಶೋಧಕರ ಮೆಚ್ಚಿಗೆಯನ್ನು ಪಡೆದು ಅವರಿಂದ ಇವರಿಗೆ ಪ್ರೋತ್ಸಾಹ ಸಿಕ್ಕಿದೆ. ಇದರಿಂದ ಹತ್ತೇ ವರ್ಷಗಳಲ್ಲಿ ಒಂದು ಅಪರೂಪದ ಸಂಸ್ಥೆ ಸ್ಥಾಪಿತವಾಗಿದೆ. ನನಗೆ ಗೊತ್ತಿರುವ ಮಟ್ಟಿಗೆ ರಾಜ್ಯದಲ್ಲಿ ಇಷ್ಟು ಭದ್ರವಾದ ತಳಹದಿಯ ಮೇಲೆ ನಿಂತಿರುವ ಸಂಸ್ಥೆ ಇನ್ನೊಂದಿಲ್ಲ. ಇದರಲ್ಲಿಯ ಸ್ವಯಂಸೇವಕರ ನಿಸ್ವಾರ್ಥ ಸೇವೆಗೆ ಒಂದೇ ಒಂದು ಉದಾಹರಣೆ ಕೊಡುತ್ತೇನೆ. ಒಬ್ಬರಿಗೆ ನೀವು ಇಂಥ ಊರಿಗೆ ಹೋಗಿ ಬನ್ನಿ, ಹೋಗಿ ಬರುವ ಖರ್ಚನ್ನು ತೆಗೆದುಕೊಳ್ಳಿ ಎಂದರೆ, ಅವರ ಉತ್ತರ ಮರೆಯುವ ಹಾಗಿಲ್ಲ : 'ಅಲ್ಲಿಗೆ ಹೋಗಿ ಬರಲು ಆಗುವ ಖರ್ಚನ್ನು ಅಕಾದೆಮಿಯಿಂದ ಕೇಳುವಷ್ಟು ಬಡವ ನಾನಲ್ಲ'. ಇಂಥವರು ಈ ಸಂಸ್ಥೆಯಲ್ಲಿ ಇರುವವರೆಗೂ ಈ ಸಂಸ್ಥೆಯ ಬೆಳವಣಿಗೆಯನ್ನು ಯಾರೂ ತಡೆಯಲಾಗುವುದಿಲ್ಲ.*

**ಇತಿಹಾಸ ದರ್ಶನ., ಸಂಪುಟ ೧೨ (೧೯೯೭)**

ಡಾ. ಎಂ.ಜಿ. ನಾಗರಾಜ್*

# ಕೊಡಗು, ಬೆಂಗಳೂರು, ಹಾಸನ ಜಿಲ್ಲೆಯ ಕೆಲವು ಅಪ್ರಕಟಿತ ನಿರೂಪಗಳು, ಶಾಸನಗಳು, ಪ್ರಾಚ್ಯಾವಶೇಷಗಳು

## ದೊಡ್ಡ ವೀರರಾಜೇಂದ್ರ ಒಡೆಯನ ನಿರೂಪ

ದೊಡ್ಡವೀರರಾಜೇಂದ್ರ ಒಡೆಯ ಕೊಡಗಿನ ಹಾಲೇರಿ ವಂಶದ ಕ್ರಿ.ಶ. ೧೭೮೨–೧೮೦೯ರ ಪ್ರಸಿದ್ಧ ದೊರೆ. ಇವನ ಕಾಲದಲ್ಲಿಯೇ ಕೊಡಗಿನ ಆಡಳಿತ ಸುಧಾರಣೆಯ ಸಂಕೇತವಾಗಿ ಶಿಸ್ತು ಮತ್ತು ಹುಕುಂನಾಮೆಗಳು ಸದ್ಯ ಲಭ್ಯ ದಾಖಲೆಗಳು ಹೆಸರಿಸಿರುವಂತೆ ಮೊಟ್ಟ ಮೊದಲಿಗೆ ರೂಪು ಗೊಂಡವು. ಟೀಪುವಿನ ಪತನಾನಂತರ ಆಂಗ್ಲರು ಕೊಡಗಿನ ಈ ದೊರೆಯ ಯುದ್ಧಕಾಲೀನ ನೆರವು, ನಿಷ್ಠೆಗೆ ನೀಡಿದ ಕೊಡುಗೆ : ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಮಣ್ಯ ವಳಿತವಾದ ಬೆಳ್ಳಾರೆ, ಅಮರ ತಾಗ್ವಾಡಿ ವಳಿತವಾದ ಬಂಡಾಡಿ [ಪೂಜ], ನರಿಮೊಗರ್ರು, ಬಾರಿಬೆಟ್ಟುಯೂರ್ರು, ಪುತ್ತೂರು, ಅಡೂರ್ರು, ಗಾವಿರಾಳಟ್ಟು ಮುಂತಾದ ಊರುಗಳನ್ನು ಕೊಡಗಿಗೆ ಸೇರಿಸಿ ದುದಾಗಿದೆ. ಈ ಕಾರಣ ಒಡೆಯನು ತನ್ನ ಅಂಕೆಗೆ ಬಂದ ಈ ಊರು–ಶೀಮೆಗಳ ಮೊಕಸ್ತಾರ್ರು, ಗವುಡಗಳು ಪ್ರಜೆಗಳಿಗೆ ನಿರೂಪವಿಟ್ಟು, ಅವರ ರಕ್ಷಣೆಗೆ, ಸುಖದುಃಖಗಳಿಗೆ ಸ್ಪಂದಿಸುವ ಭಾಷೆಯಲ್ಲಿ ಹೇಳಿದ್ದಾನೆ.

ಈ ನಿರೂಪದಲ್ಲಿ : ಕಂಪೆನಿ ಸರ್ಕಾರದ ದೋಸ್ತಿಯ ಕುರುಹಾಗಿ ಬಂಗಾಳದ ನವಾಬು ಮಾರ್ಟಿಉಲ್ ಅಲ್ಕಾಯಿ ಅವರ ಕಾರ್ಯದರ್ಶಿ (!) ಮಾರ್ಕ್ ವೀಜ್‌ವಲ್ ಜಲಿ ಸಾಹೇಬ ಬಹದೂರನ ಹುಕುಂ ಪ್ರಕಾರ ಬರೆದು ಇರುವಂಥ ಶೀಮೆ ಇದೆ; ಆ ಶೀಮೆಯನ್ನು ಕೂಡೆಯಾಲದ ಸೀಮೆಯಿಂದ ವಿಂಗಡಿಸಿ ಬಂಗಾಳದ ದೊಡ್ಡ ಸಾಹೇಬರ ವಕೀಲನಾಗಿ ಬಂದಿರುವ ರಾಜೇಶ್ರೀ ಕಪಿತಾನ್ ಮಾವಿನಿ ಸಾಹೇಬರು, ಮಾರಿಫತ್ತಿನಿಂದ ನಮ್ಮ ಶೀಮೆಗೆ ಸೇರಿಸಿ ಸರಹದ್ದು ಬಂದೋ ಬಸ್ತು ಮಾಡಿಸಿ ಕೊಡಲಾಗಿದೆ.

ಕಂಪೆನಿ ಸರ್ಕಾರವು ಆ ಪ್ರಜೆಗಳ ಸುಖದುಃಖವನ್ನು ವಿಚಾರಿಸಿ ಸರಕಾರಕ್ಕೆ ಕಾಲಂ ಕಾಲಂ ಪ್ರತಿಯಲ್ಲು ಎಂದಿನಂತೆ ಸಲ್ಲಬೇಕಾದ (ವ್ರಾಜಬಿ !) ಕಂದಾಯ ಕಾಣಿಕೆಯನ್ನು ವಸೂಲು ಮಾಡಿಕೊಂಡು ಹೇಗೆ ಸಂತೋಷದಿಂದ ಕಾಪಾಡುತ್ತಿದ್ದರೋ ಅದೇ ಮೇರೆ ನಿಮ್ಮಿಂದ ನಮ್ಮ ಅರಮನೆಗೆ ಕಾಲಕಾಲಂ ಪ್ರತಿಯಲ್ಲಿ ಕಂದಾಯ ಕಾಣಿಕೆ ವಸೂಲು ಮಾಡಿಕೊಳ್ಳ ಲಾಗುತ್ತದೆ; ನಿಮ್ಮ ಸುಖದುಃಖವನ್ನು ಸತ್ಯಸ್ಥಿತಿಯಾಗಿ ವಿಚಾರಿಸುತ್ತೇವೆ. ಹಾಗೆ ನಿಮ್ಮನ್ನು ಪರಿಪಾಲಿಸಲು ನಮಗೆ ಬಹಳ ಸಂತೋಷವಾಗುತ್ತದೆ. ಇದನ್ನು ಸಮಸ್ತರೂ ತಿಳಿದು ಕೊಂಡು ನಮ್ಮ ಅರಮನೆಯ ಘನತೆಗೆ ಸರಿಯಾಗಿ ಭಕ್ತಿಯಿಂದ ನಡೆದುಕೊಳ್ಳಿರಿ. ಅರಮನೆಗೆ ಕಾಲ ಕಾಲಕ್ಕೆ ಬರುವಂಥ ಕಂದಾಯ ಕಾಣಿಕೆ ಮುಂತಾದ್ದನ್ನು ಆಂಗ್ಲ ಸರ್ಕಾರದಿಂದ ನಿಗದಿಯಾದ ಲೆಕ್ಕಾಚಾರ ಪ್ರಕಾರ ಅವರಿಗೆ ಸಲ್ಲುವಂಥದ್ದನ್ನು ಅವರಿಗೆ ಕೊಡಲಾಗುತ್ತದೆ. ಪ್ರಜೆಗಳಿಗೆ ಸಲುವಂಥಾದ್ದನ್ನು ಅವರು ಅನುಭವಿಸಿಕೊಂಡು ಸುಖದಿಂದ ಬಹಳ ಸಂತೋಷ ದಿಂದ ಬದುಕಬೇಕು, ನಮಗೂ ಕೀರ್ತಿ ಬರಬೇಕು ಎಂದು ನಿಮ್ಮೆಲ್ಲರ ಕುರಿತು ಆರೈಕೆ ಮಾಡಬೇಕೆಂಬ ಮೋಹ ನಮಗೂ ಇದೆ. ಕರಣಿಕ ಸುಬ್ಬೈಯನಿಗೆ ಅಪ್ಪಣೆ ಕೊಟ್ಟು ಯಿಾ ವಿವರ ವನ್ನು ನಿಮಗೆಲ್ಲ ತಿಳಿಸಲು ಹೇಳಿದೆ. ಅದರಿಂದ ನಿಮಗೆ ಸಂತೋಷವಾದೀತು.

ಚಿಕ್ಕವರಿರಲಿ, ದೊಡ್ಡವರಿರಲಿ, ಬಡವ, ದಲಿತ (!) ಮುಂತಾದ ಸಮಸ್ತ ರೈತರು ನಮಗೆ ಸ್ವಾಮಿಕಾರ್ಯ ಧುರಂಧರ ರಾಗಿ ಭಕ್ತಿ ಗೌರವದಿಂದ ನಡೆದುಕೊಳ್ಳಬೇಕು. ನಮ್ಮ ಅರಮನೆ ರೈತರೂ ತಂದೆ ತಾಯಿ ಮಕ್ಕಳೋಪಾದಿಯಲ್ಲಿ, ಅನ್ಯೋನ್ಯ ವಾಗಿ, ಬಾಯಾಚಾರದಲ್ಲಿ (ಒಳ್ಳೆಯ ಮಾತು!) ಸ್ನೇಹವಾಗಿ ನಡೆದುಕೊಳ್ಳಬೇಕು. ಲೇವಾದೇವಿಯಲ್ಲೂ ಸತ್ಯಸ್ಥಿತಿ ಇದ್ದಂತೆ ಕೊಡುಕೊಳು ವ್ಯವಹಾರ ನಡೆಯಬೇಕು. ಆಂಗ್ಲ ಸರ್ಕಾರದ ಸೀಮೆ ರೈತರು ಹಾಗು ನಿಮಗು ಭೇದವಿಲ್ಲದೆ ಏಕರಾಜ್ಯದಂತೆ ಅನ್ಯೋನ್ಯದಿಂದ ಹೆಣ್ಣನ್ನು ಕೊಟ್ಟು ತರುವಲ್ಲಿ, ವ್ಯಾಪಾರ ಕೊಟ್ಟು ತರುವಲ್ಲಿ ವ್ಯವಹಾರವನ್ನು ಯಥಾಸ್ಥಿತಿಯಲ್ಲಿ ಧರ್ಮ ವಾಗಿ ನಡೆದುಕೊಳ್ಳಬೇಕು. ಹೀಗೆ ಒಳ್ಳೆ ಮಾರ್ಗದಲ್ಲಿ ನಡೆದು ಕೊಂಡವರನ್ನು ನಾವು ಆರೈಕೆ ಮಾಡಿ ಸಂರಕ್ಷಿಸಲು ಬಹಳ ರಾಜರಜಾವಂದಿಯಿಂದ (ರಾಜಧರ್ಮ ಪಾಲನೆ!) ಸಂತೋಷ ದಿಂದ ಮುಂದಾಗಿ ಇರುತ್ತೇವೆ.

* ಅನರ್ಘ್ಯ ಶ್ರೀ ಜಚನಿ ಕೃಪ, ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦.

ಈ ಮಾರ್ಗ ಬಿಟ್ಟು ತಮ್ಮ ತಮ್ಮ ಯತ್ತಾರಿಕೆ (ಬೇಜವಾಬ್ದಾರಿ!)ಯಿಂದ ಮನಬಂದಂತೆ ನಿಂಮಕ್ಕು ಹರಾಮ ತನ (ಸ್ವಾಮಿದ್ರೋಹ)ವನ್ನು ಮಾಡುವುದು; ಬಾಯಿಂದ ಚಾಡಿ ಹೇಳುವುದು; ದ್ರೋಹಿಗಳ ಸ್ನೇಹ ಮಾಡುವುದು ಹಾಗು ಅವರ ಮುಲಾಜಿನಲ್ಲಿರುವುದು; ಅರಮನೆಗೆ ಸಲು ವಂತಹ ವಡವೆ ಕೊಡದೆ ತಕರಾರು ಮಾಡುವುದು; ಹಾಗೆ ವಡವೆ ಕೊಡುವಂಥಾವರಿಗೆ ಕೊಡದಂತೆ ಚಾಡಿ ಹೇಳುವುದು; ಅರಮನೆ ಸೀಮೆ ರೈತರಿಗಾಗಲಿ, ಯಿಂಗ್ರಜಿ ಕಂಪೆನಿ ಸರ್ಕಾರದ ಶೀಮೆ ರೈತರಲ್ಲಿ ಆಗಲಿ ಕೊಟ್ಟ ವಡವೆ ಕೊಡದಿರುವುದು, ಕೊಡದಂತ ವಡವೆ ಕೊಡಬೇಕು ಎಂದು ತಕರಾರು ಮಾಡು ವುದು; ಲೇವಾದೇವಿಯಲ್ಲಿ ಸುಳ್ಳು, ಸಟೆ, ದಗಲಬಾಜಿ, ವಿಶ್ವಾಸ ಘಾತಕತನ, ಕಳ್ಳತನದಿಂದ ಕೂಡಿರುವುದು; ಈ ವ್ಯವಹಾರದಲ್ಲಿ ಈ ಕಡೆಯಾಗಲಿ ಆ ಕಡೆಯಾಗಲಿ ಜುಲುಮೆ ಜಾಸ್ತಿ ನಡೆಸು ವುದು (ಒತ್ತಾಯ ಮಾಡುವುದು), ತಂಟೆ, ತಕರಾರು, ಚಾಡಿ ಕ್ಷುದ್ರ ಹೇಳಿ ನ್ಯಾಯ ಮಾಡಿಸುವುದು– ಹೀಗೆಲ್ಲ ಅನ್ಯಾಯದ ಮಾರ್ಗ ಹಿಡಿದು ಹೋಗುವ ದುಷ್ಟ ಜನರನ್ನು ಕಂಡರೆ ನಾವು ದಯೆ ತೋರಿಸುವುದಿಲ್ಲ. ಅಂಥವರಿಗೆ ಒಳ್ಳೆ ಬುದ್ಧಿ ಹೇಳಿದರೂ ಪ್ರಯೋಜವಿಲ್ಲವಾಗಿ, ಅವರಿಗೂ ಸುಖವಾಗು ವುದಿಲ್ಲ. ಇದನ್ನು ಆ ಜನರು ತಿಳಿದುಕೊಂಡು 'ಅಲ್ಲದ' ನಡತೆ ಬಿಟ್ಟು ಒಳ್ಳೆಯ ಮಾರ್ಗದಲ್ಲಿ ನಡೆಯಬೇಕು. ಆಗ ನಮ್ಮ ದಯೆಗೆ, ಪಾತ್ರರಾಗುತ್ತಾರೆ. ನಮ್ಮ ಉಪ್ಪಿಗೆ ನಡೆದು ಕೊಂಡು, ಸರಕಾರಕ್ಕೆ ಕೈರುಕ (ವಿಧೇಯ!) ಆಗಿರಬೇಕು. ಅಂಥವರನ್ನು ನಾವು ಆರೈಕೆ ಮಾಡುತ್ತೇವೆ; ಸುಖದುಃಖ ವಿಚಾರಿಸುತ್ತೇವೆ. ಅವರ ನಡತೆ ಸೂಕ್ತವಿದ್ದಂತೆ ಆರೈಕೆ ಮಾಡ ಬೇಕು ಎಂಬ ಬಗ್ಗೆಯೂ ದರಿಯಾಪ್ತು (ತನಿಖೆ) ಮಾಡುವ ಬಗ್ಗೆ ಅಪ್ಪಣೆ ಮಾಡಲಾಗಿದೆ.

ಇಂಥ ಸಂದರ್ಭದಲ್ಲಿ ಅಮೀಲದಾರರಾಗಲಿ, ಪಾರು ಪತ್ತೆ ಮಾಡುವಂಥ ಮೊಕಸ್ತೇರನಾಗಲಿ ನಿಮ್ಮ ಸುಖದುಃಖದ ಬಗ್ಗೆ ವಿಚಾರಿಸದೆ, ದುಃಖ ಕೊಟ್ಟ ಬಗ್ಗೆ, ದೀನರು, ದಲಿತರು, ಬಡವರು ಬಲ್ಲಿದರು ಯಾರೇ ಆಗಲಿ ಫಿರ್ಯಾದನ್ನು ಸಂನಿಧಾನಕ್ಕೆ ತಂದು ಬಿನ್ನವಿಸಿದರೆ, ಸತ್ಯಸ್ಥಿತಿಯನ್ನು ತಿಳಿದು ಯೋಗ್ಯ ಇದ್ದ ರೀತಿಯಲ್ಲಿ, (ಮಹದೇವ) ದೇವರು ಮೆಚ್ಚುವಂತ ವ್ಯವಸ್ಥೆ ಮಾಡಿಕೊಡಲು ನಾವು ಸಿದ್ಧರಿದ್ದೇವೆ. ಈ ಬಗ್ಗೆ ಇನ್ನು ನಿಮ್ಮ ಮನಸ್ಸಿನಲ್ಲಿ ಮೂಲಕ ಕೇಳಬೇಕಾದ್ದು, ತಿಳಿಯ ಬೇಕಾದ್ದು ಇದ್ದರೆ ಕರಣಿಕ ಸುಬ್ಬಯ್ಯನ ಕೇಳಿರಿ : ಆಗ ನಮ್ಮ ಅಪ್ಪಣೆ ವಿಶೇಷವಾಗಿ ಆದಂಥದ್ದು ನಿಮಗೆ ಸಂತೋಷ ವಾಗಿರಬೇಕೆಂಬುದು ನಮ್ಮ ಇಚ್ಛೆ. ಈ ಬಗ್ಗೆ ನಿರೂಪವು ಕಲಿಸಂದ ೪೯೦೬ ನೇ ರಕ್ತಾಕ್ಷಿ ಸಂವತ್ಸರದ ಆಷಾಡ ೧೩ನೇ ಶುಕ್ರವಾರ ಕಾಸಾ ರಹಸ್ಯದ ಕಾಳು ಬರೆಹದ್ದು ಅಸಲು ನಿರೂಪದ ನಕಲು, ಎಂದೆಲ್ಲ ಈ ನಿರೂಪದಲ್ಲಿ ಹೇಳಿದೆ.

ಈ ನಿರೂಪದಿಂದ ದೊರೆಯ ಪ್ರಜಾಹಿತದೃಷ್ಟಿ, ಆಡಳಿತ ದಕ್ಷತೆ, ಕಂದಾಯ ವಿಷಯದ ಕಟ್ಟುನಿಟ್ಟು ಕುರಿತಾಗಿ ತಿಳಿಯು ತ್ತದೆ. ದುರ್ಮಾರ್ಗಿಗಳಿಗೆ ಶಿಕ್ಷೆ, ತಿದ್ದಿಕೊಂಡು ಸನ್ಮಾರ್ಗ ಹಿಡಿದವರಿಗೆ ರಕ್ಷಣೆ, ಆರೈಕೆ ಮಾಡುವ ಬಗ್ಗೆ ಹೇಳಿದೆ. ಅಧಿಕಾರಿಗಳು ಪ್ರಜೆಗಳ ಸುಖದುಃಖ ನೋಡದೆ ನಿರ್ಲಕ್ಷಿಸಿದ ಬಗ್ಗೆ ಯಾರದೇ ದೂರು ಬಂದರೆ ಅದನ್ನು ವಿಚಾರಿಸುವ ಬಗ್ಗೆ ಭರವಸೆ ಹಾಗು ಪ್ರಜೆಗಳು ಮುಕ್ತವಾಗಿ ಹೇಳಿಕೊಳ್ಳಲು ಅವಕಾಶ ನೀಡಿರುವುದೂ ಇಲ್ಲಿ ತಿಳಿಯುತ್ತದೆ. ಅಧಿಕಾರಿ ವ್ಯವಸ್ಥೆಯ ಘಟಕಗಳನ್ನು – **ಅಮಿಲು, ಪಾರುಪತ್ಯೆಗಾರ, ಮೊಕ್ತೇಸರ** ಇತ್ಯಾದಿ ಶಬ್ದಗಳಿಂದ ಹೇಳಿದೆ.

ಈ ನಿರೂಪದ ಶಬ್ದಗಳಲ್ಲಿ ಅಚ್ಚಗನ್ನಡ (ಸುಳ್ಳು ಸಟೆ), ಹಿಂದೂಸ್ಥಾನಿ (ದಗಲ್ಬಾಜಿ, ದರಿಯಾಪ್ತು, ವಾಜಬಿ, ಕೈರುಕ, ಜುಲುಮೆ ಇತ್ಯಾದಿ) ಶಬ್ದಗಳೂ ಸೇರಿವೆ. ಅಂದಿನ ಸಾಮಾಜಿಕ ಜೀವನದ ಕಲುಷಿತ ಮುಖಗಳನ್ನು (ಸುಳ್ಳು, ನಮಕ್ಕು ಹರಾಮುತನ, ಕಳ್ಳತನ, ಚಾಡಿಛಿದ್ರ ಇತ್ಯಾದಿ) ಹೇಳಿ, ಎಚ್ಚರಿಕೆಯನ್ನು ತಿಳಿಸಿದೆ. ಬೇರೊಂದು ನಾಡಿನ ಜನರು ಕೊಡಗಿಗೆ ಸೇರಿರುವಲ್ಲಿ ಅವರೊಡನೆ ಹಳೆ ಸ್ಥಳೀಯರು ನಡೆದುಕೊಳ್ಳಬೇಕಾದ ರೀತಿ, ವಿನಿಮಯ ಸೌಹಾರ್ದ, ಅನ್ಯೋನ್ಯ ಬಾಂಧವ್ಯ, ಏಕರಾಜ್ಯವಾಗಿ ನಡೆದುಕೊಳ್ಳಬೇಕಾದ ಕುರಿತೂ ಹೇಳಿದೆ.

ಅರಮನೆಯಲ್ಲಿ ದೊರೆ ಅಪ್ಪಣೆ ಕೊಟ್ಟ ನಿರೂಪದ ಮೂಲಪ್ರತಿ, ಆ ಅಸಲು ನಿರೂಪದ ನಕಲು ರಿಜಿಸ್ಟರ್ ಇಟ್ಟು, ಪ್ರಜೆಗಳು ಬಯಸಿದಾಗ ನಕಲು ಕೊಡುವ ವ್ಯವಸ್ಥೆಯ ಅಚ್ಚುಕಟ್ಟು ಈ ನಿರೂಪದಿಂದ ತಿಳಿಯುತ್ತದೆ.

ಆರಂಭದ ಶೀರ್ಷಿಕೆಯ ೨ ಸಾಲು ಹಾಗು ನಿರೂಪದ ೫೯ ಸಾಲುಗಳನ್ನು ಕಾಸಾರಹಸ್ಯದ ಕಾಳು ಬರೆದನೆಂದರೂ, ೪೭ನೇ ಸಾಲಿನಿಂದ ನಂತರ ಬರೆದ ಸಾಲಿನ ಅಕ್ಷರಗಳು, ಹಿಂದಿನ ಸಾಲಿನವುಗಳಿಗಿಂತ ದೊಡ್ಡದಾಗಿ ಬರೆಯಲ್ಪಟ್ಟಿವೆ. ಬಹುಶಃ ಲೇಖನಿಯ ತುದಿ ಅಗಲವಾಗಿ ಹಾಗು ವೇಗವಾಗಿ ಬರೆವ ಸಂದರ್ಭವಾಗಿ ಹಾಗೆ ಬರೆದಿರುವಂತಿದೆ.

ಕ್ರಿ.ಶ. ೧೮೦೫ರ ಜುಲೈ ತಿಂಗಳ ಸಮಯದಲ್ಲಿ ದೊಡ್ಡವೀರರಾಜೇಂದ್ರ ಒಡೆಯನ ಆಡಳಿತಕ್ಕೆ ಪುತ್ತೂರು ತಾಲ್ಲು ಎಂಬ ನಾಲ್ಕನೇ ತಾಲೂಕೂ ಸಹ ಕೊಡಗಿಗೆ ಸೇರಿದ್ದುದರ ವಿಷಯ ಈ ನಿರೂಪದಿಂದ ತಿಳಿಯುತ್ತದೆ. ಹಾಗೂ ಆ ತಾಲೂಕಿನ ಗ್ರಾಮಗಳ ವಿವರಗಳನ್ನೂ ನೀಡಲಾಗಿದೆ. ಆದರೆ ಚಿಕ್ಕವೀರರಾಜೇಂದ್ರ ಒಡೆಯನ ಕಾಲದಲ್ಲಿ ಈ ಸೇರ್ಪಡೆಯ ಗ್ರಾಮಗಳನ್ನು ಕಸಿದರು. ಅಂತಾಗಿ ೧೮೩೪ರ ಕೊಡಗಿನ ಗ್ರಾಮಗಳ ಪಟ್ಟಿಯೊಂದರಲ್ಲಿ ಪುತ್ತೂರು ತಾಲೂಕಿನ ಗ್ರಾಮಗಳು ಕಾಣಬರುವುದಿಲ್ಲ.

ದೊಡ್ಡವೀರರಾಜೆಂದ್ರ ಒಡೆಯನು ನೀಡಿದ ಜನಪ್ರಿಯ ಆತ್ಮೀಯ ಭರವಸೆ ಕೇವಲ ರಾಜಕೀಯ ವ್ಯವಹಾರವಾಗಿರಲಿಲ್ಲ. ಕೊಡಗಿಗೆ ಸೇರ್ಪಡೆಗೊಂಡ ಆ ತಾಲೂಕಿನ ಜನರು ಈ ವರ್ಗಾವಣೆ ವ್ಯವಸ್ಥೆಯ ಬಗ್ಗೆ ಪ್ರತಿಭಟಿಸಲಿಲ್ಲ. ಸಂತೋಷದಿಂದಲೇ ಮುಂದುವರಿದರು ಎಂಬುದಕ್ಕೆ ಮುಂದೆ ೨ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿಯೂ ಈ ತಾಲೂಕಿನ ನಾಯಕರು ಒಳ್ಳೆ ಸಂಬಂಧವಿಟ್ಟುಕೊಂಡಿದ್ದ ಬಗ್ಗೆ ಅವರ ಅಹವಾಲು ಹಾಗೂ ಪಡೆದ ನಿರೂಪದಿಂದಲೂ ವ್ಯಕ್ತವಾಗುತ್ತದೆ. ದೊಡ್ಡವೀರರಾಜೇಂದ್ರ ಒಡೆಯ ಹಾಗೂ ೨ನೇ ಲಿಂಗರಾಜೇಂದ್ರ ಒಡೆಯನು ಈ ಪ್ರದೇಶದ ಬಸ್ತಿ, ಪಳ್ಳಿ ದೇಗುಲಗಳಿಗೆ ಕೊಟ್ಟ ದಾನಗಳು ಜನಪದೀಯ ನೆಲೆಯಲ್ಲಿ ಇಂದಿಗೂ ಸ್ಮರಣೀಯಗೊಳ್ಳುತ್ತಿರುವುದು ಗಮನಾರ್ಹ. ಅದೇ ಕ್ರಿ.ಶ. ೧೮೩೭ರ ಸಮಯ (ಚಿಕ್ಕವೀರರಾಜೇಂದ್ರ ಒಡೆಯನ ನಂತರ)ದಲ್ಲಿ ನಡೆದ ಸ್ವಾಮಿ ಅಪರಂಪರನ ಹಾಗು ಅಮರ ಸೂಳ್ಯದ ಬಂಡಾಯವು ಬ್ರಿಟಿಷರ ವಿರುದ್ಧ ದ. ಕನ್ನಡ ಜಿಲ್ಲೆಗೆ ಮತ್ತೆ ಸೇರಿಸಲ್ಪಟ್ಟ ಈ ಭಾಗದ ಜನರೂ ಸೇರಿದಂತೆಯೆ ನಡೆದದ್ದು, ಹಾಲೇರಿ ಅರಸು ವಂಶವು ನೇರ್ಪುಗೊಳಿಸಿದ್ದ ರೈತಾಪಿ ವ್ಯವಸ್ಥೆಗೆ ಮೆಚ್ಚಿಕೊಂಡಿದ್ದುದರ ಫಲವಾಗಿತ್ತು; ಆ ವ್ಯವಸ್ಥೆ ತಪ್ಪಿದಾಗ ಈ ಪ್ರತಿಕ್ರಿಯೆ ಬಂದದ್ದು ಗಮನಾರ್ಹ. ಬಂಡಾಯ ವಿಫಲವಾದ ಕಾರಣವು ಬೇರೆಯೆ ಆಗಿತ್ತು.

**ನಿರೂಪದ ಪಾಠ**

**ಮಹಾರಾಜ ವೀರರಾಜೇಂದ್ರ ವಡೆಯರ್ರು**
**ಸಂಸ್ತಾನ ಕೊಡಗು**

೧ ಶ್ರೀಮತ್ತು ॥ ॥ ನಂಮ ಅರಮನೆ ಶೀಮೆಗೆ ಕೊಡೆಯಾಲ ತಾಲೂಕಿನ ಶೀಮೆಯಿಂದಾ ಸೇರಿದ ಸುಬ್ರಮಂ

೨ ಣ್ಯದ ವಳಿತವಾದ ಕಡಬದ ವಳಿತವಾದ ಬೆ[ಳ]ರ ಅಮರ ತಾಗ್ಪಾಡಿ ವಳಿತವಾದ ಬಂಡಾಡಿ ಮಾಗಣಿಯ ಪುಂಜ ನರಿಮೊಗರ್ರು

೩ ಬಾರಿಬೆ[ಟ್ಟು]ಯೂರ್ರು ಪುತ್ತೂರ್ರು ಅಡೂರ್ರು ಗಾವಿರಾಳಟ್ಟು ಮುಂತಾದ ಶೀಮೆ ಮೊಕಸ್ತಾರ್ರು ಗವಡಗಳು ಪ್ರಜೆಗ

೪ ಳಿಗೆ ಮುಂತಾಗಿ ಅಪಣೆ ಕೊಡಿಶಿದ ನಿರ್ರೂಪದ ಕ್ರಮವೆಂತೆಂದರೆ ಯಿಂಗರೆಜಿ ಕುಂಪನಿ ಸರಕಾರದ ದೋಸ್ತ

೫ ಮೆಹರ್ಭಾನಗಿ ನಿಶಾನಿಯಾಗಿ ಬಂಗಾಳದ ನವಾಬು ವಾರ್ಟಿಉಲ್ ಅಲ್ಕಾಯಿ ಅವರ [ಪು]ಬ್ ಅ[ಹ]ರಾಕ್

೬ ಮಾರ್ಕ್ ವೀಜವಲ್ ಜ[ಲಿ] ಸಾಹೇಬ ಬಹದರ ರವರ ಹುಕುಂ ಪ್ರಕಾರಾ ಮೇಲೆ ಸದರಿ ಬರದು ಯಿರ್ರುವ ಶೀಮೆ

೭ ಯಂನ್ನು ಕೊಡೆಯಾಲದ ಯಿಲಾಕೆ ಶೀಮೆಯಿಂದಾ ವಿಂಗಡಿಶಿ ಬಂಗಾಳದ ದೊಡ ಸಾಹೇಬ ಬಹದರ ವರ ಕ

೮ ಡೆಯಿಂದಾ ವಕೀಲರಾಗಿ ಬಂದು ಯಿರ್ರುವ ರಾಜೆಶ್ರೀ ಕಪಿತಾಂನ್ ನಿನ ಮಾವಿನಿ ಸಾಹೇಬರ ಮಾರಿಪತ್ತಿನಯಿಂದಾ

೯ ನಂಮ ಶೀಮೆಗೆ ಶೇರಿಶಿ ಸರಹದ್ದು ಬಂದೋಬಸ್ತು ಮಾಡಿಶಿ ಕೊಡಿಶಿ ಯಿರ್ರುವದರಿಂದಾ ಯಿಾ ವಿವರ ತಿಳಿದು

೧೦ ಯಿಂಗರೆಜಿ ಕುಂಪನಿ ಸರಕಾರದಿಂದಾ ನಂಮ ಸುಕದುಕ್ಕವಂನ್ನು ವಿಚಾರಿಶಿ ನಿಂಮಿಂದಾ ಆ ಸರಕಾರಕ್ಕೆ

೧೧ ಕಾಲಕಾಲಂ ಪ್ರತಿಯಲ್ಲೂ ವ್ರಾಜಬಿ ಸಲತಕ್ಕ ಕಂದಾಯ ಕಾಣಿಕೆ ವಸೂಲು ಮಾಡಿಕೊಂಡು ನಿಂಮನ್ನೂ

೧೨ ಯಾವ ಮೇರೆಗೆ ಸಂತೋಷದಿಂದಾ ಕಾಪಾಡುತ್ತಿದ್ದರೋ ಅದೇ ಮೇರೆ ನಿಂಮಿಂದಾ ನಂಮ ಅರಮನೆಗೆ ಕಾಲಕಾಲಂ

೧೩ ಪ್ರತಿಯಲ್ಲೂ ಬರ್ರುವಂತಾ ಕಂದಾಯ ಕಾಣಿಕೆ ಯಂನ್ನೂ ಲೆಕ್ಕಾಚಾರ ಪ್ರಕಾರಕ್ಕೆ ವಸೂಲು ಮಾಡಿಕೊಂಡು

೧೪ ನಿಂಮು ಸುಕದುಕ್ಕವಂನ್ನೂ ಸತ್ಯಸ್ತಿತಿಯಾಗಿ ವಿಚಾರಿಶಿ ಪರಿಪಾಲನೆ ಮಾಡುವ ಬಗ್ಗೆ ನಮಗೆ ಬಹಳ ಸಂ

೧೫ ತೋಷ ಯಿರ್ರುವದ್ದರಿಂದಾ ಯಿದನರಿ[ತು]ಕೋಂಬ ಸಮಸ್ತರೂ ನಂಮ ಅರಮನೆ ಉಬಗೆ ಸರಿಯಾಗಿ

೧೬ ಭಕ್ತಿಯಿಂದಾ ನಡೆದುಕೊಂಡು ನಂಮ ಅರಮನೆಗೆ ಕಾಲಕಾಲಂ ಪ್ರತಿಯಲ್ಲೂ ನಿಂಮಿಂದಾ ಬರ್ರುವಂ

೧೭ ತ್ತಾ ಕಂದಾಯ ಕಾಣಿಕೆ ಮುಂತಾದಂನ್ನು ಯಿಂಗ್ರೇಜ ಸರಕಾರದಿಂದಾ ನಿಗದಿಯಾದ ಲೆಕ್ಕಾಚಾರ ಪ್ರ

೧೮ ಕಾರಕ್ಕೆ ವಾಜಬಿಯಾಗಿ ಕೊಟ್ಟುಕೊಂಡು ಪ್ರಜೆಗಳಿಗೆ ಸಲುವಂತಾದಂನ್ನೂ ಆ ಆ ಪ್ರಜೆಗಳು

೧೯ ಅನುಭವಿಸಿಕೊಂಡು ಸುಖರ್ರೂಪಿನಲ್ಲು ಅವರ ಆ[ಪರಿ]ಯಾದ ಸಂತೋಷದಿಂದಾ ಬದುಕಬೇಕೂ

೨೦ ನಮಗೆ ಕೀರ್ತಿ ಬರಬೇಕೂ ಯಂಬದಾಗಿ ನಮಗೆ ಬಹಳ ಆರೈಕ್ಕೆ ಮೋಹ ಯಿರುವದರಿಂದಾ ಯಿ ವಿವರ

೨೧ ವಂನ್ನೂ ನಿಮಗೆ ನಿರೂಪದಲ್ಲೂ ಬರಶಿ ಕರಣಿಕ ಸುಬೈನು ಮೊಕತಂ ಅಪಣೆ ಕೊಟುಕೊ[ಟು]ಯಿದೆ

೨೨ ಯಿದೆಯಲ್ಲಾ ವಿವರಉ ಕರಣಿಕ ಸುಬೈನ ಮುಖತ [ನ್ಯ] ನಿಂದಾ ತಿಳಿದು ನಿಮಗೆಲ್ಲ ಸಂತೋಷವಾದಿತ್ತೂ

೨೩ ಚಿಕ್ಕವರ್ರು ದೊಡವರ್ರು ಆಲ ಲದನ ಮುಂತಾದ ಸಮಸ್ತ ರೈತರ್ರು [ಸಂಮತ್ತು] ಹಲಾಲಾಗಿ ಸ್ವಾಮಿಕಾರ್ಯ

೨೪ ದುರಂದರರಾಗಿ ಭಕ್ತಿ ಅದಬಿನಿಂದಾ ನಡದು ಕೊಳಬೇಕೂ ಮೇಲಾದ ನಂಮ ಅರಮನೆ ಶೀಮೆ ರೈತರ್ರು

೨೫ ಯಾವತ್ತೂ ವಂದು ತಾಯಿ ಮಕ್ಕಳೋಪಾದಿ ಅಂನ್ಯೋನ್ಯದ[ಲ್ಲಿ] ಬಾಯಾಚಾರ ದೋಸ್ತಿಯಿಂದಾ [ಹ]ಕ್ಕು ವಾಜಬಿ

೨೬ ಲೇವಾದೇವಿ ಸತ್ಯಸ್ತಿತಿ[ಯಿದ್ದ ಮೇರೆಗೆ ಕೊಡುಕೊಳು] ಮಾಡು[ವಿ]ಯಿಡವಿದ್ದ ಪ್ರಕಾರಕೆ ಕೂಡಿ ನಡಕೊಳ

೨೭ ಬೇಕೂ ಯಿದೇ ಮೇರೆ ಲೇವಾವೇವಿಯಲ್ಲಿ ಯಿಂಗ್ರೆಜಿ ಸರಕಾರದ ಶೀಮೆ ರೈತರ್ರು ನೀಉ ಭೇದವಿಲ್ಲದೆ ವಂದು

೨೮ ಯೇಕರಾಜ್ಯವಾಗಿ ಅಂನ್ಯೋಂನ್ಯದಿಂದಾ ಹೆಂಣು ಮದುವೆ ಮಾಡಿಕೊಡುವ ಮದುವೆ ಮಾಡಿಕೊಂಡು

೨೯ ತರುವಲ್ಲು ವ್ಯಾಪಾರಾ ಕೊಡುವಲ್ಲಿ ತರ್ರುವಲ್ಲು ಲೇವಾದೇವಿ ಯತಾಸ್ತಿತಿಯಾಗಿ ಧರ್ಮಾ ಧರ್ಮವಾಗಿ

೩೦ ನಡಕೊಳಬೇಕೂ ಯಿ ಮಾರ್ಗದಲ್ಲು ಅಪಣೆ ಪ್ರಕಾರಾ ನಡದವರಿಗೆ ಆರೈಕೆ ಮಾಡಿ (ರಕ್ಷಂ) ಣ್ಯಾ

೩೧ ಮಾಡುವದಕೆ ನಾಉ ಬಹಳ ರಾಜರಜಾವಂದಿ ಯಿಂದಾ ಖುಶಿಯಾಗಿ ಯಿದೇವೆ ಯಿ ಮೆ[ೇರೆ]

೩೨ ಸದರಿ ಬರದು ಯಿರ್ರೂವ ಮಾರ್ಗಾ ಬಿಟ್ಟು ತಂಮತಂಮ ಯತ್ತಾರಿಕೆ ಯಿಂದಾ ಮನ್ಸು ಬಂದಂತ್ತೆ

೩೩ ನಿಂಮಕ್ಕು ಹರಾಮಾತನ ಕೈಯಿಂದ ಮಾಡುವದು ಬಾಯಿಯಿಂದಾ ಹೇಳುವದೂ ನಿಂಮಕುಹರಾ

೩೪ ಮರ ದೋಸ್ತು ಮುಲಾಜು ಮಡಗುವದು ಅರಮನೆಗೆ ಸಲುವಂತಾ ವಡವೆ ಕೊಡದೆ ತಕರಾರ್ರು ಮಾಡು

೩೫ ವದು ಕೊಡುವಂತ್ಥಾವರಿಗೆ ಕೊಡದ ಹಾಗೆ ಚಾಡಿ ಹೇಳುವದೂ ಅರಮನೆ ಶೀಮೆ ರೈತರಿಗೆ ಆಗಲಿ

೩೬ ಯಿಂಗ್ರೇಜಿ ಕುಂಪನಿ ಸರಕಾರದ ಶೀಮೆ ರೈತರಲ್ಲಿ ಆಗಲಿ ಕೊಡುವಂತಾ ವಡವೆ ಕೊಡದೆ ಕೊಡದಂ

೩೭ ತಾ ವಡವೆ ಕೊಡಬೇಕೂ ಯಂತಾ ತಕರಾರ್ರು ಮಾಡುವದೂ ಲೇವಾದೇವಿಯಲ್ಲು ಸುಳ್ಳು ಸಟೆ

೩೮ ದಗಲಬಾಜು ವಿಶ್ವಾಸಗಾತಕತನ ಕಳ್ಳತನ ಕೂಡಿದ ಸರಹದ್ದಿನಲ್ಲು ಯಿ ಕಡೆಯಾಗಲಿ

೩೯ ಆ ಕಡೆಯಾಗಲಿ ಜುಲುಮೆ ಜಾಸ್ತಿ ನಡಶಿ ತಂಟೆ ತಕರಾರ್ರು ಚಾಡಿ ಕ್ಷುದ್ರ ಹೇಳಿ

೪೦ ನ್ಯಾಯ ಮಾಡುವದು ಯಿಂತಪ್ಪ ಅಂನ್ಯಾಯದ ಮಾರ್ಗ ಹಿಡಿದು ಹೋಗುವಂತಾ ದ್ದು

೪೧ ಷ್ಟ ಜನರ ಮೇಲೆ ನಂಮ ದಯ ವಳ್ಳಿತಾಗಿ ಬರ್ರುವದಿಕಿಲ್ಲಾ ಅವರಿಗೆ ವೊಳ್ಳೆ ಬದುಕುವ ಮಾರ್ಗ

೪೨ ನಾಉ ತೋರಿಸುವದಿಕಿಲ್ಲಾ ವಳ್ಳೆ ಬುದ್ಧಿ ಕಲ್ಸುವ ದಕಿಲ್ಲಾ ಯಿದರಿಂದಾ ಅವರಿಗೆ ಸುಖ ಬ

೪೩ ರುವದಕಿಲ್ಲಾ । ಯಂಬದಂನ್ನು ದ್ದುಷ್ಟ ಜನರ್ರು ತಿಳಿದೂ ಯಿ ಅಲ್ಲದ ನಡತೆ ಬಿಟ್ಟು

೪೪ ವಳ್ಳೆ ಮಾರ್ಗದಲ್ಲು ನಡದು ನಂಮ ದಯಕ್ಕೆ ಪಾತ್ರವಾಗಿ ನಂಮ ಉಪ್ಪಿಗೆ ಹಲಾಲಾಗ್ಗಿ

೪೫ ನಂಮ ಸರಕಾರದ ಕೈರ್ರುಕ ಆಗಿ ಯಿರಬೇಕು ಅವರ ನಾಉ ಆರೈಕ ಮಾಡ ಬೇ

೪೬ ಕೂ ಯಂಬದಾಗಿ ಅವರ ಸುಕದುಕ್ಕ ವಿಚಾರಿಶಿ ಅವರ ನಡತೆಯಿದಂತ್ತೆ

೪೭ ಆರೈಕೆ ಮಾಡಬೇಕೂ ಯೆಂಬುದಾಗಿ ದರಿಯಾಪ್ತು ಮಾಡುವ ಬಗ್ಗೆ

೪೮ ಹುಜ್ರಯಿದೆವೆ ಲಲ್ಲಿ ಅಮಲು ಮಾಡುವಂತಾವ ಪಾರ್ರುಪತು ಮಾಡುವಂತಾವ ಮೊಕಸ್ತೇರೂ

೪೯ ಸಹ ನಿಂಮ ಸುಕದಂದು ಪಿರಾದಿ ವಿಚಾರಿಸದೆ ನಿಮಗೆ ದುಕ ಕೊಟದ್ದು ಊದ್ರೆ

೫೦* ಆಲ ಆಗಲಿ ಲದನು ಆಗಲಿ ಬಡವನಾಗಲಿ ಬಲ್ಲಿದನಾಗಲಿ ಆ ಪಿರಾದಿ ತೆಗೆದುಕೊಂಡು

೫೧ ಸಂನಿಧಾನಕ್ಕೆ ಬಂದಲ್ಲಿ ಅವನ ಸತ್ಯಸ್ತಿತಿ ವಾಜಬಿ ಯಿದ್ದ ಪ್ರಕಾರ ಮಹದೇವ ಮೆಚ್ಚು

೫೨* ವಂತೆ ದರಿಯಾಪ್ತು ಮಾಡಿಕೊಡುವುದಕ್ಕೆ ನಾಲು ಯಿದೇವೆ ಯಂಬದಂನ್ನು ನಿಶ್ಚಯ

೫೩ ವಾಗಿ ತ್ತಿಳಿದೂ ಯಿಂನ್ನೂ ನಿಂಮನಶಿನಲ್ಲು ಯೇನಾದ್ರು ಕೇಳಬೇಕಾದಂ

೫೪ ತ್ತಾದ್ದು ತಿಳಿಯಬೇಕಾದಂತಾದ್ದು ಸಹ ಯಿದ್ದರೆ ಕರಣಿಕ ಸುಬ್ಬೈ

೫೫ ನನೆ ಕೇಳಿದಲ್ಲಿ ನಂಮ ಅಪಣೆ ಆದಂತಾದ್ದು ಯಾವತ್ತಂನ್ನೂ ನಿಮಗೆ

೫೬ ತಿಳಿಶಿದಲ್ಲಿ ಸಂತೋಷ ಪಡುವಂತಾದ್ದಕೆ ವಿಶೇಷವಾಗಿ ಅಪಣೆ ಕೊಡಿಸಬೇ

೫೭ ಕೆಂಬದೇನದೆ ಯಂಬ ನಿರ್ರೂಪಕೆ ಅಪಣೆ ಪ್ರಕಾರ ಕಲಿ ಸ ॥ ೪೯೦೬ನೇ

೫೮ ರಕ್ತಾಕ್ಷಿ ಸಂವತ್ಸರದ ಆಷಾಡ ೧೩ನೆ ಶುಕ್ರವಾರ ಕಾಸಾರಹಸ್ಯದ ಕಾ

೫೯ ಳು ಬರಹದ ಅಸಲು ನಿರ್ರೂಪದ ನಕಲು

**ಕ್ಲೋಸ್‌ಪೇಟೆಯ (ರಾಮಗಿರಿ–ರಾಮನಗರಂ) ಉಗಮ**

ಕ್ರಿ.ಶ. ೧೮೦೦–೦೧ರಲ್ಲಿ ಕ್ಲೋಸ್‌ಪೇಟೆಯ ಆರಂಭ ಕಾಲದ ಶಾಸನವಿಂತಿದೆ : *(ಎ.ಕ. ಸಂ. ೯, (ರೈಸ್) ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ೫)*

೧ ಕುಲೂಸ ಪೇಟೆಯೂ ರಾಜೆ ಮಹಾ

೨ ರಾಜೆ ಸಾಹೇಬರವರ್ರು ತಂಮ ದೋಸ್ತರಾ

೩ ದ ಕರ್ನಲ್ ಕುಲೂಸ ಸಾಹೇಬರವರ ಹೆಸ

೪ ರ್ರಿನಲ್ಲಿ ಶಾಲಿವಾಹನ ಶಕ ೧೭೨೧ನೇ

೫ ಸಿದ್ಧಾರ್ಥಿ ಸಂವತ್ಸರದಲ್ಲಿ ಕಟ್ಟಿಸಿದರ್ರು

---

* ಆಲ = ದೀನ !; ಲದನು (ಲದನ) = ದಲಿತ (ಅಸ್ಪೃಶ್ಯ!) : ವಾಜಬಿ : ಯೋಗ್ಯ, ಅರ್ಹ; ದರ್ಯಾಫ್ತು = ದರ್ಯಾಪ್ತಿ = ವಿಚಾರಣೆ, ತನಿಖೆ, ತಪಾಸಣೆ.

ಕ್ಲೋಸ್‌ನ ಹೆಸರಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಈ ಕ್ಲೋಸ್‌ಪೇಟೆಯನ್ನು ಕಟ್ಟಿದಾಗ ಆಡಳಿತ ಮುಖ್ಯವಾಗಿ ನಿಯುಕ್ತರಾದವರು ಭಕ್ಷಿ ಬಾಲಾಜಿರಾಯರು. ಆ ಮುನ್ನ ಭಕ್ಷಿ ಬಸಪ್ಪಾಜಿ ಎಂಬವರು ಸೈನಿಕ ನೆಲೆ ಆಗಿದ್ದ ಈ ಪ್ರದೇಶದಲ್ಲಿ ರಹದಾರಿ ನೀಡುವ ಅಧಿಕಾರಿಗಳಾಗಿದ್ದರು. ಭಕ್ಷಿ ಬಾಲಾಜಿ ರಾಯರು ಮುಂದೆ ಮೈಸೂರಿನ ದಿವಾನರಾದರೆಂದು ಹೇಳಲಾಗಿದೆ. ಕ್ಲೋಸ್‌ಪೇಟೆಯನ್ನು ಕಟ್ಟುವ ವೇಳೆಯಲ್ಲಿ ಕ್ಲೋಸ್‌ಪೇಟೆ ಹಾಗೂ ಪ್ರಾಚೀನ ಐಜೂರು ನಡುವೆ ಅರ್ಕಾವತಿ ಹೊಳೆಯಿದ್ದ ಕಾರಣ ಅರ್ಕೇಶ್ವರ ದೇಗುಲದ ಎಡಬದಿಗೆ ಸೇತುವೆ ಕಟ್ಟಿಸುವ ವ್ಯವಸ್ಥೆ ಮಾಡಿದರು. ಸೇತುವೆ ಕಟ್ಟಿಸುವಲ್ಲಿ ಮನೆಯ ಗರ್ಭಿಣಿ ಸೊಸೆಯ ಕೈಯಿಂದಲೂ ಕಲ್ಲನ್ನು ಹೊತ್ತು ಹಾಕಿಸಿದರೆಂಬ ಪ್ರತೀತಿ ಇದೆ. ಇವರು ಅನಂತಪುರದ ರಾಮಗಿರಿಯ ತಪ್ಪಲಿನ ಹೊಳೆಸಾಲು ಹಳ್ಳಿಯ ಜನರನ್ನು ಕ್ಲೋಸ್‌ಪೇಟೆಗೆ ಕರೆತಂದರು. ಬಿಜಾಪುರದ ಮುಸ್ಲಿಂ ಕುಟುಂಬಗಳಿಗೂ ನೆಲಸಲು ನೆರವಾದರು.

ಸದ್ಯದ ಪತ್ರದ ರೀತ್ಯಾ ಕ್ರಿ.ಶ. ೧೮೧೨ರ ಸುಮಾರಿನಲ್ಲಿ ಸೇತುವೆ ಕಟ್ಟುವ ಸಮಯದಲ್ಲಿ ಬಾಲಾಜಿರಾಯರ **ಸೋದರ ಸಂಬಂಧಿ** ಚಿಕ್ಕರಾಮರಾಯರು ಕಿಲ್ಲೇದಾರರಾಗಿ, ಕೆಲಸದ ನಿರ್ವಹಣೆ ಮಾಡುತ್ತಿದ್ದರು. ನದೀ ಸೋಪಾನದ ಶಿಲಾ ಕಟ್ಟಡವನ್ನು ಬೇಗ ಮುಗಿಸಲು ಬರೆದಿರುವ ಪತ್ರವು ಮುಂದಿದೆ. ವಡ್ಡರನ್ನು ಕರೆಸಿಕೊಂಡು, ಸಂಗರಾರಾಧ್ಯರ (ಶಂಕರಾ ರಾಧ್ಯರು!) ನೆರವಿನೊಡನೆ, ತಿಂಮಶೆಟ್ಟಿಯಿಂದ ೫೦ ವರಹಾ ವನ್ನು ಖರ್ಚಿಗೆ ಪಡೆದು ಕೆಲಸವನ್ನು ರಾತ್ರಿ ಹಗಲೆನ್ನದೆ ಜಾಗ್ರತೆಯಿಂದ ಮಾಡಿಸಬೇಕು; ಖಾವಂದರು (ದೊರೆಗಳು, ಮತ್ತು ಕ್ಲೋಸ್ !) ಪ್ರತ್ಯಕ್ಷ ಬಂದು ನೋಡುವಾಗ್ಯೆ ಅಚ್ಚು ಕಟ್ಟಾದ ಸೋಪಾನ ಕಟ್ಟಡವಾಗಿರವಂತೆ ನೋಡಿಕೊಳ್ಳ ಬೇಕೆಂದೂ ಬಾಲಾಜಿರಾಯರು ಹೇಳಿರುವುದಿಲ್ಲಿದೆ.

ಪ್ರತೀತಿಯ ರೀತ್ಯಾ, ಕ್ಲೋಸ್ ಸಾಹೇಬನ ಸಂಚಾರ ಕಾಲದಲ್ಲಿ ಇಲ್ಲಿನ ಹೊಳೆಸಾಲು ಹಳ್ಳಿಗಳಾದ ಹೊಸಹಳ್ಳಿ–ಕೆಂಪಹಳ್ಳಿ ಕೆಂಪನಾಯಕ ಶಿಂಪಿ ಸಿದ್ಧನಾಯಕರ ಬಳಗದ ಜನರು ದೋಣಿಯಲ್ಲಿ ಅವನನ್ನು ಕೂರಿಸಿಕೊಂಡು ಹೋಗು ವಾಗ್ಯೆ ಊರು ಕಟ್ಟಿ, ಸೇತುವೆಯನ್ನು ಕಟ್ಟಿಸಿ ಕೊಡಬೇಕೆಂದು ಕೇಳಿಕೊಂಡರಂತೆ. ಹಾಗಾಗಿ ಕ್ಲೋಸ್‌ನ ಹೆಸರಲ್ಲಿ ಊರು ರೂಪುಗೊಂಡ ಮೇಲೆ ಬಾಲಾಜಿರಾಯರು ಮೈಸೂರಿನ ಅರಮನೆಯ ಅಧಿಕಾರದಲ್ಲಿದ್ದು ಈ ಪತ್ರವನ್ನು ಕೌಟುಂಬಿಕ ಹಿನ್ನೆಲೆಯಲ್ಲೂ ಬರೆದ ಪತ್ರವಾಗಿರುವಂತಿದೆ. ಮೇಲಿನ ಶಾಸನ ಹಾಗು ಸದ್ಯ ಈ ಪತ್ರ ನಿರೂಪದಿಂದ ಕ್ಲೋಸ್‌ಪೇಟೆಯ ಉಗಮ, ಅಂದಿನ ಸಾಮಾಜಿಕ ಸ್ತರ ವಿಶೇಷಗಳ ಹಾಗು ಪ್ರಾಮುಖ್ಯತೆಯ ಚಿತ್ರವೂ ದೊರಕುತ್ತದೆ. ಪತ್ರ ನಿರೂಪವು ಮುಂದಿನಂತಿದೆ :

**ಕ್ಲೋಸ್‌ಪೇಟೆ ಭಕ್ಷಿ ಬಾಲಾಜಿರಾಯರ ಕಾರ್ಯಾದೇಶ ಪತ್ರದ ಪಾಠ**

[ದೇವನಾಗರಿ ಲಿಪಿ : ಶ್ರೀ [ಶಾಕಾಂಬರಿ]

(ಅಸ್ಪಷ್ಟ ಅಕ್ಷರಗಳು : ಅ[ಂಗೀರ]ಸ [ಶು] । ಸ್ವಸ್ತಿ....[೧೮...])

೧ ಚಿರಂಜೀವಿ ಕಿಲ್ಲೇದಾರ ರಾಮರಾಯಗೆ ಬಾಳಾಜಿ

೨ ರಾಯರೂ [ಕೈ]ತ್ತಾನೇಕ* ಆಶೀರ್ವಾದಾ ಅದಾಗಿ ಯಿಾ

೩ ಭಾದ್ರಪದ ಶು [೧]೨ ವರ್ರಿಗೆ ಕ್ಷೇಮದಲ್ಲಿ ಯಿಧೇನೆ ಮಾ

೪ ತೋಶ್ರೀಯವರ್‍ರು ಮುಂತಾಗಿ ನಿಂನ್ನ ಕ್ಷೇಮಕ್ಕೆ ಆಾ

೫ ಗಾಗ್ಯೆ ಬರಶಿ [ಕೊ]ಡುವ ಹಾಗೆ ಮಾಡುವದೂ ಸಿ [ಲಾ]

೬ ನದಿಸೋಪಾನದ ಕೆಲ್ಸಊ ಜಾಗ್ರತೆಯಿಂದಾ ಆಾ

೭ ಗ ಬೇಕಾದ್ದರಿಂದ ಯಿಲ್ಲಿ ವಡ್ಡರ್‍ರಿಗೆ ರೂ [೫] ರೂನ್ನು

೮ [ಕ್ಕಾ]ಕಿದ ವಾರಿ ಕಳುಸಿಯಿದೆ । ಯಿಂನ್ನೂ ಕರ್‍ಸತಕ್ಕ ವಡ್ಡ

೯ ರ್‍ರು ಸಂಗ[ರ್‍ರಾ]ಧ್ಯರ ಸಹ ಕರಶಿಕೊಂಡು । ಖರ್ಚಿ ಯಿ

೧೦ ಲ್ಲದಿದ್ದಾರ್‍ರೆ ತ್ತಿಂಮಶಟ್ಟಿ ಕಡೆಯಿಂದಾ ಅೈವತ್ತು ವ

೧೧ ರಹಾ ತರ್‍ರಿಶಿಕೊಂಡು ಖರ್ಚಿಗೆ ಕೊಟ್ಟು ಅವರ್‍ರಿಗೆ

೧೨ ಬೇಕಾದ ಸರಬರಾಯಿನೂ ಮಾಡಿಕೊಟ್ಟು। ರಾತ್ರೆ ಹ

೧೩ ಗಲಾಗಿ ಕೆಲ್ಸ ಜಾಗ್ರತೆಯಿಂದಾ ಮಾಡುವದೂ ಖಾವಂ

೧೪ ದರ್‍ರೂ ಬಂದು ರೂಬು ರೂಬು ನೋಡಿದಾಗ್ಯು ಪಸಂದು ಬರ್‍ರು

೧೫ ವ ರ್‍ರೀತ್ತಿಗೆ ಬಂದೋಬಸ್ತಿನಿಂದಾ ನಾಜೋಕಾಗಿ ಯಿರ್‍ರು

೧೬ ವ ಹಾಗೆ ಸೋಪಾನವಂನ್ನೂ ಅಗತ್ಯವಾಗಿ ಕಟ್ಟುವದೂ

೧೭ ಮತ್ತೂ ಹತ್ತಿಪ್ಪತ್ತು ವರಹಾ ಬೇಕಾದಾಗ್ಯು ಆಾತ್ತನ

೧೮ ಕಡೆಯಿಂದಲೇ ತೆಗದುಕೊಳುವದೂ ಯಿ ವಂದೂ

---

* ಕೈತ = ಮಾಡುವ



(ಪತ್ರ ಪ್ರತಿ ನೀಡಿದವರು : ಭಕ್ಷಿ ಬಾಲಾಜಿರಾಯರ ಮರಿ ಮೊಮ್ಮಕ್ಕಳಾದ ಶ್ರೀ ಬಿ. ಜೀವಣ್ಣರಾವ್, ರಾಮನಗರ, ೧೯೮೩)

೧೯ ಕೆಲಸ ಜರೂರ್‍ರು ಸಾಗುವ ಹಾಗೆ ಮಾಡುವದೂ

[ದೇವನಾಗರಿಲಿಪಿ (ಸಹಿ) ಭಕ್ಷಿ ಬಾಳಾಜಿರಾವ್.]

ಕ್ಲೋಸ್‌ಪೇಟೆಯನ್ನು ಕಟ್ಟಿದ ಬಾಲಾಜಿರಾಯರು, 'ಚಿರಂಜೀವಿ ಕಿಲ್ಲೇದಾರ ರಾಮರಾಯನಿಗೆ' ಎಂದು ಸಂಬೋಧಿಸಿರುವುದು, ಹೇಳಿರುವ ಶೈಲಿ ನೋಡಿದರೆ ಅವರ ಸೋದರ ಸಂಬಂಧಿ (ಚಿಕ್ಕಪ್ಪನ ಮಗ!) ಆಗಿದ್ದಿರುವಂತಿದೆ.

ಅರ್ಕೇಶ್ವರ ಗುಡಿ ಎದುರಿನ ಅರ್ಕಾವತಿ ನದಿ ಸೋಪಾನ ಕಟ್ಟುವ ಕೆಲಸವನ್ನು ಜಾಗ್ರತೆ ಮುಗಿಸಲು ಹೇಳಿರುವ ಪತ್ರವಿದಾಗಿದೆ. ಶಾಸನೋಕ್ತ ಇಬ್ಬಳಿಕೆಹಳ್ಳಿಯ ಸೋಮೇಶ್ವರ ಲಿಂಗವನ್ನು ಅರ್ಕೇಶ್ವರ ಗುಡಿಯಲ್ಲಿ ಸ್ಥಾಪಿಸಲಾಯಿತು ಎಂದು ಹೇಳುವುದೂ ಇದೆ; ಕಾಶಿಯಿಂದ ತರಿಸಿದ ಲಿಂಗ ಎಂದು ಹೇಳುವುದೂ ಇದೆ. ಆರ್ಕೇಶ್ವರಲಿಂಗವಂತು ಪಶ್ಚಿಮಾಭಿಮುಖವಾಗಿ ನೋಟದ ಎಡಕ್ಕೆ ಜಲಹರಿಯನ್ನು ಹೊಂದಿದೆ. ಈ ಗುಡಿ ಕಟ್ಟುವ ಮೊದಲೋ, ನಂತರವೋ ನದಿ ಸೋಪಾನದ ಕೆಲಸ ಮಾಡಿಸಿದ ಸಂದರ್ಭವಿದಾಗಿದೆ. ಅಂಗೀರಸ ಸಂವತ್ಸರದಲ್ಲಿ (ಕ್ರಿ.ಶ. ಸು. ೧೮೧೨, ಕಟ್ಟಿಸಲಾಗಿದೆ. ಕಿಲ್ಲೆದಾರ ರಾಮರಾವ್ ಎಂದಿರುವಲ್ಲಿ ರಾಮಗಿರಿ ಕೋಟೆಯು ಸುಸ್ಥಿತಿಯಲ್ಲಿ ಇದ್ದು, ಭಕ್ಷಿ ಬಾಲಾಜಿರಾಯರು ಮೈಸೂರಿಗೆ ಅರಮನೆ ಕಛೇರಿಗೆ ಹೋಗಲಾಗಿ ರಾಮರಾಯನು ಕೋಟೆಯ ಕಿಲ್ಲೇದಾರ ನಾಗಿಯೂ ನಿರ್ವಹಿಸಿರುವಂತಿದೆ.

ಕ್ರಿ.ಶ. ೧೮೩೧ರ ಸುಮಾರಿನಲ್ಲಿ ಮೈಸೂರು ವೆಂಕಟ ರಾಜೇ ಅರಸರ ನಂತರ ದಿವಾನರಾಗಿ ನಗರ ಬಂಡಾಯವನ್ನು ಭಕ್ಷಿ ಬಾಲಾಜಿರಾವ್ ಅಡಗಿಸಿದರೆಂದಿದೆ. (ಓ.ಎನ್. ಲಿಂಗಣ್ಣಯ್ಯ : **ಮುಮ್ಮಡಿ ಕೃಷ್ಣರಾಜ ಒಡೆಯರು.**, ೧೯೪೦, ಪು. ೯೮ರ ನಂತರದ ಮಾಹಿತಿ) ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಕೃತಿಯೂ ಬಾಲಾಜಿ ರಾಯರು ಮೈಸೂರಿನ ಪ್ರಧಾನಿ ಆಗಿದ್ದರೆಂದಿದೆ. ಹೀಗಾಗಿ

# ಭಕ್ಷಿ ಬಾಲಾಜಿರಾಯರ ವಂಶಾವಳಿ

(ಭಕ್ಷಿ ಬಾಲಾಜಿರಾಯರ ಪೂರ್ವಿಕರು ಮಹಾರಾಷ್ಟ್ರದ 'ವಾಳ್ವೇಕರ್' ಎಂಬ ಊರಿನವರಾಗಿದ್ದು, ಮನೆತನಕ್ಕೆ ಆ ಹೆಸರೇ ನಿಂತಿದೆ. ವಂಶಾವಳಿ ಮುಂದಿನಂತಿದೆ.)






ಭಕ್ಷಿ ಬಾಲಾಜಿರಾಯರು ಕ್ರಿ.ಶ. ೧೮೩೨ರವರೆಗೂ ಬದುಕಿದ್ದರೆನ್ನಬಹುದು.

ಇವರ ಮನೆದೇವರು **ಶಾಕಾಂಬರಿ** ಎನ್ನುವ ಬಾದಾಮಿಯ ಬನಶಂಕರಿ. ಹೀಗಾಗಿ ಪತ್ರದ ಆರಂಭಕ್ಕೆ ಮೊದಲು 'ಶಾಕಾಂಬರಿ'ಯನ್ನು ಸ್ಮರಿಸಿ ಬರೆಯಲಾಗಿದೆ. ಬಾಲಾಜಿರಾಯರು ಬಂಡಿಮಹಾಕಾಳಮ್ಮನ ಜೊತೆ ಬಂಡಿಯಲ್ಲಿ ಬಂದ ಕಾರಣ ರಾಮನಗರದಲಿ ಬಂಡಿ (ಬನ್ನಿ) ಮಹಾಕಾಳಿ ದೇಗುಲವನ್ನು ನಿರ್ಮಿಸಿದರಂತೆ. ಭಕ್ಷಿ ಬಾಲಾಜಿರಾಯರ ಮೊದಲ ಹೆಸರು ಬಾಳಾಜಿ ಪಂತ್ ಎಂದಿದ್ದು 'ವಾಳ್ವೇಕರ್'ದ ವಂಶಸ್ಥರೆನ್ನಲಾಗಿದೆ. 'ಭಕ್ಷಿ' ಪದವಿ ದೊರೆತ ಮೇಲೆ 'ರಾವ್' ಎಂದು ಹೆಸರಿಗೆ ಸೇರಿತಂತೆ. ಇವರ ವಂಶೀಕರು ಇಂದಿಗೂ ರಾಮನಗರದಲ್ಲಿ (ಶ್ರೀಮತಿ ಜೆ. ಶಾಂತಾಬಾಯಿ, ಶ್ರೀ ಜೆ. ಶೇಷಗಿರಿರಾವ್) ಇದ್ದಾರೆ.

ಈ ಪತ್ರ ಖಾಸಗಿಯೂ ಹೌದು; ಅಧಿಕಾರಿಯ ಆದೇಶದ ಪತ್ರವೂ ಹೌದು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕ್ರಿ.ಶ. ೧೮೦೦ರ ಆರಂಭದ ದಶಕಗಳಲ್ಲಿ ಆಡಳಿತಾಂಗದಲ್ಲಿ ರೂಢಿಗಿದ್ದ ಹಿಂದೂಸ್ಥಾನಿ ಶಬ್ದಗಳ ಸ್ವರೂಪ ತಿಳಿಯುತ್ತದೆ. ಆಗ ಇಲ್ಲಿದ್ದ ಶೆಟ್ಟರ ಜನಾಂಗ ಹಾಗು ವೀರಶೈವರ ಅಸಿತ್ವವೂ ತಿಳಿಯುತ್ತದೆ. ಇಲ್ಲಿ ಉಕ್ತವಿರುವ ವಡ್ಡರು ಸಿಂಗಾಬೋಯಿದೊಡ್ಡಿ, ಪಾಲಾಬೋಯಿ ದೊಡ್ಡಿಯವರಾಗಿದ್ದು ಆ ವಂಶೀಕರೇ ಇಂದೂ ರಾಮದೇವರ ತೇರಿಗೆ 'ಒಡ್ಡು' ಹಾಕುವ ಜನರೆಂದು ತೋರುತ್ತದೆ.

**ಚಂಗಡಹಳ್ಳಿ (ಹಾಸನ ಜಿಲ್ಲೆ) ಕೆರೆಮಠ ಸ್ತಂಭ ಶಾಸನ**

ಚಂಗಡಹಳ್ಳಿ, ಕೊಡಗಿನ ಹೆಗ್ಗಡಹಳ್ಳಿಗೆ ಸನಿಹವಿದ್ದು ಮೊದಲು ಕೊಡಗಿಗೆ ಸೇರಿದ್ದುದು ಈಗ ಹಾಸನ ಜಿಲ್ಲೆಗೆ ಸೇರಿದೆ. ಈ ಚಂಗಡಹಳ್ಳಿ ಮಠ ಚಿತ್ರದುರ್ಗ ಜಗದ್ಗುರುಗಳ (ಮುರುಘಾ ಸಮಯ) ಶಿರಹಟ್ಟಿ ಶಿದ್ದಲಿಂಗಸ್ವಾಮಿಗಳ (ಕ್ರಿ.ಶ. ೧೭೨೦-೫೦) ಗದ್ದುಗೆ ಇಲ್ಲಿದೆ. ಮಠದ ಅಸ್ತಿತ್ವವು ೧೭೩೦ ರಿಂದಲೇ ಕಂಡುಬರುತ್ತದೆ. *(ಇತಿಹಾಸ ದರ್ಶನ, 'ಕೊಡಗು ಜಿಲ್ಲೆಯ ವೀರಶೈವ ಮಠಗಳು', ಸಂ. ೭ (೧೯೯೨), ಪು. ೧೬೭)* ಕೊಡಗಿನ ಹಾಲೇರಿ ಅರಸರು ಈ ಮಠಕ್ಕೆ ೭೬ ಎಕರೆ ಜಮೀನುದಾನ ಕೊಟ್ಟಿದ್ದು, ಅದು ಕೊಡಗು ಪ್ರದೇಶದಲ್ಲಿದೆ.

ಈ ಮಠದ ಪ್ರವೇಶ ದ್ವಾರದ ಬಳಿ ಸ್ತಂಭದ ಮೇಲೆ ಶಾಸನವಿದ್ದು, ಕ್ರಿ.ಶ. ೧೮೩೨ರ ಕಾಲದ್ದಾಗಿದೆ.

**ಶಾಸನ ಪಾಠ**

೧ ಸಕ[ಶ್ರೀ ಇ] ಜಯ ೧೮೩೦ ಹಿ

೨ ಕರ್ರಿ ಜಾಗ [ದಿ] ಸಂವಾ [ಲು] ಕರ

೩ ತಾದೆಯರು ಹೊಂಣ
೪ ಸರ್ತ್ತಿ । ಕೆರೆಮಠ
೫ ಕ್ರಯ ಕೊಟು ೨ ಬಾಗಲು
೬ ೨ ಅಂಗಳ ಹೆಚಿ
೭ ಸಿಕೆ ಸಂಮುತಿ ಇದೆ
೮ . . . (ಅಕ್ಷರಗಳು ಸ್ಪಷ್ಟವಿಲ್ಲ.)



ಈ ಸ್ತಂಭ ಶಾಸನದ ಲಿಪಿಯನ್ನು ಆಳವಾಗಿ ಕೆತ್ತಿದ್ದರೂ ಗ್ರಾಮೀಣ ಶೈಲಿಯ ಕೆತ್ತನೆಯಿಂದಾಗಿ ಕೆಲವೆಡೆ ಲಿಪಿಗಳ ಅಸ್ಪಷ್ಟತೆ ಇದೆ. ಅಕ್ಷರಗಳ ಉದ್ದ ೨.೫ ಸೆಂ.ಮೀ. ಅಗಲ ೨ ಸೆಂ.ಮೀ. ನಷ್ಟು ಇದ್ದು ಅಂದವಿಲ್ಲದ ಬರಹದ ಕೆತ್ತನೆ ಆಗಿದೆ. ಭಾಷೆ ಹಾಗು ಶಬ್ದ ಸ್ಖಾಲಿತ್ಯದಿಂದ ಕೂಡಿದೆ. ಈ ಶಾಸನದ ಪಾಠವನ್ನು ಗಮನಿಸಿದರೆ, ವಿಜಯ ಸಂವತ್ಸರ (ಕ್ರಿ.ಶ. ೧೮೫೩)ದಲ್ಲಿ ಹೊನ್ನಸೆಟ್ಟಿ ಎಂಬ ಮಠದ ಭಕ್ತನೋರ್ವನು ಕೆರೆಮಠಕ್ಕೆ ಜಮೀನು ವಿಕ್ರಯಿಸಿ ಬಂದ ಹಣದಿಂದ ಮಠದ ಬಾಗಿಲು ಹಾಗು ಅಂಗಳದ ವಿಸ್ತಾರ ಮಾಡಿ ಜೀರ್ಣೋದ್ಧಾರ ಮಾಡಿ ಸೇವೆ ಸಲ್ಲಿಸಲು ಗುರುಗಳು ಸಮ್ಮತಿ ನೀಡಿದಂತಿದೆ. ಮಠದ ಜೀರ್ಣೋದ್ಧಾರಕ್ಕೆ ಗುರುಗಳ ಸಮ್ಮತಿ ಇದ್ದಾಗಲೇ ಭಕ್ತರ ಆಶಯಕ್ಕೆ ಒಂದು ಧನ್ಯತೆ. ಕೊಡಗಿನ ಅನೇಕ ಮಠದ ಗುರುಗಳು (ಬೆಂಮತ್ತಿ, ತೊರೆನೂರು ಇತ್ಯಾದಿ) ರಾಜ ಭೂದಾನ ಕೊಡುತ್ತೇನೆಂದು ಬಂದರೂ ವಿರಕ್ತ ಭಾವದಿಂದಲೇ ಬೇಡ ಎಂದದ್ದುಂಟು. ಆದರೂ ರಾಜರು ದಾನ ಸ್ವೀಕರಿಸಲು ಮತ್ತೆ ಮತ್ತೆ ಪ್ರಾರ್ಥಿಸಿ ನೀಡಿದ ಉದಾಹರಣೆಗಳಿವೆ. ಹಾಗೆಯೇ ಬಹುಶಃ ಚಂಗಡಹಳ್ಳಿಮಠದ ಸಂದರ್ಭದಲ್ಲಿ ಭಕ್ತನು ಹರಸಿಕೊಂಡಿದ್ದ ಕಾರಣವೋ ಪುಣ್ಯಾಕಾಂಕ್ಷೆಯ ಕಾರಣವೋ. ಈ ಜೀರ್ಣೋದ್ಧಾರ ಕೈಂಕರ್ಯ ಕೈಗೊಂಡಂತಿದೆ.

## ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು ಘಟ್ಟೀಪುರ (ಶಂಭುಲಿಂಗನ ಬೆಟ್ಟ) ಗವಿಶಾಸನ

ಇಲ್ಲಿನ ಸೋಮೇದೇವರ ಬೆಟ್ಟದ (ಶಂಭುಲಿಂಗನಬೆಟ್ಟ ಎನ್ನುವುದೂ ಉಂಟು) ಗುಹೆಯಲ್ಲಿ ಸೋಮೇಶ್ವರ ಲಿಂಗವಿದೆ. ಗುಹೆಯಲ್ಲಿನ ನೋಟದ ಎಡಪಾರ್ಶ್ವಕ್ಕೆ ವಿಶಾಲವಾಗಿ ೧೬ ಸಾಲಿನ ಸುಮಾರು ೧ ಅಡಿ ಅಗಲವಾಗಿ ಬಂಡೆಯ ಮೇಲೆ ಶಾಸನವನ್ನು ಕೆತ್ತಲಾಗಿದೆ. ಬಲಪಾರ್ಶ್ವಕ್ಕೆ ಏಕಸಾಲಿನ ನಾಲ್ಕು ಅಕ್ಷರಗಳ ಶಾಸನವನ್ನು ಕೆತ್ತಲಾಗಿದೆ. ಈ ಶಾಸನದ ಶ್ರೀ ಅಕ್ಷರವು ಸುಮಾರು ೧ ಅಡಿ ಎತ್ತರ ಅರ್ಧ ಅಡಿ ಅಗಲವಿದ್ದರೆ ನಾಲ್ಕನೆಯ ಅಕ್ಷರ **'ತೇ'** ಈ ಅಳತೆಗಳ ಕಾಲು ಭಾಗದಷ್ಟಿದೆ ಇಲ್ಲಿ ಬರುವ **ಕ, ಉ, ಶ್ರೀ,** ಹಾಗು **ತ** ಅಕ್ಷರಗಳು ರಾಷ್ಟ್ರಕೂಟ ೨ನೇ ಕೃಷ್ಣ, ಗಂಗರ ಹೇಮಾವತಿ ಮಹೇಂದ್ರನ ಶಾಸನಾಕ್ಷರ ಗಳನ್ನು ಹೋಲುತ್ತವೆ. ಹೀಗಾಗಿ ಈ ಶಾಸನದ ಕಾಲದಲ್ಲಿ ಸುಮಾರು ೯ನೇ ಶತಮಾನದ ಅಂತ್ಯದ ಕಾಲದಿಂದ ೧೦ನೇ ಶತಮಾನದ ಆರಂಭದವರೆಗೆ ಪರಿಭಾವಿಸಬಹುದು.

### ೧ನೇ ಶಾಸನದ ಪಾಠ

೧ ಶ್ರೀ ಕೆ ಟ್ಟಿ ತೇ



–ಎಂದಿರುವಲ್ಲಿ ಒಂದು ಪ್ರದೇಶದ ಲಕ್ಷಣವನ್ನನುಸರಿಸಿ ನಾಡನಾಮವನ್ನು ಸೂಚಿಸಿದಂತಿದೆ. ರಾಮನಗರ ತಾ. ಐಜೂರು ಪ್ರದೇಶಕ್ಕೆ ಕೆಟ್ಗಲಿ ನಾಡು ಎಂಬ ಹೆಸರಿದ್ದದ್ದು ಕ್ರಿ.ಶ. ಸು. ೭೬೮ರ ಐಜೂರು ರಣಪಾರನ ಶಾಸನದಿಂದ ವ್ಯಕ್ತವಾಗಿದೆ. ಇದು ರಾಮನಗರ ತಾ. ಜಾಲಮಂಗಲದ ವರೆಗೂ ಅನ್ವಯವಾಗಿದ್ದಷ್ಟೇ ಅಲ್ಲದೆ, ಚನ್ನಪಟ್ಟಣ ತಾ. ಅಂದಿನ ಕೆಲಭಾಗಗಳೂ ಸೇದಿದಂತೆ ರಾಮನಗರ ಪ್ರದೇಶವು ಕೆಟ್ಗಲಿ ನಾಡು ಎಂಬ ಹೆಸರು ಪಡೆದಿದ್ದುದು ಶಾಸನಗಳಿಂದಲೇ ಗಮನಕ್ಕೆ ಬರುತ್ತದೆ. ಪ್ರಸ್ತುತ ಈ ಶಾಸನದಿಂದ ಮಾಗಡಿ ತಾಲೂಕಿನ ಪ್ರದೇಶವಾದ ಘಟ್ಟೀಪುರದ (ಜಾಲಮಂಗಲದಿಂದ ಸುಮಾರು ೫ ಕಿ.ಮೀ.ವರೆಗೂ ಕೆಟ್ಗಲಿನಾಡು ಪ್ರದೇಶ ಹರಡಿತ್ತು

ಎಂದಾಗುತ್ತದೆ. 'ಶ್ರೀ' ಎಂಬ ಉಪಾಧಿ 'ಕೆಟ್ಟಿತೇ'ಗೆ ಸೇರಿರುವ ಕಾರಣ ಅದೊಂದು ನಾಡು-ಪ್ರದೇಶವಾಗಿ ಹೆಚ್ಚಳಿಕೆ ಪಡೆದಿತ್ತು ಎಂದಾಗುತ್ತದೆ. ಕಿಟೆಲ್ ನಿಘಂಟು. 'ಕೆ ಟ್ಟಿ' ಎಂಬುದಕ್ಕೆ, 'ಕೆಳಗಣ', ಕಟ್ಟಿ-ಕತ್ತಲೆ, ಕೆಟಿವ -> old man ಎಂಬ ಅರ್ಥಗಳನ್ನು ನೀಡಿದೆ. ಕೆಟ್ಟಿತೇ ಅಥವಾ ಕಟ್ಟಿತೇ ಎಂಬ ಸಂಸ್ಕೃತ ಶಬ್ದವನ್ನು ತದ್ಭವವಾಗಿ ಕನ್ನಡದಲ್ಲಿ ಗಮನಿಸಿದರೆ, ಕೆಟ್ಟಿಲಿನಾಡು, ಪ್ರಾಚೀನ ನಾಡು ಎಂಬ ಅರ್ಥವು ಇಲ್ಲಿ ಒದಗುವಂತಿದೆ. ಅದಾಗಿ, ರಾಮನಗರ ಮಾಗಡಿ ಪ್ರದೇಶ ಒಂದು ಪ್ರಾಚೀನ ನಾಡು ಎಂಬುದಕ್ಕೆ ಶಾಸನ ಸಾಕ್ಷಿ ನೇರವಾಗಿ ದೊರಕುವಂತಾಗುತ್ತದೆ. ಈ ಗುಹೆಯ ಬಲಬದಿಯ ಬಂಡೆಯ ಶಾಸನ (ನೋಟಕ್ಕೆ ಎಡ)ದಲ್ಲಿ 'ಕೃಷ್ಣ'ನ ಹೆಸರು ಉಕ್ತವಾಗಿರಲು ಈ ಶಾಸನವು ಲಿಪಿಯ ದಷ್ಟಿಯಿಂದ ಸುಮಾರು ೯-೧೦ನೇ ಶತಮಾನಕ್ಕೆ ಸೇರುವಲ್ಲಿ ರಾಷ್ಟ್ರಕೂಟ ೨ನೇ ಕೃಷ್ಣನ ಕಾಲದಲ್ಲಿ ಹಾಕಿಸಿದ ಶಾಸನವಾಗಿ, ರಾಷ್ಟ್ರಕೂಟರ ಕಾಲದಲ್ಲಿಯೂ ಕೆಟ್ಟಿಲಿ ನಾಡಿನ ಹೆಸರಿನ ಮತ್ತೊಂದು ರೂಪ ಲಭ್ಯವಾದಂತಾಗಿದೆ.

ಗವಿಯ ದೊಡ್ಡ ಬಂಡೆಯ ೨ನೇ ಶಾಸನ*

**ಶಾಸನ ಪಾಠ**

೧ ಸ್ವ ಸ್ತ್ಯ ರಿ ನರಪೇ[ನ್ದ್ರ] ಕರಿ ತುರಗಮ
೨ . ತಿರಸಂಗ ಭಂಗುರ ವಿನಾಸ[ಂ] ಕರ್ತ ಕ
೩ . . ಪ ರಿ ಲ ಗಾ[ದಿತ್ಯ] ಸಜ್ಜಿಯಜ್ಜಿಯ [ಂ]
೪ [ಗ] ಜಮಸಫಳ ಇಭಕ್ಕುಲ ತಿಲಕನಂ ಜಿತಗಜ ಲೋಚನ
೫ . ಕೃಷ್ಣರಾಜ ಕ್ಷಿತಿ ಹಿತೇ[ಷು] ಹ[ಂ] ಸಕ್ಕವನಿ
೬ . ಇ . ಶರಣಾಗ[ತ]ಗನ ಚರಣ್ಮೇ ನಿರ್ಭಯ[ಂ]
೭ ತಾಂ ಪೃಥ್ವಿ ಜಯತಿ ಬೀರಗತಿ ಚ[ಲದ] ಯಾದ್ದೇಹಿ
೮ . ಬಿಟ್ಟಾರ್ ಸರ್ವಬಾಧಾ ಪರಿಹಾರ[ಂ] ಯ . ಗ್ರಹಣ[ದೋ]ಳ್
೯ . ಹ . . ಸೂರ ಚಿರಭಟಂ ಜು
೧೦ [ತಿ] ನೃಪ್ಪ . ಲಿ. ಲಿದ್ದ . ಪ್ರ ಟ ಬ . . .
೧೧ ಅ ಲ . . ರ ಅ ಜ್ಜಿ ಚ ವಿ ಮ । ಯ ದಲ . ತಿಂ
೧೨ ಇಯಪ್ಪ ಜ . . . ಗ
೧೩ . . ನೃ ಚ ಯ್ಯ . . .
೧೪ . . ಗ ಗ ಚ ಳ . . ಲ
೧೫ . . ಲ ರ . . ದಕ್ಕಿ
೧೬ . . . ಭ . . . ಭ . . . ತಿ

[ಗೋವಿನ ಚಿತ್ರ]



ಶಾಸನದಲ್ಲಿ ಅನೇಕ ಕಡೆ ತ್ರುಟಿತ ಅಕ್ಷರಗಳಿರುವಲ್ಲಿ, ಸೀಳಿರುವಲ್ಲಿ ಅರ್ಥವನ್ನು ಪೂರ್ಣವಾಗಿ ಸದ್ಯಕ್ಕೆ ವಿವರಿಸಲಾಗಿಲ್ಲ. ಆದರೆ ಶಾಸನ ಪಾಠದಲ್ಲಿ ಕಂಡು ಬರುವ ಕೃಷ್ಣರಾಜ, ಆದಿತ್ಯ ಇತ್ಯಾದಿ ದೊರೆಗಳ ಹೆಸರನ್ನು ಪರಿಶೀಲಿಸಿ ಮುಂದಿನಂತೆ ಹೇಳಬಹುದಾಗಿದೆ. ಜೊತೆಗೆ **ಗೋವಿನ ಚಿತ್ರವೂ** ಇದ್ದು, ದೇಗುಲವಿರುವ ಗವಿಯಲ್ಲಿ ಶಾಸನ ಹಾಕಿಸಿರುವುದು ಗಮನಾರ್ಹ. ಮಾಗಡಿ ತಾಲೂಕಿನ *[ಎ.ಕ. ೯, ಮಾಗಡಿ ೭೫, ಕ್ರಿ.ಶ. ೯೬೬)* ರಾಷ್ಟ್ರಕೂಟ ೩ನೇ ಕೃಷ್ಣನ ಆಳ್ವಿಕೆಯನ್ನು ಹೇಳುವ ಒಂದು ಶಾಸನ ಮಾತ್ರ ಲಭ್ಯವಿದೆ. ಅದರಲ್ಲಿ ಊರ ಧಾಳಿಯೊಂದರಲ್ಲಿ ವೀರಸ್ವರ್ಗವೇರಿದ ನಾಳ್ಗಾವುಂಡನ ಮಗ ದಡಿಗನ ಹೆಸರಲ್ಲಿ ದಡಿಗೇಶ್ವರ ದೇಗುಲ ನಿರ್ಮಿಸಿ ಭೂದಾನವಿತ್ತಿರುವ ಸಂಗತಿ ಇದೆ.

ಮಂಡ್ಯ ಜಿಲ್ಲೆಯಲ್ಲಿ ಚಲ್ಲೇಶ್ವರ ಗುಡಿಯ ಮುಂದಿದ್ದ ಕ್ರಿ.ಶ. ೯೫೦ರ ಆತಕೂರು ಶಾಸನದಲ್ಲಿ [ಎ.ಕ. ೭ (ಹೊಸತು), ಮಂಡ್ಯ ೪೨] ಮೂರನೇ ಕೃಷ್ಣನಿಗೆ 'ಆನೆವೆಡಜ್ಗಂ ವನಗಜಮಲ್ಲಂ ಕಚ್ಚೆಗ ಕೃಷ್ಣರಾಜ ಶ್ರೀಮತ್ ಕನ್ನರದೇವ' ಎಂದು ಬಿರುದಾವಳಿ ಸಹಿತ ಉಕ್ತವಾಗಿದೆ.

ರಾಷ್ಟ್ರಕೂಟ ಮನೆತನದ ಹೆಣ್ಣು (ವಲ್ಲವರಾಯರ್) ಇಳಂಗೋವಿ ಪಿಚ್ಚಿ, ಇಮ್ಮಡಿ ಕೃಷ್ಣನ (ಕ್ರಿ.ಶ. ೮೭೮-೯೧೩) ಮಗಳು ಚೋಳರ ಒಂದನೇ ಆದಿತ್ಯನ (ಕ್ರಿ.ಶ. ೮೭೧-೯೯೮) ರಾಣಿಯಾಗಿದ್ದು ರಾಷ್ಟ್ರಕೂಟ ಮತ್ತು ಚೋಳರಲ್ಲಿ

(* ಘಟ್ಟೇಪುರದ ಈ ಶಾಸನದ ನಕಲು ತೆಗೆಯಲು ಜೊತೆಗೂಡಿ ನೆರವಾದವರು ರಾಮನಗರದ ಪತ್ರಕರ್ತ ಶ್ರೀ ಹೆಚ್.ಕೆ. ರವೀಂದ್ರ ಅವರು).

ವೈವಾಹಿಕ ಬಾಂಧವ್ಯದ ಬೆಸುಗೆ ೧೦ನೇ ಶತಮಾನದ ಆದಿಯವರೆಗೆ ಬೆಳೆದು ಬಂದಿತ್ತು; ನಂತರ ಅವರು ಪರಸ್ಪರ ವೈರಿಗಳಾದರು. ಆತಕೂರು ಶಾಸನವು ತಕ್ಕೊಲದಲ್ಲಿ ಗಂಗರ ಬೂತುಗನು ರಾಷ್ಟ್ರಕೂಟರ ಸೇನಾನಿಯಾಗಿ ಬಿಸುಗೆಯ ಕಳನಾಗಿ ಚೋಳರ ರಾಜಾದಿತ್ಯನನ್ನು ಕೊಂದ ವಿಷಯವೂ ಮೇಲಿನ ಮಾತಿಗೆ ಪೋಷಕವಾಗುತ್ತದೆ. ಇರಲಿ. ಈ ಮೂರನೇ ಕೃಷ್ಣನಿಗೆ 'ಕನ್ನರದೇವ' ಎಂದು ಕರೆದಂತೆಯೇ ಇಮ್ಮಡಿ ಕೃಷ್ಣನಿಗೂ 'ಕನ್ನರದೇವ' ಎಂದು ಕರೆಯಲಾಗುತ್ತಿತ್ತು.

ಸದ್ಯದ ಅಪ್ರಕಟಿತ ಶಾಸನದಲ್ಲಿ ಆದಿತ್ಯ ಹಾಗು 'ಕೃಷ್ಣರಾಜ'ನ ಹೆಸರಿದ್ದು, ಕೃಷ್ಣರಾಜನ ಗುಣಗಳನ್ನು ಇಭಕ್ಕುಲ ತಿಲಕ, ಜಿತಗಜಲೋಚನ, 'ಶರಣಾಗತ ಗನ ಚರಣ್ಮೇ ನಿರ್ಭಯಂ' ಎಂದೆಲ್ಲ ಹೇಳಲಾಗಿದೆ. ಹೀಗಾಗಿ ಈ ಶಾಸನ ಇಮ್ಮಡಿ ಕೃಷ್ಣನ ಕಾಲದ ಶಾಸನವೆಂದು ಗಮನಕ್ಕೆ ಬರುತ್ತದೆ ಲಿಪಿ ಲಕ್ಷಣವೂ ಅದಕ್ಕೆ ಪೋಷಕವಾಗಿದೆ. ಘಟ್ಟೀಪುರದ ನೆರೆಗೆ ಇರುವ 'ಗಜಗಾರಗುಪ್ಪೆ' ಗ್ರಾಮವೂ ಈ ಕೃಷ್ಣರಾಜನ ಕಾಲದಲ್ಲಿ ಆನೆ ಸಾಕಾಣಿಕೆಗಾಗಿ ರೂಪುಗೊಂಡು ಹೆಸರು ತಳೆದಿರಬಹುದೆ ?

ಇಮ್ಮಡಿ ಕೃಷ್ಣನು ಪರಾಂತಕನ ಮೇಲೆ ಕ್ರಿ.ಶ. ೯೧೨ರ ಸುಮಾರಿಗೆ ದಂಡೆತ್ತಿ ಹೋದರೂ ಗೆಲ್ಲಲಾಗಲಿಲ್ಲ. *(ರಾಷ್ಟ್ರಕೂಟರ ತಮಿಳು ಶಾಸನಗಳು ಹಂಪಿ ಕ.ವಿ.ವಿ. ಪ್ರ.ಪು. XXIV).* ಬಹುಶಃ ಈ ಯುದ್ಧದ ಸಮಯದಲ್ಲಿ ಮಾಗಡಿ ತಾ. ಘಟ್ಟೀಪುರ ಪ್ರದೇಶದ ವೀರ ಸೈನಿಕನೊಬ್ಬ ವೀರಮರಣ ಅಪ್ಪಿದ ಕಾರಣವೋ ಅಥವಾ ಕೃಷ್ಣರಾಜನ ಪುಣ್ಯಾರ್ಥ ವಾಗಿಯೋ ಭೂದಾನವನ್ನು ಸರ್ವಬಾಧಾ ಪರಿಹಾರ ದೇವರಿಗೆ ಬಿಟ್ಟ ಸೂಚನೆ ಇಲ್ಲಿದೆ. ನಂದಿಯ ಚಿತ್ರವು ಶಾಸನದ ಶೈವಪರ ಸಂಕೇತವಾಗಿರುವಂತೆ ನಂದಿ ಚಿತ್ರವನ್ನು ಶಾಪಾಶಯ ಸಂಬಂಧವಾಗಿಯೂ ಬಿಡಿಸಲಾಗಿರುವಂತಿದೆ. ಈ ಹಿನ್ನೆಲೆಯಲ್ಲಿ ಈ ಶಾಸನದ ಕಾಲವನ್ನು ಕ್ರಿ.ಶ. ೯೦೦-೯೧೨ರ ಅವಧಿಗೆ ಸೇರಿಸಬಹುದಾಗಿದೆ. ಅಲ್ಲದೆ ಇಮ್ಮಡಿ ಕೃಷ್ಣನ ಬಿರುದುಗಳು ಮೂರನೆ ಕೃಷ್ಣನಿಗೂ ಅನ್ವಯ ಮುಂದುವರಿಕೆಯಂತೆ ವಂಶ ಬಿರುದಾಗಿ ಕೂಡಿಕೊಂಡಂತಿದೆ.

ಶಾಸನ ಹಾಕಿಸಿರುವ ಈ ಗವಿಯಲ್ಲಿ ಪ್ರಾಚೀನ ಸೋಮೇಶ್ವರ ಲಿಂಗವಿದ್ದು, ಅದರ ಪಾಣಿಪೀಠ ವೃತ್ತಾಕಾರ ವಾಗಿದೆ. ಇದಕ್ಕೆ ಮರದ ಬಾಗಿಲು ಮಾತ್ರ ಇದ್ದು ೧೯೮೦ರ ವರೆಗೂ ಕಾಣಬರುತ್ತಿತ್ತು. ಈಗಲೂ ಇರುವ ಸೋಮೇಶ್ವರ


ಸೋಮೇಶ್ವರ ಲಿಂಗ

ಲಿಂಗದ ಕಾರಣ ಬೆಟ್ಟವನ್ನು ಸೋಮೇಶ್ವರ ದೇವರ ಬೆಟ್ಟ ಎನ್ನುವಂತೆ ಶಂಭುಲಿಂಗನ ಬೆಟ್ಟವೆಂದೂ ಕರೆದು ನೀಳಸ್ತಂಭದ ಮೇಲೆ ಬಸವಣ್ಣನಿರುವುದು ಕಾಣುತ್ತದೆ. ಬಹುಶಃ ಈ ಗುಹೆಯಲ್ಲಿ ಶಂಭುಲಿಂಗ ಯತಿಗಳದ್ದು ಗದ್ದುಗೆಯಾಗಿರುವಂತಿದೆ. ಬೆಟ್ಟದ ಎದುರಿಗೆ ಬಿಲ್ವವನದ ಮಧ್ಯೆ ೧೯೫೦ರ ಸುಮಾರಿನಲ್ಲಿ ಕಟ್ಟಿದ ಮಹದೇಶ್ವರ ದೇವಸ್ಥಾನವೂ ಇದೆ.

ಈ ಹಿನ್ನೆಲೆಗಳನ್ನು ಗಮನಿಸುವಲ್ಲಿ ಮಾಗಡಿ ತಾ.ನ ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಶೈವಧರ್ಮದ ಪ್ರಭಾವವಿದ್ದು, ಅದು ಮುಂದುವರಿದು ಬಂದದ್ದು ಗಮನಕ್ಕೆ ಬರುತ್ತದೆ. ಮಾಗಡಿ ತಾಲೂಕಿನಲ್ಲಿ ರಾಷ್ಟ್ರಕೂಟ ಕ್ರಿ.ಶ. ೯೬೬ರ ಶಾಸನವಿದ್ದುದು, ಈಗ ಎರಡು ಶಾಸನಗಳು ಲಭ್ಯವಾದಂತಾಗಿದೆ. ಹಾಗೂ ಅವರ ಇಲ್ಲಿನ ಆಳ್ವಿಕೆಯ ವಿಷಯ ಕ್ರಿ.ಶ. ೯೦೦ರ ಸುಮಾರಿಗೇ ಸದ್ಯದ ಶಾಸನದ ಲಿಪಿ ಲಕ್ಷಣದ ದೃಷ್ಟಿಯಿಂದ ಚಲಿಸುವುದು ಕಾಣಬರುತ್ತದೆ.

ಡಾ. ಪಿ.ವಿ. ಕೃಷ್ಣಮೂರ್ತಿಯವರು ಕ್ರಿ.ಶ. ೯೬೩ರಲ್ಲಿ ಕುಣಿಗಲ್ ಕೆರೆಯ ಜೀರ್ಣೋದ್ಧಾರವು ರಾಷ್ಟ್ರಕೂಟರ ತತ್ಕಾಲಿಕ ಆಡಳಿತದಲ್ಲಿ ನಡೆದ ಶಾಸನೋಕ್ತ ಸಂಗತಿಯನ್ನು ತಿಳಿಸಿರುವಲ್ಲಿ *(ಇತಿಹಾಸ ದರ್ಶನ, ಸಂ. ೧೯/೨೦೦೪, ಪು. ೪೯)* ಕುಣಿಗಲ್ ಪ್ರದೇಶದಲ್ಲಿ ಆಡಳಿತವಿದ್ದ ಬಗ್ಗೆ ಹೇಳಿದಂತಾಗಿತ್ತು. ಈಗ ಅದಕ್ಕೂ ಮುನ್ನಿನ ಶಾಸನ ಮಾಗಡಿ ತಾ. ಪ್ರದೇಶದಲ್ಲಿ ದೊರೆತು ರಾಷ್ಟ್ರಕೂಟರ ಆಡಳಿತ ರಾಮನಗರ, ಮಾಗಡಿ, ಇತ್ಯಾದಿ 'ಕೆಟ್ಟತೇ' ನಾಡಿನಿಂದ ಹಿಡಿದು ಕುಣಿಗಲ್ ತಾ. ಪ್ರದೇಶದವರೆಗೂ ದೀರ್ಘಕಾಲ (ಸಾಮಂತರ ಮೂಲಕ!) ನಡೆದಿತ್ತು ಎಂಬುದು ಗಮನಕ್ಕೆ ಬರುತ್ತದೆ.



# HIGHLIGHTS

## Presidential Speech

*by Dr. B.V. Sirur*

Dr. Sirur in his speech refers to the popular version 'Kalyana Karnataka' vouge in the Sadem area and its cultural significance. He also explains the characteristic Buddistic culture existed. Further Nagavi the famous educational centre, the poet pusphadanta, the inscriptions hither to discovered by Rice, Fleet, P.B. Desai, Dr. S. Nagaraju, Dr. B.R. Hiremath and Hampi University etc, have been referred indicating their historical contributions. The literary flourishment under Rashtrakuta, Kalyana Chalukya, Kalachoori, Vijayanagara, Bahamani, Surupura dynasties have been well highlighted in his Presidential speech. He wishes for the integrated study of literary sources in the area so that history of Kalyana Karnataka may come to lime light.

*B.R. Gopal Award Spe. Lecture*

*by Dr. K.R. Ganesh*

## The inscriptions and Jaina Basadies of Andra Pradesh.

Dr. Ganesh has traced the historical existance of Jainism in Andrapradesh since 3rd century B.C. He cites the excavtions done at Vaddamanu village to which he draws our attention to the inscriptions discovered at the spot bearing the names of Jaina preceptors and disciples whose period vary from 200 B.C. to 100 A.D.

The inscriptions available at Andra pertaining to Jains are mostly in Kannada Language, and some are in Sanskrit, Telgu and Tamil. Dr. Ganesh also puts forth the evoluational aspect of Jainism in Andhra bearing its ups and downs. He says the 'Nadumbi Basdi' at Vijayawada was the oldest one. He explains how Jaina basadis became the residential quarters of Jaina saints. Further he enmurates the ancient Jinalayas at Andra with due explanations based on inscriptions. The present condition of the jinalayas has been presented. About 26 Jinalayas have been explained with historical background. He also mentions about the formations of Yakkoti jinalayas and reasons for the deserted Jina Basadi after the fall of vijayanagara. This essay gives out the interesting facts about the Jainism and Jina Basadi's at Andra.

1. **Bhimanagundu of Chitradurga area - an archaeological study.**

*Pro. Lakshman Telagavi*

Pro. Telagavi draws our attention to the puranic myth regarding the communion of Bhima and Hidimbe at Chitradurga and stories attached to five phallic symbols (Lingas) in Ankalimuth. Apart from this the archaeological implications with Bhimanagundu with pits on it. They have been highlighted comparing with other illustrations found at Rajasthan and else where. The author presents an interesting example of how the people are using these pits for pounding corns, Areca nut etc., and feels that this Bimanagundu may incite other researchers to probe elsewhere in Karnataka in this regard.

2. **The Prehistoric symbols at P. Mahadevapura.**

*S.G. Ramadasa Reddy*

Dr. Reddy furnishes the information regarding the Microlithic, Neolithic, Megalithic materials, Dolmen and herostones Etc., found at P. Mahadevapura with due explanations. He also traces the evolutional stages of this tradition in these locations.

3. **Gudi Gudala - A Neolithic Spot.**

*Dr. M. Koteresh*

Dr. Kotresh while deciphering the place name gudigundala, traces the origin of the location since Neolithic age. He also explains the Neolithic and megalithic spots around the area and the histiorical antiquities available there.

4. **Cave paintings and antiquities of Santhegudda.**

*Dr. S. Thippeswamy*

Dr. Tippeswamy has described the geographical location of Santhegudda, and varieties of cave paintings found therein. It is interesting to note that human and animal figures, fighting scenes, have been found in these paintings. Some figures according to the author are temple and chariot shaped ones. He also opines Santegudda was a trade centre and the residential area of vishwakarmas. The fort and the temples of bygone days have also been described briefly.

5. **Some Archaeological findings in Mumbai-Karnataka area.**

*Ku B. Jayamma*

The author has discovered some relics like pots, bricks, and tiles varying from 2nd century to 6th century. Some megalithic relics have also been found. The sculptures, hero stones found at Godholli have been described. She also draws our attention towards a Buddha-Yaksha of Kolivada and feels more research to be done in this regard.

6. **The antiquities of Yeradakatte.**

*Dr. N. Nandishwara*

Dr. Nandishewar has described the relics found at Yaradakatte and draws our attention to the special features of hero stones. He has also noted the derivation of the place name and sociological significance of the village. An unpublished inscription, and Yantrakal also have been explained briefly.

7. **The prehistoric relics and unpublished inscription at Muktenahalli.**

*Dr. M.H. Jagadeesha*

The author has drawn our attention to some prehistoric relics - a four knotted line figure being a tradition of Harappan culture. The location of the Veerabhadra temple, Kariamma temple, Durga temple and mud pots, plates etc., with their sculptural characteristics have been briefly mentioned. A said to be unpublished purandaradasa's composition has also been mentioned with its contents; which is a prayer with purandara vithala for the rainfall. In the unpublished inscription of Yadava Kannara period Srishaila Mallikarjuna and Pulumutt have been mentioned along with the lands granted to Shivacharya of Pulumutt.

8. **The relic remains in the local place Durgada ghada.**

*V. Ramesh Karanth*

The author has concentrated his study on 'Santarau' and presents the reminiscenes of Hosagunda royal dynasty in this regard. The heroic deeds of the people also have been described in this essay with some inscriptional evidences.

9. **A new inscription from Chitradurga**

*Dr. B. Rajashekharappa*

Dr. Rajashekharappa, brings out from the new copper plates of 14th century discovered by him that Chitradurga in reign of third Hoysala Viraballala, was ruled by two governers viz., Mareya Sahani and Mahapradhana Bechaya Dandanayaka, the system which was vougue during Kalyani Chalukyas in Chitradurga area. Further he points out the name Idubanatha which refers itself to Hidimbeshwara; Panchamatha was mainly attached to this Hidimbeshwara temple; the old name of Chitradurga was Chimmattoora Kallu; 'Nandinatha' was the name of adorative family god and hence the impression of this God on inscriptions used to be recorded. In toto this inscription sheds a new light on the history of Chitradurga during Hoysala period.

10. **Two unpublished inscriptions from Noolvi and Mavalli**

*Dr. K.G. Bhat soori*

Dr. Bhat Soori points nut from his discovered inscriptions at Noolvi, that it belongs to reign of Immadi Tailapa of Kalyana chalukya dynasty. The date of the inscriptions is 995 A.D. and further the contents of it are about the installation of an idol by one kurikaiah. The second one is a hero stone inscription which says about th heroic death of Ayyachan in a 'turugola'.

11. **A new inscription at Udapudi village**

*Kareppagowda C. Patil*

Mr. Patil while explaining the physical features of the new stone inscription, puts the contents : Toragalanadu was ruled by Byrava Dynasty. Bommideva of this dynasty was ruling this Nad as a feaudatory of Rayamurari Sovideva of Kalachurya Dynasty. His senior queen was Bhogala devi. His subordinate Choligavunda, offered Bireshwara temple to Nagarasi yati who is said to belong to Kalamukha order. He was also donated the lands duly fixing the

